"ಧರ್ಮ, ಅಧ್ಯಾತ್ಮ, … – ಈ ವಿಷಯಗಳಲ್ಲಿ ನಂಬಿಕೆ ಇರುವವರಾ… …ದಿರುವವರಾಗಲಿ ಶ್ರೀರಾಮಕೃಷ್ಣರಲ್ಲಿ ಗೌ… …ಳದೆ ಇರುವುದು ಅಸಾಧ್ಯ. ಏಕೆಂದರೆ ಅವರ ವ್ಯಕ್ತಿತ್ವವು ಅಷ್ಟು ಅಸಾಧಾರಣವಾದದ್ದು. ತ್ಯಾಗ ಮತ್ತು ವೈರಾಗ್ಯಗಳ ದೃಷ್ಟಿಯಿಂದ ಅಂತಹ ಅಸಮಾನವಾದ ಮತ್ತೊಬ್ಬ ವ್ಯಕ್ತಿಯನ್ನು ಜಗತ್ತಿನ ಧಾರ್ಮಿಕ ಇತಿಹಾಸದಲ್ಲಿ ಕಾಣುವುದು ಅಸಾಧ್ಯ.... ದೇವರಿದ್ದರೆ, ಅವತಾರಗಳಿದ್ದರೆ, … ಶಿಲಾಮೂರ್ತಿಗಳಿಗಿಂತ ಈ ನಗುವ,

…ನ್ನು ಧಾರೆ

…ಷನು ಸಹ

…ನ್ನಂತಹವರ

…ನ್ನುಡಿಯಿಂದ

# ಶ್ರೀರಾಮಕೃಷ್ಣ ಲೀಲಾಪ್ರಸಂಗ

## ಉತ್ತರಾರ್ಧ

ಮೂಲ ವಂಗ ಲೇಖಕರು
ಸ್ವಾಮಿ ಶಾರದಾನಂದ



ಶ್ರೀರಾಮಕೃಷ್ಣ ಆಶ್ರಮ
ಮೈಸೂರು ೫೭೦ ೦೨೦

ಪ್ರಕಾಶಕರು
ಅಧ್ಯಕ್ಷರು
ಶ್ರೀರಾಮಕೃಷ್ಣ ಆಶ್ರಮ
ಮೈಸೂರು ೫೭೦ ೦೨೦





ಮೊದಲನೆಯ ಪರಿಷ್ಕೃತ ಮುದ್ರಣ ೧೯೯೪
೩೦೦೦ ಪ್ರತಿಗಳು



ಮುದ್ರಕರು
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್, ಜಯನಗರ, ಮೈಸೂರು ೧೪

# ವಿಷಯಸೂಚಿ

## ನಾಲ್ಕನೆಯ ಭಾಗ : ಗುರುಭಾವ-ಉತ್ತರಾರ್ಧ



## ಐದನೆಯ ಭಾಗ : ದಿವ್ಯಭಾವ

# ನಿವೇದನೆ

ಗುರುಭಾವದ ಉತ್ತರಾರ್ಧವು ಪ್ರಕಟವಾಯಿತು. ಶ್ರೀರಾಮಕೃಷ್ಣರ ಜೀವನದ ಮಧ್ಯಭಾಗ ಮಾತ್ರ ಪ್ರಕಟವಾಗುತ್ತಿರುವುದನ್ನು ನೋಡಿ ಓದುಗರಿಗೆ ಇದು ತುಂಬ ವಿಚಿತ್ರವೆನಿಸಬಹುದು. ಶ್ರೀರಾಮಕೃಷ್ಣರ ಜೀವನೇತಿಹಾಸವನ್ನು ಅವರು ಹುಟ್ಟಿದಂದಿನಿಂದ ಕಾಲಾನುಸಾರವಾಗಿ ಬರೆಯದೆ ಅವರ ಸಿದ್ಧಾವಸ್ಥೆಯ ವಿಷಯವನ್ನು ಮೊದಲು ಬರೆಯಲು ಕಾರಣವೇನು—ಎಂದು ಅವರು ಕೇಳಬಹುದು. ಅದಕ್ಕೆ ಉತ್ತರವಾಗಿ ನಾವು ಹೇಳುತ್ತೇವೆ :

ಮೊದಲನೆಯದಾಗಿ, ನಾವು ಮೊದಲೆ ವಿಚಾರಮಾಡಿ ಈ ಲೋಕೋತ್ತರ ಪುರುಷರ ಇಡೀ ಜೀವನ ಚರಿತ್ರೆಯನ್ನು ಬರೆಯಬೇಕೆಂದು ಕುಳಿತುಕೊಳ್ಳಲಿಲ್ಲ. ಅವರ ಮಹಾ ಉದಾರ ಜೀವನೇತಿಹಾಸವನ್ನು ನಮ್ಮಂತಹ ಸಾಮಾನ್ಯ ವ್ಯಕ್ತಿಗಳು ಬರೆಯಲು ಸಾಧ್ಯ ಎಂದು ನಮಗೆಂದೂ ಅನಿಸಿರಲಿಲ್ಲ. ಸಂದರ್ಭೋಚಿತವಾಗಿ ಶ್ರೀರಾಮಕೃಷ್ಣರ ಜೀವನದ ಕೆಲವು ಅಂಶಗಳನ್ನು 'ಉದ್ಬೋಧನ'ದ ಓದುಗರಿಗೆ ತಿಳಿಸಬೇಕೆಂಬುದಷ್ಟೇ ನಮ್ಮ ಅಭಿಪ್ರಾಯವಾಗಿತ್ತು. ಆದರೆ ಈ ಕೆಲಸಕ್ಕೆ ಕೈಹಾಕಿದ ಮೇಲೆ ಇದು ಇಷ್ಟು ವಿಸ್ತಾರವಾಗುವುದೆಂದು ನಾವು ಆಗ ಊಹಿಸಿರಲಿಲ್ಲ. ಆದ್ದರಿಂದ ಇಂತಹ ಪರಿಸ್ಥಿತಿಯಲ್ಲಿ ಮುಂದಿನ ವಿಷಯ ಮೊದಲೇ ಬಂದುಬಿಡುವುದು ವಿಚಿತ್ರವೇನಲ್ಲ.

ಎರಡನೆಯದಾಗಿ, ಶ್ರೀರಾಮಕೃಷ್ಣರ ಜೀವನದ ಅಲೌಕಿಕ ಘಟನೆಗಳ ಮತ್ತು ಅವರ ಅಪೂರ್ವ ಸಾಧನೆಗಳ ಬಗ್ಗೆ ಬರೆಯುವ ಪ್ರಯತ್ನವನ್ನು ಹಿಂದೆ ಅನೇಕರು ಮಾಡಿರುವರು. ಅಲ್ಲಲ್ಲಿ ಲೋಪದೋಷಗಳಿದ್ದರೂ, ಶ್ರೀರಾಮಕೃಷ್ಣರ ಜೀವನದ ಹೆಚ್ಚು ಕಡಮೆ ಎಲ್ಲ ಘಟನೆಗಳೂ ಹೀಗೆ ಸ್ಥೂಲರೂಪದಲ್ಲಿ ಜನಸಾಮಾನ್ಯರಿಗೆ ಪರಿಚಿತವಾಗಿವೆ. ಆದ್ದರಿಂದ ಅದೇ ವಿಷಯವನ್ನು ಮತ್ತೆ ಪುನಃ ಹೇಳಿ ವ್ಯರ್ಥ ಶ್ರಮಪಡುವುದು ನಮಗಿಷ್ಟವಿರಲಿಲ್ಲ. ಶ್ರೀರಾಮಕೃಷ್ಣರ ಅಲೌಕಿಕ ಭಾವಗಳನ್ನು ಓದುಗರಿಗೆ ಸರಿಯಾದ ರೀತಿಯಲ್ಲಿ ತಿಳಿಸಿಕೊಡಬೇಕೆಂಬುದು ನಮ್ಮ ವಿಚಾರವಾಗಿತ್ತು. ಹಾಗೂ ಇದುವರೆವಿಗೆ ಯಾರೂ ಈ ಪ್ರಯತ್ನವನ್ನು ಮಾಡಿರಲಿಲ್ಲ. ಮತ್ತೆ ಶ್ರೀರಾಮಕೃಷ್ಣರ ಭಾವಮುಖ ಅವಸ್ಥೆ ಮತ್ತು ಅವರಲ್ಲಿ ಉಂಟಾದ ಗುರುಭಾವದ ಸ್ವಾಭಾವಿಕ ವಿಕಾಸ—ಈ ವಿಷಯಗಳನ್ನು ಮೊದಲು ತಿಳಿದುಕೊಳ್ಳದಿದ್ದರೆ ಅವರ ಅದ್ಭುತಚರಿತ್ರೆ, ಅದೃಷ್ಟಪೂರ್ವ ಮನೋಭಾವ ಮತ್ತು ಅವರ ಅಸಾಧಾರಣ ಚಟುವಟಿಕೆಗಳು—ಇವುಗಳನ್ನು ಸ್ವಲ್ಪವೂ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ ಎಂಬುದು ನಮ್ಮ ಅಭಿಪ್ರಾಯ. ಆದ್ದರಿಂದ ಈ ವಿಷಯವನ್ನೇ ಪ್ರಪ್ರಥಮವಾಗಿ ಓದುಗರಿಗೆ ತಿಳಿಸಿಕೊಡುವ ಪ್ರಯತ್ನ ಮಾಡಿದೆವು.

ಕೆಲವರು ಹೇಳಬಹುದು : ಗ್ರಂಥದ ನಡುವೆ ಅಲ್ಲಲ್ಲಿ ಶ್ರೀರಾಮಕೃಷ್ಣರ ವಿಶೇಷ ಕಾರ್ಯ ಮತ್ತು ಮನೋಭಾವಗಳನ್ನು ವಿವರಿಸುವಾಗ ನೀವು ಸ್ವತಃ ಅವುಗಳನ್ನು ಹೇಗೆ ಅರ್ಥಮಾಡಿಕೊಂಡಿರುವಿರೋ ಅದನ್ನೇ ಓದುಗರಿಗೆ ತಿಳಿಸಲು ಪ್ರಯತ್ನಿಸಿರುವಿರಿ. ಇದ ರಿಂದಾಗಿ ನಿಮ್ಮ ಬುದ್ಧಿ ಮತ್ತು ವಿಚಾರಶಕ್ತಿಯೇ ಶ್ರೀರಾಮಕೃಷ್ಣರ ಬುದ್ಧಿಗೆ ನಿಲುಕದ ಚರಿತ್ರೆ ಮತ್ತು ಮನೋಭಾವಗಳ ಅಳತೆಗೋಲಾಗಿಬಿಟ್ಟಿದೆ. ಹೀಗೆ ವಿಚಾರಾತೀತರಾದ ಶ್ರೀರಾಮಕೃಷ್ಣರನ್ನು ನಿಮ್ಮ ವಿಚಾರದ ಮಿತಿಗೆ ಒಳಪಡಿಸಿ ಅವರ ಘನತೆಗೆ ಕುಂದುಂಟು ಮಾಡಿದಂತಾಗಲಿಲ್ಲವೇ ? ಹೀಗೆ ಮಾಡದೆ ಕೇವಲ ಘಟನೆಗಳನ್ನು ಯಥಾರೀತಿಯಲ್ಲಿ ಓದುಗರ ಮುಂದಿರಿಸಿ ಸುಮ್ಮನಾಗಿದ್ದರೆ ಒಳ್ಳೆಯದಿತ್ತಲ್ಲವೆ ? ಇದರಿಂದ ಶ್ರೀರಾಮ ಕೃಷ್ಣರ ಹಿರಿಮೆಯನ್ನು ಮೊಟಕುಗೊಳಿಸಿದಂತೆಯೂ ಆಗುತ್ತಿರಲಿಲ್ಲ ಮತ್ತು ಪ್ರತಿಯೊ ಬ್ಬರಿಗೂ ತಮ್ಮ ವಿಚಾರಕ್ಕೆ ತಕ್ಕಂತೆ ಅವರನ್ನು ಅರ್ಥಮಾಡಿಕೊಳ್ಳಲು ಸಾಧ್ಯ ವಾಗುತ್ತಿತ್ತು.

ಈ ಮಾತು ಮೇಲುನೋಟಕ್ಕೆ ಮನೋಹರವಾಗಿ ಕಂಡರೂ ಸ್ವಲ್ಪ ವಿಚಾರ ಮಾಡಿ ನೋಡಿದರೆ ಇದು ಎಷ್ಟು ಟೊಳ್ಳು ಎಂದು ತಿಳಿದುಬರುತ್ತದೆ. ಮನುಷ್ಯನು ಎಲ್ಲ ವಿಷಯಗಳನ್ನು ಗ್ರಹಿಸಲು ತನ್ನ ಇಂದ್ರಿಯ ಮನಸ್ಸು ಬುದ್ಧಿಗಳ ಸಹಾಯವನ್ನು ಯಾವಾಗಲೂ ಪಡೆಯುತ್ತಾನೆ, ಬೇರೆ ದಾರಿಯೇ ಇಲ್ಲ. ಆದರೆ ಇದರಿಂದ ಇಂದ್ರಿಯಾದಿ ಗಳು ಅವು ಗ್ರಹಿಸುವ ವಿಷಯಗಳಿಗಿಂತ ಶ್ರೇಷ್ಠವಾದುವೆಂದು ತಿಳಿಯಬಾರದು. ಕಾಲ, ದೇಶ, ವಿಶ್ವ, ದೇವರು ಮುಂತಾದ ಅನಂತ ತತ್ತ್ವಗಳು ಮನಸ್ಸು–ಬುದ್ಧಿಗೆ ನಿಲುಕದುವು ಎಂಬುದನ್ನು ತಿಳಿದಿದ್ದರೂ ಮನುಷ್ಯನು ಅವುಗಳನ್ನು ಅರ್ಥಮಾಡಿಕೊಳ್ಳಲು ಯಾವಾ ಗಲೂ ಪ್ರಯತ್ನಿಸುತ್ತಿರುವನು. ಆದರೆ ಆ ತತ್ತ್ವಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ವನ್ನು ಅವುಗಳ ಪರಿಮಾಣವೆಂದಾಗಲಿ ಅಥವಾ ಆ ರೀತಿ ಮಾಡುವುದು ತಪ್ಪೆಂದಾಗಲಿ ನಾವು ಪರಿಗಣಿಸುವುದಿಲ್ಲ. ಇದರ ಬದಲು, ಈ ಪ್ರಯತ್ನದ ಫಲವಾಗಿ ಮನುಷ್ಯನ ಮನಸ್ಸು ಬುದ್ಧಿಗಳು ವಿಕಾಸವನ್ನು ಹೊಂದಿ ಅವನು ಉತ್ತಮನಾಗುವನೆಂದೇ ನಾವು ಭಾವಿಸುತ್ತೇವೆ.

ಆದ್ದರಿಂದ ಲೋಕೋತ್ತರ ಪುರುಷರ ಅಲೌಕಿಕ ಕೃತಿಗಳ ಬಗ್ಗೆ ವಿಚಾರಮಾಡುತ್ತ ಹೋದರೆ ನಾವೇ ವಿಕಾಸ ಹೊಂದುತ್ತೇವೆಯೆ ಹೊರತು ಅವುಗಳನ್ನು ಮಿತಿಗೊಳಿಸಿ ದಂತಾಗುವುದಿಲ್ಲ. ಸಾಧನೆಗಳ ಫಲವಾಗಿ ಮನಸ್ಸು ಬುದ್ಧಿಗಳು ಎಷ್ಟರ ಮಟ್ಟಿಗೆ ಶುದ್ಧವೂ ಸೂಕ್ಷ್ಮವೂ ಆಗುವುವೊ ಅಷ್ಟರ ಮಟ್ಟಿಗೆ ಮನುಷ್ಯನು ಅವರ ದಿವ್ಯಭಾವ ಮತ್ತು ಚಟುವಟಿಕೆಗಳನ್ನು ಗ್ರಹಿಸಲು ಮತ್ತು ಇತರರಿಗೆ ತಿಳಿಸಲು ಪ್ರಯತ್ನಿಸುತ್ತಾನೆ. ಹೆಚ್ಚು ಸಾಧನಸಂಪನ್ನನಾದ ವ್ಯಕ್ತಿಯು ಶ್ರೀರಾಮಕೃಷ್ಣರನ್ನು ನಾವು ಅರ್ಥಮಾಡಿ ಕೊಂಡಿರುವುದಕ್ಕಿಂತಲೂ ಹೆಚ್ಚು ಅರ್ಥಮಾಡಿಕೊಳ್ಳಬಹುದು. ಆದ್ದರಿಂದ ಈ ದಿವ್ಯ

ಪುರುಷರನ್ನು ಅರ್ಥಮಾಡಿಕೊಳ್ಳಲು ನಮ್ಮ ವಿಚಾರವನ್ನು ಪ್ರಯೋಗಿಸುವುದರಲ್ಲಿ ಯಾವ ದೋಷವೂ ಇಲ್ಲ. ಶ್ರೀರಾಮಕೃಷ್ಣರನ್ನು ಸಂಪೂರ್ಣ ಅರ್ಥಮಾಡಿಕೊಂಡಿದ್ದೇನೆ ಎಂದು ಭಾವಿಸದಿದ್ದರಾಯಿತು. ಈ ವಿಷಯವನ್ನು ಮನಸ್ಸಿನಲ್ಲಿ ದೃಢವಾಗಿ ಇಟ್ಟುಕೊಂಡರೆ ಈ ವ್ಯರ್ಥ ಸಂಶಯಗಳಿಗೆ ಅವಕಾಶವಿರುವುದಿಲ್ಲ.

ಇತಿ ವಿನೀತ<br>
**ಗ್ರಂಥಕಾರ**

## ಮೊದಲನೆಯ ಅಧ್ಯಾಯ

# ವೈಷ್ಣವಚರಣ ಮತ್ತು ಗೌರಿ

ಯೇ ಮೇ ಮತಮಿಮಂ ನಿತ್ಯಮನುತಿಷ್ಠಂತಿ ಮಾನವಾಃ ।
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥
(ಭಗವದ್ಗೀತೆ, 3, 31)

ಯಾವ ಮಾನವರು ಶ್ರದ್ಧಾವಂತರೂ ಅಸೂಯಾರಹಿತರೂ ಆಗಿ ನನ್ನ ಈ ಮತವನ್ನು ನಿತ್ಯವೂ ಅನುಸರಿಸುತ್ತಾರೊ ಅವರೂ ಕರ್ಮಗಳಿಂದ ಮುಕ್ತರಾಗುತ್ತಾರೆ.

1. ಶ್ರೀರಾಮಕೃಷ್ಣರ ಗುರುಭಾವದ ವಿಷಯದಲ್ಲಿ ಕಲಕತ್ತೆ ಜನರ ಅಜ್ಞಾನ 2. 'ಹೂವು ಅರಳಿದಾಗ ದುಂಬಿಗಳು ತಾವಾಗಿಯೇ ಬರುವುವು' 3. ಆಧ್ಯಾತ್ಮಿಕ ವಿಷಯದಲ್ಲಿ ಎಲ್ಲರೂ ಕುರುಡರೆ 4. ಶ್ರೀರಾಮಕೃಷ್ಣರು ಧರ್ಮವನ್ನು ಹೇಗೆ ಪ್ರಚಾರ ಮಾಡಿದರು 5. ಬ್ರಾಹ್ಮಣಿ ದಕ್ಷಿಣೇಶ್ವರಕ್ಕೆ ಬಂದಾಗ ಶ್ರೀರಾಮಕೃಷ್ಣರ ಸ್ಥಿತಿ 6. ಅವರ ಸ್ಥಿತಿಯನ್ನು ಅರಿತು ಬ್ರಾಹ್ಮಣಿ ಪಂಡಿತರನ್ನು ಕರೆಸಲು ಹೇಳುತ್ತಾಳೆ 7. ವೈಷ್ಣವಚರಣ ಮತ್ತು ಗೌರೀಪಂಡಿತರನ್ನು ಆಹ್ವಾನಿಸಿದುದು 8. ವೈಷ್ಣವಚರಣನ ಕೀರ್ತಿ 9. ಶ್ರೀರಾಮಕೃಷ್ಣರ ದೇಹದ ಉರಿಯನ್ನು ಹೋಗಲಾಡಿಸಲು ಬ್ರಾಹ್ಮಣಿಯು ಮಾಡಿದ ಉಪಾಯ 10. ಅವರ ತೀವ್ರ ಹಸಿವಿನ ನಿವಾರಣೋಪಾಯ 11. ಯೋಗಸಾಧನೆಯ ಫಲವಾಗಿ ಇಂತಹ ಸ್ಥಿತಿ ಉಂಟಾಗುತ್ತದೆ 12. ಶ್ರೀರಾಮಕೃಷ್ಣರಿಗೆ ತೀವ್ರ ಹಸಿವುಂಟಾದ ಕೆಲವು ಸಂದರ್ಭಗಳು—ಸರ್ ಎಂಬ ಸಿಹಿತಿಂಡಿಯನ್ನು ತಿಂದುದು 13. ಕಾಮಾರಪುಕುರದಲ್ಲಿ ಒಂದು ಸೇರು ಸಿಹಿತಿಂಡಿ ಮತ್ತು ಮಂಡಕ್ಕಿ ತಿಂದುದು 14. ಜಯರಾಮಬಾಟಿಯಲ್ಲಿ ಎರಡುವರೆ ಸೇರು ಅನ್ನ ತಿಂದುದು 15. ದಕ್ಷಿಣೇಶ್ವರದಲ್ಲಿ ಮಧ್ಯರಾತ್ರಿ ಎರಡು ಸೇರು ಹಲ್ವ ತಿಂದುದು 16. ತೀವ್ರ ಆಧ್ಯಾತ್ಮಿಕ ಭಾವದಿಂದ ಶ್ರೀರಾಮಕೃಷ್ಣರ ದೇಹದಲ್ಲಿ ಬದಲಾವಣೆಯುಂಟಾಗುತ್ತಿತ್ತು 17. ವೈಷ್ಣವಚರಣನು ಬಂದಾಗ ದಕ್ಷಿಣೇಶ್ವರದಲ್ಲಿ ಪಂಡಿತಸಭೆ 18. ಶ್ರೀರಾಮಕೃಷ್ಣರ ಸ್ಥಿತಿಯ ಬಗ್ಗೆ ಆ ಸಭೆಯಲ್ಲಿ ಚರ್ಚೆ 19. ಅವರ ಸ್ಥಿತಿಯ ಬಗ್ಗೆ ವೈಷ್ಣವಚರಣನ ನಿರ್ಣಯ 20. ಕರ್ತಾಭಜ ಮುಂತಾದ ಸಂಪ್ರದಾಯದ ಬಗ್ಗೆ ಶ್ರೀರಾಮಕೃಷ್ಣರ ಅಭಿಮತ 21. ಪ್ರಾಪಂಚಿಕ ಆಸೆಗಳುಳ್ಳವರು ಎಂಥ ಧರ್ಮವನ್ನು ಬಯಸುತ್ತಾರೆ. 22. ತಾಂತ್ರಿಕ ಸಂಪ್ರದಾಯದ ಇತಿಹಾಸ 23. ತಂತ್ರದಲ್ಲಿ ಮಾತೃಭಾವ ಸಾಧನೆ 24. ಗೌಡೀಯ ವೈಷ್ಣವರಿಂದ ಪ್ರವರ್ತಿತವಾದ ಹೊಸ ಪೂಜಾ ಪದ್ಧತಿ 25. ಈ ಪದ್ಧತಿಯಿಂದಲೆ ಕರ್ತಾಭಜ ಮುಂತಾದ ಸಂಪ್ರದಾಯಗಳು ಹುಟ್ಟಿದುವು, ಇವುಗಳ ಸಾರತತ್ತ್ವ 26. ಇವುಗಳಲ್ಲಿ ಸಾಧ್ಯ-ಸಾಧನ ಉಪದೇಶ 27. ಕರ್ತಾಭಜ ಸಾಧನ ಸ್ಥಳಕ್ಕೆ ಶ್ರೀರಾಮಕೃಷ್ಣರ ಭೇಟಿ 28. ವೈಷ್ಣವಚರಣನು ಶ್ರೀರಾಮಕೃಷ್ಣರನ್ನು ಭಗವದವತಾರವೆಂದು ತಿಳಿದಿದ್ದನು 29. ಗೌರೀಪಂಡಿತನ ಪವಾಡ 30. ಅವನು ತನ್ನ ಪತ್ನಿಯನ್ನು ದೇವಿಯಂತೆ ಪೂಜಿಸಿದುದು 31. ಗೌರಿಯ ಅದ್ಭುತ ಹೋಮ

ವಿಧಾನ 32. ಇನ್ನೊಂದು ಪಂಡಿತ ಸಭೆ, ಶ್ರೀರಾಮಕೃಷ್ಣರು ವೈಷ್ಣವಚರಣನ ಹೆಗಲ ಮೇಲೆ ಕುಳಿತುದು 33. ಶ್ರೀರಾಮಕೃಷ್ಣರ ಬಗ್ಗೆ ಗೌರೀಪಂಡಿತನ ಅಭಿಪ್ರಾಯ 34. ಶ್ರೀರಾಮಕೃಷ್ಣರ ಸಂಸರ್ಗದಿಂದ ಗೌರೀಪಂಡಿತನು ವಿರಕ್ತನಾದುದು 35. ವೈಷ್ಣವಚರಣ ಮತ್ತು ಗೌರೀಪಂಡಿತನ ಹೇಳಿಕೆಗಳನ್ನು ಶ್ರೀರಾಮಕೃಷ್ಣರು ಉದ್ಧರಿಸುತ್ತಿದ್ದುದು 36. ಕಾಳಿ ಮತ್ತು ಕೃಷ್ಣ ಒಂದೇ ಎಂಬುದರ ಬಗ್ಗೆ ಗೌರೀಪಂಡಿತನ ನಿಲುವು 37. ಪ್ರೀತಿಯ ವಸ್ತುವನ್ನೇ ಭಗವಂತನೆಂದು ತಿಳಿಯುವ ಬಗ್ಗೆ ವೈಷ್ಣವಚರಣನ ನಿಲುವು 38. ಈ ಉಪದೇಶವು ಶಾಸ್ತ್ರಸಮ್ಮತ 39. ಅವತಾರಪುರುಷರು ಎಲ್ಲ ವಿಷಯದಲ್ಲಿಯೂ ಶಾಸ್ತ್ರವನ್ನು ಗೌರವಿಸುತ್ತಾರೆ.

1. ಕಲಕತ್ತೆಯ ಜನಸಾಧಾರಣರ ಒಂದು ಕಲ್ಪನೆಯೇನೆಂದರೆ, ಶ್ರೀರಾಮಕೃಷ್ಣರು ಕಲಕತ್ತೆಯ ಕೇಶವಚಂದ್ರಸೇನನೇ ಮುಂತಾದ ಕೆಲವು ಆಂಗ್ಲಶಿಕ್ಷಣವನ್ನು ಪಡೆದ, ಪಾಶ್ಚಾತ್ಯಭಾವನೆಗಳಿಂದ ಪ್ರಭಾವಿತರಾದ ಆಧುನಿಕ ಹಿಂದೂಗಳಲ್ಲಿ ಮಾತ್ರ ಧರ್ಮ ಜಾಗ್ರತಿಯನ್ನು ಉಂಟುಮಾಡಿದರು ಅಥವಾ ಅವರಲ್ಲಿ ಮೊದಲೇ ಉರಿಯುತ್ತಿದ್ದ ಧರ್ಮಪ್ರದೀಪವನ್ನು ಇನ್ನೂ ಉಜ್ವಲವಾಗಿ ಉರಿಯುವಂತೆ ಮಾಡಿದರು, ಎಂದು. ಆದರೆ ಕಲಕತ್ತೆಯ ಜನರು ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿರುವ ವಿಚಾರವನ್ನು ತಿಳಿಯುವುದಕ್ಕೆ ಬಹಳ ಮುಂಚಿನಿಂದಲೇ ಬಂಗಾಳ ಮತ್ತು ಉತ್ತರ ಭಾರತದ ಕಡೆಯಿಂದ ವಿವಿಧ ಸಂಪ್ರದಾಯದ ಸಾಧುಗಳು, ಸಾಧಕರು ಮತ್ತು ಪಂಡಿತರು ಅವರೆಡೆಗೆ ಬರುತ್ತಿದ್ದರು. ಶ್ರೀರಾಮಕೃಷ್ಣರ ಜ್ವಲಂತ ಜೀವನಾದರ್ಶ ಮತ್ತು ಗುರುಭಾವದ ಸಹಾಯದಿಂದ ತಮ್ಮ ಜಡವಾದ ಆಧ್ಯಾತ್ಮಿಕ ಜೀವನವನ್ನು ಸಚೇತನಗೊಳಿಸಿಕೊಳ್ಳುತ್ತಿದ್ದರು. ಈ ವಿಷಯ ಕಲಕತ್ತೆಯ ಜನಸಾಧಾರಣರ ಗಮನಕ್ಕೆ ಬಂದಿಲ್ಲ.

2. 'ಹೂವು ಅರಳಿದ ಕೂಡಲೆ ದುಂಬಿಗಳು ತಾವಾಗಿಯೇ ಓಡಿಬರುತ್ತವೆ' ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಅವುಗಳನ್ನು ಕರೆಯಬೇಕಾಗಿಲ್ಲ. ನಿಮ್ಮಲ್ಲಿ ಭಗವದ್ಭಕ್ತಿ ಮತ್ತು ಪ್ರೇಮ ಸರಿಯಾದ ರೀತಿಯಲ್ಲಿ ವಿಕಾಸಗೊಂಡಮೇಲೆ ಭಗವಂತನಲ್ಲಿ ಆಸಕ್ತಿಯುಳ್ಳವರು, ಭಗವತ್ಸಾಕ್ಷಾತ್ಕಾರವನ್ನು ತಮ್ಮ ಜೀವನದ ಉದ್ದೇಶವಾಗಿ ಮಾಡಿಕೊಂಡು ಅದಕ್ಕಾಗಿ ಪ್ರಯತ್ನಿಸುತ್ತಿರುವವರು ಯಾವುದೊ ಒಂದು ಆಧ್ಯಾತ್ಮಿಕ ನಿಯಮವನ್ನು ಅನುಸರಿಸಿ ನಿಮ್ಮೆಡೆಗೆ ಬಂದೇ ಬರುತ್ತಾರೆ. ಆದ್ದರಿಂದ ಶ್ರೀರಾಮಕೃಷ್ಣರ ಅಭಿಪ್ರಾಯದಂತೆ, ಮೊದಲು ಭಗವಂತನ ದರ್ಶನವನ್ನು ಪಡೆದು ಸರಿಯಾದ ರೀತಿಯಲ್ಲಿ ಲೋಕಹಿತವನ್ನು ಮಾಡುವ ಸಾಮರ್ಥ್ಯವನ್ನು ಹೊಂದಬೇಕು, ಭಗವಂತನ ಆದೇಶವನ್ನು ಪಡೆದು ಅನಂತರ ಧರ್ಮಪ್ರಚಾರ ಮತ್ತು ಲೋಕಸಂಗ್ರಹ ಕಾರ್ಯಗಳಲ್ಲಿ ತೊಡಗಬೇಕು. ಇಲ್ಲದಿದ್ದರೆ ಶ್ರೀರಾಮಕೃಷ್ಣರು ಹೇಳುವಂತೆ, "ನಿಮ್ಮ ಮಾತನ್ನು ಕೇಳುವವರಾರು ? ನೀವು ಹೇಳುವುದನ್ನು ಅವರು ಕೇಳಬೇಕೇಕೆ ?"

3. ನಾವೆಷ್ಟೆ ಇತರರಿಗಿಂತ ಶ್ರೇಷ್ಠರೆಂದು ಅಹಂಕಾರಪಟ್ಟರೂ ನಾವೆಲ್ಲರೂ ಒಂದೇ ಸ್ಥಿತಿಯಲ್ಲಿದ್ದೇವೆ. ಈ ಜನ್ಮ–ಜರಾ–ಮೃತ್ಯುವಿನಿಂದ ಕೂಡಿದ, ದುಃಖ–ದಾರಿದ್ರ್ಯ–

ಅಜ್ಞಾನ–ಅಂಧಕಾರಪೂರ್ಣವಾದ ಈ ಜಗತ್ತಿನಲ್ಲಿ ನಾವೆಲ್ಲರೂ ಒಂದೇ ಸಮಾನವಾಗಿ ತೊಳಲುತ್ತಿದ್ದೇವೆ. ವಿಜ್ಞಾನ ಎಷ್ಟೇ ಉನ್ನತಿಯನ್ನು ಸಾಧಿಸಿರಬಹುದು, ಜಗತ್ತಿನ ಎಷ್ಟೋ ರಹಸ್ಯಗಳನ್ನು ಅದು ಭೇದಿಸಿರಬಹುದು, ಆದರೆ ನಾವೆಲ್ಲರೂ ಅದೇ ಇಂದ್ರಿಯ ಲೋಲುಪತೆ, ಲೋಭ, ದ್ವೇಷ, ಮೃತ್ಯುಭಯ ಇತ್ಯಾದಿಗಳಿಂದ ಪರಿತಪಿಸುತ್ತಿರುವೆವು. ಇಂದ್ರಿಯ, ಮನಸ್ಸು, ಬುದ್ಧಿ ಇವುಗಳ ಸಹಾಯದಿಂದ ನಾವು ಸತ್ಯವನ್ನು ತಿಳಿಯುವ ಪ್ರಯತ್ನ ಮಾಡಿದರೂ ಇವುಗಳೇ ನಮ್ಮನ್ನು ಪದೇ ಪದೇ ತಪ್ಪುಹಾದಿಗೆ ಎಳೆಯು ವುವು. ಈ ಆಟದ ಉದ್ದೇಶವೇನು, ಇವುಗಳಿಂದ ಎಂದಾದರೂ ಬಿಡುಗಡೆ ಉಂಟೇ ನಮಗೆ–ಈ ವಿಷಯದಲ್ಲಿ ನಾವು ಸಂಪೂರ್ಣ ಅಜ್ಞಾತರಾಗಿದ್ದೇವೆ. ಪ್ರತಿಯೊಬ್ಬರಲ್ಲೂ ಯಥಾರ್ಥ ಜ್ಞಾನದ ಕೊರತೆಯಿದೆ, ಆದರೆ ಆ ಕೊರತೆಯನ್ನು ತುಂಬಿಸುವವರಾರು ? ಯಾರಿಗಾದರೂ ಕೊಡುವ ಸಾಮರ್ಥ್ಯವಿದ್ದರೆ ಕೊಡಲಿ. ಆದರೆ ಈ ವಿಷಯವನ್ನು ಮನುಷ್ಯ ಅರ್ಥಮಾಡಿಕೊಳ್ಳುವುದಿಲ್ಲ. ಕೊಡುವುದಕ್ಕೆ ಏನೂ ಇಲ್ಲದಿದ್ದರೂ ಹೆಸರು ಕೀರ್ತಿಯ ಆಸೆಯಿಂದ ಅಥವಾ ಇನ್ನಾವುದಾದರೂ ಸ್ವಾರ್ಥ ಉದ್ದೇಶದಿಂದ ಸಿಕ್ಕಿದವರಿ ಗೆಲ್ಲ ಉಪದೇಶಮಾಡುತ್ತ ಹೋಗುತ್ತಾನೆ–'ಅಂಧೇನೈವ ನೀಯಮಾನಾ ಯಥಾಂಧಾಃ' ಎನ್ನುವಂತೆ ತಾವೂ ಕಷ್ಟಕ್ಕೀಡಾಗಿ ಇತರರನ್ನೂ ಕಷ್ಟಕ್ಕೀಡುಮಾಡುತ್ತಾರೆ.

4. ಆದ್ದರಿಂದ ಶ್ರೀರಾಮಕೃಷ್ಣರು ಸಂಸಾರದಲ್ಲಿ ಎಲ್ಲರೂ ಅನುಸರಿಸುವ ಮಾರ್ಗ ವನ್ನು ಹಿಡಿಯದೆ ತ್ಯಾಗ, ವೈರಾಗ್ಯ, ಸಂಯಮಗಳ ಮೂಲಕ ತಮ್ಮನ್ನು ಶ್ರೀಜಗನ್ಮಾ ತೆಯ ಯೋಗ್ಯ ಯಂತ್ರದಂತೆ ಪರಿವರ್ತಿಸಿಕೊಂಡರು. ಅವರು ಸತ್ಯ ಸಾಕ್ಷಾತ್ಕಾರ ವನ್ನು ಪಡೆದು ನಿಶ್ಚಿಂತೆಯಿಂದ ಸ್ಥಿರವಾಗಿ ಒಂದೇ ಸ್ಥಳದಲ್ಲಿದ್ದು ಜೀವನಯಾಪನೆ ಮಾಡತೊಡಗಿದರು. ಹೀಗೆ ಯಥಾರ್ಥ ಕರ್ಮಾನುಷ್ಠಾನದ ಒಂದು ಹೊಸ ಮಾರ್ಗ ವನ್ನು ತೋರಿಸಿಕೊಟ್ಟರು. ಅವರು ಸತ್ಯಸಾಕ್ಷಾತ್ಕಾರವನ್ನು ಪಡೆದು ಜ್ಞಾನಭಂಡಾರ ವನ್ನು ತೆರೆದ ಕೂಡಲೇ ಜ್ಞಾನಪಿಪಾಸುಗಳು ಆಹ್ವಾನವಿಲ್ಲದೆಯೆ ಅವರೆಡೆಗೆ ಬರ ತೊಡಗಿದರು. ಅವರ ದಿವ್ಯ ಸಂಪರ್ಕದಿಂದ ತಾವು ಧನ್ಯರಾಗುವುದು ಮಾತ್ರವಲ್ಲದೆ ತಾವು ಹೋದೆಡೆಯೆಲ್ಲ ಈ ದಿವ್ಯ ಸಂದೇಶವನ್ನು ಪ್ರಚಾರಮಾಡಿ ಇತರರೂ ಈ ಧನ್ಯತೆ ಯಲ್ಲಿ ಭಾಗಿಗಳಾಗುವಂತೆ ಮಾಡಿದರು. ನಮ್ಮ ಒಳಗೆ ಯಾವ ಭಾವರಾಶಿಗಳಿರು ತ್ತವೆಯೊ ಅದನ್ನೇ ಹೊರಗಡೆ ಪ್ರಕಾಶಪಡಿಸುತ್ತೇವೆ. ಶ್ರೀರಾಮಕೃಷ್ಣರು ತಮ್ಮದೇ ಗ್ರಾಮ್ಯ ಭಾಷೆಯಲ್ಲಿ ಹೇಳುತ್ತಿದ್ದರು : "ಮನುಷ್ಯ ತಿಂದಂತೆ ತೇಗುತ್ತಾನೆ–ಅದೇ ವಾಸನೆ ಹೊರಬರುತ್ತದೆ. ಸೌತೆಕಾಯಿ ತಿಂದರೆ ಅದೇ ವಾಸನೆಯ ತೇಗು ಬರುತ್ತದೆ, ಮೂಲಂಗಿ ತಿಂದರೆ ಅದೇ ವಾಸನೆಯ ತೇಗು ಬರುತ್ತದೆ."

5, ಭೈರವಿ ಬ್ರಾಹ್ಮಣಿಯೊಡನೆ ಶ್ರೀರಾಮಕೃಷ್ಣರ ಭೇಟಿ ಅವರ ಜೀವನದಲ್ಲಿ ಒಂದು ಅತಿ ಮುಖ್ಯ ಘಟನೆ. ಇದರ ನಂತರ ಶ್ರೀರಾಮಕೃಷ್ಣರು ಶಾಸ್ತ್ರಾನುಸಾರವಾಗಿ ಸಾಧನೆಯನ್ನು ಮಾಡುತ್ತ ಬಹು ಬೇಗನೆ ಮುಂದುವರಿಯುತ್ತಿದ್ದರು. ಅದೇ ಸಂದರ್ಭ ದಲ್ಲಿಯೇ ಅವರಲ್ಲಿ ಗುರುಭಾವವೂ ವಿಶೇಷ ರೀತಿಯಲ್ಲಿ ಅಭಿವ್ಯಕ್ತವಾಗತೊಡಗಿತು.

ಇದಕ್ಕೆ ಮೊದಲು ಅವರಲ್ಲಿ ಈ ಭಾವ ಇರಲಿಲ್ಲ ಎಂದು ಹೇಳಲಾಗುವುದಿಲ್ಲ. ಬಾಲ್ಯ ಕಾಲದಿಂದಲೂ ಅವರಲ್ಲಿ ಈ ಗುರುಭಾವ ಹೆಚ್ಚುಕಡಮೆ ಇತ್ತು ಎಂಬುದನ್ನು ನಾವು ಮೊದಲೇ ತೋರಿಸಿರುವೆವು. ಅವರ ಗುರುಭಾವದ ಸಹಾಯದಿಂದ ಅವರ ಗುರುಗಳು ಕೂಡ ತಮ್ಮ ತಮ್ಮ ನ್ಯೂನತೆಗಳಿಂದ ಮುಕ್ತರಾಗಿ ಪೂರ್ಣತೆಯನ್ನು ಪಡೆಯುವ ಅವಕಾಶವನ್ನು ಪಡೆದಿದ್ದರು. ಬ್ರಾಹ್ಮಣಿಯು ಬರುವುದಕ್ಕೆ ಮುಂಚೆ ಶ್ರೀರಾಮಕೃಷ್ಣರ ಭಗವದನುರಾಗ ಮತ್ತು ತೀವ್ರ ವ್ಯಾಕುಲತೆಯನ್ನು ಜನರು ಉನ್ಮತ್ತತೆ ಮತ್ತು ದೈಹಿಕ ಕಾಯಿಲೆ ಎಂದೇ ಪರಿಗಣಿಸಿದ್ದರು, ಅದನ್ನು ಹೋಗಲಾಡಿಸಲು ಚಿಕಿತ್ಸೆಯೂ ನಡೆಯು ತ್ತಿತ್ತು. ಗಂಗಾಪ್ರಸಾದ ಸೇನನ ಮನೆಯಿಂದ ಪೂರ್ವಬಂಗಾಳದ ಸಾಧಕ ವೈದ್ಯನೊಬ್ಬನು ಶ್ರೀರಾಮಕೃಷ್ಣರ ಚಿಕಿತ್ಸೆಗಾಗಿ ಬಂದಿದ್ದನು. ಅವನು ಇವರ ದೇಹ ಲಕ್ಷಣಗಳನ್ನು ನೋಡಿ ಅದು 'ಯೋಗಜ ವಿಕಾರ', ಎಂದರೆ ಯೋಗಸಾಧನೆ ಮಾಡುವಾಗ ದೇಹದಲ್ಲಿ ಉಂಟಾಗುವ ಪರಿವರ್ತನೆಗಳು—ಎಂದು ಹೇಳಿದ್ದನು. ಆದರೂ ಅವನ ಮಾತಿಗೆ ಜನ ಅಷ್ಟೊಂದು ಬೆಲೆ ಕೊಡಲಿಲ್ಲ. ಹುಚ್ಚು ಮತ್ತು ಭಗವದ್ಭಕ್ತಿ ಎರಡೂ ಅವರಲ್ಲಿ ಬೆರತಿವೆ ಎಂದೇ ಮಥುರ ಮುಂತಾದವರು ಭಾವಿಸಿದ್ದರು.

6. ಭಕ್ತಿಶಾಸ್ತ್ರದಲ್ಲಿ ವ್ಯುತ್ಪತ್ತಿಯನ್ನು ಪಡೆದಿದ್ದ ವಿದುಷಿಯಾದ ಬ್ರಾಹ್ಮಣಿಯೇ ಮೊದಲ ಬಾರಿಗೆ ಅದು ಹುಚ್ಚಲ್ಲ ಎಂದು ಸಾರಿದವಳು. ಅಸಾಧಾರಣ ಭಗವದ್ಭಕ್ತಿಯ ಪರಿಣಾಮವಾದ ಮನೋವಿಕಾರಗಳಿಗನುಗುಣವಾಗಿ ಉಂಟಾಗುವ ದೈಹಿಕ ವಿಕಾರಗಳು ಅವು ಎಂದು ಅವಳು ಎಲ್ಲರ ಮುಂದೆ ಸಾರಿದಳು. ಅಷ್ಟೇ ಅಲ್ಲದೆ ಪ್ರೇಮರೂಪಿಣಿ ರಾಧೆಯಿಂದ ಹಿಡಿದು ಚೈತನ್ಯನವರೆಗೆ ಹಿಂದಿನ ಎಲ್ಲ ಯೋಗಿಗಳ ಮತ್ತು ಆಚಾರ್ಯರ ಜೀವನದಲ್ಲಿಯೂ ಇಂಥದೇ ದೈಹಿಕ ವಿಕಾರಗಳು ಕಾಣಿಸಿಕೊಂಡವು ಎಂಬುದನ್ನು ಶಾಸ್ತ್ರಾ ಧಾರದ ಮೂಲಕ ತೋರಿಸಿಕೊಟ್ಟಳು. ಶ್ರೀರಾಮಕೃಷ್ಣರ ಶಾರೀರಿಕ ಲಕ್ಷಣಗಳು ಶಾಸ್ತ್ರವಾಕ್ಯಗಳಿಗೆ ಅನುಗುಣವಾಗಿವೆಯೆಂದು ಪ್ರಮಾಣೀಕರಿಸಿದಳು. ಅವಳ ಈ ಸಮರ್ಥನೆಯಿಂದ ಬಾಲಕನು ತಾಯಿಯ ಆಶ್ವಾಸನೆಯಿಂದ ಸಮಾಧಾನಗೊಳ್ಳುವಂತೆ ಶ್ರೀರಾಮಕೃಷ್ಣರೂ ಸಂತೋಷವನ್ನು ವ್ಯಕ್ತಪಡಿಸಿದರು ಮತ್ತು ಮಥುರ ಮುಂತಾದ ವರಿಗೆ ಅತ್ಯಂತ ಆಶ್ಚರ್ಯವಾಯಿತು. ಭೈರವಿ ಬ್ರಾಹ್ಮಣಿಯು ಅವನಿಗೆ ಹೇಳಿದಳು : "ಶಾಸ್ತ್ರವೇತ್ತರಾದ ಪಂಡಿತರುಗಳನ್ನು ಕರೆಸು, ನಾನು ಅವರ ಮುಂದೆ ಈ ವಿಷಯ ವನ್ನು ಸಮರ್ಥಿಸಿ ತೋರಿಸುತ್ತೇನೆ." ಈ ಮಾತನ್ನು ಕೇಳಿದಾಗ ಮಥುರನ ಆಶ್ಚರ್ಯಕ್ಕೆ ಕೊನೆಯೇ ಇರಲಿಲ್ಲ.

ಆದರೆ ಆಶ್ಚರ್ಯಪಟ್ಟರೆ ಏನಾಗುತ್ತದೆ ? ಭಿಕ್ಷೆ ಬೇಡಿಕೊಂಡಿದ್ದ ಯಃಕಶ್ಚಿತ್ ಸ್ತ್ರೀಯೊಬ್ಬಳ ಮಾತನ್ನು ಕೇಳುವವರಾರು ? ಅವಳ ಪಾಂಡಿತ್ಯದಲ್ಲಿ ಇದ್ದಕ್ಕಿದ್ದಂತೆ ವಿಶ್ವಾಸ ಉಂಟಾಗುವುದಾದರೂ ಹೇಗೆ ? ಪೂರ್ವಬಂಗಾಳದ ವೈದ್ಯನ ಮಾತಿನಂತೆಯೇ ಭೈರವಿಯ ಮಾತು ಕೂಡ ಮಥುರ ಮುಂತಾದವರ ಒಂದು ಕಿವಿಯಿಂದ ಪ್ರವೇಶಿಸಿ ಮತ್ತೊಂದರ ಮೂಲಕ ಹೊರಟು ಹೋಗುವುದರಲ್ಲಿತ್ತು. ಆದರೆ ಶ್ರೀರಾಮಕೃಷ್ಣರ

ಒತ್ತಾಯದಿಂದ ಪರಿಸ್ಥಿತಿ ಬದಲಾಯಿತು. ಬಾಲಕ ಸ್ವಭಾವದ ಶ್ರೀರಾಮಕೃಷ್ಣರು ಮಥುರನನ್ನು ಹಿಡಿದು ಕೇಳಿಕೊಂಡರು : "ಉತ್ತಮ ಪಂಡಿತರುಗಳನ್ನು ಕರೆಸಿ ಬ್ರಾಹ್ಮಣಿಯು ಹೇಳಿದುದನ್ನು ಪರೀಕ್ಷಿಸಿ ನೋಡಲೇಬೇಕು." ಹಣವಂತನಾದ ಮಥುರನೂ ಭಾವಿಸಿದ : "ಇವರ ಔಷಧೋಪಚಾರಗಳಿಗೆ ಇಷ್ಟೊಂದು ಹಣ ಖರ್ಚು ಮಾಡಿದ್ದಾಗಿದೆ. ಇದನ್ನೂ ಒಂದು ಮಾಡಿನೋಡುವುದು. ಬಂದ ಪಂಡಿತರು ಭೈರವಿಯ ಮಾತನ್ನು ಸುಳ್ಳಾಗಿಸುವುದಂತೂ ನಿಶ್ಚಯ. ಆಗಲಾದರೂ ಈ ಚಿಕ್ಕ ಭಟ್ಟಾಚಾರ್ಯ ನಿಗೆ ಇದು ಕೇವಲ ಕಾಯಿಲೆಯೆಂಬುದು ಖಾತ್ರಿಯಾಗುತ್ತದೆ. ಇದರ ಪರಿಣಾಮವಾಗಿ ಅವನು ತನ್ನ ಮನಸ್ಸನ್ನು ಸ್ವಲ್ಪ ಹತೋಟಿಗೊಳಿಸುತ್ತಾನೆ. ಸಾಮಾನ್ಯವಾಗಿ ಹುಚ್ಚರ ರೀತಿಯೇ ಹೀಗೆ ತಾನೆ. ತಾನು ಮಾಡುವುದು ತಾನು ತಿಳಿದಿರುವುದೆಲ್ಲ ಸರಿ, ಇತರರು ಏನು ತಿಳಿದಿರುವರೊ ಮತ್ತು ಮಾಡುತ್ತಿರುವರೊ ಅದೆಲ್ಲ ತಪ್ಪು–ಹೀಗೆಂದು ಭಾವಿಸಿ ತನ್ನ ಮನಸ್ಸನ್ನೇ ಸಂಪೂರ್ಣ ಅವಲಂಬಿಸಿ, ಅದರಲ್ಲಿ ಬರುವ ಆಲೋಚನೆಗಳಾವುದನ್ನೂ ನಿಗ್ರಹಿಸದೆ ಅದಕ್ಕೆ ವಶನಾಗುವುದರಿಂದಲೇ ವ್ಯಕ್ತಿಯು ಹುಚ್ಚನಾಗುತ್ತಾನೆ. ಈಗ ಪಂಡಿತರನ್ನು ಕರೆಸದಿದ್ದರೆ ಭಟ್ಟಾಚಾರ್ಯನು ಬ್ರಾಹ್ಮಣಿಯ ಮಾತಿನಲ್ಲಿ ಸಂಪೂರ್ಣ ವಿಶ್ವಾಸವಿರಿಸುತ್ತಾನೆ. ಇದರ ಫಲವಾಗಿ ಅವನ ಮಾನಸಿಕ ವಿಕಾರಗಳು ಇನ್ನೂ ವೃದ್ಧಿ ಯಾಗಿ ದೇಹಾರೋಗ್ಯ ಮತ್ತೂ ಕೆಡುತ್ತದೆ." ಹೀಗೆ ಕುತೂಹಲದಿಂದಲೂ, ಶ್ರೀರಾಮ ಕೃಷ್ಣರ ಮೇಲಿನ ಪ್ರೀತಿಯಿಂದಲೂ ಮಥುರನು ಅವರ ಒತ್ತಾಯಕ್ಕೆ ಕಟ್ಟುಬಿದ್ದು ಪಂಡಿತರ ಸಭೆಯನ್ನು ಕರೆಯಲು ಸಮ್ಮತಿಸಿದನು.

7. ಕಲಕತ್ತೆಯ ಪಂಡಿತ ಮಂಡಳಿಯಲ್ಲಿ ವೈಷ್ಣವಚರಣನ ಹೆಸರು ತುಂಬ ಪ್ರಖ್ಯಾತವಾಗಿತ್ತು. ಅವನು ಭಾಗವತ ಪಠನ ಮತ್ತು ವ್ಯಾಖ್ಯಾನದಲ್ಲಿ ತುಂಬ ನಿಪುಣ ನಾಗಿದ್ದನು. ಇದರಿಂದಾಗಿ ಅವನು ಜನಸಾಮಾನ್ಯರಲ್ಲಿಯೂ ಪ್ರಸಿದ್ಧನಾಗಿದ್ದನು. ಶ್ರೀರಾಮಕೃಷ್ಣರು, ಮಥುರ, ಬ್ರಾಹ್ಮಣೀ ಇವರೆಲ್ಲ ಅವನ ಹೆಸರನ್ನು ಮೊದಲೇ ಕೇಳಿ ದ್ದರು. ಅಸಾಧ್ಯ ಸಾಮರ್ಥ್ಯ ಮತ್ತು ಪಾಂಡಿತ್ಯವನ್ನು ಪಡೆದಿದ್ದ, ಬಾಂಕುರದ ಇಂದೇಶ ವಾಸಿಯಾದ ಗೌರೀ ಪಂಡಿತನ ಹೆಸರನ್ನೂ ಎಲ್ಲರೂ ಕೇಳಿದ್ದರು. ಮಥುರನು ಇವರಿಬ್ಬ ರನ್ನೂ ಆಹ್ವಾನಿಸುವುದೆಂದು ತೀರ್ಮಾನಿಸಿದ. ಹೀಗೆ ವೈಷ್ಣವಚರಣ ಮತ್ತು ಗೌರೀ ಪಂಡಿತ ಇವರು ದಕ್ಷಿಣೇಶ್ವರಕ್ಕೆ ಬರುವಂತಾಯಿತು. ಇವರಿಬ್ಬರ ಬಗ್ಗೆ ಶ್ರೀರಾಮ ಕೃಷ್ಣರ ಮೂಲಕ ಅನೇಕ ವಿಷಯಗಳನ್ನು ಕೇಳಿರುವೆವು. ಅವನ್ನು ಈಗ ಇಲ್ಲಿ ಪ್ರಸ್ತುತ ಪಡಿಸುತ್ತೇವೆ.

8. ವೈಷ್ಣವಚರಣನು ಕೇವಲ ಪಂಡಿತನಾಗಿರಲಿಲ್ಲ, ಒಬ್ಬ ಭಕ್ತ ಸಾಧಕನೆಂದೂ ಪರಿಗಣಿಸಲ್ಪಟ್ಟಿದ್ದ. ಅವನ ಭಗವದ್ಭಕ್ತಿ ಮತ್ತು ಭಕ್ತಿಶಾಸ್ತ್ರದ ವಿಷಯದಲ್ಲಿ ಸೂಕ್ಷ್ಮ ದೃಷ್ಟಿ–ಇವುಗಳಿಂದಾಗಿ ವೈಷ್ಣವ ಸಮಾಜದಲ್ಲಿ ಒಬ್ಬ ನೇತಾರನ ಸ್ಥಾನವನ್ನು ಪಡೆದಿದ್ದ ಎನ್ನಬಹುದು. ಎಲ್ಲ ಉತ್ಸವಗಳಲ್ಲಿಯೂ ಅವನಿಗೆ ಪ್ರಥಮ ಸ್ಥಾನ ದೊರೆಯುತ್ತಿತ್ತು. ಯಾವುದೇ ಧಾರ್ಮಿಕ ಪ್ರಶ್ನೆ ಬಂದಾಗಲೂ ಅವನ ಅಭಿಪ್ರಾಯಕ್ಕೆ ಮಾನ್ಯತೆ ನೀಡು

ತ್ತಿದ್ದರು. ಅನೇಕ ಜನ ಸಾಧಕರೂ ಅವನೆಡೆಗೆ ಮಾರ್ಗದರ್ಶನಕ್ಕಾಗಿ ಬರುತ್ತಿದ್ದರು, ಅವನ ನಿರ್ದೇಶದಂತೆ ನಡೆಯುತ್ತಿದ್ದರು. ಆದ್ದರಿಂದ ಶ್ರೀರಾಮಕೃಷ್ಣರಿಗೆ ಭಕ್ತಿಯ ಅತಿಶಯದಿಂದ ಈ ರೀತಿ ಭಾವಾದಿಗಳು ಉಂಟಾಗುತ್ತಿವೆಯೊ ಅಥವಾ ಇವು ಶಾರೀರಿಕ ವ್ಯಾಧಿಯ ಪರಿಣಾಮವೊ ಎಂಬುದನ್ನು ನಿರ್ಣಯಿಸಲು ವೈಷ್ಣವಚರಣನನ್ನು ಕರೆಸುವ ನಿರ್ಣಯಕ್ಕೆ ಮಥುರನು ಬಂದುದರಲ್ಲಿ ಆಶ್ಚರ್ಯವೇನಿಲ್ಲ.

9. ಈ ಮಧ್ಯೆ ಭೈರವೀ ಬ್ರಾಹ್ಮಣಿಯು ಶ್ರೀರಾಮಕೃಷ್ಣರ ಸ್ಥಿತಿಯ ಬಗ್ಗೆ ತನ್ನ ಅಭಿಪ್ರಾಯವನ್ನು ಸಮರ್ಥಿಸುವ ಒಂದು ವಿಶಿಷ್ಟ ಪ್ರಮಾಣವನ್ನು ಕಂಡುಕೊಂಡಿದ್ದಳು. ಅವಳು ಅದರಿಂದ ತುಂಬ ಸಂತೋಷಗೊಂಡು, ಇತರರಿಗೂ ಅದನ್ನು ತಿಳಿಸಿ ಅವರನ್ನು ವಿಸ್ಮಯಕ್ಕೆ ಒಳಪಡಿಸಿದ್ದಳು. ಅದಾವುದೆಂದರೆ : ಬ್ರಾಹ್ಮಣಿಯು ಬರುವುದಕ್ಕೆ ಮುಂಚಿನಿಂದಲೇ ಶ್ರೀರಾಮಕೃಷ್ಣರು ದೇಹದ ಉರಿಯಿಂದ ಸಂಕಟಪಡುತ್ತಿದ್ದರು. ಆ ಉರಿಯನ್ನು ಹೋಗಲಾಡಿಸಲು ಅನೇಕ ಪ್ರಯತ್ನ ಮಾಡಿಯಾಗಿತ್ತು, ಆದರೆ ಏನೂ ಪ್ರಯೋಜನವಾಗಿರಲಿಲ್ಲ. ಬೆಳಗಿನಿಂದ ಸಮಯ ಕಳೆದಂತೆಲ್ಲ ಉರಿಯು ಅಧಿಕವಾಗುತ್ತಲೇ ಹೋಗುತ್ತಿತ್ತು, ಎಂದು ಶ್ರೀರಾಮಕೃಷ್ಣರ ಬಾಯಿಂದಲೇ ಕೇಳಿರುವೆವು. ಮಧ್ಯಾಹ್ನ ಎರಡು ಗಂಟೆಯ ಹೊತ್ತಿಗೆ ಉರಿ ಎಷ್ಟು ತೀವ್ರವಾಗುತ್ತಿತ್ತೆಂದರೆ ಅವರು ಗಂಗಾನದಿಯಲ್ಲಿ ಕುಳಿತು ತಲೆಯ ಮೇಲೆ ಒದ್ದೆ ಬಟ್ಟೆಯನ್ನು ಹಾಕಿಕೊಂಡಿರುತ್ತಿದ್ದರಂತೆ. ಹೀಗೆ ಎರಡು ಮೂರು ಗಂಟೆ ಕಳೆಯುತ್ತಿದ್ದರು. ಹಾಗೆ ನೀರಿನಲ್ಲಿದ್ದರೆ ಶೀತವಾಗುವುದೆಂದು ಇಷ್ಟವಿಲ್ಲದಿದ್ದರೂ ನೀರಿನಿಂದ ಹೊರಬರುತ್ತಿದ್ದರು. ಅನಂತರ ಬಾಬುಗಳ ಕಟೀರಕ್ಕೆ ಹೋಗಿ ಬಾಗಿಲುಗಳನ್ನೆಲ್ಲ ಮುಚ್ಚಿ ಒದ್ದೆ ಬಟ್ಟೆಯನ್ನು ಅಮೃತಶಿಲೆಯ ನೆಲದಮೇಲೆ ಹಾಸಿ ಅದರ ಮೇಲೆ ಹೊರಳಾಡುತ್ತಿದ್ದರು.

ಬ್ರಾಹ್ಮಣಿಯು ಈ ವಿಷಯವನ್ನು ಕೇಳಿ ತನ್ನದೇ ತೀರ್ಮಾನಕ್ಕೆ ಬಂದಳು. ಇದು ವ್ಯಾಧಿಯ ಪರಿಣಾಮವಲ್ಲ, ತೀವ್ರ ಭಗವಧ್ವ್ಯಾಕುಲತೆಯ ಫಲ ಎಂದು ಆಕೆ ನಿರ್ಧರಿಸಿದಳು. ರಾಧಾರಾಣಿ ಮತ್ತು ಶ್ರೀಚೈತನ್ಯ ಇವರಿಗೂ ಇಂಥದೇ ಸ್ಥಿತಿಯುಂಟಾಗಿತ್ತು ಎಂದು ಅವಳು ಹೇಳಿದಳು. ಈ ರೋಗಕ್ಕೆ ಔಷಧಿಯು ತುಂಬ ವಿಚಿತ್ರವಾದುದು : ಸುವಾಸನೆಯ ಹೂಮಾಲೆಯನ್ನು ಧರಿಸುವುದು ಮತ್ತು ದೇಹಕ್ಕೆ ಚಂದನವನ್ನು ಬಳಿಯುವುದು.

ಅವಳು ಸೂಚಿಸಿದ ರೋಗದ ಕಾರಣವನ್ನೂ ಮತ್ತು ಅದರ ಚಿಕಿತ್ಸೆಯನ್ನು ಕೇಳಿ ಮಥುರ ಮುಂತಾದವರು ನಗತೊಡಗಿದರು. ಎಷ್ಟೊ ಔಷಧಿ ಮಾಡಿದ್ದಾಯಿತು, ನಾರಾಯಣ ತೈಲ ವಿಷ್ಣು ತೈಲ ಮುಂತಾದ ಎಷ್ಟೋ ತೈಲಗಳನ್ನು ಲೇಪಿಸಿದ್ದಾಯಿತು; ಅದಾವುದರಿಂದಲು ಈ ರೋಗ ವಾಸಿಯಾಗಲಿಲ್ಲ. ಈಗ ಈ ಹೆಂಗಸು ಹೇಳುತ್ತಾಳೆ ಇದು ರೋಗವೇ ಅಲ್ಲ ಎಂದು !–ಎಂತಹ ವಿಚಿತ್ರ ಎಂದು ಎಲ್ಲ ಭಾವಿಸಿದರು. ಆದರೆ ಅವಳ ಚಿಕಿತ್ಸೆಯ ವಿಧಾನಕ್ಕೆ ಯಾರೂ ಆಕ್ಷೇಪ ಎತ್ತಲಿಲ್ಲ, ಏಕೆಂದರೆ ಚಿಕಿತ್ಸಾ ವಿಧಾನ ಅತ್ಯಂತ ಸುಲಭವಾಗಿದ್ದುದರಿಂದ. ಅದರಿಂದ ಏನೂ ಪ್ರಯೋಜನವಾಗದಿದ್ದರೆ

ರೋಗಿಯೆ ಒಂದೆರಡು ದಿನಗಳಲ್ಲಿ ಅದನ್ನು ಬಿಟ್ಟು ಬಿಡುತ್ತಾನೆ. ಬ್ರಾಹ್ಮಣಿಯ ಸೂಚನೆ ಯಂತೆ ಶ್ರೀರಾಮಕೃಷ್ಣರ ದೇಹಕ್ಕೆ ಗಂಧವನ್ನು ಬಳಿದು ಸುವಾಸನೆಯ ಹೂಮಾಲೆ ಯನ್ನು ತೊಡಿಸಿದ್ದಾಯಿತು. ಮೂರು ದಿನ ಹೀಗೆ ಮಾಡಿದ ಮೇಲೆ ಶ್ರೀರಾಮಕೃಷ್ಣರ ದೇಹದ ಉರಿ ಸಂಪೂರ್ಣ ನಿಂತುಹೋಯಿತು. ಎಲ್ಲರಿಗೂ ಅತ್ಯಾಶ್ಚರ್ಯ ! ಆದರೆ ಸಂದೇಹಗ್ರಸ್ಥ ಮನಸ್ಸು ಅಷ್ಟಕ್ಕೆ ಸುಮ್ಮನಾಗುವುದೆ ? ಇದು ಕಾಕತಾಳೀಯ ನ್ಯಾಯ ದಂತಾಗಿರಬಹುದು, ಇದಕ್ಕೆ ಮೊದಲು ವಿಷ್ಣುತೈಲವನ್ನು ಪ್ರಯೋಗಿಸಿದ್ದರು, ಅದು ಉತ್ತಮ ತೈಲ ಎಂದು ವೈದ್ಯ ಹೇಳಿದ್ದನು. ಅದರ ಪ್ರಭಾವದಿಂದಲೇ ಈಗ ಉರಿ ಗುಣವಾಗಿರುವುದು—ಎಂದು ಇತರರು ಭಾವಿಸಿದರು ಬ್ರಾಹ್ಮಣೀ ಏನೇ ಹೇಳಲಿ ಏನೇ ಚಿಕಿತ್ಸೆ ಮಾಡಲಿ ಆ ತೈಲವನ್ನೇ ಮುಂದುವರಿಸಬೇಕೆಂದು ಎಲ್ಲರೂ ಒತ್ತಾಯಿಸಿದರು.

**10.** ಕೆಲವು ದಿನಗಳನಂತರ ಶ್ರೀರಾಮಕೃಷ್ಣರಿಗೆ ಇನ್ನೊಂದು ಕಾಯಿಲೆ ಬಂತು. ಇದೂ ಕೂಡ ಬ್ರಾಹ್ಮಣಿಯ ಚಿಕಿತ್ಸೆಯಿಂದ ಮೂರೆ ದಿನಗಳಲ್ಲಿ ವಾಸಿಯಾಯಿತೆಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಅವರು ಹೇಳಿರುವರು : "ಆ ಸಮಯದಲ್ಲಿ ಒಮ್ಮೆ ವಿಪರೀತ ಹಸಿವಿನ ಬಾಧೆ ಉಂಟಾಯಿತು. ಏನೇ ತಿಂದರೂ ಹೊಟ್ಟೆ ತುಂಬುತ್ತಿರಲಿಲ್ಲ. ಊಟಮಾಡಿ ಏಳುತ್ತಿದ್ದಂತೆಯೇ ಇನ್ನೂ ಏನಾದರೂ ಉಣ್ಣಬೇಕು ಎನಿಸುತ್ತಿತ್ತು. ಹಗಲು ರಾತ್ರಿ ತಿನ್ನುವುದೊಂದೇ ವಿಚಾರ—ಆ ಹಸಿವಿಗೆ ಕೊನೆಯೇ ಇರಲಿಲ್ಲ. ಇದೇನು ಹೊಸ ಕಾಯಿಲೆಯಪ್ಪ ಎಂದು ಭಾವಿಸಿದೆ. ಬ್ರಾಹ್ಮಣಿಯನ್ನು ಕೇಳಿದಾಗ ಅವಳೆಂದಳು : 'ಮಗು, ಭಯ ಬೇಡ. ಭಗವಂತನ ಮಾರ್ಗದಲ್ಲಿ ನಡೆಯುವ ಸಾಧಕರಿಗೆ ಇಂತಹ ಸ್ಥಿತಿ ಆಗಾಗ ಉಂಟಾಗುತ್ತದೆ. ಹಾಗೆ ಶಾಸ್ತ್ರದಲ್ಲಿ ಹೇಳಿದೆ. ನಾನಿದನ್ನು ಗುಣಪಡಿಸುತ್ತೇನೆ.' ಅವಳು ಮಥುರನಿಗೆ ಹೇಳಿ, ಅವಲಕ್ಕಿ ಮಂಡಕ್ಕಿಯಿಂದ ಹಿಡಿದು ಸಂದೇಶ ರಸಗುಲ್ಲ ಮುಂತಾದ ಎಲ್ಲ ಬಗೆಯ ಆಹಾರ ಪದಾರ್ಥಗಳನ್ನೂ ತರಿಸಿ ಕೊಠಡಿಯಲ್ಲಿ ತುಂಬಿಸಿ ದಳು. ಅನಂತರ ನನಗೆ ಹೇಳಿದಳು : 'ಮಗು, ನೀನು ಹಗಲು ರಾತ್ರಿ ಈ ಕೋಣೆ ಯಲ್ಲಿಯೇ ಇರು ಮತ್ತು ನಿನಗೆ ಯಾವಾಗ ಏನು ಬೇಕೋ ಅದನ್ನು ತಿನ್ನು.' ನಾನು ಆ ಕೋಣೆಯಲ್ಲಿದ್ದೆ. ಅತ್ತಿತ್ತ ಓಡಾಡಿದೆ. ಆ ತಿಂಡಿಗಳನ್ನೆಲ್ಲ ಕೈಗೆತ್ತಿಕೊಂಡು ನೋಡಿದೆ. ಅದನ್ನು ಸ್ವಲ್ಪ ಇದನ್ನು ಸ್ವಲ್ಪ ತಿನ್ನತೊಡಗಿದೆ. ಹೀಗೆ ಮೂರು ದಿನ ಕಳೆಯಲು ಆ ಹಸಿವು ಮತ್ತು ತಿನ್ನುವ ಇಚ್ಛೆ ಹೊರಟುಹೋಯಿತು."

**11.** ಯೋಗ ಅಥವಾ ಭಗವಂತನಲ್ಲಿ ತನ್ಮಯಾವಸ್ಥೆಯು ಸಹಜವಾಗುವುದಕ್ಕೆ ಮುಂಚೆ ಮತ್ತೆ ಕೆಲವೊಮ್ಮೆ ಅನಂತರವೂ ಕೂಡ ಈ ರೀತಿ ವಿಪರೀತ ಹಸಿವಾಗುವ ವಿಚಾರವನ್ನು ನಾವು ಅನೇಕ ಸಾಧಕರ ಜೀವನದಲ್ಲಿ ಕೇಳಿರುವೆವು ಮತ್ತು ಶ್ರೀರಾಮ ಕೃಷ್ಣರಿಗೂ ಹಾಗಾಗುತ್ತಿದ್ದುದನ್ನು ನೋಡಿರುವೆವು. ಆದರೆ ಶ್ರೀರಾಮಕೃಷ್ಣರ ವಿಷಯ ದಲ್ಲಿ ನಾವು ನೋಡಿರುವುದು ಬೇರೆಯೇ ರೀತಿಯದು. ಮೇಲೆ ಹೇಳಿದ ಸಮಯದಲ್ಲಿ ಆದಂತೆ ಅವರು ನಿರಂತರವಾಗಿ ಹಸಿವಿನ ಪೀಡೆಗೆ ಒಳಗಾಗುತ್ತಿರಲಿಲ್ಲ. ಯಾವಾಗಲು ಎಷ್ಟು ಉಣ್ಣುತ್ತಿದ್ದರೊ ಅದರ ನಾಲ್ಕರಷ್ಟು ಅಥವಾ ಅದಕ್ಕೂ ಅಧಿಕ ಉಣ್ಣು

ತ್ತಿದ್ದರು ಮತ್ತು ಆದರಿಂದ ಅವರ ದೇಹಾರೋಗ್ಯ ಕೆಡುತ್ತಿರಲಿಲ್ಲ. ಇದಕ್ಕೆ ಇಲ್ಲಿ ಒಂದೆರಡು ಘಟನೆಗಳನ್ನು ಉದಾಹರಿಸಬಹುದು.

12. ಮೊದಲೇ ಈ ವಿಷಯವನ್ನು ಓದುಗರಿಗೆ ಸೂಚ್ಯವಾಗಿ ತಿಳಿಸಿರುವೆವು.* ಓದುಗರಿಗೆ ನೆನಪಿರಬಹುದು : ಒಮ್ಮೆ ಕೆಲವು ಸ್ತ್ರೀಭಕ್ತರು ಭೋಲಾನ ಅಂಗಡಿಯಿಂದ ಒಂದು ದೊಡ್ಡ ತುಂಡು ಸರ್ ಎಂಬ ಸಿಹಿತಿಂಡಿಯನ್ನು ತೆಗೆದುಕೊಂಡು ಶ್ರೀರಾಮಕೃಷ್ಣ ರನ್ನು ನೋಡಲು ದಕ್ಷಿಣೇಶ್ವರಕ್ಕೆ ಹೋದರು. ಅವರು ಅಲ್ಲಿ ಇಲ್ಲದಿರಲು ಮಾಸ್ಟರ್ ಮಹಾಶಯನ ಮನೆಗೆ ಹೋದರು. ಅಲ್ಲಿ ಶ್ರೀರಾಮಕೃಷ್ಣರೊಡನೆ ಮಾತನಾಡುತ್ತಿರು ವಾಗ ಪ್ರಾಣಕೃಷ್ಣ ಬಂದನು. ಆಗ ಈ ಸ್ತ್ರೀಯರೆಲ್ಲ ಶ್ರೀರಾಮಕೃಷ್ಣರು ಕುಳಿತಿದ್ದ ಮಂಚದಡಿಯಲ್ಲಿ ಅಡಗಿಕೊಂಡರು. ರಾತ್ರಿ ಊಟದನಂತರ ಶ್ರೀರಾಮಕೃಷ್ಣರು ದಕ್ಷಿಣೇ ಶ್ವರಕ್ಕೆ ಬಂದು, ಅವರಿಗೆ ಮತ್ತೆ ಹಸಿವಾಗಲು, ಆ ಸ್ತ್ರೀಭಕ್ತರು ತಂದುಕೊಟ್ಟಿದ್ದ ಸರ್ ಅನ್ನು ಸಂಪೂರ್ಣ ತಿಂದುಬಿಟ್ಟರು. ಇಂಥದೇ ಇನ್ನು ಕೆಲವು ಘಟನೆಗಳನ್ನು ಇಲ್ಲಿ ವಿವರಿ ಸುತ್ತೇವೆ. ಇಂಥ ಎಷ್ಟೊ ಘಟನೆಗಳು ಅವರ ಜೀವನದಲ್ಲಿ ನಡೆದಿವೆ. ಅವನ್ನೆಲ್ಲ ಇಲ್ಲಿ ವಿವರಿಸಲು ಸಾಧ್ಯವಿಲ್ಲ.

ಮಲೇರಿಯಾದ ಹಾವಳಿಗೆ ತುತ್ತಾಗುವುದಕ್ಕೆ ಮೊದಲು, ಹುಗ್ಲೀ, ವರ್ಧಮಾನ ಮುಂತಾದ ಜಿಲ್ಲಾಪ್ರದೇಶಗಳು ಅತ್ಯಂತ ಸಂಪದ್ಭರಿತವಾಗಿದ್ದುವು, ಅವುಗಳ ಸ್ಥಿತಿ ಉತ್ತರ–ಪಶ್ಚಿಮ ಭಾಗದ ಸ್ಥಿತಿಗಿಂತ ಏನೂ ಕಡಿಮೆಯಿರಲಿಲ್ಲ ಎಂದು ಹಿರಿಯ ವ್ಯಕ್ತಿ ಗಳು ಈಗಲೂ ಹೇಳುತ್ತಾರೆ. ಮಲೇರಿಯಾದ ಪ್ರಕೋಪಕ್ಕೆ 'ಸುಜಲಾ, ಸುಫಲಾ ಸಸ್ಯ ಶ್ಯಾಮಲ'ವಾದ ಬಂಗಾಳದ ಹೆಚ್ಚಿನ ಪ್ರದೇಶ ವಿಧ್ವಸ್ತವಾಯಿತು, ಜನಶೂನ್ಯವಾಗಿ ಬಿಟ್ಟಿತು. ಇದಕ್ಕೂ ಮೊದಲು ಜನರು ವರ್ಧಮಾನ ಮುಂತಾದ ಸ್ಥಳಗಳಿಗೆ ಹವಬದಲಾ ವಣೆಗೆ ಹೋಗುತ್ತಿದ್ದರಂತೆ. ಕಾಮಾರಪುಕುರವು ವರ್ಧಮಾನದಿಂದ ಇಪ್ಪತ್ತೈದು ಮೈಲಿ ದೂರದಲ್ಲಿದೆ. ಆ ಸ್ಥಳದ ನೀರು ವಾಯು ತುಂಬ ಉತ್ತಮವಾಗಿದ್ದುವು. ಹನ್ನೆರಡು ವರ್ಷದ ಕಠೋರ ಸಾಧನೆಯಿಂದ ಮತ್ತು ಶರೀರವನ್ನು ಕಡೆಗಣಿಸಿದ್ದರಿಂದ ಶ್ರೀರಾಮ ಕೃಷ್ಣರ ಬಲಿಷ್ಠದೇಹವೂ ಅನೇಕ ರೋಗಗಳಿಗೆ ಬಲಿಯಾಯಿತು. ಈ ಕಾರಣದಿಂದಾಗಿ ತಮ್ಮ ಸಾಧನೆಯು ಅಂತ್ಯಗೊಂಡಮೇಲೆ ಶ್ರೀರಾಮಕೃಷ್ಣರು ಪ್ರತಿ ವರ್ಷ ಚಾತುರ್ಮಾ ಸ್ಯದ ಸಮಯದಲ್ಲಿ ಕಾಮಾರಪುಕುರ ಮತ್ತು ಸುತ್ತಮುತ್ತಲಿನ ಪ್ರದೇಶಗಳಿಗೆ ಹವಬದ ಲಾವಣೆಗಾಗಿ ಹೋಗುತ್ತಿದ್ದರು. ಅವರ ಸೇವಕನಾದ ಹೃದಯನೂ ಅವರೊಂದಿಗಿರು ತ್ತಿದ್ದನು. ಮಥುರನು ಹೋಗಿಬರುವ ಖರ್ಚನ್ನು ಕೊಡುವುದಲ್ಲದೆ ಶ್ರೀರಾಮಕೃಷ್ಣರು ಹಳ್ಳಿಯಲ್ಲಿರುವಾಗ ಏನೂ ತೊಂದರೆಯಾಗದಿರಲೆಂದು ಎಲ್ಲ ಆವಶ್ಯಕ ವಸ್ತುಗಳನ್ನೂ ಕಳಿಸಿಕೊಡುತ್ತಿದ್ದನು. ತಾಯಿಯು ಮಗಳನ್ನು ಮೊದಲ ಬಾರಿಗೆ ಗಂಡನ ಮನೆಗೆ ಕಳಿಸಿ ಕೊಡುವಾಗ ಹಲ್ಲುಕಡ್ಡಿ, ಬತ್ತಿ ಮುಂತಾದ ಸಾಮಾನ್ಯ ವಸ್ತುಗಳನ್ನು ಕೂಡ ಜೊತೆಯಲ್ಲಿ

* ಪೂರ್ವಾರ್ಧ ಮೊದಲನೆಯ ಅಧ್ಯಾಯ ನೋಡಿ

ಕಳಿಸಿಕೊಡುತ್ತಾಳೆ. ಅದೇ ರೀತಿ ಮಥುರ ಮತ್ತು ಅವನ ಪತ್ನಿ ಜಗದಂಬಾ ದಾಸಿ ಶ್ರೀರಾಮಕೃಷ್ಣರು ಕಾಮಾರಪುಕುರಕ್ಕೆ ಹೋಗುವಾಗ ಹೊಸ ಮನೆಯನ್ನು ಪ್ರಾರಂಭಿಸು ವಾಗ ಬೇಕಾಗುವ ಎಲ್ಲ ವಸ್ತುಗಳನ್ನೂ ಕಳಿಸಿಕೊಡುತ್ತಿದ್ದರು. ಏಕೆಂದರೆ ಹಳ್ಳಿಯಲ್ಲಿ ಶ್ರೀರಾಮಕೃಷ್ಣರದ್ದು ಶಿವನ ಕುಟುಂಬದಂತೆ, ಹಿಂದಿನಿಂದಲೂ ಭವಿಷ್ಯಕ್ಕಾಗಿ ಸಂಗ್ರಹಿ ಸಿಡುವ ಪದ್ಧತಿಯೇ ಇರಲಿಲ್ಲ—ಎಂಬುದು ಮಥುರನಿಗೆ ತಿಳಿಯದ ವಿಷಯವಲ್ಲ. ಧರ್ಮ ಮಾರ್ಗದಲ್ಲಿ ನಡೆಯುತ್ತ ಏನು ದೊರೆಯುವುದೊ ಅದರಿಂದಲೇ ತೃಪ್ತಿಯಿಂದಿರುವುದು ಆ ಕುಟುಂಬದ ಸಂಪ್ರದಾಯವಾಗಿತ್ತು. ಶ್ರೀರಘುವೀರನ ಹೆಸರಿನಲ್ಲಿದ್ದ ಅರ್ಧ ಎಕರೆ ಭೂಮಿಯಿಂದ ಏನು ಬರುತ್ತಿತ್ತೊ, ಅದರಿಂದಲೇ ತಮ್ಮ ಸಂಸಾರವನ್ನು ನಿಭಾಯಿಸು ತ್ತಿದ್ದರು. ಹಳ್ಳಿಯಲ್ಲಿದ್ದ ಒಂದು ಕಿರಾಣಿ ಅಂಗಡಿಯೇ ಈ ದೇವಕುಟುಂಬದ ಭಾಂಡಾರ ದಂತಿತ್ತು. ಸಂಭಾವನೆಯ ರೂಪದಲ್ಲಿ ಏನಾದರು ಹಣ ದೊರೆತರೆ ಉಪ್ಪು, ಮೆಣಸಿನ ಕಾಯಿ, ತರಕಾರಿ ಮುಂತಾದ ವಸ್ತುಗಳನ್ನು ಆ ಅಂಗಡಿಯಿಂದ ಕೊಂಡುಕೊಳ್ಳುತ್ತಿದ್ದರು. ಇಲ್ಲದಿದ್ದರೆ ಅನ್ನ ಮತ್ತು ಕೊಳದ ಪಕ್ಕದಲ್ಲಿ ದೊರೆಯುತ್ತಿದ್ದ ಸೊಪ್ಪು—ಇಷ್ಟರಿಂದಲೇ ತೃಪ್ತರಾಗುತ್ತಿದ್ದರು. ಪ್ರತಿಯೊಂದು ವಿಷಯದಲ್ಲೂ ಕುಲದೇವತೆಯಾದ ರಘುವೀರ ನನ್ನೇ ಅವಲಂಬಿಸುತ್ತಿದ್ದರು. ಮಥುರ ಬಾಬುವಿಗೆ ಇದೆಲ್ಲ ತಿಳಿದಿದ್ದರಿಂದ ಕೆಲವು ಎಕರೆ ಭತ್ತದ ಗದ್ದೆಯನ್ನು ಖರೀದಿಸಿ ಶ್ರೀರಘುವೀರನ ಹೆಸರಿನಲ್ಲಿ ಬರೆಸಬೇಕೆಂದು ಅವನು ಆಶಿಸಿದ್ದನು. ಅವರ ಬಗ್ಗೆ ಅವನಿಗಿದ್ದ ಕಳಕಳಿಯೇ ಅವರು ಕಾಮಾರಪುಕುರಕ್ಕೆ ಹೋಗು ವಾಗ ಎಲ್ಲ ಆವಶ್ಯಕ ವಸ್ತುಗಳನ್ನೂ ಅವರೊಡನೆ ಕಳಿಸುವಂತೆ ಪ್ರೇರೇಪಿಸಿತ್ತು.

13. ಮೊದಲೇ ತಿಳಿಸಿದಂತೆ ಶ್ರೀರಾಮಕೃಷ್ಣರು ಚಾತುರ್ಮಾಸ್ಯದ ವೇಳೆಯಲ್ಲಿ ಕಾಮಾರಪುಕುರಕ್ಕೆ ಹೋಗುತ್ತಿದ್ದರು. ಹೀಗೆ ಒಮ್ಮೆ ಹೋಗಿದ್ದಾಗ ಕಾಮಾರಪುಕುರದಲ್ಲಿ ಮಲೇರಿಯಾ ಆಗತಾನೆ ಕಾಣಿಸಿಕೊಳ್ಳುತ್ತಿತ್ತು. ಶ್ರೀರಾಮಕೃಷ್ಣರೂ ಆ ರೋಗದಿಂದ ನರಳಬೇಕಾಯಿತು. ಇನ್ನು ಮುಂದೆ ಹಳ್ಳಿಗೆ ಹೋಗುವುದಿಲ್ಲವೆಂದು ನಿರ್ಣಯಿಸಿದರು ಮತ್ತು ಮತ್ತೆ ಅವರು ಅಲ್ಲಿಗೆ ಹೋಗಲೂ ಇಲ್ಲ. ಈ ರೀತಿ ಅವರು ಸಂಕಲ್ಪಿಸಿದ್ದು ತಮ್ಮ ದೇಹಾವಸಾನದ ಎಂಟು ಹತ್ತು ವರ್ಷಗಳಿಗೆ ಮುಂಚೆ. ಆ ವರ್ಷ ಹಿಂದಿನಂತೆಯೇ ಅವರು ಕಾಮಾರಪುಕುರದಲ್ಲಿ ವಾಸವಾಗಿದ್ದರು. ಅವರನ್ನು ನೋಡುವುದಕ್ಕೆ ಮತ್ತು ಅವರ ಧರ್ಮಾಲಾಪವನ್ನು ಕೇಳುವುದಕ್ಕೆ ನೆರೆಹೊರೆಯ ಸ್ತ್ರೀಪುರುಷರ ದೊಡ್ಡ ಗುಂಪೇ ಯಾವಾಗಲೂ ಇರುತ್ತಿತ್ತು. ಕಾಲ ಆನಂದಮಯವಾಗಿ ಕಳೆಯುತ್ತಿತ್ತು. ಮನೆಯ ಮಹಿಳೆಯರೆಲ್ಲ ಆನಂದದಿಂದ ಅವರ ಸೇವೆ ಮಾಡುತ್ತಿದ್ದುದು ಮಾತ್ರವಲ್ಲದೆ ಅವರನ್ನು ನೋಡಲು ಬರುತ್ತಿದ್ದ ಜನರ ಸೇವೆ ಉಪಚಾರಗಳಲ್ಲಿಯೂ ಅವರು ಸದಾ ಉತ್ಸುಕ ರಾಗಿದ್ದರು. ಆ ಆನಂದದಲ್ಲಿ ದಿನಗಳು ಕಳೆದದ್ದೇ ಯಾರ ಅನುಭವಕ್ಕೂ ಬರಲಿಲ್ಲ. ಆಗ ಶ್ರೀರಾಮಕೃಷ್ಣರ ಅಣ್ಣನ ಮಗ ರಾಮಲಾಲನ ತಾಯಿಯೇ ಮನೆಯ ಒಡತಿಯಾಗಿ ದ್ದಳು. ಆಕೆಯ ಮಗಳಾದ ಲಕ್ಷ್ಮೀದೀದಿ ಮತ್ತು ಪರಮ ಪೂಜ್ಯ ಶ್ರೀಮಾತೆ ಶಾರದಾ ದೇವಿ—ಇವರುಗಳೂ ಮನೆಯಲ್ಲಿದ್ದರು.

ರಾತ್ರಿಯಾಗಿ ಸುಮಾರು ಮೂರು ಗಂಟೆ ಕಳೆದಿದೆ. ನೆರೆಹೊರೆಯ ಸ್ತ್ರೀಪುರುಷ ರೆಲ್ಲ ತಮ್ಮ ತಮ್ಮ ಮನೆಗೆ ಹೊರಟುಹೋಗಿದ್ದಾರೆ. ಶ್ರೀರಾಮಕೃಷ್ಣರಿಗೆ ಕೆಲವು ದಿನ ಗಳಿಂದ ಅಜೀರ್ಣವಾಗಿತ್ತು. ಆದ್ದರಿಂದ ರಾತ್ರಿವೇಳೆ ಸೀಮೆಅಕ್ಕಿ ಮತ್ತು ಬಾರ್ಲಿ ನೀರು ಬಿಟ್ಟರೆ ಬೇರೇನನ್ನೂ ತೆಗೆದುಕೊಳ್ಳುತ್ತಿರಲಿಲ್ಲ. ಆ ರಾತ್ರಿಯೂ ಕೂಡ ಹಾಲು ಮತ್ತು ಬಾರ್ಲಿ ನೀರನ್ನು ಕುಡಿದು ಮಲಗಲು ಹೋದರು. ಮನೆಯ ಮಹಿಳೆಯರೆಲ್ಲ ಕೊನೆಯಲ್ಲಿ ಊಟ ಮುಗಿಸಿ ದಿನದ ಕೆಲಸವನ್ನೆಲ್ಲ ಮುಗಿಸಿ ಮಲಗಲು ಸನ್ನದ್ಧರಾಗಿ ದ್ದರು. ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆಯೆ ಮಲಗುವ ಕೋಣೆಯ ಬಾಗಿಲನ್ನು ತೆರೆದು ಹೊರಬಂದರು. ಅವರು ಭಾವಾವಸ್ಥೆಯಲ್ಲಿದ್ದರು. ರಾಮಲಾಲನ ತಾಯಿ ಮತ್ತು ಇತರರನ್ನು ಕುರಿತು ಹೇಳಿದರು : "ನೋಡಿ, ನೀವೆಲ್ಲ ಮಲಗಿಕೊಂಡಿರಲ್ಲ! ನನಗೆ ಊಟ ಹಾಕದೆ ನೀವು ಹೀಗೆ ಮಾಡುವುದೆ ?"

ರಾಮಲಾಲನ ತಾಯಿ : "ಅದು ಹೇಗೆ ? ನೀನು ಈಗ ತಾನೆ ಊಟ ಮುಗಿಸಿದೆ ಯಲ್ಲ ?"

ಶ್ರೀರಾಮಕೃಷ್ಣರು : "ಎಲ್ಲಿ ? ನಾನು ಈಗ ತಾನೇ ದಕ್ಷಿಣೇಶ್ವರದಿಂದ ಬಂದಿ ರುವೆ. ನನಗೆ ಯಾವಾಗ ಊಟ ಹಾಕಿದಿರಿ ?"

ಮಹಿಳೆಯರೆಲ್ಲ ಆಶ್ಚರ್ಯದಿಂದ ಪರಸ್ಪರರ ಮುಖ ನೋಡತೊಡಗಿದರು. ಶ್ರೀರಾಮಕೃಷ್ಣರು ಭಾವಾವೇಶದಲ್ಲಿ ಈ ರೀತಿ ಹೇಳುತ್ತಿರುವರೆಂದು ಅವರಿಗೆ ತಿಳಿಯಿತು. ಆದರೆ ಮಾಡುವುದೇನು ? ಶ್ರೀರಾಮಕೃಷ್ಣರಿಗೆ ಕೊಡಬಹುದಾದ ಆಹಾರ ಪದಾರ್ಥ ಗಳಾವುವೂ ಈಗ ಮನೆಯಲ್ಲಿಲ್ಲ. ಈಗೇನು ಮಾಡುವುದು ? ರಾಮಲಾಲನ ತಾಯಿ ಭಯದಿಂದ ಹೇಳಿದಳು : "ಮನೆಯಲ್ಲಿ ಈಗ ತಿನ್ನುವುದಕ್ಕೆ ಏನೂ ಇಲ್ಲ. ಕೇವಲ ಮಂಡಕ್ಕಿ ಇದೆ. ಅದನ್ನು ತಿನ್ನುತ್ತೀಯ ? ಸ್ವಲ್ಪ ತೆಗೆದುಕೊ, ಆದರಿಂದ ಹೊಟ್ಟೆಗೆ ಏನೂ ತೊಂದರೆಯಾಗುವುದಿಲ್ಲ." ಅವಳು ತಟ್ಟೆಯಲ್ಲಿ ಮಂಡಕ್ಕಿ ತಂದು ಶ್ರೀರಾಮ ಕೃಷ್ಣರ ಮುಂದಿರಿಸಿದಳು. ಅದನ್ನು ನೋಡಿ ಶ್ರೀರಾಮಕೃಷ್ಣರು ಬಾಲಕನಂತೆ ಕೋಪ ದಿಂದ ವಿರುದ್ಧ ದಿಕ್ಕಿಗೆ ತಿರುಗಿಕೊಂಡು ಕುಳಿತು, "ಬರಿ ಮಂಡಕ್ಕಿ ನಾನು ತಿನ್ನುವುದಿಲ್ಲ" ಎಂದು ಹಠ ಹಿಡಿದರು. ಅವರಿಗೆ ತುಂಬ ಸಮಾಧಾನ ಮಾಡಿ ಹೇಳಬೇಕಾಯಿತು : "ನಿನ್ನ ಹೊಟ್ಟೆ ಸರಿಯಿಲ್ಲ. ಏನು ತಿಂದರೂ ಆಗುವುದಿಲ್ಲ. ಮತ್ತೆ ಅಂಗಡಿಗಳೆಲ್ಲ ಈಗ ಮುಚ್ಚಿವೆ–ಸಾಗು ಬಾರ್ಲಿ ಕೊಂಡುಕೊಂಡು ಬರುವಂತೆಯೂ ಇಲ್ಲ. ಇವತ್ತು ಇಷ್ಟನ್ನೇ ತಿನ್ನು. ನಾಳೆ ಬೆಳಗ್ಗೆ ಎದ್ದ ಕೂಡಲೆ ಸಾರು ಅನ್ನ ಮಾಡಿಕೊಡುತ್ತೇನೆ." ಶ್ರೀರಾಮ ಕೃಷ್ಣರು ಈ ಮಾತನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ, ಹಠಮಾರಿ ಬಾಲಕನಂತೆ "ನಾನು ಮಂಡಕ್ಕಿ ತಿನ್ನುವುದೇ ಇಲ್ಲ" ಎಂದು ಕುಳಿತುಬಿಟ್ಟರು.

ಬೇರೆ ಗತಿಯಿಲ್ಲದೆ ರಾಮಲಾಲನು ಹೊರಗೆ ಹೋಗಿ ಅಂಗಡಿಯವನನ್ನು ಕೂಗಿ ಎಬ್ಬಿಸಿ ಒಂದು ಸೇರು ಸಿಹಿತಿಂಡಿಯನ್ನು ಕೊಂಡು ತಂದನು. ಆ ಒಂದು ಸೇರು ಸಿಹಿ ತಿಂಡಿಯನ್ನೂ, ಸಾಮಾನ್ಯವಾಗಿ ಜನರು ತಿನ್ನುವುದಕ್ಕಿಂತ ಹೆಚ್ಚು ಮಂಡಕ್ಕಿಯನ್ನೂ ಒಂದು

ತಟ್ಟೆಯಲ್ಲಿ ಶ್ರೀರಾಮಕೃಷ್ಣರ ಮುಂದೆ ಇರಿಸಲಾಯಿತು. ಈಗ ಅವರು ಸಂತೋಷದಿಂದ ಅದನ್ನು ತಿನ್ನತೊಡಗಿದರು. ನೋಡುನೋಡುತ್ತಿದ್ದಂತೆಯೇ ಅವರು ಅದನ್ನೆಲ್ಲ ಸಂಪೂರ್ಣ ತಿಂದು ಮುಗಿಸಿದರು ! ಎಲ್ಲರಿಗೂ ಅದನ್ನು ನೋಡಿ ಭಯವುಂಟಾಯಿತು. ಅವರ ಹೊಟ್ಟೆ ಬೇರೆ ಸರಿಯಿಲ್ಲ, ತಿಂಗಳಲ್ಲಿ ಅರ್ಧದಷ್ಟು ಸಾಗು ಬಾರ್ಲಿ ತಿಂದುಕೊಂಡಿರುವವರು. ಈಗ ಈ ನಡುರಾತ್ರಿಯಲ್ಲಿ ಇಷ್ಟೊಂದು ತಿಂದುಬಿಟ್ಟರಲ್ಲ ! ಏನಾದರೂ ಅನಿಷ್ಟ ಆಗುವುದು ಖಂಡಿತ—ಎಂದು ಎಲ್ಲರೂ ಭಾವಿಸಿದರು. ಆದರೆ ಆಶ್ಚರ್ಯವೇನೆಂದರೆ ಮರುದಿನ ಬೆಳಿಗ್ಗೆ ಶ್ರೀರಾಮಕೃಷ್ಣರ ದೇಹ ಸರಿಯಾಗಿಯೇ ಇತ್ತು, ರಾತ್ರಿಯ ತಿನ್ನುವಿಕೆಯಿಂದ ಯಾವ ರೀತಿಯ ಅನಾರೋಗ್ಯವೂ ಉಂಟಾಗಿರಲಿಲ್ಲ.

14. ಇನ್ನೊಮ್ಮೆ ಶ್ರೀರಾಮಕೃಷ್ಣರು ಕಾಮಾರಪುಕುರದ ಪ್ರದೇಶದಲ್ಲಿ ವಾಸಿಸುತ್ತಿರುವಾಗ ಅವರನ್ನು ಜಯರಾಮಬಾಟಿಗೆ ಕರೆದುಕೊಂಡುಹೋಗಲಾಯಿತು. ರಾತ್ರಿ ಆಹಾರದನಂತರ ಮಲಗುವ ಸಮಯದಲ್ಲಿ ಶ್ರೀರಾಮಕೃಷ್ಣರು ಮೇಲೆದ್ದು "ನನಗೆ ತುಂಬ ಹಸಿವಾಗುತ್ತಿದೆ" ಎಂದು ಹೇಳಿದರು. ಮಹಿಳೆಯರಿಗೆಲ್ಲ ಸಂಕಟಕ್ಕಿಟ್ಟುಕೊಂಡಿತು—ತಿನ್ನುವುದಕ್ಕೆ ಏನನ್ನು ಕೊಡುವುದು, ಮನೆಯಲ್ಲಿ ಏನೂ ಇರಲಿಲ್ಲ. ಏಕೆಂದರೆ ಅಂದು ಮನೆಯಲ್ಲಿ ಶ್ರಾದ್ಧ ಅಥವಾ ಇನ್ನೇನೊ ವಿಶೇಷ ಸಮಾರಂಭ ನಡೆದಿತ್ತು, ಮನೆಗೆ ಅನೇಕ ಅತಿಥಿಗಳು ಬಂದಿದ್ದರಿಂದ ಎಲ್ಲ ಆಹಾರ ಪದಾರ್ಥಗಳೂ ಮುಗಿದುಹೋಗಿದ್ದುವು. ತಣ್ಣೀರಿನಲ್ಲಿ ಹಾಕಿಟ್ಟಿದ್ದ ಅನ್ನವಿತ್ತು ಅಷ್ಟೆ. ಶ್ರೀಮಾತೆಯವರು ಬಹಳ ಸಂಕೋಚದಿಂದ ಈ ವಿಷಯವನ್ನು ಹೇಳಿದಾಗ ಶ್ರೀರಾಮಕೃಷ್ಣರು ಅದನ್ನೇ ತೆಗೆದುಕೊಂಡು ಬಾ ಎಂದರು. ಶ್ರೀಮಾತೆಯವರು ಹೇಳಿದರು,' "ಆದರೆ ಪಲ್ಯ ಇಲ್ಲ" ಎಂದು.

ಶ್ರೀರಾಮಕೃಷ್ಣರು : "ಸ್ವಲ್ಪ ಹುಡುಕಿ ನೋಡಬಾರದೇಕೆ ? ನೀನು ಮೆಣಸಿನ ಕಾಯಿ, ಅರಸಿನ ಹಾಕಿ ಮೀನಿನ ಪಲ್ಯ ಮಾಡಿದ್ದೆಯಲ್ಲ ? ಅದೇ ಸ್ವಲ್ಪ ಇರಬಹುದು ನೋಡು."

ಶ್ರೀಮಾತೆಯವರು ಅಡಿಗೆ ಪಾತ್ರೆಯನ್ನು ನೋಡಿದರು—ಅದರಲ್ಲಿ ಒಂದು ಚಿಕ್ಕ ಮೌರಾಲ ಮೀನು ಮತ್ತು ಸ್ವಲ್ಪ ರಸ ಇತ್ತು. ಅವರು ಅದನ್ನೇ ತಂದರು. ಶ್ರೀರಾಮಕೃಷ್ಣರಿಗೆ ನೋಡಿ ಆನಂದವಾಯಿತು. ಈಗ ಅವರು ಊಟಕ್ಕೆ ಕುಳಿತರು—ಸುಮಾರು ಎರಡು ಸೇರಿನಷ್ಟು ಅನ್ನವನ್ನು ತಿಂದು ಮುಗಿಸಿದರು !

15. ಅವರು ದಕ್ಷಿಣೇಶ್ವರದಲ್ಲಿರುವಾಗಲೂ ಈ ರೀತಿ ಆಗುತ್ತಿತ್ತು. ಒಂದು ದಿನ ರಾತ್ರಿ ಎರಡು ಗಂಟೆಯ ಹೊತ್ತಿಗೆ ಎದ್ದು ರಾಮಲಾಲನನ್ನು ಕರೆದು ಹೇಳಿದರು : "ನೋಡು, ನನಗೆ ತುಂಬ ಹಸಿವಾಗುತ್ತಿದೆ, ಏನೂ ಮಾಡಲಿ ?"

ಯಾವಾಗಲೂ ಕೊಠಡಿಯಲ್ಲಿ ಅನೇಕ ಸಿಹಿ ತಿಂಡಿಗಳು ಇರುತ್ತಿದ್ದವು. ಆದರೆ ಅಂದು ಏನೂ ಇರಲಿಲ್ಲ. ರಾಮಲಾಲನು ನಹಬತ್ತಿಗೆ ಹೋಗಿ ಅಲ್ಲಿದ್ದ ಶ್ರೀಮಾತೆ ಮತ್ತು ಸ್ತ್ರೀ ಭಕ್ತರಿಗೆ ವಿಷಯವನ್ನು ತಿಳಿಸಿದ. ಅವರೆಲ್ಲ ಗಡಿಬಿಡಿಯಿಂದ ಮೇಲೆದ್ದು ಕೂಡಲೇ ಹುಲ್ಲು ಸೌದೆಗಳಿಂದ ಒಲೆ ಹೊತ್ತಿಸಿದರು. ಒಂದು ಸೇರು ಹಲ್ವ ತಯಾರಿಸಿ

ಕಲ್ಲಿನ ಬಟ್ಟಲಿನ ತುಂಬ ತುಂಬಿಸಿ ಶ್ರೀರಾಮಕೃಷ್ಣರ ಕೋಣೆಗೆ ಕಳುಹಿಸಿದರು. ಸ್ತ್ರೀ ಭಕ್ತೆಯೊಬ್ಬಳು ಅದನ್ನು ತೆಗೆದುಕೊಂಡು ಬಂದಳು. ಕೋಣೆಯಲ್ಲಿ ಒಂದು ಮಂದ ಪ್ರಕಾಶದ ದೀಪ ಉರಿಯುತ್ತಿದೆ, ರಾಮಲಾಲನು ಅದರ ಪಕ್ಕದಲ್ಲಿ ಕುಳಿತಿದ್ದ. ಶ್ರೀರಾಮಕೃಷ್ಣರು ಆ ನೀರವ ನಡುರಾತ್ರಿಯಲ್ಲಿ ಆಧ್ಯಾತ್ಮಿಕ ಭಾವಾವೇಶದಿಂದ ಕೋಣೆಯಲ್ಲಿ ಅತ್ತಿಂದಿತ್ತ ಓಡಾಡುತ್ತಿದ್ದಾರೆ. ಆಧ್ಯಾತ್ಮಿಕ ಭಾವದಿಂದ ಬೆಳಗುತ್ತಿದ್ದ ಅವರ ಗಂಭೀರ ಮುಖ, ದಿವ್ಯೋನ್ಮಾದದಿಂದ ಕೂಡಿದ ಆ ನಗ್ನ ಮೂರ್ತಿ, ಆ ವಿಶಾಲವೂ ಸ್ಥಿರವೂ ಆದ ಕಣ್ಣುಗಳಲ್ಲಿನ ಅಂತರ್ಮುಖ ದೃಷ್ಟಿ–ಅದರ ಮುಂದೆ ಇಡೀ ವಿಶ್ವವೇ ಇಚ್ಛಾಮಾತ್ರದಿಂದ ಸಮಾಧಿಯಲ್ಲಿ ಲೀನವಾಗಿ ಮತ್ತೆ ಉದ್ಭವಿಸುತ್ತಿತ್ತು–ಅವರ ಧೀರ ಗಂಭೀರ ನಡೆ, ಉದ್ದೇಶರಹಿತವಾದ ಆನಂದಭರಿತವಾದ ಅವರ ಚಲನೆ–ಇವನ್ನೆಲ್ಲ ನೋಡಿ ಆ ಸ್ತ್ರೀ ಭಕ್ತಳ ಹೃದಯ ಅಪೂರ್ವ ಭಾವದಿಂದ ತುಂಬಿಹೋಯಿತು. ಅವರ ದೇಹ ಹೆಚ್ಚು ಎತ್ತರವೂ ಸ್ಥೂಲವೂ ಆಗಿ ಕಾಣಿಸಿತು ಆಕೆಗೆ. ಅವರು ಈ ಲೋಕದ ವ್ಯಕ್ತಿಯಂತೆಯೇ ಕಾಣಲಿಲ್ಲ. ಸ್ವರ್ಗದಿಂದಿಳಿದ ದೇವತೆಯಂತಿದ್ದರು. ಈ ದುಃಖ ಗೊಂದಲಮಯ ನರಲೋಕದಲ್ಲಿ ಯಾರಿಗೂ ತಿಳಿಯದಂತೆ ರಾತ್ರಿಯ ಆವರಣದಲ್ಲಿ ನಿರ್ಭಯದಿಂದ ಓಡಾಡಲು ನರಶರೀರವನ್ನು ಧರಿಸಿ ಬಂದಿರುವ ಯಾವನೊ ದಿವ್ಯ ಪುರುಷನಂತೆ ಕಾಣಿಸಿದರು. ಈ ಶ್ಮಶಾನ ಭೂಮಿಯನ್ನು ದೇವಭೂಮಿಯನ್ನಾಗಿ ಹೇಗೆ ಪರಿವರ್ತಿಸುವುದು ಎಂಬುದನ್ನು ಅವರ ಕರುಣಾಪೂರ್ಣ ಹೃದಯವು ಚಿಂತಿಸುತ್ತಿರುವಂತೆ ಅವರು ಅನನ್ಯ ಮನಸ್ಕರಾಗಿ ಕಂಡರು. ಇವರು ಯಾವಾಗಲೂ ನೋಡುತ್ತಿದ್ದ ಶ್ರೀರಾಮಕೃಷ್ಣರು ಅಲ್ಲವೇ ಅಲ್ಲ ಎನಿಸಿತು ಆಕೆಗೆ. ಅವಳ ದೇಹ ರೋಮಾಂಚನಗೊಂಡಿತು ಮತ್ತು ಹತ್ತಿರ ಹೋಗುವುದಕ್ಕೆ ಭಯವಾಯಿತು.

ರಾಮಲಾಲನು ಶ್ರೀರಾಮಕೃಷ್ಣರಿಗೆ ಕುಳಿತುಕೊಳ್ಳಲು ಒಂದು ಆಸನ ಆಗಲೇ ಹಾಕಿದ್ದ. ಸ್ತ್ರೀಭಕ್ತಳು ಹೇಗೊ ಮುಂದೆ ಹೋಗಿ ಹಲ್ವದ ಬಟ್ಟಲನ್ನು ಆಸನದ ಮುಂದೆ ಇರಿಸಿದಳು. ಶ್ರೀರಾಮಕೃಷ್ಣರು ತಿನ್ನಲು ಕುಳಿತರು ಮತ್ತು ಭಾವಾವೇಶದಲ್ಲಿ ಹಲ್ವವನ್ನೆಲ್ಲ ತಿಂದು ಮುಗಿಸಿದರು ! ಶ್ರೀರಾಮಕೃಷ್ಣರಿಗೆ ಆಗ ಸ್ತ್ರೀಭಕ್ತಳ ಮನಸ್ಸಿನಲ್ಲಿದ್ದ ಆಲೋಚನೆ ಅರ್ಥವಾಯಿತೆ ? ಯಾರಿಗೆ ಗೊತ್ತು ! ಆದರೆ ಅವರು ತಿನ್ನುತ್ತ ತಿನ್ನುತ್ತ ಆ ಸ್ತ್ರೀಭಕ್ತಳನ್ನು ಉದ್ದೇಶಿಸಿ ಕೇಳಿದರು : "ಹೇಳು, ಯಾರು ತಿನ್ನುತ್ತಿದ್ದಾರೆ ? ನಾನು ತಿನ್ನುತ್ತಿದ್ದೇನೆಯೋ ಅಥವಾ ಬೇರೆ ಯಾರಾದರೂ ತಿನ್ನುತ್ತಿರುವರೆ ?"

ಸ್ತ್ರೀಭಕ್ತೆ : "ನನಗನಿಸುತ್ತೆ, ನಿಮ್ಮೊಳಗೆ ಬೇರೆ ಯಾರೊ ಇದ್ದಾರೆ, ಅವರು ತಿನ್ನುತ್ತಿರುವರು ಎಂದು."

"ನೀನು ಸರಿಯಾಗಿ ಹೇಳಿದೆ" ಎಂದು ಶ್ರೀರಾಮಕೃಷ್ಣರು ಹೇಳಿ ನಕ್ಕರು.

16. ಈ ರೀತಿ ಅನೇಕ ಘಟನೆಗಳನ್ನು ಉಲ್ಲೇಖಿಸಬಹುದು. ಪ್ರಬಲ ಮಾನಸಿಕ ಭಾವ ತರಂಗದ ಪ್ರಭಾವದಿಂದ ಕೆಲವೊಮ್ಮೆ ಶ್ರೀರಾಮಕೃಷ್ಣರ ದೇಹ ಎಷ್ಟೊಂದು ಪರಿವರ್ತನೆಗೊಳ್ಳುತ್ತಿತ್ತೆಂದರೆ ಆಗ ಅವರು ಬೇರೆಯೇ ವ್ಯಕ್ತಿಯಂತೆ ಕಾಣುತ್ತಿದ್ದರು.

ಅವರ ಚಲನ ವಲನೆ, ಆಹಾರವಿಹಾರಗಳೆಲ್ಲವೂ ಸಂಪೂರ್ಣ ಬೇರೆಯಾಗಿಬಿಡುತ್ತಿದ್ದುವು. ಈ ರೀತಿಯ ವಿಚಿತ್ರವರ್ತನೆಯಿಂದ ಭಾವದ ಉಪಶಮನವಾದಮೇಲೆ ಶರೀರದಲ್ಲಿ ಯಾವ ರೀತಿಯ ದುಷ್ಪರಿಣಾಮವೂ ಕಂಡುಬರುತ್ತಿರಲಿಲ್ಲ. ನಮ್ಮೊಳಗಿರುವ ಮನಸ್ಸೇ ಸ್ಥೂಲ ಶರೀರವನ್ನು ನಿರ್ಮಿಸುತ್ತಿದೆ, ರೂಪಾಂತರಗೊಳಿಸುತ್ತಿದೆ ಎಂಬ ವಿಷಯ ನಮಗೆ ತಿಳಿದಿದ್ದರೂ ತಿಳಿಯದವರಂತೆ ಇದ್ದೇವೆ, ಕೇಳಿಯೂ ನಮಗೆ ಅದರಲ್ಲಿ ಪೂರ್ಣ ವಿಶ್ವಾಸ ವಿಲ್ಲ. ಇದು ವಾಸ್ತವಿಕವಾಗಿಯೂ ನಿಜ ಎಂಬುದಕ್ಕೆ ಪ್ರಮಾಣವನ್ನು ಶ್ರೀರಾಮಕೃಷ್ಣರ ಈ ಕೆಲವು ಸಾಮಾನ್ಯ ಘಟನೆಗಳಿಂದ ಪಡೆಯಬಹುದು. ಆದರೆ ಈ ವಿಷಯವನ್ನು ಇಲ್ಲಿಗೇ ನಿಲ್ಲಿಸೋಣ, ಪ್ರಸ್ತುತ ವಿಷಯಕ್ಕೆ ಬರೋಣ.

17. ಕೆಲವರು ಹೇಳುತ್ತಾರೆ, ಭೈರವಿಯ ಮುಖಾಂತರವೇ ಮಥುರನು ಮೊದಲು ವೈಷ್ಣವಚರಣನ ವಿಷಯವನ್ನು ಕೇಳಿದುದು ಎಂದು. ಅನಂತರ ಅವನು ವೈಷ್ಣವಚರಣ ನನ್ನು ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಸ್ಥಿತಿಯನ್ನು ಪರೀಕ್ಷಿಸಲು ದಕ್ಷಿಣೇಶ್ವರಕ್ಕೆ ಬರಲು ಆಹ್ವಾನಿಸಿದನು. ಅದು ಹೇಗೇ ಇರಲಿ, ಅವನು ಕೆಲವು ದಿನಗಳಲ್ಲಿಯೇ ದಕ್ಷಿಣೇಶ್ವರಕ್ಕೆ ಬಂದನು. ಅಂದು ಒಂದು ಸಣ್ಣ ಪಂಡಿತರ ಸಭೆಯೂ ನಡೆದಿರಬಹುದೆಂದು ನಾವು ಊಹಿ ಸುತ್ತೇವೆ. ವೈಷ್ಣವಚರಣನ ಜೊತೆ ಕೆಲವು ಸಾಧಕರು ಪಂಡಿತರು ಬಂದೇ ಇರುತ್ತಾರೆ, ಭೈರವಿ ಬ್ರಾಹ್ಮಣಿಯಂತೂ ಅಲ್ಲಿಯೇ ಇದ್ದಳು ಮತ್ತು ಮಥುರಬಾಬುವಿನ ಕಡೆಯ ವರೂ ಇದ್ದರು. ಶ್ರೀರಾಮಕೃಷ್ಣರಿಗಾಗಿಯೇ ಇವರೆಲ್ಲ ಸೇರಿದ್ದರು. ಆದ್ದರಿಂದ ಒಂದು ಸಭೆಯೇ ನೆರೆದಿತ್ತು ಎಂದು ಹೇಳುತ್ತೇವೆ.

18. ಈಗ ಶ್ರೀರಾಮಕೃಷ್ಣರ ಸ್ಥಿತಿಯ ಬಗ್ಗೆ ಚರ್ಚೆ ಪ್ರಾರಂಭವಾಯಿತು. ಬ್ರಾಹ್ಮಣಿಯು ಶ್ರೀರಾಮಕೃಷ್ಣರ ಸ್ಥಿತಿಯ ಸಂಬಂಧವಾಗಿ ಜನರಿಂದ ಏನೇನು ಕೇಳಿ ದ್ದಳೋ ಮತ್ತು ತಾನು ಏನೇನು ಸ್ವತಃ ಕಂಡಿದ್ದಳೋ ಅದನ್ನೆಲ್ಲ ವಿವರಿಸಿದಳು. ಭಕ್ತಿ ಮಾರ್ಗದ ಹಿಂದಿನ ಪ್ರಸಿದ್ಧ ಆಚಾರ್ಯರುಗಳ ಜೀವನದಲ್ಲಿ ಎಂಥ ಅನುಭವಗಳು ಕಂಡು ಬರುತ್ತವೆ ಎಂಬುದನ್ನೂ ಉಲ್ಲೇಖಿಸಿದಳು. ಇವುಗಳಿಗೂ ಶ್ರೀರಾಮಕೃಷ್ಣರ ಅನುಭವ ಗಳಿಗೂ ಇರುವ ಸಾಮ್ಯತೆಯನ್ನು ತೋರಿಸಿದಳು. ಶಾಸ್ತ್ರದ ಹೇಳಿಕೆಗಳಿಗೂ ಮತ್ತು ಶ್ರೀರಾಮಕೃಷ್ಣರ ಈಗಿನ ಸ್ಥಿತಿಗೂ ಇರುವ ಹೊಂದಾಣಿಕೆಯನ್ನು ವಿಶದಪಡಿಸಿದಳು. ಹೀಗೆ ಅವಳು ತನ್ನ ಮತವನ್ನು ಮಂಡಿಸಿ ವೈಷ್ಣವಚರಣನನ್ನು ಉದ್ದೇಶಿಸಿ ಹೇಳಿದಳು : "ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯಭೇದವಿದ್ದರೆ ಅದನ್ನು ಈಗ ಯುಕ್ತಿಯ ಮೂಲಕ ಸಮರ್ಥಿಸಿ." ತಾಯಿಯು ತನ್ನ ಶಿಶುವನ್ನು ರಕ್ಷಿಸಲು ಬಲಪ್ರದರ್ಶಿಸುವಂತೆ ಇಂದು ಬ್ರಾಹ್ಮಣಿಯು ಯಾವುದೊ ದೈವಬಲದಿಂದ ಶ್ರೀರಾಮಕೃಷ್ಣರನ್ನು ರಕ್ಷಿಸಲು ಮುಂದಾ ಗಿದ್ದಳು. ಆ ಸಂದರ್ಭದಲ್ಲಿ ಶ್ರೀರಾಮಕೃಷ್ಣರು ಏನು ಮಾಡುತ್ತಿದ್ದಿರಬಹುದು ? ತಮ್ಮನ್ನೇ ಕೇಂದ್ರವಾಗಿಟ್ಟುಕೊಂಡು ಅಷ್ಟೊಂದು ವಾದವಿವಾದ ನಡೆಯುತ್ತಿರುವಾಗ ಅವರು ತಮ್ಮ ಪಾಡಿಗೆ ತಾವು ತಮ್ಮದೇ ಆನಂದದ ಲೋಕದಲ್ಲಿ ವಿಹರಿಸುತ್ತಿದ್ದಿರಬೇಕು. ಕೆಲವೊಮ್ಮೆ ಪಕ್ಕದ ಚೀಲದಲ್ಲಿದ್ದ ಸೋಂಪುಬೀಜವನ್ನು ಬಾಯಿಗೆ ಹಾಕಿಕೊಳ್ಳುತ್ತ ನಿರಾ

ಸಕ್ತಿಯಿಂದ ಸಂಭಾಷಣೆಯನ್ನು ಕೇಳುತ್ತಿದ್ದಿರಬೇಕು—ಅದು ಬೇರೆ ಯಾರ ಬಗ್ಗೆಯೊ ನಡೆಯುತ್ತಿರುವಂತೆ. ಕೆಲವೊಮ್ಮೆ ತಮ್ಮ ಸ್ಥಿತಿಯ ಬಗ್ಗೆ "ನೋಡು, ಈ ರೀತಿಯಾಗುತ್ತದೆ" ಎಂದು ವೈಷ್ಣವಚರಣನನ್ನು ಸ್ಪರ್ಶಿಸಿ ಹೇಳುತ್ತಿದ್ದರು.

19. ತನ್ನ ಸಾಧನೆಯ ಫಲವಾಗಿ ವೈಷ್ಣವಚರಣನು ಶ್ರೀರಾಮಕೃಷ್ಣರನ್ನು ನೋಡಿದ ಕೂಡಲೆ ಅವರು ಮಹಾಪುರುಷರೆಂದು ಗುರುತಿಸಿದನು ಎಂದು ಕೆಲವರು ಹೇಳುತ್ತಾರೆ. ಅದು ಹೌದೇ ಅಲ್ಲವೇ ಎನ್ನುವುದು ಮುಖ್ಯವಲ್ಲ. ಅಂತು ಶ್ರೀರಾಮಕೃಷ್ಣರ ಬಗ್ಗೆ ಎಲ್ಲ ವಿಷಯವನ್ನು ತಿಳಿದು ಅವನು ಭೈರವಿಯ ಅಭಿಪ್ರಾಯವನ್ನು ಸಂಪೂರ್ಣ ಅನುಮೋದಿಸಿದನು. ಇದನ್ನು ನಾವು ಶ್ರೀರಾಮಕೃಷ್ಣರ ಬಾಯಿಂದಲೇ ಕೇಳಿರುವೆವು. ಭಕ್ತಿಶಾಸ್ತ್ರದ ಪ್ರಕಾರ ಮಹಾಭಾವದ ಹತ್ತೊಂಬತ್ತು ಲಕ್ಷಣಗಳಿವೆ ಮತ್ತು ಈ ಎಲ್ಲ ಲಕ್ಷಣಗಳೂ ಕೇವಲ ಶ್ರೀರಾಧೆ ಮತ್ತು ಶ್ರೀಚೈತನ್ಯ–ಇವರಲ್ಲಿ ಮಾತ್ರ ಪ್ರಕಾಶಗೊಂಡಿದ್ದವು. ಆದರೆ ಶ್ರೀರಾಮಕೃಷ್ಣರಲ್ಲಿ ಮಹಾಭಾವದ ಎಲ್ಲ ಲಕ್ಷಣಗಳೂ ಇವೆ–ಎಂದು ವೈಷ್ಣವಚರಣ ಅಭಿಪ್ರಾಯಪಟ್ಟನು. ಮಹಾ ಭಾಗ್ಯವಶದಿಂದ ಯಾರದಾದರೂ ಜೀವನದಲ್ಲಿ ಮಹಾಭಾವವು ಸ್ವಲ್ಪ ಪ್ರಕಾಶಗೊಂಡರೆ ಆ ಹತ್ತೊಂಬತ್ತು ಭಾವ ಲಕ್ಷಣಗಳಲ್ಲಿ ಹೆಚ್ಚೆಂದರೆ ಎರಡು ಮೂರು ಭಾವಗಳು ಕಾಣಿಸಿಕೊಳ್ಳಬಹುದು. ಸಾಮಾನ್ಯ ಜೀವಿಯ ಶರೀರವು ಹತ್ತೊಂಬತ್ತು ಭಾವಗಳ ತೀವ್ರತೆಯನ್ನು ಎಂದಿಗೂ ಸಹಿಸಿಕೊಳ್ಳಲಾರದು ಎಂದು ಶಾಸ್ತ್ರ ಹೇಳುತ್ತದೆ. ವೈಷ್ಣವಚರಣನ ಈ ಅಭಿಪ್ರಾಯವನ್ನು ಕೇಳಿ ಮಥುರ ಮುಂತಾದವರು ಮೂಕವಿಸ್ಮಿತರಾದರು. ಶ್ರೀರಾಮಕೃಷ್ಣರೂ ಬಾಲಕನಂತೆ ವಿಸ್ಮಯ ಆನಂದಗಳೆರಡನ್ನೂ ವ್ಯಕ್ತಪಡಿಸುತ್ತ ಮಥುರನಿಗೆ ಹೇಳಿದರು : "ನೋಡು, ಈಗ ಏನು ಹೇಳುತ್ತಿ ? ಏನೇ ಆಗಲಿ, ಇದು ಕಾಯಿಲೆಯಲ್ಲ ಎಂದಾಯಿತಲ್ಲ, ಅದರಿಂದಲೇ ಎಷ್ಟೊ ಸಂತೋಷ."

20. ಶ್ರೀರಾಮಕೃಷ್ಣರ ಬಗ್ಗೆ ವೈಷ್ಣವಚರಣನ ಈ ಮೇಲಿನ ಅಭಿಪ್ರಾಯ ಕೇವಲ ಮಾತಾಗಿರಲಿಲ್ಲ–ಅದು ತುಂಬು ವಿಶ್ವಾಸದಿಂದ ಕೂಡಿತ್ತು. ಏಕೆಂದರೆ ಮುಂದೆ ಶ್ರೀರಾಮಕೃಷ್ಣರ ಪ್ರತಿ ಅವನ ಶ್ರದ್ಧೆ ಮತ್ತು ಪ್ರೀತಿ ಅಧಿಕವಾಗುತ್ತ ಹೋಯಿತು. ಅಂದಿನಿಂದ ಅವನು ಶ್ರೀರಾಮಕೃಷ್ಣರ ದಿವ್ಯಸಂಗದ ಸುಖವನ್ನು ಪಡೆಯಲು ಆಗಾಗ ದಕ್ಷಿಣೇಶ್ವರಕ್ಕೆ ಬರತೊಡಗಿದನು. ತನ್ನ ರಹಸ್ಯ ಸಾಧನೆಗಳ ಬಗ್ಗೆ ಶ್ರೀರಾಮಕೃಷ್ಣರಿಗೆ ತಿಳಿಸಿ ಅವರ ಸಲಹೆಗಳನ್ನು ಕೇಳುತ್ತಿದ್ದನು. ಕೆಲವೊಮ್ಮೆ ತನ್ನ ಸಂಗಡಿಗರಾದ ಸಾಧಕರೂ ಪ್ರಯೋಜನವನ್ನು ಪಡೆಯಲೆಂದು ಶ್ರೀರಾಮಕೃಷ್ಣರನ್ನು ಅವರೆಡೆಗೆ ಕರೆದುಕೊಂಡು ಹೋಗುತ್ತಿದ್ದನು. ಪವಿತ್ರತೆಯೇ ಮೂರ್ತಿವೆತ್ತಂತಿದ್ದ ಶ್ರೀರಾಮಕೃಷ್ಣರು ಅವರುಗಳ ಸಹವಾಸದಿಂದ ಮತ್ತು ಅವರ ಗುಪ್ತ ಸಾಧನೆಗಳ ಪರಿಚಯವನ್ನು ಪಡೆದು ತಮ್ಮದೇ ಆದ ಒಂದು ಸಿದ್ಧಾಂತಕ್ಕೆ ಬಂದಿದ್ದರು : ಸಾಮಾನ್ಯ ದೃಷ್ಟಿಗೆ ಈ ರೀತಿಯ ಗುಪ್ತ ಸಾಧನೆಗಳು ದೂಷಣೀಯವಾಗಿ ಕಂಡರೂ 'ಭಗವಂತನನ್ನು ಪಡೆಯುವುದಕ್ಕಾಗಿಯೇ ಮಾಡುತ್ತಿದ್ದೇನೆ' ಎಂಬ ನೈಜ ವಿಶ್ವಾಸವಿದ್ದರೆ ಈ ಸಾಧನೆಗಳಲ್ಲಿ ತೊಡಗುವವರೂ

ಕ್ರಮೇಣ ವೈರಾಗ್ಯ ಮನೋಭಾವವನ್ನು ಪಡೆದು ಸಂಯಮದ ಜೀವನವನ್ನು ನಡೆಸುತ್ತ ಭಗವದ್ಭಕ್ತಿಯನ್ನು ಪಡೆಯುತ್ತಾರೆ. ಆದರೆ ಮೊದಮೊದಲು ಅವರು ಈ ಎಲ್ಲ ಸಾಧನೆ ಗಳ ಬಗ್ಗೆ ಕೇಳಿ ಮತ್ತು ಅಲ್ಪಸ್ವಲ್ಪ ನೋಡಿ 'ಇವರೆಲ್ಲ ದೊಡ್ಡ ದೊಡ್ಡ ಮಾತನಾಡು ತ್ತಾರೆ, ಆದರೆ ಇಂಥ ತುಚ್ಛ ಸಾಧನೆಗಳಲ್ಲಿ ತೊಡಗಿದ್ದಾರಲ್ಲ ?' ಎಂದು ಅವರ ಮನ ಸ್ಸಿಗೆ ಅಸಹ್ಯವುಂಟಾಗಿತ್ತು. ಈ ವಿಷಯವನ್ನು ನಾವು ಅವರ ಬಾಯಿಂದಲೇ ಕೇಳಿರು ವೆವು. ಆದರೆ ಅವರುಗಳ ನಡುವೆಯೂ ಸರಳ ವಿಶ್ವಾಸವುಳ್ಳ ಕೆಲವು ನೈಜ ಸಾಧಕರಿರು ವರು ಮತ್ತು ಅವರು ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸುತ್ತಿರುವರು ಎಂಬುದನ್ನು ಗಮನಿಸಿದ ಮೇಲೆ ಶ್ರೀರಾಮಕೃಷ್ಣರು ತಮ್ಮ ಅಭಿಪ್ರಾಯವನ್ನು ಬದಲಾಯಿಸಿದ್ದರು. ಈ ವಿಷಯವನ್ನೂ ನಾವು ಅವರ ಮೂಲಕವೇ ಕೇಳಿರುವೆವು. ಈ ರೀತಿಯ ಸಾಧನ ಮಾರ್ಗವನ್ನು ಹಿಡಿದಿರುವವರ ಬಗ್ಗೆ ಇದ್ದ ನಮ್ಮ ತಿರಸ್ಕಾರವನ್ನು ಹೋಗಲಾಡಿಸಲು ಶ್ರೀರಾಮಕೃಷ್ಣರು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸುತ್ತಿದ್ದರು : "ನೋಡಿ, ಅವರನ್ನು ದ್ವೇಷಿಸುವುದೇಕೆ ? ಅದೂ ಒಂದು ಮಾರ್ಗ ಎಂದು ತಿಳಿಯಿರಿ, ಆದರೆ ಅಶುದ್ಧ ಮಾರ್ಗ. ಮನೆಯ ಒಳಗೆ ಹೋಗಲು ಅನೇಕ ಬಾಗಿಲುಗಳಿರುತ್ತವೆ. ಮುಂಭಾ ಗದ ಬಾಗಿಲು ಇರುತ್ತದೆ, ಒದಿಯ ಬಾಗಿಲು ಇರುತ್ತದೆ ಮತ್ತು ಮನೆಯ ಹೊಲಸನ್ನು ಎತ್ತಿಕೊಂಡು ಹೋಗಲು ಜಾಡಮಾಲಿ ಬರುವ ಹಿಂಭಾಗದ ಬಾಗಿಲು ಇರುತ್ತದೆ. ಇದೂ ಹಾಗೆಯೇ ಒಂದು ಮಾರ್ಗ ಎಂದು ತಿಳಿಯಬೇಕು. ಯಾರು ಯಾವ ಬಾಗಿಲಿ ನಿಂದ ಪ್ರವೇಶಿಸಿದರೂ ಮನೆಯ ಒಳಗೆ ಹೋದಮೇಲೆ ಎಲ್ಲ ಒಂದೇ ಜಾಗವನ್ನು ಸೇರು ತ್ತಾರೆ ತಾನೆ ? ಹಾಗೆಂದು ನೀವೂ ಅವರಂತೆ ಮಾಡಬೇಕೆಂದಲ್ಲ, ಅಥವಾ ಅವರೊಡನೆ ಬೆರೆಯಬೇಕೆಂದಲ್ಲ. ಆದರೆ ಅವರನ್ನು ನಿಂದಿಸಬೇಡಿ."

21. ಅನೇಕ ಪ್ರಾಪಂಚಿಕ ಪ್ರವೃತ್ತಿಗಳಿಂದ ಕೂಡಿದ ಮಾನವನ ಮನಸ್ಸು ಅಷ್ಟು ಸುಲಭವಾಗಿ ತ್ಯಾಗಮಾರ್ಗವನ್ನು ಅನುಸರಿಸುವುದೆ? ಅಷ್ಟು ಸುಲಭವಾಗಿ ಸರಳ ಶುದ್ಧ ಭಾವದಿಂದ ಭಗವಂತನನ್ನು ಕರೆಯುವುದೆ, ಅವನ ಪಾದಪದ್ಮವನ್ನು ಆಶ್ರಯಿಸುವುದೆ ? ಶುದ್ಧತೆಯ ನಡುವೆ ಅಲ್ಪಸ್ವಲ್ಪ ಅಶುದ್ಧತೆಯನ್ನು ಇಟ್ಟುಕೊಳ್ಳಲು ಬಯಸುತ್ತದೆ, ಕಾಮ-ಕಾಂಚನವನ್ನು ತ್ಯಾಗ ಮಾಡಿದರೂ ಅದರ ವಾಸನೆ ಸ್ವಲ್ಪವಾದರೂ ಉಳಿದಿರು ತ್ತದೆ. ಶುದ್ಧ ಭಾವದಿಂದ ಶ್ರೀಜಗನ್ಮಾತೆಯನ್ನು ಪೂಜಿಸಬೇಕು ಎಂದು ಬಹಳಷ್ಟು ಹೇಳಿದ ಮೇಲೆ ಪೂಜಾಪದ್ಧತಿಯ ಪುಸ್ತಕಗಳು ಆಕೆಯನ್ನು ಸಂತೋಷಪಡಿಸಲು ಕಾಮ ಭಾವವನ್ನು ಸೂಚಿಸುವ ಹಾಡುಗಳನ್ನೂ ಹಾಡಬೇಕೆಂದು ಸೂಚಿಸುತ್ತವೆ. ಇದರಲ್ಲಿ ಆಶ್ಚರ್ಯಪಡಬೇಕಾದುದೂ, ನಿಂದಿಸತಕ್ಕದ್ದೂ ಏನೂ ಇಲ್ಲ. ಅನಂತ ವಿಶ್ವದ ನಿಯಾಮಕ ಳಾದ ಮಹಾಮಾಯೆಯ ಪ್ರಭಾವದಿಂದ ಮಾನವನ ದುರ್ಬಲ ಮನಸ್ಸು ಕಾಮ ಕಾಂಚನದ ವಜ್ರಮುಷ್ಟಿಯಲ್ಲಿ ಎಷ್ಟರಮಟ್ಟಿಗೆ ಬದ್ಧವಾಗಿದೆ ಎಂಬುದು ಇದರಿಂದ ತಿಳಿದುಬರುತ್ತದೆ ! ಅವಳ ಕೃಪೆದೋರಿ ಈ ಬಂಧನವನ್ನು ಕತ್ತರಿಸದಿದ್ದರೆ ಜೀವನು ಮುಕ್ತನಾಗುವ ಸಂಭವವೇ ಇಲ್ಲ ಎಂದು ಇದರಿಂದ ತಿಳಿಯುತ್ತದೆ. ಅವಳು ಯಾರನ್ನು

ಯಾವ ಮಾರ್ಗದ ಮೂಲಕ ಮುಕ್ತಿಗೊಯ್ಯುತ್ತಿರುವಳು ಎಂಬುದನ್ನು ಮಾನವ ಮನಸ್ಸು ಅರಿಯಲಾರದು. ನಮ್ಮ ಮನಸ್ಸನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ಅದರೊಳಗಿನ ಎಲ್ಲ ಭಾವನೆಗಳನ್ನು ಪರಿಶೀಲಿಸಿ ನೋಡಿದಾಗ ಮತ್ತು ಶ್ರೀರಾಮಕೃಷ್ಣರ ಅದ್ಭುತ ಜೀವನವನ್ನು ಅವುಗಳೊಡನೆ ತುಲನೆ ಮಾಡಿ ನೋಡಿದಾಗ ಅವರೊಬ್ಬರು ಅಪೂರ್ವ ಮಾನವಾತೀತ ದಿವ್ಯ ಪುರುಷರು ಎಂದೆನಿಸುತ್ತದೆ. ಲೀಲೆಗಾಗಿ ಅಥವಾ ನಮ್ಮ ಮೇಲಿನ ಕರುಣೆಯಿಂದ ಈ ಹೀನ ಸಂಸಾರದಲ್ಲಿ ಕೆಲಕಾಲ ಇರಲು ಬಂದಿರುವರು, ನೋಡುವುದಕ್ಕೆ ಅತ್ಯಂತ ದೀನರಾಗಿ ಕಂಡರೂ ನಿಜವಾಗಿಯೂ ರಾಜಾಧಿರಾಜರೇ ಆಗಿರುವರು ಎಂದೆನಿಸುತ್ತದೆ.

22. ವೈದಿಕಯುಗದಲ್ಲಿ, ಯಜ್ಞಯಾಗಾದಿ ಕರ್ಮಕಾಂಡದ ಯುಗದಲ್ಲಿ ಯೋಗದ ಸಹಿತ ಭೋಗವೂ ಬೆರೆತಿತ್ತು. ದೇವತೆಗಳ ಉಪಾಸನೆಯ ಮೂಲಕ ಒಂದು ನಿಯಂತ್ರಿತ ರೀತಿಯಲ್ಲಿ ಪ್ರಾಪಂಚಿಕ ಸುಖವನ್ನು ಅನುಭವಿಸುವುದು ಜೀವನದ ಉದ್ದೇಶವಾಗಿತ್ತು. ಈ ಕರ್ಮಾನುಷ್ಠಾನಗಳ ಮೂಲಕ ಮನಸ್ಸು ಬಹುಮಟ್ಟಿಗೆ ವಾಸನೆಗಳಿಂದ ಮುಕ್ತವಾದ ಮೇಲೆ ಉಪನಿಷತ್ತಿನ ಮಾರ್ಗವನ್ನು ಅನುಸರಿಸಿ ಮಾನವನು ಶುದ್ಧ ಭಕ್ತಿಯಿಂದ ಭಗವಂತನನ್ನು ಉಪಾಸಿಸುತ್ತ ಕೃತಾರ್ಥತೆಯನ್ನು ಪಡೆಯುತ್ತಾನೆ. ಆದರೆ ಬೌದ್ಧ ಯುಗದಲ್ಲಿ ಈ ಕ್ರಮ ಬದಲಾಯಿತು. ಅರಣ್ಯವಾಸಿಗಳಾಗಿದ್ದ ವಾಸನಾಶೂನ್ಯರಾದ ಸಾಧಕರಿಗೆ ಯೋಗ್ಯವಾದ ಶುದ್ಧ ಉಪಾಸನಾ ಮಾರ್ಗವನ್ನು ಭೋಗವಾಸನೆಗಳಿಂದ ತುಂಬಿತುಳುಕುತ್ತಿದ್ದ ಮಾನವರೆಲ್ಲರಿಗೂ ಯಾವ ಭೇದಭಾವವೂ ಇಲ್ಲದೆ ಬೋಧಿಸ ತೊಡಗಿದರು. ಆಗಿನ ಕಾಲದ ರಾಜ್ಯಶಾಸನವೂ ಈ ರೀತಿಯ ಪ್ರಚಾರಕ್ಕೆ ಸಹಾಯಕವಾಯಿತು. ವೈದಿಕ ಕರ್ಮಗಳು ಪ್ರವೃತ್ತಿ ಮಾರ್ಗವನ್ನು ಅನುಸರಿಸುವವರಿಗೆ ನಿಯಮಿತವಾಗಿ ಪ್ರಾಪಂಚಿಕ ಸುಖವನ್ನು ನೀಡಿ ಕ್ರಮೇಣ ಅವರು ತ್ಯಾಗಮಾರ್ಗವನ್ನು ಅನುಸರಿಸುವಂತೆ ಮಾಡುತ್ತಿದ್ದುವು. ಈಗ ಬೌದ್ಧ ಸಂನ್ಯಾಸಿಗಳ ಪ್ರಚಾರದಿಂದಾಗಿ ಇವು ತಮ್ಮ ಮೌಲ್ಯವನ್ನು ಕಳೆದುಕೊಂಡವು. ಬಾಹ್ಯವಾಗಿ ಎಲ್ಲ ಸುಖಗಳನ್ನು ತ್ಯಾಗ ಮಾಡಿದರೂ ಒಳಗೆ ಅದರ ವಾಸನೆ ತುಡಿಯುತ್ತಿತ್ತು. ಇದರ ಪರಿಣಾಮವಾಗಿ ರಹಸ್ಯ ತಾಂತ್ರಿಕ ಸಾಧನೆಗಳು ಹುಟ್ಟಿಕೊಂಡುವು. ಇವುಗಳನ್ನು ನಡುರಾತ್ರಿಯಲ್ಲಿ ಬೀಭತ್ಸ ಸನ್ನಿವೇಶದಲ್ಲಿ ಶ್ಮಶಾನವೇ ಮುಂತಾದ ನಿರ್ಜನ ಸ್ಥಳಗಳಲ್ಲಿ ಆಚರಿಸುತ್ತಿದ್ದರು. ವೈದಿಕ ಯಾಗಯಜ್ಞಾದಿಗಳು ನಶಿಸಿಹೋಗುತ್ತಿರುವುದನ್ನು ಗಮನಿಸಿ ಮಹೇಶ್ವರನು ಅವನ್ನು ಸಜೀವಗೊಳಿಸಿ ಬೇರೆ ತಂತ್ರರೂಪದಲ್ಲಿ ಪ್ರಕಾಶಪಡಿಸಿದನು–ಎಂದು ತಂತ್ರಗಳು ಹೇಳುತ್ತವೆ. ಈ ಹೇಳಿಕೆಯಲ್ಲಿ ತಥ್ಯಾಂಶವಿದೆ. ಏಕೆಂದರೆ ಹಿಂದಿನ ವೈದಿಕ ಕರ್ಮಗಳಲ್ಲಿ ಭೋಗ ಯೋಗಗಳೆರಡೂ ಕೂಡಿಕೊಂಡಿದ್ದಂತೆ ತಂತ್ರದಲ್ಲಿಯೂ ಇದು ಕಂಡುಬರುತ್ತದೆ. ಆದರೆ ಒಂದು ವ್ಯತ್ಯಾಸವಿದೆ. ವೈದಿಕ ಕರ್ಮಗಳು ಉಪನಿಷತ್ತಿನ ಆತ್ಯಂತಿಕ ಆಧ್ಯಾತ್ಮಿಕ ಜ್ಞಾನದಿಂದ ಬೇರೆಯಾಗಿದ್ದರೆ ತಾಂತ್ರಿಕ ಉಪಾಸನೆಗಳು ಆ ಪರಮ ಜ್ಞಾನದೊಡನೆ ನಿಕಟ ಸಂಬಂಧವನ್ನು ಪಡೆದಿವೆ. ಉದಾಹರಣೆಗೆ, ನೀವು ಯಾವುದೇ ದೇವತೆಯನ್ನು ಪೂಜಿಸಲು ಕುಳಿ

ತಾಗ ಮೊದಲು ನಿಮ್ಮ ಕುಂಡಲಿನಿಯು ಶಿರದಲ್ಲಿರುವ ಸಹಸ್ರಾರದೆಡೆಗೆ ಏರುತ್ತಿದೆ ಮತ್ತು ನಿಮ್ಮ ಅಸ್ತಿತ್ವವು ಪರಬ್ರಹ್ಮನೊಡನೆ ಒಂದಾಗಿದೆ ಎಂದು ಭಾವಿಸಬೇಕು. ಆನಂತರ ನೀವು ಅವನಿಂದ ಬೇರೆಯಾಗಿ ಜೀವರೂಪವನ್ನು ಪಡೆದಿರುವುದಾಗಿಯೂ, ಪರಬ್ರಹ್ಮನು ನಿಮ್ಮ ಆರಾಧ್ಯ ದೇವತೆಯಾಗಿ ಆವಿರ್ಭವಿಸಿರುವುದಾಗಿಯೂ ಭಾವಿಸಬೇಕು. ದೇವತೆಯನ್ನು ನಿಮ್ಮ ಒಳಗಿಂದಲೇ ಹೊರತಂದು ಪೂಜಿಸುತ್ತೀರಿ. ಎಂಥ ಒಂದು ಉತ್ತಮ ಉಪಾಸನಾ ವಿಧಾನವಿದು ! ಇದು ಭಗವಂತನೊಡನೆ ಒಂದು ಪ್ರೇಮ ಮಿಲನ, ಇದೇ ಜೀವನದ ಪರಮ ಗುರಿ. ಆದರೆ ಈ ರೀತಿ ಉಪಾಸನೆ ಮಾಡುವ ಸಾವಿರದಲ್ಲಿ ಒಬ್ಬನು ಇದನ್ನು ಸರಿಯಾದ ರೀತಿಯಲ್ಲಿ ಮಾಡಲು ಸಮರ್ಥನಾದಾನು. ಉಳಿದವರು ತಮಗೆಷ್ಟು ಸಾಧ್ಯವೊ ಅಷ್ಟು ಮಾಡುವುದರಿಂದಲೂ ಪ್ರಯೋಜನವನ್ನು ಪಡೆಯುತ್ತಾರೆ. ಏಕೆಂದರೆ ಇದರ ನಿರಂತರ ಸಾಧನೆಯಿಂದಲೇ ಪ್ರಗತಿಯನ್ನು ಸಾಧಿಸಲು ಸಾಧ್ಯ. ಎಲ್ಲ ತಾಂತ್ರಿಕ ಸಾಧನೆಯೊಡನೆ ಅದ್ಭುತ ಜ್ಞಾನ ಬೆರೆತಿರುವುದು ಸಾಧಕನಿಗೆ ತನ್ನ ಅಂತಿಮ ಗುರಿಯನ್ನು ನೆನಪಿಸಿಕೊಡುತ್ತದೆ. ಇದೇ ವೈದಿಕ ಕರ್ಮಗಳಲ್ಲಿಲ್ಲದ ತಾಂತ್ರಿಕ ಸಾಧನೆಗಳಲ್ಲಿರುವ ಒಂದು ಹೊಸತನ. ಈ ಕಾರಣದಿಂದಾಗಿಯೇ ಈ ತಾಂತ್ರಿಕ ಸಾಧನೆಗಳು ಭಾರತೀಯ ಜನ ಸಾಧಾರಣರ ಮನಸ್ಸಿನ ಮೇಲೆ ಅಷ್ಟೊಂದು ಪ್ರಭುತ್ವವನ್ನು ಹೊಂದಿವೆ.

23. ತಂತ್ರದಲ್ಲಿ ಇನ್ನೊಂದು ನೂತನತೆ ಇದೆ. ಅದಾವುದೆಂದರೆ ಜಗತ್ಕಾರಣವಾದ ಮಹಾಮಾಯೆಯನ್ನು ಮಾತೃಭಾವದಿಂದ ಪೂಜಿಸುವುದು ಮತ್ತು ಇದರ ಜೊತೆಗೇನೇ ಎಲ್ಲ ಸ್ತ್ರೀಮೂರ್ತಿಯನ್ನೂ ಪವಿತ್ರ ದೃಷ್ಟಿಯಿಂದ ಕಾಣುವುದು. ವೇದ ಪುರಾಣಗಳನ್ನು ಹುಡುಕಿ ನೋಡಿದರೆ ಈ ಭಾವನೆ ಅವುಗಳಲ್ಲಿ ಎಲ್ಲಿಯೂ ಸಿಗುವುದಿಲ್ಲ. ಇದು ತಂತ್ರಕ್ಕೆ ವಿಶಿಷ್ಟವಾಗಿರುವಂತಹುದು. ವೇದದ ಸಂಹಿತಾ ಭಾಗದಲ್ಲಿ ಸ್ತ್ರೀ–ಶರೀರದ ಉಪಾಸನೆಯು ಬೀಜ ರೂಪದಲ್ಲಿ ಕಂಡು ಬರುತ್ತದೆ ಅಷ್ಟೆ. ಉದಾಹರಣೆಗೆ, ವಿವಾಹ ಕಾಲದಲ್ಲಿ ವಧುವಿನ ಇಂದ್ರಿಯವನ್ನು 'ಪ್ರಜಾಪತೇರ್ದ್ವಿತೀಯಂ ಮುಖಂ' (ಸೃಷ್ಟಿಕರ್ತನ ಸೃಷ್ಟಿಕಾರ್ಯದ ಎರಡನೆಯ ಮುಖ) ಎಂದು ಭಾವಿಸಿ ಅದರಿಂದ ಸುಂದರ ತೇಜಸ್ವಿಯಾದ ಶಿಶುವು ಜನಿಸಲಿ ಎಂದು 'ಗರ್ಭಂ ಧೇಹಿ ಸಿನೀಬಾಲಿ' ಇತ್ಯಾದಿ ಮಂತ್ರದಿಂದ ಅದರಲ್ಲಿ ಎಲ್ಲ ದೇವತೆಗಳನ್ನು ಉಪಾಸಿಸಬೇಕು ಮತ್ತು ಆ ಇಂದ್ರಿಯವನ್ನು ಪವಿತ್ರ ಭಾವದಿಂದ ನೋಡಬೇಕು ಎಂದು ಹೇಳಿದೆ. ಇದರಿಂದ ವೈದಿಕ ಕಾಲದಿಂದಲೇ ಭಾರತದಲ್ಲಿ ಯೋನಿ ಲಿಂಗದ ಉಪಾಸನೆ ಪ್ರಚಲಿತವಿತ್ತು ಎಂದು ಯಾರೂ ಭಾವಿಸಬಾರದು. ಬ್ಯಾಬಿಲೋನಿಯಾದ ಸುಮೇರಿಯನರಲ್ಲಿ, ಅವರದೇ ಶಾಖೆಯಾದ ದ್ರಾವಿಡ ಜನಾಂಗದಲ್ಲಿ ಈ ರೀತಿಯ ಉಪಾಸನೆ ಮೊದಲು ಸ್ಥೂಲ ರೀತಿಯಲ್ಲಿ ಪ್ರಚಲಿತವಿತ್ತು ಎಂದು ಇತಿಹಾಸ ಸಾಬೀತುಪಡಿಸಿರುವುದು. ತಂತ್ರವು ತನ್ನ ಸಾಧನಾ ವಿಧಾನಗಳಲ್ಲಿ ವೈದಿಕ ಕರ್ಮಕಾಂಡ ಮತ್ತು ಜ್ಞಾನಕಾಂಡಗಳ ಭಾವವನ್ನು ಒಂದುಗೂಡಿಸಿತು. ಅದರ ಜೊತೆಗೇ ಕೆಲವು ಬಗೆಯ ಸಾಧಕರ ಅನುಕೂಲಕ್ಕಾಗಿ ಸ್ತ್ರೀ ಶರೀರದ ಉಪಾಸನೆಗಳನ್ನೂ

ತಂತ್ರವು ಹೇಳಿರುವುದು. ಈ ಉಪಾಸನೆಯ ಜೊತೆಗೆ ವೈದಿಕ ಉಪಾಸನೆಯ ಉನ್ನತ ಆಧ್ಯಾತ್ಮಿಕ ಆದರ್ಶವನ್ನೂ ಸೇರಿಸಿರುವುದು. ಹೀಗೆ ತಂತ್ರವು ಈ ಉಪಾಸನೆಯನ್ನೂ ತನ್ನ ಒಂದು ಅಂಗವನ್ನಾಗಿ ಮಾಡಿಕೊಂಡಿತು. ತಂತ್ರದ ವೀರಾಚಾರವು ಈ ರೀತಿ ಉದ್ಭವಿಸಿರಬೇಕು. ಪ್ರಾಪಂಚಿಕ ಮನೋಭಾವದ ವ್ಯಕ್ತಿಗಳು ಸ್ಥೂಲ ಭೋಗವನ್ನು ಸಂಪೂರ್ಣ ತ್ಯಜಿಸಲಾರರು ; ಆ ಭೋಗ ವಸ್ತುಗಳನ್ನೂ ಆಧ್ಯಾತ್ಮಿಕ ದೃಷ್ಟಿಯಿಂದ ಅವರು ನೋಡುವುದಾದರೆ ಅವರು ಅವನ್ನು ಎಷ್ಟೇ ಅನುಭವಿಸಿದರೂ ಆ ಆಧ್ಯಾತ್ಮಿಕ ಶ್ರದ್ಧೆಯ ಬಲದಿಂದ ಕ್ರಮೇಣ ಅವರಲ್ಲಿ ಆಧ್ಯಾತ್ಮಿಕ ಪ್ರಜ್ಞೆ ಜಾಗ್ರತವಾಗುವುದು ಖಂಡಿತ. ಇದನ್ನು ತಂತ್ರಕಾರರಾದ ಕುಲಾಚಾರ್ಯರು ಅರಿತುಕೊಂಡಿರಬೇಕು. ಆದ್ದ ರಿಂದಲೇ ನಾರಿಯ ಶರೀರವು ಪವಿತ್ರ ತೀರ್ಥಸ್ಥಾನ, ನಾರಿಯರನ್ನು ಮನುಷ್ಯರೆಂದು ಪರಿಗಣಿಸದೆ ದೇವಿಯರೆಂದು ತಿಳಿಯಬೇಕು ಮತ್ತು ಜಗನ್ಮಾತೆಯ ವಿಶೇಷ ಶಕ್ತಿಯ ಪ್ರಕಾಶವೆಂದು ತಿಳಿದು ಸ್ತ್ರೀ ಮೂರ್ತಿಯಲ್ಲಿ ಭಕ್ತಿ ಶ್ರದ್ಧೆಯನ್ನು ಇರಿಸಬೇಕು ; ನಾರಿ ಯರ ಪಾದೋದಕವನ್ನು ಭಕ್ತಿಯಿಂದ ಕುಡಿಯಬೇಕು ಮತ್ತು ಅವರನ್ನು ಎಂದೂ ನಿಂದಿಸಬಾರದು ಹಾಗೂ ಹೊಡೆಯಬಾರದು—ಎಂದು ಕುಲಾಚಾರ್ಯರು ಹೇಳುತ್ತಾರೆ. ಇದಕ್ಕೆ ಕೆಲವು ಶ್ಲೋಕಗಳನ್ನು ಇಲ್ಲಿ ಉದಾಹರಿಸಬಹುದು :

ಯಸ್ಯಾಃ ಅಂಗೇ ಮಹೇಶಾನಿ ಸರ್ವತೀರ್ಥಾನಿ ಸಂತಿ ವೈ ।

—ಪುರಶ್ಚರಣೋಲ್ಲಾಸತಂತ್ರ–14.

"ಅವಳ ದೇಹದಲ್ಲಿ ಎಲ್ಲ ತೀರ್ಥಗಳೂ ಇವೆ."

ಶಕ್ತೌ ಮನುಷ್ಯಬುದ್ಧಿಸ್ತು ಯಃ ಕರೋತಿ ವರಾನನೇ ।
ನ ತಸ್ಯ ಮಂತ್ರಸಿದ್ಧಿಃ ಸ್ಯಾದ್ವಿಪರೀತಂ ಫಲಂ ಲಭೇತ್ ॥

—ಉತ್ತರತಂತ್ರ–3

"ಸ್ತ್ರೀಯನ್ನು ಮನುಷ್ಯಳೆಂದು ಭಾವಿಸುವವನು ಎಷ್ಟೇ ಮಂತ್ರಜಪ ಮಾಡಿ ದರೂ ಅದರ ಸಿದ್ಧಿ ದೊರೆಯುವುದಿಲ್ಲ, ವಿರುದ್ಧ ಫಲವೇ ಲಭಿಸುವುದು."

ಶಕ್ತ್ಯಾಃ ಪಾದೋದಕಂ ಯಸ್ತು ಪಿಬೇದ್ಭಕ್ತಿಪರಾಯಣಃ ।
ಉಚ್ಛಿಷ್ಟಂ ವಾಪಿ ಭುಂಜೀತ ತಸ್ಯ ಸಿದ್ಧಿರಖಂಡಿತಾ ॥

—ನಿಗಮಕಲ್ಪದ್ರುಮ.

"ಸ್ತ್ರೀಯಳ ಪಾದೋದಕವನ್ನು ಭಕ್ತಿಯಿಂದ ಕುಡಿಯುವವನು ಅಥವಾ ಅವಳ ಉಚ್ಛಿಷ್ಟವನ್ನು ಉಣ್ಣುವವನು ನಿರಂತರ ಸಿದ್ಧಿಯನ್ನು ಪಡೆಯುತ್ತಾನೆ."

ಸ್ತ್ರಿಯೋ ದೇವಾಃ ಸ್ತ್ರಿಯಃ ಪುಣ್ಯಾಃ ಸ್ತ್ರಿಯ ಏವ ವಿಭೂಷಣಮ್ ।
ಸ್ತ್ರೀದ್ವೇಷೋ ನೈವ ಕರ್ತವ್ಯಸ್ತಾಸು ನಿಂದಾಂ ಪ್ರಹಾರಕಮ್ ॥—

—ಮುಂಡಮಾಲಾತಂತ್ರ, 5

"ಸ್ತ್ರೀಯರೇ ದೇವತೆಗಳು, ಅವರು ಪುಣ್ಯವಂತರು, ಅವರೇ ಸಮಾಜಕ್ಕೆ

ಭೂಷಣರು. ಅವರನ್ನು ದ್ವೇಷಿಸುವುದಾಗಲಿ, ನಿಂದಿಸುವುದಾಗಲಿ, ಹೊಡೆಯುವುದಾಗಲಿ ಮಾಡಲೇ ಬಾರದು."

ಆದರೆ ಎಷ್ಟು ಹೇಳಿದರೆ ಏನಂತೆ ? ಕಾಲಕ್ರಮೇಣ ತಾಂತ್ರಿಕ ಸಾಧಕರು ಉನ್ನತ ಆಧ್ಯಾತ್ಮಿಕ ಆದರ್ಶವನ್ನು ಮರೆತು ಸಾಮಾನ್ಯ ಮಾನಸಿಕ ಶಕ್ತಿ ಅಥವಾ ಪವಾಡಗಳನ್ನು ಪಡೆಯುವುದರಲ್ಲೇ ಆಸಕ್ತರಾದರು. ಈ ಸಮಯದಲ್ಲಿಯೇ ಅನೇಕ ವಿಕೃತ ಸಾಧನೆಗಳು ಭೂತಪ್ರೇತಾದಿ ಉಪಾಸನೆಗಳು ತಂತ್ರದೊಡನೆ ಸೇರಿಹೋದವು. ಪ್ರತಿ ತಂತ್ರದೊಳಗೂ ಉತ್ತಮ ಅಧಮ, ಉಚ್ಚ ನೀಚ–ಎರಡೂ ಪ್ರಕಾರದ ಸಾಧನಗಳನ್ನು ಈಗ ಕಾಣಬಹುದಾಗಿದೆ. ಉಚ್ಚ ರೀತಿಯ ಈಶ್ವರೋಪಾಸನೆಯೊಡನೆಯೇ ಹೀನಮಟ್ಟದ ಸಾಧನೆಗಳು ಬೆರೆತಿರುವುದನ್ನು ಕಾಣಬಹುದು. ಜನರು ತಮ್ಮ ಸ್ವಭಾವಕ್ಕನುಗುಣವಾಗಿ ಅದರಲ್ಲಿರುವುದನ್ನು ಆರಿಸಿಕೊಳ್ಳುತ್ತಾರೆ.

24. ಚೈತನ್ಯ ಮಹಾಪ್ರಭು ಬಂದಮೇಲೆ ತಂತ್ರದಲ್ಲಿ ಇನ್ನೊಂದು ಬದಲಾವಣೆ ಉಂಟಾಯಿತು. ಚೈತನ್ಯ ಮತ್ತು ಅವನ ಅನುಯಾಯಿಗಳು ದ್ವೈತತತ್ತ್ವ ಪ್ರಚಾರದಿಂದಲೇ ಜನರಿಗೆ ಮಂಗಳವುಂಟಾಗುವುದೆಂದು ಭಾವಿಸಿದರು. ಆದ್ದರಿಂದ ಅವರು ತಂತ್ರದಲ್ಲಿದ್ದ ಅದ್ವೈತ ಭಾವವನ್ನು ಬಿಟ್ಟುಬಿಟ್ಟು ತಂತ್ರದ ಮಂತ್ರಗಳು ಮತ್ತು ಬಾಹ್ಯ ಉಪಾಸನೆಗಳು–ಇವುಗಳನ್ನು ಮಾತ್ರ ಜನರಲ್ಲಿ ಪ್ರಚಾರಮಾಡತೊಡಗಿದರು. ಅವರು ಒಂದು ಹೊಸ ಪದ್ಧತಿಯನ್ನು ಅವುಗಳೊಂದಿಗೆ ಸೇರಿಸಿದರು. ತನ್ನಂತೆಯೇ ದೇವತೆಯ ಸೇವೆಯನ್ನು ಮಾಡಬೇಕೆಂದು ಅವರು ಪ್ರಚಾರ ಮಾಡಿದರು. ತಾಂತ್ರಿಕ ದೇವತೆಗಳು ನಿವೇದಿತ ಆಹಾರ ಪದಾರ್ಥಗಳನ್ನು ದೃಷ್ಟಿಯಿಂದ ಮಾತ್ರ ಭೋಗಿಸುತ್ತಾರೆ ಮತ್ತು ಅವುಗಳನ್ನು ದೇವರ ಪ್ರಸಾದವೆಂದು ಸ್ವೀಕರಿಸಿದಾಗ ಸಾಧಕನ ಕಾಮಕ್ರೋಧಾದಿ ಪಶು ಪ್ರವೃತ್ತಿಗಳು ಕಡಮೆಯಾಗಿ ಆಧ್ಯಾತ್ಮಿಕ ಭಾವವು ವೃದ್ಧಿಯಾಗುತ್ತದೆಯೆಂಬುದು ಸಾಮಾನ್ಯನಂಬಿಕೆ. ವೈಷ್ಣವರು ಪ್ರಾರಂಭಿಸಿದ ಹೊಸ ಪದ್ಧತಿಯಿಂದಾಗಿ, ದೇವತೆಗಳು ನೈವೇದ್ಯದ ಸೂಕ್ಷ್ಮಭಾಗವನ್ನು ಸ್ವೀಕರಿಸುತ್ತಾರೆ ಮತ್ತು ಕೆಲವೊಮ್ಮೆ ಭಕ್ತನ ಪ್ರೀತಿಯ ಬಲವಂತದಿಂದ ಸ್ಥೂಲಾಂಶವನ್ನೂ ಸ್ವೀಕರಿಸುತ್ತಾರೆ ಎಂಬ ನಂಬಿಕೆ ಪ್ರಚಲಿತವಾಯಿತು. ಉಪಾಸನೆಯಲ್ಲಿ ಇನ್ನೂ ಕೆಲವು ಬದಲಾವಣೆಗಳನ್ನು ವೈಷ್ಣವಾಚಾರ್ಯರು ಪ್ರಚಲಿತಗೊಳಿಸಿದರು. ಅವುಗಳಲ್ಲಿ ಮುಖ್ಯವಾದುದು 'ಪಶ್ವಾಚಾರ' ಎಂಬುದು.*

ಈ ಪದ್ಧತಿಯಲ್ಲಿ ಶುಚಿತ್ವಕ್ಕೆ ಹೆಚ್ಚು ಪ್ರಾಧಾನ್ಯವಿದೆ. ಮಾತು, ಕೃತಿ, ಆಲೋಚನೆಗಳಲ್ಲಿ ಸಂಪೂರ್ಣ ಪರಿಶುದ್ಧರಾಗಿರಬೇಕೆಂದು ಅವರು ಬೋಧಿಸುತ್ತಾರೆ. 'ಜಪಾತ್ಸಿದ್ಧಿರ್ಜಪಾತ್ ಸಿದ್ಧಿರ್ಜಪಾತ್ ಸಿದ್ಧಿರ್ನಸಂಶಯಃ ।" ಎಂಬ ಹೇಳಿಕೆಯಂತೆ ನಾಮಜಪ

---

*ಇಲ್ಲಿ ಪಶು ಎಂದರೆ ಜೀವ, ಪ್ರಾಣಿಯಲ್ಲ. ಎಲ್ಲಿಯವರೆಗೆ ಜೀವನಿಗೆ ತಾನು ಶಿವ (ಪಶುಪತಿ)ನಿಂದ ಬೇರೆ ಎಂಬ ಭೇದಭಾವವಿರುತ್ತದೊ ಅಲ್ಲಿಯವರೆಗೂ ಅವನು ಶುಚಿತ್ವಕ್ಕೆ ಹೆಚ್ಚು ಪ್ರಾಧಾನ್ಯ ನೀಡಬೇಕು.

ದಿಂದಲೇ ಜೀವನು ಸಿದ್ಧಿಯನ್ನು ಪಡೆಯುತ್ತಾನೆ ಎಂದು ಅವರು ಜನಸಾಧಾರಣರಲ್ಲಿ ಪ್ರಚಾರ ಮಾಡಿದರು.

25. ಅವರ ಪ್ರಯತ್ನವೂ ಫಲಕಾರಿಯಾಗಲಿಲ್ಲ. ಅವರೆಲ್ಲ ಕಣ್ಮರೆಯಾದಮೇಲೆ ಪ್ರಾಪಂಚಿಕ ಆಸೆಗಳಿಂದ ಕೂಡಿದ ಮಾನವನ ಮನಸ್ಸು ಅವರ ಶುದ್ಧ ಸಂಪ್ರದಾಯ ದೊಡನೆ ಕಲುಷಿತ ಭಾವನೆಗಳನ್ನು ಸೇರಿಸಿತು, ಸೂಕ್ಷ್ಮಭಾವಗಳನ್ನೆಲ್ಲ ಬಿಟ್ಟು ಸ್ಥೂಲ ವಿಷಯಗಳನ್ನೇ ಸ್ವೀಕರಿಸಿತು. ಸ್ತ್ರೀಗೆ ಉಪಪತಿಯ ಕಡೆ ಇರುವ ತೀವ್ರ ಆಂತರಿಕ ಆಕರ್ಷಣೆಯನ್ನು ತನ್ನಲ್ಲಿ ಜಾಗ್ರತಗೊಳಿಸಿ ಅದನ್ನು ಭಗವಂತನೆಡೆಗೆ ಹರಿಸುವ ಬದಲು ಮನುಷ್ಯನು ತಾನೇ ಉಪಪತ್ನಿಯನ್ನು ಇಟ್ಟುಕೊಳ್ಳತೊಡಗಿದ. ಹೀಗೆ ಅವನು ಯೋಗ ದೊಡನೆ ಭೋಗವನ್ನು ಬೆರಸಿ ಅದನ್ನು ತನ್ನ ಪ್ರವೃತ್ತಿಯ ಮಟ್ಟಕ್ಕೆ ಬಹುಮಟ್ಟಿಗೆ ಇಳಿಸಿದ. ಅವನು ಇನ್ನೇನು ಮಾಡಿಯಾನು ? ಅಂಥ ಪರಿಶುದ್ಧ ಜೀವನವನ್ನು ಅವನು ನಡೆಸಲಾರ. ಯೋಗ ಭೋಗಗಳ ಮಿಶ್ರಣವನ್ನು ಮಾತ್ರ ಅವನು ಗ್ರಹಿಸಬಲ್ಲ. ಅವನು ಆಧ್ಯಾತ್ಮಿಕ ಸಾಕ್ಷಾತ್ಕಾರವನ್ನು ಬಯಸುತ್ತಾನೆ, ಆದರೆ ಒಳಗಡೆ ರೂಪರಸಾದಿಗಳ ಭೋಗೇಚ್ಛೆಯೂ ಇದೆ. ಇದರ ಪರಿಣಾಮವಾಗಿ ವೈಷ್ಣವ ಸಮಾಜದಲ್ಲಿ ಕರ್ತಾಭಜ, ಆಉಲ್, ಬಾಉಲ್, ದರಬೇಶ್, ಸಾಂಇ–ಇವೇ ಮುಂತಾದ ಕುತ್ಸಿತ ರಹಸ್ಯ ಸಾಧನೆ ಗಳು ಪ್ರಚಾರಕ್ಕೆ ಬಂದವು. ಆದ್ದರಿಂದ ಇವುಗಳೆಲ್ಲದರ ಹಿಂದೆಯೂ ವೈದಿಕ ಕರ್ಮದ, ಅಂದರೆ ಭೋಗ–ಯೋಗಗಳ ಮಿಶ್ರಣದ ಮೂಲವಿದೆ. ಇದರ ಜೊತೆಗೇನೇ, ತಾಂತ್ರಿಕ ಕುಲಾಚಾರ್ಯರು ಪ್ರಚಲಿತಗೊಳಿಸಿದ, ಪ್ರತಿಯೊಂದು ಕರ್ಮವನ್ನು ಅದ್ವೈತ ಜ್ಞಾನ ದೊಡನೆ ಒಂದುಗೂಡಿಸುವ ಪ್ರವೃತ್ತಿಯೂ ಕಂಡುಬರುತ್ತದೆ.

26. ಈಶ್ವರ, ಮುಕ್ತಿ, ಸಂಯಮ, ತ್ಯಾಗ ಇತ್ಯಾದಿಗಳ ವಿಷಯದಲ್ಲಿ ಕರ್ತಾ ಭಜ ಸಂಪ್ರದಾಯದ ಅಭಿಪ್ರಾಯವೇನು ಎಂಬುದನ್ನು ಇಲ್ಲಿ ಹೇಳಿದರೆ ಮೇಲಿನ ನಮ್ಮ ಅಭಿಪ್ರಾಯವು ಸ್ಪಷ್ಟವಾಗುತ್ತದೆ. ಶ್ರೀರಾಮಕೃಷ್ಣರು ಈ ಸಂಪ್ರದಾಯದ ಬಗ್ಗೆ ಮಾತನಾಡುತ್ತ ನಮಗೆ ಅನೇಕ ವೇಳೆ ಈ ವಿಷಯವನ್ನು ಹೇಳಿರುವರು. ಅವರ ಭಾವನೆ ಗಳು ಪದ್ಯರೂಪದ ಸರಳ ಭಾಷೆಯಲ್ಲಿ ಲಿಖಿತವಾಗಿವೆ. ಜನಸಾಮಾನ್ಯರು ಎಷ್ಟರ ಮಟ್ಟಿಗೆ ಅವುಗಳನ್ನು ಅರ್ಥಮಾಡಿಕೊಳ್ಳಬಲ್ಲರು ಎಂಬುದು ಓದುಗರಿಗೆ ಅವನ್ನು ಕೇಳಿ ದಾಗ ತಿಳಿದುಬರುತ್ತದೆ. ಈ ಸಂಪ್ರದಾಯದವರು ದೇವರನ್ನು 'ಆಲೇಕ್‌ಲತಾ' ಎಂದು ಕರೆಯುತ್ತಾರೆ. ಸಂಸ್ಕೃತದ 'ಅಲಕ್ಷ್ಯ' ಎಂಬ ಶಬ್ದವೇ ಇಲ್ಲಿ 'ಆಲೇಕ್' ಎಂದಾಗಿದೆ ಎಂಬುದು ಸ್ಪಷ್ಟ. 'ಅಲಕ್ಷ್ಯ' ಎಂದರೆ ತಿಳಿಯದುದು ಮತ್ತು ತಿಳಿಯಲಾಗದುದು ಎಂದು. ಆಲೇಕ್ ಶುದ್ಧ ವ್ಯಕ್ತಿಯ ಮನಸ್ಸನ್ನು ಪ್ರವೇಶಿಸುತ್ತದೆ, ಅಂದರೆ ಅವನಲ್ಲಿ ಆಧ್ಯಾತ್ಮಿಕ ಗುರು ಅಥವಾ ಕರ್ತನಾಗಿ ಆವಿರ್ಭವಿಸುತ್ತದೆ. ಅಂತಹ ವ್ಯಕ್ತಿಯನ್ನು ಅವರು 'ಸಹಜ'–ಅಂದರೆ ಭಗವತ್ಪ್ರವೃತ್ತಿಯುಳ್ಳವನು–ಎಂದು ಕರೆಯುತ್ತಾರೆ. ಯಥಾರ್ಥ ಗುರುಭಾವವು ಯಾರಲ್ಲಿ ಈ ರೀತಿ ಅಭಿವ್ಯಕ್ತವಾಗಿದೆಯೊ ಅವನನ್ನೇ ಈ ಸಂಪ್ರದಾಯದವರು ಪೂಜಿಸುವುದರಿಂದ ಈ ಸಂಪ್ರದಾಯಕ್ಕೆ 'ಕರ್ತಾಭಜ' ಎಂದು

ಹೆಸರು ಬಂದಿದೆ. 'ಅಲೇಕ್‌ಲತಾ'ದ ನೈಜ ಸ್ವರೂಪ ಮತ್ತು ಅದು ಹೇಗೆ ಶುದ್ಧ ಮಾನವನಲ್ಲಿ ಆವಿರ್ಭಾವಗೊಳ್ಳುತ್ತದೆ–ಇದರ ಬಗ್ಗೆ ಅವರು ಹೀಗೆ ಹೇಳುತ್ತಾರೆ :

"ಅದು ಕಾಣದಂತೆ ಬರುತ್ತದೆ, ಕಾಣದಂತೆ ಹೋಗುತ್ತದೆ, ಅಲೇಕ್‌ಅನ್ನು ಯಾರೂ ನೋಡಲಾಗುವುದಿಲ್ಲ. ಯಾರು ಅದನ್ನು ತಿಳಿದಿರುವರೊ ಅವರು ಲೋಕದಲ್ಲಿ ಪೂಜ್ಯರಾಗುತ್ತಾರೆ.

'ಸಹಜ' ವ್ಯಕ್ತಿಯ ಲಕ್ಷಣವೇನೆಂದರೆ ಅವನು ಯಾವಾಗಲೂ ಸ್ಥಿರವಾಗಿರುತ್ತಾನೆ, ಅವನು ಸ್ತ್ರೀಯರೊಡನೆ ಇದ್ದರೂ ಕಾಮಕ್ಕೊಳಗಾಗಿ ಪ್ರಶಾಂತತೆಯನ್ನು ಕಳೆದುಕೊಳ್ಳು ವುದಿಲ್ಲ. ಅವನ ಬಗ್ಗೆ ಹೀಗೆ ಹೇಳುತ್ತಾರೆ :

"ಅವನು ಸ್ತ್ರೀಯರೊಡನೆ ಇರುತ್ತಾನೆ, ಆದರೆ ಅವರೊಡನೆ ರಮಿಸುವುದಿಲ್ಲ."

ಸಂಸಾರದಲ್ಲಿ ಕಾಮಕಾಂಚನಗಳ ನಡುವೆ ಅನಾಸಕ್ತಭಾವದಿಂದ ಇರಲಾಗದಿದ್ದರೆ ಸಾಧಕನು ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಲಾಗುವುದಿಲ್ಲ. ಆದ್ದರಿಂದ ಅವರಿಗೆ ಈ ಉಪದೇಶ :

"ಅಡಿಗೆಯವನಾಗಿರು, ಪದಾರ್ಥಗಳನ್ನು ಒಡಿಸು, ಆದರೆ ಪಾತ್ರೆಯನ್ನು ಮಾತ್ರ ಮುಟ್ಟಬೇಡ. ಹಾವಿನ ಮುಂದೆ ಕುಣಿಯಲಿ, ಆದರೆ ಹಾವು ಕಪ್ಪೆಯನ್ನು ತಿನ್ನದಿರಲಿ. ಅಮೃತ ಸಾಗರದಲ್ಲಿ ಸ್ನಾನ ಮಾಡು, ಆದರೆ ರೋಮ ಮಾತ್ರ ಒದ್ದೆಯಾಗದಿರಲಿ."

ತಂತ್ರದಲ್ಲಿ ಸಾಧಕರನ್ನು ಪಶು, ವೀರ ಮತ್ತು ದಿವ್ಯ ಎಂದು ಮೂರು ಬಗೆಯಾಗಿ ವಿಂಗಡಿಸಿರುವರು. ಹಾಗೆಯೇ ಈ ಸಂಪ್ರದಾಯದವರಲ್ಲಿಯೂ ಮೇಲು ಕೆಳಗಿನ ಶ್ರೇಣಿ ಯವರಿದ್ದಾರೆ. ಅವರಲ್ಲಿ ನಾಲ್ಕು ವರ್ಗದವರಿದ್ದಾರೆ : ಆಉಲ್, ಬಾಉಲ್, ದರ್ವೇಸ ಮತ್ತು ಸಾಂಇ. ಇವರಲ್ಲಿ ಸಾಂಇಗಳಿಗಿಂತ ಉನ್ನತಮಟ್ಟದವರಿಲ್ಲ ಎನ್ನುತ್ತಾರೆ. ಅಂದರೆ ಸಿದ್ಧನಾದವನು ಸಾಂಇ ಎಂದು ಕರೆಸಿಕೊಳ್ಳುತ್ತಿದ್ದ. ಶ್ರೀರಾಮಕೃಷ್ಣರು ಹೇಳುತ್ತಿದ್ದರು, "ಇವರೆಲ್ಲರೂ ಭಗವಂತನ ಅರೂಪ ರೂಪವನ್ನೇ ಪೂಜಿಸುತ್ತಾರೆ" ಎಂದು. ಈ ಸಂಪ್ರ ದಾಯಕ್ಕೆ ಸಂಬಂಧಿಸಿದ ಕೆಲವು ಹಾಡುಗಳನ್ನು ಅವರು ಹಾಡುತ್ತಿದ್ದರು. ಉದಾಹರಣೆಗೆ :

ಮುಳು ಮುಳುಗು ಮನವೇ-
ಹಿರಿಯೊಲವಿನ ಕಡಲಾಳಕೆ
ಮುಳುಗು ಮುಳುಗು ಒಳಗೇ
ತಲಾತಲ ಪಾತಾಲಕೆ ಮುಳುಗಲು
ಮುತ್ತು ರತುನಗಳನ ನೀತರುವೆ.

ಹುಡುಕು ಹುಡುಕು ನಿನ್ನೆದೆಯೊಳಗನು
ಬೃಂದಾವನವಿದೆ ಅಲ್ಲಿ !
ಗೋಪೀಜನ ಮನಮೋಹನವಲ್ಲಭ
ನಿತ್ಯಲೀಲೆಯಲಿ ಇಹನಲ್ಲಿ !

ಅರಿವಿನ ಹಣತೆಯ ಹಚ್ಚಿಕೊಳ್ಳೊ ಒಳಗೆ,
ನಿರಂತರವು ಅದು ಬೆಳಗುತಲಿರಲಿ
ಘಟ್ಟನೆಲದ ಮೇಲಾರೊ ದೋಣಿಯನು
ಹುಟ್ಟುಹಾಕುತ ಇಂತು ನಡೆಸುವವರು ?
'ಅವನೆ ನಿನ್ನ ಗುರು' ಎನುವ ಕುಬೀರ.
ಆತನ ಪಾದದಿ ಮನವನು ನಿಲಿಸೊ.

ಆದ್ದರಿಂದ ಗುರುವನ್ನು ಪೂಜಿಸುವುದು ಮತ್ತು ಎಲ್ಲರೂ ಕಲೆತು ಭಜನೆ ಮಾಡುವುದು–ಇದು ಅವರ ಪ್ರಧಾನ ಸಾಧನೆಯಾಗಿತ್ತು. ಅವರು ದೇವದೇವಿಯರ ಮೂರ್ತಿ ಪೂಜೆಯನ್ನು ನಿರಾಕರಿಸದಿದ್ದರೂ ಅವರು ಅದನ್ನು ವಿಶೇಷವಾಗಿ ಮಾಡುತ್ತಿರಲಿಲ್ಲ. ಭಾರತದಲ್ಲಿ ಗುರು ಅಥವಾ ಆಚಾರ್ಯರ ಉಪಾಸನೆ ಬಹು ಪ್ರಾಚೀನ ಕಾಲದಿಂದಲೂ ಇದೆ–ಉಪನಿಷತ್ ಕಾಲದಿಂದಲೂ ಅದು ಪ್ರಚಲಿತವಿತ್ತು ಎನ್ನಬಹುದು. ಏಕೆಂದರೆ ಉಪನಿಷತ್ತಿನಲ್ಲಿ "ಆಚಾರ್ಯದೇವೋ ಭವ" ಎಂದೇ ಉಕ್ತವಾಗಿದೆ. ಆಗ ದೇವದೇವಿಯರ ಉಪಾಸನೆ ಪ್ರಚಲಿತವಿರಲಿಲ್ಲವೆಂದೇ ಹೇಳಬಹುದು. ಈ ಆಚಾರ್ಯೋಪಾಸನೆ ಮುಂದೆ ಭಾರತದಲ್ಲಿ ಎಷ್ಟು ಬಗೆಯ ರೂಪಗಳನ್ನು ಪಡೆಯಿತು ಎಂಬುದನ್ನು ನೋಡಿದಾಗ ಆಶ್ಚರ್ಯವಾಗುತ್ತದೆ.

ಶುಚಿ ಮತ್ತು ಅಶುಚಿ, ಒಳಿತು ಮತ್ತು ಕೆಡುಕು ಇತ್ಯಾದಿ ಭೇದಗಳನ್ನು ಮನಸ್ಸಿನಿಂದ ಹೋಗಲಾಡಿಸಲು ಈ ಸಂಪ್ರದಾಯದ ಸಾಧಕರು ಅನೇಕ ಸಾಧನೆಗಳನ್ನು ಮಾಡಬೇಕಾಗುತ್ತಿತ್ತು. ಆ ಸಾಧಕರೆಲ್ಲ ಗುರುಪರಂಪರೆಯಿಂದ ಈ ಸಾಧನೆಗಳನ್ನು ಕಲಿಯುತ್ತಿದ್ದರು ಎಂದೇ ಶ್ರೀರಾಮಕೃಷ್ಣರು ಹೇಳುತ್ತಿದ್ದರು, ಕೆಲವೊಮ್ಮೆ ಅವುಗಳಲ್ಲಿ ಕೆಲವನ್ನು ಉಲ್ಲೇಖಿಸುತ್ತಿದ್ದರು.

27. ಶ್ರೀರಾಮಕೃಷ್ಣರು ಮತ್ತೆ ಮತ್ತೆ ಹೇಳುತ್ತಿದ್ದರು : "ವೇದ ಪುರಾಣಗಳನ್ನು ಕಿವಿಯಲ್ಲಿ ಕೇಳಬೇಕು, ಆದರೆ ತಾಂತ್ರಿಕ ಸಾಧನೆಗಳನ್ನು ಜೀವನದಲ್ಲಿ ಅನುಸರಿಸಬೇಕು." ಸ್ಮೃತಿಯನ್ನು ಅನುಸರಿಸುವವರು ಯಾವುದಾದರೊಂದು ಬಗೆಯ ತಾಂತ್ರಿಕ ಸಾಧನೆ ಮಾಡುವುದನ್ನು ನಾವು ಭಾರತದುದ್ದಕ್ಕೂ ನೋಡುತ್ತೇವೆ. ನ್ಯಾಯ ಮತ್ತು ವೇದಾಂತದ ಘನ ವಿದ್ವಾಂಸರೂ ಅನುಷ್ಠಾನದಲ್ಲಿ ತಾಂತ್ರಿಕರಾಗಿರುವುದನ್ನು ನೋಡಬಹುದು. ವೈಷ್ಣವ ಸಂಪ್ರದಾಯದಲ್ಲಿ ಈ ಪ್ರವೃತ್ತಿಯನ್ನು ನಾವು ಬಹಳಷ್ಟು ಕಾಣಬಹುದು. ಭಾಗವತ ಮುಂತಾದ ಶಾಸ್ತ್ರಗಳ ಪ್ರಸಿದ್ಧ ಪಂಡಿತರನೇಕರು ಕರ್ತಾಭಜ ಮುಂತಾದ ರಹಸ್ಯ ಸಾಧನೆಗಳನ್ನು ಅನುಸರಿಸುವುದನ್ನು ಕಾಣುತ್ತೇವೆ. ವೈಷ್ಣವ ಚರಣನೂ ಅವರಲ್ಲಿ ಒಬ್ಬನಾಗಿದ್ದನು. ಕಲಕತ್ತೆಯಿಂದ ಕೆಲವು ಮೈಲಿ ದೂರದಲ್ಲಿರುವ ಕಾಛಿಬಾಗಾನ್ ಎಂಬ ಸ್ಥಳದಲ್ಲಿದ್ದ ಆ ಸಂಪ್ರದಾಯದ ಅಖಾಡದೊಡನೆ ಅವನು ನಿಕಟ ಸಂಬಂಧವನ್ನು ಇಟ್ಟುಕೊಂಡಿದ್ದ. ಆ ಸಂಪ್ರದಾಯಕ್ಕೆ ಸೇರಿದ ಅನೇಕ ಸ್ತ್ರೀ ಪುರುಷರು ಅಲ್ಲಿ ಇವನ ಮಾರ್ಗದರ್ಶನದಂತೆ ಸಾಧನೆಯಲ್ಲಿ ನಿರತರಾಗಿದ್ದರು. ವೈಷ್ಣವಚರಣನು ಶ್ರೀರಾಮಕೃಷ್ಣರನ್ನು ಅಲ್ಲಿಗೆ ಕೆಲವು ಬಾರಿ ಕರೆದುಕೊಂಡುಹೋಗಿದ್ದ. ಅಲ್ಲಿಯ ಸ್ತ್ರೀಯರು ಶ್ರೀರಾಮಕೃಷ್ಣರ ಇಂದ್ರಿಯಜಯವನ್ನು ಪರೀಕ್ಷಿಸಿದ್ದರೆಂದು ಕೇಳಿದ್ದೇವೆ, ಶ್ರೀರಾಮಕೃಷ್ಣರು ಯಾವಾಗಲೂ ನಿರ್ವಿಕಾರರಾಗಿರುವುದನ್ನೂ ಭಗವತ್ಪ್ರೇಮದಲ್ಲಿ ತನ್ಮಯರಾಗಿರುವುದನ್ನೂ ನೋಡಿ ಅವರನ್ನು ಪರೀಕ್ಷಿಸಬೇಕೆಂದು ಆ ಸ್ತ್ರೀಯರಿಗೆ ಅನಿಸಿತ್ತು. ಅನಂತರ ಅವರನ್ನು 'ಅಚಲ ಸಹಜ' ಎಂದು ಗೌರವಿಸಿದ್ದರು. ಬಾಲಕ ಸ್ವಭಾವದ ಶ್ರೀರಾಮಕೃಷ್ಣರು ಸ್ವಾಭಾವಿಕವಾಗಿಯೇ ವೈಷ್ಣವಚರಣನ ಕೇಳಿಕೆಯ

ಮೇರೆಗೆ ಅಲ್ಲಿಗೆ ಹೋಗಿದ್ದರು. ಆ ಸ್ತ್ರೀಯರು ತಮ್ಮನ್ನು ಪರೀಕ್ಷಿಸುತ್ತಾರೆಂದು ಅವರಿಗೆ ತಿಳಿದಿರಲೇ ಇಲ್ಲ. ಮುಂದೆ ಅವರೆಂದೂ ಅಲ್ಲಿಗೆ ಹೋಗಲಿಲ್ಲ.

28. ಶ್ರೀರಾಮಕೃಷ್ಣರ ಚಾರಿತ್ರಬಲ, ಪವಿತ್ರತೆ ಮತ್ತು ಭಾವಸಮಾಧಿ—ಇವುಗಳನ್ನು ನೋಡಿ ವೈಷ್ಣವಚರಣನಿಗೆ ಅವರ ಮೇಲೆ ಅಪಾರ ಭಕ್ತಿ—ವಿಶ್ವಾಸವುಂಟಾಯಿತು. ಎಷ್ಟರಮಟ್ಟಿಗೆ ಅದು ವೃದ್ಧಿಯಾಯಿತೆಂದರೆ ಎಲ್ಲರ ಮುಂದೆಯೂ ಅವರನ್ನು ಅವತಾರ ಪುರುಷರೆಂದು ಸಾರಲು ಅವನು ಹಿಂಜರಿಯಲಿಲ್ಲ.

29. ವೈಷ್ಣವಚರಣನು ಶ್ರೀರಾಮಕೃಷ್ಣರೆಡೆಗೆ ಬರತೊಡಗಿ ಕೆಲವೇ ದಿನಗಳಲ್ಲಿ ಇಂದೇಶದ ಗೌರೀಪಂಡಿತನು ದಕ್ಷಿಣೇಶ್ವರಕ್ಕೆ ಬಂದನು. ಗೌರೀಪಂಡಿತನು ಒಬ್ಬ ವಿಶಿಷ್ಟ ಬಗೆಯ ತಾಂತ್ರಿಕ ಸಾಧಕನಾಗಿದ್ದ. ಅವನು ದಕ್ಷಿಣೇಶ್ವರದ ಕಾಳೀದೇವಾಲಯಕ್ಕೆ ಬಂದ ಕೂಡಲೇ ಒಂದು ವಿಚಿತ್ರ ಘಟನೆ ಸಂಭವಿಸಿತು. ಶ್ರೀರಾಮಕೃಷ್ಣರೇ ಈ ಘಟನೆಯನ್ನು ಹೇಳಿರುವರು. ಗೌರೀ ಪಂಡಿತನಿಗೆ ಒಂದು ಸಿದ್ಧಿ ಅಥವಾ ತಪಸ್ಸಿನಿಂದ ಪಡೆದ ಒಂದು ಶಕ್ತಿ ಇತ್ತು. ಶಾಸ್ತ್ರವಿಚಾರದ ಚರ್ಚೆಗೆ ಅವನನ್ನು ಆಹ್ವಾನಿಸಿದಾಗ ಚರ್ಚೆ ನಡೆಯುವ ಮನೆ ಅಥವಾ ಸಭಾಗೃಹವನ್ನು ಅವನು ಪ್ರವೇಶಿಸುವುದಕ್ಕೆ ಮೊದಲು ಅವನು ಉಚ್ಚ ಕಂಠದಿಂದ ಈ ರೀತಿ ಹೇಳುತ್ತಿದ್ದ : 'ಹಾ ರೇ ರೇ ರೇ, ನಿರಾಲಂಬೋ ಲಂಬೋದರ ಜನನೀ ಕಂ ಯಾಮಿ ಶರಣಂ.' ಹೀಗೆ ಕೆಲವು ಬಾರಿ ಉಚ್ಚರಿಸಿದ ಮೇಲೆ ಅವನು ಒಳಗೆ ಪ್ರವೇಶಿಸುತ್ತಿದ್ದ. ಮೇಘಗಂಭೀರ ಧ್ವನಿಯಲ್ಲಿ ಅವನ 'ಹಾ ರೇ ರೇ ರೇ' ಎಂಬ ಕೂಗನ್ನೂ ಮತ್ತು ಶಂಕರಾಚಾರ್ಯರ ದೇವೀಸ್ತೋತ್ರದ ಒಂದು ಚರಣವನ್ನೂ ಕೇಳಿದಾಗ ಎಲ್ಲರ ಹೃದಯವೂ ತಲ್ಲಣಗೊಳ್ಳುತ್ತಿತ್ತು—ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಅವನ ಈ ಕಾರ್ಯದಿಂದ ಎರಡು ಪರಿಣಾಮಗಳು ಉಂಟಾಗುತ್ತಿದ್ದವು. ಮೊದಲನೆಯದಾಗಿ ಆ ಶಬ್ದವು ಅವನೊಳಗಿನ ಶಕ್ತಿಯನ್ನು ಸರಿಯಾಗಿ ಜಾಗ್ರತಗೊಳಿಸುತ್ತಿತ್ತು, ಎರಡನೆಯದಾಗಿ ಆ ಶಬ್ದ ವಿರೋಧಿಗಳನ್ನು ಗಾಬರಿಗೊಳಿಸಿ ಅವರ ಬಲವನ್ನು ಕುಂಠಿಸುತ್ತಿತ್ತು. ಈ ರೀತಿ ಶಬ್ದಮಾಡುತ್ತ ಕುಸ್ತಿಪಟುಗಳಂತೆ ತೋಳನ್ನು ತಟ್ಟುತ್ತ ಸಭೆಯನ್ನು ಪ್ರವೇಶಿಸುತ್ತಿದ್ದ. ಅನಂತರ ಎಲ್ಲರ ಮುಂದೆ ಬಾದಶಹನ ದರ್ಬಾರಿನಲ್ಲಿ ಸಭಾಸದರು ಕುಳಿತುಕೊಳ್ಳುತ್ತಿದ್ದಂತೆ ಮೊಳಕಾಲುಗಳೆರಡೂ ಮುಂದಕ್ಕೆ ಪಾದಗಳೆರಡೂ ಹಿಂದಕ್ಕೆ ಇರುವಂತೆ ಕುಳಿತುಕೊಳ್ಳುತ್ತಿದ್ದ. ಆಗ ಗೌರೀ ಪಂಡಿತನನ್ನು ವಾದದಲ್ಲಿ ಸೋಲಿಸಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ—ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು.

ಗೌರೀ ಪಂಡಿತನ ಈ ಶಕ್ತಿಯ ಬಗ್ಗೆ ಶ್ರೀರಾಮಕೃಷ್ಣರಿಗೆ ಗೊತ್ತಿರಲಿಲ್ಲ. ಗೌರೀ ಪಂಡಿತನು ಕಾಳೀದೇವಾಲಯವನ್ನು ಪ್ರವೇಶಿಸುತ್ತಿದ್ದಂತೆಯೇ 'ಹಾ ರೇ ರೇ ರೇ' ಎಂದು ಶಬ್ದ ಮಾಡತೊಡಗಿದನು. ಇದನ್ನು ಕೇಳಿದ ಶ್ರೀರಾಮಕೃಷ್ಣರಲ್ಲಿಯೂ ಏನೋ ಒಂದು ಅವ್ಯಕ್ತ ಪ್ರೇರಣೆ ಉಂಟಾಗಿ ಅವರೂ ಶಬ್ದ ಮಾಡಿದರು. ಇದನ್ನು ಕೇಳಿದ ಗೌರೀ ಪಂಡಿತನು ಇನ್ನೂ ಉಚ್ಚ ಧ್ವನಿಯಲ್ಲಿ ಕೂಗಿದ. ಶ್ರೀರಾಮಕೃಷ್ಣರು ಇನ್ನೂ ಉತ್ತೇಜಿತರಾಗಿ

'ಹಾ ರೇ ರೇ ರೇ' ಎಂದು ಜೋರಾಗಿ ಕೂಗಿದರು. ಹೀಗೆ ಇವರಿಬ್ಬರ ಕೂಗಾಟ 'ದರೋಡೆಕೋರರ ಭೀಷಣ ಧ್ವನಿಯಂತೆ ಕೇಳತೊಡಗಿತು' ಎಂದು ಶ್ರೀರಾಮಕೃಷ್ಣರು ನಗುತ್ತ ಹೇಳುತ್ತಿದ್ದರು. ಈ ಶಬ್ದವನ್ನು ಕೇಳಿ ದೇವಸ್ಥಾನದಲ್ಲಿದ್ದವರೆಲ್ಲ ಗಾಬರಿಯಿಂದ ಓಡಿಬರತೊಡಗಿದರು–ಎಲ್ಲರೂ ಭಯದಿಂದ ತತ್ತರಿಸಿದರು. ಗೌರೀ ಪಂಡಿತನಿಗೆ ಕೊನೆಗೆ ಶ್ರೀರಾಮಕೃಷ್ಣರಿಗಿಂತ ಗಟ್ಟಿಯಾಗಿ ಶಬ್ದ ಮಾಡಲು ಸಾಧ್ಯವಾಗದೆ ಸುಮ್ಮನಾದನು. ಸ್ವಲ್ಪ ಖಿನ್ನಮನಸ್ಕನಾಗಿ ಕಾಳೀಮಂದಿರವನ್ನು ಪ್ರವೇಶಿಸಿದನು. ಎಲ್ಲರೂ ನಡೆದ ವಿಷಯ ತಿಳಿದ ಮೇಲೆ ತಮ್ಮ ಪಾಡಿಗೆ ತಾವು ಹೊರಟು ಹೋದರು. ಶ್ರೀರಾಮಕೃಷ್ಣರು ಹೇಳುತ್ತಿದ್ದರು : "ಗೌರೀ ಪಂಡಿತನು ಯಾವ ಶಕ್ತಿಯಿಂದ ಎಲ್ಲರ ಬಲವನ್ನು ಅಪಹರಿಸುತ್ತಿದ್ದನೊ ಆ ಶಕ್ತಿಯೂ ಇಲ್ಲಿ ಹೀಗೆ ಪರಾಜಯಗೊಳ್ಳಲು ಅವನಲ್ಲಿ ಮತ್ತೆ ಆ ಶಕ್ತಿ ಉಳಿಯಲಿಲ್ಲ–ಎಂದು ಅನಂತರ ತಾಯಿ ನನಗೆ ತಿಳಿಸಿಕೊಟ್ಟಳು. ಅವನ ಒಳಿತಿಗಾಗಿ ತಾಯಿಯು ಆ ಶಕ್ತಿಯನ್ನು ಇದರೊಳಗೆ (ತಮ್ಮ ಕಡೆ ತೋರಿಸಿ) ಸೆಳೆದುಕೊಂಡಳು." ದಿನದಿನವೂ ಗೌರೀ ಪಂಡಿತನು ಶ್ರೀರಾಮಕೃಷ್ಣರೆಡೆಗೆ ಆಕರ್ಷಿತನಾಗಿ ಸಂಪೂರ್ಣ ಅವರ ವಶವಾಗುವುದನ್ನು ನಾವು ನೋಡುತ್ತೇವೆ.

30. ಮೊದಲೆ ಹೇಳಿದಂತೆ ಗೌರೀ ಪಂಡಿತನು ತಾಂತ್ರಿಕ ಸಾಧಕನಾಗಿದ್ದನು. ನಾವು ಶ್ರೀರಾಮಕೃಷ್ಣರಿಂದ ಕೇಳಿರುವೆವು, ದುರ್ಗಾಪೂಜೆಯ ಸಮಯದಲ್ಲಿ ಪ್ರತಿ ವರ್ಷ ಗೌರೀ ಪಂಡಿತನು ತನ್ನ ಪತ್ನಿಯನ್ನೇ ದೇವಿಯಂತೆ ಪೂಜಿಸುತ್ತಿದ್ದನಂತೆ. ಅವಳನ್ನು ಬಟ್ಟೆ ಒಡವೆಗಳಿಂದ ಅಲಂಕರಿಸಿ ಅಲಂಕೃತ ದೇವಿಯ ಪೀಠದ ಮೇಲೆ ಅವಳನ್ನು ಕೂರಿಸಿ ಭಕ್ತಿ ಭಾವದಿಂದ ಮೂರು ದಿನ ಪೂಜಿಸುತ್ತಿದ್ದನಂತೆ. ತಂತ್ರದ ಪ್ರಕಾರ ಎಲ್ಲ ಸ್ತ್ರೀರೂಪಗಳೂ ಶ್ರೀಜಗನ್ಮಾತೆಯ ಪ್ರತೀಕವೆ. ಅವರೆಲ್ಲರಲ್ಲೂ ಜಗನ್ಮಾತೆಯ ಜಗತ್ಪಾಲಕ ಮತ್ತು ಆನಂದದಾಯಕ ಶಕ್ತಿಯು ಪ್ರಕಾಶಿಸುತ್ತಿದೆ. ಆದ್ದರಿಂದ ಎಲ್ಲ ಸ್ತ್ರೀಮೂರ್ತಿಗಳನ್ನೂ ಮನುಷ್ಯನು ಪವಿತ್ರಭಾವದಿಂದ ಪೂಜಿಸಬೇಕು. ಸ್ತ್ರೀಮೂರ್ತಿಯ ಒಳಗೆ ಶ್ರೀಜಗನ್ಮಾತೆಯು ಸ್ವಯಂ ನೆಲಸಿರುವಳು ಎಂಬುದನ್ನು ಮರೆತು ಅವಳನ್ನು ಭೋಗವಸ್ತುವೆಂದು ಸಕಾಮದೃಷ್ಟಿಯಿಂದ ನೋಡಿದರೆ ಜಗನ್ಮಾತೆಗೆ ಅವಮಾನ ಮಾಡಿದಂತಾಗುತ್ತದೆ ಮತ್ತು ಇದರಿಂದ ಮನುಷ್ಯನಿಗೆ ಅನಿಷ್ಟವುಂಟಾಗುತ್ತದೆ. 'ಚಂಡಿ'ಯಲ್ಲಿ ದೇವತೆಗಳು ದೇವಿಯನ್ನು ಹೀಗೆ ಸ್ತುತಿಸುತ್ತಾರೆ :

> ವಿದ್ಯಾಃ ಸಮಸ್ತಾಸ್ತವ ದೇವಿ ಭೇದಾಃ ಸ್ತ್ರಿಯಃ ಸಮಸ್ತಾಸ್ಸಕಲಾ ಜಗತ್ಸು ।
> ತ್ವಯೈಕಯಾ ಪೂರಿತಮಂಬಯೈತತ್ ಕಾ ತೇ ಸ್ತುತಿಃ ಸ್ತವ್ಯಪರಾಪರೋಕ್ತಿಃ ॥

"ಹೇ ದೇವಿ, ನೀನೇ ಜ್ಞಾನಸ್ವರೂಪಿಯು, ಈ ಪ್ರಪಂಚದಲ್ಲಿರುವ ಎಲ್ಲ ಬಗೆಯ ವಿದ್ಯೆಗಳೂ, ಜನರ ಮನಸ್ಸಿನಲ್ಲಿ ಏಳುವ ಎಲ್ಲ ರೀತಿಯ ಜ್ಞಾನವೂ–ಇವೆಲ್ಲವೂ ನೀನೇ, ಆಯಾಯ ರೂಪದಲ್ಲಿ ನೀನೇ ಪ್ರಕಾಶಿಸುತ್ತಿರುವೆ. ನೀನೇ ಜಗತ್ತಿನಲ್ಲಿರುವ ಎಲ್ಲ ಸ್ತ್ರೀಯರ ರೂಪದಲ್ಲಿಯೂ ಕಾಣಿಸಿಕೊಳ್ಳುತ್ತಿರುವೆ. ನೀನೊಬ್ಬಳೇ ಈ ಸಮಸ್ತ

ಜಗತ್ತನ್ನೂ ವ್ಯಾಪಿಸಿಕೊಂಡಿರುವೆ. ನೀನು ತುಲನೆಗೆ ಮೀರಿದವಳು, ಮಾತಿಗೆ ಅತೀತಳು. ನಿನ್ನ ಅನಂತ ಗುಣಗಳನ್ನು ಯಾರು ಸ್ತುತಿಸಬಲ್ಲರು ?"

ಸಾಮಾನ್ಯವಾಗಿ ಭಾರತದ ಎಲ್ಲ ಕಡೆಯಲ್ಲಿಯೂ ಜನರು ಈ ಸ್ತುತಿಯನ್ನು ಪಠಿಸುತ್ತಾರೆ. ಆದರೆ ಎಷ್ಟು ಜನ ಸ್ತ್ರೀ ಶರೀರವನ್ನು ದೇವಿಯ ಮೂರ್ತಿಯೆಂದು ಪರಿಗಣಿಸಬಲ್ಲರು ? ಆ ಶುದ್ಧ ಆನಂದವನ್ನು ಪಡೆಯುವ ಸಾಮರ್ಥ್ಯ ಎಷ್ಟು ಮಂದಿಗೆ ಇದೆ ? ಶ್ರೀಜಗನ್ಮಾತೆಯ ವಿಶೇಷ ಆವಿರ್ಭಾವವಾದ ಸ್ತ್ರೀಮೂರ್ತಿಯನ್ನು ಕಲುಷಿತ ದೃಷ್ಟಿಯಿಂದ ನೋಡಿ ಎಷ್ಟು ಬಾರಿ ಜನರು ಅವಳಿಗೆ ಅವಮಾನ ಮಾಡುತ್ತಿರುವರು ! ಈ ರೀತಿಯ ಪಶುಬುದ್ಧಿಯಿಂದ ಸ್ತ್ರೀಶರೀರಕ್ಕೆ ಅವಮಾನ ಮಾಡಿದ್ದರಿಂದಲೇ, ಶಿವ ಜ್ಞಾನದಲ್ಲಿ ಜೀವಸೇವೆಯನ್ನು ಮಾಡಲು ಮರೆತಿದ್ದರಿಂದಲೇ ಭಾರತವು ಈಗ ಈ ದುರ್ದಶೆಯಲ್ಲಿರುವುದು. ಜಗದಂಬೆಯ ಕೃಪೆಯಿಂದ ಯಾವಾಗ ಈ ಪಶುಬುದ್ಧಿಯು ದೂರವಾಗುವುದೊ ಅವಳಿಗೇ ಗೊತ್ತು !

31. ಗೌರೀ ಪಂಡಿತನಲ್ಲಿ ಇನ್ನೊಂದು ಅದ್ಭುತ ಶಕ್ತಿ ಇತ್ತೆಂಬುದನ್ನು ಶ್ರೀರಾಮಕೃಷ್ಣರಿಂದ ಕೇಳಿರುವೆವು. ಕೆಲವು ವಿಶಿಷ್ಟ ತಾಂತ್ರಿಕ ಸಾಧಕರು ಜಗನ್ಮಾತೆಯ ನಿತ್ಯ ಪೂಜೆಯನಂತರ ಹೋಮ ಮಾಡುತ್ತಾರೆ. ಗೌರೀ ಪಂಡಿತನು ಎಲ್ಲ ದಿನಗಳಲ್ಲಿ ಅಲ್ಲದಿದ್ದರೂ ಅನೇಕ ಸಮಯ ಹೋಮ ಮಾಡುತ್ತಿದ್ದನು. ಆದರೆ ಅವನ ಹೋಮದ ವಿಧಾನವೇ ಬೇರೆ. ಸಾಮಾನ್ಯವಾಗಿ ಜನರು ನೆಲದ ಮೇಲೆ ಮಣ್ಣು ಅಥವಾ ಮರಳಿನ ಮೂಲಕ ಒಂದು ವೇದಿಕೆಯನ್ನು ತಯಾರಿಸಿ ಅದರ ಮೇಲೆ ಸೌದೆಯ ಮೂಲಕ ಬೆಂಕಿಯನ್ನು ಹೊತ್ತಿಸುತ್ತಾರೆ. ಆದರೆ ಗೌರೀ ಪಂಡಿತನು ತನ್ನ ಎಡಗೈ ಚಾಚಿ ಅದರ ಮೇಲೆ ಒಂದು ಮಣ ಕಟ್ಟಿಗೆಯನ್ನು ಜೋಡಿಸುತ್ತಿದ್ದ. ಅದಕ್ಕೆ ಬೆಂಕಿ ಹೊತ್ತಿಸಿ ಬಲಗೈಯಿಂದ ಹೋಮ ಮಾಡುತ್ತಿದ್ದ. ಹೋಮ ಅಷ್ಟು ಬೇಗ ಮುಗಿಯುತ್ತಿರಲಿಲ್ಲ ! ಅಷ್ಟು ಹೊತ್ತು ಎಡಗೈ ಯಾವ ಆಸರೆಯೂ ಇಲ್ಲದೆ ಅಷ್ಟೊಂದು ಭಾರವನ್ನು ಹೊತ್ತುಕೊಂಡಿರುತ್ತಿತ್ತು ! ಅಷ್ಟೂ ಅಲ್ಲದೆ ಆ ಬೆಂಕಿಯ ಶಾಖವನ್ನು ತಡೆದುಕೊಂಡಿರುವುದೂ ಸಾಮಾನ್ಯ ವಿಷಯವಲ್ಲ. ಈ ಮಧ್ಯೆ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿ ಭಕ್ತಿಭಾವದಿಂದ ಹೋಮಮಾಡುವುದು ನಮ್ಮ ದೃಷ್ಟಿಯಿಂದ ಅಸಾಧ್ಯವೆಂದೇ ತೋರುತ್ತದೆ. ಆದ್ದರಿಂದ ನಮ್ಮಲ್ಲನೇಕರಿಗೆ ಈ ವಿಷಯವನ್ನು ಶ್ರೀರಾಮಕೃಷ್ಣರ ಬಾಯಿಂದ ಕೇಳಿದ್ದರೂ ನಂಬಲು ಸಾಧ್ಯವಾಗಿರಲಿಲ್ಲ. ಶ್ರೀರಾಮಕೃಷ್ಣರು ಅವರ ಮನೋಭಾವವನ್ನು ಅರಿತು ಹೇಳಿದ್ದರು : "ನಾನು ನನ್ನ ಕಣ್ಣಿನಿಂದಲೇ ಅವನು ಆ ರೀತಿ ಹೋಮಮಾಡುವುದನ್ನು ನೋಡಿದ್ದೇನಪ್ಪ ! ಅದೂ ಅವನ ಒಂದು ಪವಾಡ !"

32. ಗೌರೀ ಪಂಡಿತನು ದಕ್ಷಿಣೇಶ್ವರಕ್ಕೆ ಬಂದು ಕೆಲವು ದಿನಗಳಾದ ಮೇಲೆ ಮಥುರನು ವೈಷ್ಣವಚರಣ ಮುಂತಾದ ಪಂಡಿತರನ್ನು ಆಹ್ವಾನಿಸಿ ಒಂದು ಸಭೆಯನ್ನು ಏರ್ಪಡಿಸಿದನು. ಈಗ ಹೊಸದಾಗಿ ಬಂದಿರುವ ಪಂಡಿತರೊಡನೆ ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಸ್ಥಿತಿಯ ಬಗ್ಗೆ ಒಂದು ಶಾಸ್ತ್ರೀಯವಾದ ನಿರ್ಣಯಕ್ಕೆ ಬರುವುದೇ

ಸಭೆಯ ಉದ್ದೇಶವಾಗಿತ್ತು. ಬೆಳಗ್ಗೆಯೆ ಸಭೆ ಪ್ರಾರಂಭವಾಯಿತು—ಕಾಳೀದೇವಾಲಯದ ಮುಂದಿದ್ದ ನೃತ್ಯ ಮಂದಿರದಲ್ಲಿ. ವೈಷ್ಣವಚರಣನು ಕಲಕತ್ತೆಯಿಂದ ಬರುವುದು ತಡ ವಾಯಿತು. ಶ್ರೀರಾಮಕೃಷ್ಣರು ಗೌರೀ ಪಂಡಿತನೊಂದಿಗೆ ಸಭಾಸ್ಥಳಕ್ಕೆ ಹೊರಟರು. ಮೊದಲು ಕಾಳೀ ಮಂದಿರಕ್ಕೆ ಹೋಗಿ ದೇವಿಗೆ ವಂದಿಸಿ ಹೊರಬಂದರು. ಆಗ ಅವರು ಭಕ್ತಿಭಾವದಲ್ಲಿ ಮೈಮರೆತಿದ್ದರು. ಅಷ್ಟರಲ್ಲೇ ವೈಷ್ಣವಚರಣನು ಬಂದು ಅವರ ಪಾದ ಕ್ಕೆರಗಿದನು. ಕೂಡಲೇ ಶ್ರೀರಾಮಕೃಷ್ಣರು ಭಾವಸಮಾಧಿಯನ್ನು ಪಡೆದರು. ಆ ಸ್ಥಿತಿ ಯಲ್ಲಿ ಅವರು ವೈಷ್ಣವಚರಣನ ಹೆಗಲೇರಿ ಕುಳಿತರು. ವೈಷ್ಣವಚರಣನು ತಾನು ಕೃತಾರ್ಥನೆಂದು ಭಾವಿಸಿ ಭಕ್ತಿಪರವಶತೆಯಲ್ಲಿ ಅಲ್ಲಿಯೇ ಸಂಸ್ಕೃತ ಭಾಷೆಯಲ್ಲಿ ಒಂದು ಸ್ತೋತ್ರವನ್ನು ರಚಿಸಿ ಶ್ರೀರಾಮಕೃಷ್ಣರನ್ನು ಸ್ತುತಿಸಿದನು. ಸಮಾಧಿಸ್ಥರಾದ ಶ್ರೀರಾಮಕೃಷ್ಣರ ಪ್ರಸನ್ನ ಉಜ್ವಲ ಮೂರ್ತಿ, ವೈಷ್ಣವಚರಣನು ಪ್ರೇಮಾನಂದದಿಂದ ಅವರನ್ನು ಸ್ತುತಿಸುತ್ತಿರುವುದು—ಈ ಅದ್ಭುತ ದೃಶ್ಯವನ್ನು ನೋಡಿ ಮಥುರ ಮುಂತಾದ ಇತರರು ಅತ್ಯಾಶ್ಚರ್ಯದಿಂದ ನೋಡುತ್ತ ಸುತ್ತಲೂ ನಿಂತಿದ್ದಾರೆ. ಸ್ವಲ್ಪ ಹೊತ್ತಿನ ನಂತರ ಶ್ರೀರಾಮಕೃಷ್ಣರು ಸಮಾಧಿ ಸ್ಥಿತಿಯಿಂದ ಕೆಳಗಿಳಿದರು. ಅನಂತರ ಎಲ್ಲರೂ ಮೆಲ್ಲಮೆಲ್ಲಗೆ ಸಭಾಸ್ಥಾನಕ್ಕೆ ಹೋದರು.

33. ಈಗ ಸಭೆ ಪ್ರಾರಂಭವಾಯಿತು. ಆದರೆ ಗೌರೀ ಪಂಡಿತನು ಮೊದಲೇ ಸಾರಿ ದನು : (ಶ್ರೀರಾಮಕೃಷ್ಣರನ್ನು ತೋರಿಸಿ) "ಇವರು ಪಂಡಿತಜೀಯ ಮೇಲೆ ಈ ರೀತಿ ಕೃಪೆ ತೋರಿಸಿದ ಮೇಲೆ ಇನ್ನು ನನಗೆ ಅವರೊಡನೆ (ವೈಷ್ಣವಚರಣನೊಡನೆ) ಚರ್ಚೆ ಮಾಡಲು ಮನಸ್ಸಾಗುತ್ತಿಲ್ಲ. ಚರ್ಚೆ ಮಾಡಿದರೂ ನಾನು ಸೋಲುವುದು ಖಂಡಿತ. ಏಕೆಂದರೆ ಅವರು (ವೈಷ್ಣವಚರಣನು) ಇಂದು ದೇವಬಲವನ್ನು ಪಡೆದಿರುವರು. ಅವರೂ (ವೈಷ್ಣವಚರಣನೂ) ನಮ್ಮಂತೆಯೇ ಎಂದೆನಿಸುತ್ತಿದೆ—ಶ್ರೀರಾಮಕೃಷ್ಣರ ಬಗ್ಗೆ ಅವರ ಅಭಿಮತದಂತೆಯೇ ನಮ್ಮದೂ ಕೂಡ, ಆದ್ದರಿಂದ ಈ ವಿಷಯದಲ್ಲಿ ತರ್ಕ ನಿಷ್ಪ್ರಯೋಜಕ". ಅನಂತರ ಬೇರೆ ಕೆಲವು ಶಾಸ್ತ್ರೀಯ ವಿಷಯಗಳ ಬಗೆಗಿನ ಚರ್ಚೆ ಯೊಂದಿಗೆ ಸಭೆ ಸಮಾಪ್ತಿಗೊಂಡಿತು.

ವೈಷ್ಣವಚರಣನ ಭಯದಿಂದ ಗೌರೀ ಪಂಡಿತನು ವಾದಯುದ್ಧದಲ್ಲಿ ತೊಡಗಲಿಲ್ಲ ವೆಂದು ಭಾವಿಸಬಾರದು. ಶ್ರೀರಾಮಕೃಷ್ಣರ ಚಲನ, ವಲನ, ಆಚಾರ, ವ್ಯವಹಾರ ಮುಂತಾದ ಲಕ್ಷಣಗಳನ್ನು ನೋಡಿ ಅವರು ಸಾಮಾನ್ಯರಲ್ಲ, ಮಹಾಪುರುಷರು ಎಂದು ಅವನ ಅನುಭವಕ್ಕೆ ಬಂದಿತ್ತು. ಏಕೆಂದರೆ ಇದಾದ ಕೆಲವು ದಿನಗಳನಂತರ ಶ್ರೀರಾಮ ಕೃಷ್ಣರು ಅವನನ್ನು ಪರೀಕ್ಷಿಸಲು ಒಂದು ಪ್ರಶ್ನೆ ಹಾಕಿದರು : "ವೈಷ್ಣವಚರಣನು (ತಮ್ಮ ಕಡೆ ಕೈ ತೋರಿಸಿ) ಇದನ್ನು ಒಂದು ಅವತಾರ ಎನ್ನುತ್ತಾನೆ. ಅದು ಸಾಧ್ಯವೆ ? ನಿನಗೆ ಏನೆನಿಸುತ್ತೆ, ಹೇಳು ನೋಡೋಣ ?"

ಗೌರೀ ಪಂಡಿತನು ಗಂಭೀರಭಾವದಿಂದ ಉತ್ತರಿಸಿದನು : "ವೈಷ್ಣವಚರಣನು ನಿಮ್ಮನ್ನು ಅವತಾರ ಎನ್ನುತ್ತಾನೆಯೆ ? ಅದೊಂದು ಸಣ್ಣ ಮಾತು. ನನ್ನ ವಿಶ್ವಾಸವೇ

ನೆಂದರೆ, ಯಾರ ಅಂಶದಿಂದ ಯುಗಯುಗವೂ ಅವತಾರ ಪುರುಷರು ಲೋಕಕಲ್ಯಾಣ ಕ್ಕಾಗಿ ಅವತರಿಸಿ ಬರುವರೊ, ಯಾರ ಶಕ್ತಿಯಿಂದ ಅವರು ಆ ಕೆಲಸವನ್ನು ಸಾಧಿಸು ವರೋ ನೀವು ಆ ಸತ್ಯವೇ ಆಗಿರುವಿರಿ." ಶ್ರೀರಾಮಕೃಷ್ಣರು ನಗುತ್ತ ಹೇಳಿದರು : "ನೀನು ಅವನನ್ನೂ ಮೀರಿ ಹೋಗಿದ್ದೀಯೆ! ಏಕೆ ಹೇಳು ? ನನ್ನಲ್ಲಿ ನೀನು ಏನು ಕಾಣುತ್ತೀಯೆ ?" ಗೌರಿಯು ಹೇಳಿದ : "ಶಾಸ್ತ್ರಪ್ರಮಾಣದಿಂದಲೂ ಮತ್ತು ನನ್ನ ಸ್ವಂತ ಅನುಭವದಿಂದಲೂ ನಾನು ಹೀಗೆ ಹೇಳುತ್ತೇನೆ. ಈ ವಿಷಯದಲ್ಲಿ ಯಾರ ದಾದರೂ ವಿರೋಧವಿದ್ದರೆ ಅವರು ನನ್ನೊಡನೆ ವಾದಕ್ಕೆ ಬರಲಿ, ನಾನು ಈ ಸಿದ್ಧಾಂತ ವನ್ನು ಸಮರ್ಥಿಸುತ್ತೇನೆ."

ಶ್ರೀರಾಮಕೃಷ್ಣರು ಬಾಲಕನಂತೆ ನುಡಿದರು : "ನೀವೆಲ್ಲ ಏನೇನೊ ಹೇಳುತ್ತೀರಿ. ಆದರೆ ನನಗೇನೂ ಅರ್ಥವಾಗುತ್ತಿಲ್ಲ."

ಗೌರೀ ಪಂಡಿತ : "ಅದು ಸರಿ. ಶಾಸ್ತ್ರವೂ ಅದನ್ನೇ ಹೇಳುತ್ತದೆ. ನಿಮಗೇ ನಿಮ್ಮ ವಿಚಾರ ತಿಳಿಯದು. ಆದ್ದರಿಂದ ಇತರರು ನಿಮ್ಮನ್ನು ತಿಳಿಯುವುದು ಹೇಗೆ ? ನೀವೇ ಕೃಪೆದೋರಿ ಯಾರಿಗಾದರು ತಿಳಿಸಿಕೊಟ್ಟರೆ ಅವರು ತಿಳಿಯಬಹುದು".

34. ಪಂಡಿತನ ವಿಶ್ವಾಸದ ಮಾತನ್ನು ಕೇಳಿ ಶ್ರೀರಾಮಕೃಷ್ಣರು ನಗತೊಡಗಿದರು. ದಿನಕಳೆದಂತೆಲ್ಲ ಗೌರಿಯು ಶ್ರೀರಾಮಕೃಷ್ಣರೆಡೆಗೆ ಹೆಚ್ಚು ಹೆಚ್ಚು ಆಕರ್ಷಿತನಾದನು. ಅವನ ಶಾಸ್ತ್ರಜ್ಞಾನ ಮತ್ತು ಸಾಧನೆಯ ಫಲ ಈಗ ಶ್ರೀರಾಮಕೃಷ್ಣರ ಸಂಗದಿಂದ ಪರಿಣತಿ ಯನ್ನು ಪಡೆದು ಅವನಿಗೆ ಸಂಸಾರದಲ್ಲಿ ತೀವ್ರ ವೈರಾಗ್ಯವುಂಟಾಯಿತು. ಪಾಂಡಿತ್ಯ, ಕೀರ್ತಿ, ಸಿದ್ಧಿ, ಇತ್ಯಾದಿಗಳಿಂದ ಕ್ರಮೇಣ ಅವನ ಮನಸ್ಸು ನಿವೃತ್ತಿಯನ್ನು ಪಡೆದು ಹೆಚ್ಚು ಹೆಚ್ಚು ಭಗವಂತನ ಕಡೆ ಹರಿಯತೊಡಗಿತು. ಈಗ ಅವನಲ್ಲಿ ಆ ಪಾಂಡಿತ್ಯದ ಅಹಂಕಾರವಿಲ್ಲ, ಆ ಡಾಂಭಿಕತೆ ಎಲ್ಲಿಯೊ ಹೊರಟುಹೋಯಿತು, ತರ್ಕದ ಬಯಕೆ ನಿಸ್ತಬ್ಧವಾಯಿತು. ಭಗವಂತನನ್ನು ಪಡೆಯುವ ಪ್ರಯತ್ನ ಮಾಡದೆ ಇಷ್ಟು ಸಮಯ ವ್ಯರ್ಥವಾಯಿತಲ್ಲ ಎಂದು ಮರುಗಿದನು. ಎಲ್ಲವನ್ನೂ ತ್ಯಜಿಸಿ ವ್ಯಾಕುಲ ಹೃದಯದಿಂದ ಭಗವಂತನನ್ನು ಕರೆಯುತ್ತ ಕೆಲವು ದಿನ ಕಳೆಯುವುದೆಂದು ಅವನು ದೃಢಸಂಕಲ್ಪ ಮಾಡಿ ದನು. ಇದರಿಂದ ಅವನ ಕೃಪೆ ಮತ್ತು ದರ್ಶನವನ್ನು ಪಡೆಯಬಹುದೆಂದು ಪಂಡಿತನು ಭಾವಿಸಿದನು,

ಹೀಗೆ ಶ್ರೀರಾಮಕೃಷ್ಣ ಸಂಗಸುಖದಲ್ಲಿ ಭಗವಚ್ಚಿಂತನೆಯಲ್ಲಿ ಅನೇಕ ದಿನಗಳು ಉರುಳಿದವು, ತಿಂಗಳುಗಳು ಉರುಳಿದವು. ಎಷ್ಟೋ ದಿನಗಳಾದರೂ ಮನೆಗೆ ಹಿಂದಿರು ಗದಿರಲು ಅವನ ಪತ್ನಿ ಪುತ್ರರಿಂದ ಮನೆಗೆ ಬರಬೇಕೆಂದು ಪತ್ರಗಳು ಬರತೊಡಗಿದವು. ದಕ್ಷಿಣೇಶ್ವರದ ಯಾವನೊ ಹುಚ್ಚ ಸಾಧುವಿನ ಸಹವಾಸದಿಂದ ಪಂಡಿತನ ಮನಸ್ಸು ಕೆಟ್ಟಿದೆಯೆಂದು ಅವರಿಗೆಲ್ಲ ಅಸ್ಪಷ್ಟ ಸುದ್ದಿ ತಲುಪಿತ್ತು. ಅವರ ಪತ್ರಗಳಿಂದ ಅವರು ದಕ್ಷಿಣೇಶ್ವರಕ್ಕೆ ಬಂದು ತನ್ನನ್ನು ಮನೆಗೆ ಎಳೆದುಕೊಂಡುಹೋಗಿ ಮತ್ತೆ ಸಂಸಾರದಲ್ಲಿ ಸಿಕ್ಕಿಸುವರೆಂದು ಗೌರೀ ಪಂಡಿತನಿಗೆ ಅನಿಸಿತು. ಇದರಿಂದ ತಪ್ಪಿಸಿಕೊಳ್ಳಲು ಅವನು ಬಹಳ

ಆಲೋಚನೆ ಮಾಡಿ ಅಲ್ಲಿಂದ ಹೊರಟುಹೋಗುವುದೆಂದು ನಿರ್ಧರಿಸಿದನು. ಶ್ರೀರಾಮ ಕೃಷ್ಣರೆಡೆಗೆ ಹೋಗಿ ಕಂಬನಿಗರೆಯುತ್ತ ಅವರ ಪಾದಕ್ಕೆರಗಿ ಅವರ ಅನುಮತಿಯನ್ನು ಕೇಳಿದನು. ಅವರು ಕೇಳಿದರು : "ಇದೇನು ಗೌರಿ ? ಇದ್ದಕ್ಕಿದ್ದಂತೆ ಹೊರಟುಬಿಟ್ಟೆ ಯಲ್ಲ ? ಎಲ್ಲಿಗೆ ಹೋಗುತ್ತೀಯೆ ?"

ಗೌರಿಯು ಕೈಜೋಡಿಸಿ ಉತ್ತರಿಸಿದನು : "ನನ್ನ ಅಭೀಷ್ಟ ಸಿದ್ಧಿಯಾಗಲೆಂದು ಆಶೀರ್ವದಿಸಿ. ಭಗವಂತನ ದರ್ಶನವನ್ನು ಪಡೆಯದೆ ನಾನು ಸಂಸಾರಕ್ಕೆ ಹಿಂದಿರುಗುವು ದಿಲ್ಲ" ಎಂದು ಹೇಳಿ ಹೊರಟುಹೋದ. ಅನಂತರ ಅವನ ವಿಷಯ ಎಷ್ಟೋ ವಿಚಾರಿಸಿ ದರೂ ಯಾರಿಗೂ ಏನೂ ತಿಳಿದು ಬರಲಿಲ್ಲ.

35. ಹೀಗೆ ಶ್ರೀರಾಮಕೃಷ್ಣರು ವೈಷ್ಣವಚರಣ ಮತ್ತು ಗೌರೀ ಪಂಡಿತ—ಇವರ ಬಗ್ಗೆ ಅನೇಕ ವಿಷಯವನ್ನು ನಮಗೆ ಹೇಳುತ್ತಿದ್ದರು. ಮತ್ತೆ ಕೆಲವೊಮ್ಮೆ ಕೆಲವು ವಿಷಯ ಗಳ ಬಗ್ಗೆ ಅವರ ಅಭಿಪ್ರಾಯವೇನಿತ್ತು ಎಂಬುದನ್ನೂ ನಮಗೆ ಹೇಳುತ್ತಿದ್ದರು. ಒಂದು ದಿನ ಶ್ರೀರಾಮಕೃಷ್ಣರು ಸಾಧಕಭಕ್ತನೊಬ್ಬನಿಗೆ ಉಪದೇಶಿಸುತ್ತ ಹೀಗೆ ಹೇಳಿದ್ದರು : "ಮನುಷ್ಯನಲ್ಲಿ ಯಾವಾಗ ಇಷ್ಟದೇವತೆಯನ್ನು ನೋಡಲು ಸಾಧ್ಯವಾಗುತ್ತದೊ ಆಗ ಭಗವಂತನು ದೊರೆಯುತ್ತಾನೆ. ವೈಷ್ಣವಚರಣನು ಹೇಳುತ್ತಿದ್ದ, ನರಲೀಲೆಯಲ್ಲಿ ವಿಶ್ವಾಸ ವುಂಟಾದರೆ ಆಗ ಪೂರ್ಣಜ್ಞಾನ ಲಭಿಸುವುದು ಎಂದು."

36. ಕೃಷ್ಣ ಮತ್ತು ಕಾಳಿ—ಇವರಲ್ಲಿ ಪ್ರತ್ಯೇಕತೆಯನ್ನು ಕಾಣುವ ಕೆಲವು ಭಕ್ತ ರನ್ನು ಉದ್ದೇಶಿಸಿ ಅವರು ಹೇಳುತ್ತಿದ್ದರು : "ನಿನ್ನದು ಎಂಥ ಹೀನ ಬುದ್ಧಿ ! ನಿನ್ನ ಇಷ್ಟದೇವತೆಯೇ ಕಾಳಿ, ಕೃಷ್ಣ, ಗೌರ ಎಲ್ಲ ಆಗಿರುವವನು ಎಂದು ತಿಳಿಯಬೇಕು. ಅಂದ ಮಾತ್ರಕ್ಕೆ ನೀನು ನಿನ್ನ ಇಷ್ಟದೇವತೆಯನ್ನು ಬಿಟ್ಟು ಗೌರನನ್ನು ಭಜಿಸಬೇಕೆಂದಲ್ಲ. ದ್ವೇಷಬುದ್ಧಿಯನ್ನು ಬಿಡಬೇಕು ಅಷ್ಟೆ. ನಿನ್ನ ಇಷ್ಟವೇ ಕೃಷ್ಣನಾಗಿರುವನು, ಗೌರನಾಗಿ ರುವನು—ಎಂಬ ದೃಢ ವಿಶ್ವಾಸ ಇರಬೇಕು. ನೋಡು, ಸೊಸೆ ಅತ್ತೆಯ ಮನೆಯಲ್ಲಿರು ವಾಗ ಮಾವ, ಅತ್ತೆ, ಭಾವ ಇವರೆಲ್ಲರ ಸೇವೆಯನ್ನೂ ಮಾಡುತ್ತಾಳೆ, ಎಲ್ಲರನ್ನೂ ಆದ ರಿಸುತ್ತಾಳೆ. ಆದರೆ ತನ್ನ ಪತಿಯೊಡನೆ ವಿಶೇಷ ಸಂಬಂಧವನ್ನು ಇಟ್ಟುಕೊಂಡಿರುತ್ತಾಳೆ— ಅವನಿಗೆ ಮಾತ್ರ ತನ್ನ ಮನಸ್ಸಿನಲ್ಲಿರುವುದನ್ನೆಲ್ಲ ಹೇಳುತ್ತಾಳೆ. ಪತಿಯ ಮೂಲಕವೇ ಅತ್ತೆ, ಮಾವ ಇವರೆಲ್ಲ ತನ್ನವರಾಗಿರುವುದು ಎಂಬುದು ಅವಳಿಗೆ ಗೊತ್ತು. ಹೀಗೆಯೇ ತನ್ನ ಇಷ್ಟವನ್ನು ಆ ರೀತಿ ಪತಿಯಂತೆ ಭಾವಿಸಬೇಕು. ಇಷ್ಟದೇವತೆಯ ಸಂಬಂಧದ ಮೂಲಕವೇ ಅವನ ಇತರ ರೂಪಗಳೊಡನೆ ಸಂಬಂಧ ಉಂಟಾಗಬೇಕು—ಆ ಎಲ್ಲ ರೂಪ ಗಳನ್ನೂ ಶ್ರದ್ಧಾಭಕ್ತಿಯಿಂದ ಕಾಣಬೇಕು, ತಿಳಿಯಿತೆ ? ಈ ರೀತಿಯ ಜ್ಞಾನದಿಂದ ದ್ವೇಷಬುದ್ಧಿಯನ್ನು ಬಿಡಬೇಕು. ಗೌರಿಯು ಹೇಳುತ್ತಿದ್ದ : 'ಕಾಳೀ ಮತ್ತು ಗೌರಾಂಗ ಇವರಿಬ್ಬರೂ ಒಂದೇ ಎಂಬ ತಿಳಿವಳಿಕೆ ಉಂಟಾದರೆ ಆಗ ನಿಜವಾದ ಜ್ಞಾನವುಂಟಾಗಿದೆ ಎಂದು ತಿಳಿಯಬಹುದು.'"

37. ಕೆಲವು ಭಕ್ತರಿಗೆ ಸಂಸಾರದಲ್ಲಿ ಯಾರ ಮೇಲಾದರೂ ತೀವ್ರ ಪ್ರೀತಿ ಇರು

ವುದರಿಂದ ಮನಸ್ಸನ್ನು ಭಗವಂತನ ಕಡೆಗೆ ಹರಿಸಲಾಗುವುದಿಲ್ಲ. ಅಂಥವರಿಗೆ ಶ್ರೀರಾಮ ಕೃಷ್ಣರು ತಮ್ಮ ಪ್ರೀತಿಯ ವ್ಯಕ್ತಿಯನ್ನೇ ಭಗವಂತನೆಂದು ಭಾವಿಸಿ ಸೇವಿಸಬೇಕೆಂದು ಹೇಳುತ್ತಿದ್ದರು. ಒಬ್ಬಳು ಸ್ತ್ರೀಭಕ್ತೆ ಎಳೆಯ ವಯಸ್ಸಿನ ಸೋದರಳಿಯನನ್ನು ತುಂಬ ಪ್ರೀತಿಸುತ್ತಿದ್ದಳು. ಆ ಮಗುವನ್ನೇ ಬಾಲಗೋಪಾಲನೆಂದು ಭಾವಿಸಿ ಅವನನ್ನು ಪ್ರೀತಿ ಯಿಂದ ಸೇವಿಸು ಎಂದು ಶ್ರೀರಾಮಕೃಷ್ಣರು ಉಪದೇಶಿಸಿದ್ದರು. ಇದರಿಂದ ಅವಳು ಬಹುಬೇಗನೆ ಭಾವಸಮಾಧಿಯನ್ನು ಪಡೆದಿದ್ದಳು. ಈ ಪ್ರಸಂಗವನ್ನು ಮೊದಲೇ ವಿವರಿ ಸಿದ್ದೇವೆ (ಪೂರ್ವಾರ್ಧ, ಪ್ರಥಮ ಅಧ್ಯಾಯ). ನಮ್ಮ ಪ್ರೀತಿಗೆ ಪಾತ್ರನಾದ ವ್ಯಕ್ತಿ ಯನ್ನೇ ಭಗವಂತನೆಂದು ತಿಳಿದು ಶ್ರದ್ಧಾ ಭಕ್ತಿಯನ್ನು ತೋರಿಸುವ ವಿಷಯವಾಗಿ ಮಾತನಾಡುತ್ತ ಶ್ರೀರಾಮಕೃಷ್ಣರು ಈ ವಿಷಯದಲ್ಲಿ ವೈಷ್ಣವಚರಣನ ಅಭಿಪ್ರಾಯ ವನ್ನು ಉಲ್ಲೇಖಿಸುತ್ತಿದ್ದರು : "ವೈಷ್ಣವಚರಣನು ಹೇಳುತ್ತಿದ್ದ, ಯಾರನ್ನು ಪ್ರೀತಿಸು ತ್ತೇವೆಯೋ ಅವನನ್ನೇ ಇಷ್ಟವೆಂದು ಭಾವಿಸಿದರೆ ಮನಸ್ಸು ಬೇಗ ಭಗವಂತನೊಡನೆ ಹರಿಯುತ್ತದೆ ಎಂದು. ಆ ಸಂಪ್ರದಾಯದ ಸ್ತ್ರೀಯರಿಗೆ ಅವನು ಆ ರೀತಿ ಮಾಡಲು ಹೇಳುತ್ತಿದ್ದ. ಆದ್ದರಿಂದ ಅದು ದೂಷಣೀಯವಾಗುತ್ತಿರಲಿಲ್ಲ. ಅವರ ಭಾವವೇ ಬೇರೆ. ಸ್ತ್ರೀಗೆ ತನ್ನ ಉಪಪತಿಯ ಕಡೆ ಯಾವ ರೀತಿ ಆಕರ್ಷಣೆ ಇರುವುದೋ ಅದೇ ಆಕರ್ಷಣೆ ಯನ್ನು ಭಗವಂತನ ಕಡೆ ಹರಿಸಬೇಕೆಂಬುದು ಅವರ ವಿಚಾರ." ಇದು ಜನಸಾಧಾರಣರಿಗೆ ಬೋಧಿಸುವ ವಿಷಯವಲ್ಲ ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು, "ಅದರಿಂದ ವ್ಯಭಿಚಾರ ವೃದ್ಧಿಯಾಗುತ್ತದೆ" ಎನ್ನುತ್ತಿದ್ದರು ಅವರು. ತನ್ನ ಪತಿ, ಪುತ್ರ ಅಥವಾ ಇತರ ಸಂಬಂಧಿಕರನ್ನು ಭಗವದ್ಭಾವದಿಂದ ಸೇವಿಸುವುದನ್ನು ಮಾತ್ರ ಅವರು ಅಲ್ಲಗಳೆ ಯಲಿಲ್ಲ. ತಮ್ಮ ಅನೇಕ ಭಕ್ತರಿಗೆ ಅವರು ಆ ರೀತಿ ಮಾಡಲು ಉಪದೇಶಿಸುತ್ತಿದ್ದರು.

38. ಇದನ್ನು ಯೋಚಿಸಿನೋಡಿದಾಗ ಇದೊಂದು ಅಶಾಸ್ತ್ರೀಯವಾದ ಹೊಸ ಮಾರ್ಗ ಎಂದು ಕಂಡುಬರುವುದಿಲ್ಲ. ಉಪನಿಷತ್ ಋಷಿಯಾದ ಯಾಜ್ಞವಲ್ಕ್ಯನು ಮೈತ್ರೇಯಿಗೆ ಹೀಗೆ ಉಪದೇಶಿಸುತ್ತಾನೆ : ಪತಿಯಲ್ಲಿ ಆತ್ಮಸ್ವರೂಪನಾದ ಭಗವಂತನು ಇರುವುದರಿಂದಲೇ ಪತ್ನಿಗೆ ಪತಿಯು ಪ್ರಿಯವಾಗಿರುವುದು. ಪತ್ನಿಯಲ್ಲಿ ಅವನು ಇರುವು ದರಿಂದಲೇ ಪತಿಗೆ ಪತ್ನಿಯ ಕಡೆ ಅಷ್ಟೊಂದು ಆಕರ್ಷಣೆ. ಹೀಗೆ ಬ್ರಾಹ್ಮಣ, ಕ್ಷತ್ರಿಯ, ಐಶ್ವರ್ಯ, ಪೃಥ್ವಿಯ ಎಲ್ಲ ವಸ್ತುಗಳು ನಮಗೆ ಪ್ರಿಯವೆನಿಸುವುದು, ಅವುಗಳಲ್ಲಿ ಪ್ರಿಯಸ್ವರೂಪನಾದ, ಆನಂದಸ್ವರೂಪನಾದ ಭಗವಂತನ ಅಂಶ ಇರುವುದರಿಂದ. ಹೀಗೆ ನಮ್ಮ ಪ್ರೀತಿಯ ವಸ್ತುವಿನಲ್ಲಿ ಭಗವಂತನನ್ನು ಕಾಣಬೇಕೆಂದು ಪ್ರಾಚೀನ ಕಾಲದಿಂದಲೂ ಉಪನಿಷತ್ ಋಷಿಗಳು ನಮಗೆ ಉಪದೇಶಿಸುತ್ತಿರುವರು. ನಾರದಾದಿ ಆಚಾರ್ಯರೂ ಕೂಡ ಕಾಮಕ್ರೋಧಾದಿಗಳನ್ನೂ ಭಗವಂತನ ಕಡೆ ಹರಿಸಬೇಕೆಂದು ಮತ್ತು ಸಖ್ಯ ವಾತ್ಸಲ್ಯ ಮಧುರಾದಿ ಭಾವಗಳನ್ನು ಆಶ್ರಯಿಸಿ ಭಗವಂತನನ್ನು ಕರೆಯಬೇಕೆಂದು ಉಪ ದೇಶಿಸುತ್ತಾರೆ. ಹೀಗೆ ಅವರೂ ಕೂಡ ಉಪನಿಷತ್ ಋಷಿಗಳನ್ನೇ ಅನುಸರಿಸಿರುವರು, ಎಂಬುದು ಸ್ಪಷ್ಟ. ಆದ್ದರಿಂದ ಈ ವಿಷಯದಲ್ಲಿ ಶ್ರೀರಾಮಕೃಷ್ಣರ ಅಭಿಪ್ರಾಯ ಶಾಸ್ತ್ರ ಸಮ್ಮತವಾದುದು ಎಂಬುದು ಸುಸ್ಪಷ್ಟ.

39. ಅವತಾರ ಪುರುಷರು ಹಿಂದಿನ ಶಾಸ್ತ್ರಗಳನ್ನು ಗೌರವಿಸಿ ಅವುಗಳಿಗೆ ಅವಿರೋಧವಾದ ಹೊಸ ಮಾರ್ಗವನ್ನು ಧರ್ಮಜಗತ್ತಿನಲ್ಲಿ ತೋರಿಸಿಕೊಡುವರು ಎಂಬುದನ್ನು ಮತ್ತೆ ಹೇಳಬೇಕಾಗಿಲ್ಲ. ಯಾವುದೇ ಅವತಾರ ಪುರುಷರ ಜೀವನವನ್ನು ಕುರಿತು ಆಲೋಚಿಸಿದಾಗಲೂ ಈ ವಿಷಯ ನಮಗೆ ಸ್ಪಷ್ಟವಾಗುತ್ತದೆ. ವರ್ತಮಾನ ಯುಗಾವತಾರರಾದ ಶ್ರೀರಾಮಕೃಷ್ಣರೂ ಎಲ್ಲ ವಿಷಯದಲ್ಲಿಯೂ ಶಾಸ್ತ್ರವನ್ನು ಅನುಸರಿಸಿದುದನ್ನು ನಾವು ನೋಡುತ್ತೇವೆ. ಈ ವಿಷಯವನ್ನೇ 'ಲೀಲಾಪ್ರಸಂಗ'ದಲ್ಲಿ ತಿಳಿಸಿಕೊಡಲು ನಾವು ಪ್ರಯತ್ನಿಸುತ್ತಿರುವುದು. ಇದರಲ್ಲಿ ನಾವು ವಿಫಲರಾದರೆ ನಮ್ಮ ಸಂಕುಚಿತ ಬುದ್ಧಿಯೇ ಇದಕ್ಕೆ ಕಾರಣ. 'ಎಷ್ಟು ಮತಗಳೊ ಅಷ್ಟು ಪಥಗಳು' ಎಂದು ಅಪೂರ್ವ ಸತ್ಯವನ್ನು ತೋರಿಸಿಕೊಟ್ಟು ಜನಸಾಧಾರಣರನ್ನು ಮುಗ್ಧಗೊಳಿಸಿದ ಶ್ರೀರಾಮಕೃಷ್ಣರ ನ್ಯೂನತೆಯಾಗಲಿ ದೋಷವಾಗಲಿ ಇದರಲ್ಲಿ ಇಲ್ಲ. ನಾವು ಕರ್ತಾಭಜದಂತಹ ಸಂಪ್ರದಾಯಗಳನ್ನು ನೋಡಿ ಅಸಹ್ಯಪಟ್ಟುಕೊಳ್ಳುತ್ತೇವೆ. ಇದಕ್ಕೆ ಪಾಶ್ಚಾತ್ಯರ ಅನುಕರಣೆಯೇ ಕಾರಣ. ಪಾಶ್ಚಾತ್ಯರಾದರೊ ಇತರ ಸಂಸ್ಕೃತಿಯನ್ನು ಅಳೆಯುವಾಗಲೇ ಒಂದು ಪ್ರಮಾಣವನ್ನು ಅನುಸರಿಸುತ್ತಾರೆ ಮತ್ತು ತಮ್ಮದಕ್ಕೇ ಇನ್ನೊಂದು ಪ್ರಮಾಣವನ್ನು. ಆದರೆ ಶ್ರೀರಾಮಕೃಷ್ಣರು ಉನ್ನತ ವೇದಾಂತದಿಂದ ಹಿಡಿದು ಕೀಳುಮಟ್ಟದ ಕರ್ತಾಭಜದವರೆಗೆ ಎಲ್ಲ ಸಂಪ್ರದಾಯಗಳಿಗೂ ಮಾನ್ಯತೆ ನೀಡಿದರು, ಅವೆಲ್ಲವೂ ಬೇರೆ ಬೇರೆ ಮನೋಭಾವದ ಮತ್ತು ಸಾಮರ್ಥ್ಯವುಳ್ಳ ವ್ಯಕ್ತಿಗಳಿಗೆ ಸೂಚಿಸಲ್ಪಟ್ಟ ಮಾರ್ಗಗಳು ಎಂದು ಅವರು ಗೌರವಿಸಿದರು. ದ್ವೇಷಮನೋಭಾವದಿಂದ ನಮ್ಮಲ್ಲಿ ಕೆಲವರು ಅವರನ್ನು ಕೇಳುತ್ತಿದ್ದರು : "ಮಹಾಶಯರೇ, ಬ್ರಾಹ್ಮಣಿಯಂತಹ ಉನ್ನತ ಮಟ್ಟದ ಅಧಿಕಾರಿಯೂ ಪಂಚಮಕಾರ ಸಾಧನೆ ಮಾಡುತ್ತಿದ್ದುದು ಹೇಗೆ ಸಾಧ್ಯ ?" ; ಅಥವಾ "ಅಂಥ ದೊಡ್ಡ ಭಕ್ತನೂ ಪಂಡಿತನೂ ಆದ ವೈಷ್ಣವಚರಣನು ಉಪಪತ್ನಿಯನ್ನು ಸಾಧನೆಯ ಅಂಗವಾಗಿ ಸ್ವೀಕರಿಸುವುದು ಹೇಗೆ ಸಾಧ್ಯ ?"

ಶ್ರೀರಾಮಕೃಷ್ಣರು ಉತ್ತರಿಸುತ್ತಿದ್ದರು : "ಅದರಲ್ಲಿ ಅವರದು ತಪ್ಪಿಲ್ಲ. ಅದೂ ಒಂದು ಭಗವಂತನನ್ನು ಪಡೆಯುವ ಮಾರ್ಗ ಎಂಬ ಸಂಪೂರ್ಣ ವಿಶ್ವಾಸ ಅವರಲ್ಲಿತ್ತು. ಭಗವಂತನನ್ನು ಪಡೆಯಬಹುದೆಂಬ ತುಂಬು ವಿಶ್ವಾಸದಿಂದ ಸರಳ ಮನಸ್ಸಿನಿಂದ ಹಿಡಿದ ಮಾರ್ಗವನ್ನು ತಪ್ಪು ಎನ್ನಲಾಗುವುದಿಲ್ಲ, ಅದನ್ನು ನಿಂದಿಸುವುದು ಸರಿಯಲ್ಲ. ಯಾರ ಭಾವವನ್ನೂ ನಷ್ಟಗೊಳಿಸಬಾರದು. ಯಾವುದೇ ಮಾರ್ಗವನ್ನಾದರೂ ಸರಿಯಾಗಿ ಹಿಡಿದು ಮುಂದುವರಿದರೆ ಭಗವಂತನನ್ನು ಪಡೆಯಬಹುದು. ಅವರವರ ಭಾವಕ್ಕೆ ಅನುಗುಣವಾಗಿ ಭಗವಂತನನ್ನು ಕರೆಯಲಿ. ಯಾರ ಭಾವವನ್ನೂ ನಿಂದಿಸಬಾರದು, ಅಥವಾ ಇತರರ ಭಾವವನ್ನು ತನ್ನದೆಂದು ಸ್ವೀಕರಿಸಲೂ ಬಾರದು." ಹೀಗೆ ಹೇಳಿ ಸದಾನಂದಮಯ ಶ್ರೀರಾಮಕೃಷ್ಣರು ಈ ಕೆಳಗಿನ ಹಾಡನ್ನು ಹಾಡುತ್ತಿದ್ದರು :

ನಿನ್ನೊಳಗೇ ನೀನಿರು ಮನವೇ
ಅನ್ಯಾಶ್ರಯದೊಳಗರಸದಿರು,
ನೀನಾವುದನೀತೆರ ಹುಡುಕತಲಿಹೆಯೊ
ಅದೆ ನಿನ್ನೆದೆಯೊಳಗಡಗಿರಲು

ಹೃದಯದ ಕರೆಗೋಗೊಡುವನು ಅವನು
ಸರ್ವಸಿದ್ಧಿಗಳ ಸ್ಪರುಶ ಮಣಿ !
ನಿನ್ನ ಎದೆಯೊಳೇ ಹುದುಗಿದೆ ಕಾಣೋ
ಸಕಲೈಶ್ವರ್ಯದ ರನ್ನಗಣಿ !

ಮುತ್ತುರತುನಗಳೋ ಪಚ್ಚೆಹರಳುಗಳೊ
ಹೃದಯ ಮಂದಿರದ ಅಂಗಳದಿ
ಚದುರಿ ಬಿದ್ದಿರಲು, ಎಲ್ಲಿ ಹುಡುಕುತಿಹೆ
ಮರುಳನಂತೆ ಅನ್ಯಾಶ್ರಯದಿ ?

## ಎರಡನೆಯ ಅಧ್ಯಾಯ

# ಗುರುಭಾವ ಮತ್ತು ವಿವಿಧ ಸಾಧು ಸಂಪ್ರದಾಯಗಳು

ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥
(ಭಗವದ್ಗೀತೆ, 10.8)

ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥
(ಭಗವದ್ಗೀತೆ 10. 11)

"ನಾನೇ ಎಲ್ಲವನ್ನೂ ಸೃಷ್ಟಿಸುವವನು, ನನ್ನಿಂದಲೇ ಎಲ್ಲವೂ ಉದ್ಭವಿಸುತ್ತಿವೆ—ಹೀಗೆ ನನ್ನನ್ನು ಅರಿತುಕೊಂಡು ಭಾವಮಯರಾದ ಜ್ಞಾನಿಗಳು ನನ್ನನ್ನು ಭಜಿಸುತ್ತಾರೆ . . . ಅವರ ಮೇಲಿನ ಕರುಣೆಯಿಂದ ಅವರ ಹೃದಯದಲ್ಲಿ ವಾಸಿಸುವ ನಾನು, ಜ್ಞಾನರೂಪದ ಪ್ರಕಾಶಮಯ ದೀಪದಿಂದ ಅವರ ಅಜ್ಞಾನಾಂಧಕಾರವನ್ನು ನಾಶಗೊಳಿಸುತ್ತೇನೆ.

1. ಶ್ರೀರಾಮಕೃಷ್ಣರು ಬೇರೆ ಬೇರೆ ಸಾಧುಗಳನ್ನು ಹೇಗೆ ಸಂಧಿಸಿದರು ? 2. ಸಾಧುಗಳಿಗೆ ತಂಗಲು ಅನುಕೂಲ ಸ್ಥಳ ಯಾವುದು 3. ದಕ್ಷಿಣೇಶ್ವರ ಸಾಧುಗಳಿಗೆ ಪ್ರಶಸ್ತ ಸ್ಥಳವಾಗಿತ್ತು 4. ಸಾಧುಗಳ ವೇದಾಂತ ವಿಚಾರ 5. ಕೆಲವು ಸಾಧುಗಳು ಉನ್ನತ ಭಗವದಾನಂದದ ಸ್ಥಿತಿಯನ್ನು ಮುಟ್ಟಿದ್ದರು 6. ದಿವ್ಯಜ್ಞಾನದಿಂದ ಉನ್ಮತ್ತನಾದ ಸಾಧು 7. ಪರಮಹಂಸನ ಲಕ್ಷಣಗಳು 8. ರಾಮಾವತ್ ಸಾಧುಗಳು ದಕ್ಷಿಣೇಶ್ವರಕ್ಕೆ ಬಂದುದು 9. ರಾಮಲಾಲ ಮೂರ್ತಿಯ ಕಥೆ 10. ರಾಮಲಾಲನ ಬಗ್ಗೆ ಕೇಳಿದಾಗ ನಮಗೆ ಏನನಿಸಿತು 11. ನಾವು ಆಧುನಿಕ ವಿಜ್ಞಾನಕ್ಕೆ ಮಾರು ಹೋಗಿರುವೆವು 12. ಕಾಪಾಲಿಕರ ಸಕಾಮಧರ್ಮ ಪ್ರಚಾರದ ಫಲ 13. ಶ್ರೀರಾಮಕೃಷ್ಣರ ಅದ್ಭುತ ತ್ಯಾಗ ಮತ್ತು ಅದರ ಪ್ರಚಾರದಿಂದ ಸಂಸಾರಿಗಳಿಗೆ ಭಯ 14. ರಾಮಲಾಲ ಶಾಶ್ವತವಾಗಿ ಶ್ರೀರಾಮಕೃಷ್ಣರೊಡನೆ ಉಳಿದನು 15. ಶ್ರೀರಾಮಕೃಷ್ಣರ ದಿವ್ಯಸಂಗದಲ್ಲಿ ನಿಃಸ್ವಾರ್ಥಪ್ರೇಮವನ್ನು ಅನುಭವಿಸಿದುದು 16. ರಾಮನಾಮದಲ್ಲಿ ಒಬ್ಬ ಸಾಧುವಿಗಿದ್ದ ಶ್ರದ್ಧೆ 17. ರಾಮಾವತ್ ಸಾಧುಗಳ ಭಕ್ತಿಗೀತೆಗಳು 18. ಎಲ್ಲ ಸಂಪ್ರದಾಯದ ಸಾಧುಗಳಿಗೆ ಸಾಧನೆಗೆ ಅವಶ್ಯಕ ವಸ್ತುಗಳನ್ನು ಒದಗಿಸಬೇಕೆಂಬ ಶ್ರೀರಾಮಕೃಷ್ಣರ ಇಚ್ಛೆ 19. 'ಸಿದ್ಧಿ' 'ಕಾರಣ' ಮುಂತಾದ ಶಬ್ದವನ್ನು ಕೇಳಿದಾಕ್ಷಣ ಅವರು ಸಮಾಧಿಸ್ಥರಾಗುತ್ತಿದ್ದರು 20. ಅವರ ದಿವ್ಯೋನ್ಮತ್ತತೆಗೆ ಸಂಬಂಧಿಸಿದ ಕೆಲವು ಘಟನೆಗಳು 21. ದಕ್ಷಿಣೇಶ್ವರಕ್ಕೆ ಬಂದ ಸಾಧುಗಳೆಲ್ಲರೂ ಸಾಧನೆಯ ವಿಷಯದಲ್ಲಿ ಶ್ರೀರಾಮಕೃಷ್ಣರಿಂದ ಸಹಾಯ ಪಡೆದರು 22. ಶ್ರೀರಾಮಕೃಷ್ಣರು ಯಾವ ಮತದಲ್ಲಿ ಸಿದ್ಧಿಯನ್ನು ಪಡೆಯುತ್ತಿದ್ದರೊ ಆಗ ಅದೇ ಸಂಪ್ರದಾಯದ

ಸಾಧುಗಳು ಅವರೆಡೆಗೆ ಬರುತ್ತಿದ್ದರು 23. ಅವತಾರ ಶಕ್ತಿಯಲ್ಲಿ ತಾರತಮ್ಯವಿದ್ದರೂ ಅವತಾರ ಪುರುಷರೆಲ್ಲರೂ ಪರಸ್ಪರ ಪೂರಕವಾಗಿರುವರು 24. ಎಲ್ಲ ಸಂಪ್ರದಾಯದ ಸಾಧುಗಳು ಮತ್ತು ಸಾಧಕರು ಶ್ರೀರಾಮಕೃಷ್ಣರೆಡೆಗೆ ಬರಲು ಕಾರಣ 25. ಸಾಧು ಸಂಗದಿಂದ ಶ್ರೀರಾಮಕೃಷ್ಣರಲ್ಲಿ ಆಧ್ಯಾತ್ಮಿಕ ಪ್ರವೃತ್ತಿ ಜಾಗ್ರತವಾಯಿತು ಎಂಬುದು ಸರಿಯಲ್ಲ 26. ಅವರು ಸಮಾಧಿಯಲ್ಲಿ ಬಾಹ್ಯಪ್ರಜ್ಞೆಯನ್ನು ಕಳೆದುಕೊಳ್ಳುವುದು ವ್ಯಾಧಿಯಲ್ಲ–ಅವರು ಮತ್ತು ಶಿವನಾಥರ ಸಂವಾದ 27. ಸಾಧನೆಯ ಸಮಯದಲ್ಲಿ ಅವರು ಉನ್ಮತ್ತರಂತೆ ವರ್ತಿಸುತ್ತಿದ್ದುದಕ್ಕೆ ಕಾರಣ 28. ದಕ್ಷಿಣೇಶ್ವರಕ್ಕೆ ಬರುತ್ತಿದ್ದ ಸಾಧಕರು ಕೆಲವರು ಶ್ರೀರಾಮಕೃಷ್ಣರಿಂದ ದೀಕ್ಷೆಯನ್ನೂ ಪಡೆದಿದ್ದರು-ಉದಾಹರಣೆಗೆ ನಾರಾಯಣಶಾಸ್ತ್ರಿ 29. ಅವನ ಅಧ್ಯಯನ ಸಮಾಪ್ತಿ ಮತ್ತು ಶ್ರೀರಾಮಕೃಷ್ಣರ ದರ್ಶನ 30. ಅವರ ದಿವ್ಯ ಸಂಪರ್ಕದಿಂದ ಅವನಲ್ಲಿ ಪರಿವರ್ತನೆ 31. ಮೈಕೇಲ್ ಮಧುಸೂದನನ ಮೇಲೆ ಅವನ ಕೋಪ 32. ಶಾಸ್ತ್ರಿಯು ತನ್ನ ಅಭಿಪ್ರಾಯವನ್ನು ಗೋಡೆಯ ಮೇಲೆ ಬರೆದುದು 33. ಶಾಸ್ತ್ರಿಯ ಸಂನ್ಯಾಸ ದೀಕ್ಷೆ ಮತ್ತು ಸಾಧನೆ 34. ಸಾಧು ಮತ್ತು ಸಾಧಕರನ್ನು ನೋಡುವುದು ಶ್ರೀರಾಮಕೃಷ್ಣರ ಸ್ವಭಾವ ವಾಗಿತ್ತು 35. ಬಂಗಾಳದಲ್ಲಿ ನ್ಯಾಯದರ್ಶನ ಪ್ರಚಲಿತವಾದುದಕ್ಕೆ ಕಾರಣ 36. ವೇದಾಂತ ಪಂಡಿತ ಪದ್ಮಲೋಚನ 37. ಪಂಡಿತನ ಅದ್ಭುತ ಪ್ರತಿಭೆಯ ಒಂದು ದೃಷ್ಟಾಂತ : 'ಶಿವ ದೊಡ್ಡವನೆ, ವಿಷ್ಣು ದೊಡ್ಡವನೆ ?' 38. ಪಂಡಿತನ ಭಗವತ್ ಪ್ರೀತಿ 39. ಶ್ರೀರಾಮಕೃಷ್ಣರ ಮಾನಸಿಕ ಸ್ವಭಾವ 40. ಪಂಡಿತನಿಗೆ ಶ್ರೀರಾಮ ಕೃಷ್ಣರ ಪ್ರಥಮ ದರ್ಶನ 41. ಪಂಡಿತನ ಪವಾಡಶಕ್ತಿ ಶ್ರೀರಾಮಕೃಷ್ಣರಿಗೆ ತಿಳಿ ದಿತ್ತು 42. ಪಂಡಿತನಿಗೆ ಶ್ರೀರಾಮಕೃಷ್ಣರ ಮೇಲಿದ್ದ ಭಕ್ತಿ 43. ದಯಾನಂದರ ಬಗ್ಗೆ ಶ್ರೀರಾಮಕೃಷ್ಣರು 44. ಪಂಡಿತ ಜಯನಾರಾಯಣ 45. ರಾಮಭಕ್ತ ಕೃಷ್ಣ ಕಿಶೋರ.

1. ಶ್ರೀರಾಮಕೃಷ್ಣರು ಒಮ್ಮೆ ನಮಗೆ ಹೇಳಿದರು : "ಕೇಶವಸೇನನು ಬಂದ ಮೇಲೆ ನಿಮ್ಮಂತಹ ಬಂಗಾಳಿ ಯುವಕರು ಇಲ್ಲಿಗೆ (ತಮ್ಮೆಡೆಗೆ) ಬರತೊಡಗಿದರು. ಅದಕ್ಕೂ ಮೊದಲು ಎಷ್ಟೋಂದು ಸಾಧು–ಸಂತರು, ತ್ಯಾಗಿ–ಸಂನ್ಯಾಸಿಗಳು, ವೈರಾಗಿಗಳು ಇವರೆಲ್ಲ ಇಲ್ಲಿಗೆ ಬರುತ್ತಿದ್ದರು ಗೊತ್ತೇನು ? ರೈಲು ಶುರುವಾದ ಮೇಲೆ ಅವರು ಈ ಕಡೆ ಬರುವುದು ನಿಂತಿತು. ರೈಲು ಬರುವುದಕ್ಕೆ ಮುಂಚೆ ಅನೇಕ ಸಾಧುಗಳು ಈ ಮೂಲಕ ಗಂಗಾ ಸಾಗರದಲ್ಲಿ ಸ್ನಾನ ಮಾಡಲು ಮತ್ತು ಶ್ರೀಜಗನ್ನಾಥ ದರ್ಶನಕ್ಕೆ ನಡೆದು ಕೊಂಡು ಹೋಗುತ್ತಿದ್ದರು. ಅವರೆಲ್ಲರೂ ರಾಸಮಣಿ ತೋಟದಲ್ಲಿ ಎರಡು ಮೂರು ದಿನಗಳಂತೂ ಇದ್ದೇ ಇರುತ್ತಿದ್ದರು. ಕೆಲವರು ಹೆಚ್ಚುಕಾಲ ತಂಗುತ್ತಿದ್ದರು. ಏಕೆ ಗೊತ್ತೆ ? ಎಲ್ಲಿ ಭಿಕ್ಷೆ ಸರಿಯಾಗಿ ಸಿಕ್ಕುವುದಿಲ್ಲವೊ ಮತ್ತು ಶೌಚಾದಿಗಳಿಗೆ ಯೋಗ್ಯ ಸ್ಥಳ ವಿಲ್ಲವೊ ಅಲ್ಲಿ ಸಾಧುಗಳು ತಂಗುವುದಿಲ್ಲ, ಅವರು ಭಿಕ್ಷೆಯಿಂದಲೇ ಜೀವಿಸುತ್ತಾರೆ. ಆದ್ದ ರಿಂದ ಎಲ್ಲಿ ಭಿಕ್ಷೆ ದೊರೆಯುವುದೊ ಅಲ್ಲಿ ತಳವೂರುತ್ತಾರೆ.

2. "ಕೆಲವೊಮ್ಮೆ ನಡೆದು ನಡೆದು ಸುಸ್ತಾದಾಗ ಯಾವುದಾದರೂ ಸ್ಥಳದಲ್ಲಿ, ಅಲ್ಲಿ ಭಿಕ್ಷೆ ಸಿಗುವುದು ಕಷ್ಟವಾದರೂ ಸಹಿಸಿಕೊಂಡು, ಒಂದೆರಡು ದಿನ ಉಳಿದುಕೊಳ್ಳುತ್ತಾರೆ.

ಆದರೆ ಎಲ್ಲಿ ನೀರಿನ ಅಭಾವವಿದೆಯೊ, ಶೌಚಾದಿಗಳಿಗೆ ನಿರ್ಜನಪ್ರದೇಶವಿಲ್ಲವೊ ಅಂತಹ ಸ್ಥಳದಲ್ಲಿ ಅವರು ಎಂದೂ ತಂಗುವುದಿಲ್ಲ. ಉತ್ತಮ ಸಾಧುಗಳು ಶೌಚಾದಿಗಳನ್ನು ಎಲ್ಲರೂ ಮಾಡುವ ಸ್ಥಳದಲ್ಲಿ ಅಥವಾ ಇತರರಿಗೆ ಕಾಣುವ ಪ್ರದೇಶದಲ್ಲಿ ಮಾಡುವುದಿಲ್ಲ. ಅವರು ಬಹುದೂರ ನಿರ್ಜನ ಪ್ರದೇಶಕ್ಕೆ ಅದಕ್ಕಾಗಿ ಹೋಗುತ್ತಾರೆ. ಸಾಧುಗಳು ಹೇಳು ತ್ತಿದ್ದ ಒಂದು ಕಥೆಯನ್ನು ಕೇಳಿ :

"ಒಬ್ಬ ವ್ಯಕ್ತಿಯು ಉತ್ತಮ ತ್ಯಾಗಿಯಾದ ಸಾಧುವೊಬ್ಬನನ್ನು ನೋಡಬೇಕೆಂದು ಹುಡುಕುತ್ತಿದ್ದನು. ಯಾವ ಸಾಧುವು ಜನಾಕೀರ್ಣಪ್ರದೇಶದಿಂದ ಬಹುದೂರ ಹೋಗಿ ಶೌಚಾದಿಗಳನ್ನು ಮಾಡುವನೊ ಅವನೇ ನಿಜವಾದ ತ್ಯಾಗಿಯೆಂದು ತಿಳಿ ಎಂದು ಯಾರೊ ಅವನಿಗೆ ಹೇಳಿದ್ದರು. ಈ ಮಾತನ್ನೇ ಮನಸ್ಸಿನಲ್ಲಿಟ್ಟುಕೊಂಡು ಅವನು ಜನಪ್ರದೇಶ ದಿಂದ ದೂರ ಹೋಗಿ ಸಾಧುವಿಗಾಗಿ ಹುಡುಕುತ್ತಿದ್ದನು. ಒಮ್ಮೆ ಊರ ಹೊರಗೆ ಬಹು ದೂರದಲ್ಲಿ ಶೌಚ ಮಾಡುತ್ತಿದ್ದ ಸಾಧು ಕಾಣಿಸಿದ. ಅವನು ಎಂಥವನೆಂದು ನೋಡಲು ಅವನ ಹಿಂದೆಯೇ ಹೊರಟ. ಆ ದೇಶದ ರಾಜನ ಮಗಳು ಕೇಳಿದ್ದಳು ಉತ್ತಮ ಯೋಗಿ ಯನ್ನು ಮದುವೆಯಾದರೆ ಸತ್ಪುತ್ರ ಜನಿಸುತ್ತಾನೆ ಎಂದು. ಆದ್ದರಿಂದ ಅವಳು ಎಲ್ಲಿ ಸಾಧುಗಳು ತಂಗುತ್ತಾರೊ ಅಲ್ಲಿ ಹೋಗಿ ಉತ್ತಮ ಪತಿಗಾಗಿ ಹುಡುಕುತ್ತಿದ್ದಳು. ಒಂದು ದಿನ ಈ ಮೇಲೆ ಹೇಳಿದ ಸಾಧು ಅವಳ ಕಣ್ಣಿಗೆ ಬಿದ್ದನು. ಅವನು ಉತ್ತಮ ಯೋಗಿ, ಅವನನ್ನೇ ಮದುವೆಯಾಗುವುದೆಂದು ಎಣಿಸಿ ಅವಳು ತಂದೆಯ ಹತ್ತಿರ ಹೋಗಿ ತನ್ನ ಇಚ್ಛೆಯನ್ನು ವ್ಯಕ್ತಪಡಿಸಿದಳು. ಈ ರಾಜನಿಗೆ ಮಗಳ ಮೇಲೆ ತುಂಬ ಪ್ರೀತಿ. ಅವಳ ಇಚ್ಛೆಗೆ ವಿರುದ್ಧವಾಗಿ ವರ್ತಿಸಲು ಅವನಿಗೆ ಮನಸ್ಸಿರಲಿಲ್ಲ, ಆಕೆಯೂ ತುಂಬ ಒತ್ತಾಯಪಡಿಸಿದಳು. ರಾಜನು ಗತ್ಯಂತರವಿಲ್ಲದೆ ಆ ಸಾಧುವಿನ ಹತ್ತಿರ ಹೋಗಿ ಅರ್ಧರಾಜ್ಯವನ್ನು ಕೊಡುವುದಾಗಿ ಹೇಳಿ ತನ್ನ ಮಗಳನ್ನು ಮದುವೆಯಾಗಬೇಕೆಂದು ಕೇಳಿಕೊಂಡನು. ಆದರೆ ರಾಜನ ಯಾವುದೇ ಪ್ರಲೋಭನೆಗಳಿಗೂ ಆ ಸಾಧುವು ಜಗ್ಗ ಲಿಲ್ಲ. ಅವನು ಅಂದು ರಾತ್ರಿಯೇ ಯಾರಿಗೂ ಹೇಳದೆ ಅಲ್ಲಿಂದ ಪಲಾಯನ ಕಿತ್ತನು. ಇದನ್ನೆಲ್ಲ ನೋಡುತ್ತಿದ್ದ ಆ ವ್ಯಕ್ತಿ ಸಾಧುವಿನ ತೀವ್ರ ವೈರಾಗ್ಯಕ್ಕೆ ಆಶ್ಚರ್ಯಪಟ್ಟನು. ಅವನು ನಿಜವಾದ ಬ್ರಹ್ಮಜ್ಞನೆಂದು ತಿಳಿದು ಅವನಲ್ಲಿ ಶರಣಾಗತನಾಗಿ ಅವನ ಉಪ ದೇಶದಿಂದ ಸತ್ಯಸಾಕ್ಷಾತ್ಕಾರವನ್ನು ಪಡೆದು ಕೃತಾರ್ಥನಾದನು.

3. "ರಾಸಮಣಿಯ ತೋಟದಲ್ಲಿ ಭಿಕ್ಷೆಗೆ ಯಾವ ತೊಂದರೆಯೂ ಇಲ್ಲ, ಗಂಗೆ ಇರುವುದರಿಂದ ನೀರಿನ ಅಭಾವವೂ ಇಲ್ಲ, ಮತ್ತೆ ಹತ್ತಿರದಲ್ಲೇ ಕಾಡು. ಆದ್ದರಿಂದ ಸಾಧುಗಳು ಇಲ್ಲಿಯೇ ತಂಗುತ್ತಿದ್ದರು. ಈ ಸ್ಥಳದ ವಿಷಯ ಒಬ್ಬರ ಬಾಯಿಂದ ಇನ್ನೊಬ್ಬರಿಗೆ ಹರಡುತ್ತ ಕ್ರಮೇಣ ಆದಿ, ಗಂಗಾಸಾಗರ ಮತ್ತು ಜಗನ್ನಾಥಪುರಿಗೆ ಹೋಗುವವರಿಗೆ ಉತ್ತಮ ತಂಗುದಾಣ ಎಂದು ತುಂಬ ಪ್ರಸಿದ್ಧವಾಗಿತ್ತು."

4. ಶ್ರೀರಾಮಕೃಷ್ಣರು ಮತ್ತೂ ಹೇಳುತ್ತಿದ್ದರು : "ಒಮ್ಮೊಮ್ಮೆ ಒಂದೊಂದು ಬಗೆಯ ಸಾಧುಗಳು ಬರುತ್ತಿದ್ದರು. ಕೆಲವೊಮ್ಮೆ ಪರಮಹಂಸ ಸಂನ್ಯಾಸಿಗಳೇ

ಎಷ್ಟೊಂದು ಜನ ಬರುತ್ತಿದ್ದರು ! ಉದರಂಭರಣ ಸಾಧುಗಳಲ್ಲ—ಉತ್ತಮ ಸಾಧುಗಳೇ ಬರುತ್ತಿದ್ದರು. (ತಮ್ಮ ಕೊಠಡಿಯನ್ನು ತೋರಿಸಿ) ಇಲ್ಲಿ ಹಗಲುರಾತ್ರಿ ಅವರ ತಂಡ ಇರುತ್ತಿತ್ತು. ಹಗಲುರಾತ್ರಿ ಬ್ರಹ್ಮ, ಮಾಯೆ, ಅಸ್ತಿ, ಭಾತಿ, ಪ್ರಿಯ—ಇವೇ ಮುಂತಾದ ವೇದಾಂತ ವಿಷಯಗಳ ಮೇಲೆ ಚರ್ಚೆ ನಡೆಯುತ್ತಿತ್ತು."

ಅಸ್ತಿ, ಭಾತಿ, ಪ್ರಿಯ—ಈ ವಿಷಯವನ್ನು ಹೇಳಿ ಶ್ರೀರಾಮಕೃಷ್ಣರು ಅದನ್ನು ವಿವರಿಸುತ್ತಿದ್ದರು : "ಅದು ಏನು ಗೊತ್ತೆ ? ಅದು ಬ್ರಹ್ಮದ ಸ್ವರೂಪ. ವೇದಾಂತದ ಪ್ರಕಾರ ಯಾವುದು ಇದೆಯೊ—ನಿಜವಾದ ಅಸ್ತಿತ್ವವಿದೆಯೊ—ಅದು ಭಾತಿ—ಪ್ರಕಾಶ ಗೊಳ್ಳುತ್ತದೆ. ಇಲ್ಲಿ ಪ್ರಕಾಶವೆಂದರೆ ಜ್ಞಾನದ ಸ್ವಭಾವ, ಯಾವ ವಿಷಯದ ಬಗ್ಗೆ ನಮಗೆ ಜ್ಞಾನವುಂಟಾಗಿದೆಯೋ ಅದೇ ನಮ್ಮ ಮುಂದೆ ಪ್ರಕಾಶಿಸುತ್ತದೆ. ಯಾವುದರ ಜ್ಞಾನವಿಲ್ಲವೊ ಅದು ನಮಗೆ ಅಪ್ರಕಾಶವಾಗಿ ಉಳಿದಿರುತ್ತದೆ. ಹೌದು ತಾನೆ ? ಆದ್ದ ರಿಂದ ವೇದಾಂತ ಹೇಳುತ್ತದೆ, ನಮಗೆ ಯಾವ ವಸ್ತುವಿನ ಅಸ್ತಿತ್ವದ ಬೋಧೆಯುಂಟಾ ಗುವುದೊ, ಆಗ ಅದೇ ಬೋಧದ ಜೊತೆಗೇನೇ ಆ ವಸ್ತುವು ನಮ್ಮ ಮುಂದೆ ಪ್ರಕಾಶಿತ ವಾಗಿದೆ ಎಂಬ ಬೋಧೆಯೂ ಉಂಟಾಗುತ್ತದೆ—ಅದರ ಜ್ಞಾನಸ್ವರೂಪದ ಅರಿವು ನಮ ಗುಂಟಾಗುತ್ತದೆ. ಮತ್ತೆ ಹಾಗೆಯೇ ಅದು ನಮಗೆ ಪ್ರಿಯವೆಂದೂ ಬೋಧೆಯಾಗುತ್ತದೆ— ಅಂದರೆ ಅದರಲ್ಲಿರುವ ಆನಂದಸ್ವರೂಪವು ನಮ್ಮ ಮನಸ್ಸಿನಲ್ಲಿ ಪ್ರಿಯಬುದ್ಧಿಯನ್ನು ಜಾಗ್ರತಗೊಳಿಸಿ ಅದನ್ನು ಪ್ರೀತಿಸುವಂತೆ ಅದು ನಮ್ಮನ್ನು ಆಕರ್ಷಿಸುತ್ತದೆ. ಎಲ್ಲಿ ನಮಗೆ ಅಸ್ತಿತ್ವದ ಜ್ಞಾನವುಂಟಾಗುತ್ತದೆಯೊ ಅಲ್ಲಿಯೇ ಜ್ಞಾನ—ಸ್ವರೂಪ ಮತ್ತು ಆನಂದ ಸ್ವರೂಪದ ಜ್ಞಾನವೂ ಉಂಟಾಗುತ್ತದೆ. ಆದ್ದರಿಂದ ಯಾವುದು 'ಅಸ್ತಿ'ಯೋ ಅದೇ 'ಭಾತಿ' ಮತ್ತು 'ಪ್ರಿಯ', ಯಾವುದು 'ಭಾತಿ'ಯೊ ಅದೇ 'ಅಸ್ತಿ' ಮತ್ತು 'ಪ್ರಿಯ' ಹಾಗು ಯಾವುದು 'ಪ್ರಿಯ'ವೊ ಅದೇ 'ಅಸ್ತಿ' ಮತ್ತು 'ಭಾತಿ'. ಏಕೆಂದರೆ ಯಾವ ಬ್ರಹ್ಮವಸ್ತುವಿನಿಂದ ಈ ಜಗತ್ತು, ಇದರಲ್ಲಿರುವ ಎಲ್ಲ ವಸ್ತುಗಳು ಮತ್ತು ವ್ಯಕ್ತಿಗಳು ಉಂಟಾಗಿವೆಯೊ ಅದರ ಸ್ವರೂಪವೇ 'ಅಸ್ತಿ—ಭಾತಿ—ಪ್ರಿಯ' ಅಥವಾ ಸಚ್ಚಿದಾನಂದ. ಆದ್ದರಿಂದಲೇ ಉತ್ತರಗೀತೆಯಲ್ಲಿ ಹೀಗೆ ಹೇಳಿದೆ : 'ಯಾವ ವಸ್ತು ಅಥವಾ ವ್ಯಕ್ತಿಯ ಕಡೆ ನಿನ್ನ ಮನಸ್ಸು ಆಕರ್ಷಿಸಲ್ಪಡುವುದೊ ಅದೇ ವಸ್ತು ಅಥವಾ ವ್ಯಕ್ತಿಯಲ್ಲಿ ಭಗ ವಂತನು ನೆಲಸಿರುವನು ಎಂದು ಜ್ಞಾನವುಂಟಾದಾಗ ಅರ್ಥವಾಗುತ್ತದೆ—ಯತ್ರ ಯತ್ರ ಮನೋ ಯಾತಿ ತತ್ರ ತತ್ರ ಪರಂ ಪದಮ್.' ರೂಪ—ರಸಗಳಲ್ಲಿಯೂ ಅವನ ಅಂಶ ವಿರುವುದರಿಂದಲೇ ಮನುಷ್ಯರ ಮನಸ್ಸು ಆ ಕಡೆ ಓಡುತ್ತದೆ ಎಂದು ವೇದದಲ್ಲಿಯೂ ಹೇಳಿದೆ.

"ಈ ವಿಷಯಗಳ ಮೇಲೆ ಅವರುಗಳ ನಡುವೆ ಬಿಸಿ ಬಿಸಿ ಚರ್ಚೆ ನಡೆಯುತ್ತಿತ್ತು. ನಾನಾಗ ತೀವ್ರ ಆಮಶಂಕೆಯಿಂದ ನರಳುತ್ತಿದ್ದೆ, ಮತ್ತೆ ಮತ್ತೆ ಬೇಧಿಯಾಗುತ್ತಿತ್ತು. ಹೃದು ಕೋಣೆಯ ಮೂಲೆಯಲ್ಲಿ ಒಂದು ಮಣ್ಣಿನ ಬಾಣಲೆಯನ್ನು ಇಟ್ಟಿದ್ದ. ಅಷ್ಟೊಂದು ಹೊಟ್ಟೆ ನೋವಿನಿಂದ ನರಳುತ್ತಿದ್ದರೂ ಅವರ ಚರ್ಚೆಯನ್ನು ಕೇಳುತ್ತಿದ್ದೆ.

ಯಾವುದೇ ವಿಚಾರದಲ್ಲಿ ಒಂದು ನಿರ್ದಿಷ್ಟ ನಿರ್ಣಯಕ್ಕೆ ಅವರು ಬರಲಾಗದೇ ಇದ್ದಾಗ (ತಮ್ಮ ಕಡೆ ನಿರ್ದೇಶಿಸಿ) ಒಳಗಿನಿಂದ ತಾನಾಗಿಯೇ ತಾಯಿಯ ಪ್ರೇರಣೆಯಿಂದ ಉತ್ತರ ಬಂದುಬಿಡುತ್ತಿತ್ತು. ಅದನ್ನು ನಾನು ಅವರಿಗೆ ಹೇಳುತ್ತಿದ್ದೆ, ಆಗ ಅವರ ವಾದ–ವಿವಾದ ನಿಂತು ಬಿಡುತ್ತಿತ್ತು.

5. "ಒಮ್ಮೆ ಒಬ್ಬ ಸಾಧು ಬಂದಿದ್ದ, ಅವನ ಮುಖದಲ್ಲಿ ಒಂದು ಸುಂದರ ಜ್ಯೋತಿ ಬೆಳಗುತ್ತಿತ್ತು. ಅವನು ಸುಮ್ಮನೆ ಕುಳಿತುಕೊಂಡು ಮುಗುಳ್ನಗುತ್ತಿದ್ದ ಅಷ್ಟೆ. ಅವನು ಬೆಳಗ್ಗೆ ಮತ್ತು ಸಂಜೆ ಎರಡು ಬಾರಿ ಕೊಠಡಿಯಿಂದ ಹೊರಬಂದು ಆ ಮರಗಿಡ ಆಕಾಶ ಗಂಗೆ ಇವುಗಳನ್ನೆಲ್ಲ ನೋಡುತ್ತ ಆನಂದಪರವಶತೆಯಲ್ಲಿ ಎರಡು ಕೈಗಳನ್ನೂ ಎತ್ತಿ ನರ್ತಿಸುತ್ತಿದ್ದ. ಕೆಲವೊಮ್ಮೆ ಜೋರಾಗಿ ನಗುತ್ತ 'ಅಬ್ಬ, ಎಂಥ ಮಾಯೆ !,ಎಂಥ ವಿಚಿತ್ರ ಪ್ರಪಂಚವನ್ನು ಸೃಷ್ಟಿಸಿಬಿಟ್ಟಿದೆ !' ಎಂದು ಹೇಳುತ್ತಿದ್ದ. ಅಂದರೆ ಭಗವಂತನು ಎಂಥ ಸುಂದರವಾದ ಮಾಯಾ ಪ್ರಪಂಚವನ್ನು ನಿರ್ಮಿಸಿರುವನು ! ಇದೇ ಅವನ ಉಪಾಸನೆಯಾಗಿತ್ತು. ಅವನು ಆನಂದವನ್ನು ಪಡೆದಿದ್ದ,

6. "ಇನ್ನೊಮ್ಮೆ ಬೇರೊಬ್ಬ ಸಾಧು ಬಂದಿದ್ದನು. ಅವನಿಗೆ ಜ್ಞಾನೋನ್ಮಾದ ವುಂಟಾಗಿತ್ತು. ನೋಡುವುದಕ್ಕೆ ಪಿಶಾಚಿಯಂತಿದ್ದ–ಬರಿಮೈ, ತಲೆ ಮೈಯಲ್ಲೆಲ್ಲ ಧೂಳು, ಉದ್ದನೆಯ ಉಗುರು, ಕೂದಲು. ಮೈಮೇಲೆ ಹೆಣದಮೇಲೆ ಹೊದಿಸುವ ಹೊದಿಕೆ ಯಂತಿದ್ದ ಒಂದು ಹೊದಿಕೆಯಿತ್ತು. ಕಾಳೀದೇವಾಲಯದ ಮುಂದೆ ನಿಂತು ಎಷ್ಟು ಜೋರಾಗಿ ಅವಳನ್ನು ಸ್ತುತಿಸತೊಡಗಿದನೆಂದರೆ ಮಂದಿರವೇ ನಡುಗುವಂತಿತ್ತು–ಮತ್ತು ತಾಯಿಯು ಪ್ರಸನ್ನಳಾಗಿ ನಗುತ್ತಿರುವಳೊ ಎನಿಸುತ್ತಿತ್ತು. ಅನಂತರ ಅವನು ಭಿಕ್ಷುಕರು ಎಲ್ಲಿ ಪ್ರಸಾದ ಸ್ವೀಕರಿಸುತ್ತಾರೊ ಅಲ್ಲಿಗೆ ಪ್ರಸಾದ ಪಡೆಯಲು ಹೋದ. ಇವನ ವಿಕಾರ ರೂಪವನ್ನು ನೋಡಿ ಅವರೂ ಇವನನ್ನು ತಮ್ಮ ಹತ್ತಿರ ಇರಗೊಡಲಿಲ್ಲ–ಅಲ್ಲಿಂದ ಓಡಿ ಸಿದರು. ಆಮೇಲೆ ಅವನು ಎಲ್ಲರೂ ಉಂಡು ಎಂಜಲೆಲೆಯನ್ನು ಎಸೆಯುವ ಜಾಗಕ್ಕೆ ಹೋಗಿ ನಾಯಿಗಳ ಜೊತೆ ಎಂಜಲನ್ನವನ್ನು ತಿನ್ನತೊಡಗಿದನು. ಅವನು ಒಂದು ನಾಯಿಯ ಹೆಗಲ ಮೇಲೆ ಕೈ ಇಟ್ಟುಕೊಂಡು ಇಬ್ಬರೂ ಒಂದೇ ಎಲೆಯಿಂದ ಉಣ್ಣು ತ್ತಿದ್ದರು. ಅಪರಿಚಿತ ವ್ಯಕ್ತಿ ಹೆಗಲ ಮೇಲೆ ಕೈ ಹಾಕಿದ್ದಾನೆಂದು ನಾಯೀಯೂ ಏನು ಮಾಡುತ್ತಲೂ ಇಲ್ಲ, ಹೆದರಿ ಓಡುತ್ತಲ್ಲೂ ಇಲ್ಲ. ಅವನನ್ನು ನೋಡಿ ನನಗೆ ಭಯ ವಾಯಿತು, ಕೊನೆಗೆ ನಾನೂ ಅವನಂತೆಯೇ ಇದ್ದುಕೊಂಡು ಓಡಾಡಬೇಕಾಗುವುದೊ ಎಂದು.

"ಅವನನ್ನು ನೋಡಿ ಬಂದು ಹೃದಯನಿಗೆ ಹೇಳಿದೆ : 'ಹೃದು, ಅವನು ಹುಚ್ಚ ನಲ್ಲ, ಅದು ಜ್ಞಾನೋನ್ಮಾದ.' ಇದನ್ನು ಕೇಳಿ ಹೃದು ಅವನನ್ನು ನೋಡಲು ಓಡಿದ. ಅವನು ತೋಟದ ಹೊರಗಡೆ ಹೋಗುತ್ತಿದ್ದ. ಹೃದು ಬಹಳದೂರ ಅವನ ಹಿಂದೆಯೆ ಹೋದ. 'ಭಗವಂತನನ್ನು ಹೇಗೆ ಪಡೆಯುವುದು, ಹೇಳಿ' ಎಂದು ಅವನನ್ನು ಕೇಳಿ ಕೊಂಡ. ಅವನು ಬಾಯ್ತೆರೆಯಲೇ ಇಲ್ಲ. ಹೃದಯನೂ ಬಿಡದೆ ಮತ್ತೆ ಮತ್ತೆ ಕೇಳಿದ.

ಕೊನೆಗೆ ಪಕ್ಕದಲ್ಲಿದ್ದ ಚರಂಡಿಯ ನೀರನ್ನು ತೋರಿಸಿ 'ಇದು ಮತ್ತು ಗಂಗಾಜಲ ಒಂದೇ, ಎರಡೂ ಸಮಾನವಾಗಿ ಪವಿತ್ರ ಎಂದು ಅರಿವುಂಟಾದಾಗ ಭಗವಂತನನ್ನು ಪಡೆಯುವೆ' ಎಂದಷ್ಟೇ ಹೇಳಿದ. 'ಮಹಾರಾಜ್ ! ನನ್ನನ್ನು ನಿಮ್ಮ ಶಿಷ್ಯನನ್ನಾಗಿ ಮಾಡಿಕೊಳ್ಳಿ' ಎಂದು ಹೃದಯನು ಆ ಸಾಧುವನ್ನು ಕೇಳಿಕೊಂಡ. ಅದಕ್ಕೆ ಅವನು ಏನೂ ಮಾತಾಡಲಿಲ್ಲ. ಅವನು ತುಂಬ ದೂರ ಹೋಗಿ ಹಿಂತಿರುಗಿ ನೋಡಿದ, ಹೃದಯನು ಅವನನ್ನು ಇನ್ನೂ ಹಿಂಬಾಲಿಸುತ್ತಿದ್ದ. ಅವನನ್ನು ನೋಡಿ ಕಣ್ಣು ಕೆಂಪಗೆ ಮಾಡಿಕೊಂಡು ಇಟಿಗೆ ತುಂಡನ್ನು ತೆಗೆದುಕೊಂಡು ಹೃದಯನನ್ನು ಹೊಡೆಯಲು ಅಟ್ಟಿಸಿಕೊಂಡು ಬಂದ. ಹೃದಯ ಕಾಲಿಗೆ ಬುದ್ಧಿ ಹೇಳಬೇಕಾಯಿತು. ಅನಂತರ ಆ ಸಾಧು ಬೇರಾವುದೊ ಮಾರ್ಗವನ್ನು ಹಿಡಿದು ಹೊರಟುಹೋದ. ಹೃದಯನಿಗೆ ಮತ್ತೆ ಅವನು ಕಾಣಿಸಲಿಲ್ಲ. ಜನ ತೊಂದರೆ ಕೊಡುತ್ತಾರೆಂದು ಸಾಧುಗಳು ಈ ರೀತಿ ಓಡಾಡುತ್ತಾರೆ. ಆ ಸಾಧು ನಿಜವಾಗಿಯೂ ಪರಮಹಂಸಾವಸ್ಥೆಯಲ್ಲಿದ್ದ.

7. "ಪರಮಹಂಸರು ಬಾಲಕರಂತೆ. ಪಿಶಾಚಿಗಳಂತೆ, ಉನ್ಮತ್ತರಂತೆ ಸಂಸಾರದಲ್ಲಿ ಇರುತ್ತಾರೆ ಎಂದು ಶಾಸ್ತ್ರದಲ್ಲಿದೆ. ಅದಕ್ಕಾಗಿಯೇ ಪರಮಹಂಸರು ಸಣ್ಣಸಣ್ಣ ಮಕ್ಕಳನ್ನು ತಮ್ಮೊಡನೆ ಇಟ್ಟುಕೊಂಡು ಅವರಂತೆಯೇ ಆಗಲು ಕಲಿಯುತ್ತಾರೆ. ಮಕ್ಕಳು ಸಂಸಾರದ ಯಾವುದೇ ವಿಷಯಕ್ಕೂ ಅಂಟಿಕೊಳ್ಳುವುದಿಲ್ಲ, ಹಾಗೆಯೇ ತಾವೂ ಅವರಂತೆಯೇ ಎಲ್ಲ ವಿಷಯದಲ್ಲಿಯೂ ಆಗಲು ಪ್ರಯತ್ನಿಸುತ್ತಾರೆ. ತಾಯಿ ಬಾಲಕನಿಗೆ ಒಂದು ಹೊಸ ಉಡಿಗೆಯನ್ನು ತೊಡಿಸಿದಾಗ ಎಷ್ಟೊಂದು ಆನಂದ ! 'ಆ ಬಟ್ಟೆಯನ್ನು ನನಗೆ ಕೊಡು' ಎಂದು ಕೇಳಿದರೆ 'ಇಲ್ಲ, ಕೊಡೊದಿಲ್ಲ, ಅಮ್ಮ ಕೊಟ್ಟಿದ್ದಾಳೆ' ಎಂದು ಹೇಳಿ ಆ ಬಟ್ಟೆಯನ್ನು ಭದ್ರವಾಗಿ ಹಿಡಿದುಕೊಂಡು ನಿಮ್ಮ ಕಡೆಯೇ ದುರುಗುಟ್ಟಿಕೊಂಡು ನೋಡುತ್ತಾನೆ, ನೀವು ಎಲ್ಲಿ ಕಿತ್ತುಕೊಂಡು ಬಿಡುತ್ತೀರೊ ಎಂದು ! ಆಗ ಅವನ ಪ್ರಾಣವೇ ಆ ಬಟ್ಟೆಯಂಲ್ಲಿರುವಂತಿರುತ್ತದೆ. ಆದರೆ ನಿಮ್ಮ ಕೈಯಲ್ಲಿ ಅರ್ಧಾಣೆ ಬೆಲೆಬಾಳುವ ಒಂದು ಚಿಕ್ಕ ಬೊಂಬೆ ಇದ್ದರೆ ಅವನು ಹೇಳುತ್ತಾನೆ : 'ಅದನ್ನು ನನಗೆ ಕೊಡುವುದಾದರೆ ಈ ಬಟ್ಟೆಯನ್ನು ಕೊಡುತ್ತೇನೆ.' ಮತ್ತೆ ಸ್ವಲ್ಪಹೊತ್ತಿನ ನಂತರ ಆ ಬೊಂಬೆಯನ್ನು ಆ ಕಡೆ ಬಿಸಾಕಿ ಒಂದು ಹೂವನ್ನು ಹಿಡಿಯಲು ಅವನು ಓಡಬಹುದು. ಅವನಿಗೆ ಬಟ್ಟೆಯಲ್ಲಿ ಎಷ್ಟು ಆಸಕ್ತಿಯೊ ಬೊಂಬೆಯಲ್ಲಿಯೂ ಅಷ್ಟೆ. ಜ್ಞಾನಿಗಳ ಸ್ಥಿತಿಯೂ ಇಂತಹುದೇ.

8. "ಹೀಗೆ ಎಷ್ಟೊ ದಿನಗಳು ಕಳೆದುವು. ಅನಂತರ ಅವರು (ಸಂನ್ಯಾಸಿ ಪರಮಹಂಸಾದಿಗಳು) ಬಂದು ಹೋಗುವುದು ಕಡಮೆಯಾಯಿತು. ಅಮೇಲೆ ರಾಮಾವತ್ ಬಾಬಾಜೀಗಳು ಅನೇಕ ಸಂಖ್ಯೆಯಲ್ಲಿ ಬರತೊಡಗಿದರು. ಅವರಲ್ಲಿ ಉತ್ತಮ ಭಕ್ತರು ತ್ಯಾಗಿಗಳು ಇದ್ದರು. ಅವರು ಗುಂಪುಗುಂಪಾಗಿ ಬರುತ್ತಿದ್ದರು. ಆಹಾ ! ಅವರದು ಎಂಥ ಭಕ್ತಿ ವಿಶ್ವಾಸ! ಎಂಥ ಸೇವಾನಿಷ್ಠೆ! ಅವರಲ್ಲಿ ಒಬ್ಬನೊಡನಿದ್ದ 'ರಾಮಲಾಲ'ನು ನನ್ನೊಡನೆ ಸೇರಿಕೊಂಡ. ಅದೊಂದು ದೊಡ್ಡ ಕತೆ.

9. "ಆ ಬಾಬಾಜೀಯು ಆ ದೇವರನ್ನು ಬಹಳ ಕಾಲದಿಂದ ಸೇವೆ ಮಾಡುತ್ತಿದ್ದ.

ಎಲ್ಲಿ ಹೋದರೂ ಅವನನ್ನು ತನ್ನೊಡನೆ ಕರೆದುಕೊಂಡು ಹೋಗುತ್ತಿದ್ದ. ತಾನು ಭಿಕ್ಷೆಯಿಂದ ಪಡೆದಿದ್ದನ್ನು ಅಡಿಗೆ ಮಾಡಿ ಅವನಿಗೆ (ರಾಮಲಾಲನಿಗೆ) ನೈವೇದ್ಯ ನೀಡುತ್ತಿದ್ದ. ಅಷ್ಟೇ ಅಲ್ಲ, ರಾಮಲಾಲನು ನಿಜವಾಗಿಯೂ ತಿನ್ನುತ್ತಿದ್ದನು ಅಥವಾ ತನಗೆ ಅದು ಬೇಕು ಇದು ಬೇಕು ಎನ್ನುತ್ತಿದ್ದನು, ಓಡಾಡಲು ಬಯಸುತ್ತಿದ್ದನು. ಬಾಬಾಜೀ ಇದನ್ನೆಲ್ಲ ಪ್ರತ್ಯಕ್ಷ ಅನುಭವಿಸುತ್ತಿದ್ದ. ರಾಮಲಾಲನೊಡನೆ ಅವನು ಪರಮಾನಂದದಿಂದಿದ್ದ. ರಾಮಲಾಲನು ಆ ರೀತಿ ಮಾಡುತ್ತಿದ್ದುದನ್ನು ನಾನೂ ನೋಡಿದ್ದೇನೆ. ಪ್ರತಿದಿನ ಇಪ್ಪತ್ತನಾಲ್ಕು ಗಂಟೆಯೂ ಆ ಬಾಬಾಜಿಯೊಡನೆ ಇರುತ್ತಿದ್ದೆ, ರಾಮಾಲಾಲನನ್ನು ನೋಡುತ್ತಿದ್ದೆ.

"ಹೀಗೆ ಅನೇಕ ದಿನಗಳು ಕಳೆದುವು, ಕ್ರಮೇಣ ರಾಮಲಾಲನಿಗೆ ನನ್ನ ಮೇಲೆ ಪ್ರೀತಿ ಅಧಿಕವಾಯಿತು. ಬಾಬಾಜಿಯೊಡನೆ ನಾನು ಎಷ್ಟು ಕಾಲ ಇರುತ್ತಿದ್ದೆನೊ ರಾಮಲಾಲನೂ ಅಲ್ಲಿ ಆಟವಾಡಿಕೊಂಡು ಇರುತ್ತಿದ್ದ. ನಾನು ಅಲ್ಲಿಂದ ಕೋಣೆಗೆ ಬಂದ ಮೇಲೆ ಅವನೂ ನನ್ನೊಡನೆ ಬರುತ್ತಿದ್ದ. ನಾನು ಬೇಡವೆಂದರೂ ಅವನು ಕೇಳುತ್ತಿರಲಿಲ್ಲ. ಮೊದಮೊದಲು ಬುದ್ಧಿಭ್ರಮೆಯಿಂದ ಹೀಗೆಲ್ಲ ಕಾಣುತ್ತಿದೆ ಎಂದುಕೊಂಡೆ. ಇಲ್ಲದಿದ್ದರೆ ಆ ಸಾಧು ಎಷ್ಟು ವರ್ಷ ಆ ರಾಮಲಾಲನ ಸೇವೆ ಮಾಡಿರುವನು. ಅವನು ಎಷ್ಟೊಂದು ಪ್ರೀತಿಸುತ್ತಾನೆ–ಈಗ ಅವನಿಗಿಂತ ಅಧಿಕವಾಗಿ ನನ್ನನ್ನು ಪ್ರೀತಿಸುವುದೆಂದರೆ ಹೇಗೆ ! ? ಆದರೆ ಈ ರೀತಿ ಭಾವಿಸಿದರೆ ಏನಂತೆ ? ನಾನು ನಿಜವಾಗಿ ನೋಡುತ್ತಿದ್ದೆ–ನಿಮ್ಮನ್ನೆಲ್ಲ ನೋಡುತ್ತಿರುವಂತೆ ನೋಡುತ್ತಿದ್ದೆ. ರಾಮಲಾಲನು ಕೆಲವೊಮ್ಮೆ ನನ್ನ ಮುಂದೆ ಕೆಲವೊಮ್ಮೆ ನನ್ನ ಹಿಂದೆ ನರ್ತಿಸುತ್ತ ಬರುತ್ತಿದ್ದ. ಕೆಲವೊಮ್ಮೆ ತೊಡೆಯ ಮೇಲೆ ಕುಳಿತುಕೊಳ್ಳಬೇಕೆಂದು ಒತ್ತಾಯಿಸುತ್ತಿದ್ದ. ಕೆಲವೊಮ್ಮೆ ತೊಡೆಯ ಮೇಲೆ ಕೂರಿಸಿಕೊಂಡರೆ ಎದ್ದು ಬಿಸಿಲಿನಲ್ಲಿ ಅಲ್ಲಿ ಇಲ್ಲಿ ಓಡುತ್ತಿದ್ದ. ಮುಳ್ಳುಗಿಡದಲ್ಲಿ ಹೂ ಕೀಳುತ್ತಿದ್ದ, ಗಂಗೆಯಲ್ಲಿ ಇಳಿದು ನೀರನ್ನು ಎರಚುತ್ತಿದ್ದ. ನಾನು ಎಷ್ಟೇ ಬೇಡವೆಂದರೂ ಕೇಳುತ್ತಿರಲಿಲ್ಲ. 'ಮಗು, ನೀನು ಹಾಗೆ ಬಿಸಿಲಿನಲ್ಲಿ ಓಡಾಡಿದರೆ ಕಾಲಿನಲ್ಲಿ ಗುಳ್ಳೆ ಏಳುತ್ತೆ, ನೀರಿನಲ್ಲಿ ಹಾಗೆ ಇರಬೇಡಪ್ಪ, ಶೀತ ಜ್ವರ ಬರುತ್ತೆ'–ಹೀಗೆ ಎಷ್ಟೇ ಹೇಳಿದರೂ ನನ್ನ ಮಾತಿಗೆ ಕಿವಿಗೊಡುತ್ತಿರಲಿಲ್ಲ. ಪದ್ಮಪತ್ರದಂತೆ ಸುಂದರವಾದ ಕಣ್ಣುಗಳಿಂದ ನನ್ನನ್ನು ದಿಟ್ಟಿಸಿ ನೋಡಿ, ನಕ್ಕು ತನ್ನ ಚೇಷ್ಟೆಯಲ್ಲಿ ತಾನು ನಿರತನಾಗುತ್ತಿದ್ದ. ಕೆಲವೊಮ್ಮೆ ತುಟಿ ತಿರುಗಿಸುತ್ತ ನನ್ನನ್ನು ಅಣಕಿಸುತ್ತಿದ್ದ. ನಾನಾಗ ಕೋಪದಿಂದ ಅವನನ್ನು ಬಯ್ಯುತ್ತಿದ್ದೆ : "ತುಂಟ, ಇವತ್ತು ನಿನಗೆ ಸರಿಯಾಗಿ ಹೊಡೆದು ಮೂಳೆ ಮುರಿದುಹಾಕುತ್ತೇನೆ !' ಹೀಗೆ ಹೇಳಿ ಅವನನ್ನು ಕೈಹಿಡಿದು ಎಳೆದುಕೊಂಡು ಕೊಠಡಿಗೆ ಬರುತ್ತಿದ್ದೆ, ಏನಾದರೂ ಕೊಟ್ಟು ಅಲ್ಲೆ ಅವನು ಆಟವಾಡಿಕೊಂಡಿರುವಂತೆ ಹೇಳುತ್ತಿದ್ದೆ. ಕೆಲವೊಮ್ಮೆ ಅವನ ತುಂಟತನವನ್ನು ತಡೆಯಲಾಗದೆ ಒಂದೆರಡು ಏಟು ಕೊಡುತ್ತಿದ್ದೆ. ಆಗ ಅವನು ಬಿಕ್ಕಿ ಬಿಕ್ಕಿ ಅಳುತ್ತ ಕಂಬನಿತುಂಬಿದ ಕಣ್ಣುಗಳಿಂದ ನನ್ನ ಕಡೆ ನೋಡುತ್ತಿದ್ದ. ನನಗೆ ತುಂಬ ವೇದನೆಯಾಗುತ್ತಿತ್ತು. ಆಗ ಅವನನ್ನು ನನ್ನ ತೊಡೆಯ ಮೇಲೆ ಕೂರಿಸಿಕೊಂಡು

ಮುದ್ದಿಸಿ ಸಮಾಧಾನಪಡಿಸುತ್ತಿದ್ದೆ. ಇವನ್ನೆಲ್ಲ ನಾನು ನಿಜವಾಗಿಯೂ ನೋಡುತ್ತಿದ್ದೆ, ಮಾಡುತ್ತಿದ್ದೆ.

"ನಾನು ಒಂದು ದಿನ ಸ್ನಾನಕ್ಕೆ ಹೋಗುತ್ತಿದ್ದೆ, ನಾನೂ ಬರುತ್ತೇನೆಂದು ಹಠ ಹಿಡಿದ. ನಾನೇನು ಮಾಡುವುದು ? ಅವನನ್ನೂ ಕರೆದುಕೊಂಡು ಹೋದೆ. ಈಗ ಅವನು ನೀರಿನಿಂದ ಹೊರಬರುತ್ತಲೇ ಇಲ್ಲ ! ನಾನು ಎಷ್ಟೇ ಬೇಡಿಕೊಂಡರೂ ಕೇಳಲೇ ಇಲ್ಲ. ಆಗ ನಾನು ಕೋಪದಿಂದ ಅವನನ್ನು ನೀರಿನೊಳಗೆ ಮುಳುಗಿಸಿ 'ಈಗ ನೀನು ಎಷ್ಟು ಹೊತ್ತು ಬೇಕಾದರೂ ನೀರಿನಲ್ಲಿ ಇರು' ಎಂದು ಹೇಳಿದೆ. ಅವನು ನೀರಿನಲ್ಲಿ ಉಸಿರಿಗಾಗಿ ಪರದಾಡುತ್ತಿರುವುದನ್ನು ನೋಡಿದೆ. ಅವನ ಕಷ್ಟವನ್ನು ನೋಡಿ 'ನಾನು ಎಂಥ ಕೆಲಸ ಮಾಡಿದೆ ?' ಎಂದು ಪರಿತಪಿಸಿದೆ. ಅವನನ್ನು ಎತ್ತಿ ತೊಡೆಯಮೇಲೆ ಕೂರಿಸಿಕೊಂಡೆ.

"ಇನ್ನೊಂದು ದಿನ ನಾನು ಅವನಿಗಾಗಿ ಮನಸ್ಸಿನಲ್ಲಿ ಎಂಥ ವೇದನೆಯನ್ನು ಅನುಭವಿಸಬೇಕಾಯಿತು, ಎಷ್ಟೊಂದು ಅಳಬೇಕಾಯಿತು, ಗೊತ್ತೆ ! ಅದನ್ನು ಹೇಳಿ ಪೂರೈಸಲಾಗುವುದಿಲ್ಲ. ಅಂದು ರಾಮಲಾಲನು ಏನಾದರು ತಿನ್ನುವುದಕ್ಕೆ ಕೊಡೆಂದು ಒತ್ತಾಯ ಪಡಿಸಿದ. ನಾನು ಸ್ವಲ್ಪ ಅರಳನ್ನು ಕೊಟ್ಟೆ, ಬೇರೇನೂ ಇರಲಿಲ್ಲ. ಅದರಲ್ಲಿ ಸ್ವಲ್ಪ ಭತ್ತ ಹಾಗೆಯೇ ಇತ್ತು. ! ಅವನದನ್ನು ತಿನ್ನುತ್ತಿರುವಾಗ ಅವನ ಮೃದುವಾದ ನಾಲಗೆಯಲ್ಲಿ ಘಾಯವಾಯಿತು. ನನಗೆ ಅದನ್ನು ನೋಡಿ ತಡೆಯಲಾಗಲಿಲ್ಲ. ಅವನನ್ನು ತೊಡೆಯ ಮೇಲೆ ಕೂರಿಸಿಕೊಂಡು ಜೋರಾಗಿ ಅತ್ತೆ. ಅವನ ಗಲ್ಲವನ್ನು ಹಿಡಿದು ಬಿಕ್ಕಳಿಸುತ್ತ ಹೇಳಿದೆ : 'ನಾನು ಎಂಥ ಮೂರ್ಖ, ಎಂಥ ಕ್ರೂರಿ ! ಕೌಸಲ್ಯೆಯು ಅತ್ಯಂತ ಆದರದಿಂದ ಬೆಣ್ಣೆ, ಕೆನೆಹಾಲು ಇತ್ಯಾದಿಗಳನ್ನು ಉಣಿಸುತ್ತಿದ್ದ ಈ ಮೃದುವಾದ ಬಾಯಿಗೆ ಇಂಥ ಒಂದು ತುಚ್ಛವಾದ ಆಹಾರವನ್ನು ತಿನಿಸಲು ನನಗೆ ಸ್ವಲ್ಪವೂ ಸಂಕೋಚವಾಗಲಿಲ್ಲವಲ್ಲ !'" ಈ ಮಾತನ್ನು ಹೇಳುತ್ತಿದ್ದಂತೆಯೇ ಆ ಹಿಂದಿನ ಶೋಕ ಮತ್ತೆ ಶ್ರೀರಾಮಕೃಷ್ಣರಲ್ಲಿ ಮರುಕಳಿಸಿತು. ಆಗ ಅವರು ಎಷ್ಟೊಂದು ವ್ಯಾಕುಲತೆಯಿಂದ ರೋದಿಸತೊಡಗಿದರೆಂದರೆ, ಅವರ ಮತ್ತು ರಾಮಲಾಲನ ಪ್ರೇಮಸಂಬಂಧ ಬಿಂದು ಮಾತ್ರವೂ ನಮಗೆ ಅರ್ಥವಾಗಿರದಿದ್ದರೂ, ನಮ್ಮ ಕಣ್ಣುಗಳಲ್ಲಿಯೂ ನೀರು ತುಂಬಿತು.

**10.** ರಾಮಲಾಲನ ಈ ಎಲ್ಲ ವಿಷಯವನ್ನು ಕೇಳಿ ಮಾಯಾಬದ್ಧರಾದ ನಮಗೆ ಅತ್ಯಾಶ್ಚರ್ಯವಾಯಿತು. ಭಯಚಕಿತರಾಗಿ ಆ ಮೂರ್ತಿಯ ಕಡೆ ದೃಷ್ಟಿಹಾಯಿಸಿದೆವು– ನಮಗೂ ಆ ರೀತಿಯ ಅನುಭವವಾಗುವುದೊ ಎಂದು ! ಏನೂ ಇಲ್ಲ ! ನಮಗೆ ಆಗುವುದಾದರೂ ಹೇಗೆ ? ಆ ಪ್ರೀತಿಯ ಆಕರ್ಷಣೆ ನಮ್ಮಲ್ಲಿರಬೇಕಲ್ಲ ! ಶ್ರೀರಾಮಕೃಷ್ಣರಲ್ಲಿ ಆದಂತೆ ಶ್ರೀರಾಮಚಂದ್ರನ ಭಾವವು ಅಂತರ್ಯದಲ್ಲಿ ಘನೀಭೂತವಾಗಿ ನಮ್ಮ ಭಾವ ಚಕ್ಷುವನ್ನು ತೆರೆದಿರಲಿಲ್ಲ. ಹಾಗಾಗಿದ್ದರೆ ರಾಮಲಾಲನನ್ನು ಜೀವಂತವಾಗಿ ಹೊರಗಡೆ ನೋಡಬಹುದಿತ್ತು. ನಾವು ಕೇವಲ ಚಿಕ್ಕ ಗೊಂಬೆಯನ್ನು ಮಾತ್ರ ನೋಡುತ್ತೇವೆ. ಆದ್ದರಿಂದ.ಶ್ರೀರಾಮಕೃಷ್ಣರು ಹೇಳುತ್ತಿರುವುದು ನಡೆಯಲು ಸಾಧ್ಯವೇ ಎಂದು ನಮಗೆ ಸಂದೇಹವುಂಟಾಗುತ್ತದೆ. ಪ್ರಪಂಚದ ಎಲ್ಲ ವಿಷಯದಲ್ಲಿಯೂ ನಮಗೆ ಹೀಗೆಯೆ–ಅವಿ

ಶ್ವಾಸದ ಹೊರೆಯನ್ನು ಹೊತ್ತುಕೊಂಡು ಕುಳಿತಿದ್ದೇವೆ. 'ಸರ್ವಂ ಖಲ್ವಿದಂ ಬ್ರಹ್ಮ' 'ನೇಹ ನಾನಾಸ್ತಿ ಕಿಂಚನ' ಎಂದು ಋಷಿಗಳು ಸಾರುತ್ತಿರುವುದು ನಿಮಗೆ ತಿಳಿಯದೆ ? ಈ ಪ್ರಪಂಚದಲ್ಲಿ ಒಂದೇ ಸಚ್ಚಿದಾನಂದ ಬ್ರಹ್ಮವಸ್ತುವನ್ನು ಬಿಟ್ಟರೆ ಬೇರೇನೂ ಇಲ್ಲ. ನೀವು ನೋಡುವ ನಾನಾ ವಸ್ತುಗಳು, ನಾನಾ ವ್ಯಕ್ತಿಗಳು—ಇವೆಲ್ಲ ವಾಸ್ತವಿಕವಲ್ಲ. ಇದು ನಿಜ ಅನಿಸುತ್ತೆ, ಆದರೆ ಸುತ್ತಲೂ ಪ್ರಪಂಚವನ್ನು ನೋಡಿದಾಗ ಬ್ರಹ್ಮನ ಸುಳಿವೇ ಕಾಣಿಸುವುದಿಲ್ಲ—ಏಕಮೇವಾದ್ವಿತೀಯ ಸತ್ಯದ ಗಂಧವೇ ಇಲ್ಲ. ನಮಗೆ ಕಾಣುತ್ತಿರುವುದು ಕೇವಲ ಮರ, ಮಣ್ಣು, ಮನೆ, ಬಾಗಿಲು, ಮನುಷ್ಯ, ಗುರು ಇತ್ಯಾದಿಗಳೇ—ಇನ್ನೂ ಹೆಚ್ಚೆಂದರೆ, ನೀಲ ನಕ್ಷತ್ರಖಚಿತ ಅನಂತ ಆಕಾಶ, ಶುಭ್ರಕಿರೀಟ ಹಸುರು ಉಡುಪನ್ನು ಧರಿಸಿದ ಪರ್ವತವು ಅದನ್ನು ಸ್ಪರ್ಶಿಸಲು ಸ್ಪರ್ಧಿಸುತ್ತಿದೆ ಮತ್ತು ಕೆಳ ಮುಖ ಹರಿಯುವ ನದಿಗಳು ತಮ್ಮ ಕಲಕಲನಾದದಿಂದ ಆ ರೀತಿ ಸ್ಪರ್ಧೆ ಸರಿಯಲ್ಲ, ದೀನಭಾವದಿಂದಿರು ಎಂದು ಪರ್ವತಕ್ಕೆ ಬೋಧಿಸುವಂತಿದೆ—ಈ ದೃಶ್ಯ ನಮಗೆ ಕಾಣುತ್ತದೆ. ಅಥವಾ ಗಾಳಿಯ ಆಘಾತಕ್ಕೊಳಗಾದ ವಿಶಾಲ ಸಮುದ್ರವು ಎಲ್ಲವನ್ನೂ ಕಬಳಿಸುವಂತೆ ಓಡಿ ಬರುತ್ತಿದೆ, ಆದರೆ ಎಷ್ಟೇ ಪ್ರಯತ್ನಿಸಿದರೂ ತೀರವನ್ನು ಮೀರಿ ಬರಲಾರದು—ಈ ದೃಶ್ಯ ಕಣ್ಮುಂದೆ ವಿರಾಜಿಸುತ್ತದೆ. ಋಷಿಗಳು ಯಾವ ಭಂಗಿಯ ಅಮಲಿನಿಂದ ಈ ರೀತಿ ಹೇಳಿರಬಹುದು—ಎಂದು ಚಿಂತಿಸುತ್ತೇವೆ. ಋಷಿಗಳು ಈಗ ಹೇಳಬಹುದು: 'ಹಾಗಲ್ಲಪ್ಪ, ಆತ್ಮನಿಗ್ರಹದಿಂದ ಪವಿತ್ರತೆಯನ್ನು ಪಡೆಯಬೇಕು, ಮನಸ್ಸನ್ನು ಸ್ಥಿರಗೊಳಿಸಬೇಕು. ಆಗ ನಾವು ಹೇಳುವುದು ಅರ್ಥವಾಗುತ್ತದೆ, ಸರಿ ಎನಿಸುತ್ತದೆ. ಜಗತ್ತೆಂಬುದು ನಿಮ್ಮ ಒಳಗಿನ ಭಾವಗಳ ಬಾಹ್ಯ ಅಭಿವ್ಯಕ್ತಿ, ಅವುಗಳ ಮೂರ್ತರೂಪ ಎಂಬುದು ಆಗ ತಿಳಿಯುತ್ತದೆ. ನಿಮ್ಮೊಳಗೆ ನಾನಾತ್ವವಿರುವುದರಿಂದ ನೀವು ಹೊರಗಡೆಯೂ ನಾನಾತ್ವವನ್ನು ನೋಡುತ್ತಿರುವಿರಿ.' ಇದಕ್ಕೆ ನಾವು ಹೇಳುತ್ತೇವೆ : 'ಇದಕ್ಕೆಲ್ಲ ನಮಗೆ ಅವಕಾಶವೆಲ್ಲಿ ? ನಮ್ಮ ಹೊಟ್ಟೆಪಾಡಿಗೆ ನೋಡಿಕೊಳ್ಳಬೇಕು. ಮತ್ತೆ ಇಂದ್ರಿಯಗಳು ಸದಾ ಪೀಡಿಸುತ್ತವೆ.' ಅಥವಾ ಹೇಳುತ್ತೇವೆ : 'ನಿಮ್ಮ ಬ್ರಹ್ಮನನ್ನು ನೋಡಬೇಕಾದರೆ ಏನೇನೊ ಎಲ್ಲ ಮಾಡಬೇಕು. ಅದು ಒಂದೆರಡು ದಿನದ, ತಿಂಗಳ ಅಥವಾ ವರ್ಷದ ಕೆಲಸವಲ್ಲ. ಒಂದು ಜನ್ಮದಲ್ಲಿಯೇ ಅದನ್ನು ಸಾಧಿಸಬಹುದೆಂಬುದೂ ಸಂದೇಹ. ನಿಮ್ಮ ಮಾತನ್ನು ಕೇಳಿ ಆ ಪ್ರಯತ್ನದಲ್ಲಿ ತೊಡಗಿ ಒಂದುವೇಳೆ ಆ ಬ್ರಹ್ಮನನ್ನು ಪಡೆಯಲಾಗದಿದ್ದರೆ ಆ ಅನಂತ ಆನಂದಲಾಭ ಎಲ್ಲ ಮೋಸ ಎಂದೆನಿಸುತ್ತದೆ. ಆಗ ಅದೂ ಇಲ್ಲ, ಇದೂ ಇಲ್ಲ ಎಂದಾಗುತ್ತದೆ. ಈ ನಶ್ವರವಾದ ಸುಖವೂ ಹೋಯಿತು, ಮತ್ತೆ ಆ ಅನಂತ ಸುಖವೂ ಸಿಗಲಿಲ್ಲ. ಆಗ ನಮ್ಮ ಗತಿಯೇನು ? ನೀವೇನೊ ಅನಂತ ಸುಖದ ಆಶ್ವಾಸನೆ ನೀಡುತ್ತೀರಿ, ಒಳ್ಳೆಯದು. ಅದು ನಿಮಗೆ, ನಿಮ್ಮ ಶಿಷ್ಯರಿಗೇ ಇರಲಿ. ನಮಗೆ ಈ ರೂಪರಸಾದಿಗಳಲ್ಲಿ ಏನು ಅಲ್ಪಸ್ವಲ್ಪ ಸುಖ ಸಿಕ್ಕುವುದೊ ಅದೇ ಸಾಕು. ನಿಮ್ಮ ಏನೇನೊ ತರ್ಕ—ಯುಕ್ತಿಗಳ ಮೂಲಕ ನಮ್ಮ ಈ ಅಲ್ಪ ಸುಖವನ್ನೂ ಕೆಡಿಸಬೇಡಿ.'

11. ಈಗ ವಿಜ್ಞಾನಿಯು ಬಂದು ನಮಗೆ ಹೇಳುತ್ತಾನೆ : 'ನಾನು ಯಂತ್ರದ

ಸಹಾಯದಿಂದ ನಿಮಗೆ ತೋರಿಸುತ್ತೇನೆ, ಒಂದೇ ಪ್ರಾಣಪದಾರ್ಥವು ಎಲ್ಲವನ್ನೂ ವ್ಯಾಪಿಸಿಕೊಂಡಿದೆ ಎಂಬುದನ್ನು. ಇಟ್ಟಿಗೆ ಮರ ಗಿಡ ಮನುಷ್ಯ ಪ್ರಾಣಿ–ಎಲ್ಲದರ ಹಿಂದೆಯೂ ಈ ಪ್ರಾಣಶಕ್ತಿ ಇದೆ, ಅದೇ ಬೇರೆ ಬೇರೆ ರೂಪದಲ್ಲಿ ಪ್ರಕಾಶಿಸುತ್ತಿದೆ.' ಎಲ್ಲದರಲ್ಲೂ ಪ್ರಾಣ ಸ್ಪಂದನವಿರುವುದನ್ನು ನಾವೂ ನೋಡುತ್ತೇವೆ. ಅವನಿಗೆ ನಮ್ಮ ಉತ್ತರ : 'ಅದು ಸರಿಯಪ್ಪ ! ನಿನ್ನ ಬುದ್ಧಿಶಕ್ತಿಯನ್ನು ನಾವು ಮೆಚ್ಚುತ್ತೇವೆ. ಆದರೆ ಆ ಜ್ಞಾನವನ್ನು ಪಡೆದದ್ದರಿಂದ ಏನಾಗುತ್ತದೆ ಹೇಳು ? ಈ ವಿಷಯವನ್ನು ನಮ್ಮ ಹಿಂದಿನ ಋಷಿಗಳು ಬಹಳ ಹಿಂದೆಯೇ ಹೇಳಿರುವರು.* ನೀನು ಅದನ್ನೇ ಪ್ರಯೋಗದ ಮೂಲಕ ಪ್ರಮಾಣೀಕರಿಸಿರುವೆ ಅಷ್ಟೆ. ಅದರ ಸಹಾಯದಿಂದ ಇಂದ್ರಿಯ ಸುಖ ವೃದ್ಧಿಯಾಗುತ್ತದೆಯೆ, ಹೇಳು ? ಹಾಗಿದ್ದರೆ ಅದನ್ನು ಅರ್ಥಮಾಡಿಕೊಳ್ಳಬಲ್ಲೆ.' ಇದಕ್ಕೆ ವಿಜ್ಞಾನಿಯು ಹೇಳಬಹುದು : 'ಯಾಕಾಗುವುದಿಲ್ಲ, ಖಂಡಿತ ಆಗುತ್ತದೆ, ಈಗ ನೋಡು, ವಿದ್ಯುತ್‌ಶಕ್ತಿಯನ್ನು ಕಂಡುಹಿಡಿದಮೇಲೆ ದೇಶ–ವಿದೇಶಗಳ ಸುದ್ದಿಯನ್ನು ಪಡೆಯುವುದು ಎಷ್ಟೊಂದು ಸುಲಭವಾಯಿತು ? ಉಗಿಯ ಶಕ್ತಿಯ ಜ್ಞಾನದಿಂದ ರೈಲು, ಹಡಗು, ವಿವಿಧ ಕಾರ್ಖಾನೆಗಳು, ಗಿರಣಿಗಳು–ಇವೆಲ್ಲ ಬಂದುವು. ಇದರಿಂದ ವ್ಯಾಪಾರ ವೃದ್ಧಿಯಾಗಿ ಹೆಚ್ಚು ಹಣ ಗಳಿಸಲು ಸಹಾಯಕವಾಯಿತು. ಮತ್ತೆ ಹಣದಿಂದ ಎಲ್ಲ ಸುಖವನ್ನೂ ಪಡೆಯಬಹುದು. ನಿಮ್ಮ ಸುಖಕ್ಕೆ ಅಡ್ಡಿ ಬರುವ ಎಲ್ಲ ಶತ್ರುಗಳನ್ನೂ ನೀವು ಈಗ ಸುಲಭವಾಗಿ ನಾಶಗೊಳಿಸಬಹುದು. ಏಕೆಂದರೆ ಅನೇಕ ಬಗೆಯ ಸ್ಫೋಟಕ ದ್ರವ್ಯಗಳನ್ನು ಕಂಡುಹಿಡಿದಿದ್ದೇವೆ, ಬಂದೂಕು ಬಾಂಬು ಮದ್ದು ಗುಂಡುಗಳಿವೆ. ನಮಗೆ ಈಗ ಪರಿಚಿತವಾಗಿರುವ ಈ ಸರ್ವವ್ಯಾಪೀ ಶಕ್ತಿಯು ಮುಂದೆಯೂ ನಮಗೆ ಎಷ್ಟೋ ಅನುಕೂಲತೆಗಳನ್ನು ನೀಡುವುದರಲ್ಲಿ ಸಂಶಯವಿಲ್ಲ.' ಅದಕ್ಕೆ ನಾವು ಹೇಳುತ್ತೇವೆ : 'ಅದು ನಿಜ. ನಮಗೆ ಈಗ ಮುಖ್ಯವಾಗಿ ಬೇಕಾಗಿರುವುದು ಇಂದ್ರಿಯ ಸುಖ. ಈ ಹೊಸದಾಗಿ ಕಂಡುಹಿಡಿದ ಶಕ್ತಿಯ ಸಹಾಯದಿಂದ ನಮ್ಮ ಸುಖವನ್ನು ವೃದ್ಧಿಗೊಳಿಸುವ ಯಾವುದಾದರೊಂದನ್ನು ಬೇಗ ಕಂಡುಹಿಡಿಯಿರಿ. ಆಗಲೇ ನೀವು ನಿಜವಾಗಿಯೂ ಬುದ್ಧಿವಂತರು ಎಂದು ತಿಳಿಯುತ್ತೇವೆ. ಹಿಂದಿನ ಋಷಿಗಳಂತೆ ಯಾವುದೊ ಅಮಲಿನಲ್ಲಿ ನೀವು ಮಾತನಾಡುತ್ತಿಲ್ಲ ಎಂದು ಆಗ ನಿಮ್ಮಲ್ಲಿ ವಿಶ್ವಾಸವಿರಿಸುತ್ತೇವೆ.' ವಿಜ್ಞಾನಿಯು ನಮ್ಮ ಮನೋಭಾವವನ್ನು ಅರಿತು 'ಹಾಗೆಯೇ ಆಗಲಿ' ಎಂದು ಹೇಳುತ್ತಾನೆ.

12. ಧರ್ಮ ಜಗತ್ತಿನಲ್ಲಿ ಜ್ಞಾನಕಾಂಡದ ಪ್ರಚಾರಕರಾದ ಋಷಿಗಳಿಗೆ "ಹಾಗೆಯೇ ಆಗಲಿ" ಎಂದು ಹೇಳಲಾಗಲಿಲ್ಲ. ಆದ್ದರಿಂದಲೇ ಈ ಎಲ್ಲ ತೊಂದರೆ. ಅವರು ಸಂಸಾರದ ಕೋಲಾಹಲದಿಂದ ದೂರವಾಗಿ ಕಾಡಿನಲ್ಲಿ ಇಂದ್ರಿಯ ಸುಖವನ್ನು ತ್ಯಜಿಸಿದ ಕೆಲವರೊಡನೆ ವಾಸಿಸಬೇಕಾಯಿತು. ಅದರಲ್ಲೇ ಅವರು ಸಂತುಷ್ಟರಾಗಿದ್ದರು. ಆದರೆ

---

* ಅಂತಃಸಂಜ್ಞಾ ಭವಂತ್ಯೇತೇ ಸುಖದುಃಖಸಮನ್ವಿತಾಃ ॥–ಮರ ಕಲ್ಲುಗಳಂತಹ ಜಡವಸ್ತುಗಳಲ್ಲಿಯೂ ಚೈತನ್ಯವಿದೆ. ಅವುಗಳೂ ಸುಖದುಃಖಗಳನ್ನು ಅನುಭವಿಸುತ್ತವೆ.

ಭಾರತದ ಧರ್ಮಜಗತ್ತಿನಲ್ಲಿ ಈ ರೀತಿ 'ಹಾಗೆಯೆ ಆಗಲಿ' ಎಂದು ಹೇಳಿದವರೇ ಇಲ್ಲ ಎನ್ನುವಂತಿಲ್ಲ. ಬೌದ್ಧಯುಗದ ಅಂತ್ಯಭಾಗದಲ್ಲಿ ಕಾಪಾಲಿಕರು ಮಾರಣ, ಉಚ್ಚಾಟನ, ವಶೀಕರಣ ಮುಂತಾದ ವಿದ್ಯೆಗಳನ್ನು ಪ್ರಸಾರ ಮಾಡಿದರು. ದೈಹಿಕ ಮತ್ತು ಮಾನಸಿಕ ವ್ಯಾಧಿಗಳನ್ನು ನಿವಾರಿಸುವ ಶಾಂತಿ–ಸ್ವಸ್ತ್ಯಯನಾದಿ ಕರ್ಮಗಳಿದ್ದುವು. ಭೂತ ಪ್ರೇತ ಗಳನ್ನು ಬಿಡಿಸುವ ಎಷ್ಟೊ ವಿಧಾನಗಳಿದ್ದುವು. ಆ ಸಮಯದಲ್ಲಿ ನೀವು ಧಾರ್ಮಿಕರು ಅನಿಸಿಕೊಳ್ಳಬೇಕಾದರೆ ನಿಮ್ಮ ತಪಶ್ಶಕ್ತಿಯಿಂದ ಏನಾದರೂ ಪವಾಡ ಮಾಡಿ ತೋರಿಸ ಬೇಕಾಗಿತ್ತು, ಶಿಷ್ಯರು ತಮ್ಮ ಪ್ರಾಪಂಚಿಕ ಸುಖವನ್ನು ನಿರ್ವಿಘ್ನವಾಗಿ ಅನುಭವಿ ಸುವಂತೆ ಅವರ ಅದೃಷ್ಟವನ್ನು ನಿಯಂತ್ರಿಸಬೇಕಿತ್ತು. ಧರ್ಮದ ಹಿಂದಿರುವ ಸತ್ಯವು ಮನುಷ್ಯನ ಪ್ರಾಪಂಚಿಕ ಸುಖದ ಆಸೆಯನ್ನು ಪೂರ್ತಿಗೊಳಿಸಲು ಸಹಾಯಕ ವಾಗುತ್ತದೆ ಎಂಬುದನ್ನು ತೋರಿಸುವುದೇ ಆ ಕಾಲದ ಧರ್ಮದ ಮುಖ್ಯಕಾರ್ಯ ವಾಗಿತ್ತು. ಆದರೆ ಕತ್ತಲೆ ಮತ್ತು ಬೆಳಕು ಒಟ್ಟಿಗೆ ಇರಲು ಹೇಗೆ ಸಾಧ್ಯ ? ಇದರ ಫಲ ವಾಗಿ ಕಾಪಾಲಿಕರು ಬೇಗನೆ ಯೋಗಭೂಮಿಯಿಂದ ಭೋಗಭೂಮಿಗಿಳಿದರು ಮತ್ತು ಮುಕ್ತಿಯನ್ನು ನೀಡುವ ಧರ್ಮದ ಹೆಸರಿನಲ್ಲಿ ಬಂಧನಪ್ರದವಾದ ಹಲವು ಬಗೆಯ ಇಂದ್ರಿಯ ಸುಖವನ್ನು ರಹಸ್ಯವಾಗಿ ಪ್ರಚಾರ ಮಾಡಿದರು. ಆಗ ಯಥಾರ್ಥ ಧರ್ಮ ಬುದ್ಧಿಯುಳ್ಳ ಜನರು, ಯೋಗ ಮತ್ತು ಭೋಗ ಇವೆರಡು ಪರಸ್ಪರ ವಿರುದ್ಧವಾದುವು ಗಳು, ಅವು ಒಟ್ಟಿಗೆ ಯಾವ ರೀತಿಯಲ್ಲಿಯೂ ಇರಲಾರವು ಎಂದು ಅರ್ಥ ಮಾಡಿ ಕೊಂಡರು. ಆಗ ಅವರು ಮತ್ತೆ ಹಿಂದಿನ ಋಷಿಗಳು ಬೋಧಿಸಿದ ಜ್ಞಾನಯೋಗವೇ ಸರಿಯೆಂದು ಅದನ್ನೇ ಅನುಸರಿಸತೊಡಗಿದರು.

13. ಸಂಸಾರಿಗಳ ಮನೋಭಾವಕ್ಕೆ ತಕ್ಕಂತೆ ನಾವೂ ಕೂಡ 'ಹಾಗೆಯೇ ಆಗಲಿ' ಎಂದು ಹೇಳುವುದಕ್ಕೆ ಅವಕಾಶವೆಲ್ಲಿದೆ ? ನಾವೀಗ ಶ್ರೀರಾಮಕೃಷ್ಣರ ಬಗ್ಗೆ ಹೇಳಲು ಹೊರಟಿರುವೆವು. ಅವರಲ್ಲಿ ತ್ಯಾಗಭಾವ ಎಷ್ಟೊಂದು ರೂಢಮೂಲವಾಗಿತ್ತೆಂದರೆ ಸುಷುಪ್ತಿಯಲ್ಲಿಯೂ ಅವರ ದೇಹಕ್ಕೆ ಲೋಹವು ತಾಕಿದರೆ ಅವರಿಗೆ ಚೇಳು ಕಡಿದಂತಾ ಗುತ್ತಿತ್ತು ಮತ್ತು ಉಸಿರಾಟವೇ ನಿಂತಂತಾಗಿ ಹೃದಯದಲ್ಲಿ ತಡೆಯಲಾಗದ ವೇದನೆ ಯುಂಟಾಗುತ್ತಿತ್ತು. ಸ್ತ್ರೀಶರೀರವನ್ನು ನೋಡಿದ ಕೂಡಲೆ ಅದು ಜಗಜ್ಜನನಿಯ ಪ್ರತಿ ಮೂರ್ತಿಯಂತೆ ಅವರಿಗೆ ಕಾಣುತ್ತಿತ್ತು. ಅವರಿಗೆ ಅತ್ಯಂತ ಪ್ರಿಯನಾದ ಮಥುರನು ಅವರಿಗೆ ಸಾವಿರಾರು ರೂಪಾಯಿಗಳನ್ನು ದಾನವಾಗಿ ಕೊಡಲು ಬಂದಾಗ ಕೋಪದಿಂದ ಅವನನ್ನು ಹೊಡೆಯಲು ಹೋಗಿದ್ದರು. ಮುಂದೆ ಈ ಎಲ್ಲ ವಿಷಯವನ್ನು ಪ್ರಸ್ತಾಪಿ ಸುತ್ತ ನಮಗೆ ಉದ್ವೇಗದಿಂದ ಹೇಳುತ್ತಿದ್ದರು : "ಮಥುರ ಮತ್ತು ನಾರಾಯಣ ಮಾರ್ವಾಡಿ ನನ್ನ ಹೆಸರಿನಲ್ಲಿ ಒಂದಷ್ಟು ಹಣಕ್ಕೆ ದಾನ ಪತ್ರ ಬರೆಯಿಸುತ್ತಾರೆಂದು ಕೇಳಿದಾಗ ತಲೆಯನ್ನು ಗರಗಸದಿಂದ ಕೊಯ್ದಂತೆ ವೇದನೆಯುಂಟಾಯಿತು." ಭೋಗೇ ಚ್ಛೆಯ ಲವಮಾತ್ರವೂ ಅವರ ಮನಸ್ಸಿನಲ್ಲಿರಲಿಲ್ಲ. ಯಾವುದೇ ಇಂದ್ರಿಯ ಸುಖವೂ ಅವರು ನಿರಂತರ ಭಗವದಾನಂದವನ್ನು ಸವಿಯುವುದರಲ್ಲಿ ತಡೆಯನ್ನುಂಟುಮಾಡು

ವಂತಿರಲಿಲ್ಲ. ನಾವು ಇಂಥ ಅಸಾಧಾರಣ ವ್ಯಕ್ತಿಯ ಕತೆಯನ್ನು ಹೇಳಲು ಹೊರಟರೆ ಸಂಸಾರ ಸುಖದಲ್ಲಿಯೇ ಮತ್ತರಾಗಿರುವವರನೇಕರ ನಿಂದೆಯನ್ನು ಕೇಳಬೇಕಾಗುವುದೆಂದು ನಮಗೆ ಗೊತ್ತಿತ್ತು. ಅಷ್ಟೇ ಅಲ್ಲ, ನಿಮ್ಮ ಮಕ್ಕಳು, ಮೊಮ್ಮಕ್ಕಳು, ನೆಂಟರು, ಸ್ನೇಹಿತರು—ಇವರುಗಳಲ್ಲಿ ಸರಳ ಹೃದಯದ ಯಾರಾದರೂ ಈ ಅದ್ಭುತ ವ್ಯಕ್ತಿಯ ಉಪದೇಶದಿಂದ ಆಕರ್ಷಿತರಾಗಿ ಸಂಸಾರವನ್ನು ತ್ಯಜಿಸಿ ಹೊರಟರೆ, ಆಗ ಈ ದಿವ್ಯ ಪುರುಷನನ್ನೇ ಕಟುವಾಗಿ ಟೀಕಿಸುತ್ತೀರಿ ಎಂಬುದೂ ನಮಗೆ ತಿಳಿದಿತ್ತು. ಆದರೆ ಒಮ್ಮೆ ಈ ಕೆಲಸದಲ್ಲಿ ಕೈಹಾಕಿದಮೇಲೆ ನಾವು ಮತ್ತೆ ಹಿಂತೆಗೆಯುವಂತಿಲ್ಲ ಮತ್ತು ವಾಸ್ತವ ಸತ್ಯವನ್ನು ಮರೆಮಾಚುವಂತೆಯೂ ಇಲ್ಲ. ನಮಗೆ ತಿಳಿದಿರುವುದನ್ನೆಲ್ಲ ಹೇಳದೆ ವಿಧಿಯಿಲ್ಲ, ಹಾಗೆ ಹೇಳದಿದ್ದರೆ ಮನಸ್ಸಿಗೆ ಸಮಾಧಾನವೂ ಇರುವುದಿಲ್ಲ. ಯಾರೋ ಒತ್ತಾಯಪೂರ್ವಕವಾಗಿ ನಮ್ಮಿಂದ ಹೇಳಿಸುವಂತಿದೆ! ಆದ್ದರಿಂದ ಈ ದೇವಮಾನವನ ಬಗ್ಗೆ ನಮಗೆ ತಿಳಿದಿರುವುದನ್ನೆಲ್ಲ ನಾವು ಹೇಳುತ್ತ ಹೋಗುತ್ತೇವೆ, ನಿಮಗೆ ಎಷ್ಟು ಬೇಕೋ ಅಷ್ಟನ್ನು ತಲೆ-ಬಾಲವನ್ನು ಕತ್ತರಿಸಿ ಎಷ್ಟು ಸಾಧ್ಯವೊ ಅಷ್ಟನ್ನು ಸ್ವೀಕರಿಸಿ ಅಥವಾ ಯಾರೋ ಗಾಂಜಾಕೋರರ ಅಸಂಬದ್ಧ ಪ್ರಲಾಪ ಇದು ಎಂದು ಪುಸ್ತಕವನ್ನು ದೂರ ಎಸೆದು ಹೊಸ ಹೊಸ ಹೂವಿನ ವಿಷಯಮಧುವನ್ನು ಕುಡಿಯಲು ಓಡಿಹೋಗಿ. ಮುಂದೆ ಒಂದು ಕಾಲದಲ್ಲಿ ಸಂಸಾರದ ಅನೇಕ ಕಷ್ಟನಷ್ಟಗಳನ್ನು ಅನುಭವಿಸಿ 'ವಿಷಯಮಧು ಕಾಮ-ಕುಸುಮಗಳೆಲ್ಲ ತುಚ್ಛವೆನಿಸಿದ ಮೇಲೆ' ಈ ಮಹಾಪುರುಷನ ಲೀಲಾಪ್ರಸಂಗವನ್ನು ಓದಿ. ಆಗ ನಿಮಗೂ ಶಾಂತಿ ಲಭಿಸುತ್ತದೆ ಮತ್ತು ಶ್ರೀರಾಮಕೃಷ್ಣರ ಮೌಲ್ಯವೂ ನಿಮಗೆ ಅರ್ಥವಾಗುತ್ತದೆ.

14. 'ರಾಮಲಾಲನ' ಅದ್ಭುತ ಲೀಲೆಯನ್ನು ಕುರಿತು ಮಾತನಾಡುತ್ತ ಶ್ರೀರಾಮಕೃಷ್ಣರು ಹೀಗೆ ಹೇಳುತ್ತಿದ್ದರು : "ಒಂದೊಂದು ದಿನ ಅಡಿಗೆಯೆಲ್ಲ ಮುಗಿಸಿ ನೈವೇದ್ಯ ನೀಡಬೇಕೆಂದಿರುವಾಗ ಬಾಬಾಜಿ ನೋಡುತ್ತಾನೆ ರಾಮಲಾಲ ಎಲ್ಲೂ ಕಾಣಿಸುತ್ತಿರಲಿಲ್ಲ. ಆಗ ಅವನು ವ್ಯಥೆಯಿಂದ ಇಲ್ಲಿಗೆ (ಶ್ರೀರಾಮಕೃಷ್ಣರೆಡೆಗೆ) ಓಡಿಬರುತ್ತಿದ್ದ. ಕೊಠಡಿಯಲ್ಲಿ ಅವನು ಆಟವಾಡುತ್ತಿರುವುದನ್ನು ನೋಡಿ ಅಭಿಮಾನದಿಂದ ಏನೇನೊ ಹೇಳುತ್ತಿದ್ದ : 'ನಾನು ಅಷ್ಟೊಂದು ಕಷ್ಟಪಟ್ಟು ಅಡಿಗೆ ಮಾಡಿ ನಿನಗೆ ಉಣಿಸಬೇಕೆಂದು ನಿನಗಾಗಿ ಎಲ್ಲ ಕಡೆ ಹುಡುಕುತ್ತಿದ್ದರೆ ನೀನು ಇಲ್ಲಿ ನಿಶ್ಚಿಂತೆಯಿಂದ ಇದ್ದೀಯೆ. ನಿನ್ನ ರೀತಿಯೇ ಹೀಗೆ, ನಿನಗೆ ಇಷ್ಟಬಂದಂತೆ ಮಾಡುತ್ತೀಯೆ, ಸ್ವಲ್ಪವೂ ದಯೆ ದಾಕ್ಷಿಣ್ಯವಿಲ್ಲ. ತಂದೆ ತಾಯಿಗಳನ್ನು ಬಿಟ್ಟು ಕಾಡಿಗೆ ಹೋದೆ. ತಂದೆ ಅತ್ತು ಅತ್ತು ಪ್ರಾಣಬಿಟ್ಟರೂ ನೀನು ಹಿಂದಿರುಗಲಿಲ್ಲ—ಅವನಿಗೆ ದರ್ಶನ ನೀಡಲಿಲ್ಲ.' ಹೀಗೆ ಹೇಳುತ್ತ ರಾಮಲಾಲನನ್ನು ಎಳೆದುಕೊಂಡು ಹೋಗಿ ಉಣಿಸುತ್ತಿದ್ದ. ಹೀಗೆಯೇ ಎಷ್ಟೋ ದಿನಗಳು ಕಳೆದುವು. ಆ ಸಾಧುವು ಇಲ್ಲಿ ಅನೇಕ ದಿನಗಳು ಇದ್ದ. ಏಕೆಂದರೆ ರಾಮಲಾಲನಿಗೆ ಇಲ್ಲಿಂದ ಹೊರಟುಹೋಗುವುದಕ್ಕೆ ಇಷ್ಟವಿರಲಿಲ್ಲ, ಮತ್ತೆ ಅವನಿಗೂ ಬಹಳಕಾಲದಿಂದ ಆದರಿಸುತ್ತಿದ್ದ ರಾಮಲಾಲನನ್ನು ಇಲ್ಲಿ ಬಿಟ್ಟು ಹೋಗಲು ಸಾಧ್ಯವಾಗಲಿಲ್ಲ.

"ಅನಂತರ ಒಂದು ದಿನ ಇದ್ದಕ್ಕಿದ್ದಂತೆ ಬಾಬಾಜಿಯು ಬಂದು ಕಂಬನಿಗರೆಯುತ್ತ ಹೇಳಿದ : 'ರಾಮಲಾಲನು ಕೃಪೆಯಿಂದ ನನ್ನ ಹೃದಯದ ಆಸೆಯನ್ನು ಪೂರ್ತಿಗೊಳಿಸಿದನು. ನಾನು ಹೇಗೆ ಅವನನ್ನು ನೋಡಬೇಕೆಂದಿದ್ದೆನೊ ಹಾಗೆಯೆ ದರ್ಶನವಿತ್ತಿರುವನು. ಇಲ್ಲಿಂದ ಹೋಗಲು ಅವನಿಗೆ ಇಷ್ಟವಿಲ್ಲವಂತೆ. ನಿನ್ನನ್ನು ಬಿಟ್ಟು ಹೋಗಲು ಅವನಿಗೆ ಸ್ವಲ್ಪವೂ ಇಷ್ಟವಿಲ್ಲ. ಈಗ ನನ್ನ ಮನಸ್ಸಿಗೆ ಯಾವ ದುಃಖವೂ ಇಲ್ಲ, ಕಷ್ಟವೂ ಇಲ್ಲ. ನಿನ್ನೊಡನೆ ಅವನು ಸುಖವಾಗಿರುತ್ತಾನೆ, ಆನಂದದಿಂದ ಆಟವಾಡಿಕೊಂಡಿರುತ್ತಾನೆ. ಅದೇ ನನಗೆ ಅತ್ಯಂತ ಸಂತೋಷ. ಅವನ ಸುಖವೇ ನನ್ನ ಸುಖ—ನಾನೀಗ ಈ ಸ್ಥಿತಿಯನ್ನು ಮುಟ್ಟಿದ್ದೇನೆ. ಆದ್ದರಿಂದ ಅವನನ್ನು ನಾನು ಇಲ್ಲಿಯೇ ಬಿಟ್ಟು ಬೇರೆಡೆ ಹೋಗಲು ಸಿದ್ಧನಿದ್ದೇನೆ. ಅವನು ನಿನ್ನೊಡನೆ ಸುಖವಾಗಿದ್ದಾನೆ ಎಂಬುದನ್ನು ಯೋಚಿಸಿಯೇ ನನಗೆ ಮಹದಾನಂದವಾಗುತ್ತದೆ.' ಹೀಗೆ ಹೇಳಿ ರಾಮಲಾಲನನ್ನು ನನಗೇ ಬಿಟ್ಟು ಅವನು ಹೊರಟುಹೋದ. ಅಂದಿನಿಂದ ರಾಮಲಾಲ ಇಲ್ಲಿಯೇ ಇದ್ದಾನೆ."

15. ಶ್ರೀರಾಮಕೃಷ್ಣರ ದಿವ್ಯ ಸಂಪರ್ಕದಿಂದ ಆ ಸಾಧುವಿಗೆ ನಿಃಸ್ವಾರ್ಥ ಪ್ರೀತಿಯ ರುಚಿಯನ್ನು ಸವಿಯಲು ಸಾಧ್ಯವಾಯಿತು ಮತ್ತು ಇಂಥ ಪ್ರೀತಿಯಲ್ಲಿ ವಸ್ತುವಿನಿಂದ ಬೇರೆಯಾಗುವ ಪ್ರಸಂಗವೇ ಇಲ್ಲ ಎಂಬುದನ್ನೂ ಅವನು ಅರಿತನು. ತನ್ನ ಪ್ರೇಮಾರಾಧ್ಯ ವಸ್ತು ಯಾವಾಗಲೂ ತನ್ನ ಹತ್ತಿರವೇ ಇರುವುದು, ಯಾವಾಗ ಬೇಕಾದರೂ ದರ್ಶನ ಪಡೆಯಬಹುದು ಎಂಬುದನ್ನೂ ಅರಿತನು. ಆ ಸಾಧುವು ಈ ಆಶ್ವಾಸನೆಯನ್ನು ಪಡೆದ ಮೇಲೆಯೇ ಅವನಿಗೆ ರಾಮಲಾಲನನ್ನು ಬಿಟ್ಟುಹೋಗಲು ಸಾಧ್ಯವಾಯಿತು ಎಂಬುದರಲ್ಲಿ ಸಂಶಯವಿಲ್ಲ.

16. ಶ್ರೀರಾಮಕೃಷ್ಣರು ಹೇಳುತ್ತಿದ್ದರು : "ಇನ್ನೊಬ್ಬ ಸಾಧು ಬಂದಿದ್ದ, ಅವನಿಗೆ ಭಗನ್ನಾಮದಲ್ಲಿಯೇ ಪೂರ್ಣ ವಿಶ್ವಾಸ. ಅವನೂ ರಾಮಾವತ್ ಸಂಪ್ರದಾಯದವನು. ಅವನ ಹತ್ತಿರ ಒಂದು ಲೋಟ ಮತ್ತು ಒಂದು ಪುಸ್ತಕ ಬಿಟ್ಟರೆ ಬೇರೇನೂ ಇರಲಿಲ್ಲ. ಆ ಪುಸ್ತಕದ ಮೇಲೆ ಅವನಿಗೆ ತುಂಬ ಭಕ್ತಿ. ಅದನ್ನು ನಿತ್ಯ ಹೂವಿನಿಂದ ಪೂಜಿಸುತ್ತಿದ್ದ, ಮತ್ತು ಒಮ್ಮೊಮ್ಮೆ ತೆರೆದು ಓದುತ್ತಿದ್ದ. ಅವನೊಡನೆ ಮಾತುಕತೆಯಾದ ಮೇಲೆ ಒಂದು ದಿನ ಅವನನ್ನು ತುಂಬ ಪೀಡಿಸಿ ಆ ಪುಸ್ತಕವನ್ನು ನೋಡಲು ತೆಗೆದುಕೊಂಡೆ. ಅದನ್ನು ತೆರೆದು ನೋಡುತ್ತೇನೆ, ಅದರಲ್ಲಿ ಬೇರೇನೂ ಇರಲಿಲ್ಲ—ಕೇವಲ ಕೆಂಪು ಮಸಿಯಲ್ಲಿ ದೊಡ್ಡ ಅಕ್ಷರಗಳಲ್ಲಿ ಬರೆದ 'ಓಂ ರಾಮಃ' ಎಂದಷ್ಟೇ ಇತ್ತು. ಅವನು ಹೇಳಿದ: 'ದೊಡ್ಡ ದೊಡ್ಡ ಗ್ರಂಥಗಳನ್ನು ಓದುವುದರಿಂದ ಏನು ಪ್ರಯೋಜನ? ಒಬ್ಬನೇ ಭಗವಂತನಿಂದ ವೇದ ಪುರಾಣಾದಿಗಳೆಲ್ಲ ಹೊರಬಂದಿವೆ. ಅವನು ಮತ್ತು ಅವನ ಹೆಸರಿನಲ್ಲಿ ಯಾವ ಭೇದವೂ ಇಲ್ಲ. ಆದ್ದರಿಂದ ನಾಲ್ಕು ವೇದಗಳಲ್ಲಿ, ಹದಿನೆಂಟು ಪುರಾಣಗಳಲ್ಲಿ ಏನೇನಿದೆಯೊ ಅವೆಲ್ಲ ಅವನ ಒಂದೇ ಹೆಸರಿನಲ್ಲಿವೆ. ಆದಕ್ಕಾಗಿಯೇ ಅವನ ಹೆಸರನ್ನೇ ಹಿಡಿದುಕೊಂಡಿದ್ದೇನೆ.' ಅವನಿಗೆ ನಾಮದಲ್ಲಿ ಅಷ್ಟೊಂದು ವಿಶ್ವಾಸವಿತ್ತು."

17. ಹೀಗೆ ಶ್ರೀರಾಮಕೃಷ್ಣರು ಅನೇಕ ಸಾಧುಗಳ ವಿಚಾರ ಹೇಳುತ್ತಿದ್ದರು. ಅಷ್ಟೆ ಅಲ್ಲದೆ, ಆ ರಾಮಾವತ್ ಬಾಬಾಜೀಗಳಿಂದ ತಾವು ಕಲಿತ ಭಜನೆಗಳನ್ನು ನಮ್ಮ ಮುಂದೆ ಹಾಡುತ್ತಿದ್ದರು. ಉದಾಹರಣೆಗೆ :

ನನ ರಾಮನನು ಗುರುತಿಸದಿದ್ದರೆ,
ಓ ಮನವೇ,
ಮತ್ತಿನ್ನೇನನು ಗುರುತಿಸುವೆ ?
ರಾಮರಸದ ರುಚಿ ಬಲ್ಲ ಸಾಧುವನು
ವಿಷಯಸುಖದ ಸಂಸಾರಿಯು ತಿಳಿಯುವನೇನು ?
ಕುಲದುದ್ಧಾರವು ಸುಪುತ್ರನಿಂದಲೆ
ಉಳಿದ ಮಕ್ಕಳಿಗೆ ಏನು ಬೆಲೆ ?

* * *

ಸೀತಾಪತಿ ಶ್ರೀರಾಮಚಂದ್ರ
ರಘುಪತಿ, ಈ ರಘುವರ
ನಿರುಪಮಾನ, ಮಂದಸ್ಮಿತ
ವಿಶಾಲನೇತ್ರ ಸುಂದರ.

ಭ್ರೂವಿಭ್ರಮ ಶೋಭೆಯಲ್ಲಿ
ಮೆರೆವ ವದನ ಮಂಡಲ
ಉದಯ ಸೂರ್ಯನಂಥ ತಿಲಕ,
ಹೊಳೆವ ಕರ್ಣಕುಂಡಲ.

ತೂಗುತಲಿದೆ ಎದೆಯ ಮೇಲೆ
ತಾರಾಗಣ ಪರಿಶೋಭಿತ
ಕೊರಳ ಹಾರ ಬಂಧುರ
ಗಿರಿಶಿರದಿಂದಿಳಿದುಬರುವ
ಗಂಗೆಯಂತೆ ಸುಂದರ.

ಸರಯೂನದಿ ತೀರದಲ್ಲಿ
ವಿಹರಿಸುವೀ ರಾಮನ
ಕಾಣುವನಿದೊ ತುಲಸಿದಾಸ
ಪುಲಕಗೊಂಡು ತನುಮನ.

ಕೆಲವೊಮ್ಮೆ ಶ್ರೀರಾಮಕೃಷ್ಣರು ಆ ಸಾಧುಗಳಿಂದ ಕಲಿತ ದೋಹಾಗಳನ್ನು ನಮಗೆ ಹೇಳುತ್ತಿದ್ದರು. ಅವರು ಹೇಳುತ್ತಿದ್ದರು : "ಕಳ್ಳತನ, ಸ್ತ್ರೀಸಂಗ ಮತ್ತು ಸುಳ್ಳು ಹೇಳುವುದು—ಈ ಮೂರರಿಂದ ನಿಮ್ಮನ್ನು ನೀವು ಯಾವಾಗಲೂ ರಕ್ಷಿಸಿಕೊಳ್ಳಬೇಕು ಎಂದು

ಆ ಸಾಧುಗಳು ಉಪದೇಶಿಸುತ್ತಾರೆ." ಮತ್ತೆ ಹೇಳುತ್ತಿದ್ದರು : "ತುಲಸೀದಾಸನ ಈ ದೋಹದಲ್ಲಿ ಏನು ಹೇಳಿದೆಯೊ ಆದನ್ನು ಕೇಳಿ :

> ಸತ್ಯವಚನ, ಅಧೀನತೆ, ಪರಧನ ಉದಾಸೀನತೆ-
> ಇವುಗಳಿಂದ ಹರಿ ಸಿಗದಿದ್ದರೆ ತುಲಸೀದಾಸನೇ
> ಅದಕ್ಕೆ ಜವಾಬ್ದಾರ.
> ಸತ್ಯವಚನ, ಅಧೀನತೆ, ಪರಸ್ತ್ರೀಯನ್ನು
> ತಾಯಿಯಂತೆ ಕಾಣುವುದು-
> ಇವುಗಳಿಂದ ಹರಿ ಸಿಗದಿದ್ದರೆ ತುಲಸೀದಾಸನು
> ಸುಳ್ಳುಗಾರನಾಗುತ್ತಾನೆ.

"ಅಧೀನತೆ ಯಾವುದು ಗೊತ್ತೆ–ದೀನಭಾವ. ನಿಜವಾದ ದೀನಭಾವವುಂಟಾದರೆ ಅಹಂಕಾರ ನಾಶವಾಗುತ್ತದೆ, ಮತ್ತು ಈಶ್ವರನನ್ನು ಪಡೆಯಲು ಸಾಧ್ಯವಾಗುತ್ತದೆ."

**18.** ಇನ್ನೊಂದು ದಿನ ಶ್ರೀರಾಮಕೃಷ್ಣರು ಹೇಳಿದರು : "ಎಲ್ಲ ತರಹದ ಸಾಧಕ ರಿಗೆ ಅವರ ಸಾಧನೆಗೆ ಆವಶ್ಯಕವಾದ ಪದಾರ್ಥಗಳನ್ನೆಲ್ಲ ಒದಗಿಸಬೇಕು ಎಂಬ ಆಲೋ ಚನೆ ಬಂತು ನನ್ನ ಮನಸ್ಸಿಗೆ. ಅವರು ನಿಶ್ಚಿಂತೆಯಿಂದ ಭಗವತ್ಸಾಕ್ಷಾತ್ಕಾರಕ್ಕಾಗಿ ಸಾಧನೆ ಮಾಡಿಕೊಂಡಿರುವುದನ್ನು ನೋಡಿ ಆನಂದಿಸುವ ಬಯಕೆ ನನ್ನದಾಗಿತ್ತು. ನಾನು ಮಥುರನಿಗೆ ಈ ವಿಷಯ ತಿಳಿಸಿದೆ. ಅವನೆಂದ : 'ತಂದೆ, ಅದಕ್ಕೆ ಯಾವ ಅಭ್ಯಂತರವೂ ಇಲ್ಲ. ಈಗಲೆ ಎಲ್ಲ ವ್ಯವಸ್ಥೆ ಮಾಡುತ್ತೇನೆ. ನೀವು ಯಾರಿಗೆ ಏನು ಬೇಕೊ ಅದನ್ನು ಕೊಡಿ.' ದೇವಸ್ಥಾನದ ಭಂಡಾರದಲ್ಲಿ ಸಾಧುಗಳಿಗಾಗಿ ಅಕ್ಕಿ, ಬೇಳೆ, ಹಿಟ್ಟು ಮುಂತಾದು ವುಗಳ ವ್ಯವಸ್ಥೆ ಇತ್ತು. ಇದಲ್ಲದೆ ಮಥುರನು, ಲೋಟ, ಕಮಂಡಲು, ಕಂಬಳಿ, ಆಸನ ಮತ್ತು ತಾಂತ್ರಿಕ ಸಾಧನೆಗೆ ಬೇಕಾಗುವ ಭಂಗಿ, 'ಕಾರಣ' ಮುಂತಾದ ಅಮಲು ಪದಾರ್ಥ ಗಳು–ಇವುಗಳೆಲ್ಲದರ ವ್ಯವಸ್ಥೆ ಮಾಡಿದ. ಅನೇಕ ತಾಂತ್ರಿಕ ಸಾಧಕರು ಆಗ ಬರುತ್ತಿ ದ್ದರು. ಅವರು ಶ್ರೀಚಕ್ರದ ಸಾಧನೆ ಮಾಡುತ್ತಿದ್ದರು. ಅವರ ಸಾಧನೆಗೆ ಬೇಕಾಗುವ ಸುಲಿದ ಶುಂಠಿ, ಈರುಳ್ಳಿ, ಮಂಡಕ್ಕಿ, ಬೇಳೆ ಮುಂತಾದ ವಸ್ತುಗಳನ್ನು ಒದಗಿಸುತ್ತಿದ್ದೆ. ಅವರು ಇವುಗಳ ಮೂಲಕ ಜಗನ್ಮಾತೆಯನ್ನು ಪೂಜಿಸುವುದನ್ನು ನೋಡುತ್ತಿದ್ದೆ. ಕೆಲ ವೊಮ್ಮೆ ಅವರು ನನ್ನನ್ನು ತಮ್ಮ ವೃಂದಕ್ಕೆ ಕರೆದುಕೊಂಡು ಹೋಗುತ್ತಿದ್ದರು ಮತ್ತು ನನ್ನನ್ನು ವೃಂದಾಧಿಪತಿಯ ಸ್ಥಾನದಲ್ಲಿ ಕೂರಿಸಿ 'ಕಾರಣ'*ವನ್ನು ಕುಡಿಯಲು ಒತ್ತಾ ಯಿಸುತ್ತಿದ್ದರು. ನಾನು ಅವನ್ನೆಲ್ಲ ಕುಡಿಯುವುದಿಲ್ಲ, ಕೇವಲ ಅದರ ಹೆಸರು ಹೇಳಿದರೇ ಅಮಲುಂಟಾಗುತ್ತದೆ ಎಂದು ತಿಳಿದಮೇಲೆ ಅವರು ನನ್ನನ್ನು ಒತ್ತಾಯಿಸುತ್ತಿರಲಿಲ್ಲ. ಅವರೊಡನೆ ಕುಳಿತುಕೊಂಡರೇನೇ ಕಾರಣವನ್ನು ಸ್ವೀಕರಿಸಬೇಕು. ಆದ್ದರಿಂದ ನಾನು ಕಾರಣದಿಂದ ಹಣೆಯಮೇಲೆ ಮುದ್ರೆ ಒತ್ತುತ್ತಿದ್ದೆ, ಅಥವಾ ಅದನ್ನು ಮೂಸಿ ನೋಡು

---

* 'ಕಾರಣ' ಎಂದರೆ ಒಂದು ಬಗೆಯ ಮಾದಕ ದ್ರವ್ಯ.

ತ್ತಿದ್ದೆ, ಇಲ್ಲವೇ ಹೆಚ್ಚೆಂದರೆ ಬೊಟ್ಟಿನಿಂದ ಅದನ್ನು ಬಾಯಿಗೆ ಚಿಮುಕಿಸಿ ಅವರ ಬಟ್ಟಲಿಗೆ ಅದನ್ನು ಸುರಿಯುತ್ತಿದ್ದೆ. ಅವರಲ್ಲಿ ಕೆಲವರು ಅದನ್ನು ಕುಡಿದ ಕೂಡಲೇ ಭಗವಚ್ಚಿಂತನೆಯಲ್ಲಿ ಪೂರ್ಣ ತನ್ಮಯರಾಗಿ ಬಿಡುತ್ತಿದ್ದುದನ್ನು ನೋಡಿದೆ. ಅನೇಕರು ಅತ್ಯಾಸೆಯಿಂದ ಕುಡಿಯುತ್ತಿದ್ದರು. ಅವರು ಭಗವಂತನನ್ನು ಚಿಂತಿಸುವುದಂತೂ ದೂರದ ಮಾತು. ಅದರ ಬದಲು ಅಮಲಿನಿಂದ ಮತ್ತರಾಗಿ ಬಿದ್ದುಕೊಂಡಿರುತ್ತಿದ್ದರು. ಒಂದು ದಿನ ಅವರು ಕುಡಿದು ತುಂಬ ರಾದ್ಧಾಂತ ಮಾಡಿದ್ದರಿಂದ ಅನಂತರ 'ಕಾರಣ' ಕೊಡುವುದನ್ನೇ ನಿಲ್ಲಿಸಿಬಿಟ್ಟೆ. ಆದರೆ ರಾಜಕುಮಾರನು* ಮಾತ್ರ ಕುಡಿದು ಜಪದಲ್ಲಿ ತನ್ಮಯನಾಗುತ್ತಿದ್ದ. ಬೇರೆ ಕಡೆ ಮನಸ್ಸನ್ನು ಹರಿಸುತ್ತಲೇ ಇರಲಿಲ್ಲ. ಆದರೆ ಕೊನೆಯಲ್ಲಿ ಅವನಿಗೆ ಹೆಸರು ಕೀರ್ತಿಯ ಆಸೆ ತೀವ್ರವಾಯಿತು. ಅದು ಸ್ವಾಭಾವಿಕವೇ. ಅವನಿಗೆ ಹೆಂಡತಿ ಮಕ್ಕಳುಗಳಿದ್ದರು. ಮನೆಯಲ್ಲಿ ಬಡತನವಿದ್ದುದರಿಂದ ಹಣಸಂಪಾದನೆಯ ಕಡೆ ಸ್ವಲ್ಪ ಮನಸ್ಸನ್ನು ನೀಡಬೇಕಾಯಿತು. ಅದು ಏನೇ ಇರಲಿ, ಅವನು ಸಾಧನೆಗೆ ಸಹಾಯವಾಗಲೆಂದು ಮಾತ್ರ 'ಕಾರಣ'ವನ್ನು ಸ್ವೀಕರಿಸುತ್ತಿದ್ದ. ಆಸೆಯಿಂದ ಅತಿಯಾಗಿ ಕುಡಿದು ಎಂದೂ ರಾದ್ಧಾಂತ ಮಾಡುತ್ತಿರಲಿಲ್ಲ–ಅದನ್ನು ನಾನು ನೋಡಿದ್ದೇನೆ."

19. ಶ್ರೀರಾಮಕೃಷ್ಣರಿಗೆ 'ಕಾರಣ' ಸ್ವೀಕರಿಸಲಾಗುತ್ತಲೇ ಇರಲಿಲ್ಲ–ಎಂಬುದನ್ನು ನೆನಿಸಿಕೊಂಡಾಗ ಎಷ್ಟೋ ವಿಷಯಗಳು ಮನಸ್ಸಿಗೆ ಬರುತ್ತವೆ. ನಮ್ಮ ಮುಂದೆ 'ಕಾರಣ', 'ಸಿದ್ಧಿ' ಮುಂತಾದ ಶಬ್ದಗಳನ್ನು ಉಚ್ಚರಿಸುತ್ತಲೇ ಭಾವದಲ್ಲಿ ತನ್ಮಯರಾಗುತ್ತಿದ್ದುದನ್ನು ನಾವು ಎಷ್ಟು ಬಾರಿ ನೋಡಿರುವೆವು ! ಕೆಲವೊಮ್ಮೆ ಸಮಾಧಿಸ್ಥರೂ ಆಗಿಬಿಡುತ್ತಿದ್ದರು ! ಸ್ತ್ರೀಯರ ಗುಪ್ತಾಂಗದ ಹೆಸರನ್ನು ಹೇಳಿಯೇ ಅವರು ಸಮಾಧಿಸ್ಥರಾಗುತ್ತಿದ್ದುದನ್ನು ನಾವು ಎಷ್ಟೋ ಬಾರಿ ನೋಡಿರುವೆವು ! ಮತ್ತೆ ಸಮಾಧಿಸ್ಥಿತಿಯಿಂದ ಸ್ವಲ್ಪ ಕೆಳಗಿಳಿದು ಬಂದು ಆ ವಿಷಯವಾಗಿ ಹೀಗೆ ಹೇಳುತ್ತಿದ್ದರು : "ತಾಯಿ, ನೀನೇ ಪಂಚಾಶಟ್ ವರ್ಣರೂಪಿಣಿ. ನಿನ್ನ ಈ ವರ್ಣಗಳಿಂದಲೇ ವೇದ ಪುರಾಣಾದಿಗಳು ಆಗಿವೆ ಮತ್ತು ಅಶ್ಲೀಲ ಶಬ್ದಗಳೂ ಆಗಿವೆ. ವೇದ ವೇದಾಂತದ ಕ ಖ ಬೇರೆ ಅಶ್ಲೀಲ ಶಬ್ದಗಳಲ್ಲಿ ಬರುವ ಕ ಖಗಳು ಬೇರೆ ಅಲ್ಲ. ವೇದವೇದಾಂತಗಳೂ ನೀನೆ, ಅಶ್ಲೀಲ ಶಬ್ದಗಳೂ ನೀನೇ." ಹೀಗೆ ಹೇಳುತ್ತ ಮತ್ತೆ ಸಮಾಧಿಸ್ಥರಾಗುತ್ತಿದ್ದರು. ಇದನ್ನು ವಿವರಿಸುವುದಾದರೂ ಹೇಗೆ, ಅರ್ಥಮಾಡಿಕೊಳ್ಳುವುದಾದರೂ ಹೇಗೆ ? ಈ ದೇವಮಾನವರ ಕಣ್ಣಿಗೆ ಜಗತ್ತಿನ ಒಳಿತು–ಕೆಡುಕುಗಳೆಲ್ಲವೂ ಯಾವುದೋ ಅನಿರ್ವಚನೀಯವಾದ, ನಮ್ಮ ಬುದ್ಧಿಗೆ ನಿಲುಕದ ಅಪೂರ್ವ ಅಲೌಕಿಕ ಬೆಳಕಿನಿಂದ ಬೆಳಗುತ್ತಿದ್ದುವು. ಅವರಂತೆ ಜಗ

---

• ಇವನು ಕೆಲವು ವರ್ಷಗಳ ಹಿಂದೆ ದೇಹತ್ಯಾಗ ಮಾಡಿದನು. ಅವನು ಕಾಳೀಘಾಟಿನಲ್ಲಿ ವಾಸಿಸುತ್ತಿದ್ದ ಮತ್ತು ಅವನನ್ನು ಎಲ್ಲರೂ ಅಚಲಾನಂದನಾಥ ಎಂದು ಕರೆಯುತ್ತಿದ್ದರು. ಅವನಿಗೆ ಅನೇಕ ಜನ ಶಿಷ್ಯ ಪ್ರಶಿಷ್ಯರುಗಳು ಇದ್ದರು. ಅವನ ದೇಹತ್ಯಾಗದನಂತರ ಅವನ ಶಿಷ್ಯರು ಅವನ ದೇಹವನ್ನು ಕಾಳೀಘಾಟಿನ ಹತ್ತಿರದ ಗ್ರಾಮದಲ್ಲಿ ಮಹಾಸಂಭ್ರಮದಿಂದ ಸಮಾಧಿ ಮಾಡಿದರು.

ತ್ವವನ್ನು ನೋಡಬಲ್ಲ ಆ ದಿವ್ಯದೃಷ್ಟಿಯನ್ನು ಯಾರು ಪಡೆಯಬಲ್ಲರು ? ಓದುಗರು ಇದನ್ನು ಕುರಿತು ಆಳವಾಗಿ ಚಿಂತಿಸಬೇಕು. ಶ್ರೀರಾಮಕೃಷ್ಣರ ಪವಿತ್ರತೆ ಎಷ್ಟೊಂದು ಗಂಭೀರವಾದುದು ಮತ್ತು ಗ್ರಹಿಸಲಸಾಧ್ಯವಾದುದು !

ಶ್ರೀಜಗನ್ಮಾತೆಯ ಕೃಪೆಯನ್ನು ಪಡೆದ ರಾಮಪ್ರಸಾದನು ಹಾಡುತ್ತಾನೆ: "ನಾನು ಸುರಾಪಾನ ಮಾಡುವುದಿಲ್ಲ, 'ಜೈ ಕಾಳೀ' ಎಂದು ಸುಧಾಪಾನ ಮಾಡುತ್ತೇನೆ. ಇದ ರಿಂದಲೇ ನನ್ನ ಮನಸ್ಸಿನಲ್ಲಿ ಮತ್ತೇರುತ್ತದೆ. ಕುಡುಕರು ನಾನು ಮದ್ಯ ಕುಡಿದಿರುವೆ ನೆಂದು ಭಾವಿಸುತ್ತಾರೆ." ಯಾವ ರೀತಿಯ ಮದ್ಯವನ್ನೂ ಸೇವಿಸದೆ ಕೇವಲ ಭಗವದಾ ನಂದದಿಂದಲೇ ಮದ್ಯ ಸೇವಿಸುವವರಿಗೆ ಉಂಟಾಗುವಂತಹ ಅಮಲು ಬರುವುದೆಂಬು ದನ್ನು ನಾವು ಶ್ರೀರಾಮಕೃಷ್ಣರನ್ನು ನೋಡುವುದಕ್ಕೆ ಮುಂಚೆ ತಿಳಿದಿರಲೇ ಇಲ್ಲ. ಶ್ರೀ ಚೈತನ್ಯನು ಹರಿಯ ಹೆಸರನ್ನು ಉಚ್ಚರಿಸುತ್ತಲೇ ಬಾಹ್ಯಜ್ಞಾನವನ್ನು ಕಳೆದುಕೊಳ್ಳು ತ್ತಿದ್ದ ಎಂಬುದನ್ನು ಓದಿದಾಗ ನಾವು ಅದನ್ನು ಬರೆದ ಗ್ರಂಥಕರ್ತನು ಯಾವನೊ ಮೂರ್ಖನಿರಬೇಕೆಂದು ಆಗ ಭಾವಿಸುತ್ತಿದ್ದುದುಂಟು. ಆಗ ನಗರದ ಯುವಕರಲ್ಲೆಲ್ಲ ಈ ರೀತಿಯ ಒಂದು ಸಂದೇಹ ಬುದ್ಧಿ ಸಾಮಾನ್ಯವಾಗಿ ಇತ್ತು. ಅನಂತರವೇ ನಾವು ಈ ಅಲೌಕಿಕ ಪುರುಷರಾದ ಶ್ರೀರಾಮಕೃಷ್ಣರನ್ನು ನೋಡಿದ್ದು. ಕೀರ್ತನಾನಂದದಲ್ಲಿ ಉನ್ಮತ್ತರಾಗಿ ಅವರು ನರ್ತಿಸುತ್ತಿದ್ದುದನ್ನೂ, ಭಾವಸಮಾಧಿಗೆ ಹೋಗುತ್ತಿದ್ದುದನ್ನೂ ನೋಡಿದೆವು ; ಹಣ, ಲೋಹಗಳನ್ನು ಮುಟ್ಟಿದರೂ ಅವರು ಬಾಹ್ಯಜ್ಞಾನ ಕಳೆದು ಕೊಳ್ಳುವುದನ್ನು ನೋಡಿದೆವು ; 'ಸಿದ್ಧಿ', 'ಕಾರಣ' ಮುಂತಾದ ಅಮಲು ಪದಾರ್ಥಗಳ ಹೆಸರನ್ನು ಉಚ್ಚರಿಸುತ್ತಲೇ ಅವರಲ್ಲಿ ಭಗವದಾನಂದ ಉದ್ದೀಪನವಾಗುತ್ತಿದ್ದುದನ್ನು ನೋಡಿದೆವು ; ಯಾವ ಶಬ್ದಗಳನ್ನು ಉಚ್ಚರಿಸಿದರೆ ಜನಸಾಧಾರಣರಲ್ಲಿ ಕುತ್ಸಿತ ಇಂದ್ರಿಯಸುಖದ ಪ್ರಲೋಭನೆಯುಂಟಾಗುವುದೊ ಅಂತಹ ಅಶ್ಲೀಲ ಶಬ್ದಗಳನ್ನು ಉಚ್ಚರಿಸಿದಾಗ ತ್ರಿಲೋಕಯೋನಿಯಾದ ಆನಂದಮಯೀ ಶ್ರೀಜಗನ್ಮಾತೆಯ ನೆನಪಾಗಿ ದಿವ್ಯಭಾವದಲ್ಲಿ ಅವರು ತನ್ಮಯರಾಗುತ್ತಿದ್ದುದನ್ನು ನೋಡಿದೆವು ; ಇನ್ನು ಭಗವಂತನ ಮತ್ತು ಅವತಾರಪುರುಷರ ನಾಮೋಚ್ಚಾರಣೆಯ ಬಗ್ಗೆಯಂತೂ ಹೇಳಬೇಕಾಗಿಯೇ ಇಲ್ಲ ! ನಮ್ಮ ಕಣ್ಣು ಕೋರೈಸುವಂತಹ ಯಾವ ಗುಣವು ಅವರನ್ನು ಅವತಾರಪುರುಷ ರೆಂದು ಪರಿಗಣಿಸುವಂತೆ ನಮ್ಮನ್ನು ಪ್ರೇರೇಪಿಸಿತು ಎಂಬುದನ್ನು ಮತ್ತೆ ಹೇಳಬೇಕೇನು?

20: ಶ್ರೀರಾಮಕೃಷ್ಣರ ಪರಮಭಕ್ತನಾದ ರಾಮಚಂದ್ರದತ್ತನ ಮನೆ ಕಲಕತ್ತೆಯ ಸಿಮುಲಾದಲ್ಲಿತ್ತು. ಶ್ರೀರಾಮಕೃಷ್ಣರು ಅಲ್ಲಿಗೆ ಭಕ್ತರೊಡನೆ ಹೋಗಿ ಬಹಳ ಆನಂದ ದಿಂದ ಸಮಯ ಕಳೆಯುತ್ತಿದ್ದರು. ಒಂದು ದಿನ ಭಗವದ್ವಿಚಾರವಾಗಿ ಮಾತನಾಡುತ್ತ ಆನಂದದಲ್ಲಿ ಸ್ವಲ್ಪ ಹೊತ್ತು ಕಳೆದ ಮೇಲೆ ಅವರು ದಕ್ಷಿಣೇಶ್ವರಕ್ಕೆ ಹಿಂದಿರುಗಬೇಕೆಂದು ಮನೆಯಿಂದ ಹೊರಗೆ ಬಂದರು. ಮನೆ ಒಂದು ಗಲ್ಲಿಯ ಒಳಗೆ ಇತ್ತು, ಗಾಡಿ ಮನೆಯ ಹತ್ತಿರ ಬರುವಂತಿರಲಿಲ್ಲ. ಮನೆಯಿಂದ ಸ್ವಲ್ಪ ದೂರದಲ್ಲಿದ್ದ ಪೂರ್ವ ಅಥವಾ ಪಶ್ಚಿಮದ ದೊಡ್ಡ ರಸ್ತೆಯಲ್ಲಿ ಗಾಡಿಯನ್ನು ನಿಲ್ಲಿಸಿ ಮನೆಗೆ ನಡೆದುಕೊಂಡು ಬರ

ಬೇಕಿತ್ತು. ಶ್ರೀರಾಮಕೃಷ್ಣರನ್ನು ಕರೆದುಕೊಂಡು ಹೋಗಲು ಪಶ್ಚಿಮದ ದೊಡ್ಡ ರಸ್ತೆಯಲ್ಲಿ ಗಾಡಿ ಕಾದುಕೊಂಡಿತ್ತು. ಶ್ರೀರಾಮಕೃಷ್ಣರು ಆ ಕಡೆ ನಡೆದುಕೊಂಡು ಹೊರಟರು, ಭಕ್ತರು ಅವರನ್ನು ಹಿಂಬಾಲಿಸಿದರು. ಆದರೆ ಶ್ರೀರಾಮಕೃಷ್ಣರು ಭಗವದಾನಂದದಲ್ಲಿ ತೂರಾಡುತ್ತಿದ್ದರು, ಇತರರು ಅವರನ್ನು ನಡೆಸಿಕೊಂಡು ಹೋಗಬೇಕಾಯಿತು. ಇಬ್ಬರು ಅವರ ಎರಡು ಕೈಗಳನ್ನು ಹಿಡಿದುಕೊಂಡು ನಿಧಾನವಾಗಿ ಕರೆದುಕೊಂಡು ಹೋಗುತ್ತಿದ್ದರು. ಆ ಗಲ್ಲಿಯಲ್ಲಿ ಅನೇಕ ಜನ ನಿಂತುಕೊಂಡಿದ್ದರು, ಅವರು ಶ್ರೀರಾಮಕೃಷ್ಣರ ಅವಸ್ಥೆಯನ್ನು ನೋಡಿ ಏನು ಭಾವಿಸಿಯಾರು ? 'ಛೀ, ಈ ಮನುಷ್ಯ ಕುಡಿದು ಮತ್ತನಾಗಿಬಿಟ್ಟಿದ್ದಾನೆ !' ಎಂದು ಅವರವರಲ್ಲಿ ಮಾತನಾಡಿಕೊಳ್ಳತೊಡಗಿದರು. ಅವರು ಮೆತ್ತಗೆ ಹೇಳುತ್ತಿದ್ದರೂ ಅದು ನಮ್ಮ ಕಿವಿಗೆ ಬಿತ್ತು. ನಾವು ನಕ್ಕು 'ಅದು ನಿಜ' ಎಂದು ಭಾವಿಸಿದೆವು.

ಇನ್ನೊಂದು ದಿನ ದಕ್ಷಿಣೇಶ್ವರದಲ್ಲಿ ನಡೆದ ಒಂದು ಘಟನೆ. ಶ್ರೀಮಾತೆಯವರೂ ಆಗ ಅಲ್ಲಿದ್ದರು. ಶ್ರೀರಾಮಕೃಷ್ಣರು ಅವರಿಗೆ ಪಾನ್ ಸಿದ್ಧಪಡಿಸಿ, ಹಾಸಿಗೆಯ ಧೂಳನ್ನೆಲ್ಲ ಕೊಡವಿ ಕೊಠಡಿಯನ್ನು ಗುಡಿಸಿ ಸ್ವಚ್ಛವಾಗಿಡಲು ಹೇಳಿ ಕಾಳೀ ಮಂದಿರಕ್ಕೆ ಹೋದರು. ಶ್ರೀಮಾತೆಯವರು ಬಹು ಬೇಗನೆ ಎಲ್ಲ ಕೆಲಸವನ್ನು ಮುಗಿಸುವಷ್ಟರಲ್ಲಿ ಶ್ರೀರಾಮಕೃಷ್ಣರು ಮಂದಿರದಿಂದ ಹಿಂದಿರುಗಿದರು—ಅಮಲಿನಿಂದ ತೂರಾಡುತ್ತಿದ್ದರು. ಕಣ್ಣು ರಕ್ತವರ್ಣಕ್ಕೆ ತಿರುಗಿತ್ತು, ಹೇಗೆ ಹೇಗೋ ಹೆಜ್ಜೆ ಹಾಕುತ್ತಿದ್ದರು. ಕೊಠಡಿಯ ಒಳಗೆ ಪ್ರವೇಶಿಸಿ ಅವರು ತೂರಾಡುತ್ತ ಬಂದು ಶ್ರೀಮಾತೆಯವರ ಹತ್ತಿರ ನಿಂತರು. ಶ್ರೀಮಾತೆಯವರು ಒಂದೇ ಮನಸ್ಸಿನಿಂದ ಕೆಲಸದಲ್ಲಿ ನಿರತರಾಗಿದ್ದರು, ಶ್ರೀರಾಮಕೃಷ್ಣರು ಬಂದುದೇ ಅವರಿಗೆ ತಿಳಿಯಲಿಲ್ಲ. ಶ್ರೀರಾಮಕೃಷ್ಣರು ಕುಡುಕರಂತೆ ಅವರನ್ನು ಎಳೆದು "ನೋಡು, ನಾನು ಕುಡಿದ್ದೇನೆಯೆ ?" ಎಂದು ಅವರನ್ನು ಕೇಳಿದರು. ಅವರು ಹಿಂತಿರುಗಿ ಶ್ರೀರಾಮಕೃಷ್ಣರ ಭಾವಾವಸ್ಥೆಯನ್ನು ನೋಡಿ ಸ್ತಂಭಿತರಾದರು! "ಇಲ್ಲ, ಇಲ್ಲ, ನೀವೇಕೆ ಮದ್ಯ ಕುಡಿಯಬೇಕು ?" ಎಂದು ಉತ್ತರಿಸಿದರು.

ಶ್ರೀರಾಮಕೃಷ್ಣರು : "ಹಾಗಾದರೆ ತೂರಾಡುತ್ತೇನಲ್ಲ ಏಕೆ ? ಏನೂ ಮಾತನಾಡಲೂ ಆಗುತ್ತಿಲ್ಲ. ನನಗೆ ಅಮಲೇರಿದೆಯೆ ?

ಶ್ರೀಮಾತೆಯವರು : "ಇಲ್ಲ, ನೀವೇಕೆ ಮದ್ಯ ಸೇವಿಸಬೇಕು ? ನೀವು ಕಾಳಿಯ ಭಾವಾಮೃತವನ್ನು ಕುಡಿದಿರುವಿರಿ."

"ನೀನು ಸರಿಯಾಗಿ ಹೇಳಿದೆ" ಎಂದು ಶ್ರೀರಾಮಕೃಷ್ಣರು ಆನಂದವನ್ನು ವ್ಯಕ್ತಪಡಿಸಿದರು.

ಕಲಕತ್ತೆಯ ಭಕ್ತರು ಶ್ರೀರಾಮಕೃಷ್ಣರೆಡೆಗೆ ಬಂದು ಅವರ ಕೃಪೆಗೆ ಪಾತ್ರರಾದ ಮೇಲೆ ಶ್ರೀರಾಮಕೃಷ್ಣರು ಸುಮಾರು ವಾರಕ್ಕೆ ಒಂದೆರಡು ಬಾರಿಯಾದರೂ ಕಲಕತ್ತೆಯ ಯಾರಾದರೂ ಭಕ್ತರ ಮನೆಗೆ ಹೋಗುತ್ತಿದ್ದರು. ಯಾರಾದರೂ ಭಕ್ತರು ಬಹಳ ಕಾಲ ಬರದಿದ್ದರೆ ಮತ್ತು ಅವರ ಬಗ್ಗೆ ಇತರರಿಂದ ಯಾವ ಸುದ್ದಿಯೂ ತಿಳಿಯದಿದ್ದರೆ

ತಾವೇ ಅವರನ್ನು ನೋಡಲು ಓಡುತ್ತಿದ್ದರು. ಕೆಲವು ಭಕ್ತರು ನಿಯಮಿತ ಸಮಯಕ್ಕೆ ಬರುತ್ತಿದ್ದರು ಕೂಡ ಶ್ರೀರಾಮಕೃಷ್ಣರಿಗೆ ಮಧ್ಯದಲ್ಲಿಯೇ ಅವರನ್ನು ಹೋಗಿ ನೋಡ ಬೇಕೆಂದು ಮನಸ್ಸು ಚಂಚಲವಾಗುತ್ತಿತ್ತು. ಆಗ ಅವರನ್ನು ನೋಡಲು ಓಡುತ್ತಿದ್ದರು. ಭಕ್ತರ ಮನೆಗೆ ಅವರ ಶುಭಾಗಮನ ಯಾವಾಗಲೂ ಭಕ್ತರ ಒಳಿತಿಗಾಗಿಯೇ ಇರು ತ್ತಿತ್ತು. ಇದರಲ್ಲಿ ಅವರ ಸ್ವಾರ್ಥತೆ ಲವ ಮಾತ್ರವೂ ಇರುತ್ತಿರಲಿಲ್ಲ. ಬರಾಹನಗರದ ವೇಣೀ ಸಾಹಾನ ಹತ್ತಿರ ಕೆಲವು ಬಾಡಿಗೆ ಗಾಡಿಗಳಿದ್ದುವು. ಶ್ರೀರಾಮಕೃಷ್ಣರು ಆಗಾಗ ಕಲಕತ್ತೆಗೆ ಬರುತ್ತಿದ್ದುದರಿಂದ ಅವರು ಹೇಳಿ ಕಳಿಸಿದ ಕೂಡಲೇ ದಕ್ಷಿಣೇಶ್ವರಕ್ಕೆ ಗಾಡಿ ಕಳಿಸಬೇಕು ಮತ್ತು ಅವರು ಕಲಕತ್ತೆಯಿಂದ ಹಿಂದಿರುಗುವುದು ಎಷ್ಟೇ ರಾತ್ರಿಯಾದರೂ ಗಲಾಟೆ ಮಾಡಬಾರದು ಎಂದು ಅವನೊಡನೆ ಒಂದು ಒಪ್ಪಂದವಾಗಿತ್ತು. ಹೆಚ್ಚು ಸಮಯ ಕಾಯಬೇಕಾದರೆ ಅದಕ್ಕನುಗುಣವಾಗಿ ಅವನು ಹೆಚ್ಚು ಬಾಡಿಗೆ ಪಡೆಯು ತ್ತಿದ್ದ. ಮೊದಲು ಮಥುರನಾಥ, ಅನಂತರ ಪಾಣಿಹಾಟಿಯ ಮಣಿಸೇನ್, ಅನಂತರ ಶಂಭುಮಲ್ಲಿಕ್ ಮತ್ತು ಕಲಕತ್ತೆ ಸಿಂಧೂರಿಯಾಪಾಟಿಯ ಜಯಗೋಪಾಲಸೇನ್– ಇವರುಗಳು ಗಾಡಿ ಬಾಡಿಗೆಯ ಖರ್ಚನ್ನು ವಹಿಸಿಕೊಂಡಿದ್ದರು. ಮತ್ತೆ ಅವರು ಯಾರ ಮನೆಗೆ ಹೋಗುತ್ತಿದ್ದರೊ ಅವರೇ ಸಾಧ್ಯವಾದರೆ ಅಂದಿನ ಗಾಡಿ ಬಾಡಿಗೆಯನ್ನು ಕೊಡುತ್ತಿದ್ದರು.

ಇಂದು ಶ್ರೀರಾಮಕೃಷ್ಣರು ಕಲಕತ್ತೆಯ ಯದುಮಲ್ಲಿಕನ ಮನೆಗೆ ಹೋಗಬೇಕಾ ಗಿದೆ. ಮಲ್ಲಿಕನ ತಾಯಿಗೆ ಶ್ರೀರಾಮಕೃಷ್ಣರ ಮೇಲೆ ಅತ್ಯಂತ ಭಕ್ತಿ. ಅನೇಕ ದಿನಗಳಿಂದ ಆಕೆಯ ಸುದ್ದಿಯೇ ಇಲ್ಲದಿದ್ದುದರಿಂದ ಅವಳನ್ನು ನೋಡಿಕೊಂಡು ಬರಲು ಅವರು ಹೊರಟಿದ್ದರು. ಶ್ರೀರಾಮಕೃಷ್ಣರದು ಊಟ ಮುಗಿದಿದೆ, ಗಾಡಿ ಸಿದ್ಧವಾಗಿದೆ. ಆ ಸಂದರ್ಭದಲ್ಲಿ ನಮ್ಮ ಸ್ನೇಹಿತ ಅ– ಕಲಕತ್ತೆಯಿಂದ ಶ್ರೀರಾಮಕೃಷ್ಣರನ್ನು ನೋಡಲು ಬಂದನು. ಶ್ರೀರಾಮಕೃಷ್ಣರು ಅ– ನನ್ನು ನೋಡಿದಾಕ್ಷಣ ಅವನ ಕ್ಷೇಮ ಸಮಾಚಾರ ವನ್ನು ವಿಚಾರಿಸಿದರು. "ನೀನು ಬಂದಿದ್ದೀಯಲ್ಲ, ಒಳ್ಳೆಯದಾಯಿತು. ಇಂದು ನಾನು ಯದುಮಲ್ಲಿಕನ ಮನೆಗೆ ಹೊರಟಿದ್ದೇನೆ. ಹಾಗೆಯೇ ನಿನ್ನ ಮನೆಗೂ ಹೋಗಿ ಒಮ್ಮೆ ಗಿ– ನನ್ನು ನೋಡುತ್ತೇನೆ. ಅವನು ಕೆಲಸದ ನಿಮಿತ್ತ ಇತ್ತ ಕಡೆ ಬರದೆ ಬಹಳ ದಿನ ಗಳಾದುವು. ನಡಿ, ಒಟ್ಟಿಗೆ ಹೋಗೋಣ" ಎಂದರು ಅವನಿಗೆ. ಅ– ಅದಕ್ಕೆ ಸಮ್ಮತಿಸಿ ದನು. ಅ–ನಿಗೆ ಹೊಸತಾಗಿ ಶ್ರೀರಾಮಕೃಷ್ಣರ ಪರಿಚಯವಾಗಿತ್ತು, ಕೆಲವು ಬಾರಿ ಮಾತ್ರ ಅವರನ್ನು ಭೇಟಿಯಾಗಿದ್ದ. ಅವರ ಸ್ವಭಾವದ ಬಗ್ಗೆ ಅವನಿಗೆ ಹೆಚ್ಚು ಮಾಹಿತಿ ಇರಲಿಲ್ಲ. ಅತ್ಯಂತ ತುಚ್ಛವಾದ, ನಮಗೆ ಅಸಹ್ಯವೆನಿಸುವ ವಸ್ತು ಮತ್ತು ವ್ಯಕ್ತಿಗಳನ್ನು ನೋಡಿದಾಗಲೂ ಶ್ರೀರಾಮಕೃಷ್ಣರು ಎಲ್ಲೆಂದರಲ್ಲಿ ಭಗವದ್–ಭಾವದಲ್ಲಿ ಮೈಮರೆತು ಬಿಡುತ್ತಿದ್ದ ವಿಷಯ ಅವನಿಗೆ ಅಷ್ಟಾಗಿ ಗೊತ್ತಿರಲಿಲ್ಲ.

ಈಗ ಶ್ರೀರಾಮಕೃಷ್ಣರು ಗಾಡಿ ಹತ್ತಿದರು. ಯುವಕ ಭಕ್ತ ಲಾಟು (ಸ್ವಾಮಿ ಅದ್ಭುತಾನಂದ) ಶ್ರೀರಾಮಕೃಷ್ಣರ ಚೀಲ, ಗಮಚ ಮುಂತಾದ ಆವಶ್ಯಕ ವಸ್ತುಗಳನ್ನು

ಹಿಡಿದುಕೊಂಡು ಅವರ ಹಿಂದೆಯೇ ಗಾಡಿ ಹತ್ತಿದನು. ನಮ್ಮ ಸ್ನೇಹಿತ ಅ– ಕೂಡ ಹತ್ತಿದನು. ಗಾಡಿಯು ಒಂದು ಕಡೆ ಶ್ರೀರಾಮಕೃಷ್ಣರು, ಮತ್ತೊಂದು ಕಡೆ ಲಾಟು ಮತ್ತು ಅ– ಕುಳಿತರು. ಗಾಡಿ ಹೊರಟಿತು. ಬರಾಹನಗರದ ಮೂಲಕವಾಗಿ ಮತಿ ಕೊಳದ ಸಮೀಪದಲ್ಲಿ ಗಾಡಿ ಮುಂದೆ ಸಾಗಿತು. ದಾರಿಯಲ್ಲಿ ವಿಶೇಷವೇನೂ ಸಂಭವಿಸ ಲಿಲ್ಲ. ಶ್ರೀರಾಮಕೃಷ್ಣರು ಆ ಕಡೆ ಈ ಕಡೆ ನೋಡುತ್ತ ಲಾಟು ಮತ್ತು ಅ–ನನ್ನು ವಿಚಾರಿಸುತ್ತಿದ್ದರು. ಇಲ್ಲವೇ ಬೇರೆ ವಿಷಯದ ಬಗ್ಗೆ ಮಾತನಾಡುತ್ತ ನಗುತ್ತ ಇರು ತ್ತಿದ್ದರು.

ಮತಿಕೊಳದ ದಕ್ಷಿಣಕ್ಕೆ ಒಂದು ಸಾಮಾನ್ಯ ಮಾರುಕಟ್ಟೆ ಇತ್ತು, ಅದರ ದಕ್ಷಿಣಕ್ಕೆ ಒಂದು ಮದ್ಯದಂಗಡಿಯಿತ್ತು, ಸಮೀಪದಲ್ಲಿಯೇ ಒಂದು ಚಿಕಿತ್ಸಾಲಯ, ಒಂದು ಕುದುರೆಲಾಯ ಮತ್ತು ಮಾರಾಟಕ್ಕೆ ಅಕ್ಕಿ ದಾಸ್ತಾನು ಇಡುವ ಕೆಲವು ಮಳಿಗೆಗಳು ಇದ್ದುವು. ಇದಕ್ಕೆ ದಕ್ಷಿಣದಲ್ಲಿ ಶ್ರೀಸರ್ವಮಂಗಳ ಮತ್ತು ಚಿತ್ತೇಶ್ವರೀ ದೇವಾಲಯ ಗಳಿಗೆ ಹೋಗಲು ಅಗಲವಾದ ರಸ್ತೆ ಇತ್ತು. ಈ ರಸ್ತೆ ಗಂಗಾನದಿಯವರೆಗೂ ಹೋಗು ತ್ತದೆ. ಕಲಕತ್ತೆಗೆ ಹೋಗಬೇಕಾದರೆ ಈ ರಸ್ತೆಯನ್ನು ಬಲಗಡೆಗೆ ಬಿಡಬೇಕು.

ಮದ್ಯದಂಗಡಿಯಲ್ಲಿ ಅನೇಕರು ಕುಡಿದು ಗಲಾಟೆ ಮಾಡುತ್ತಿದ್ದರು. ಅವರಲ್ಲಿ ಕೆಲವರು ಆನಂದದಲ್ಲಿ ಹಾಡುತ್ತಿದ್ದರು, ಇನ್ನು ಕೆಲವರು ವಿವಿಧ ಭಂಗಿಯಲ್ಲಿ ನೃತ್ಯ ವನ್ನೂ ಮಾಡುತ್ತಿದ್ದರು. ಅಂಗಡಿಯ ಸಹಚಾರಿಗಳು ಅವರಿಗೆ ಮದ್ಯವನ್ನು ವಿಕ್ರಯಿಸು ತ್ತಿದ್ದರು. ಅಂಗಡಿಯ ಯಜಮಾನ ತನ್ನ ಪಾಡಿಗೆ ತಾನು ಬಾಗಿಲಿನಲ್ಲಿ ನಿಂತಿದ್ದ. ಅವನ ಹಣೆಯಲ್ಲಿ ಒಂದು ಕುಂಕುಮದ ಬೊಟ್ಟು ಇತ್ತು. ಈಗ ಶ್ರೀರಾಮಕೃಷ್ಣರ ಗಾಡಿ ಆ ಅಂಗಡಿಯ ಮುಂದೆಯೇ ಹೋಗುತ್ತಿದೆ. ಅಂಗಡಿಯ ಯಜಮಾನನಿಗೆ ಶ್ರೀರಾಮಕೃಷ್ಣರ ಪರಿಚಯವಿತ್ತು ಎಂದು ತೋರುತ್ತದೆ, ಏಕೆಂದರೆ ಅವರನ್ನು ನೋಡಿದ ಕೂಡಲೇ ಕೈ ಎತ್ತಿ ನಮಸ್ಕರಿಸಿದ.

ಕುಡುಕರ ಗಲಾಟೆಯಿಂದಾಗಿ ಶ್ರೀರಾಮಕೃಷ್ಣರ ದೃಷ್ಟಿ ಅಂಗಡಿಯ ಕಡೆ ಹರಿಯಿತು. ಆ ಕುಡುಕರ ಕಾರಣಾನಂದವನ್ನು ನೋಡಿಯೇ ಶ್ರೀರಾಮಕೃಷ್ಣರಲ್ಲಿ ಜಗತ್ ಕಾರಣನಾದ ಭಗವಂತನ ಆನಂದಭಾವ ಉದ್ದೀಪನಗೊಂಡಿತು. ಅದೇ ಭಗವದಾ ನಂದವನ್ನು ಅನುಭವಿಸುತ್ತಾ ಶ್ರೀರಾಮಕೃಷ್ಣರು ಉನ್ಮತ್ತರಾದರು. ಅಷ್ಟೇ ಅಲ್ಲದೆ ಅವರು ಸ್ವಲ್ಪ ಮುಂದುವರಿದು ಒಂದು ಕಾಲನ್ನು ಗಾಡಿಯ ಮೆಟ್ಟಿಲಿನ ಮೇಲೆ ಇಟ್ಟು ನಿಂತುಕೊಂಡು ಕುಡಿದವರಂತೆಯೇ ತಮ್ಮ ಕೈಗಳನ್ನು ಆಡಿಸುತ್ತಾ ಆನಂದದಿಂದ ಕೂಗಿ ದರು. "ಒಳ್ಳೇದು! ಒಳ್ಳೇದು! ಆನಂದ ಜೋರಾಗಿದೆ. ವಾಹ್! ವಾಹ್! ವಾಹ್!"

ಅ–ಹೇಳುತ್ತಾನೆ: "ನನಗೆ ಶ್ರೀರಾಮಕೃಷ್ಣರಿಗೆ ಈ ರೀತಿ ಭಾವಾವಸ್ಥೆ ಉಂಟಾಗು ವುದರ ಪರಿಚಯ ಮೊದಲು ಇರಲಿಲ್ಲ. ಅವರು ಸಾಮಾನ್ಯ ಜನರಂತೆಯೇ ಮಾತನಾಡು ವುದನ್ನು ನೋಡಿದೆ. ಕುಡುಕರನ್ನು ನೋಡಿ ಶ್ರೀರಾಮಕೃಷ್ಣರಲ್ಲಿ ಈ ಸ್ಥಿತಿ ಉಂಟಾಗಿರು

ವುದನ್ನು ಕಂಡು ನನಗೆ ಅತ್ಯಂತ ಭಯವುಂಟಾಯಿತು. ಗಡಿಬಿಡಿಯಿಂದ ಅವರನ್ನು ಹಿಡಿದು ಗಾಡಿಯ ಒಳಗೆ ಎಳೆಯಬೇಕೆಂದು ಕೈ ಚಾಚಿದೆ. ಅಷ್ಟರಲ್ಲಿ ಲಾಟು ನನ್ನನ್ನು ತಡೆದು, 'ಏನೂ ಮಾಡಬೇಕಾಗಿಲ್ಲ, ಅವರು ತಾವಾಗಿಯೇ ಸುಧಾರಿಸಿಕೊಳ್ಳುತ್ತಾರೆ, ಬೀಳುವು ದಿಲ್ಲ' ಎಂದು ಹೇಳಿದನು. ನಾನು ಸುಮ್ಮನಾದೆ. ಆದರೆ ನನ್ನ ಎದೆ 'ಬಡಬಡ ಹೊಡೆದು ಕೊಳ್ಳುತ್ತಿತ್ತು. ನನಗನ್ನಿಸಿತು ಈ ಹುಚ್ಚು ಶ್ರೀರಾಮಕೃಷ್ಣರ ಜೊತೆ ಒಂದೇ ಗಾಡಿಯಲ್ಲಿ ಏಕೆ ಬಂದೆನಪ್ಪ ಎಂದು. ಇನ್ನೆಂದೂ ಈ ರೀತಿ ಬರುವುದಿಲ್ಲವೆಂದು ಭಾವಿಸಿದೆ. ಇಷ್ಟೆಲ್ಲಾ ಹೇಳುವುದಕ್ಕೆ ಬಹಳ ಮುಂಚೆಯೇ ಘಟನೆ ನಡೆದುಹೋಗಿತ್ತು ಮತ್ತು ಗಾಡಿಯು ಅಂಗಡಿ ಯಿಂದ ಬಹುದೂರ ಸಾಗಿತ್ತು. ಆಗ ಶ್ರೀರಾಮಕೃಷ್ಣರು ಹಿಂದಿನಂತೆಯೆ ಗಾಡಿಯ ಒಳಗೆ ಕುಳಿತು ಸರ್ವಮಂಗಲಾದೇವಿಯ ಮಂದಿರದ ಕಡೆ ನೋಡುತ್ತಾ ಹೇಳಿದರು : 'ಈ ಸರ್ವಮಂಗಲೆಯು ತುಂಬಾ ಜಾಗೃತ ದೇವತೆ, ನಮಸ್ಕರಿಸು.' ಹೀಗೆ ಹೇಳಿ ಅವರು ದೇವಿಗೆ ನಮಸ್ಕರಿಸಿದರು, ನಾವೂ ಕೂಡ ಅವರು ತೋರಿಸಿದ ಕಡೆಗೆ ದೇವಿಯನ್ನು ಉದ್ದೇಶಿಸಿ ನಮಸ್ಕರಿಸಿದೆವು. ಅನಂತರ ಶ್ರೀರಾಮಕೃಷ್ಣರ ಕಡೆ ದೃಷ್ಟಿ ಹಾಯಿಸಿದೆ– ಅವರು ಎಂದಿನಂತೆಯೆ ಸಾಮಾನ್ಯ ಸ್ಥಿತಿಯಲ್ಲಿದ್ದರು. ಮೃದುವಾಗಿ ನಗುತ್ತಿದ್ದರು. 'ಎಲ್ಲಿ ಶ್ರೀರಾಮಕೃಷ್ಣರು ಬಿದ್ದು ಅನಾಹುತವಾಗುವುದೊ' ಎಂಬ ಭಾವನೆಯಿಂದ ನನ್ನ ಎದೆ ಆಗಲೂ ಬಡಿದುಕೊಳ್ಳುತ್ತಿತ್ತು !

"ಅನಂತರ ಗಾಡಿಯು ಮನೆಯ ಬಾಗಿಲಿನ ಬಳಿ ಬಂದು ನಿಂತಿತು. ಶ್ರೀರಾಮ ಕೃಷ್ಣರು ನನಗೆ ಹೇಳಿದರು : 'ಗಿ–ಯು ಮನೆಯಲ್ಲಿರುವನೆ ಎಂದು ನೋಡಿಕೊಂಡು ಬರುವೆಯಾ ?' ನಾನು ಹೋಗಿ ನೋಡಿಕೊಂಡು ಬಂದು ಇಲ್ಲ ಎಂದು ಹೇಳಿದೆ. ಆಗ ಅವರು ಹೇಳಿದರು : 'ಯಾವಾಗಲೂ ಹೀಗೇ, ಗಿ–ಯನ್ನು ನೋಡಲಾಗಲಿಲ್ಲ. ನಾನು ಅಂದುಕೊಂಡಿದ್ದೆ ಇವತ್ತಿನ ಗಾಡಿಬಾಡಿಗೆಯನ್ನು ಅವನೇ ಕೊಡಲಿ ಎಂದು. ನೋಡು, ನಿನ್ನೊಡನೆ ಮಾತುಕತೆ ಆಯಿತು. ನೀನು ಒಂದು ರೂಪಾಯಿ ಕೊಡುತ್ತೀಯಾ ? ಏನು ಗೊತ್ತೆ, ಯದುಮಲ್ಲಿಕನು ತುಂಬಾ ಜಿಪುಣ. ಅವನು ಎರಡು ರೂಪಾಯಿ ನಾಲ್ಕಾಣೆಗಿಂತ ಜಾಸ್ತಿ ಕೊಡೋದಿಲ್ಲ. ಆದರೆ ನಾನು ಅವನನ್ನು ನೋಡಿಕೊಂಡು ಹಿಂದಿರುಗುವಾಗ ಎಷ್ಟು ರಾತ್ರಿಯಾಗುತ್ತದೊ ಗೊತ್ತಿಲ್ಲ. ತುಂಬಾ ತಡವಾದರೆ ಗಾಡಿಯವನು ಆತುರ ಮಾಡು ತ್ತಾನೆ. ಆದ್ದರಿಂದ ರಾತ್ರಿ ಎಷ್ಟೇ ಆದರೂ ಕೂಡ ಗಾಡಿಯವನು ಮೂರು ರೂಪಾಯಿ ನಾಲ್ಕಾಣೆಗಿಂತ ಜಾಸ್ತಿ ತೆಗೆದುಕೊಳ್ಳಬಾರದು ಎಂದು ವೇಣಿಯು ವ್ಯವಸ್ಥೆ ಮಾಡಿರು ವನು. ಯದು ಎರಡು ರೂಪಾಯಿ ನಾಲ್ಕಾಣೆ ಕೊಡುತ್ತಾನೆ. ನೀನು ಒಂದು ರೂಪಾಯಿ ಕೊಟ್ಟರೆ ಇಂದಿನ ಬಾಡಿಗೆ ಸಮಸ್ಯೆ ಮುಗಿದಂತಾಗುತ್ತದೆ. ಅದಕ್ಕಾಗಿಯೆ ಹೇಳಿದೆ.' ನಾನು ಈ ಮಾತನ್ನು ಕೇಳಿ ಲಾಟುವಿಗೆ ಒಂದು ರೂಪಾಯನ್ನು ಕೊಟ್ಟು ಶ್ರೀರಾಮಕೃಷ್ಣರಿಗೆ ನಮಸ್ಕಾರ ಮಾಡಿದೆ. ಶ್ರೀರಾಮಕೃಷ್ಣರು ಯದುಮಲ್ಲಿಕನನ್ನು ನೋಡಲು ಹೋದರು."

ಶ್ರೀರಾಮಕೃಷ್ಣರಿಗೆ ಈ ರೀತಿಯ ಕುಡುಕರ ಸ್ಥಿತಿ ಸಾಮಾನ್ಯವಾಗಿ ಪ್ರತಿನಿತ್ಯವೂ ಉಂಟಾಗುತ್ತಿತ್ತು. ಇದರ ಬಗ್ಗೆ ಸ್ವಲ್ಪ ಮಾತ್ರ ಹೇಳಲು ನಾವು ಸಮರ್ಥರು !

21. ದಕ್ಷಿಣೇಶ್ವರಕ್ಕೆ ಹಿಂದಿನಂತೆಯೆ ಅನೇಕ ಸಾಧಕ ಸಾಧುಗಳು ಬರುತ್ತಿದ್ದರು. ಅವರ ಬಗ್ಗೆ ಅನೇಕ ವಿಷಯಗಳನ್ನು ಶ್ರೀರಾಮಕೃಷ್ಣರು ಆಗಾಗ ನಮಗೆ ಹೇಳುತ್ತಿದ್ದರು. ಇದಕ್ಕೆ ಸಾಕ್ಷಿಯಾಗಿ ಇಂದೂ ಕೂಡ ಅನೇಕರು ಜೀವಿಸಿರುವರು. ನಾವು ಆಗ ಸೇಂಟ್ ಗ್ಸೇವಿಯರ್ ಕಾಲೇಜಿನಲ್ಲಿ ಓದುತ್ತಿದ್ದೆವು. ವಾರದಲ್ಲಿ ಗುರುವಾರ ಮತ್ತು ಭಾನುವಾರ ಎರಡು ದಿನ ಕಾಲೇಜಿಗೆ ರಜ ಇರುತ್ತಿತ್ತು. ಶನಿವಾರ ಮತ್ತು ಭಾನುವಾರ ಶ್ರೀರಾಮ ಕೃಷ್ಣರೆಡೆಗೆ ಅನೇಕ ಭಕ್ತರು ಹೋಗುತ್ತಿದ್ದರು. ಆದ್ದರಿಂದ ನಾವು ಗುರುವಾರವು ಕೂಡ ಅವರೆಡೆಗೆ ಹೋಗುತ್ತಿದ್ದೆವು. ಇದರಿಂದಾಗಿ ಅವರ ಜೀವನಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳನ್ನು ಅವರ ಬಾಯಿಂದ ಕೇಳುವ ಅವಕಾಶ ನಮಗೆ ದೊರೆಯಿತು. ಈ ಎಲ್ಲ ವಿಷಯವನ್ನು ಕೇಳಿ ನಾವು ಹೀಗೆ ಅರ್ಥಮಾಡಿಕೊಂಡೆವು : 'ಭೈರವಿ ಬ್ರಾಹ್ಮಣಿ, ತೋತಾಪುರಿ, ಶ್ರೀರಾಮಕೃಷ್ಣರು ಆರುತಿಂಗಳು ನಿರ್ವಿಕಲ್ಪ ಸಮಾಧಿಯಲ್ಲಿದ್ದಾಗ ಅವ ರನ್ನು ರಕ್ಷಿಸಿದ ಸಾಧು—ಇವರುಗಳಲ್ಲದೆ, ನಾವು ದಕ್ಷಿಣೇಶ್ವರಕ್ಕೆ ಹೋಗುವುದಕ್ಕೆ ಮುಂಚೆ, ಬೇರೆ ಬೇರೆ ಸಂಪ್ರದಾಯಗಳಿಗೆ ಸೇರಿದ ಅನೇಕ ಮಂದಿ ಸಾಧುಗಳು ಸಾಧಕರು ದಕ್ಷಿಣೇ ಶ್ವರಕ್ಕೆ ಬಂದಿದ್ದರು. ಅವರುಗಳೆಲ್ಲಾ ಶ್ರೀರಾಮಕೃಷ್ಣರ ಅದ್ಭುತ ಜೀವನದಿಂದ ನವ ಸ್ಫೂರ್ತಿಯನ್ನು ಪಡೆದಿದ್ದರು. ತಾವೂ ಕೂಡ ತಮ್ಮ ಜೀವನದ ಗುರಿಯನ್ನು ಸಾಧಿಸಿ ಕೊಂಡು ಅವರು ತಮ್ಮ ತಮ್ಮ ಸಂಪ್ರದಾಯಗಳಿಗೆ ಸೇರಿದ ಸಾಧಕರನ್ನು ತಮ್ಮದೇ ಮಾರ್ಗದಲ್ಲಿ ಭಗವತ್ ಸಾಕ್ಷಾತ್ಕಾರ ಪಡೆಯುವುದಕ್ಕೆ ಸ್ಫೂರ್ತಿಯನ್ನೀಯಲು ಸಮರ್ಥ ರಾಗಿದ್ದರು. ಅವರುಗಳೆಲ್ಲಾ ಕಲಿತುಕೊಳ್ಳಲಾಗಿಯೇ ಬಂದಿದ್ದರು ಮತ್ತು ಪೂರ್ಣಜ್ಞಾನ ವನ್ನು ಪಡೆದ ಮೇಲೆ ತಮ್ಮ ತಮ್ಮ ಸ್ಥಾನಕ್ಕೆ ಹಿಂದಿರುಗಿದರು. ಭೈರವಿ ಬ್ರಾಹ್ಮಣಿ, ತೋತಾಪುರಿ ಮುಂತಾದವರು ಶ್ರೀರಾಮಕೃಷ್ಣರಿಗೆ ಆಧ್ಯಾತ್ಮಿಕ ಜೀವನದಲ್ಲಿ ಸಹಾಯ ಮಾಡುವ ಒಂದು ಸುಯೋಗವನ್ನು ಪಡೆದಿದ್ದರು. ಆದರೆ ಅವರೂ ಕೂಡ ಶ್ರೀರಾಮ ಕೃಷ್ಣರ ದಿವ್ಯಶಕ್ತಿಯ ಪ್ರಭಾವದಿಂದ ತಮಗೆ ಇದುವರೆಗೆ ಬಹುಕಾಲದ ಸಾಧನೆಯಿಂದ ಸಾಧ್ಯವಾಗಿರದ ಆಧ್ಯಾತ್ಮಿಕ ಜೀವನದ ಗೂಢತತ್ತ್ವಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಸಮರ್ಥರಾದರು.

22. ಮತ್ತೆ ಈ ಸಾಧುಗಳು ಮತ್ತು ಸಾಧಕರು ಶ್ರೀರಾಮಕೃಷ್ಣರೆಡೆಗೆ ಬಂದ ಕ್ರಮ ಅಥವಾ ಪರಂಪರೆಯನ್ನು ಕುರಿತು ವಿಚಾರ ಮಾಡಿದಾಗ ಇನ್ನೊಂದು ವಿಷಯ ನಮ್ಮ ಗಮನಕ್ಕೆ ಬರುತ್ತದೆ. ಅವರು ಈ ರೀತಿ ಬಂದ ಕ್ರಮವನ್ನು ಕುರಿತು ವಿಚಾರ ಮಾಡಲು ಅನುಕೂಲವಾಗುತ್ತದೆಂಬ ಕಾರಣದಿಂದಲೆ ನಾವು ಈ ಗ್ರಂಥದಲ್ಲಿ ಶ್ರೀರಾಮ ಕೃಷ್ಣರು ಅವರ ಬಗ್ಗೆ ಏನೇನು ಹೇಳಿದ್ದರೊ ಅವನ್ನೆಲ್ಲ ಓದುಗರ ಮುಂದೆ ಇಟ್ಟಿರು ವೆವು. ಸಾಧ್ಯವಾದಷ್ಟೂ ಕೂಡ ಅವರ ಮಾತಿನಲ್ಲಿಯೇ ಆ ವಿಷಯವನ್ನು ವಿವರಿಸಿರು ವೆವು. ಶ್ರೀರಾಮಕೃಷ್ಣರ ಬಾಯಿಂದ ಏನು ಕೇಳಿರುವೆವು ಅದರಿಂದ ಈ ಕೆಳಗಿನ ವಿಷಯ ಸ್ಪಷ್ಟವಾಗುತ್ತದೆ : 'ಅವರು ಯಾವ ಯಾವ ಭಾವದಲ್ಲಿ ಭಗವಂತನನ್ನು ಸಾಕ್ಷಾತ್ಕರಿಸಿ ಕೊಳ್ಳುವ ಸಾಧನೆ ಮಾಡುತ್ತಿದ್ದರೊ ಅದೇ ಸಂಪ್ರದಾಯದ ಸಾಧಕರು ಅದೇ ಸಮಯ

ದಲ್ಲಿ ಶ್ರೀರಾಮಕೃಷ್ಣರ ಹತ್ತಿರ ಗುಂಪುಗುಂಪಾಗಿ ಬರುತ್ತಿದ್ದರು ಮತ್ತು ಅವರೊಡನೆ ಆಯಾ ಭಾವಕ್ಕೆ ಸಂಬಂಧಿಸಿದ ವಿಷಯವನ್ನು ಮಾತನಾಡುತ್ತಾ ಹಗಲುರಾತ್ರಿ ಕಳೆಯು ತ್ತಿದ್ದರು. ರಾಮಮಂತ್ರದ ಉಪಾಸನೆಯಲ್ಲಿ ಅವರು ಸಿದ್ಧಿಯನ್ನು ಪಡೆದ ಮೇಲೆ ರಾಮಾವತ್ ಸಾಧುಗಳು ಗುಂಪುಗುಂಪಾಗಿ ಅವರೆಡೆಗೆ ಬರುತ್ತಿದ್ದರು. ಗೌಡೀಯ ವೈಷ್ಣವ ಸಂಪ್ರದಾಯದ ಶಾಂತ, ದಾಸ್ಯ ಮುಂತಾದ ಸಾಧನೆಗಳಲ್ಲಿ ಅವರು ಸಿದ್ಧಿ ಯನ್ನು ಪಡೆದ ಮೇಲೆ ಆಯಾಯ ಭಾವಕ್ಕೆ ಸಂಬಂಧಿಸಿದ ಸಾಧಕರು ಅವರೆಡೆಗೆ ಬರ ತೊಡಗಿದರು. ಭೈರವಿ ಬ್ರಾಹ್ಮಣಿಯ ನಿರ್ದೇಶದಂತೆ 64 ತಂತ್ರ ಸಾಧನೆಗಳನ್ನು ಮಾಡಿ ಯಾದ ಮೇಲೆ ಅಥವಾ ಶಕ್ತಿಸಾಧನೆಯಲ್ಲಿ ಸಿದ್ಧಿಯನ್ನು ಪಡೆದ ಮೇಲೆ ಆ ಪ್ರದೇಶದ ವಿಶಿಷ್ಟ ತಾಂತ್ರಿಕ ಸಾಧಕರೆಲ್ಲರೂ ಅವರೆಡೆಗೆ ಬಗತೊಡಗಿದರು. ತೋತಾಪುರಿಯ ಸಹಾಯದಿಂದ ಅದ್ವೈತಮತದ ಬ್ರಹ್ಮೋಪಾಸನೆಯನ್ನು ಮಾಡಿ ಅದರಲ್ಲಿ ಸಿದ್ಧಿಯನ್ನು ಪಡೆದ ಮೇಲೆ ಪರಮಹಂಸ ಸಂಪ್ರದಾಯದ ವಿಶಿಷ್ಟ ಸಾಧಕರೆಲ್ಲರೂ ಅವರೆಡೆಗೆ ಬರ ತೊಡಗಿದರು.

23. ಭಿನ್ನ ಭಿನ್ನ ಸಂಪ್ರದಾಯದ ಸಾಧಕರು ಈ ರೀತಿ ಆಯಾಯ ಸಮಯದಲ್ಲಿ ಶ್ರೀರಾಮಕೃಷ್ಣರ ದಿವ್ಯ ಸಂಗವನ್ನು ಪಡೆಯುವುದರ ಹಿಂದೆ ಒಂದು ವಿಶೇಷವಾದ ಗೂಢಾರ್ಥವಿದೆ ಎಂಬುದು ಬಾಲಕರಿಗೂ ತಿಳಿಯುವ ವಿಷಯ. ಅವತಾರ ಪುರುಷರು ಜಗತ್ತಿಗೆ ಬಂದಾಗಲೆಲ್ಲಾ ಈ ರೀತಿ ಆಗಿರುವುದನ್ನು ನಾವು ಕಾಣುತ್ತೇವೆ ಮತ್ತು ಮುಂದೆಯೂ ಹೀಗೆಯೆ ಆಗುವುದು. ಅವರೆಲ್ಲರೂ ಆಧ್ಯಾತ್ಮಿಕ ಜಗತ್ತಿನ ಒಂದು ಗೂಢ ನಿಯಮಾನುಸಾರವಾಗಿ ಧರ್ಮಗ್ಲಾನಿಯನ್ನು ನಿವಾರಿಸಲು ಬಂದಿರುತ್ತಾರೆ. ನಿರ್ಜೀವ ವಾದ ಧರ್ಮಕ್ಕೆ ನವಚೇತನವನ್ನು ನೀಡಲು ಅವರು ಜನ್ಮವೆತ್ತಿರುತ್ತಾರೆ. ಅವರ ಜೀವನ ವನ್ನು ಕುರಿತು ಆಲೋಚಿಸಿದಾಗ ಅವರ ಶಕ್ತಿಯ ಅಭಿವ್ಯಕ್ತಿಯಲ್ಲಿ ತಾರತಮ್ಯವಿರುವು ದನ್ನು ನೋಡುತ್ತೇವೆ. ಇದರಿಂದ ನಮಗೆ ಸ್ಪಷ್ಟವಾಗುವ ವಿಷಯವೇನೆಂದರೆ ಅವರಲ್ಲಿ ಕೆಲವರು ಯಾವುದೊ ಒಂದು ಪ್ರದೇಶದ ಅಥವಾ ಮೂರು ನಾಲ್ಕು ಸಂಪ್ರದಾಯಗಳ ಕೊರತೆಯನ್ನು ಹೋಗಲಾಡಿಸಲಾಗಿಯೇ ಬಂದಿದ್ದಾರೆ, ಮತ್ತೆ ಕೆಲವರು ಇಡೀ ವಿಶ್ವದ ಧರ್ಮದ ಕೊರತೆಯನ್ನು ಹೋಗಲಾಡಿಸಲು ಬಂದಿರುತ್ತಾರೆ ಎಂಬುದು. ಆದರೆ ಅವರು ಯಾವಾಗಲೂ ತಮಗಿಂತ ಹಿಂದೆ ಇದ್ದ ಋಷಿಗಳು, ಆಚಾರ್ಯರು ಮತ್ತು ಅವತಾರ ಪುರುಷರು ಇವರುಗಳು ಹೇಳಿ ಹೋದ ಆಧ್ಯಾತ್ಮಿಕ ಮತಗಳಿಗೆ ಸರಿಯಾದ ಗೌರವ ವನ್ನು ತೋರಿಸಿರುವರು, ಅವನ್ನು ಆಧಾರವಾಗಿಟ್ಟುಕೊಂಡೇ ತಮ್ಮ ತಮ್ಮ ಅನುಭವ ದಿಂದ ಪ್ರಾಪ್ತವಾದ ಹೊಸ ಮತಗಳನ್ನು ಪ್ರಚಾರ ಮಾಡಿರುವರು, ಎಂಬುದನ್ನು ನಾವು ನೋಡಬಹುದು. ಏಕೆಂದರೆ ಅವರು ತಮ್ಮ ದಿವ್ಯಯೋಗಶಕ್ತಿಯ ಬಲದಿಂದ ಹಿಂದಿನ ಆಧ್ಯಾತ್ಮಿಕ ಮತಗಳಲ್ಲಿದ್ದ ಒಂದು ಪಾರಂಪರ್ಯವನ್ನು ಮತ್ತು ಸಂಬಂಧವನ್ನು ಕಂಡುಕೊಂಡಿದ್ದರು. ನಮ್ಮ ಸ್ಥೂಲದೃಷ್ಟಿಗೆ ಭಾವರಾಜ್ಯದ ಈ ಇತಿಹಾಸ, ಈ ಸಂಬಂಧ ಕಾಣಿಸುವುದೇ ಇಲ್ಲ. ಅವರು ಹಿಂದೆ ಇದ್ದ ಎಲ್ಲಾ ಧರ್ಮತತ್ತ್ವಗಳನ್ನೂ ಅವು ಒಂದೇ

ಸೂತ್ರದಲ್ಲಿ ಪೋಣಿಸಲ್ಪಟ್ಟಿರುವಂತೆ ಕಂಡರು (ಸೂತ್ರೇ ಮಣಿಗಣಾ ಇವ). ತಮ್ಮ ಅನುಭವದ ಮೂಲಕ ಅವರು ಆ ಮಾಲೆಯನ್ನೇ ಪೂರ್ಣಗೊಳಿಸಲು ಪ್ರಯತ್ನಿಸುವರು.

ವಿದೇಶಗಳ ಧರ್ಮಗಳನ್ನು ಕುರಿತು ಆಲೋಚಿಸಿದಾಗ ನಮಗೆ ಈ ವಿಷಯ ಅತ್ಯಂತ ಸ್ಪಷ್ಟವಾಗುವುದು. ಯಹೂದಿ ಪ್ರವಾದಿಗಳು ಹಿಂದೆ ಧರ್ಮದ ವಿಷಯವಾಗಿ ಯಾವ ಸತ್ಯವನ್ನು ಹೇಳಿಹೋಗಿದ್ದರೊ ಅದನ್ನೇ ಆಧಾರವಾಗಿಟ್ಟುಕೊಂಡು ಕ್ರಿಸ್ತನು ತನ್ನ ಅನುಭವದಿಂದ ದೊರೆತ ಸತ್ಯವನ್ನು ಪ್ರಚಾರ ಮಾಡಿದನು. ಮತ್ತೆ ಕೆಲವು ಶತಮಾನಗಳ ನಂತರ ಮಹಮ್ಮದನು ಬಂದು ಕ್ರಿಸ್ತನ ಮತವನ್ನೇ ಆಧಾರವಾಗಿಟ್ಟುಕೊಂಡು ತನ್ನ ಮತವನ್ನು ಪ್ರಚಾರ ಮಾಡಿದನು. ಇದರಿಂದ ಯಹೂದಿ ಪ್ರವಾದಿಗಳು ಅಥವಾ ಕ್ರಿಸ್ತನು ಪ್ರಚಾರ ಮಾಡಿದ ಮತವು ಅಸಂಪೂರ್ಣ ಎಂದು ತಿಳಿಯಬಾರದು. ಅಥವಾ ಅವರು ಯಾವ ಮಾರ್ಗವನ್ನು ಅನುಸರಿಸಿ ಭಗವತ್ ಸಾಕ್ಷಾತ್ಕಾರವನ್ನು ಪಡೆದಿದ್ದರೊ ಅದನ್ನು ಅನುಸರಿಸಲು ಸಾಧ್ಯವಿಲ್ಲವೆಂದೂ ಭಾವಿಸಬಾರದು. ಖಂಡಿತ ಸಾಧ್ಯವಾಗುತ್ತದೆ, ಹಾಗೆಯೇ ಮಹಮ್ಮದನು ಪ್ರಚಾರ ಮಾಡಿದ ಮತವನ್ನನುಸರಿಸಿ ಅವನು ಪಡೆದ ಅನುಭವವನ್ನೇ ನಾವು ಪಡೆಯಬಹುದು. ಇದೇ ಆಧ್ಯಾತ್ಮಿಕ ಜಗತ್ತಿನ ನಿಯಮ. ಇದೇ ನಿಯಮವು ಭಾರತದ ಧಾರ್ಮಿಕ ಮತಗಳಿಗೂ ಅನ್ವಯವಾಗುತ್ತದೆ. ಆಯಾಯ ಮತದವರು ಹೇಳಿ ಹೋದ ಮಾರ್ಗವನ್ನನುಸರಿಸಿದರೆ ಆಯಾಯ ಭಗವದ್ಭಾವವನ್ನು ಪಡೆಯಬಹುದು. ಭಾರತದ ವೈದಿಕ ಋಷಿಗಳು, ಪುರಾಣಪುರುಷರು ಮತ್ತು ತಂತ್ರಕಾರರು ಇವರುಗಳು ಯಾವ ಯಾವ ಮತವನ್ನು ಪ್ರಚಾರ ಮಾಡಿದರೊ ಅದಕ್ಕನುಗುಣವಾದ ಸಾಧನೆಯನ್ನು ಮಾಡಿದರೆ ಆಯಾ ಮತಕ್ಕನುಸಾರವಾದ ಭಗವದ್ಭಾವವನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಶ್ರೀರಾಮಕೃಷ್ಣರು ಹೆಚ್ಚು ಕಡಮೆ ಎಲ್ಲಾ ಮತಗಳ ಸಾಧನೆಯನ್ನು ಮಾಡಿ ಅದೇ ಅನುಭವವನ್ನು ಪಡೆದಿದ್ದರು ಮತ್ತು ನಮಗೂ ಅದನ್ನೇ ಬೋಧಿಸುತ್ತಿದ್ದರು.

24. ಹೂವು ಅರಳಿದ ಕೂಡಲೆ ಭ್ರಮರ ತಾನಾಗಿಯೆ ಓಡಿ ಬರುವುದು. ಆಧ್ಯಾತ್ಮಿಕ ಜಗತ್ತಿಗೂ ಇದೇ ನಿಯಮ ಅನ್ವಯಿಸುತ್ತದೆ. ಶ್ರೀರಾಮಕೃಷ್ಣರು ಇದನ್ನು ನಮಗೆ ಯಾವಾಗಲೂ ಹೇಳುತ್ತಿದ್ದರು. ಇದೇ ನಿಯಮಕ್ಕನುಸಾರವಾಗಿ ಅವತಾರ ಪುರುಷರು ತಮ್ಮ ಜೀವನದಲ್ಲಿ ಆಧ್ಯಾತ್ಮಿಕ ಜಗತ್ತಿನ ಸತ್ಯಸಾಕ್ಷಾತ್ಕಾರವನ್ನು ಪಡೆದ ಕೂಡಲೇ, ಅದನ್ನು ತಿಳಿಯಲು ಮತ್ತು ಕಲಿತುಕೊಳ್ಳಲು ಆಧ್ಯಾತ್ಮಿಕ ಪಿಪಾಸುಗಳು ಅವರೆಡೆಗೆ ಆಕರ್ಷಿತರಾಗುವರು. ಇದನ್ನು ಎಲ್ಲಾ ಮಹಾಪುರುಷರ ಜೀವನದಲ್ಲಿಯೂ ನೋಡಬಹುದು. ಶ್ರೀರಾಮಕೃಷ್ಣರೆಡೆಗೆ ಒಂದೇ ಸಂಪ್ರದಾಯದ ಸಾಧಕರು ಬರದೆ ಎಲ್ಲಾ ಸಂಪ್ರದಾಯದ ಸಾಧಕರು ಗುಂಪುಗುಂಪಾಗಿ ಬರುತ್ತಿದ್ದರು. ಇದಕ್ಕೆ ಕಾರಣವೇನೆಂದರೆ ಶ್ರೀರಾಮಕೃಷ್ಣರು ಎಲ್ಲಾ ಮಾರ್ಗಗಳ ಮೂಲಕವೂ ಮುಂದುವರೆದು ಆಯಾಯ ಮತಗಳಿಗೆ ಸಂಬಂಧಿಸಿದ ಭಗವತತ್ತ್ವವನ್ನು ಸಾಕ್ಷಾತ್ಕಾರ ಮಾಡಿಕೊಂಡಿದ್ದರು ಮತ್ತು ಎಲ್ಲಾ ಮಾರ್ಗಗಳ ವಿಶೇಷ ಪರಿಚಯ ಅವರಿಗಿತ್ತು. ಹಾಗಂದ

ಮಾತ್ರಕ್ಕೆ ಅವರೆಡೆಗೆ ಬರುತ್ತಿದ್ದ ಸಾಧಕರೆಲ್ಲರೂ ತಮ್ಮ ತಮ್ಮ ಮತಗಳಿಗೆ ಅನುಸಾರ ವಾಗಿ ಸಿದ್ಧಿಯನ್ನು ಪಡೆದಿದ್ದರು ಮತ್ತು ಶ್ರೀರಾಮಕೃಷ್ಣರನ್ನು ಯುಗಾವತಾರ ಎಂದು ಅರ್ಥ ಮಾಡಿಕೊಳ್ಳಲು ಸಮರ್ಥರಾಗಿದ್ದರು ಎಂದು ಹೇಳುವಂತಿಲ್ಲ. ಅವರಲ್ಲಿ ವಿಶಿಷ್ಟ ರಾದ ಕೆಲವರು ಮಾತ್ರ ಇದರಲ್ಲಿ ಸಮರ್ಥರಾಗಿದ್ದರು. ಆದರೆ ಅವರಲ್ಲಿ ಪ್ರತಿಯೊಬ್ಬರೂ ಶ್ರೀರಾಮಕೃಷ್ಣರ ದಿವ್ಯಸಂಗದ ಪ್ರಭಾವದಿಂದ ತಮ್ಮ ತಮ್ಮ ಮಾರ್ಗದಲ್ಲಿ ಸಾಕಷ್ಟು ಮುಂದುವರಿದಿದ್ದರು ಮತ್ತು ಆ ಮಾರ್ಗದ ಮೂಲಕ ಮುಂದುವರೆದರೆ ಭಗವತ್ ಸಾಕ್ಷಾತ್ಕಾರವಾಗುವುದು ಖಂಡಿತ ಎಂಬ ದೃಢ ವಿಶ್ವಾಸ ಅವರಲ್ಲಿ ಉಂಟಾಗಿತ್ತು. ತಮ್ಮ ತಮ್ಮ ಮಾರ್ಗದಲ್ಲಿ ಈ ರೀತಿಯ ವಿಶ್ವಾಸ ನಷ್ಟವಾದಾಗಲೇ ಧರ್ಮಗ್ಲಾನಿ ಆಗುವುದು ಮತ್ತು ಸಾಧಕನು ತನ್ನ ಜೀವನದಲ್ಲಿ ಧಾರ್ಮಿಕ ಸತ್ಯವನ್ನು ತಿಳಿಯಲಾಗುವುದಿಲ್ಲ ಎಂಬುದನ್ನು ಮತ್ತೆ ಹೇಳಬೇಕಾಗಿಲ್ಲ.

25. ಶ್ರೀರಾಮಕೃಷ್ಣರು ಈ ಸಾಧಕರ ಮೂಲಕ ಸಾಧನೆಯ ವಿಷಯವನ್ನು ತಿಳಿದುಕೊಂಡು ಅನಂತರ ಉಗ್ರ ತಪಸ್ಸಿನಲ್ಲಿ ನಿರತರಾಗಿ ಆ ತಪಸ್ಸಿನ ಪರಿಣಾಮದಿಂದ ಒಮ್ಮೆ ಅವರು ಸಂಪೂರ್ಣ ಹುಚ್ಚರಾಗಿದ್ದರು ಎಂಬ ತಪ್ಪು ಅಭಿಪ್ರಾಯ ಕೆಲವರಲ್ಲಿದೆ. ಅವರು ಭಾವಾತಿರೇಕದಲ್ಲಿ ಬಾಹ್ಯಜ್ಞಾನವನ್ನು ಕಳೆದುಕೊಳ್ಳುತ್ತಿದ್ದುದು ಒಂದು ಶಾರೀರಿಕ ರೋಗ ಎಂಬುದು ಅವರ ಅಭಿಪ್ರಾಯವಾಗಿದೆ. ಅಬ್ಬಾ ! ಎಂಥಾ ಪಂಡಿತ ಮೂರ್ಖರಿದ್ದಾರೆ ನಮ್ಮಲ್ಲಿ ! ಮನಸ್ಸು ಸಂಪೂರ್ಣ ಏಕಾಗ್ರಗೊಂಡು ಸಮಾಧಿಯನ್ನು ಪಡೆದಾಗ ಬಾಹ್ಯಜ್ಞಾನವು ಲುಪ್ತವಾಗುವುದು. ಈ ವಿಷಯವನ್ನು ಭಾರತದ ಋಷಿ ಗಳು ವೇದ ಪುರಾಣ ತಂತ್ರಾದಿ ಶಾಸ್ತ್ರಗಳ ಮೂಲಕ ನಮಗೆ ತಿಳಿಸಿಕೊಟ್ಟಿರುವರು ಮತ್ತು ತಮ್ಮ ತಮ್ಮ ಜೀವನದಲ್ಲಿಯೂ ಅವರು ತೋರಿಸಿಕೊಟ್ಟಿರುವರು. ಸಮಾಧಿ ಶಾಸ್ತ್ರದ ಪೂರ್ಣ ವ್ಯಾಖ್ಯಾನ ನಮ್ಮ ಮುಂದೆ ಇರುವುದು. ಈ ಜಗತ್ತಿನಲ್ಲಿ ಇದುವರೆ ವಿಗೂ ಅವತಾರ ಪುರುಷರೆಂದು ಯಾರು ಪೂಜಿಸಲ್ಪಟ್ಟಿರುವರೋ ಅವರೆಲ್ಲರೂ ತಮ್ಮ ತಮ್ಮ ಜೀವನದಲ್ಲಿ ಈ ರೀತಿ ಬಾಹ್ಯಜ್ಞಾನ ಕಳೆದುಕೊಳ್ಳುವುದು ಆಧ್ಯಾತ್ಮಿಕ ಉನ್ನತಿಯ ಚಿಹ್ನೆ ಎಂದು ತೋರಿಸಿಕೊಟ್ಟಿರುವರು. ಇಷ್ಟಾದರೂ ಕೂಡ ನಾವು ಬಾಹ್ಯಜ್ಞಾನವನ್ನು ಕಳೆದುಕೊಳ್ಳುವುದು ಒಂದು ಶಾರೀರಿಕ ರೋಗ ಎಂದು ಹೇಳುವುದು ಅಥವಾ ಇಂಥ ಮಾತನ್ನು ಕೇಳುವುದು ತುಂಬಾ ದುರದೃಷ್ಟಕರ. ಓದುಗರು ತಮಗೆ ಇಷ್ಟವಾದರೆ ಈ ಸತ್ತ್ವಹೀನ ಮಾತುಗಳಿಗೆ ಕಿವಿಗೊಡಬಹುದು. ನಿಮಗೂ ಮತ್ತು ಯಾರು ಈ ರೀತಿ ಹೇಳುತ್ತಾರೋ ಅವರಿಗೂ ಮಂಗಳವಾಗಲಿ ! ಆದರೆ ಈ ಅದ್ಭುತ ಹುಚ್ಚನ ಪದತಲದಲ್ಲಿ ಶರಣಾಗುವ ಸ್ವಾತಂತ್ರ್ಯವನ್ನು ನಮಗೆ ನೀವು ದಯಪಾಲಿಸಿ ಎಂದು ನಿಮ್ಮನ್ನು ಕೇಳಿ ಕೊಳ್ಳುತ್ತೇವೆ. ಆದರೆ ಒಂದು ನಿರ್ದಿಷ್ಟತೆ ಬರುವುದಕ್ಕೆ ಮುಂಚೆ ಸರಿಯಾಗಿ ಆಲೋಚಿಸಿ ನೋಡಿ. ಪ್ರಾಚೀನ ಉಪನಿಷತ್ ಋಷಿಗಳು ಹೇಳಿರುವ ಈ ಕೆಳಗಿನ ಸ್ಥಿತಿ ನಿಮಗೆ ಉಂಟಾಗದಿರಲಿ:

ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಮ್ಮನ್ಯಮಾನಾಃ ।
ದಂದ್ರಮ್ಯಮಾನಾಃ ಪರಿಯಂತಿ ಮೂಢಾ ಅಂಧೇನೈವ ನೀಯಮಾನಾ ಯಥಾಂಧಾಃ ॥

26. ಶ್ರೀರಾಮಕೃಷ್ಣರ ಭಾವ ಸಮಾಧಿಗಳನ್ನು ರೋಗದ ಪರಿಣಾಮ ಎಂದು ಹೇಳುವುದು ಹೊಸದೇನೂ ಅಲ್ಲ. ಅವರ ಜೀವಿತ ಕಾಲದಲ್ಲಿಯೇ ಪಾಶ್ಚಾತ್ಯ ಶಿಕ್ಷಣ ವನ್ನು ಪಡೆದ ಅನೇಕರು ಈ ಮಾತನ್ನು ಹೇಳುತ್ತಿದ್ದರು. ಆದರೆ ದಿನಕಳೆದಂತೆ ಶ್ರೀರಾಮ ಕೃಷ್ಣರ 'ಹುಚ್ಚು' ನುಡಿಗಳು ಮತ್ತು ಭವಿಷ್ಯದ್ವಾಣಿಗಳು ಸತ್ಯವಾಗತೊಡಗಿದವು. ಅವರ ಅದ್ಭುತ ಭಾವನೆಗಳನ್ನು ಜಗತ್ತಿನಾದ್ಯಂತ ಜನರು ಒಪ್ಪಿಕೊಳ್ಳತೊಡಗಿದರು. ಆಗ ಈ ಪಾಶ್ಚಾತ್ಯ ಶಿಕ್ಷಣವೇತ್ತರ ಅಭಿಪ್ರಾಯ ತನ್ನ ಮೌಲ್ಯವನ್ನು ಕಳೆದುಕೊಳ್ಳ ತೊಡಗಿತು. ಅದು ಚಂದ್ರನಿಗೆಸೆದ ಮಣ್ಣಿನಂತಾಯಿತು. ಜನರು ಅವರ ಮಾತುಗಳಿಗೆ ಬೆಲೆ ಕೊಡದೆ ಶ್ರೀರಾಮಕೃಷ್ಣರ ಮಾತನ್ನೇ ಸತ್ಯವೆಂದು ಸ್ವೀಕರಿಸಿದರು. ಈಗಲೂ ಹಾಗೆಯೇ ಆಗುವುದು. ಏಕೆಂದರೆ ಬೆಂಕಿಯನ್ನು ಬಟ್ಟೆಯಿಂದ ಮರೆಮಾಡಲಾಗದಿರು ವಂತೆ ಸತ್ಯವನ್ನು ಮುಚ್ಚಿಡಲಾಗುವುದಿಲ್ಲ. ಆದ್ದರಿಂದ ಈ ವಿಷಯದಲ್ಲಿ ನಾವು ಹೆಚ್ಚು ಹೇಳಬೇಕಾದ ಆವಶ್ಯಕತೆ ಇಲ್ಲ. ಶ್ರೀರಾಮಕೃಷ್ಣರು ಈ ವಿಷಯದಲ್ಲಿ ಹೇಳಿರುವ ಒಂದೆ ರೆಡು ಮಾತುಗಳನ್ನು ಹೇಳಿ ವಿರಮಿಸುತ್ತೇವೆ. ಸಾಧಾರಣ ಬ್ರಹ್ಮಸಮಾಜದ ಪ್ರಸಿದ್ಧ ವ್ಯಕ್ತಿಯಾದ ಶಿವನಾಥಶಾಸ್ತ್ರಿಯು ಶ್ರೀರಾಮಕೃಷ್ಣರ ಭಾವಸಮಾಧಿಯು ಸ್ನಾಯು ವಿಕಾರದಿಂದ ಉಂಟಾದ ರೋಗ (hysteria or epileptic sits) ಎಂದು ಹೇಳು ತ್ತಿದ್ದನು. ರೋಗಯುಕ್ತರಾದ ಸಾಧಾರಣ ವ್ಯಕ್ತಿಗಳಂತೆಯೆ ಶ್ರೀರಾಮಕೃಷ್ಣರು ಮೂರ್ಛೆ ಹೋಗುತ್ತಿದ್ದರು ಎಂಬುದು ಅವನ ಅಭಿಪ್ರಾಯವಾಗಿತ್ತು. ಈ ವಿಷಯ ಶ್ರೀರಾಮ ಕೃಷ್ಣರ ಕಿವಿಗೆ ಬಿತ್ತು. ಶಿವನಾಥಶಾಸ್ತ್ರಿಯು ಬಹಳ ಹಿಂದಿನಿಂದಲೂ ಶ್ರೀರಾಮಕೃಷ್ಣ ರೆಡೆಗೆ ಆಗಾಗ ಬಂದು ಹೋಗುತ್ತಿದ್ದ. ಒಂದು ದಿನ ಅವನು ದಕ್ಷಿಣೇಶ್ವರಕ್ಕೆ ಬಂದಿದ್ದಾಗ ಶ್ರೀರಾಮಕೃಷ್ಣರು ಈ ವಿಷಯವನ್ನು ಪ್ರಸ್ತಾಪಿಸಿ ಅವನಿಗೆ ಹೇಳಿದರು: "ನೋಡು ಶಿವ ನಾಥ, ನೀನು ಇದನ್ನೆಲ್ಲಾ ರೋಗ ಎಂದು ಹೇಳುತ್ತೀಯಂತೆ. ನಾನು ಆ ಸಮಯದಲ್ಲಿ ಚೈತನ್ಯ ಕಳೆದುಕೊಳ್ಳುತ್ತೇನೆ ಎಂದು ಹೇಳುತ್ತೀಯಂತೆ. ನೀವುಗಳೆಲ್ಲಾ ಹಗಲೂ ರಾತ್ರಿ ಇಟ್ಟಿಗೆ, ಮರ, ಮಣ್ಣು, ಹೊನ್ನು ಇತ್ಯಾದಿ ಜಡವಸ್ತುಗಳನ್ನೇ ಚಿಂತಿಸುತ್ತಾ ಸರಿಯಾಗಿ ರುತ್ತೀರಿ. ನಾನು ಮಾತ್ರ, ಚೈತನ್ಯಸ್ವರೂಪನಾದ ಭಗವಂತನನ್ನು ಹಗಲು ರಾತ್ರಿ ಚಿಂತಿ ಸುತ್ತಾ ಅಚೈತನ್ಯನಾಗುತ್ತೇನೆ ಅಲ್ಲವೆ ? ನಿನಗೆಲ್ಲಿಂದ ಈ ಬುದ್ಧಿಶಕ್ತಿ ಬಂತು ? " ಶಿವ ನಾಥ ಶಾಸ್ತ್ರಿಯು ನಿರುತ್ತರನಾದನು.

27. ಶ್ರೀರಾಮಕೃಷ್ಣರು 'ದಿವ್ಯೋನ್ಮಾದ', 'ಜ್ಞಾನೋನ್ಮಾದ' ಇತ್ಯಾದಿ ವಿಷಯ ಗಳನ್ನು ಕುರಿತು ನಮಗೆ ಯಾವಾಗಲೂ ಹೇಳುತ್ತಿದ್ದರು, ತಮ್ಮ ಜೀವನದಲ್ಲಿ, ಹನ್ನೆರಡು ವರ್ಷಗಳವರೆಗೆ ಭಗವದನುರಾಗದ ಪ್ರಬಲ ಬಿರುಗಾಳಿ ಬೀಸಿತು ಎಂಬುದನ್ನು ಅವರು ಮುಕ್ತಕಂಠದಿಂದ ಹೇಳುತ್ತಿದ್ದರು. ಅವರು ಹೇಳುತ್ತಿದ್ದರು : "ಬಿರುಗಾಳಿ ಬಂದಾಗ ಎಲ್ಲಾ ಧೂಳುಮಯವಾಗುವುದು. ಆಗ ಯಾವುದು ಮಾವಿನಮರ ಯಾವುದು ಹುಣಿಸೆ

ಮರ ಎಂದು ಪ್ರತ್ಯೇಕಿಸಿ ಹೇಳಲಾಗುವುದಿಲ್ಲ, ಅವು ಕಾಣಿಸುವುದೂ ಇಲ್ಲ. ನನಗೂ ಅಂಥದೇ ಸ್ಥಿತಿ ಉಂಟಾಗಿತ್ತು. ಒಳಿತು ಕೆಡುಕು, ನಿಂದಾ ಸ್ತುತಿ, ಶುದ್ಧ ಅಶುದ್ಧ ಇವುಗಳಾವುದೂ ನನಗೆ ತಿಳಿಯುತ್ತಿರಲಿಲ್ಲ. ಕೇವಲ ಒಂದೇ ಒಂದು ಚಿಂತೆ : ಹೇಗೆ ಭಗವಂತ ನನ್ನು ಪಡೆಯುವುದು. ಇದೇ ಯಾವಾಗಲೂ ನನ್ನ ಮನಸ್ಸಿನಲ್ಲಿ ಇರುತ್ತಿತ್ತು. ಜನರು ಹೇಳುತ್ತಿದ್ದರು ಇವನು ಹುಚ್ಚ ಎಂದು." ಈ ವಿಷಯವನ್ನು ಇಲ್ಲಿಗೆ ನಿಲ್ಲಿಸೋಣ. ಪ್ರಸ್ತುತ ವಿಷಯಕ್ಕೆ ಬರೋಣ.

28. ಆ ಸಂದರ್ಭದಲ್ಲಿ ದಕ್ಷಿಣೇಶ್ವರಕ್ಕೆ ಬರುತ್ತಿದ್ದ ಸಾಧಕ ಪಂಡಿತರಲ್ಲಿ ಕೆಲವರು ಭಕ್ತಿಯ ಅತಿಶಯದಿಂದಾಗಿ ಶ್ರೀರಾಮಕೃಷ್ಣರ ಮೂಲಕ ಮಂತ್ರದೀಕ್ಷೆಯನ್ನು ಮತ್ತು ಕೆಲವೊಮ್ಮೆ ಸಂನ್ಯಾಸವನ್ನೂ ಕೂಡ ತೆಗೆದುಕೊಂಡು ಹೋಗುತ್ತಿದ್ದರು. ಇವರಲ್ಲಿ ನಾರಾಯಣ ಶಾಸ್ತ್ರೀಯು ಒಬ್ಬನು. ನಾರಾಯಣ ಶಾಸ್ತ್ರಿಯು ಪ್ರಾಚೀನ ಕಾಲದ ನಿಷ್ಠಾವಂತ ಬ್ರಹ್ಮಚಾರಿಗಳಂತೆ ಇಪ್ಪತ್ತೈದು ವರ್ಷ ಗುರುಗೃಹದಲ್ಲಿ ವಾಸಮಾಡಿ ಸಕಲ ಶಾಸ್ತ್ರಗಳಲ್ಲಿ ಪಾರಂಗತನಾಗಿದ್ದನು. ಷಡ್ದರ್ಶನಗಳೆಲ್ಲದರಲ್ಲೂ ಸಮಾನವಾದ ಪಾಂಡಿತ್ಯ ಮತ್ತು ಪ್ರಭುತ್ವವನ್ನು ಪಡೆಯಬೇಕೆಂಬ ಪ್ರಬಲ ಆಕ್ಷಾಂಕ್ಷೆ ಅವನಲ್ಲಿತ್ತು. ಉತ್ತರ ಪಶ್ಚಿಮ ಭಾಗದ ಕಾಶಿ ಮುಂತಾದ ಸ್ಥಳಗಳಲ್ಲಿ ವಿವಿಧ ಆಚಾರ್ಯರ ಮೂಲಕ ಐದು ದರ್ಶನಗಳಲ್ಲಿ ಅವನು ಸಂಪೂರ್ಣ ವ್ಯುತ್ಪತ್ತಿಯನ್ನು ಪಡೆದಿದ್ದನು. ಆದರೆ ಬಂಗಾಳದ ನವದ್ವೀಪದಲ್ಲಿ ಪ್ರಸಿದ್ಧವಾಗಿರುವ ನವ್ಯ ನ್ಯಾಯದಲ್ಲಿ ಪಾಂಡಿತ್ಯವನ್ನು ಸಂಪಾದಿಸದೆ ಪ್ರಸಿದ್ಧ ನೈಯಾಯಿಕರ ಮಧ್ಯದಲ್ಲಿ ಸ್ಥಾನವನ್ನು ಪಡೆಯುವುದು ಅಸಂಭವವಾದ್ದರಿಂದ ಅವನು ಬಂಗಾಳಕ್ಕೆ ಬಂದಿದ್ದನು. ದಕ್ಷಿಣೇಶ್ವರಕ್ಕೆ ಬರುವುದಕ್ಕೆ ಮುಂಚೆ ಏಳುವರ್ಷ ನವದ್ವೀಪದಲ್ಲಿ ಇದ್ದು ನ್ಯಾಯವನ್ನು ಅಧ್ಯಯನ ಮಾಡಿದ್ದನು. ಈಗ ಅವನು ತನ್ನ ಊರಿಗೆ ಹಿಂದಿರುಗಬೇಕಿತ್ತು. ಮತ್ತೆ ಈ ಕಡೆ ಬರುತ್ತೇನೆಯೊ ಇಲ್ಲವೊ ಎಂಬ ಸಂದೇಹದಿಂದ ಕಲ್ಕತ್ತಾ ಮತ್ತು ದಕ್ಷಿಣೇಶ್ವರವನ್ನು ನೋಡಿಕೊಂಡು ಹೋಗಲು ಬಂದನು. ಅವನು ಬಂಗಾಲಕ್ಕೆ ಬರುವುದಕ್ಕೆ ಮುಂಚೆಯೆ ತನ್ನ ದೇಶದಲ್ಲಿ ದೊಡ್ಡ ಪಂಡಿತನೆಂದು ಪ್ರಸಿದ್ಧನಾಗಿದ್ದನು. ಒಮ್ಮೆ ಜಯಪುರದ ಮಹಾರಾಜನು ನಾರಾಯಣಶಾಸ್ತ್ರಿಯನ್ನು ಸಭಾ ಪಂಡಿತನನ್ನಾಗಿ ನಿಯೋಜಿಸಲು ಆಶಿಸಿದ್ದನು. ಬಹಳಷ್ಟು ವೇತನವನ್ನು ಕೊಡುವುದಾಗಿ ಅವನನ್ನು ಆಹ್ವಾನಿಸಿದ್ದನು. ಆದರೆ ನಾರಾಯಣಶಾಸ್ತ್ರಿಯಲ್ಲಿ ಆಗಲೂ ಕೂಡ ಜ್ಞಾನಾರ್ಜನೆಯ ಆಸೆ ಕಡಮೆಯಾಗಿರಲಿಲ್ಲ ಮತ್ತು ಷಡ್ದರ್ಶನಗಳಲ್ಲಿ ಪ್ರಭುತ್ವವನ್ನು ಪಡೆಯುವ ಪ್ರಬಲಾಕಾಂಕ್ಷೆ ಇನ್ನೂ ಸಜೀವವಾಗಿಯೆ ಇತ್ತು. ಆದ್ದರಿಂದ ಅವನು ಮಹಾರಾಜನ ಆಹ್ವಾನವನ್ನು ನಿರಾಕರಿಸಬೇಕಾಯಿತು. ನಾರಾಯಣಶಾಸ್ತ್ರಿಯು ರಾಜಾಸ್ಥಾನದ ಕಡೆಯವನೆಂಬುದು ನಮ್ಮ ಊಹೆಯಾಗಿದೆ.

29. ನಾರಾಯಣಶಾಸ್ತ್ರಿ ಸಾಮಾನ್ಯ ಪಂಡಿತರುಗಳಂತೆ ಇರಲಿಲ್ಲ. ಶಾಸ್ತ್ರಜ್ಞಾನದ ಜೊತೆಗೆ ಅವನ ಮನಸ್ಸಿನಲ್ಲಿ ಸ್ವಲ್ಪ ವೈರಾಗ್ಯವೂ ಇತ್ತು. ಕೇವಲ ಓದಿದ ಮಾತ್ರದಿಂದಲೇ ವೇದಾಂತ ಮುಂತಾದ ಶಾಸ್ತ್ರಗಳನ್ನು ಸಂಪೂರ್ಣ ಅರ್ಥಮಾಡಿಕೊಳ್ಳಲಾಗುವು

ದಿಲ್ಲ. ಅದಕ್ಕೆ ಸಾಧನೆಯೂ ಆವಶ್ಯಕ ಎಂಬುದನ್ನು ಅವನು ಸರಿಯಾಗಿ ಅರ್ಥಮಾಡಿ ಕೊಂಡಿದ್ದನು. ಆದ್ದರಿಂದ ಶಾಸ್ತ್ರವನ್ನು ಸಂಪೂರ್ಣ ಅಧ್ಯಯನ ಮಾಡುವಾಗ ಅವನಿಗೆ ಆಗಾಗ ಅನ್ನಿಸುತ್ತಿತ್ತು : ಈ ರೀತಿ ಓದುವುದರಿಂದ ಜ್ಞಾನಲಾಭ ಆಗುವುದಿಲ್ಲ, ಕೆಲವು ದಿನಗಳ ಮಟ್ಟಿಗೆ ಸಾಧನೆ ಮಾಡಿ ಶಾಸ್ತ್ರದಲ್ಲಿ ಹೇಳಿರುವುದನ್ನು ಪ್ರತ್ಯಕ್ಷ ಅನುಭವಿಸಬೇಕು ಎಂದು. ಮತ್ತೆ ಅಧ್ಯಯನವನ್ನು ಮಧ್ಯದಲ್ಲಿಯೆ ನಿಲ್ಲಿಸಿ ಸಾಧನೆಯನ್ನು ಪ್ರಾರಂಭಿಸಿದರೆ ಅದೂ ಇಲ್ಲ ಇದೂ ಇಲ್ಲ ಎಂದಾಗುವುದೆಂದು ಭಾವಿಸಿ ತನ್ನ ಸಾಧನೆಯ ಹಂಬಲವನ್ನು ಅವನು ನಿಗ್ರಹಿಸಿಕೊಂಡು ಅಧ್ಯಯನದ ಕಡೆಗೆ ಮನಸ್ಸನ್ನು ಹರಿಸಿದ್ದನು. ಈಗ ಅವನ ಅನೇಕ ದಿನಗಳ ಆಸೆ ಪೂರ್ಣಗೊಂಡಿದೆ, ಷಡ್ದರ್ಶನಗಳನ್ನು ಆದ್ಯಂತವಾಗಿ ಅಧ್ಯಯನ ಮಾಡಿಯಾಗಿದೆ. ಈಗ ಅವನಿಗೆ ತನ್ನ ಊರಿಗೆ ಹಿಂದಿರುಗಬೇಕೆಂಬ ಆಸೆ. ಊರಿಗೆ ಹಿಂದಿ ರುಗಿದಮೇಲೆ ಏನಾಗುತ್ತದೊ ಅದನ್ನು ಮಾಡುತ್ತೇನೆ ಎಂದು ಮನಸ್ಸಿನಲ್ಲಿ ನಿಶ್ಚಯಿಸಿ ದ್ದನು. ಈ ಸಮಯದಲ್ಲಿ ಅವನು ಶ್ರೀರಾಮಕೃಷ್ಣರನ್ನು ಭೇಟಿಯಾದನು ಮತ್ತು ಅವರ ಕಡೆ ಏನೊ ಒಂದು ಆಕರ್ಷಣೆ ಉಂಟಾಯಿತು.

ಮೊದಲೆ ಹೇಳಿರುವಂತೆ ಆಗ ದಕ್ಷಿಣೇಶ್ವರದಲ್ಲಿ ಅತಿಥಿಗಳು, ಸಾಧು ಸಂನ್ಯಾಸಿಗಳು, ಬ್ರಾಹ್ಮಣ ಪಂಡಿತರುಗಳು ಇವರುಗಳಿಗೆಲ್ಲಾ ಒಳ್ಳೆಯ ಊಟ ವಸತಿಯ ವ್ಯವಸ್ಥೆ ಇತ್ತು. ನಾರಾಯಣಶಾಸ್ತ್ರಿಯಾದರೊ ಬ್ರಾಹ್ಮಣ ಬ್ರಹ್ಮಚಾರಿ, ಮತ್ತೆ ಪ್ರಕಾಂಡ ಪಂಡಿತ. ಹಾಗಿರುವಾಗ ಅಲ್ಲಿ ಅವನಿಗೆ ಒಳ್ಳೆಯ ಸನ್ಮಾನ ದೊರಕಿತು ಮತ್ತು ಎಷ್ಟು ದಿನ ಬೇಕೊ ಅಷ್ಟು ದಿನ ಇರಲು ಅವಕಾಶ ಸಿಕ್ಕಿತು ಎಂಬುದರಲ್ಲಿ ಆಶ್ಚರ್ಯವೇನಿಲ್ಲ. ಊಟ ಉಪ ಚಾರದ ಅನುಕೂಲವಾದ ವ್ಯವಸ್ಥೆ, ಅತ್ಯಂತ ರಮಣೀಯವಾದ ಪ್ರದೇಶ ಮತ್ತು ದೇವ ಮಾನವರಂಥ ಶ್ರೀರಾಮಕೃಷ್ಣರ ಸಂಗ—ಇವಿಷ್ಟು ಇರುವಾಗ ನಾರಾಯಣ ಶಾಸ್ತ್ರಿಯು ಅಲ್ಲಿ ಕೆಲವು ಕಾಲ ತಂಗಬೇಕೆಂದು ನಿರ್ಧರಿಸಿದುದರಲ್ಲಿ ಆಶ್ಚರ್ಯವಿದೆ ? ಶ್ರೀರಾಮ ಕೃಷ್ಣರ ಪರಿಚಯ ಅಧಿಕವಾದಷ್ಟೂ ಅವರ ಮೇಲೆ ಭಕ್ತಿ, ಪ್ರೀತಿ ಅವನಲ್ಲಿ ಅಧಿಕ ವಾಯಿತು, ಮತ್ತೂ ಮತ್ತೂ ಅವರನ್ನು ನೋಡಬೇಕು, ಅವರನ್ನು ತಿಳಿಯಬೇಕು ಎಂಬ ಆಸೆ ದಿನದಿನವೂ ವೃದ್ಧಿಯಾಯಿತು. ಶ್ರೀರಾಮಕೃಷ್ಣರಿಗೂ ಕೂಡ ಸರಳ ಹೃದ ಯದ ಶಾಸ್ತ್ರಿಯನ್ನು ನೋಡಿ ಆನಂದವಾಯಿತು. ಅವರು ಅವನೊಡನೆ ಭಗವದ್ವಿಚಾರ ವನ್ನು ಮಾತನಾಡುತ್ತಾ ಬಹಳ ಸಮಯವನ್ನು ಕಳೆಯುತ್ತಿದ್ದರು.

ನಾರಾಯಣ ಶಾಸ್ತ್ರಿಯು ವೇದಾಂತದಲ್ಲಿ ಹೇಳಿರುವ ಸಪ್ತಭೂಮಿಕೆಯ ವಿಷಯ ವನ್ನು ಅಧ್ಯಯನ ಮಾಡಿದ್ದನು. ಶಾಸ್ತ್ರದ ಪ್ರಕಾರ ಮನಸ್ಸು ಒಂದು ಭೂಮಿಕೆಯಿಂದ ಮತ್ತೊಂದು ಭೂಮಿಕೆಗೆ ಏರುತ್ತಾ ಹೋದಂತೆಲ್ಲಾ ವಿಚಿತ್ರವಾದ ಅನುಭವಗಳೂ ದರ್ಶನಗಳೂ ಉಂಟಾಗುತ್ತವೆ ಮತ್ತು ಕೊನೆಯಲ್ಲಿ ನಿರ್ವಿಕಲ್ಪ ಸಮಾಧಿಯಾಗುತ್ತದೆ. ಈ ಅವಸ್ಥೆಯಲ್ಲಿ ಅಖಂಡ ಸಚ್ಚಿದಾನಂದ ಸ್ವರೂಪವಾದ ಬ್ರಹ್ಮವಸ್ತುವಿನಲ್ಲಿ ಮನಸ್ಸು ಲೀನವಾಗಿ ಯುಗಯುಗಾಂತರಗಳಿಂದ ಬಂದಿರುವ ಈ ಸಂಸಾರ ಭ್ರಮೆಯು ಒಮ್ಮೆಯೆ ಮಾಯವಾಗುವುದು. ನಾರಾಯಣ ಶಾಸ್ತ್ರಿಗೆ ಅನ್ನಿಸಿತು ತಾನು ಇವನ್ನೆಲ್ಲಾ ಓದಿ ಕಂಠ

ಪಾಠಮಾಡಿರುವೆನಷ್ಟೆ, ಶ್ರೀರಾಮಕೃಷ್ಣರಾದರೊ ಇವನ್ನು ತಮ್ಮ ಜೀವನದಲ್ಲಿ ಪ್ರತ್ಯಕ್ಷ ಅನುಭವಿಸಿರುವರು ಎಂದು. 'ಸಮಾಧಿ ಅಪರೋಕ್ಷಾನುಭೂತಿ' ಮುಂತಾದ ಶಬ್ದಗಳನ್ನು ತಾನು ಕೇವಲ ಎಚ್ಚರಿಸುವುದಷ್ಟೆ, ಶ್ರೀರಾಮಕೃಷ್ಣರಿಗಾದರೊ ಸಮಾಧಿಯು ಅತ್ಯಂತ ಸಹಜವಾಗಿತ್ತು ಎಂಬುದನ್ನು ಅವನು ಕಂಡುಕೊಂಡನು. ಶಾಸ್ತ್ರಿಯು ಭಾವಿಸಿದನು : "ಎಂಥಾ ಅದ್ಭುತ ! ಶಾಸ್ತ್ರದ ನಿಗೂಢ ಅರ್ಥವನ್ನು ತಿಳಿಸಿಕೊಡಬಲ್ಲ ಇಂಥ ವ್ಯಕ್ತಿ ಇನ್ನೆಲ್ಲಿ ಸಿಕ್ಕುತ್ತಾರೆ ? ಇಂಥಾ ಸುಯೋಗವನ್ನು ನಾನು ಬಿಡಕೂಡದು. ಹೇಗಾದಾರೂ ಮಾಡಿ ಇವರಿಂದ ಬ್ರಹ್ಮಸಾಕ್ಷಾತ್ಕಾರದ ವಿಧಾನವನ್ನು ತಿಳಿದುಕೊಳ್ಳಲೇ ಬೇಕು. ಸಾವು ನಿಶ್ಚಿತ, ಯಾವಾಗ ಈ ಶರೀರ ಬಿದ್ದುಹೋಗುವುದೊ ಯಾರೂ ಹೇಳುವಂತಿಲ್ಲ. ನಿಜ ವಾದ ಜ್ಞಾನವನ್ನು ಪಡೆಯದೆ ಸತ್ತು ಹೋಗುವುದೆ ? ಅದು ಖಂಡಿತ ಆಗದು. ಕೊನೆಯ ಪಕ್ಷ ಅದನ್ನು ಪಡೆಯಲು ಪ್ರಯತ್ನವನ್ನಾದರೂ ಮಾಡಲೇಬೇಕು. ಈಗ ಊರಿಗೆ ಹಿಂದಿರುಗುವುದು ಬೇಡ."

30. ದಿನ ಕಳೆದಂತೆಲ್ಲ ಶ್ರೀರಾಮಕೃಷ್ಣರ ದಿವ್ಯಸಂಗದ ಪರಿಣಾಮವಾಗಿ ಶಾಸ್ತ್ರಿ ಯಲ್ಲಿ ವೈರಾಗ್ಯ ವ್ಯಾಕುಲತೆಗಳು ವೃದ್ಧಿಯಾಗುತ್ತಾ ಹೋದವು. ಪಾಂಡಿತ್ಯದಿಂದ ಎಲ್ಲ ರನ್ನೂ ದಂಗು ಪಡಿಸಬೇಕು, ಮಹಾಮಹೋಪಾಧ್ಯಯನಾಗಿ ಸಮಾಜದಲ್ಲಿ ಹೆಸರು, ಕೀರ್ತಿ, ಪ್ರತಿಷ್ಠೆಗಳನ್ನು ಗಳಿಸಬೇಕು–ಈ ಎಲ್ಲಾ ಆಸೆಗಳೂ ಅವನಿಗೆ ತುಚ್ಛವಾಗಿ ಕಂಡವು. ಅವನು ದೀನಭಾವದಿಂದ ಶಿಷ್ಯನಂತೆ ಶ್ರೀರಾಮಕೃಷ್ಣರೊಡನೆ ಕುಳಿತಿದ್ದನು ಮತ್ತು ಅವರ ಅಮೃತ ವಾಣಿಯನ್ನು ತದೇಕಚಿತ್ತನಾಗಿ ಕೇಳುತ್ತಿದ್ದನು. ಇನ್ನು ಯಾವ ವಿಷಯವನ್ನೂ ಚಿಂತಿಸಬಾರದು ಎಂದು ಅವನು ಭಾವಿಸುತ್ತಿದ್ದನು. ಯಾವಾಗ ಶರೀರ ಬಿದ್ದುಹೋಗುತ್ತದೆಯೊ ತಿಳಿಯದು, ಈಗ ಸಮಯವಿರುವಾಗ ಭಗವಂತನನ್ನು ಪಡೆ ಯಲು ಪ್ರಯತ್ನಿಸಬೇಕು ಎಂದು ಅವನು ನಿಶ್ಚಯಿಸಿದನು. ಶ್ರೀರಾಮಕೃಷ್ಣರನ್ನು ನೋಡಿ ಅವನು ಭಾವಿಸುತ್ತಿದ್ದನು : "ಆಹಾ ! ಇವರು ಮನುಷ್ಯಜನ್ಮವನ್ನು ಪಡೆದು ತಿಳಿಯಬೇಕಾದುದನ್ನು ತಿಳಿದು ಪಡೆಯಬೇಕಾದುದನ್ನು ಪಡೆದು ನಿಶ್ಚಿಂತರಾಗಿದ್ದಾರೆ. ಮೃತ್ಯುವೂ ಇವರ ಮುಂದೆ ಪರಾಜಿತನಾಗಿರುವನು, ವಿನಾಶದ ಕರಾಳ ರಾತ್ರಿಯನ್ನು ಅವರ ಮುಂದೆ ಅವನು ತೋರಿಸುವಂತಿಲ್ಲ. ಇಂಥ ಮಹಾಪುರುಷರು ಸಿದ್ಧಸಂಕಲ್ಪರು, ಇವರ ಕೃಪೆಗೆ ಪಾತ್ರರಾದರೆ ಮಾನವನ ಸಂಸಾರ ವಾಸನೆಯು ದೂರವಾಗಿ ಬ್ರಹ್ಮ ಜ್ಞಾನವು ಉದಯವಾಗುತ್ತದೆ ಎಂದು ಉಪನಿಷತ್ಕಾರರು ಹೇಳುತ್ತಾರೆ. ಆದ್ದರಿಂದ ಇವರನ್ನೇ ಏಕೆ ಆಶ್ರಯಿಸಬಾರದು ? ಇವರಲ್ಲೇ ಏಕೆ ನಾನು ಶರಣಾಗಬಾರದು ?" ನಾರಾಯಣ ಶಾಸ್ತ್ರಿಯು ಮನಸ್ಸಿನಲ್ಲಿ ಹೀಗೆ ಭಾವಿಸುತ್ತಾ, ಶ್ರೀರಾಮಕೃಷ್ಣರೊಡನೆ ಇದ್ದುಬಿಟ್ಟನು. ಆದರೆ ಶ್ರೀರಾಮಕೃಷ್ಣರು ತಾನು ಯೋಗ್ಯನಲ್ಲ ಎಂದು ಆಶ್ರಯ ನೀಡ ದಿರಬಹುದು ಎಂದು ಭಾವಿಸಿ ತನ್ನ ಮನಸ್ಸಿನ ಆಕಾಂಕ್ಷೆಯನ್ನು ವ್ಯಕ್ತಪಡಿಸಿರಲಿಲ್ಲ. ಹೀಗೆ ದಿನಗಳು ಉರುಳುತ್ತಾ ಹೋದವು.

31. ನಾರಾಯಣ ಶಾಸ್ತ್ರಿಯ ಮನಸ್ಸಿನಲ್ಲಿ ವೈರಾಗ್ಯವು ತೀವ್ರತೆಯನ್ನು ಪಡೆಯ

ತೊಡಗಿತು. ಇದನ್ನು ಈ ಕೆಳಗಿನ ಘಟನೆಯಿಂದ ಅರ್ಥಮಾಡಿಕೊಳ್ಳಬಹುದು. ಆ ಸಮಯದಲ್ಲಿ ಬಂಗಾಳದ ಪ್ರಸಿದ್ಧ ಕವಿಯಾದ ಮೈಕೇಲ್ ಮಧುಸೂದನ ದತ್ತನು ರಾಸಮಣಿಗೆ ಸಂಬಂಧಿಸಿದ ಒಂದು ಮೊಕದ್ದಮೆಯಲ್ಲಿ ಅವಳ ಪರವಾಗಿ ಭಾಗಿಯಾಗಿದ್ದ. ಆ ಮೊಕದ್ದಮೆಗೆ ಸಂಬಂಧಪಟ್ಟಂತೆ ಎಲ್ಲಾ ವಿಷಯವನ್ನು ಯಥಾವತ್ತಾಗಿ ತಿಳಿದು ಕೊಳ್ಳಲು ರಾಸಮಣಿ ವಂಶಸ್ಥನೊಬ್ಬನೊಡನೆ ಅವನು ಒಂದು ದಿನ ದಕ್ಷಿಣೇಶ್ವರಕ್ಕೆ ಬರಬೇಕಾಗಿತ್ತು. ಮೊಕದ್ದಮೆಗೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನು ತಿಳಿದಮೇಲೆ ಶ್ರೀರಾಮಕೃಷ್ಣರು ಅಲ್ಲಿರುವ ವಿಷಯವನ್ನು ತಿಳಿದು ಅವರನ್ನು ನೋಡುವ ಇಚ್ಛೆ ಯನ್ನು ವ್ಯಕ್ತಪಡಿಸಿದನು. ಶ್ರೀರಾಮಕೃಷ್ಣರಿಗೆ ಈ ವಿಷಯವನ್ನು ತಿಳಿಸಿದಾಗ ಅವರು ಮೊದಲು ಮಧುಸೂದನನೊಡನೆ ಮಾತನಾಡಲು ಶಾಸ್ತ್ರಿಯನ್ನು ಕಳಿಸಿದರು ಮತ್ತು ಅನಂತರ ತಾವೇ ಅಲ್ಲಿಗೆ ಬಂದರು. ನಾರಾಯಣ ಶಾಸ್ತ್ರಿಯು ಮಧುಸೂದನನೊಡನೆ ಮಾತನಾಡುತ್ತಾ ತನ್ನ ಸ್ವಧರ್ಮವನ್ನು ತ್ಯಜಿಸಿ ಕ್ರೈಸ್ತಧರ್ಮವನ್ನು ಅವಲಂಬಿಸಿದು ದರ ಕಾರಣವನ್ನು ವಿಚಾರಿಸಿದನು. ಹೊಟ್ಟೆಪಾಡಿಗೋಸ್ಕರ ತಾನು ಆ ರೀತಿ ಮಾಡಿದು ದಾಗಿ ಮೈಕೇಲ್ ಉತ್ತರಿಸಿದನು. ಅಪರಿಚಿತನಾದ ವ್ಯಕ್ತಿಗೆ ತನ್ನ ನೈಜ ವಿಷಯವನ್ನು ತಿಳಿಸಲು ಇಚ್ಛೆಯಿಲ್ಲದುದರಿಂದ ಅವನು ಈ ರೀತಿಯ ಉತ್ತರವನ್ನು ಕೊಟ್ಟಿದ್ದನೊ ಏನೊ, ಅದು ನಮಗೆ ತಿಳಿಯದು. ಆದರೆ ಶ್ರೀರಾಮಕೃಷ್ಣರು ಮತ್ತು ಅಲ್ಲಿ ಉಪಸ್ಥಿತ ರಿದ್ದ ಇತರರಿಗೆ ಅವನು ತನ್ನ ವಿಷಯವನ್ನು ಮರೆಮಾಚುತ್ತಿದ್ದಾನೆ ಎಂದು ಅನ್ನಿಸ ಲಿಲ್ಲ, ಯಥಾರ್ಥವನ್ನೇ ಹೇಳುತ್ತಿದ್ದಾನೆ ಎಂದೆನಿಸಿತು. ಏನೇ ಆಗಲಿ ಅವನ ಉತ್ತರ ವನ್ನು ಕೇಳಿ ನಾರಾಯಣ ಶಾಸ್ತ್ರಿಯು ಅತ್ಯಂತ ತಿರಸ್ಕಾರ ಭಾವದಿಂದ ಹೀಗೆಂದನು : "ಏನು ! ಈ ಎರಡು ದಿನದ ಸಂಸಾರದಲ್ಲಿ ಹೊಟ್ಟೆಪಾಡಿಗಾಗಿ ತನ್ನ ಧರ್ಮವನ್ನು ತ್ಯಜಿಸಿ ಬಿಡುವುದೆ ? ಎಂತಹ ಹೀನಬುದ್ಧಿ ಇದು. ಎಂದಾದರೊಂದು ದಿನ ಸಾಯಲೇ ಬೇಕು. ಅನ್ಯಧರ್ಮವನ್ನು ಅವಲಂಬಿಸುವುದರ ಬದಲು ಸಾಯುವುದೇ ಲೇಸು." ಇವನನ್ನೇ ಜನರು ದೊಡ್ಡ ಮನುಷ್ಯನೆಂದು ಗೌರವಿಸುತ್ತಾರಲ್ಲ, ಇವನ ಗ್ರಂಥವನ್ನು ಆದರದಿಂದ ಓದುತ್ತಾರಲ್ಲ ! ಎಂದು ಭಾವಿಸುತ್ತಾ ನಾರಾಯಣ ಶಾಸ್ತ್ರಿಯು ಮನಸ್ಸಿನಲ್ಲಿ ಅವನ ಬಗ್ಗೆ ಅತ್ಯಂತ ತಿರಸ್ಕಾರ ಭಾವನೆ ಉಂಟಾಗಿ ಮಾತನ್ನು ಮುಂದುವರಿಸದೆ ಸುಮ್ಮನಾದನು.

32. ಅನಂತರ ಮಧುಸೂದನನು ಶ್ರೀರಾಮಕೃಷ್ಣರ ಬಾಯಿಂದ ಧಾರ್ಮಿಕ ವಿಷಯಗಳನ್ನು ಕೇಳುವ ಆಸೆಯನ್ನು ವ್ಯಕ್ತಪಡಿಸಿದನು. ಶ್ರೀರಾಮಕೃಷ್ಣರು ನಮಗೆ ಹೇಳುತ್ತಿದ್ದರು : "ನನ್ನ ಬಾಯನ್ನು ಯಾರೋ ಒತ್ತಿ ಹಿಡಿದಂತಾಯ್ತು, ನನಗೆ ಏನೂ ಹೇಳಲಾಗಲಿಲ್ಲ". ಹೃದಯ ಮತ್ತಿತರರು ಹೇಳುತ್ತಾರೆ, ಸ್ವಲ್ಪ ಹೊತ್ತಿನ ನಂತರ ಶ್ರೀರಾಮಕೃಷ್ಣರು ರಾಮಪ್ರಸಾದ ಕಮಲಾಕಾಂತ ಮುಂತಾದ ಸಾಧಕರ ಹಾಡುಗಳನ್ನು ತಮ್ಮ ಮಧುರ ಕಂಠದಿಂದ ಹಾಡಿ ಮಧುಸೂದನನ ಮನಸ್ಸನ್ನು ಸೂರೆಗೊಂಡರು ಮತ್ತು ಇದರ ಮೂಲಕ ಸಂಸಾರದಲ್ಲಿ ಭಗವದ್ಭಕ್ತಿಯೇ ಸಾರವಸ್ತು ಎಂಬುದನ್ನು ತಿಳಿಸಿಕೊಟ್ಟರು ಎಂದು. ಮೈಕೇಲನು ಹೊರಟುಹೋದ ಮೇಲೂ ಕೂಡ ಅವನು ಆ

ರೀತಿ ಸ್ವಧರ್ಮವನ್ನು ತ್ಯಜಿಸಿದುದು ಅತ್ಯಂತ ಹೀನಕಾರ್ಯ ಎಂದು ನಾರಾಯಣ ಶಾಸ್ತ್ರಿಯು ತನ್ನ ತಿರಸ್ಕಾರವನ್ನು ವ್ಯಕ್ತಪಡಿಸಿದನು. ಶ್ರೀರಾಮಕೃಷ್ಣರ ಕೊಠಡಿಯ ಬಾಗಿಲ ಪಕ್ಕದ ಗೋಡೆಯ ಮೇಲೆ ಇದ್ದಿಲಿನ ತುಂಡಿನಿಂದ ದೊಡ್ಡ ಅಕ್ಷರದಲ್ಲಿ "ಹೊಟ್ಟೆಯ ಪಾಡಿಗಾಗಿ ಸ್ವಧರ್ಮ ತ್ಯಾಗಮಾಡುವುದು ಅತ್ಯಂತ ಹೀನಬುದ್ಧಿಯ ಕೆಲಸ" ಎಂದು ಬಂಗಾಳಿ ಲಿಪಿಯಲ್ಲಿ ಬರೆದನು. ಇದನ್ನು ಓದಿದ ನಮಗೆ ಅತ್ಯಂತ ಕುತೂಹಲ ಉಂಟಾಗಿತ್ತು. ಒಂದು ದಿನ ಇದರ ಬಗ್ಗೆ ವಿಚಾರಿಸಿ ಇದರ ಹಿಂದಿನ ಕಥೆಯನ್ನೆಲ್ಲಾ ತಿಳಿದುಕೊಂಡೆವು. ಅವನು ಬಂಗಾಳದಲ್ಲಿ ಬಹಳಕಾಲ ಇದ್ದಿದ್ದರಿಂದ ಆ ಭಾಷೆಯನ್ನು ಕಲಿತಿದ್ದನು.

33. ಇನ್ನು ನಾರಾಯಣ ಶಾಸ್ತ್ರಿಯ ಜೀವನದ ಕೊನೆಯ ವಿಷಯಕ್ಕೆ ಬರೋಣ. ನಾರಾಯಣ ಶಾಸ್ತ್ರಿಯು ಒಂದು ದಿನ ಏಕಾಂತದಲ್ಲಿ ತನ್ನ ಮನೋಭಾವವನ್ನು ವ್ಯಕ್ತಪಡಿಸಿದನು. ತನಗೆ ಸಂನ್ಯಾಸ ನೀಡಬೇಕೆಂದು ಶ್ರೀರಾಮಕೃಷ್ಣರನ್ನು ಪಟ್ಟುಹಿಡಿದು ಕೇಳಿಕೊಂಡನು. ಶ್ರೀರಾಮಕೃಷ್ಣರೂ ಕೂಡ ಅವನ ಆಗ್ರಹವನ್ನು ನೋಡಿ ಒಂದು ಶುಭ ದಿನದಂದು ಸಂನ್ಯಾಸದೀಕ್ಷೆಯನ್ನು ಇತ್ತರು. ಸಂನ್ಯಾಸ ಗ್ರಹಣ ಮಾಡಿದ ನಾರಾಯಣ ಶಾಸ್ತ್ರಿ ಮತ್ತೆ ಕಾಳೀ ಮಂದಿರದಲ್ಲಿ ಇರಲಿಲ್ಲ. ವಸಿಷ್ಠಾಶ್ರಮದಲ್ಲಿ 'ಕುಳಿತು ಬ್ರಹ್ಮ ಸಾಕ್ಷಾತ್ಕಾರಕ್ಕಾಗಿ ಪ್ರಾಣಹೋಗುವವರೆಗೂ ಪ್ರಯತ್ನಿಸುವುದಾಗಿ ಶ್ರೀರಾಮಕೃಷ್ಣರಿಗೆ ತಿಳಿಸಿದನು. ಕಂಬನಿ ತುಂಬಿದ ಕಣ್ಣುಗಳಿಂದ ಅವರ ಆಶೀರ್ವಾದವನ್ನು ಪಡೆದು ಅವರ ಚರಣಕ್ಕೆ ವಂದಿಸಿ ದಕ್ಷಿಣೇಶ್ವರದಿಂದ ಬೀಳ್ಕೊಂಡನು. ಅವನು ಮತ್ತೆ ಎಂದೂ ಈ ಕಡೆ ಬರಲಿಲ್ಲ. ಮುಂದೆ ನಾರಾಯಣಶಾಸ್ತ್ರಿಯ ಸುದ್ದಿಯು ನಮಗೆ ತಿಳಿದು ಬರಲಿಲ್ಲ. ಕೆಲವರು ಹೇಳುತ್ತಾರೆ ಅವನು ವಸಿಷ್ಠಾಶ್ರಮದಲ್ಲಿ ಕಠೋರ ತಪಸ್ಸನ್ನಾಚರಿಸುತ್ತಿರುವಾಗ ಕಾಯಿಲೆ ಉಂಟಾಗಿ ಆದರಿಂದಲೆ ತೀರಿಕೊಂಡನು ಎಂದು.

34. ನಿಜವಾದ ಸಾಧುಗಳು, ಸಾಧಕರು ಅಥವಾ ಭಗವದ್ಭಕ್ತರು, ಅವರು ಯಾವುದೇ ಸಂಪ್ರದಾಯದವರಾಗಲಿ, ಯಾರಾದರೂ ಇದ್ದಾರೆಂದು ಶ್ರೀರಾಮಕೃಷ್ಣರಿಗೆ ತಿಳಿದುಬಂದರೆ ಅವರನ್ನು ನೋಡಲು ತಾವಾಗಿಯೇ ಹೋಗುತ್ತಿದ್ದರು ಮತ್ತು ಅವರೊಡನೆ ಭಗವದ್‌ವಿಚಾರವಾಗಿ ಮಾತನಾಡುತ್ತಾ ಸ್ವಲ್ಪ ಸಮಯ ಕಳೆದು ಮತ್ತೆ ಹಿಂದಿರುಗುತ್ತಿದ್ದರು. ಜನರು ಏನೆಂದುಕೊಳ್ಳುತ್ತಾರೆ, ಅಪರಿಚಿತ ಸಾಧಕರು ತಮ್ಮನ್ನು ನೋಡಲು ಇಷ್ಟಪಡುತ್ತಾರೊ ಇಲ್ಲವೊ, ತಾವು ಅಲ್ಲಿಗೆ ಹೋದರೆ ಸರಿಯಾಗಿ ಗೌರವಿಸಲ್ಪಡುತ್ತೇನೊ ಇಲ್ಲವೊ—ಇಂಥ ವಿಚಾರಗಳಾವುವೂ ಅವರ ಮನಸ್ಸಿನಲ್ಲಿ ತಲೆದೋರುತ್ತಿರಲಿಲ್ಲ. ಹೇಗಾದರೂ ಮಾಡಿ ಅಲ್ಲಿಗೆ ಹೋಗಿ ಸಾಧಕಭಕ್ತನು ಎಂಥವನು ಮತ್ತು ಸಾಧನ ಮಾರ್ಗದಲ್ಲಿ ಎಷ್ಟು ಮುಂದುವರಿದಿರುವನು ಎಂಬ ವಿಷಯವನ್ನು ತಿಳಿದು ಒಂದು ನಿರ್ದಿಷ್ಟವಾದ ನಿರ್ಣಯಕ್ಕೆ ಬಂದ ಮೇಲೆ ಅವರು ಸಮಾಧಾನಗೊಳ್ಳುತ್ತಿದ್ದರು. ಶಾಸ್ತ್ರವೇತ್ತರಾದ ಸಾಧಕರ ವಿಷಯವನ್ನು ಕೇಳಿದಾಗಲೂ ಶ್ರೀರಾಮಕೃಷ್ಣರು ಅನೇಕ ವೇಳೆ ಇದೇ ರೀತಿ ವರ್ತಿಸುತ್ತಿದ್ದರು. ಪಂಡಿತ ಪದ್ಮಲೋಚನ, ಸ್ವಾಮಿ ದಯಾನಂದ

ಸರಸ್ವತಿ ಮುಂತಾದ ಅನೇಕರನ್ನು ಶ್ರೀರಾಮಕೃಷ್ಣರು ಈ ಭಾವದಲ್ಲಿ ನೋಡಲು ಹೋಗಿದ್ದರು. ಅವರುಗಳ ವಿಷಯವಾಗಿ ಶ್ರೀರಾಮಕೃಷ್ಣರು ಅನೇಕ ಬಾರಿ ಹೇಳುತ್ತಿದ್ದರು. ಈಗ ಪಂಡಿತ ಪದ್ಮಲೋಚನನ ವಿಷಯವಾಗಿ ಓದುಗರಿಗೆ ತಿಳಿಸಿಕೊಡುತ್ತೇವೆ.

35. ಶ್ರೀರಾಮಕೃಷ್ಣರು ಅವತರಿಸುವುದಕ್ಕೆ ಮುಂಚೆ ಬಂಗಾಳದಲ್ಲಿ ವೇದಾಂತ ಚರ್ಚೆಯು ಹೆಚ್ಚು ಪ್ರಚಲಿತದಲ್ಲಿರಲಿಲ್ಲ. ಬಹಳ ಶತಮಾನಗಳ ಹಿಂದೆಯೇ ಶಂಕರಾಚಾರ್ಯರು ಬಂಗಾಳದ ತಾಂತ್ರಿಕರನ್ನು ತರ್ಕಯುದ್ಧದಲ್ಲಿ ಸೋಲಿಸಿದ್ದರು. ಆದರೂ ಕೂಡ ಅಲ್ಲಿ ತಮ್ಮ ಮತವನ್ನು ದೃಢವಾದ ತಳಹದಿಯ ಮೇಲೆ ಪ್ರತಿಷ್ಠಾಪಿಸಲು ಸಮರ್ಥರಾಗಲಿಲ್ಲ. ಇದರ ಪರಿಣಾಮವಾಗಿ ಅಲ್ಲಿ ತಂತ್ರವು ಅದ್ವೈತ ತತ್ತ್ವವನ್ನು ಸತ್ಯವೆಂದು ಸ್ವೀಕರಿಸಿ ತನ್ನ ಉಪಾಸನೆಗಳಲ್ಲಿ ಅದರ ಭಾವನೆಗಳನ್ನು ಅಳವಡಿಸಿಕೊಂಡಿತು. ಜನಸಾಧಾರಣರು ಹಿಂದಿನಂತೆಯೇ ತಂತ್ರೋಕ್ತ ಪೂಜಾದಿಗಳನ್ನೇ ಅನುಸರಿಸುತ್ತಿದ್ದರು. ಬಂಗಾಳದ ಪಂಡಿತರು ನ್ಯಾಯದರ್ಶನದಲ್ಲಿಯೇ ತಮ್ಮ ಬುದ್ಧಿಶಕ್ತಿಯನ್ನೆಲ್ಲಾ ವ್ಯಯಿಸಿದರು ಮತ್ತು ನವ್ಯನ್ಯಾಯವೆಂಬ ಒಂದು ಹೊಸ ಸಿದ್ಧಾಂತವನ್ನೇ ರೂಪಿಸಿದರು. ಆಚಾರ್ಯ ಶಂಕರರಿಂದ ತರ್ಕದಲ್ಲಿ ಪರಾಜಿತರಾಗಿಯೇ ಬಂಗಾಳಿಗಳು ತರ್ಕಶಾಸ್ತ್ರದ ವಿಚಾರದಲ್ಲಿ ಅಷ್ಟೊಂದು ಮುಂದುವರಿದಿರಬೇಕೆಂದು ತೋರುತ್ತದೆ. ಯಾವುದೇ ಜಾತಿಯವರಾಗಲಿ ಯಾವುದಾದರೊಂದು ವಿಷಯದಲ್ಲಿ ಪರಾಜಿತರಾದರೆ ಸ್ವಾಭಿಮಾನದಿಂದ ಅದೇ ವಿಷಯದಲ್ಲಿ ಎಲ್ಲರನ್ನೂ ಮೀರಿಸುವ ತೀವ್ರ ಆಕಾಂಕ್ಷೆ ಅವರಲ್ಲಿ ಉದ್ಭವಿಸುವುದು ಎಂಬುದನ್ನು ಅನೇಕವೇಳೆ ನೋಡಿದ್ದೇವೆ.

36. ಶ್ರೀರಾಮಕೃಷ್ಣರು ಬರುವುದಕ್ಕೆ ಮುಂಚೆ ಬಂಗಾಳದಲ್ಲಿ ಅದ್ವೈತ ವೇದಾಂತದ ಉದಾರ ತತ್ತ್ವದ ಕಡೆಗೆ ಯಾರೂ ಆಕರ್ಷಿತರಾಗಿರಲಿಲ್ಲ ಎಂದು ಹೇಳುವಂತಿಲ್ಲ. ಆ ರೀತಿ ಆಕರ್ಷಿತರಾದ ಪಂಡಿತರಲ್ಲಿ ಪದ್ಮಲೋಚನನು ಪ್ರಸಿದ್ಧನು. ಪದ್ಮಲೋಚನನು ನ್ಯಾಯದಲ್ಲಿ ವ್ಯುತ್ಪತ್ತಿಯನ್ನು ಪಡೆದ ಮೇಲೆ ವೇದಾಂತದರ್ಶನದ ಕಡೆಗೆ ತನ್ನ ಗಮನವನ್ನು ಹರಿಸಿದನು. ಅವನು ಕಾಶಿಗೆ ಹೋಗಿ ಅಲ್ಲಿ ಗುರುಗೃಹದಲ್ಲಿ ವಾಸ ಮಾಡುತ್ತಾ ದೀರ್ಘಕಾಲ ವೇದಾಂತ ಚರ್ಚೆಯಲ್ಲಿ ಕಾಲ ಕಳೆದನು. ಇದರ ಪರಿಣಾಮವಾಗಿ ಕೆಲವೇ ವರ್ಷಗಳಲ್ಲಿಯೇ ಅವನು ವೇದಾಂತಿ ಎಂದು ಪ್ರಸಿದ್ಧನಾದನು. ದೇಶಕ್ಕೆ ಹಿಂದಿರುಗಿದ ಮೇಲೆ ವರ್ಧಮಾನ ರಾಜನಿಂದ ಆಹ್ವಾನಿಸಲ್ಪಟ್ಟು ಅಲ್ಲಿ ಸಭಾಪಂಡಿತನ ಸ್ಥಾನವನ್ನು ಸ್ವೀಕರಿಸಿದನು. ಪದ್ಮಲೋಚನನು ತನ್ನ ಅದ್ಭುತ ಪ್ರತಿಭೆಯಿಂದಾಗಿ ಮುಂದೆ ಆಸ್ಥಾನದ ಪ್ರಧಾನ ಸಭಾಪಂಡಿತನ ಪದವಿಯನ್ನು ಅಲಂಕರಿಸಿದನು. ಅವನ ಕೀರ್ತಿ ಬಂಗಾಳದಲ್ಲೆಲ್ಲಾ ಹರಡಿತು. ಪದ್ಮಲೋಚನನ ಪ್ರತಿಭೆಯ ಬಗ್ಗೆ ಇಲ್ಲಿ ಒಂದು ಘಟನೆಯನ್ನು ಹೇಳಿದರೆ ಅನುಚಿತವಾಗಲಾರದು. ಯಾವುದೇ ಆಧ್ಯಾತ್ಮಿಕ ವಿಷಯದಲ್ಲಿ ಸಂಕುಚಿತ ಮನೋಭಾವ ಬುದ್ಧಿಹೀನತೆಯನ್ನು ಸೂಚಿಸುತ್ತದೆ ಎಂಬ ವಿಚಾರವನ್ನು ಹೇಳುವಾಗ ಶ್ರೀರಾಮಕೃಷ್ಣರು ಪದ್ಮಲೋಚನನ ಮಾತನ್ನು ಒಮ್ಮೊಮ್ಮೆ ಉಲ್ಲೇಖಿಸುತ್ತಿದ್ದರು. ಶ್ರೀರಾಮಕೃಷ್ಣರು ಅತ್ಯಂತ ಸತ್ಯನಿಷ್ಠರು. ಆದುದರಿಂದ ಇತರರಿಂದ ಯಾವುದೇ

ಉದಾತ್ತವಾದ ಮಾತನ್ನು ಕೇಳಿದರೂ ಅದನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮುಂದೆ ಇತರರಿಗೆ ಹೇಳುವಾಗ ಅದನ್ನು ಯಾರು ಹೇಳಿದರು ಎಂಬುದನ್ನು ಹೇಳಲು ಅವರು ಮರೆಯುತ್ತಿರಲಿಲ್ಲ.

37. ಶ್ರೀರಾಮಕೃಷ್ಣರು ಹೇಳುತ್ತಿದ್ದರು : "ವರ್ಧಮಾನದ ರಾಜಸಭೆಯಲ್ಲಿ ಒಮ್ಮೆ ಶಿವನು ದೊಡ್ಡವನೊ ವಿಷ್ಣು ದೊಡ್ಡವನೊ ಎಂಬ ವಿಷಯದಲ್ಲಿ ದೊಡ್ಡ ಚರ್ಚೆ ನಡೆಯಿತು. ಪಂಡಿತ ಪದ್ಮಲೋಚನನು ಆ ಸಂದರ್ಭದಲ್ಲಿ ಸಭೆಯಲ್ಲಿರಲಿಲ್ಲ. ಪ್ರತಿಯೊಬ್ಬ ಪಂಡಿತರೂ ತಮ್ಮ ತಮ್ಮ ಶಾಸ್ತ್ರಜ್ಞಾನದ ಆಧಾರದ ಮೇಲೆ ಚರ್ಚೆ ನಡೆಸುತ್ತಿದ್ದರು. ಕೆಲವರು ಶಿವನು ದೊಡ್ಡವನೆಂದೂ ಮತ್ತೆ ಕೆಲವರು ವಿಷ್ಣು ದೊಡ್ಡವ ನೆಂದೂ ತಮ್ಮ ತಮ್ಮ ಅಭಿರುಚಿಗೆ ತಕ್ಕಂತೆ ವಾದಿಸತೊಡಗಿದರು. ಹೀಗೆ ವಾದವಿವಾದ ದಿಂದ ಸಭೆಯಲ್ಲಿ ದೊಡ್ಡ ಕೋಲಾಹಲವೇ ಎದ್ದಿತು. ಈ ವಿಷಯದಲ್ಲಿ ಯಾವುದೇ ಒಂದು ನಿರ್ಣಯಕ್ಕೆ ಬರಲು ಸಾಧ್ಯವಾಗಲಿಲ್ಲ. ಆದ್ದರಿಂದ ಪ್ರಧಾನ ಸಭಾ ಪಂಡಿತ ನನ್ನು ಕರೆಸಲಾಯಿತು. ಪಂಡಿತ ಪದ್ಮಲೋಚನನು ಚರ್ಚೆಯ ವಿಷಯವನ್ನು ಕೇಳಿದ ಕೂಡಲೇ ಹೇಳಿದನು : "ನಾನಾಗಲಿ ಅಥವಾ ನನ್ನ ಹಿಂದಿನ ಹದಿನಾಲ್ಕು ತಲೆಮಾರಿನವ ರಾಗಲಿ ಯಾರೂ ಶಿವನನ್ನೂ ನೋಡಿಲ್ಲ, ವಿಷ್ಣುವನ್ನೂ ನೋಡಿಲ್ಲ. ಆದ್ದರಿಂದ ಯಾರು ದೊಡ್ಡವರು ಯಾರು ಚಿಕ್ಕವರು ಎಂದು ನಾನು ಹೇಗೆ ಹೇಳಲಿ ? ಶಾಸ್ತ್ರದ ವಿಷಯ ವನ್ನು ಕೇಳುವುದಾದರೆ, ಶೈವ ಶಾಸ್ತ್ರವು ಶಿವನೇ ದೊಡ್ಡವನೆಂದೂ, ವೈಷ್ಣವ ಶಾಸ್ತ್ರವು ವಿಷ್ಣುವೇ ದೊಡ್ಡವನೆಂದೂ ಹೇಳುತ್ತವೆ. ಆದ್ದರಿಂದ ಯಾರಿಗೆ ಯಾವುದು ಇಷ್ಟವೊ ಆ ದೇವತೆ ಬೇರೆ ಎಲ್ಲಾ ದೇವತೆಗಳಿಗಿಂತ ಶ್ರೇಷ್ಠವಾಗುವುದು". ಹೀಗೆ ಹೇಳಿ ಪಂಡಿತನು ಶಿವ ಮತ್ತು ವಿಷ್ಣು ಇಬ್ಬರೂ ಎಲ್ಲಾ ದೇವತೆಗಳಿಗಿಂತ ಪ್ರಧಾನರೆಂದು ಸೂಚಿಸುವ ಶ್ಲೋಕಗಳನ್ನು ಉದ್ಧರಿಸಿ ಶಿವ ಮತ್ತು ವಿಷ್ಣು ಇಬ್ಬರೂ ಸಮಾನರೆಂದು ಹೇಳಿ ಚರ್ಚೆ ಯನ್ನು ಅಂತ್ಯಗೊಳಿಸಿದನು. ಎಲ್ಲರೂ ಅವನನ್ನು 'ಧನ್ಯ' ಎಂದು ಪ್ರಶಂಸಿಸಿದರು. ಇಲ್ಲಿ ನಾವು ಪದ್ಮಲೋಚನನ ಪ್ರತಿಭೆಯನ್ನು ಕಾಣುತ್ತೇವೆ. ಅವನ ನಿರಾಡಂಬರ ಶಾಸ್ತ್ರ ಜ್ಞಾನ ಮತ್ತು ಅಧಿಕಾರ ಪೂರ್ಣವಾದ ಸ್ಪಷ್ಟೋಕ್ತಿ, ಇವು ಅವನ ಯಶಸ್ಸಿಗೆ ಕಾರಣವಾಗಿ ದ್ದುವು.

38. ಶಬ್ದಜಾಲ ರೂಪವಾದ ಮಹಾರಣ್ಯದಲ್ಲಿ ಪದ್ಮಲೋಚನನು ಬಹುದೂರ ಹೋಗಿದ್ದನು ಎಂಬುದರಿಂದ ಮಾತ್ರ ಅವನು ಖ್ಯಾತನಾಗಿರಲಿಲ್ಲ. ಅವನ ದೈನಂದಿನ ಜೀವನದಲ್ಲಿಯೂ ಕೂಡ ಸದಾಚಾರ, ಇಷ್ಟನಿಷ್ಠೆ, ತಪಸ್ಸು, ಉದಾರತೆ, ನಿರ್ಲಿಪ್ತತೆ ಮುಂತಾದ ಸದ್ಗುಣಗಳು ಎದ್ದು ಕಾಣುತ್ತಿದ್ದವು, ಇದರಿಂದಾಗಿಯೂ ಅವನು ವಿಶಿಷ್ಟ ಸಾಧಕ ಅಥವಾ ಭಗವದ್ಭಕ್ತ ಎಂದು ಜನರು ಅವನನ್ನು ಗೌರವಿಸುತ್ತಿದ್ದರು. ಅಗಾಧ ಪಾಂಡಿತ್ಯ ಮತ್ತು ದೈವಭಕ್ತಿ ಇವೆರಡೂ ಒಂದೇ ಕಡೆ ಸೇರುವುದು ಅಪರೂಪ ಆದ್ದರಿಂದ ಯಾರಲ್ಲಿ ಇವೆರಡೂ ಒಂದುಗೂಡಿರುವುವೊ ಜನರು ಅವರೆಡೆಗೆ ಹೆಚ್ಚು ಆಕರ್ಷಿತರಾಗುತ್ತಾರೆ. ಪಂಡಿತ ಪದ್ಮಲೋಚನನ ವಿಷಯವನ್ನು ಜನರಿಂದ ತಿಳಿದ

ಶ್ರೀರಾಮಕೃಷ್ಣರು ಅವನನ್ನು ನೋಡಬೇಕೆಂದು ಇಚ್ಛಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಪದ್ಮಲೋಚನನು ಆಗ ಪ್ರೌಢಾವಸ್ಥೆಯನ್ನು ಏರಿದ್ದನು ಮತ್ತು ವರ್ಧಮಾನದ ರಾಜಸಭೆಯಲ್ಲಿ ಬಹಳ ಕಾಲದಿಂದ ಪಂಡಿತನಾಗಿದ್ದನು.

39. ಶ್ರೀರಾಮಕೃಷ್ಣರಲ್ಲಿ ಯಾವುದೇ ಇಚ್ಛೆ ಮೂಡಿದರೂ ತತ್‌ಕ್ಷಣವೇ ಅದನ್ನು ಪೂರ್ಣಗೊಳಿಸಲು ಬಾಲಕನಂತೆ ವ್ಯಾಕುಲಗೊಳ್ಳುತ್ತಿದ್ದರು. 'ಜೀವನ ಕ್ಷಣಿಕ ವಾದದ್ದು. ಏನು ಮಾಡಬೇಕೊ ಅದನ್ನು ಶೀಘ್ರವಾಗಿ ಮಾಡಿ ಮುಗಿಸು' ಎಂಬ ಈ ಮಾತು ಅವರ ಮನಸ್ಸಿನಲ್ಲಿ ಬಾಲ್ಯಕಾಲದಿಂದಲೂ ಬೇರೂರಿತ್ತು. ಆದ್ದರಿಂದಲೆ ಅವರಲ್ಲಿ ಈ ಸ್ವಭಾವ ಉಂಟಾಗಿತ್ತು ಎಂದೆನಿಸುತ್ತದೆ. ಮತ್ತೆ ಏಕನಿಷ್ಠೆ ಮತ್ತು ಏಕಾಗ್ರತೆ ಇವುಗಳ ಅಭ್ಯಾಸದಿಂದಲೂ ಮನಸ್ಸಿನಲ್ಲಿ ಈ ರೀತಿಯ ಸ್ವಭಾವವುಂಟಾಗುತ್ತದೆ ಎಂಬುದು ಸ್ವಲ್ಪ ಆಲೋಚಿಸಿದಾಗ ನಮಗೆ ತಿಳಿದು ಬರುತ್ತದೆ. ಅದು ಏನೇ ಇರಲಿ, ಶ್ರೀರಾಮಕೃಷ್ಣರ ಇಚ್ಛೆಯನ್ನು ತಿಳಿದು ಮಥುರನಾಥನು ಅವರನ್ನು ವರ್ಧಮಾನಕ್ಕೆ ಕಳಿಸುವ ಸಂಕಲ್ಪ ಮಾಡಿದನು. ಆ ಸಂದರ್ಭದಲ್ಲಿ ಪದ್ಮಲೋಚನನು 'ಅರಿಯಾದಹ'ದ ಹತ್ತಿರ ಗಂಗಾತೀರದಲ್ಲಿ ಇದ್ದ ಒಂದು ತೋಟದ ಮನೆಯಲ್ಲಿ ಇರುವುದಾಗಿ ವರ್ತಮಾನ ಬಂತು. ಅವನು ದೀರ್ಘ ಕಾಲದ ರೋಗದಿಂದ ನರಳಿ ಹವ ಬದಲಾವಣೆಗಾಗಿ ಅಲ್ಲಿ ಬಂದು ನೆಲೆಸಿದ್ದನು. ಗಂಗೆಯ ನಿರ್ಮಲ ಹವೆಯಿಂದ ಈಗ ಅವನ ಆರೋಗ್ಯವು ಸುಧಾರಿಸಿತ್ತು. ಈ ವರ್ತಮಾನ ನಿಜವೇ ಎಂದು ತಿಳಿದುಕೊಂಡು ಬರಲು ಹೃದಯ ನನ್ನು ಕಳಿಸಿದರು. ಹೃದಯನು ಬಂದು ಪದ್ಮಲೋಚನನು ಶ್ರೀರಾಮಕೃಷ್ಣರನ್ನು ನೋಡಲು ಅತ್ಯಾಸಕ್ತನಾಗಿರುವನೆಂದು ತಿಳಿಸಿದನು. ಪದ್ಮಲೋಚನನು ಹೃದಯನನ್ನು ತುಂಬ ಆತ್ಮೀಯತೆಯಿಂದ ಗೌರವಿಸಿದ್ದನು.

40. ಒಂದು ನಿರ್ದಿಷ್ಟ ದಿನದಲ್ಲಿ ಶ್ರೀರಾಮಕೃಷ್ಣರು ಹೃದಯನನ್ನು ಕರೆದು ಕೊಂಡು ಪದ್ಮಲೋಚನನನ್ನು ನೋಡಲು ಹೋದರು. ಪ್ರಥಮ ದರ್ಶನದಲ್ಲಿಯೇ ಅವರಿಬ್ಬರೂ ಪರಸ್ಪರ ವಿಶೇಷ ಪ್ರೀತಿಗೆ ಪಾತ್ರರಾದರು ಎಂದು ಹೃದಯನು ಹೇಳು ತ್ತಾನೆ. ಪದ್ಮಲೋಚನನು ಅತ್ಯಂತ ನಿಷ್ಕಪಟಿ, ಉದಾರಸ್ವಭಾವದವನು, ಪ್ರಕಾಂಡ ಪಂಡಿತ ಮತ್ತು ಸಾಧಕ ಎಂದು ಶ್ರೀರಾಮಕೃಷ್ಣರು ಕಂಡುಕೊಂಡರು. ಶ್ರೀರಾಮಕೃಷ್ಣರು ಅದ್ಭುತ ಆಧ್ಯಾತ್ಮಿಕ ಸ್ಥಿತಿಯನ್ನು ಏರಿದ ಮಹಾಪುರುಷರು ಎಂದು ಪದ್ಮಲೋಚನನು ಕಂಡುಕೊಂಡನು. ಶ್ರೀರಾಮಕೃಷ್ಣರು ಮಧುರ ಕಂಠದಿಂದ ತಾಯಿಯ ನಾಮವನ್ನು ಉಚ್ಚರಿಸುವುದನ್ನು ಕೇಳಿ ಪದ್ಮಲೋಚನನಿಗೆ ಕಣ್ಣೀರನ್ನು ತಡೆಯಲಾಗಲಿಲ್ಲ. ಶ್ರೀರಾಮ ಕೃಷ್ಣರು ಮತ್ತೆ ಮತ್ತೆ ಸಮಾಧಿಸ್ಥಿತಿಗೆ ಏರುವುದನ್ನು ನೋಡಿ ಮತ್ತು ಅವರು ಆ ಸ್ಥಿತಿ ಯಲ್ಲಿ ಏನೇನು ಅನುಭವಗಳನ್ನು ಪಡೆಯುತ್ತಾರೆ ಎಂಬುದನ್ನು ಕೇಳಿ ಪದ್ಮಲೋಚನನು ಆಶ್ಚರ್ಯಚಕಿತನಾದನು. ಶಾಸ್ತ್ರಜ್ಞನಾದ ಅವನಿಗೆ ಶಾಸ್ತ್ರದಲ್ಲಿ ಹೇಳಿರುವ ಆಧ್ಯಾತ್ಮಿಕ ಸ್ಥಿತಿಗೂ ಶ್ರೀರಾಮಕೃಷ್ಣರ ಸ್ಥಿತಿಗೂ ಇರುವ ಸಾಮ್ಯತೆಯನ್ನು ಕಂಡುಕೊಳ್ಳಲು ಪ್ರಯತ್ನಿಸಿದನು ಎಂಬುದನ್ನು ನಾವು ಊಹಿಸಬಹುದು. ಆದರೆ ಅವನಿಗೆ ಒಂದು

ಗೊಂದಲವುಂಟಾಯಿತು. ಶ್ರೀರಾಮಕೃಷ್ಣರ ಅನುಭವಗಳ ವಿಷಯದಲ್ಲಿ ಒಂದು ದೃಢ ನಿಶ್ಚಯಕ್ಕೆ ಬರಲು ಅವನಿಗೆ ಸಾಧ್ಯವಾಗಲಿಲ್ಲ, ಏಕೆಂದರೆ ಶ್ರೀರಾಮಕೃಷ್ಣರ ಚರಮ–ಅನುಭವಗಳು ಶಾಸ್ತ್ರದಲ್ಲಿ ಕಾಣಸಿಗುವುದಿಲ್ಲ. ಇದರಿಂದ ಶಾಸ್ತ್ರಗಳು ಹೇಳುವುದು ಸತ್ಯವೇ ಅಥವಾ ಶ್ರೀರಾಮಕೃಷ್ಣರ ಅನುಭವವು ಸತ್ಯವೇ ಎಂಬುದನ್ನು ನಿಶ್ಚಯಿಸಲು ಅವನಿಗೆ ಅಸಾಧ್ಯವಾಯಿತು. ಶಾಸ್ತ್ರಜ್ಞಾನ ಮತ್ತು ತನ್ನ ತೀಕ್ಷ್ಣಬುದ್ಧಿ ಇವುಗಳ ಸಹಾಯದಿಂದ ಅವನು ಎಲ್ಲಾ ಆಧ್ಯಾತ್ಮಿಕ ವಿಷಯದಲ್ಲಿಯೂ ಯಾವಾಗಲೂ ಒಂದು ಸ್ಥಿರ ಸಿದ್ಧಾಂತಕ್ಕೆ ಬರುತ್ತಿದ್ದನು. ಈಗ ಶ್ರೀರಾಮಕೃಷ್ಣರ ಮುಂದೆ ಬೆಳಕಿನ ಮಧ್ಯದಲ್ಲಿ ಒಂದು ಛಾಯೆ ಇರುವಂತೆ, ಅಪೂರ್ವ ಆನಂದದ ಮಧ್ಯದಲ್ಲಿ ಒಂದು ಅಶಾಂತಿಯ ಭಾವ ಅವನಲ್ಲುಂಟಾಯಿತು.

ಪ್ರಥಮ ಪರಿಚಯದಿಂದುಂಟಾದ ಈ ಪ್ರೀತಿ ಮತ್ತು ಆಕರ್ಷಣೆಯು ಅವರಿಬ್ಬರೂ ಮತ್ತೆ ಕೆಲವು ಬಾರಿ ಭೇಟಿಯಾಗುವಂತೆ ಮಾಡಿತು. ಇದರ ಪರಿಣಾಮವಾಗಿ ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಸ್ಥಿತಿಯ ವಿಷಯವಾಗಿ ಪದ್ಮಲೋಚನನ ವಿಶ್ವಾಸವು ಹೆಚ್ಚು ದೃಢವಾಯಿತು. ಅವನ ಈ ದೃಢವಿಶ್ವಾಸಕ್ಕೆ ಇನ್ನೊಂದು ಕಾರಣವೂ ಇತ್ತೆಂದು ನಾವು ಶ್ರೀರಾಮಕೃಷ್ಣರ ಮೂಲಕ ಕೇಳುತ್ತೇವೆ.

41. ಪಂಡಿತ ಪದ್ಮಲೋಚನನು ವೇದಾಂತದ ಅಧ್ಯಯನ ಮಾಡುವುದರ ಜೊತೆಗೆ ತಂತ್ರೋಕ್ತ ಸಾಧನೆಗಳನ್ನು ಮಾಡಿದ್ದನು. ಈ ಸಾಧನೆಗಳ ಫಲವನ್ನೂ ಅವನು ತನ್ನ ಜೀವನದಲ್ಲಿ ಅನುಭವಿಸಿದ್ದನು. ಸಾಧನೆಯಿಂದ ಅವನಿಗೆ ಲಭಿಸಿದ ಶಕ್ತಿಯ ಸಂಬಂಧವಾಗಿ ಜಗನ್ಮಾತೆಯು ತಮಗೆ ತಿಳಿಸಿರುವುದಾಗಿ ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಅವನ ಸಾಧನೆಗೆ ಮೆಚ್ಚಿ ಅವನ ಇಷ್ಟದೇವಿಯು ಅವನಿಗೆ ಒಂದು ವರವನ್ನು ನೀಡಿದ್ದಳು. ಅವನು ಅಸಂಖ್ಯ ಪಂಡಿತಸಭೆಗಳಲ್ಲಿ ಯಾರಿಂದಲೂ ಪರಾಜಿತನಾಗದೆ ಉಳಿದಿದ್ದನು ಮತ್ತು ತನ್ನ ಶ್ರೇಷ್ಠತೆಯನ್ನು ಉಳಿಸಿಕೊಂಡಿದ್ದನು. ಪದ್ಮಲೋಚನನ ಹತ್ತಿರ ಯಾವಾಗಲೂ ಒಂದು ಟವಲು ಮತ್ತು ನೀರಿನ ತಂಬಿಗೆ ಇರುತ್ತಿತ್ತು. ಅವನು ಯಾವುದೇ ಸಮಸ್ಯೆಯನ್ನು ಬಗೆಹರಿಸಲು ಹೋಗುವುದಕ್ಕೆ ಮುಂಚೆ ಸ್ವಲ್ಪದೂರ ಕೆಲವು ಹೆಜ್ಜೆ ಅತ್ತ ಇತ್ತ ಓಡಾಡಿ ಮತ್ತೆ ಹಿಂದಿರುಗಿ ಬಂದು ಬಾಯನ್ನು ತೊಳೆದುಕೊಳ್ಳುತ್ತಿದ್ದನು ಮತ್ತು ತಲೆಗೆ ನೀರನ್ನು ಸಿಂಪಡಿಸಿಕೊಳ್ಳುತ್ತಿದ್ದನು. ಈ ವಿಚಿತ್ರ ವರ್ತನೆಯ ಕಡೆ ಯಾರೂ ಗಮನಹರಿಸಿರಲಿಲ್ಲ ಮತ್ತು ಅದರ ಹಿಂದೆ ಗೂಢ ಉದ್ದೇಶವಿದೆ ಎಂದು ಯಾರಿಗೂ ಹೊಳೆದಿರಲಿಲ್ಲ. ಹೀಗೆ ಮಾಡಿದಾಗ ಅವನ ಶಾಸ್ತ್ರಜ್ಞಾನ, ಬುದ್ಧಿಶಕ್ತಿ ಮತ್ತು ಪ್ರತ್ಯುತ್ಪನ್ನಮತಿ ಇವು ದೈವಬಲದಿಂದ ಜಾಗ್ರತವಾಗುತ್ತಿದ್ದವು. ಆಗ ಯಾರೂ ಅವನನ್ನು ವಾದದಲ್ಲಿ ಸೋಲಿಸಲಾಗುತ್ತಿರಲಿಲ್ಲ. ಪದ್ಮಲೋಚನನು ಈ ವಿಷಯವನ್ನು ಯಾರಿಗೂ ತನ್ನ ಪತ್ನಿಗೂ ಕೂಡ–ಹೇಳಿರಲಿಲ್ಲ. ಅವನು ತನ್ನ ಇಷ್ಟದೇವಿಯ ಆದೇಶಕ್ಕೆ ಅನುಗುಣವಾಗಿ ಆ ರೀತಿ ಮಾಡುತ್ತಿದ್ದನು. ಇಷ್ಟದೇವಿಯು ಅವನ ಹೃದಯಾಂತರಾಳದಲ್ಲಿ ಈ ರೀತಿ ಮಾಡಲು ಸಲಹೆ ನೀಡಿದ್ದಳು. ಪದ್ಮಲೋಚನನೂ ಕೂಡ ಅವ

ಕ್ಕನುಗುಣವಾಗಿ ಬಹುಕಾಲದಿಂದ ರಹಸ್ಯವಾಗಿಯೇ ಅದರ ಫಲವನ್ನು ಅನುಭವಿಸಿದನು.

ಜಗನ್ಮಾತೆಯ ಮೂಲಕ ಈ ವಿಷಯವನ್ನು ತಿಳಿದು ಶ್ರೀರಾಮಕೃಷ್ಣರು ಒಂದು ದಿನ ಒಳ್ಳೆಯ ಅವಕಾಶ ಮಾಡಿಕೊಂಡು ಪದ್ಮಲೋಚನನ ನೀರಿನ ತಂಬಿಗೆ ಮತ್ತು ಟವಲನ್ನು ಅವನಿಗೆ ಗೊತ್ತಾಗದಂತೆ ಅಡಗಿಸಿಟ್ಟರು. ಪದ್ಮಲೋಚನನು ಅವು ಇಲ್ಲದೆ ವಾದದಲ್ಲಿ ಭಾಗವಹಿಸುವುದು ಸಾಧ್ಯವಾಗದುದರಿಂದ ಅವಕ್ಕಾಗಿ ಹುಡುಕಾಡಿದನು. ಮುಂದೆ ಇದು ಶ್ರೀರಾಮಕೃಷ್ಣರ ಕೆಲಸವೆಂದು ತಿಳಿದಾಗ ಅವನಿಗೆ ಅತ್ಯಾಶ್ಚರ್ಯ ವಾಯಿತು. ಮತ್ತೆ ಶ್ರೀರಾಮಕೃಷ್ಣರಿಗೆ ಈ ರಹಸ್ಯ ವಿಷಯವು ತಿಳಿದು ಬಿಟ್ಟಿದೆ ಎಂದು ತಿಳಿದಾಗ ಪದ್ಮಲೋಚನನಿಗೆ ಸುಮ್ಮನಿರಲಾಗಲಿಲ್ಲ. ಅವರನ್ನೇ ತನ್ನ ಇಷ್ಟ ದೇವತೆಯೆಂದು ಭಾವಿಸಿ ಕಣ್ಣೀರು ಸುರಿಸುತ್ತಾ ಅವರ ಸ್ತುತಿಗೈದನು.

42. ಅಂದಿನಿಂದ ಪದ್ಮಲೋಚನನು ಶ್ರೀರಾಮಕೃಷ್ಣರನ್ನು ಭಗವದ್ ಅವತಾರ ಎಂದು ಪರಿಗಣಿಸಿ ಅದಕ್ಕನುಗುಣವಾದ ಭಕ್ತಿಯನ್ನು ತೋರಿಸುತ್ತಿದ್ದನು. ಶ್ರೀರಾಮ ಕೃಷ್ಣರು ಹೇಳುತ್ತಿದ್ದರು : ಪದ್ಮಲೋಚನನು ಅಷ್ಟು ದೊಡ್ಡ ಪಂಡಿತನಾದರೂ ಇಲ್ಲಿ (ಶ್ರೀರಾಮಕೃಷ್ಣರಲ್ಲಿ) ತುಂಬಾ ಭಕ್ತಿ ವಿಶ್ವಾಸವಿತ್ತು ಅವನಿಗೆ. ಹೇಳುತ್ತಿದ್ದ, 'ನಾನು ಆರೋಗ್ಯವಂತನಾದ ಮೇಲೆ ಎಲ್ಲಾ ಪಂಡಿತರನ್ನು ಕರೆಸಿ ಒಂದು ಸಭೆ ಸೇರಿಸಿ ಅವರೆಲ್ಲರ ಮುಂದೆ ನೀವು ಭಗವದವತಾರ, ಇದನ್ನು ಒಪ್ಪದವರು ನನ್ನ ಮುಂದೆ ವಾದಿಸಬಹುದು ಎಂದು ಸಾರುತ್ತೇನೆ' ಎಂದು. ಮಥುರನು ಅನೇಕ ಪಂಡಿತರನ್ನು ಕರೆಸಿ ದಕ್ಷಿಣೇಶ್ವರ ದಲ್ಲಿ ಒಂದು ಸಭೆ ಸೇರಿಸಿದ್ದನು. ಪದ್ಮಲೋಚನನು ಲೋಭಿಯಾಗಿರಲಿಲ್ಲ, ನಿಷ್ಠಾವಂತ ಬ್ರಾಹ್ಮಣ. ಶೂದ್ರರಿಂದ ಏನೂ ಕಾಣಿಕೆ ಸ್ವೀಕರಿಸುತ್ತಿರಲಿಲ್ಲ. ಅವನು ಸಭೆಗೆ ಬರು ತ್ತಾನೊ ಇಲ್ಲವೊ ಎಂದು ಮಥುರನು ಅವನನ್ನು ಒರುವಂತೆ ಕೇಳಿಕೊಳ್ಳಲು ನನಗೆ ಹೇಳಿದ. ನಾನು ಅವನಿಗೆ ಹೇಳಿದೆ, 'ನೋಡು ನೀನು ದಕ್ಷಿಣೇಶ್ವರಕ್ಕೆ ಹೋಗುವುದಿಲ್ಲವೇ' ಎಂದು. ಅವನು ಹೇಳಿದ 'ನಾನು ನಿಮ್ಮ ಜೊತೆ ಜಾಡಮಾಲಿಯ ಮನೆಗೂ ಹೋಗಿ ಊಟ ಮಾಡಬಲ್ಲೆ. ಇನ್ನು ಕೈವರ್ತಕನ ಮನೆಗೆ ಸಭೆಯಲ್ಲಿ ಭಾಗವಹಿಸಲು ಹೋಗ ಲಾಗುವುದಿಲ್ಲವೆ ?' " ಆದರೆ ಮಥುರನಾಥನು ಸೇರಿಸಿದ ಸಭೆಗೆ ಪದ್ಮಲೋಚನನಿಗೆ ಬರಲಾಗಲಿಲ್ಲ. ಸಭೆ ಸೇರುವುದಕ್ಕೆ ಬಹಳ ಮುಂಚೆಯೇ ಅವನ ಕಾಯಿಲೆಯು ಉಲ್ಬಣ ವಾಯಿತು. ಅವನು ಕಂಬನಿ ತುಂಬಿದ ಕಣ್ಣುಗಳಿಂದ ಶ್ರೀರಾಮಕೃಷ್ಣರನ್ನು ಬೀಳ್ಕೊಂಡು ಕಾಶಿಗೆ ಹೊರಟುಹೋದನು. ಅಲ್ಲಿಗೆ ಹೋಗಿ ಸ್ವಲ್ಪ ಕಾಲದಲ್ಲಿಯೆ ದೇಹತ್ಯಾಗ ಮಾಡಿದನು ಎಂದು ನಾವು ಕೇಳುತ್ತೇವೆ.

ಇದಾದ ಬಹುಕಾಲದ ನಂತರ ಕಲಕತ್ತೆಯ ಭಕ್ತರು ಶ್ರೀರಾಮಕೃಷ್ಣರ ಚರಣಾ ಶ್ರಯವನ್ನು ಪಡೆದು ಅವರಲ್ಲಿ ಕೆಲವರು ಶ್ರೀರಾಮಕೃಷ್ಣರನ್ನು ಅವತಾರ ಪುರುಷರೆಂದು ಪರಿಗಣಿಸತೊಡಗಿದರು. ಇದನ್ನು ತಿಳಿದು ಶ್ರೀರಾಮಕೃಷ್ಣರು ಅವರು ಆ ರೀತಿ ಪರಿ ಗಣಿಸುವುದನ್ನು ನಿಷೇಧಿಸಿದರು. ಆದರೆ ಭಕ್ತಿಯ ಅತಿಶಯದಿಂದಾಗಿ ಭಕ್ತರು ಅದನ್ನು ನಿಲ್ಲಿಸಲಿಲ್ಲ. ಒಂದು ದಿನ ಶ್ರೀರಾಮಕೃಷ್ಣರು ಬಹಳ ತಿರಸ್ಕಾರ ಭಾವದಿಂದ ಹೇಳಿದರು :

"ಒಬ್ಬ ಡಾಕ್ಟರ್, ಮತ್ತೊಬ್ಬ ಥಿಯೇಟರ್ ಮ್ಯಾನೇಜರ್ ಇವರೆಲ್ಲಾ ಇಲ್ಲಿಗೆ ಬಂದು ಅವತಾರ ಎನ್ನುತ್ತಾರೆ. ನನ್ನನ್ನು ಅವತಾರ ಎಂದು ಕರೆದು ಶ್ರೇಷ್ಠನನ್ನಾಗಿ ಮಾಡ ಬೇಕೆಂದು ಅವರ ಆಸೆ. ಆದರೆ ಯಾರನ್ನು ಅವತಾರವೆಂದು ಕರೆಯಬೇಕು ಎಂಬುದು ಅವರಿಗೆ ಗೊತ್ತೆ ? ಅವರು ಇಲ್ಲಿಗೆ ಬಂದು ನನ್ನನ್ನು ಅವತಾರವೆಂದು ಕರೆಯುವುದಕ್ಕೆ ಮುಂಚೆಯೆ ಪದ್ಮಲೋಚನನಂಥ ಎಷ್ಟು ಜನ ವ್ಯಕ್ತಿಗಳು ಇಲ್ಲಿಗೆ ಬಂದು ನನ್ನನ್ನು ಅವ ತಾರ ಎಂದು ಕರೆದಿರುವರು ! ಅವರೆಲ್ಲಾ ಸಾಧಾರಣ ಪಂಡಿತರಲ್ಲ. ಇಡೀ ಜೀವನ ವನ್ನು ಶಾಸ್ತ್ರ ವಿಚಾರದಲ್ಲಿ ಕಳೆದವರು. ಅವತಾರವೆಂದು ಕರೆಯಿಸಿಕೊಳ್ಳುವುದು ನನಗೆ ತುಂಬ ತುಚ್ಛವಾಗಿಬಿಟ್ಟಿದೆ. ನನ್ನನ್ನು ಅವತಾರ ಎಂದು ಕರೆಯುವುದರಿಂದ ಅವರು ನನಗೆ ಏನೂ ಮಾಡಿದಂತಾಗುವುದಿಲ್ಲ".

ಪದ್ಮಲೋಚನನಲ್ಲದೆ ಇನ್ನೂ ಅನೇಕ ಖ್ಯಾತ ಪಂಡಿತರನ್ನು ಶ್ರೀರಾಮಕೃಷ್ಣರು ಭೇಟಿಯಾಗಿದ್ದರು. ಅವರಲ್ಲಿ ಶ್ರೀರಾಮಕೃಷ್ಣರು ಕಂಡುಕೊಂಡ ವಿಶೇಷ ಗುಣಗಳನ್ನು ಮಾತಿನ ಸಂದರ್ಭದಲ್ಲಿ ನಮಗೆ ಆಗಾಗ ಹೇಳುತ್ತಿದ್ದರು. ಅಂಥ ಕೆಲವು ಪ್ರಸಂಗಗಳನ್ನು ಇಲ್ಲಿ ಹೇಳುವುದು ಉಚಿತವೆನಿಸುತ್ತದೆ.

43. ಆರ್ಯ ಸಮಾಜದ ಸ್ಥಾಪಕರಾದ ಸ್ವಾಮಿ ದಯಾನಂದ ಸರಸ್ವತಿಯವರು ಒಮ್ಮೆ ಕಲ್ಕತ್ತೆಗೆ ಬಂದು ವರಾಹನಗರದ ಒಂದು ತೋಟದ ಮನೆಯಲ್ಲಿ ನೆಲೆಸಿದ್ದರು. ಅವರಾಗಲೆ ಸುಪ್ರಸಿದ್ಧ ಪಂಡಿತರೆಂದು ಹೆಸರಾಗಿದ್ದರು. ಆದರೂ ಆಗಿನ್ನೂ ತಮ್ಮ ಹೊಸ ಮತವನ್ನು ಸ್ಥಾಪಿಸಿರಲಿಲ್ಲ. ಅವರ ವಿಷಯವನ್ನು ತಿಳಿದು ಶ್ರೀರಾಮಕೃಷ್ಣರು ಒಂದು ದಿನ ಅವರನ್ನು ನೋಡಲು ಆ ಮನೆಗೆ ಹೋದರು. ಅವರ ವಿಷಯವಾಗಿ ಶ್ರೀರಾಮಕೃಷ್ಣರು ಒಮ್ಮೆ ನಮಗೆ ಹೀಗೆ ಹೇಳಿದರು : "ಸಿಂಥಿಯ ತೋಟದ ಮನೆಯಲ್ಲಿ ನೋಡಲು ಹೋಗಿದ್ದೆನು. ಅವನಲ್ಲಿ ಏನೊ ಶಕ್ತಿ ಇದೆ ಎಂದು ನನಗೆ ತಿಳಿಯಿತು. ಎದೆ ಯಾವಾಗಲೂ ಕೆಂಪಾಗಿರುತ್ತಿತ್ತು. ವೈಖರೀ ಅವಸ್ಥೆ–ಹಗಲೂ ರಾತ್ರಿ ಇಪ್ಪತ್ತ ನಾಲ್ಕು ಘಂಟೆಯೂ ಶಾಸ್ತ್ರ ವಿಚಾರವಾಗಿ ಮಾತನಾಡುತ್ತಿದ್ದ. ವ್ಯಾಕರಣದ ಆಧಾರದ ಮೇಲೆ ಶಾಸ್ತ್ರ ವಾಕ್ಯಗಳ ಅರ್ಥವನ್ನು ತಲೆಕೆಳಗು ಮಾಡುತ್ತಿದ್ದ. ತಾನು ಏನೊ ಮಾಡಬೇಕು, ಒಂದು ಹೊಸ ಮತವನ್ನು ಪ್ರಾರಂಭಿಸಬೇಕು ಎಂಬ ಅಹಂಕಾರ ಅವನಲ್ಲಿತ್ತು."

44. ಜಯನಾರಾಯಣ ಪಂಡಿತನ ವಿಷಯವಾಗಿ ಅವರು ಹೇಳುತ್ತಿದ್ದರು : "ಎಷ್ಟು ದೊಡ್ಡ ಪಂಡಿತ ಅವನು ! ಆದರೆ ಸ್ವಲ್ಪವೂ ಅಹಂಕಾರವಿರಲಿಲ್ಲ. ಅವನಿಗೆ ತನ್ನ ಮೃತ್ಯುವಿನ ವಿಷಯ ತಿಳಿದಿತ್ತು. ಕಾಶಿಗೆ ಹೋಗಿ ಅಲ್ಲಿ ತನ್ನ ದೇಹವನ್ನು ಬಿಡ ಬೇಕು ಎಂದುಕೊಂಡಿದ್ದ. ಹಾಗೆಯೆ ಆಯಿತು."

45. ಅರಿಯಾದಹ ವಾಸಿಯಾದ ಕೃಷ್ಣಕಿಶೋರ ಭಟ್ಟಾಚಾರ್ಯನಿಗೆ ಶ್ರೀರಾಮ ಚಂದ್ರನ ಮೇಲಿದ್ದ ಪರಮಭಕ್ತಿಯ ವಿಷಯವನ್ನು ಶ್ರೀರಾಮಕೃಷ್ಣರು ಆಗಾಗ ಉಲ್ಲೇಖಿಸುತ್ತಿದ್ದರು. ಶ್ರೀರಾಮಕೃಷ್ಣರು ಅವನ ಮನೆಗೆ ಹೋಗಿ ಬರುತ್ತಿದ್ದರು.

ಅವನ ಪತ್ನಿಯೂ ಕೂಡ ಶ್ರೀರಾಮಕೃಷ್ಣರನ್ನು ತುಂಬ ಗೌರವಿಸುತ್ತಿದ್ದಳು. ಕೃಷ್ಣ ಕಿಶೋರನು "ಮರಾ, ಮರಾ" ಎಂಬ ಶಬ್ದಕ್ಕೆ ಋಷಿಯು ನೀಡಿದ ಮಹಾಮಂತ್ರವೆಂದು ವಿಶೇಷ ಭಕ್ತಿ ತೋರಿಸುತ್ತಿದ್ದನು. ಇನ್ನು ರಾಮನಾಮದ ಬಗ್ಗೆ ಹೇಳಬೇಕಾಗಿಯೇ ಇಲ್ಲ–ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಏಕೆಂದರೆ ಆ ಶಬ್ದವನ್ನೇ ಮಹರ್ಷಿ ನಾರದರು ವಾಲ್ಮೀಕಿಗೆ ಮಂತ್ರ ರೂಪವಾಗಿ ನೀಡಿದರು. ಆ ಮಂತ್ರವನ್ನು ಉಚ್ಚರಿಸಿಯೇ ಶ್ರೀರಾಮಚಂದ್ರನ ಅಪೂರ್ವ ಲೀಲೆಯ ಸ್ಮೃತಿಯನ್ನು ಪಡೆದು ರಾಮಾಯಣ ಮಹಾ ಕಾವ್ಯವನ್ನು ವಾಲ್ಮೀಕಿ ರಚಿಸಿದನು. ಕೃಷ್ಣಕಿಶೋರನು ಸಂಸಾರದಲ್ಲಿ ಅನೇಕ ಶೋಕ ತಾಪಗಳನ್ನು ಅನುಭವಿಸಿದ್ದನು. ತುಂಬ ಭರವಸೆಯನ್ನು ಇಟ್ಟುಕೊಂಡಿದ್ದ ಅವನ ಇಬ್ಬರು ಪುತ್ರರು ಮೃತಪಟ್ಟರು. ಪುತ್ರ ಶೋಕವು ಎಷ್ಟೊಂದು ಪ್ರಬಲವಾಗಿತ್ತೆಂದರೆ ಅಂಥ ದೊಡ್ಡ ಭಕ್ತನಾದ ಕೃಷ್ಣಕಿಶೋರನಿಗೂ ಅದನ್ನು ತಡೆಯಲಾಗದೆ ಶೋಕಾತುರ ನಾಗುತ್ತಿದ್ದ ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ. ಮೇಲೆ ಹೇಳಿದ ಸಾಧಕರಲ್ಲದೆ ಶ್ರೀರಾಮಕೃಷ್ಣರು ಮಹರ್ಷಿ ದೇವೇಂದ್ರನಾಥ್, ಪಂಡಿತ್ ಈಶ್ವರಚಂದ್ರ ವಿದ್ಯಾ ಸಾಗರ್ ಮುಂತಾದವರನ್ನು ನೋಡಲು ಹೋಗಿದ್ದರು. ಮಹರ್ಷಿಯ ಉದಾರಭಕ್ತಿ ಮತ್ತು ಈಶ್ವರಚಂದ್ರನ ಕರ್ಮಯೋಗ ಪರಾಯಣತೆ ಇವುಗಳ ವಿಚಾರವಾಗಿ ನಮಗೆ ಆಗಾಗ ಹೇಳುತ್ತಿದ್ದರು.

## ಮೂರನೆಯ ಅಧ್ಯಾಯ

# ಗುರುಭಾವದಲ್ಲಿ ತೀರ್ಥಯಾತ್ರೆ ಮತ್ತು ಸಾಧುಸಂಗ

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ.
ತತ್ತದೇವಾವಗಚ್ಛ ತ್ವಂ ಮಮ ತೇಜೋಂಶ ಸಂಭವಮ್ ॥

(ಗೀತಾ, 10.41)

''ಯಾವ ಯಾವ ವಸ್ತು ವಿಭೂತಿಯುಳ್ಳದ್ದೊ, ಶ್ರೀಯುಕ್ತವೊ ಅಥವಾ ಉತ್ಸಾಹ ದಿಂದ ಕೂಡಿದೆಯೊ ಅದೆಲ್ಲವೂ ನನ್ನ ತೇಜಸ್ಸಿನ ಒಂದು ಅಂಶದಿಂದ ಉಂಟಾದು ದೆಂದು ತಿಳಿದುಕೊ.''

1. ಬೇರೆ ಆಚಾರ್ಯರುಗಳಿಗೆ ಹೋಲಿಸಿದರೆ ಶ್ರೀರಾಮಕೃಷ್ಣರಲ್ಲಿ ಹೊಸತನವಿದೆ. 2. ಅವರು ತಮ್ಮ ಜೀವನದ ಮೂಲಕ ಏನನ್ನು ಪ್ರಮಾಣೀಕರಿಸಿದರು ಮತ್ತು ಅವರ ಪ್ರಭಾವ ಮುಂದೆ ಹೇಗೆ ವಿಸ್ತರಿಸುವುದು 3. ಅವರ ಭಾವಪ್ರಚಾರ ಮೊದಲು ಆದುದು ಅವರನ್ನು ಸಂಪರ್ಕಿಸಿದ ಸಾಧುಗಳಲ್ಲಿ 4. ಜೀವನದ ನಾನಾ ರೀತಿಯ ಅನು ಭವಗಳನ್ನು ಪಡೆದು ಶ್ರೀರಾಮಕೃಷ್ಣರಲ್ಲಿ ಅಸಾಧಾರಣ ಗುರುಶಕ್ತಿ ಪ್ರಕಟಗೊಂಡಿತು 5. ಯಾತ್ರೆಯಿಂದ ಶ್ರೀರಾಮಕೃಷ್ಣರು ಏನನ್ನು ಕಲಿತರು 6. ದಿವ್ಯಪುರುಷರು ತೀರ್ಥಯಾತ್ರೆ ಹೋಗುವುದರ ಬಗ್ಗೆ ಶಾಸ್ತ್ರಾಭಿಮತ 7. ತೀರ್ಥಸ್ಥಳ ಮತ್ತು ದೇವಸ್ಥಾನಗಳಿಗೆ ಹೋಗಿ ಅನಂತರ ಮೆಲಕುಹಾಕಬೇಕು 8. ಭಕ್ತಿಭಾವದಿಂದ ತೀರ್ಥ ಸ್ಥಳಗಳಿಗೆ ಹೋಗಬೇಕು 9. ಬೋಧಗಯೆಗೆ ಹೋಗಬೇಕೆಂದಿದ್ದ ಭಕ್ತನಿಗೆ ಶ್ರೀರಾಮ ಕೃಷ್ಣರು ಏನು ಹೇಳಿದನು 10. ''ಯಾರಿಗೆ ಇಲ್ಲಿದೆಯೋ ಅಲ್ಲಿಯೂ ಇದೆ'' 11. 'ಭಕ್ತನಾದರೆ ಮೂರ್ಖನಾಗಬೇಕೇನು?' 12. ಕಾಶಿಯಲ್ಲಿಯೂ ವಿಷಯಾಸಕ್ತರು 13. ಶ್ರೀರಾಮಕೃಷ್ಣರು ಸ್ವರ್ಣಮಯ ಕಾಶಿಯನ್ನು ನೋಡಿದುದು 14. ಕಾಶಿ ಯನ್ನು ಸುವರ್ಣನಿರ್ಮಿತವೆನ್ನಲು ಕಾರಣ 15. ಸ್ವರ್ಣಮಯ ಕಾಶಿಯನ್ನು ಅಪವಿತ್ರಗೊಳಿಸಲು ಶ್ರೀರಾಮಕೃಷ್ಣರ ಹಿಂಜರಿಕೆ 16. ಮಣಿಕರ್ಣಿಕದಲ್ಲಿ ಶ್ರೀರಾಮ ಕೃಷ್ಣರಿಗಾದ ದರ್ಶನ 17. ಅವರು ತ್ರೈಲಿಂಗ ಸ್ವಾಮಿಯನ್ನು ಕಂಡರು 18. ಬೃಂದಾವನದಲ್ಲಿ ಶ್ರೀರಾಮಕೃಷ್ಣರ ಭಾವಸಮಾಧಿ 19. ವ್ರಜದ ಮೇಲೆ ಅವರ ವಿಶೇಷ ಪ್ರೀತಿ 20. ನಿಧುವನದ ಗಂಗಾಮಾತೆ-ಶ್ರೀರಾಮಕೃಷ್ಣರು ಅಲ್ಲಿಯೇ ಇರ ಬೇಕೆಂದಿದ್ದರು 21. ಅವರ ಜೀವನದಲ್ಲಿ ಪರಸ್ಪರ ವಿರುದ್ಧಭಾವಗಳ ಅಪೂರ್ವ ಸಂಮಿಲನ 22. ಶ್ರೀರಾಮಕೃಷ್ಣರು ಗಯೆಗೆ ಹೋಗಲು ಇಷ್ಟಪಡಲಿಲ್ಲ-ಅದಕ್ಕೆ ಕಾರಣ 23. ಕಾರ್ಯ ಕಾರಣದಲ್ಲಿ ಲಯಹೊಂದುವುದು ನಿಯಮ 24. ಕರ್ಮ ಸಿದ್ಧಾಂತವು ಅವತಾರ ಜೀವನದ ರಹಸ್ಯವನ್ನು ಭೇದಿಸಲಾರದು 25. ಅವತಾರ ಪುರುಷರ ಬಗ್ಗೆ ದಾರ್ಶನಿಕರ ನಿಲುವು 26. ಅಧಿಕಾರಿಕ ಪುರುಷರು 27. ಅವರ ದೇಹ ಮನಸ್ಸುಗಳ ರಚನೆಯೇ ಬೇರೆ ವಸ್ತುವಿನಿಂದಾಗಿರುತ್ತದೆ 28. ಶ್ರೀರಾಮ ಕೃಷ್ಣರಿಗೆ ನವದ್ವೀಪವಲ್ಲಿ ದಿವ್ಯದರ್ಶನ 29. ಶ್ರೀರಾಮಕೃಷ್ಣರ ಕಾಲನಾ ಭೇಟಿ

ಗುರುಭಾವದಿಂದ ಪ್ರೇರಿತರಾಗಿ ಭಾವಮುಖ ಸ್ಥಿತಿಯಲ್ಲಿರುತ್ತಿದ್ದ ಶ್ರೀರಾಮಕೃಷ್ಣರು ಯಾವ ಯಾವ ಸ್ಥಾನದಲ್ಲಿ ಎಷ್ಟೆಷ್ಟು ಜನರೊಡನೆ ಬೆರೆತರು, ಏನೇನು ಮಾಡಿದರು ಎಂಬುದನ್ನೆಲ್ಲಾ ಹೇಳಿ ಮುಗಿಸಲು ಸಾಧ್ಯವಿಲ್ಲ. ಈಗಾಗಲೆ ಅದನ್ನು ಸ್ವಲ್ಪ ಮಟ್ಟಿಗೆ ಓದುಗರಿಗೆ ತಿಳಿಸಿರುವೆವು. ಶ್ರೀರಾಮಕೃಷ್ಣರ ತೀರ್ಥಯಾತ್ರೆಯು ಇದೇ ಭಾವದಲ್ಲಿರುವಾಗಲೆ ಆಗಿತ್ತು. ಈಗ ಅದರ ವಿಚಾರವಾಗಿ ಓದುಗರಿಗೆ ತಿಳಿಸಿಕೊಡಲು ಪ್ರಯತ್ನಿಸುತ್ತೇವೆ.

1. ಶ್ರೀರಾಮಕೃಷ್ಣರ ಯಾವ ಕಾರ್ಯವೂ ಉದ್ದೇಶರಹಿತವಾಗಿರಲಿಲ್ಲ ಅಥವಾ ನಿರರ್ಥಕವಾಗಿರಲಿಲ್ಲ ಎಂಬುದನ್ನು ನಾವು ಯಾವಾಗಲೂ ನೋಡುತ್ತೇವೆ. ಅವರ ಜೀವನದ ಅತ್ಯಂತ ಸಾಮಾನ್ಯ ದೈನಿಕ ಕ್ರಿಯೆಗಳಲ್ಲಿಯೂ ಆಳವಾದ ಅರ್ಥವಿರುವುದನ್ನು ನಾವು ಕಾಣುತ್ತೇವೆ. ಇನ್ನು ವಿಶೇಷ ಘಟನೆಗಳ ವಿಷಯದಲ್ಲಿ ಹೇಳಬೇಕಾಗಿಯೇ ಇಲ್ಲ. ಇಂಥ ಅದ್ಭುತ ಘಟನೆಗಳಿಂದ ಕೂಡಿದ ಜೀವನವನ್ನು ನಾವು ವರ್ತಮಾನ ಯುಗದ ಆಧ್ಯಾತ್ಮಿಕ ಜಗತ್ತಿನಲ್ಲಿ ಕಾಣಲಾರೆವು. ಇಡೀ ಜೀವನ ತಪಸ್ಸು ಮಾಡಿ ಭಗವಂತನ ಅನಂತ ಭಾವಗಳಲ್ಲಿ ಒಂದನ್ನೂ ಸರಿಯಾಗಿ ಸಾಕ್ಷಾತ್ಕರಿಸಿಕೊಳ್ಳಲು ಮನುಷ್ಯನಿಗೆ ಸಾಧ್ಯವಾಗುವುದಿಲ್ಲ. ಹಾಗಿರುವಾಗ ನಾನಾ ಭಾವದಲ್ಲಿ ಭಗವಂತನನ್ನು ಕಾಣುವುದು ಎಲ್ಲಾ ಪ್ರಕಾರದ ಧಾರ್ಮಿಕ ಸಾಧನೆಗಳನ್ನು ಮಾಡಿ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳುವುದು ಮತ್ತು ಎಲ್ಲಾ ಮತಗಳ ಸಾಧಕರು ತಮ್ಮ ತಮ್ಮ ಹಾದಿಯಲ್ಲಿ ಮುಂದುವರಿಯಲು ಅವರಿಗೆ ಸಹಾಯ ಮಾಡುವುದು—ಇದು ದೂರದ ಮಾತು. ಇದಕ್ಕೆ ಸಮಾನವಾದ ಇನ್ನೊಂದು ದೃಷ್ಟಾಂತವನ್ನು ಕಾಣಲಾರೆವು ಮತ್ತು ಕೇಳಲೂ ಆರೆವು. ಹಿಂದಿನ ಕಾಲದ ಆಚಾರ್ಯರು ಅಥವಾ ಅವತಾರ ಪುರುಷರು ಯಾವುದೋ ಒಂದು ಭಾವವನ್ನವಲಂಬಿಸಿ ಭಗವತ್ಸಾಕ್ಷಾತ್ಕಾರವನ್ನು ಪಡೆದರು ಮತ್ತು ಭಗವತ್ಸಾಕ್ಷಾತ್ಕಾರಕ್ಕೆ ಅದೊಂದೇ ಮಾರ್ಗವೆಂದು ಘೋಷಿಸಿದರು. ಬೇರೆ ಬೇರೆ ಭಾವಗಳನ್ನವಲಂಬಿಸಿಯೂ ಭಗವಂತನನ್ನು ಪಡೆಯಬಹುದು ಎಂಬುದನ್ನು ಅನುಭವಿಸುವ ಅವಕಾಶ ಅವರಿಗೆ ಸಿಗಲಿಲ್ಲ ಅಥವಾ ಅವರು ಆ ಅನುಭವವನ್ನು ಪಡೆದಿದ್ದರೂ ಅದನ್ನು ಪ್ರಚಾರ ಮಾಡಿದರೆ ಜನಸಾಧಾ

ರಣರಲ್ಲಿ ಇಷ್ಟದೈವ ನಿಷ್ಠೆಯು ಕಡಮೆಯಾಗುವುದೆಂದು ಭಾವಿಸಿ ಎಲ್ಲರ ಮುಂದೆ ಅದನ್ನು ಘೋಷಿಸದೆ ಇದ್ದಿರಬಹುದು. ವಸ್ತುಸ್ಥಿತಿ ಏನೇ ಆದರೂ ಅವರುಗಳು ತಮ್ಮ ಗುರುಭಾವದ ಸಹಾಯದಿಂದ ಏಕದೃಷ್ಟಿಯ ಮತಪ್ರಚಾರವನ್ನು ಮಾಡಿದರು ಮತ್ತು ಇದರಿಂದ ಮತಕಲಹಗಳು ವಾದವಿವಾದಗಳು ಹಿಂಸಾಚಾರಗಳು ಉದ್ಭವಿಸಿದುವು ಎಂಬುದಕ್ಕೆ ಇತಿಹಾಸವು ಸಾಕ್ಷಿಯಾಗಿದೆ. ಇಷ್ಟೇ ಅಲ್ಲದೆ ಈ ರೀತಿಯ ಏಕದೃಷ್ಟಿಯ ಧರ್ಮಭಾವದ ಪ್ರಚಾರದಿಂದ ಅನೇಕ ಪರಸ್ಪರ ವಿರೋಧಿ ಮತಪಂಥಗಳು ಉದ್ಭವಿಸಿದವು. ಇದರಿಂದಾಗಿ ಭಗವತ್ಸಾಕ್ಷಾತ್ಕಾರದ ಮಾರ್ಗವು ಎಷ್ಟೊಂದು ಜಟಿಲವಾಯಿತೆಂದರೆ ಈ ಜಟಿಲತೆಯನ್ನು ಭೇದಿಸಿ ಭಗವತ್ಸತ್ಯವನ್ನು ಪಡೆಯುವುದು ಸಾಧ್ಯವೇ ಇಲ್ಲ ಎಂಬ ಭಾವನೆ ಜನಸಾಧಾರಣರಲ್ಲಿ ಮೂಡುವಂತಾಯಿತು. ಇದೇ ಸಮಯದಲ್ಲಿ ಇಂದ್ರಿಯಸುಖವೇ ಪ್ರಾಧಾನ್ಯವಾಗಿರುವ ಪಾಶ್ಚಾತ್ಯ ಜಡವಾದವು ಬಹುಬೇಗನೆ ಶಿಕ್ಷಣದ ಮೂಲಕ ಭಾರತದ ಬಾಲಕರ ಮತ್ತು ಯುವಕರ ಮನಸ್ಸನ್ನು ಪ್ರವೇಶಿಸಿತು.

2. ಇದರ ಪರಿಣಾಮವಾಗಿ ಶ್ರೀರಾಮಕೃಷ್ಣರ ಆಗಮನಕ್ಕೆ ಮುಂಚೆ ಭಾರತದಲ್ಲಿ ಎಲ್ಲೆಲ್ಲಿಯೂ ನಾಸ್ತಿಕತೆ, ಭೋಗಾಸಕ್ತಿ ಇವೇ ಮುಂತಾದ ವೈದೇಶಿಕ ಭಾವನೆಗಳು ಹರಡಿಕೊಂಡಿದ್ದವು. ಪವಿತ್ರತೆ, ತ್ಯಾಗ ಮತ್ತು ಭಗವದ್ಭಕ್ತಿ ಇವುಗಳ ಜ್ವಲಂತ ನಿದರ್ಶನವಾದ ಶ್ರೀರಾಮಕೃಷ್ಣರು ಆವಿರ್ಭವಿಸಿ ಪುನಃ ಧರ್ಮವನ್ನು ಪ್ರತಿಷ್ಠಾಪಿಸದಿದ್ದಿದ್ದರೆ ಈ ದುರ್ದಶೆ ಯಾವ ಮಟ್ಟವನ್ನು ಮುಟ್ಟುತ್ತಿತ್ತು ಎಂದು ಹೇಳಲಾಗುವುದಿಲ್ಲ. ಶ್ರೀರಾಮಕೃಷ್ಣರು ತಮ್ಮ ಸಾಧನೆಯ ಮೂಲಕ ಭಾರತ ಮತ್ತು ವಿದೇಶಗಳಲ್ಲಿ ಅತ್ಯಂತ ಪ್ರಾಚೀನ ಕಾಲದಿಂದಲೂ ಋಷಿಗಳು, ಆಚಾರ್ಯರು ಮತ್ತು ಅವತಾರ ಪುರುಷರು ಯಾವ ಯಾವ ರೀತಿಯಲ್ಲಿ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡಿದ್ದರೊ ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಭಗವತ್ ಪ್ರಾಪ್ತಿಗೆ ಎಷ್ಟು ಬಗೆಯ ಮಾರ್ಗಗಳನ್ನು ಕಂಡುಹಿಡಿದಿದ್ದರೊ ಅವೆಲ್ಲವೂ ಸಂಪೂರ್ಣ ಸತ್ಯ ಎಂದು ತೋರಿಸಿಕೊಟ್ಟಿರುವರು. ಶ್ರದ್ಧಾವಂತನಾದ ಸಾಧಕನು ಆಯಾಯ ಮಾರ್ಗವನ್ನು ಅವಲಂಬಿಸಿ ಸಾಧನೆಯಲ್ಲಿ ಮುಂದುವರಿದರೆ ಅವರಂತೆಯೆ ಭಗವದ್ದರ್ಶನವನ್ನು ಪಡೆದು ಧನ್ಯನಾಗಬಹುದು. ಪರಸ್ಪರ ವಿರುದ್ಧವಾದ ಸಾಮಾಜಿಕ ಆಚಾರ ರೀತಿ ನೀತಿಗಳುಳ್ಳ ಭಾರತೀಯ ಹಿಂದೂ ಮತ್ತು ಮುಸ್ಲಿಮ್ ಧರ್ಮಗಳಲ್ಲಿ ಪರ್ವತದಷ್ಟು ವೈವಿಧ್ಯತೆಯಿದೆ. ಆದರೂ ಈ ಎರಡೂ ಧರ್ಮಗಳು ಸತ್ಯ, ಇವೆರಡೂ ಒಂದೇ ಭಗವಂತನ ಭಿನ್ನ ಭಿನ್ನ ಭಾವಕ್ಕೆ ಸಂಬಂಧಿಸಿದ ಉಪಾಸನೆಗಳು ; ಈ ಎರಡೂ ಮಾರ್ಗಗಳ ಮೂಲಕ ಮುಂದುವರಿದರೆ ಅದೇ ಪ್ರೇಮಸ್ವರೂಪ ಭಗವಂತನೊಡನೆ ಪ್ರೇಮದಲ್ಲಿ ಒಂದಾಗಬಹುದು ; ಇವರಿಬ್ಬರೂ ಆ ಸತ್ಯದ ತಳಹದಿಯ ಮೇಲೆ ನಿಂತು ಮುಂದೆ ಒಂದು ಕಾಲದಲ್ಲಿ ಪ್ರೇಮದಿಂದ ಪರಸ್ಪರ ಆಲಂಗಿಸುತ್ತಾರೆ ಮತ್ತು ಬಹುಕಾಲದ ವಿವಾದವನ್ನು ಮರೆತು ಶಾಂತಿಯಿಂದ ಬಾಳುತ್ತಾರೆ ಎಂದು ಶ್ರೀರಾಮಕೃಷ್ಣರು ತೋರಿಸಿಕೊಟ್ಟರು. ಭೋಗಲೋಲುಪರಾದ ಪಾಶ್ಚಾತ್ಯರೂ ಕೂಡ ತ್ಯಾಗದಿಂದಲೆ ಶಾಂತಿ ಎಂಬುದನ್ನು ಅರ್ಥಮಾಡಿಕೊಳ್ಳುತ್ತಾರೆ ; ತಮ್ಮ ಧರ್ಮದ ಮತ್ತು ಇತರ

ಧರ್ಮಗಳ ಸತ್ಯತೆಯನ್ನು ಅರಿತುಕೊಂಡು ಅವರು ತಮ್ಮ ಕರ್ಮ ಜೀವನದೊಡನೆ ಧರ್ಮ ಜೀವನವನ್ನು ಸೇರಿಸಿಕೊಂಡು ಧನ್ಯತೆಯನ್ನು ಪಡೆಯುತ್ತಾರೆ ಎಂಬುದನ್ನು ತೋರಿಸಿಕೊಟ್ಟರು. ಇಂಥ ಶ್ರೀರಾಮಕೃಷ್ಣರ ಅದ್ಭುತ ಜೀವನವನ್ನು ಕುರಿತು ಆಲೋಚಿಸಿದಾಗಲೆಲ್ಲ ಅವರು ಯಾವುದೇ ದೇಶ, ಜಾತಿ, ಸಂಪ್ರದಾಯ ಅಥವಾ ಧರ್ಮದ ಸ್ವತ್ತಲ್ಲ ಎಂಬುದು ನಮಗೆ ಅರ್ಥವಾಗುತ್ತದೆ. ವಿಶ್ವಶಾಂತಿಗಾಗಿ ಪ್ರಪಂಚದ ಸಮಸ್ತ ದೇಶದವರೂ ಇವರ ಉದಾರ ಮತವನ್ನು ಆಶ್ರಯಿಸಬೇಕಾಗಿದೆ. ಭಾವಮುಖಿ ಶ್ರೀರಾಮಕೃಷ್ಣರು ಭಾವರೂಪದಲ್ಲಿ ಎಲ್ಲಾ ಮತಗಳನ್ನು ಪ್ರವೇಶಿಸಿ, ಅವುಗಳ ಸಂಕುಚಿತ ಮನೋಭಾವಗಳನ್ನು ನಾಶಮಾಡಿ ಅವುಗಳಿಗೆ ಹೊಸ ರೂಪವನ್ನು ಕೊಟ್ಟು ಹಿಂದೆಂದೂ ಅರಿಯದ ಒಂದು ಏಕತೆಯ ಸರಪಳಿಯಲ್ಲಿ ಅವುಗಳೆಲ್ಲವನ್ನೂ ಕಟ್ಟುವರು.

ಪರಸ್ಪರ ವಿರೋಧಿ ಸಂಪ್ರದಾಯದ ಸಾಧಕರು ಶ್ರೀರಾಮಕೃಷ್ಣರೆಡೆಗೆ ಬಂದು ತಮ್ಮ ಆದರ್ಶದ ಪೂರ್ಣತೆಯನ್ನು ಅವರಲ್ಲಿಯೇ ಕಂಡುಕೊಂಡು, ತಮ್ಮ ಮಾರ್ಗವನ್ನೇ ಅವರು ಅನುಸರಿಸಿರುವರು ಎಂಬ ವಿಶ್ವಾಸ ಆ ಸಾಧಕರಲ್ಲಿ ಉಂಟಾಗಿದ್ದುದು ಈ ಮೇಲಿನ ಹೇಳಿಕೆಯನ್ನೇ ಸೂಚಿಸುತ್ತದೆ. ಶ್ರೀರಾಮಕೃಷ್ಣರ ಗುರುಭಾವವು ಕೇವಲ ಭಾರತೀಯ ಧರ್ಮಗಳಲ್ಲಿ ಇರುವ ವಿವಾದವನ್ನು ದೂರಮಾಡಿ ಒಂದು ಏಕತೆಯನ್ನು ಉಂಟುಮಾಡುವುದು ಮಾತ್ರವಲ್ಲದೆ ಏಷಿಯಾದ ಧರ್ಮವಿವಾದವನ್ನು ಬಗೆಹರಿಸುವುದೂ, ಯೂರೋಪಿನ ಧರ್ಮಹೀನತೆಯನ್ನು ಹೋಗಲಾಡಿಸುವುದೂ, ಮತ್ತು ಪೃಥ್ವಿಯಲ್ಲಿ ಒಂದು ಅಪೂರ್ವ ಶಾಂತಿಯ ರಾಜ್ಯವು ನೆಲೆಸುವಂತೆ ಮಾಡುವುದೂ ಆಗಿತ್ತು. ಶ್ರೀರಾಮಕೃಷ್ಣರ ದೇಹತ್ಯಾಗದ ನಂತರ ಈ ಕಾರ್ಯ ಎಷ್ಟು ವೇಗವಾಗಿ ಸಾಗುತ್ತಿದೆ ಎಂಬುದನ್ನು ನೋಡುತ್ತಿಲ್ಲವೆ ? ಪೂಜ್ಯ ಸ್ವಾಮಿ ವಿವೇಕಾನಂದರ ಮೂಲಕ ಶ್ರೀರಾಮಕೃಷ್ಣರ ಭಾವನೆಗಳು ಅಮೆರಿಕಾ ಮತ್ತು ಯೂರೋಪ್‌ಗಳನ್ನು ಪ್ರವೇಶಿಸಿ ಅತ್ಯಲ್ಪ ಕಾಲದಲ್ಲಿಯೇ ಚಿಂತಾಜಗತ್ತಿನಲ್ಲಿ ಒಂದು ಹೊಸಕ್ರಾಂತಿಯನ್ನೇ ಉಂಟುಮಾಡಿದೆ ಎಂಬುದನ್ನು ನೋಡುತ್ತಿಲ್ಲವೆ ? ದಿನಗಳು ಕಳೆದಂತೆ, ತಿಂಗಳುಗಳು ಉರುಳಿದಂತೆ ವರ್ಷಗಳು ಮುಂದುವರಿದಂತೆ ಈ ಅಮೋಘ ಭಾವರಾಶಿಯು ಎಲ್ಲಾ ದೇಶಗಳ ಎಲ್ಲಾ ಧರ್ಮಗಳ ಮತ್ತು ಎಲ್ಲಾ ಸಮಾಜಗಳ ಮೇಲೆ ತನ್ನ ಪ್ರಭಾವವನ್ನು ವಿಸ್ತರಿಸಿ ಅದ್ಭುತ ಯುಗ ಪರಿವರ್ತನೆ ಆಗುವಂತೆ ಮಾಡುವುದು. ಇದರ ಮುನ್ನಡೆಯನ್ನು ತಡೆಯುವರಾರು ? ಅಪೂರ್ವ ತಪಸ್ಸು ಪವಿತ್ರತೆಗಳಿಂದ ಕೂಡಿದ ತೇಜೋದೀಪ್ತವಾದ ಈ ಭಾವ ರಾಶಿಯ ಸೀಮೆಯನ್ನು ಯಾರು ಉಲ್ಲಂಘಿಸಬಲ್ಲರು ? ಯಾವುದರ ಮೂಲಕ ಇದು ಪ್ರಚಾರವಾಗುತ್ತಿದೆಯೊ ಅದು ನುಚ್ಚುನೂರಾಗಬಹುದು ಮತ್ತು ಇದರ ಮೂಲ ಯಾವುದು ಎಂದು ಯಾರಿಗೂ ಕಂಡುಹಿಡಿಯಲಾಗದೇ ಇರಬಹುದು. ಆದರೆ ಅನಂತ ಮಹಿಮೆಯಿಂದ ಕೂಡಿದ ಶ್ರೀರಾಮಕೃಷ್ಣರ ಭಾವರಾಶಿಯನ್ನು ಅವಲಂಬಿಸಿಯೇ ಮತ್ತು ಅದರ ಅಚ್ಚಿನಲ್ಲಿಯೇ ತಮ್ಮ ಜೀವನವನ್ನು ರೂಪಿಸಿಕೊಂಡು ಪೃಥಿವಿಯ ಸಮಸ್ತ ಜನರು ಒಂದು ದಿನ ಧನ್ಯತೆಯನ್ನು ಪಡೆಯುತ್ತಾರೆ ಎಂಬುದು ನಿಶ್ಚಯ. ಆದ್ದ

ರಿಂದಲೇ ಭಾರತದ ವಿಭಿನ್ನ ಸಂಪ್ರದಾಯದ ಸಾಧಕರು ಶ್ರೀರಾಮಕೃಷ್ಣರೆಡೆಗೆ ಬಂದು ಯಥಾರ್ಥ ಧರ್ಮದ ಸಾರವನ್ನು ಅರಿತುಕೊಂಡು ಹೋಗುತ್ತಿದ್ದ ಈ ಎಲ್ಲ ವಿಷಯ ವನ್ನು ನಿಮ್ಮ ಮುಂದೆ ಇಟ್ಟಿದ್ದೇವೆ. ಇವನ್ನು ಕೇವಲ ಪ್ರೀತಿಭಾವದಿಂದ ಕಥೆಯನ್ನು ಓದುವಂತೆ ಓದಬೇಡಿ. ಭಾವಮುಖದಲ್ಲಿದ್ದ ಈ ಅಲೌಕಿಕ ಪುರುಷರಾದ ಶ್ರೀರಾಮ ಕೃಷ್ಣರ ದಿವ್ಯಭಾವರಾಶಿಯನ್ನು ಮೊದಲು ಸಾಧ್ಯವಾದಷ್ಟು ಗ್ರಹಿಸಲು ಅರ್ಥಮಾಡಿ ಕೊಳ್ಳಲು ಪ್ರಯತ್ನಿಸಿ. ಅನಂತರ ಈ ಭಾವರಾಶಿಯ ಪ್ರಸಾರ ಹೇಗೆ ಪ್ರಾರಂಭವಾಯಿತು. ಹೇಗೆ ಇದು ಪರಿಪೂರ್ಣವಾಗಿ ಮೊದಲು ಪುರಾತನ ಅನಂತರ ಆಧುನಿಕ ಶಿಕ್ಷಣವನ್ನು ಪಡೆದ ಜನರಲ್ಲಿ ತನ್ನ ಪ್ರಭಾವವನ್ನು ವಿಸ್ತರಿಸುತ್ತಿದೆ ಎಂಬುದನ್ನು ಅರ್ಥಮಾಡಿಕೊಳ್ಳಿ ಮತ್ತು ಹೇಗೆ ಇದು ಭಾರತದಿಂದಲೂ ಹೊರಗೆ ಹೋಗಿ ಇತರ ದೇಶಗಳಲ್ಲಿ ಪ್ರಸಾರ ವಾಗಿ ಜಗತ್ತಿನ ಭಾವರಾಜ್ಯದಲ್ಲಿ ಒಂದು ಕ್ರಾಂತಿಯನ್ನು ಉಂಟುಮಾಡುತ್ತಿದೆ ಎಂಬು ದನ್ನೂ ಅರ್ಥಮಾಡಿಕೊಳ್ಳಿ.

3. ಭಾರತದ ವಿವಿಧ ಸಂಪ್ರದಾಯದ ಸಾಧಕರನ್ನು ಆಧರಿಸಿಯೇ ಶ್ರೀರಾಮ ಕೃಷ್ಣರ ಭಾವರಾಶಿಯು ಪ್ರಥಮ ಬಾರಿಗೆ ವಿಸ್ತರಿಸತೊಡಗಿತು. ನಾವು ಮೊದಲೇ ಹೇಳಿರುವಂತೆ ಶ್ರೀರಾಮಕೃಷ್ಣರು ಯಾವ ಯಾವ ಭಾವದಲ್ಲಿ ಸಿದ್ಧಿಯನ್ನು ಪಡೆಯು ತ್ತಿದ್ದರೊ ಆಗ ಆಯಾಯ ಭಾವಕ್ಕೆ ಸೇರಿದ ಸಾಧಕರು ಸ್ವತಃ ಅವರೆಡೆಗೆ ಬರುತ್ತಿದ್ದರು ಮತ್ತು ತಮ್ಮ ಆದರ್ಶವನ್ನು ಅವರಲ್ಲಿ ಕಂಡುಕೊಂಡು ಅವರ ಸಹಾಯವನ್ನು ಪಡೆದು ಬೇರೆಡೆಗೆ ಹೋಗುತ್ತಿದ್ದರು. ಇದಲ್ಲದೆ ಮಥುರನಾಥ ಮತ್ತು ಆತನ ಪತ್ನಿ ಜಗದಂಬಾ ದಾಸಿ ಇವರ ಒತ್ತಾಯದ ಮೇರೆಗೆ ಶ್ರೀರಾಮಕೃಷ್ಣರು ಬೃಂದಾವನದವರೆಗೆ ಯಾತ್ರೆ ಹೋಗಿದ್ದರು. ಕಾಶಿ, ಬೃಂದಾವನ ಮುಂತಾದ ತೀರ್ಥಸ್ಥಳಗಳಲ್ಲಿ ಸಾಧುಭಕ್ತರ ಅಭಾವವೇನಿಲ್ಲ. ಆದ್ದರಿಂದ ಆ ಸ್ಥಾನಗಳಲ್ಲೂ ವಿಶಿಷ್ಟ ಸಾಧಕರು ಶ್ರೀರಾಮಕೃಷ್ಣ ರೊಡನೆ ಬೆರೆತು ಅವರ ಗುರುಭಾವದ ಸಹಾಯದಿಂದ ಧನ್ಯರಾದ ವಿಷಯವನ್ನು ನಾವು ಕೇವಲ ಕಲ್ಪಿಸಿಕೊಳ್ಳಬೇಕಿಲ್ಲ. ಆದರೆ ಅದರ ಬಗ್ಗೆ ನಾವು ಶ್ರೀರಾಮಕೃಷ್ಣರ ಬಾಯಿಂದಲೆ ಸ್ವಲ್ಪ ಸ್ವಲ್ಪ ಕೇಳಿರುವೆವು. ಅದನ್ನೂ ಸ್ವಲ್ಪ ಇಲ್ಲಿ ಹೇಳುವುದು ಆವಶ್ಯಕ.

4. ಶ್ರೀರಾಮಕೃಷ್ಣರು ಹೇಳುತ್ತಾರೆ : "ಪಗಡೆ ಆಟದಲ್ಲಿ ಕಾಯಿ ಹಣ್ಣಾಗ ಬೇಕಾದರೆ ಅದು ಅನೇಕ ಮನೆಗಳ ಮೂಲಕ ಹೋಗಬೇಕು. ಜಾಡಮಾಲಿಯಿಂದ ಹಿಡಿದು ರಾಜನವರೆಗಿನ ಎಲ್ಲಾ ಅನುಭವವನ್ನು ಪಡೆದು ಎಲ್ಲವೂ ತುಚ್ಛವೆನಿಸಿದ ಮೇಲೆ ಜೀವನು ಪರಮಹಂಸಾವಸ್ಥೆಯನ್ನು ತಲುಪುವನು, ಯಥಾರ್ಥ ಜ್ಞಾನಿಯಾಗುವನು", ಇದು ಒಬ್ಬ ಸಾಮಾನ್ಯ ಸಾಧಕನಿಗೆ ಅನ್ವಯಿಸುವ ಮಾತು. ಆದರೆ ಲೋಕ ಶಿಕ್ಷಣವನ್ನು ನೀಡಬೇಕಾದವರು ಅಥವಾ ಜನ ಸಾಧಾರಣರಿಗೆ ಯಥಾರ್ಥ ಶಿಕ್ಷಣವನ್ನು ನೀಡಬೇಕಾದ ವರು ಯಾವ ರೀತಿ ಇರಬೇಕು ಎಂಬುದರ ಬಗ್ಗೆ ಈ ರೀತಿ ಹೇಳುತ್ತಾರೆ : "ಆತ್ಮಹತ್ಯೆ ಮಾಡಿಕೊಳ್ಳಲು ಒಂದು ಸೂಜಿಯಾದರೂ ಸಾಕು. ಆದರೆ ಇತರರನ್ನು ಕೊಲ್ಲಲು ಕತ್ತಿ, ಗುರಾಣಿ ಮುಂತಾದ ಆಯುಧಗಳು ಬೇಕು." ನಿಜವಾದ ಆಚಾರ್ಯನಾಗ

ಬೇಕಾದರೆ ಅವನು ಎಲ್ಲಾ ರೀತಿಯ ಸಂಸ್ಕಾರಗಳ ಮೂಲಕ ಎಲ್ಲಾ ಬಗೆಯ ಅನುಭವವನ್ನು ಪಡೆದು ಇತರ ಸಾಧಾರಣ ವ್ಯಕ್ತಿಗಳಿಗಿಂತ ಅತ್ಯಧಿಕ ಶಕ್ತಿಯನ್ನು ಸಂಪಾದಿಸಿಕೊಳ್ಳಬೇಕು. "ಅವತಾರ, ಸಿದ್ಧಪುರುಷ ಮತ್ತು ಜೀವ ಇವರಲ್ಲಿ ಶಕ್ತಿಯನ್ನು ಆಧರಿಸಿಯೇ ಭೇದವಿರುವುದು" ಎಂದು ಶ್ರೀರಾಮಕೃಷ್ಣರು ಆಗಾಗ ಹೇಳುತ್ತಿದ್ದರು. ವ್ಯಾವಹಾರಿಕ ಜಗತ್ತಿನ ರಾಜಕೀಯದಲ್ಲಿ ಬಿಸ್ಮಾರ್ಕ್ ಮತ್ತು ಗ್ಲ್ಯಾಡ್‌ಸ್ಟೋನ್ ಇವರಂತಹ ಪ್ರತಿಭಾಶಾಲಿಗಳು ಭೂತ ವರ್ತಮಾನಗಳೆರಡನ್ನೂ ಅರಿತು ಜನ ಸಾಧಾರಣರಿಗಿಂತ ಅಧಿಕವಾದ ಶಕ್ತಿಯನ್ನು ಸಂಪಾದಿಸಬೇಕಾಯಿತು. ಈ ಶಕ್ತಿಯ ಸಹಾಯದಿಂದಲೆ ದೇಶದ ಪರಿಸ್ಥಿತಿಯನ್ನು ಆದ್ಯಂತವಾಗಿ ಅರಿತು ಯಾವ ಭಾವನೆಯು ಸಮಾಜದ ಮೇಲೆ ಕೆಟ್ಟ ಪರಿಣಾಮವನ್ನುಂಟು ಮಾಡುವುದು, ಮತ್ತು ಅನೇಕ ವರ್ಷಗಳ ನಂತರ ಪರಿಸ್ಥಿತಿ ಏನಾಗುವುದು ಎಂಬುದನ್ನು ಅವರು ಅರ್ಥಮಾಡಿಕೊಂಡಿದ್ದರು, ಆದ್ದರಿಂದ ಅವರು ಅದಕ್ಕೆ ವಿರುದ್ಧವಾದ ಭಾವನೆಗಳನ್ನು ಪ್ರಚಾರ ಮಾಡಿದರು. ಇದೇ ಮಾತು ಆಧ್ಯಾತ್ಮ ಜಗತ್ತಿಗೂ ಅನ್ವಯಿಸುತ್ತದೆ. ಅವತಾರ ಪುರುಷರು ಅಥವಾ ಆಚಾರ್ಯ ಪುರುಷರು ಪ್ರಾಚೀನ ಕಾಲದಿಂದ ಪ್ರಚಾರಿತವಾದ ಆಧ್ಯಾತ್ಮಿಕ ಭಾವಗಳನ್ನು ಸರಿಯಾಗಿ ಅರ್ಥಮಾಡಿಕೊಂಡಿರಬೇಕು. ಆ ಭಾವಗಳು ಕಾಲಕ್ರಮೇಣ ಯಾವ ಆಕಾರವನ್ನು ಪಡೆದವು ಮತ್ತು ಜನ ಸಾಧಾರಣರ ಮೇಲೆ ಅವುಗಳ ಪರಿಣಾಮವೇನು ಎಂಬುದನ್ನು ಅವರು ಅರಿತಿರಬೇಕು. ಆ ಭಾವಗಳು ಮುಂದೆ ವಿಕೃತರೂಪವನ್ನು ಪಡೆಯುವುದಕ್ಕೆ ಕಾರಣವೇನು ಎಂಬುದರ ಅರಿವೂ ಅವರಿಗಿರಬೇಕು. ವರ್ತಮಾನಕಾಲದಲ್ಲಿ ಇರುವ ಎಲ್ಲಾ ಆಧ್ಯಾತ್ಮಿಕ ಭಾವಗಳು ಪರಿವರ್ತಿತವಾಗಿ ಇನ್ನು ಒಂದೆರಡು ಶತಮಾನಗಳಲ್ಲಿ ಯಾವ ರೀತಿಯ ವಿಕೃತರೂಪವನ್ನು ಪಡೆಯುವುವು ಮತ್ತು ಅದರ ದುಷ್ಪರಿಣಾಮವೇನು ಎಂಬ ದೂರದೃಷ್ಟಿಯು ಅವರಿಗಿರಬೇಕು. ಇವೆಲ್ಲವನ್ನೂ ಸರಿಯಾಗಿ ಅರ್ಥಮಾಡಿಕೊಂಡು ಅವರು ತಮ್ಮ ನವೀನ ಭಾವವನ್ನು ಪ್ರವರ್ತಿಸಬೇಕು. ಏಕೆಂದರೆ ಈ ಎಲ್ಲಾ ವಿಷಯವನ್ನು ಯಥಾರ್ಥ ರೀತಿಯಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವಾಗದಿದ್ದರೆ ಸಮಾಜದ ವರ್ತಮಾನ ಪರಿಸ್ಥಿತಿಯನ್ನು ಹೇಗೆ ತಿಳಿಯಬಲ್ಲರು—ರೋಗದ ಕಾರಣವನ್ನು ತಿಳಿಯದೆ ರೋಗವನ್ನು ವಾಸಿಮಾಡುವುದು ಹೇಗೆ ? ಆದ್ದರಿಂದ ತಪಸ್ಸಿನ ಮೂಲಕ ಔಷಧಿಯನ್ನು ನೀಡುವ ಸಾಮರ್ಥ್ಯವನ್ನು ಪಡೆಯುವುದರ ಜೊತೆಗೆ ಆಚಾರ್ಯಪುರುಷರು ಈ ಪ್ರಪಂಚದ ಅನೇಕ ಬಗೆಯ ಪರಿಸ್ಥಿತಿಗಳನ್ನು ಎದುರಿಸಿ ಜನ ಸಾಧಾರಣರಿಗಿಂತ ಹೆಚ್ಚಿನ ಅನುಭವಗಳನ್ನು ಪಡೆಯಬೇಕು. ಇತರ ಸಾಧಾರಣ ಸಾಧಕರು ಇಷ್ಟೊಂದು ಅನುಭವಗಳನ್ನು ಪಡೆಯುವ ಆವಶ್ಯಕತೆ ಇಲ್ಲ.

ಶ್ರೀರಾಮಕೃಷ್ಣರಿಗೆ ಅನೇಕ ಬಗೆಯ ಪರಿಸ್ಥಿತಿಗಳ ಪರಿಚಯವಿತ್ತು ಎಂಬುದನ್ನು ನಾವು ನೋಡಿದ್ದೇವೆ. ಅವರು ಕಡುಬಡತನದ ಕುಟುಂಬದಲ್ಲಿ ಜನ್ಮವೆತ್ತಿ ಬಾಲ್ಯದಲ್ಲಿ ದಾರಿದ್ರ್ಯಾವಸ್ಥೆಯನ್ನು ಅನುಭವಿಸಿದ್ದರು. ಕಾಳೀ ಮಂದಿರದಲ್ಲಿ ಅರ್ಚಕನ ಕೆಲಸಕ್ಕೆ ಸೇರಿಕೊಂಡು ಮುಂದೆ ಯೌವನಕಾಲದಲ್ಲಿ ದಾಸತ್ವದ ಹೀನಾವಸ್ಥೆಯನ್ನು ಅನುಭವಿಸಿ

ದರು. ಮತ್ತೆ ಸಾಧಕರಾಗಿ ಭಗವಂತನಿಗಾಗಿ ಮೈಮರೆತು ಆತ್ಮೀಯರ ಮತ್ತು ಇತರ ಕುಟುಂಬದವರ ತೀವ್ರ ತಿರಸ್ಕಾರಕ್ಕೆ ಒಳಗಾಗಿದ್ದರು. ಅನೇಕರು ಅವರನ್ನು ಹುಚ್ಚ ರೆಂದೂ ನಿಂದಿಸುತ್ತಿದ್ದರು. ಮಥುರನಾಥನ ಭಕ್ತಿ ಶ್ರದ್ಧೆಯಿಂದ ಕೂಡಿದ ರಾಜಸನ್ಮಾನ ವನ್ನು ಅನುಭವಿಸಿದರು. ಅನೇಕ ಬಗೆಯ ಸಾಧಕರು ಅವರನ್ನು ಭಗವದವತಾರವೆಂದು ಗೌರವಿಸಲ್ಪಡುವ ಮಹಾಭಾಗ್ಯವನ್ನು ಅನುಭವಿಸಿದ್ದರು. ಹೀಗೆ ಅವರು ಅನೇಕ ಬಗೆಯ ಪರಿಸ್ಥಿತಿಗಳನ್ನು ಅನುಭವಿಸಿದ್ದರು ಮತ್ತು ಅವುಗಳ ಪರಿಚಯವನ್ನು ಪಡೆದಿದ್ದರು. ಈ ಎಲ್ಲಾ ಅವಸ್ಥೆಗಳಲ್ಲಿಯೂ ಸ್ವಲ್ಪವೂ ವಿಚಲಿತರಾಗದೆ ಉಳಿದಿದ್ದರು. ಭಗವದನುರಾಗವು ಅವರನ್ನು ಭಗವದ್ ಸಾಕ್ಷಾತ್ಕಾರಕ್ಕಾಗಿ ಕಠೋರ ತಪಸ್ಸಿನಲ್ಲಿ ತೊಡಗಿಸಿ, ಅವರ ಅತೀಂದ್ರಿಯ ಸೂಕ್ಷ್ಮದೃಷ್ಟಿಯು ಸಂಪೂರ್ಣ ತೆರೆಯುವಂತೆ ಮಾಡಿತ್ತು. ಇನ್ನೊಂದು ಕಡೆ ಸಂಸಾರದ ನಾನಾ ಪ್ರಕಾರದ ಅನುಭವಗಳು ಜಗತ್ತಿನ ವಿವಿಧ ಪರಿಸ್ಥಿತಿಯಲ್ಲಿರುವ ಜನರ ಮನೋಭಾವಗಳನ್ನು ಅರ್ಥಮಾಡಿಕೊಂಡು ಅದಕ್ಕನುಗುಣವಾಗಿ ವ್ಯವಹರಿಸು ವಂತೆ ಮಾಡಿದ್ದವು ಹಾಗೂ ಅವರ ಸುಖದುಃಖಗಳನ್ನು ಸಹಾನುಭೂತಿ ಪೂರ್ವಕವಾಗಿ ಅರ್ಥಮಾಡಿಕೊಳ್ಳುವ ಸಾಮರ್ಥ್ಯವನ್ನು ನೀಡಿದ್ದವು. ಏಕೆಂದರೆ ಒಳಗಿನ ಮತ್ತು ಹೊರಗಿನ ಈ ಎಲ್ಲ ಅವಸ್ಥೆಗಳ ಮೂಲಕವೇ ಶ್ರೀರಾಮಕೃಷ್ಣರ ಗುರುಭಾವವು ದಿನ ದಿನವೂ ಹೆಚ್ಚು ಹೆಚ್ಚು ಸ್ಪಷ್ಟ ರೀತಿಯಲ್ಲಿ ವಿಕಸಿತವಾಗುವುದನ್ನು ನಾವು ನೋಡು ತ್ತೇವೆ.

5. ತೀರ್ಥಯಾತ್ರೆಯೂ ಕೂಡ ಶ್ರೀರಾಮಕೃಷ್ಣರಿಗೆ ಅದೇ ಫಲವನ್ನು ನೀಡಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಯುಗಾಚಾರ್ಯರಾದ ಶ್ರೀರಾಮಕೃಷ್ಣರು ದೇಶದ ಜನ ಸಾಧಾರಣರ ಆಧ್ಯಾತ್ಮಿಕ ಅವಸ್ಥೆಯನ್ನು ತಿಳಿಯುವ ಆವಶ್ಯಕತೆ ಇತ್ತು. ಮಥುರನಾಥ ನೊಡನೆ ತೀರ್ಥಯಾತ್ರೆಗೆ ಹೋಗುವುದರ ಮೂಲಕ ಇದು ಬಹುಮಟ್ಟಿಗೆ ಸಾಧಿತವಾ ಗಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಏಕೆಂದರೆ ಶ್ರೀರಾಮಕೃಷ್ಣರ ಅಂತರ್ಜಗತ್ತಿನಲ್ಲಿ ಪ್ರಜ್ಞಾಚಕ್ಷುವು ಮಾಯೆಯ ಆವರಣವನ್ನು ಭೇದಿಸಿ ಎಲ್ಲರ ಒಳಗೂ ಅಡಗಿರುವ ಆ ಅಖಂಡ ಸಚ್ಚಿದಾನಂದ ಬ್ರಹ್ಮವಸ್ತುವನ್ನು ನೋಡುವ ಸಾಮರ್ಥ್ಯವನ್ನು ಪಡೆದಿತ್ತು, ಹಾಗೆಯೇ ಬಹಿರ್ಜಗತ್ತಿನಲ್ಲಿ ಲೌಕಿಕ ವ್ಯವಹಾರದೊಡನೆ ಸಂಪರ್ಕವನ್ನು ಪಡೆದಾಗ ಒಂದೇ ಮಾತಿನಲ್ಲಿ ಜನರ ಆಂತರಿಕ ಭಾವವನ್ನು ಗ್ರಹಿಸುವ ಮತ್ತು ಒಂದೆರಡು ಘಟನೆ ಗಳ ಮೂಲಕವೇ ಸಮಾಜದ ಮತ್ತು ದೇಶದ ಅವಸ್ಥೆಯನ್ನು ಅರ್ಥ ಮಾಡಿಕೊಳ್ಳುವ ತೀಕ್ಷ್ಣ ದೃಷ್ಟಿಯೂ ಅವರಲ್ಲಿತ್ತು. ಶ್ರೀರಾಮಕೃಷ್ಣರ ಸಾಧಾರಣ ಅವಸ್ಥೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ನಾವು ಈ ಮಾತನ್ನು ಹೇಳುತ್ತಿದ್ದೇವೆ. ಅವರು ಯೋಗ ಶಕ್ತಿಯ ಸಹಾಯದಿಂದ ಉನ್ನತ ಸ್ತರವನ್ನು ಏರಿದಾಗ ದಿವ್ಯದೃಷ್ಟಿಯಿಂದಲೇ ವ್ಯಕ್ತಿ ಗತವಾದ ಸಮಾಜಗತವಾದ ಅಥವಾ ಪ್ರದೇಶಗತವಾದ ಎಲ್ಲ ಅವಸ್ಥೆಗಳ ಅನುಭವ ವನ್ನು ಪಡೆದು ಈ ವರ್ತಮಾನದುರ್ದಶೆಯು ಯಾವ ಉಪಾಯದಿಂದ ಹೋಗಲಾಡಿಸ ಲ್ಪಡುವುದು ಎಂಬುದನ್ನು ಸರಿಯಾಗಿ ಅರ್ಥಮಾಡಿಕೊಳ್ಳುತ್ತಿದ್ದರು. ಆಗ ಅವರಿಗೆ ಜನ

ಸಾಮಾನ್ಯರಂತೆ ಬಾಹ್ಯದೃಷ್ಟಿಯಿಂದ ನೋಡುವ, ಕೇಳುವ, ತಿಳಿಯುವ ಆವಶ್ಯಕತೆಯಿರಲಿಲ್ಲ. ದೇವಮಾನವರಾದ ಶ್ರೀರಾಮಕೃಷ್ಣರು ಸಾಧಾರಣ ಬಾಹ್ಯದೃಷ್ಟಿಯಿಂದಲೂ ಮತ್ತು ಅಸಾಧಾರಣ ಯೋಗದೃಷ್ಟಿಯಿಂದಲೂ ಎಲ್ಲ ವಿಷಯಗಳ ತತ್ತ್ವನಿರೂಪಣೆ ಮಾಡುತ್ತಿದ್ದುದನ್ನು ನಾವು ನೋಡಿರುವೆವು. ಆದ್ದರಿಂದ ದೇವಭಾವ ಮತ್ತು ಮನುಷ್ಯಭಾವ ಇವೆರಡರ ಪರಿಚಯವಾಗದೆ ಇದ್ದರೆ ಆಂಶಿಕವಾದ ಅಲೌಕಿಕ ಚಿತ್ರ ಮಾತ್ರ ಓದುಗರ ಮನಸ್ಸಿನಲ್ಲಿ ಉಳಿಯುತ್ತದೆ. ಇದೇ ಕಾರಣದಿಂದಲೆ ದೇವಮಾನವರಾದ ಶ್ರೀರಾಮಕೃಷ್ಣರ ಜೀವನದಲ್ಲಿ ಇವೆರಡೂ ಭಾವವನ್ನು ಚಿತ್ರಿಸುವ ಪ್ರಯತ್ನ ಮಾಡಿದ್ದೇವೆ.

6. ಶಾಸ್ತ್ರದ ದೃಷ್ಟಿಯಿಂದ ನೋಡಿದಾಗ ಶ್ರೀರಾಮಕೃಷ್ಣರ ತೀರ್ಥಯಾತ್ರೆಗೆ ಇನ್ನೊಂದು ಕಾರಣವನ್ನು ಕಾಣಬಹುದು. ಭಗವಂತನ ದರ್ಶನವನ್ನು ಪಡೆದ ಸಿದ್ಧ ಪುರುಷರು ತೀರ್ಥಸ್ಥಳಗಳಿಗೆ ಹೋಗಿ ಅವಕ್ಕೆ ತೀರ್ಥತ್ತ್ವವನ್ನು ನೀಡುತ್ತಾರೆಂದು ಶಾಸ್ತ್ರವು ಹೇಳುತ್ತದೆ. ಅವರು ಭಗವಂತನ ವಿಶೇಷ ದರ್ಶನಕ್ಕಾಗಿ ವ್ಯಾಕುಲ ಮನಸ್ಸಿನಿಂದ ಅಲ್ಲಿಗೆ ಹೋಗುತ್ತಾರೆ. ಇದರಿಂದಾಗಿ ಆ ಸ್ಥಳಗಳಲ್ಲಿ ಭಗವಂತನ ವಿಶೇಷ ಆವಿರ್ಭಾವವಿರುತ್ತದೆ ಅಥವಾ ಮೊದಲೇ ಇದ್ದ ಆವಿರ್ಭಾವವನ್ನು ಇನ್ನೂ ಅಧಿಕಗೊಳಿಸುತ್ತಾರೆ. ಸಾಧಾರಣ ಮನುಷ್ಯರು ಅಲ್ಲಿಗೆ ಹೋದಾಗ ಭಗವಂತನ ವಿಶೇಷ ಆವಿರ್ಭಾವವನ್ನು ಸ್ವಲ್ಪಮಟ್ಟಿಗಾದರೂ ಅನುಭವಿಸುತ್ತಾರೆ. ಸಿದ್ಧಪುರುಷರ ವಿಷಯವೇ ಹೀಗಾದರೆ ಇನ್ನು ಶ್ರೀರಾಮಕೃಷ್ಣರಂತಹ ಅವತಾರ ಪುರುಷರ ಬಗ್ಗೆ ಹೇಳಬೇಕಾಗಿಯೇ ಇಲ್ಲ. ತೀರ್ಥಸ್ಥಳದ ವಿಷಯವಾಗಿ ಶ್ರೀರಾಮಕೃಷ್ಣರು ನಮಗೆ ಸರಳಭಾಷೆಯಲ್ಲಿ ಎಷ್ಟೋ ಬಾರಿ ತಿಳಿಸಿಕೊಟ್ಟಿರುವರು. ಅವರು ಹೇಳುತ್ತಾರೆ : "ನೋಡು, ಎಲ್ಲಿ ಅನೇಕರು ಅನೇಕ ದಿನಗಳ ಪರ್ಯಂತ ಈಶ್ವರನ ದರ್ಶನಕ್ಕಾಗಿ ಜಪ, ಧ್ಯಾನ ಪ್ರಾರ್ಥನೆ ಮುಂತಾದ ಸಾಧನೆಗಳನ್ನು ಮಾಡಿರುವರೊ ಅಲ್ಲಿ ಭಗವಂತನ ಆವಿರ್ಭಾವವಾಗಿರುವುದು ನಿಶ್ಚಯ, ತಿಳಿಯಿತೆ ? ಅವರ ಭಕ್ತಿಯ ಪರಿಣಾಮವಾಗಿ ಅಲ್ಲಿ ಭಗವದ್‌ಭಾವವು ಮೂರ್ತೀಭವಿಸಿರುತ್ತದೆ. ಆದ್ದರಿಂದ ಅಲ್ಲಿ ಸ್ವಾಭಾವಿಕವಾಗಿಯೆ ಭಗವದ್‌ಭಾವವು ಉದ್ದೀಪನಗೊಳ್ಳುವುದು ಮತ್ತು ಭಗವಂತನ ದರ್ಶನವಾಗುವುದು. ಯುಗಯುಗಾಂತರಗಳಿಂದ ಎಷ್ಟು ಜನ ಸಾಧುಗಳು. ಭಕ್ತರು ಸಿದ್ಧಪುರುಷರು ಈ ಎಲ್ಲ ತೀರ್ಥಸ್ಥಳಗಳಿಗೆ ಬಂದಿರುವರು ! ಬೇರೆ ಎಲ್ಲಾ ವಾಸನೆಗಳನ್ನು ಬಿಟ್ಟು ಹೃತ್ಪೂರ್ವಕವಾಗಿ ಅವನನ್ನು ಕರೆದಿರುವರು ! ಆದ್ದರಿಂದಲೆ ಭಗವಂತನು ಎಲ್ಲಾ ಕಡೆಯಲ್ಲಿಯೂ ಸಮಾನವಾಗಿ ನೆಲೆಸಿರುವನಾದರೂ ಈ ಸ್ಥಳಗಳಲ್ಲಿ ಅವನ ವಿಶೇಷ ಆವಿರ್ಭಾವ ಕಂಡುಬರುತ್ತದೆ. ಹೇಗೆಂದರೆ ಮಣ್ಣನ್ನು ಅಗೆದರೆ ಎಲ್ಲಾ ಕಡೆಗಳಲ್ಲಿಯೂ ನೀರನ್ನು ಪಡೆಯಬಹುದು. ಆದರೆ ಬಾವಿ, ಕೊಳ, ಸರೋವರ ಮುಂತಾದುವುಗಳಲ್ಲಿ ನೀರು ಹೆಚ್ಚಿನ ಪ್ರಮಾಣದಲ್ಲಿ ದೊರೆಯುವುದು."

7. ಭಗವಂತನ ವಿಶೇಷ ಪ್ರಕಾಶವಿರುವ ಈ ಎಲ್ಲ ತೀರ್ಥಸ್ಥಳಗಳ ದರ್ಶನವಾದ ಮೇಲೆ ಅದರ ಬಗ್ಗೆಯೆ ಮೆಲಕುಹಾಕಬೇಕೆಂದು ಶ್ರೀರಾಮಕೃಷ್ಣರು ಉಪದೇಶಿಸು

ತ್ತಿದ್ದರು. ಅವರು ಹೇಳುತ್ತಿದ್ದರು : "ಹಸುಗಳು ಹೊಟ್ಟೆ ತುಂಬ ತಿಂದು ನಿಶ್ಚಿಂತೆಯಿಂದ ಒಂದು ಕಡೆ ಮಲಗಿ ತಿಂದದ್ದನ್ನೆಲ್ಲಾ ಮೆಲಕು ಹಾಕುವುವು, ಅಥವಾ ಅದನ್ನೆಲ್ಲ ಸರಿಯಾಗಿ ಚೂರುಚೂರು ಮಾಡುವುವು. ಅದೇ ರೀತಿ ದೇವಸ್ಥಾನ ತೀರ್ಥಸ್ಥಾನಗಳಿಗೆ ಹೋಗಿ ಬಂದ ಮೇಲೆ ಏಕಾಂತ ಸ್ಥಳದಲ್ಲಿ ಕುಳಿತು ಭಗವಂತನನ್ನು ಚಿಂತಿಸಬೇಕು. ಅಲ್ಲಿಂದ ಬಂದಕೂಡಲೆ ಭಗವಂತನ ಚಿಂತನೆಯನ್ನೆಲ್ಲಾ ದೂರಮಾಡಿ ವಿಷಯ ಚಿಂತನೆಯಲ್ಲಿ ಮನಸ್ಸನ್ನು ತೊಡಗಿಸಬಾರದು. ಹಾಗೆ ಮಾಡಿದರೆ ಆ ಭಗವದ್ಭಾವವು ಮನಸ್ಸಿನಲ್ಲಿ ಸ್ಥಿರವಾಗಿ ಉಳಿಯುವುದಿಲ್ಲ."

ನಮ್ಮಲ್ಲಿ ಕೆಲವರು ಶ್ರೀರಾಮಕೃಷ್ಣರೊಡನೆ ಒಮ್ಮೆ ಕಾಳೀಘಟ್ಟದಲ್ಲಿ ಶ್ರೀ ಜಗನ್ಮಾತೆಯ ದರ್ಶನಕ್ಕೆ ಹೋಗಿದ್ದರು. ಅಲ್ಲಿ ಜಗನ್ಮಾತೆಯ ವಿಶೇಷ ಆವಿರ್ಭಾವವಿದೆ. ಆಗ ಅಲ್ಲಿ ಪೀಠಸ್ಥಾನದ (ಶಕ್ತಿಪೀಠ) ವಿಶೇಷ ಪ್ರಕಾಶ ಮತ್ತು ಶ್ರೀರಾಮಕೃಷ್ಣರ ಶರೀರ ಮನಸ್ಸುಗಳಲ್ಲಿ ಶ್ರೀ ಜಗನ್ಮಾತೆಯ ಜೀವಂತ ಪ್ರಕಾಶ ಇವೆರಡೂ ಸಮ್ಮಿಲನಗೊಂಡು ಭಕ್ತರ ಹೃದಯದಲ್ಲಿ ಒಂದು ಅಪೂರ್ವ ಆನಂದವನ್ನು ಜಾಗ್ರತಗೊಳಿಸಿದ್ದುವು. ಹಿಂದಿರುಗಿ ಬರುವಾಗ ಭಕ್ತನೊಬ್ಬನು ಸಂದರ್ಭ ವಿಶೇಷದ ಒತ್ತಡದಿಂದಾಗಿ ತನ್ನ ಮಾವನ ಮನೆಗೆ ಹೋಗಿ ಅಲ್ಲಿ ರಾತ್ರಿ ಕಳೆಯಬೇಕಾಯಿತು. ಮರುದಿನ ಅವನು ಶ್ರೀರಾಮಕೃಷ್ಣರನ್ನು ಭೇಟಿಯಾದಾಗ ರಾತ್ರಿ ಎಲ್ಲಿ ಕಳೆದೆ ಎಂದು ಅವರು ಅವನನ್ನು ವಿಚಾರಿಸಿದರು. ಅವನು ಮಾವನ ಮನೆಯಲ್ಲಿ ರಾತ್ರಿ ತಂಗಿದ್ದನು ಎಂದು ಕೇಳಿ ಶ್ರೀರಾಮಕೃಷ್ಣರು ಹೇಳಿದರು: "ಇದೇನಿದು? ತಾಯಿಯ ದರ್ಶನ ಮಾಡಿಕೊಂಡು ಬಂದೆ. ಅವಳ ಚಿಂತನೆಯನ್ನೇ ಮೆಲುಕು ಹಾಕುವುದನ್ನು ಬಿಟ್ಟು ಪ್ರಾಪಂಚಿಕರಂತೆ ಮಾವನ ಮನೆಯಲ್ಲಿ ರಾತ್ರಿ ಕಳೆದೆಯಲ್ಲ ? ದೇವಸ್ಥಾನ, ತೀರ್ಥಸ್ಥಾನಗಳಿಗೆ ಹೋಗಿ ಬಂದ ಮೇಲೆ ಅದೇ ಚಿಂತನೆಯನ್ನು ಮೆಲುಕು ಹಾಕುತ್ತಿರಬೇಕು. ಅದಿಲ್ಲದಿದ್ದರೆ ಆ ಭಗವದ್ಭಾವಗಳು ಹೃದಯದಲ್ಲಿ ಹೇಗೆ ಉಳಿಯುತ್ತವೆ ?"

8. ಭಗವದ್ಭಾವವನ್ನು ಭಕ್ತಿಯಿಂದ ಮೊದಲೇ ಹೃದಯದಲ್ಲಿ ಪೋಷಿಸಿಕೊಂಡು ಬರದಿದ್ದರೆ ತೀರ್ಥಸ್ಥಳಗಳಿಗೆ ಹೋದರೂ ವಿಶೇಷ ಪ್ರಯೋಜನವಾಗದು ಎಂದು ಶ್ರೀರಾಮಕೃಷ್ಣರು ನಮಗೆ ಹೇಳುತ್ತಿದ್ದರು. ಅವರು ಇರುವಾಗ ನಮ್ಮಲ್ಲಿ ಅನೇಕರು ತೀರ್ಥಸ್ಥಾನಗಳಿಗೆ ಹೋಗಬೇಕೆಂಬ ತಮ್ಮ ಆಸೆಯನ್ನು ವ್ಯಕ್ತಪಡಿಸುತ್ತಿದ್ದರು. ಅಂಥ ಸಂದರ್ಭದಲ್ಲಿ ಅವರು ಹೇಳುತ್ತಿದ್ದರು : "ನೋಡಪ್ಪ, ಯಾರಿಗೆ ಇಲ್ಲಿದೆಯೊ ಅವರಿಗೆ ಅಲ್ಲಿದೆ, ಯಾರಿಗೆ ಇಲ್ಲಿಲ್ಲವೊ ಅವರಿಗೆ ಅಲ್ಲೂ ಇಲ್ಲ."*

* ಬೇರೆ ಬೇರೆ ಅವತಾರ ಪುರುಷರ ಉಪದೇಶಗಳಲ್ಲಿ ಅನೇಕ ವೇಳೆ ಸಾಮ್ಯತೆಯಿರುತ್ತದೆ. ಮಹಾಮಹಿಮನಾದ ಕ್ರಿಸ್ತನು ಒಮ್ಮೆ ತನ್ನ ಶಿಷ್ಯರಿಗೆ ಹೀಗೆ ಹೇಳಿದನು—"To him who hath more, more shall be given and from him who hath little, that little shall be taken away". ಅಂದರೆ ಯಾರಲ್ಲಿ ಅಧಿಕ ಭಕ್ತಿ ವಿಶ್ವಾಸವಿದೆಯೊ ಅದು ಇನ್ನೂ ವೃದ್ಧಿಸುವುದು. ಯಾರಲ್ಲಿ ಅತ್ಯಲ್ಪ ಭಕ್ತಿವಿಶ್ವಾಸವಿರುತ್ತದೊ ಅದೂ ಕೂಡ ಕಿತ್ತುಕೊಳ್ಳಲ್ಪಡುವುದು.

ಅವರು ಮತ್ತೂ ಹೇಳುತ್ತಿದ್ದರು : "ಯಾರ ಹೃದಯದಲ್ಲಿ ಭಕ್ತಿಭಾವವಿರುತ್ತದೊ ಅದು ಇನ್ನೂ ವೃದ್ಧಿಯಾಗುವುದು. ಯಾರ ಹೃದಯದಲ್ಲಿ ಆ ಭಾವವಿಲ್ಲವೊ ಅವರಿಗೆ ಏನು ಪ್ರಯೋಜನವಾದೀತು ? ಒಬ್ಬ ಹುಡುಗ ಕಾಶಿಗೊ ಅಥವಾ ಬೇರೆ ಸ್ಥಳಕ್ಕೊ ಓಡಿಹೋಗುತ್ತಾನೆ. ಅನಂತರ ಅಲ್ಲಿ ಬಹಳ ಕಷ್ಟಪಟ್ಟು ಉದ್ಯೋಗ ಹಿಡಿಯುತ್ತಾನೆ, ಮತ್ತೆ ಮನೆಗೆ ಪತ್ರ ಬರೆದು ಹಣ ಕಳಿಸುತ್ತಾನೆ. ಎಷ್ಟೋ ಜನರು ತೀರ್ಥಸ್ಥಳಗಳಿಗೆ ವಾಸಮಾಡಲು ಹೋಗಿ ಅಲ್ಲೊಂದು ಅಂಗಡಿಯನ್ನು ತೆರೆದು ವ್ಯಾಪಾರವನ್ನು ಶುರು ಮಾಡುತ್ತಾರೆ. ಮಥುರನೊಡನೆ ಪಶ್ಚಿಮದ ಕಡೆ ಹೋಗಿ ನೋಡಿದೆ, ಇಲ್ಲಿಯಂತೆಯೆ ಅಲ್ಲಿಯೂ ಕೂಡ. ಮಾವಿನಮರ ಹುಣಿಸೆಮರ, ಬಿದಿರು ಇವು ಇಲ್ಲಿರುವಂತೆಯೆ ಅಲ್ಲಿರುತ್ತವೆ ! ಇದನ್ನು ನೋಡಿ ಹೃದಯನಿಗೆ ಹೇಳಿದೆ : 'ನೋಡು ಹೃದು, ಇಲ್ಲಿ ಏನಪ್ಪ ನೋಡುವುದಿದೆ ? ಅಲ್ಲೇನಿದೆಯೊ ಇಲ್ಲೂ ಅದೆ : ಒಂದೇ ವ್ಯತ್ಯಾಸವೇನೆಂದರೆ ಇಲ್ಲಿಯ ಜನಗಳಿಗೆ ಒಳ್ಳೆಯ ಜೀರ್ಣಶಕ್ತಿಯಿದೆಯೆಂದೆನಿಸುತ್ತದೆ."

9. ಗಂಟಲು ಬೇನೆಯ ಚಿಕಿತ್ಸೆಗಾಗಿ ಮೊದಲು ಶ್ರೀರಾಮಕೃಷ್ಣರನ್ನು ಶ್ಯಾಮಪುಕುರದ ಒಂದು ಬಾಡಿಗೆ ಮನೆಗೆ ಕರೆದುಕೊಂಡು ಬಂದರು. ಅನಂತರ ಕಾಶೀಪುರಕ್ಕೆ ಅವರನ್ನು ಕರೆದುಕೊಂಡು ಹೋಗಲಾಯಿತು. ಕಾಶೀಪುರಕ್ಕೆ ಬಂದ ಕೆಲವೇ ದಿನಗಳಲ್ಲಿ ಸ್ವಾಮಿ ವಿವೇಕಾನಂದರು ಮತ್ತೆ ಇಬ್ಬರು ಸಹೋದರ ಶಿಷ್ಯರೊಡನೆ ಯಾರಿಗೂ ಹೇಳದೆ ಬುದ್ಧಗಯೆಗೆ ಹೊರಟುಹೋದರು. ಆ ಸಮಯದಲ್ಲಿ ನಾವು ಬುದ್ಧನ ಅದ್ಭುತ ಜೀವನವನ್ನು, ಅವನ ತ್ಯಾಗ, ವೈರಾಗ್ಯ, ತಪಸ್ಸುಗಳನ್ನು ಹಗಲು ರಾತ್ರಿ ಚಿಂತಿಸುತ್ತಿದ್ದೆವು. ನಾವೆಲ್ಲರೂ ಆ ಮನೆಯ ಕೆಳಭಾಗದ ಒಂದು ಕೊಠಡಿಯಲ್ಲಿ ಇರುತ್ತಿದ್ದೆವು. ಅಲ್ಲಿಯ ಗೋಡೆಯ ಮೇಲೆ 'ಲಲಿತ ವಿಸ್ತರ'ದಲ್ಲಿ ಬರುವ ಬುದ್ಧನ ಈ ಮಾತನ್ನು ಬರೆದಿದ್ದೆವು :

> ಇಹಾಸನೇ ಶುಷ್ಯತು ಮೇ ಶರೀರಂ ತ್ವಗಸ್ಥಿಮಾಂಸಂ ಪ್ರಲಯಂ ಚ ಯಾತು ।
> ಅಪ್ರಾಪ್ಯ ಬೋಧಿಂ ಬಹುಕಲ್ಪದುರ್ಲಭಂ ನೈವಾಸನಾತ್ ಕಾಯಮತಶ್ಚಲಿಷ್ಯತೇ ॥

—"ಎಲ್ಲಿಯವರೆಗೆ ಸತ್ಯ ಲಾಭವಾಗುವುದಿಲ್ಲವೊ ಅಲ್ಲಿಯವರೆಗೆ ಒಂದೇ ಆಸನದಲ್ಲಿ ಕುಳಿತು ಧ್ಯಾನ ಧಾರಣಾದಿಗಳನ್ನು ಮಾಡುತ್ತೇನೆ. ಇಲ್ಲಿಯೇ ಶರೀರ ಬಿದ್ದುಹೋಗಲಿ." ಹಗಲು ರಾತ್ರಿ ಇದೇ ಭಾವನೆ ನಮ್ಮ ಮನಸ್ಸನ್ನು ಆವರಿಸಿಕೊಂಡಿತ್ತು. ನಾವು ಭಗವದ್ಪ್ರಾಪ್ತಿಗಾಗಿ ಇದೇ ರೀತಿ ಪ್ರಾಣತ್ಯಾಗ ಮಾಡಬೇಕು ಎಂದೆನಿಸುತ್ತಿತ್ತು. ಇದೇ ಭಾವನೆಯ ಸ್ಫೂರ್ತಿಯಿಂದಲೇ ಸ್ವಾಮಿ ವಿವೇಕಾನಂದರು ಹಠಾತ್ತನೆ ಬುದ್ಧಗಯೆಗೆ ಹೊರಟುಹೋದರು. ಆದರೆ ಎಲ್ಲಿಗೆ ಹೋಗುತ್ತೇನೆ, ಯಾವಾಗ ಹಿಂದಿರುಗಿ ಬರುತ್ತೇನೆ ಎಂಬುದನ್ನು ಯಾರಿಗೂ ಹೇಳಲಿಲ್ಲ. ನಮ್ಮಲ್ಲನೇಕರಿಗೆ ಅನ್ನಿಸಿತು, ಅವರು ಮತ್ತೆ ಹಿಂದಿರುಗುವುದಿಲ್ಲ, ಇನ್ನು ನಾವು ಅವರನ್ನು ಕಾಣಲಾಗುವುದಿಲ್ಲ ಎಂದು, ಅವರು ಕಾವಿ ಬಟ್ಟೆಯನ್ನು ಉಟ್ಟು ಬುದ್ಧಗಯೆಗೆ ಹೋಗಿದ್ದಾರೆ ಎಂದು ಅನಂತರ ಸುದ್ದಿ ಬಂತು.

ಅಂದಿನಿಂದ ನಮಗೆಲ್ಲರಿಗೂ ಸ್ವಾಮಿಜಿಯವರದೇ ಚಿಂತೆ, ಅವರನ್ನು ಬಿಟ್ಟಿರುವುದು ನಮಗೆ ತುಂಬ ಯಾತನೆಯನ್ನುಂಟುಮಾಡಿತು. ನಮ್ಮಲ್ಲನೇಕರು ಸ್ವಾಮೀಜಿಯವರು ಇರುವಲ್ಲಿಗೆ ಹೋಗಬೇಕೆಂದು ತೀವ್ರವಾಗಿ ಆಶಿಸುತ್ತಿದ್ದರು. ಕ್ರಮೇಣ ಈ ವಿಷಯ ಶ್ರೀರಾಮಕೃಷ್ಣರ ಕಿವಿಗೂ ಬಿತ್ತು. ಒಂದು ದಿನ ಬ್ರಹ್ಮಾನಂದರು ಒಬ್ಬ ವ್ಯಕ್ತಿಯ ಈ ಸಂಕಲ್ಪವನ್ನು ಶ್ರೀರಾಮಕೃಷ್ಣರಿಗೆ ಹೇಳಿಯೇ ಬಿಟ್ಟರು. ಶ್ರೀರಾಮಕೃಷ್ಣರು ಅವನಿಗೆ ಹೇಳಿದರು : "ಯಾಕೆ ಚಿಂತಿಸುತ್ತೀ ? ಅವನು (ಸ್ವಾಮೀಜಿ) ಎಲ್ಲಿಗೆ ಹೋಗುತ್ತಾನೆ ? ಎಷ್ಟು ಕಾಲ ಅವನು ಹೊರಗೆ ಇರಬಲ್ಲ ? ನೀನು ನೋಡುತ್ತಿರು ಅವನು ಬೇಗ ಬಂದು ಬಿಡುತ್ತಾನೆ". ಅನಂತರ ನಗುತ್ತಾ ಹೇಳಿದರು : "ನೀನು ನಾಲ್ಕು ದಿಕ್ಕಿನಲ್ಲಿಯೂ ತಿರುಗಾಡಿಕೊಂಡು ಬರಬಹುದು, ನಿನಗೆ ಎಲ್ಲಿಯೂ ಏನೂ ಸಿಕ್ಕುವುದಿಲ್ಲ. ಏನೇನಿದೆಯೊ ಅದೆಲ್ಲ ಇಲ್ಲಿಯೆ (ತಮ್ಮ ಕಡೆಗೆ ಕೈ ತೋರಿಸಿ)". 'ಇಲ್ಲಿಯೆ' ಎಂಬ ಶಬ್ದವನ್ನು ಎರಡು ಅರ್ಥದಲ್ಲಿ ಉಪಯೋಗಿಸಿರಬಹುದು : ತಮ್ಮಲ್ಲಿ ಈಗ ಧರ್ಮಭಾವದ ಅಥವಾ ಈಶ್ವರ ಭಾವದ ಯಾವ ವಿಶೇಷ ರೀತಿಯ ಆವಿರ್ಭಾವವುಂಟಾಗಿದೆಯೊ ಅದು ಬೇರೆಲ್ಲೂ ಕಾಣ ಸಿಗುವುದಿಲ್ಲ ; ಅಥವಾ ಪ್ರತಿಯೊಬ್ಬರೊಳಗೂ ಈಶ್ವರನು ನೆಲೆಸಿರುವನು, ತನ್ನೊಳಗಿರುವ ಅವನನ್ನು ಪ್ರೀತಿಸದೆ, ತನ್ನೊಳಗೇ ಭಗವದ್ಭಾವವು ಉದ್ದೀಪನವಾಗದಿದ್ದರೆ ಹೊರಗಡೆ ಎಷ್ಟೇ ತಿರುಗಾಡಿದರೂ ಏನೂ ಪ್ರಯೋಜನವಾಗದು. ಶ್ರೀರಾಮಕೃಷ್ಣರ ಅನೇಕ ಮಾತುಗಳ ಹಿಂದೆ ಈ ರೀತಿ ಎರಡು ಮೂರು ಅರ್ಥಗಳಿರುವುದನ್ನು ಕಾಣುತ್ತೇವೆ. ಇದು ಶ್ರೀರಾಮಕೃಷ್ಣರಿಗೆ ಮಾತ್ರ ಅನ್ವಯಿಸುವುದಿಲ್ಲ. ಜಗತ್ತಿನಲ್ಲಿ ಬಂದು ಹೋದ ಎಲ್ಲಾ ಅವತಾರ ಪುರುಷರ ಮಾತಿನ ಹಿಂದೆಯೂ ಅನೇಕ ಅರ್ಥಗಳಿರುವುದನ್ನು ಕಾಣುತ್ತೇವೆ. ಜನ ಸಾಧಾರಣರು ತಮ್ಮ ಅಭಿರುಚಿಗೆ ತಕ್ಕಂತೆ, ತಮ್ಮ ಸಂಸ್ಕಾರಗಳಿಗನುಗುಣವಾಗಿ ಆ ಮಾತಿನ ಅರ್ಥವನ್ನು ಗ್ರಹಿಸುತ್ತಾರೆ. ಈ ಮೇಲಿನ ಮಾತನ್ನು ಯಾರನ್ನು ಉದ್ದೇಶಿಸಿ ಹೇಳಿದರೂ ಅವರು ಅದರ ಮೊದಲನೆಯ ಅರ್ಥವನ್ನೇ ಗ್ರಹಿಸಿಕೊಂಡು ಶ್ರೀರಾಮಕೃಷ್ಣರಲ್ಲಿ ಯಾವ ರೀತಿಯ ಭಗವದ್ ಭಾವವು ಪ್ರಕಾಶಗೊಂಡಿರುವುದೊ ಅದನ್ನು ಬೇರೆಲ್ಲಿಯೂ ಕಾಣಲಾಗುವುದಿಲ್ಲ ಎಂದು ದೃಢನಿಶ್ಚಯಕ್ಕೆ ಬಂದರು. ಸ್ವಾಮಿ ವಿವೇಕಾನಂದರೂ ಕೂಡ ಕೆಲವೇ ದಿನಗಳಲ್ಲಿ ಮತ್ತೆ ಕಾಶೀಪುರಕ್ಕೆ ಹಿಂದಿರುಗಿದರು.

10. ಶ್ರೀರಾಮಕೃಷ್ಣರ ಪರಮ ಭಕ್ತಳೊಬ್ಬಳು ಅವರ ದೇಹ ತ್ಯಾಗಕ್ಕೆ ಕೆಲವು ದಿನಗಳ ಹಿಂದೆ ತಾನು ಬೃಂದಾವನಕ್ಕೆ ಹೋಗಿ ತಪಸ್ಸು ಮಾಡಬೇಕೆಂದು ಆಶಿಸಿದ್ದಳು. ಇದನ್ನು ಶ್ರೀರಾಮಕೃಷ್ಣರಿಗೆ ತಿಳಿಸಿದಾಗ ಅವರೆಂದರು : "ಯಾಕೆ ಹೋಗುತ್ತೀಯೆ ? ಏನು ಮಾಡಲು ಹೋಗುತ್ತೀಯೆ ? ಯಾರಿಗೆ ಇಲ್ಲಿದೆಯೊ ಅವರಿಗೆ ಅಲ್ಲಿಯೂ ಇದೆ. ಯಾರಿಗೆ ಇಲ್ಲಿಲ್ಲವೊ ಅಲ್ಲಿಯೂ ಇಲ್ಲ". ಆದರೆ ಆ ಸ್ತ್ರೀ ಭಕ್ತಳು ಶ್ರೀರಾಮಕೃಷ್ಣರ ಮಾತನ್ನು ಕೇಳದೆ ಹೊರಟುಹೋದಳು. ಆದರೆ ಆ ಸಂದರ್ಭದಲ್ಲಿ ತೀರ್ಥಯಾತ್ರೆಯಿಂದ ಯಾವ ಫಲವೂ ಲಭಿಸಲಿಲ್ಲವೆಂದು ಅವಳು ಮುಂದೆ ನಮಗೆ ಹೇಳಿದಳು. ಇಷ್ಟೇ ಅಲ್ಲದೆ ಮತ್ತೆ ಶ್ರೀರಾಮಕೃಷ್ಣರನ್ನು ನೋಡಲು ಆಕೆಗೆ ಆಗಲಿಲ್ಲ, ಏಕೆಂದರೆ ಅವಳು

ಬೃಂದಾವನಕ್ಕೆ ಹೋದ ಕೆಲವೇ ದಿನಗಳಲ್ಲಿ ಅವರು ದೇಹತ್ಯಾಗ ಮಾಡಿದರು.

11. ಶ್ರೀರಾಮಕೃಷ್ಣರು ವಿಶೇಷ ಮನೋಭಾವದೊಡನೆ ತೀರ್ಥಯಾತ್ರೆಗೆ ಹೋಗಿದ್ದರೆಂಬುದನ್ನು ನಾವು ಅವರ ಬಾಯಿಂದಲೇ ಅನೇಕ ಬಾರಿ ಕೇಳಿರುವೆವು. ಅವರು ಹೇಳುತ್ತಿದ್ದರು : "ಕಾಶಿಯಲ್ಲಿ ಎಲ್ಲರೂ ಇಪ್ಪತ್ತನಾಲ್ಕು ಘಂಟೆಯೂ ಶಿವನ ಧ್ಯಾನ ಮಾಡುತ್ತಾ ಸಮಾಧಿಯಲ್ಲಿರುವುದನ್ನು ನೋಡುತ್ತೇನೆ ಎಂದುಕೊಂಡಿದ್ದೆ. ಬೃಂದಾವನದಲ್ಲಿ ಎಲ್ಲರೂ ಗೋವಿಂದನನ್ನು ನೆನೆಯುತ್ತಾ ಪ್ರೇಮ ವಿಹ್ವಲರಾಗಿರುತ್ತಾರೆ ಎಂದು ಭಾವಿಸಿದ್ದೆ. ಅಲ್ಲಿ ಹೋಗಿ ನೋಡಿದರೆ ಅಲ್ಲಿ ಎಲ್ಲ ತಲೆಕೆಳಗು !" ಶ್ರೀರಾಮ ಕೃಷ್ಣರು ಎಲ್ಲ ಮಾತುಗಳನ್ನು ಐದು ವರ್ಷದ ಬಾಲಕನಂತೆ ಸರಳ ವಿಶ್ವಾಸದಿಂದ ಸ್ವೀಕ ರಿಸುತ್ತಿದ್ದರು. ನಾವು ಬಾಲ್ಯ ಕಾಲದಿಂದಲೂ ಎಲ್ಲ ವಸ್ತುವನ್ನೂ ಮತ್ತು ವ್ಯಕ್ತಿಗಳನ್ನೂ ಸಂದೇಹ ದೃಷ್ಟಿಯಿಂದಲೆ ನೋಡುವುದನ್ನು ಕಲಿತಿರುವೆವು. ನಮ್ಮ ವಿಕೃತ ಮನಸ್ಸಿನಲ್ಲಿ ಆ ರೀತಿ ವಿಶ್ವಾಸ ಉಂಟಾಗುವುದಾದರೂ ಹೇಗೆ ? ಯಾರಾದರೂ ಸರಳ ವಿಶ್ವಾಸ ದಿಂದ ಇತರರ ಮಾತನ್ನು ಸ್ವೀಕರಿಸಿದರೆ, ಅವನನ್ನು ಮೂರ್ಖ ಎಂದು ಕರೆಯುತ್ತೇವೆ. ನಾವು ಶ್ರೀರಾಮಕೃಷ್ಣರ ಬಾಯಿಂದಲೆ ಮೊದಲ ಬಾರಿಗೆ ಈ ಮಾತನ್ನು ಕೇಳಿದ್ದು : "ನೋಡು, ಅನೇಕ ತಪಸ್ಸು, ಅನೇಕ ಸಾಧನೆಗಳ ಫಲವಾಗಿಯೇ ಮನುಷ್ಯನು ಸರಳನೂ, ಉದಾರನೂ ಆಗುತ್ತಾನೆ. ಸರಳನಾಗದೆ ಭಗವಂತನನ್ನು ಪಡೆಯಲಾಗುವುದಿಲ್ಲ. ಸರಳ ವಿಶ್ವಾಸಿಯ ಮುಂದೆಯೇ ಭಗವಂತನು ತನ್ನ ಸ್ವರೂಪವನ್ನು ವ್ಯಕ್ತಪಡಿಸುತ್ತಾನೆ." ಸರಳ ವಿಶ್ವಾಸಿ ಆದರೆ ಮೂರ್ಖನಂತೆ ವರ್ತಿಸಬೇಕೆಂದು ಯಾರಾದರೂ ಭಾವಿಸಬಹು ದೆಂದು ಶ್ರೀರಾಮಕೃಷ್ಣರು, "ಭಕ್ತನಾಗಿರಬೇಕು, ಅಂದ ಮಾತ್ರಕ್ಕೆ ಮೂರ್ಖನಾಗ ಬೇಕೇಕೆ ?" ಎಂದು ಹೇಳುತ್ತಿದ್ದರು. ಮತ್ತೆ ಅವರು ಹೇಳುತ್ತಿದ್ದರು : "ಯಾವಾ ಗಲೂ ಮನಸ್ಸಿನಲ್ಲಿ ಯಾವುದು ಸತ್, ಯಾವುದು ಅಸತ್, ಯಾವುದು ನಿತ್ಯ, ಯಾವುದು ಅನಿತ್ಯ ಎಂದು ವಿಚಾರ ಮಾಡುತ್ತಿರಬೇಕು. ಮತ್ತೆ ಅನಿತ್ಯ ವಸ್ತುಗಳನ್ನು ತ್ಯಜಿಸಿ ನಿತ್ಯ ವಸ್ತುಗಳ ಕಡೆಗೆ ಮನಸ್ಸನ್ನು ಹರಿಸಬೇಕು."

ನಮ್ಮಲ್ಲಿ ಕೆಲವರಿಗೆ ಈ ಎರಡು ಮಾತುಗಳಲ್ಲಿ ಸಾಮಂಜಸ್ಯವನ್ನು ಕಾಣುವುದು ಕಷ್ಟವಾಗುತ್ತಿತ್ತು. ಸ್ವಾಮಿ ಯೋಗಾನಂದರು ಆಗಿನ್ನೂ ಸಂಸಾರವನ್ನು ತ್ಯಜಿಸಿರಲಿಲ್ಲ. ಅವರು ಒಮ್ಮೆ ಒಂದು ಕಬ್ಬಿಣದ ಬಾಣಲೆಯನ್ನು ಕೊಂಡುಕೊಳ್ಳಲು ಬಾಗ್ ಬಜಾರಿಗೆ ಹೋಗಿದ್ದರು. ಅಂಗಡಿಯವನಿಗೆ ಅಧಾರ್ಮಿಕತೆಯ ದುಷ್ಪರಿಣಾಮವನ್ನು ತಿಳಿಸಿ, "ನೋಡು, ಒಳ್ಳೆಯ ವಸ್ತುವನ್ನು ಸರಿಯಾದ ಬೆಲೆಗೆ ಕೊಡು. ಅದು ಒಡೆದಿರಬಾರದು ಅಥವಾ ಅದರಲ್ಲಿ ತೂತೂ ಇರಕೂಡದು" ಎಂದು ಅವನಿಗೆ ಎಚ್ಚರಿಕೆ ಇತ್ತರು. ಅಂಗಡಿ ಯವನು, "ಅಯ್ಯೋ ಸ್ವಾಮಿ, ನಿಮಗೆ ಮೋಸ ಮಾಡುತ್ತೇನೆಯೆ" ಎಂದು ಏನೇನೊ ಹೇಳುತ್ತಾ ಆರಿಸಿ ಆರಿಸಿ ಒಂದು ಬಾಣಲೆಯನ್ನು ತೆಗೆದುಕೊಟ್ಟನು. ಯೋಗಾನಂದರು ಅಂಗಡಿಯವನ ಮಾತನ್ನು ನಂಬಿ ಅದನ್ನು ಪರೀಕ್ಷಿಸದೆಯೆ ತೆಗೆದುಕೊಂಡು ಬಂದರು. ಆದರೆ, ದಕ್ಷಿಣೇಶ್ವರಕ್ಕೆ ಬಂದು ನೋಡುತ್ತಾರೆ ಅದರಲ್ಲಿ ಬಿರುಕು ಬಿಟ್ಟಿದೆ. ಶ್ರೀರಾಮ

ಕೃಷ್ಣರು ಇದನ್ನು ಕೇಳಿ ಹೇಳಿದರು : "ಇದೇನಯ್ಯ ಇದು, ವಸ್ತುವನ್ನು ಕೊಂಡು ಕೊಂಡು ಬರುವಾಗ ಅದನ್ನು ಸರಿಯಾಗಿ ನೋಡಿ ತರಬೇಡವೇ ? ಅಂಗಡಿಯವನು ಕುಳಿತಿರುವುದು ವ್ಯಾಪಾರ ಮಾಡುವುದಕ್ಕೆ. ಅವನು ಧರ್ಮ ಮಾಡುವುದಕ್ಕೆ ಕುಳಿತಿಲ್ಲ. ಅವನನ್ನು ನಂಬಿ ಏಕೆ ಮೋಸಹೋದೆ ? ಭಕ್ತನಾಗಿರಬೇಕು, ಅಂದಮಾತ್ರಕ್ಕೆ ಮೂರ್ಖ ನಾಗಬೇಕೇನು ? ಜನರ ಮೋಸಕ್ಕೆ ಒಳಗಾಗಬೇಕೇನು ? ಮೊದಲು ವಸ್ತುವನ್ನು ಸರಿಯಾಗಿ ಪರೀಕ್ಷಿಸಬೇಕು. ಅನಂತರವೇ ಅಂಗಡಿಯವನಿಗೆ ಹಣ ಕೊಡಬೇಕು. ಮತ್ತೆ ವಸ್ತುವು ತೂಕಕ್ಕೆ ಸರಿಯಾಗಿ ಇದೆಯೆ ಇಲ್ಲವೆ ಎಂಬುದನ್ನೂ ನೋಡಬೇಕು. ಕೆಲವು ವಸ್ತುಗಳನ್ನು ಮಾರುವಾಗ ಅಂಗಡಿಯವರು ಸ್ವಲ್ಪ ಕೊಸರನ್ನು ಕೊಡುತ್ತಾರೆ. ಅದನ್ನು ಬಿಟ್ಟುಬರಕೂಡದು." ಇಂಥ ಎಷ್ಟೋ ಉದಾಹರಣೆಗಳನ್ನು ಕೊಡಬಹುದು. ಆದರೆ ಇಲ್ಲಿ ಅದಕ್ಕೆ ಸ್ಥಳವಿಲ್ಲ. ಇಲ್ಲಿ ನಾವು ಅಪೂರ್ವ ಸರಳತೆ ಮತ್ತು ಅದ್ಭುತ ವಿಚಾರಶೀಲತೆ ಇವೆರಡೂ ಶ್ರೀರಾಮಕೃಷ್ಣರಲ್ಲಿ ಹೇಗೆ ಸಮ್ಮಿಲಿತಗೊಂಡಿದ್ದವು ಎಂಬುದನ್ನು ತಿಳಿಸಿ ನಮ್ಮ ಹಿಂದಿನ ಕಥಾ ಪ್ರಸಂಗಕ್ಕೆ ಬರುತ್ತೇವೆ.

12. ಈ ತೀರ್ಥಯಾತ್ರೆಗೆ ಮಥುರನು ಒಂದು ಲಕ್ಷ ರೂಪಾಯಿಗೂ ಹೆಚ್ಚು ಖರ್ಚು ಮಾಡಿದನೆಂದು ಶ್ರೀರಾಮಕೃಷ್ಣರು ಹೇಳುತ್ತಾರೆ. ಮಥುರನು ಕಾಶಿಗೆ ಹೋದ ಕೂಡಲೇ ಬ್ರಾಹ್ಮಣ ಪಂಡಿತರಿಗೆ ಮೊದಲು ಅನ್ನದಾನ ಮಾಡಿದನು. ಅನಂತರ ಒಂದು ದಿನ ಅವರನ್ನೆಲ್ಲಾ ಸಹಕುಟುಂಬ ಸಮೇತರಾಗಿ ಆಹ್ವಾನಿಸಿ ಪ್ರತಿಯೊಬ್ಬರಿಗೂ ಒಂದೊಂದು ವಸ್ತ್ರ ಒಂದೊಂದು ರೂಪಾಯಿ ದಕ್ಷಿಣೆ ಕೊಟ್ಟನು ಮತ್ತು ಅವರಿಗೆಲ್ಲಾ ಸಂತರ್ಪಣೆ ಮಾಡಿಸಿದನು. ಅನಂತರ ಬೃಂದಾವನಕ್ಕೆ ಹೋಗಿ ಮತ್ತೆ ಕಾಶಿಗೆ ಹಿಂದಿರು ಗಿದ ಮೇಲೆ ಶ್ರೀರಾಮಕೃಷ್ಣರ ಆದೇಶದಂತೆ ಅವನು 'ಕಲ್ಪತರು'ವಾಗಿದ್ದನು. ಅಂದು ಯಾರಾರಿಗೆ ಏನೇನು ಬೇಕೊ ಅದನ್ನೆಲ್ಲಾ ಕೊಟ್ಟನು. ಪಾತ್ರೆ, ಬಟ್ಟೆ, ಕಂಬಳಿ, ಪಾದರಕ್ಷೆ ಮುಂತಾದ ಅನೇಕ ಆವಶ್ಯಕ ವಸ್ತುಗಳನ್ನು ದಾನಮಾಡಿದನು. ಮೊದಲನೆಯ ದಿನ ಅನ್ನ ದಾನದ ಸಂದರ್ಭದಲ್ಲಿ ಬ್ರಾಹ್ಮಣರ ನಡುವೆ ತುಂಬಾ ಜಗಳ, ಕದನ, ಕೋಲಾಹಲ ನಡೆ ದಿತ್ತು. ಇದನ್ನು ನೋಡಿ ಶ್ರೀರಾಮಕೃಷ್ಣರು ತುಂಬಾ ಬೇಸರಗೊಂಡರು. ಕಾಶಿ ಯಲ್ಲಿಯೂ ಇತರ ಕಡೆಗಳಂತೆ ಜನರು ಕಾಮಕಾಂಚನಾಸಕ್ತರಾಗಿರುವುದನ್ನು ನೋಡಿ ತುಂಬಾ ಹತಾಶಭಾವ ಅವರಲ್ಲಿ ಉಂಟಾಗಿತ್ತು. ಅವರು ಕಂಬನಿಗರೆಯುತ್ತಾ ಜಗನ್ಮಾತೆಗೆ ಹೇಳಿದ್ದರು : "ತಾಯಿ, ನೀನು ಏಕೆ ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದೆ? ದಕ್ಷಿಣೇಶ್ವರ ದಲ್ಲೆ ನಾನು ತುಂಬಾ ಚೆನ್ನಾಗಿದ್ದೆ."

13. ಈ ರೀತಿ ಸಾಧಾರಣ ವ್ಯಕ್ತಿಗಳ ವಿಷಯಾನುರಾಗವನ್ನು ಕಂಡು ವ್ಯಥಿತ ರಾದರೂ ಅಲ್ಲಿ ಅವರಿಗೆ ಅದ್ಭುತ ಆಧ್ಯಾತ್ಮಿಕ ದರ್ಶನಗಳು ಆಗಿದ್ದವು. ಶಿವನ ಮಹಿಮೆ ಮತ್ತು ಕಾಶಿಯ ಮಹಾತ್ಮೆ ಇವುಗಳ ವಿಷಯದಲ್ಲಿ ಅವರಿಗೆ ದೃಢ ವಿಶ್ವಾಸ ಉಂಟಾ ಗಿತ್ತು. ನೌಕೆಯ ಮೂಲಕ ವಾರಾಣಸಿಯನ್ನು ಪ್ರವೇಶಿಸುತ್ತಿರುವಾಗಲೇ ಶಿವಪುರಿಯು ನಿಜವಾಗಿಯೂ ಸುವರ್ಣನಿರ್ಮಿತವಾದುದೆಂದು ಶ್ರೀರಾಮಕೃಷ್ಣರು ತಮ್ಮ ದಿವ್ಯ

ದೃಷ್ಟಿಯಿಂದ ನೋಡಿದರು. ಅಲ್ಲಿ ಮಣ್ಣು ಮತ್ತು ಕಲ್ಲಿನಿಂದ ನಿರ್ಮಿತವಾದುದು ಯಾವುದೂ ಇಲ್ಲವೆಂದು ಅವರು ಕಂಡರು. ಅಸಂಖ್ಯ ಭಕ್ತರ ಆಧ್ಯಾತ್ಮಿಕ ಭಾವದ ಅಮೂಲ್ಯ ಸುವರ್ಣರಾಶಿಯು ಅನೇಕ ಯುಗಗಳಿಂದ ಪದರ ಪದರವಾಗಿ ಕೂಡಿಹಾಕಲ್ಪಟ್ಟು ಇಂದಿನ ಸುವರ್ಣನಗರವಾಗಿ ಕಾಣಿಸಿತು. ಈ ಜ್ಯೋತಿರ್ಮಯ ಭಾವಘನ ಮೂರ್ತಿಯೇ ಇದರ ನಿಜವಾದ ರೂಪ. ಹೊರಗೆ ಕಾಣಿಸುವುದು ಕೇವಲ ಅದರ ಛಾಯೆ ಮಾತ್ರ.

14. ಸ್ಥೂಲದೃಷ್ಟಿಯಿಂದಲೂ ಕಾಶಿಯನ್ನು ಸುವರ್ಣನಗರವೆಂದು ಕರೆಯಲು ಸಾಧ್ಯವಿದೆ. ಕಾಶಿಯಲ್ಲಿ ಅಸಂಖ್ಯ ದೇವಸ್ಥಾನಗಳು, ವಿಶಾಲ ಭವನಗಳು ಇವೆ. ಗಂಗೆಯ ತೀರದಲ್ಲಿ ಎರಡು ಮೈಲಿದೂರ ಕಲ್ಲಿನಲ್ಲಿ ಕಟ್ಟಿದ ವಿಶಾಲ ಮೆಟ್ಟಲುಗಳಿಂದ ಕೂಡಿದ ಅಸಂಖ್ಯ ಸ್ನಾನಘಟ್ಟಗಳಿವೆ. ಅಸಂಖ್ಯ ನೀರಿನ ಕಾಲುವೆ, ಬಾವಿ, ಕೊಳ ಮುಂತಾದುವುಗಳಿಂದ ಕೂಡಿದ, ತೋರಣದಿಂದ ಭೂಷಿತವಾದ ಅನೇಕ ರಸ್ತೆಗಳಿವೆ. ಮಠಗಳು, ಉದ್ಯಾನ ಗೃಹಗಳು ಬೇಕಾದಷ್ಟಿವೆ. ಅನೇಕ ಕಡೆಗಳಲ್ಲಿ ಬ್ರಾಹ್ಮಣ ವಿದ್ಯಾರ್ಥಿಗಳಿಗೆ, ಸಾಧುಗಳಿಗೆ ಮತ್ತು ಬಡಜನರಿಗೆ ಅನ್ನದಾನದ ಛತ್ರಗಳಿವೆ. ಇವನ್ನೆಲ್ಲಾ ನೋಡಿದಮೇಲೆ ಪುರಾತನ ಕಾಲದಿಂದಲೂ ದೇಶದ ಹಲವು ಕಡೆಗಳಿಂದ ಚಿನ್ನದರಾಶಿ ಅಲ್ಲಿಗೆ ಬಂದು ಬೀಳುತ್ತಿತ್ತು ಎಂಬುದನ್ನು ಯಾರುತಾನೆ ಒಪ್ಪುವುದಿಲ್ಲ? ಭಾರತ ವರ್ಷದ ಮೂವತ್ತು ಕೋಟಿ ಜನರ ಭಕ್ತಿ ಭಾವವು ಎಷ್ಟೋಂದು ಕಾಲದಿಂದ ಈ ನಗರದಲ್ಲಿ ಸಮ್ಮಿಲಿತವಾಗಿ, ಇದಕ್ಕೆ ಈ ಬಾಹ್ಯರೂಪವನ್ನು ಕೊಟ್ಟಿದೆ—ಈ ವಿಷಯವನ್ನು ನೆನೆಸಿಕೊಂಡಾಗ ಯಾರಿಗೆ ತಾನೆ ಆಶ್ಚರ್ಯವಾಗದು ? ತುಂಬು ಭಾವ ಪ್ರವಾಹದ ಅದಮ್ಯ ವೇಗವನ್ನು ನೋಡಿ ಯಾರು ತಾನೆ ಮುಗ್ಧರಾಗದಿರರು ? ಅದರ ಉತ್ಪತ್ತಿ ಹೇಗಾಯಿತೆಂಬುದನ್ನು ನಿರ್ಣಯಿಸಲಾಗದೆ ಯಾರು ತಾನೆ ಸ್ಥಂಭೀಭೂತರಾಗಲಾರರು ? ಇದನ್ನೆಲ್ಲ ಪರಿಶೀಲಿಸಿದಾಗ ಇದು ನಿಜವಾಗಿಯೂ ಅತುಲನೀಯ ಸೃಷ್ಟಿ, ಇದು ಖಂಡಿತ ಮಾನವಕೃತ ಅಲ್ಲ ಎಂದೆನಿಸುತ್ತದೆ. ಅಸಹಾಯಕ ಜೀವಗಳ ಮೇಲಿನ ಕರುಣೆಯಿಂದ ಆರ್ತ ಶರಣನಾದ ವಿಶ್ವನಾಥನ ಅಪಾರ ಕೃಪೆಯೇ ಇದನ್ನು ಸೃಷ್ಟಿಸಿದೆ ಎಂದೆನಿಸುತ್ತದೆ. ಅವನ ಸಾಕ್ಷಾತ್ ಶಕ್ತಿಯೇ ಶ್ರೀ ಅನ್ನಪೂರ್ಣೆಯ ರೂಪದಲ್ಲಿ ಇಲ್ಲಿ ಪ್ರತಿಷ್ಠಿತಳಾಗಿರುವಳು. ಅವಳೇ ಜೀವಿಗಳ ಅನ್ನಮಯ ಮತ್ತು ಪ್ರಾಣಮಯ ಕೋಶಗಳನ್ನು ಅನ್ನವಿತರಣೆಯ ಮೂಲಕ ಪೋಷಿಸುತ್ತಿರುವಳು ಮತ್ತು ಆಧ್ಯಾತ್ಮಿಕ ಭಾವವಿತರಣೆಯ ಮೂಲಕ ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಶರೀರಗಳನ್ನು ಪೋಷಿಸುತ್ತಿರುವಳು. ಅವಳೇ ಆ ಜೀವಿಗಳು ಬಹುಬೇಗನೆ ಶ್ರೀ ವಿಶ್ವನಾಥನೊಡನೆ ಒಂದಾಗಿ ಮುಕ್ತಿ ಪಡೆಯುವಂತೆ ಮಾಡುತ್ತಿರುವಳು. ಇದನ್ನೆಲ್ಲಾ ಭಾವಿಸಿ ಯಾರು ತಾನೆ ವಿಸ್ಮಯದಿಂದಲೂ ಭಕ್ತಿಪೂರ್ಣ ಹೃದಯದಿಂದಲೂ ತಲೆ ಬಾಗುವುದಿಲ್ಲ ? ಭಾವಮುಖದಲ್ಲಿದ್ದ ಶ್ರೀರಾಮಕೃಷ್ಣರು ಇಲ್ಲಿಗೆ ಬಂದಕೂಡಲೇ ಈ ದಿವ್ಯ ಸುವರ್ಣಮಯ ಭಾವಪ್ರವಾಹವು ಶಿವಪುರಿಯಲ್ಲಿ ಎಲ್ಲೆಲ್ಲಿಯೂ ಓತಪ್ರೋತವಾಗಿರುವಂತೆ ಕಂಡರು. ಆ ಭಾವ ಪ್ರವಾಹವೇ ಘನೀಭೂತ

ವಾಗಿ ಸುವರ್ಣ ನಗರಿಯಂತೆ ಅವರಿಗೆ ಕಂಡಿರುವುದರಲ್ಲಿ ಆಶ್ಚರ್ಯವೇನು ?

15. ಪ್ರಕಾಶಸ್ವರೂಪವಾದ ಪದಾರ್ಥವನ್ನೇ ಹಿಂದುವು ಸತ್ತ್ವಗುಣದಿಂದುಂಟಾದುದು ಮತ್ತು ಪವಿತ್ರವಾದುದು ಎಂದು ಪರಿಗಣಿಸುವುದು. ಬೆಳಕಿನಿಂದಲೇ ಸಕಲ ಪದಾರ್ಥಗಳು ಉದ್ಭವಿಸಿರುವುವು. ಆದ್ದರಿಂದ ಬೆಳಕು ಅಥವಾ ಉಜ್ಜ್ವಲತೆ ನಮಗೆ ಪವಿತ್ರವಾದುದು. ದೇವತೆಯ ಮುಂದೆ ದೀಪವನ್ನು ಬೆಳಗಿಸುವುದು, ದೇವದೇವಿಯರ ಮುಂದಿಟ್ಟ ದೀಪವು ಆರದಂತೆ ನೋಡಿಕೊಳ್ಳುವುದು ಇವೇ ಮುಂತಾದ ಶಾಸ್ತ್ರವಿಧಿಗಳು ಈ ಮೇಲಿನ ಮಾತನ್ನು ಪುಷ್ಟೀಕರಿಸುವುವು. ಉಜ್ಜ್ವಲ ಪ್ರಕಾಶದಿಂದ ಕೂಡಿದ ಚಿನ್ನವೇ ಮುಂತಾದ ವಸ್ತುಗಳನ್ನು ಪವಿತ್ರವೆಂದು ಪರಿಗಣಿಸುವುದು, ಶರೀರದ ಕೆಳಭಾಗದಲ್ಲಿ ಸುವರ್ಣದ ಆಭರಣಗಳನ್ನು ತೊಡದಿರುವುದು, ಇದೇ ನಿಯಮವನ್ನು ಅವಲಂಬಿಸಿರಬೇಕು. ವಾರಾಣಸಿಯನ್ನು ಯಾವಾಗಲೂ ಸುವರ್ಣಮಯವೆಂದು ಕಾಣುತ್ತಿದ್ದುದರಿಂದ ಅಲ್ಲಿ ಶೌಚಾದಿಗಳನ್ನು ಮಾಡಿದರೆ ಸುವರ್ಣವು ಅಪವಿತ್ರವಾಗುವುದೆಂದು ಬಾಲಕ ಸ್ವಭಾವದ ಶ್ರೀರಾಮಕೃಷ್ಣರು ಮೊದಮೊದಲು ತುಂಬಾ ಚಿಂತಿತರಾಗಿದ್ದರು. ಅದಕ್ಕಾಗಿ ಅವರು ಮಥುರನಿಗೆ ಹೇಳಿ ಪಲ್ಲಕ್ಕಿಯ ವ್ಯವಸ್ಥೆ ಮಾಡಿಕೊಂಡು ಅಸಿ ನದಿಯನ್ನು ದಾಟಿ ಹೋಗಿ ಶೌಚಾದಿಗಳನ್ನು ಮಾಡಿ ಬರುತ್ತಿದ್ದರು. ಅನಂತರ ಈ ಭಾವವು ವಿರಮಿಸಿದ ಮೇಲೆ ಅವರು ಆ ರೀತಿ ಮಾಡುತ್ತಿರಲಿಲ್ಲ.

16. ಕಾಶಿಯಲ್ಲಾದ ಇನ್ನೊಂದು ದರ್ಶನದ ಬಗ್ಗೆ ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಅಲ್ಲಿ ಮಣಿಕರ್ಣಿಕಾ ಮುಂತಾದ ಪಂಚ ತೀರ್ಥಗಳ ದರ್ಶನಕ್ಕಾಗಿ ಅನೇಕರು ಗಂಗಾನದಿಯ ಮೇಲೆ ನೌಕೆಯಲ್ಲಿ ಹೋಗುತ್ತಾರೆ. ಮಥುರನು ಶ್ರೀರಾಮಕೃಷ್ಣರನ್ನು ಕರೆದುಕೊಂಡು ಹಾಗೆಯೇ ಹೋಗುತ್ತಿದ್ದನು. ಮಣಿಕರ್ಣಿಕೆಯ ಪಕ್ಕದಲ್ಲಿಯೇ ಕಾಶಿಯ ಪ್ರಧಾನ ಸ್ಮಶಾನಭೂಮಿ ಇರುವುದು. ಮಥುರನ ನೌಕೆಯು ಮಣಿಕರ್ಣಿಕ ಘಟ್ಟದ ಹತ್ತಿರ ಬಂದಿತು. ಆಗ ಸ್ಮಶಾನಭೂಮಿಯು ಚಿತಾಧೂಮದಿಂದ ವ್ಯಾಪ್ತವಾಗಿತ್ತು, ಮೃತದೇಹಗಳೆಲ್ಲವೂ ಅಲ್ಲೇ ದಹಿಸಲ್ಪಡುತ್ತಿದ್ದುವು. ಭಾವಮಯರಾದ ಶ್ರೀರಾಮಕೃಷ್ಣರ ದೃಷ್ಟಿಯು ಆ ಕಡೆ ಹೊರಳಿತು. ಆನಂದದಿಂದ ಅವರು ರೋಮಾಂಚನಗೊಂಡು ಇದ್ದಕ್ಕಿದ್ದಂತೆಯೆ ನೌಕೆಯ ಹೊರಭಾಗಕ್ಕೆ ಓಡಿಬಂದರು. ನೌಕೆಯ ತುದಿಯಲ್ಲಿ ನಿಂತು ಸಮಾಧಿಸ್ಥರಾದರು. ಇತರರು ಅವರು ಎಲ್ಲಿ ನೀರಿಗೆ ಬೀಳುವರೊ ಎಂದು ಹಿಡಿದುಕೊಳ್ಳಲು ಓಡಿಬಂದರು. ಆದರೆ ಅವರನ್ನು ಹಿಡಿದುಕೊಳ್ಳುವ ಆವಶ್ಯಕತೆಯಿರಲಿಲ್ಲ, ಶ್ರೀರಾಮಕೃಷ್ಣರು ಸ್ಥಿರವಾಗಿ ನಿಶ್ಚೇಷ್ಟರಾಗಿ ನಿಂತುಕೊಂಡಿದ್ದರು ಮತ್ತು ಅವರ ಮುಖಮಂಡಲವು ಅದ್ಭುತ ಜ್ಯೋತಿಯಿಂದ ಮತ್ತು ಮಂದಹಾಸದಿಂದ ಬೆಳಗುತ್ತಿತ್ತು. ಅವರು ಆ ಪ್ರದೇಶವನ್ನೇ ಜ್ಯೋತಿರ್ಮಯಗೊಳಿಸಿದಂತೆ ಕಾಣುತ್ತಿತ್ತು. ಮಥುರ ಮತ್ತು ಹೃದಯ ಎಚ್ಚರಿಕೆಯಿಂದ ಶ್ರೀರಾಮಕೃಷ್ಣರ ಹತ್ತಿರ ನಿಂತುಕೊಂಡರು. ನೌಕೆ ನಡೆಸುವವರೇ ಮುಂತಾದವರು ಆಶ್ಚರ್ಯಚಕಿತರಾಗಿ ಈ ಅದ್ಭುತ ದೃಶ್ಯವನ್ನು ನೋಡುತ್ತಿದ್ದರು. ಸ್ವಲ್ಪ ಹೊತ್ತಿನ ನಂತರ ಈ ದಿವ್ಯ ಭಾವವು ವಿರಮಿಸಿದ ಮೇಲೆ ಎಲ್ಲರೂ

ನೌಕೆಯಿಂದಿಳಿದು ಮಣಿಕರ್ಣಿಕೆಗೆ ಹೋದರು. ಅಲ್ಲಿ ಮಾಡಬೇಕಾದ ಸ್ನಾನ ದಾನಾದಿ ವಿಧಿಗಳನ್ನೆಲ್ಲಾ ಮುಗಿಸಿ ಪುನಃ ನೌಕೆಯನ್ನೇರಿ ಎಲ್ಲರೂ ಮುಂದೆ ಸಾಗಿದರು.

ಅನಂತರ ಶ್ರೀರಾಮಕೃಷ್ಣರು ತಮಗಾದ ಅದ್ಭುತ ದರ್ಶನವನ್ನು ಮಥುರನೇ ಮುಂತಾದವರಿಗೆ ಹೇಳತೊಡಗಿದರು : "ಪಿಂಗಲ ವರ್ಣದ ಜಟಾಧಾರಿಯಾದ ದೀರ್ಘ ಕಾಯನಾದ ಶ್ವೇತ ವರ್ಣದ ವ್ಯಕ್ತಿಯೊಬ್ಬನು ಗಂಭೀರ ನಡೆಯಲ್ಲಿ ಪ್ರತಿಯೊಂದು ಚಿತೆಯ ಹತ್ತಿರವೂ ಹೋಗುತ್ತಿದ್ದುದನ್ನು ಕಂಡೆನು. ಅವನು ಪ್ರತಿಯೊಂದು ದೇಹಿ ಯನ್ನು ಪ್ರಯತ್ನಪೂರ್ವಕವಾಗಿ ಮೇಲೆತ್ತಿ ಅವರ ಕಿವಿಯಲ್ಲಿ ತಾರಕ ಬ್ರಹ್ಮ ಮಂತ್ರ ವನ್ನು ಉಚ್ಚರಿಸುತ್ತಿದ್ದುದನ್ನು ಕಂಡೆನು. ಸರ್ವಶಕ್ತಿಮಯಿಯಾದ ಜಗದಂಬೆಯು ಮಹಾಕಾಳಿಯ ರೂಪದಲ್ಲಿ ಇನ್ನೊಂದು ಕಡೆ ಕುಳಿತು ಜೀವಿಯ ಸ್ಥೂಲ, ಸೂಕ್ಷ್ಮ, ಕಾರಣ ಮುಂತಾದ ಎಲ್ಲ ಸಂಸ್ಕಾರ ಬಂಧನಗಳನ್ನು ಬಿಡಿಸುತ್ತಿದ್ದಳು. ಹೀಗೆ ನಿರ್ವಾಣ ದ್ವಾರವನ್ನು ತೆರೆದು ತನ್ನ ಕೈಯಿಂದಲೇ ಅವರಿಗೆ ಮುಕ್ತಿಯನ್ನು ನೀಡುತ್ತಿದ್ದಳು. ಅನೇಕ ಯುಗಗಳ ತಪಸ್ಸಿನಿಂದ ಲಭಿಸಬಹುದಾದ ಅದ್ವೈತಾನುಭವದ ಪರಮಾನಂದ ವನ್ನು ಒಂದೇ ಕ್ಷಣದಲ್ಲಿ ಜೀವಿಯು ಪಡೆಯುವಂತೆ ವಿಶ್ವನಾಥನು ಮಾಡುತ್ತಿದ್ದನು."

ಮಥುರನೊಡನಿದ್ದ ಶಾಸ್ತ್ರಜ್ಞರಾದ ಪಂಡಿತರು ಶ್ರೀರಾಮಕೃಷ್ಣರ ಈ ದರ್ಶನದ ವಿಷಯವನ್ನು ಕೇಳಿ ಹೇಳಿದರು : "ಇಲ್ಲಿ ಮೃತ್ಯು ಉಂಟಾದರೆ ವಿಶ್ವನಾಥನು ಜೀವನಿಗೆ ನಿರ್ವಾಣ ಪದವಿಯನ್ನು ನೀಡುತ್ತಾನೆ ಎಂದು ಕಾಶೀಖಂಡದಲ್ಲಿ ಹೇಳಲಾಗಿದೆ. ಆದರೆ ಅದು ಯಾವ ರೀತಿ ಆಗುತ್ತದೆ ಎಂಬುದರ ವಿವರಣೆ ಅದರಲ್ಲಿಲ್ಲ. ನಿಮ್ಮ ದರ್ಶನದಿಂದ ಅದು ಯಾವ ರೀತಿ ಆಗುತ್ತದೆ ಎಂಬುದನ್ನು ಸ್ಪಷ್ಟವಾಗಿ ಅರಿಯಬಹುದಾಗಿದೆ, ನಿಮ್ಮ ದರ್ಶನಗಳು ಶಾಸ್ತ್ರವನ್ನೂ ಮೀರಿ ಹೋಗುತ್ತವೆ."

17. ಶ್ರೀರಾಮಕೃಷ್ಣರು ಕಾಶಿಯಲ್ಲಿದ್ದಾಗ ಅಲ್ಲಿಯ ಪ್ರಸಿದ್ಧ ಸಾಧುಗಳನ್ನು ನೋಡಲು ಹೋಗಿದ್ದರು. ಅವರ ಪೈಕಿ ತೈಲಂಗ ಸ್ವಾಮಿಗಳ ಮೇಲೆ ಅವರಿಗೆ ವಿಶೇಷ ಪ್ರೀತಿ ಉಂಟಾಗಿತ್ತು. ಅವರ ಬಗ್ಗೆ ಶ್ರೀರಾಮಕೃಷ್ಣರು ಬಹಳವಾಗಿ ಹೇಳುತ್ತಿದ್ದರು : "ಸಾಕ್ಷಾತ್ ವಿಶ್ವನಾಥನೇ ಅವರ ಶರೀರವನ್ನು ಆಶ್ರಯಿಸಿಕೊಂಡು ಪ್ರಕಾಶಿಸುತ್ತಿರು ವಂತೆ ಕಂಡಿತು. ಅವರು ಅಲ್ಲಿರುವುದರಿಂದ ಕಾಶಿಯು ಉಜ್ಜ್ವಲವಾಗಿ ಬೆಳಗುತ್ತಿದೆ. ಅವರು ಉನ್ನತ ಜ್ಞಾನಾವಸ್ಥೆಯಲ್ಲಿರುವರು. ಅವರಿಗೆ ಶರೀರ ಪ್ರಜ್ಞೆಯೇ ಇಲ್ಲ, ಬಿಸಿಲಿನಿಂದ ಮರಳು ಎಷ್ಟು ಕಾದಿತ್ತೆಂದರೆ, ಅದರ ಮೇಲೆ ಕಾಲಿಡುವುದೂ ಅಸಾಧ್ಯ. ಹಾಗಿರುವಾಗ ಅವರು ಅದರ ಮೇಲೆ ಸುಖವಾಗಿ ಮಲಗಿಕೊಂಡಿದ್ದರು. ನಾನು ಅಕ್ಕಿಯ ಪಾಯಸವನ್ನು ಮಾಡಿ ಅವರಿಗೆ ತೆಗೆದುಕೊಂಡು ಹೋಗಿ ಉಣಿಸಿದೆ. ಅವರು ಆಗ ಮಾತನಾಡುತ್ತಿರಲಿಲ್ಲ. ಮೌನಿಯಾಗಿದ್ದರು. ನಾನು ಸನ್ನೆಯ ಮೂಲಕ ದೇವರೊಬ್ಬನೇ ಅಥವಾ ಅನೇಕನೇ ಎಂದು ವಿಚಾರಿಸಿದೆ. ಅವರೂ ಸನ್ನೆಯ ಮೂಲಕ ಉತ್ತರಿಸಿದರು: 'ಸಮಾಧಿಯಲ್ಲಿರುವಾಗ ಒಬ್ಬನೇ. ಅದಿಲ್ಲದೆ ನಾನು, ನೀನು, ಜೀವ, ಜಗತ್ತು ಇತ್ಯಾದಿ ನಾನಾತ್ತ್ವದ ಜ್ಞಾನವಿರುವಾಗ ಅನೇಕ'. ಅವರನ್ನು ತೋರಿಸಿ ಹೃದಯನಿಗೆ ಹೇಳಿದೆ:

'ಇದನ್ನೇ ನಿಜವಾದ ಪರಮಹಂಸಾವಸ್ಥೆ ಎನ್ನುವುದು' ಎಂದು."

18. ಕಾಶಿಯಲ್ಲಿ ಕೆಲವು ಕಾಲವಿದ್ದು ಶ್ರೀರಾಮಕೃಷ್ಣರು ಮಥುರನೊಡನೆ ಬೃಂದಾವನಕ್ಕೆ ಹೋದರು. ಅಲ್ಲಿ ಬಾಂಕಾವಿಹಾರಿ ಮೂರ್ತಿಯನ್ನು ನೋಡಿ ಅದ್ಭುತ ಭಾವಾವೇಶ ಉಂಟಾಗಿತ್ತು, ಮೈ ಮರೆತು ಆ ಮೂರ್ತಿಯನ್ನು ಆಲಿಂಗಿಸಲು ಓಡಿದ್ದರಂತೆ. ಸಂಧ್ಯಾಕಾಲದಲ್ಲಿ ಗೋಪಾಲಕರು ಹಸುಗಳನ್ನು ಹುಲ್ಲುಗಾವಲಿನಿಂದ ಹಿಂದಿರುಗಿಸಿಕೊಂಡು ಬರುತ್ತಿರುವುದನ್ನು ನೋಡಿದಾಗ ನವಿಲುಗರಿಯಿಂದ ಶೋಭಿಸುವ ಶ್ಯಾಮಲಾಂಗನಾದ ಗೋಪಾಲಕೃಷ್ಣನ ದರ್ಶನವಾಗಿ ಅವರು ಪ್ರೇಮೋನ್ಮತ್ತರಾಗಿದ್ದರು. ಶ್ರೀರಾಮಕೃಷ್ಣರು ಇಲ್ಲಿ ನಿಧುವನ, ಗೋವರ್ಧನ ಮುಂತಾದ ಕೆಲವು ಸ್ಥಳಗಳನ್ನು ಸಂದರ್ಶಿಸಿದ್ದರು. ಈ ಕೆಲವು ಪೂಜ್ಯಸ್ಥಾನಗಳು ಅವರಿಗೆ ಬೃಂದಾವನಕ್ಕಿಂತ ಹೆಚ್ಚು ಮೆಚ್ಚಿಗೆಯಾಗಿದ್ದವು. ಇಲ್ಲಿಯೇ ಅವರಿಗೆ ವ್ರಜೇಶ್ವರೀ ಶ್ರೀರಾಧೆಯ ಮತ್ತು ಶ್ರೀಕೃಷ್ಣರ ವಿವಿಧ ಬಗೆಯ ದರ್ಶನಗಳಾಗಿ ಅದ್ಭುತ ಪ್ರೇಮಾನಂದವನ್ನು ಅನುಭವಿಸಿದ್ದರು. ಅವರು ಗೋವರ್ಧನ ವನ್ನು ನೋಡುವುದಕ್ಕೆ ಹೋಗುವಾಗ ಮಥುರನು ಪಲ್ಲಕ್ಕಿಯನ್ನು ಕಳಿಸಿದ್ದನು. ಪಲ್ಲಕ್ಕಿಯ ಒಂದು ಭಾಗದಲ್ಲಿ ಒಂದು ಬಟ್ಟೆಯನ್ನು ಹಾಸಿ ಅವನು ಒಂದು ರೂಪಾಯಿ, ಅರ್ಧ ರೂಪಾಯಿ, ನಾಲ್ಕಾಣೆ, ಎರಡಾಣೆ, ಇತ್ಯಾದಿ ನಾಣ್ಯಗಳ ರಾಶಿಯನ್ನೇ ಇಟ್ಟಿದ್ದನಂತೆ. ಶ್ರೀರಾಮಕೃಷ್ಣರು ಅಲ್ಲಿ ಬಡವರಿಗೆ ಮತ್ತು ಅರ್ಚಕರಿಗೆ ಈ ಹಣವನ್ನು ಕಾಣಿಕೆಯಾಗಿ ನೀಡಲಿ ಎಂಬ ದೃಷ್ಟಿಯಿಂದ ಅವನು ಆ ರೀತಿ ಮಾಡಿದ್ದನು. ಆದರೆ ಅವರು ಅಲ್ಲಿ ಭಾವಾವೇಶದಲ್ಲಿ ಎಷ್ಟೋಂದು ಮೈಮರೆತರೆಂದರೆ ಆ ಹಣಕ್ಕೆ ಕೈ ಹಾಕಿ ದಾನ ಮಾಡುವ ಸ್ಥಿತಿಯಲ್ಲಿರಲಿಲ್ಲ. ಅವರು ಆ ವಸ್ತ್ರದ ಒಂದು ತುದಿಯನ್ನು ಹಿಡಿದು ಆಯಾಯ ಸ್ಥಾನದಲ್ಲಿ ಬಡವರ ಮುಂದೆ ನಾಣ್ಯಗಳನ್ನು ಚೆಲ್ಲುತ್ತಿದ್ದರು.

19. ಶ್ರೀರಾಮಕೃಷ್ಣರು ಈ ವ್ರಜಸ್ಥಾನಗಳಲ್ಲಿ ಅನೇಕ ಸಾಧಕರು ತಮ್ಮ ತಮ್ಮ ಕೂಪ*ದೊಳಗೆ ಬಾಗಿಲಿಗೆ ಬೆನ್ನು ಹಾಕಿಕೊಂಡು ಕುಳಿತು ಹೊರಗಿನ ಯಾವ ವಿಷಯವನ್ನೂ ಗಮನಿಸದೆ ಜಪ ಧ್ಯಾನದಲ್ಲಿ ಮಗ್ನರಾಗಿರುವುದನ್ನು ಕಂಡರು. ವ್ರಜದ ಪ್ರಾಕೃತಿಕ ಸೌಂದರ್ಯ, ಹೂವು ಹಣ್ಣುಗಳಿಂದ ಶೋಭಿತವಾದ ಚಿಕ್ಕ ಗೋವರ್ಧನಗಿರಿ, ಕಾಡಿನ ಮಧ್ಯದಲ್ಲಿ ಜಿಂಕೆ, ನವಿಲುಗಳು ನಿಶ್ಶಂಕೆಯಿಂದ ಓಡಾಡುವುದು, ಸಾಧು ತಪಸ್ವಿಗಳ ನಿರಂತರ ಭಗವಚ್ಚಿಂತನೆ ಮತ್ತು ಸರಳ ವ್ರಜವಾಸಿಗಳ ನಿಷ್ಕಪಟ ವ್ಯವಹಾರ ಇವೆಲ್ಲಾ ಶ್ರೀರಾಮಕೃಷ್ಣರ ಮನಸ್ಸನ್ನು ತುಂಬಾ ಆಕರ್ಷಿಸಿದುವು. ನಿಧುವನದಲ್ಲಿ ಪ್ರೇಮಸಿದ್ಧಳಾದ ವೃದ್ಧತಪಸ್ವಿನಿ ಗಂಗಾಮಾತೆಯನ್ನು ನೋಡಿದರು. ಆಕೆಯ ಮಧುರ ಸಂಗದಿಂದ ಅವರು ಎಷ್ಟೊಂದು ಮೋಹಿತರಾದರೆಂದರೆ ಬೃಂದಾವನವನ್ನು ಬಿಟ್ಟು ಬೇರೆಲ್ಲಿಗೂ

*ಬಿದುರಿನ ತಡಿಕೆಯಿಂದ ಮಾಡಿದ ಒಬ್ಬರು ಮಾತ್ರ ವಾಸಿಸಲು ಯೋಗ್ಯವಾದ ಸಣ್ಣ ಕೋಣೆಯನ್ನು ಕೂಪ ಎಂದು ಕರೆಯುತ್ತಾರೆ. ಬಾಳೆಹೂವನ್ನು ಮಧ್ಯದಲ್ಲಿ ಕತ್ತರಿಸಿ ಅದನ್ನು ಕವಿಚಿಟ್ಟರೆ ಹೇಗೆ ಕಾಣಿಸುವುದೊ ಈ ಕೋಣೆಗಳು ಹಾಗೆಯೇ ಇರುತ್ತಿದ್ದುವು.

ಹೋಗುವುದೇ ಬೇಡ ಎಂದೆನಿಸಿತ್ತು ಅವರಿಗೆ. ಇಲ್ಲಿಯೇ ಜೀವಿತದ ಕೊನೆಯುವರೆಗೂ ಇದ್ದು ಬಿಡುವುದೆಂದು ಅಂದುಕೊಂಡಿದ್ದರು.

20, ಗಂಗಾಮಾತೆಗೆ ಆಗ ಅರವತ್ತುವರ್ಷ ಇದ್ದಿರಬಹುದು. ಬಹಳ ಕಾಲದಿಂದ ಆಕೆಯು ಶ್ರೀರಾಧೆ ಮತ್ತು ಭಗವಾನ್ ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ಭಕ್ತಿ ಪರವಶಳಾಗಿ ಕಾಲ ಕಳೆಯುತ್ತಿದ್ದಳು. ಅವಳ ಪರಮ ಪ್ರೇಮವನ್ನು ಕಂಡು ಶ್ರೀರಾಧೆಯ ಪ್ರಧಾನ ಸಖಿಯಾದ ಲಲಿತೆಯು ಯಾವುದೋ ಕಾರಣದಿಂದ ದೇಹವನ್ನು ಧರಿಸಿ ಬಂದು ಜೀವಿಗಳಿಗೆ ಪ್ರೇಮ ಶಿಕ್ಷಣವನ್ನು ನೀಡುತ್ತಿರುವಳು ಎಂದು ಅಲ್ಲಿನ ಜನರು ಭಾವಿಸಿದ್ದರು. ಅವಳು ಶ್ರೀರಾಮಕೃಷ್ಣರನ್ನು ನೋಡಿದ ಕೂಡಲೇ ಶ್ರೀರಾಧೆಯಂತೆಯೆ ಮಹಾಭಾವವು ಅವರಲ್ಲಿ ಪ್ರಕಾಶಿಸುತ್ತಿದೆ ಎಂದು ಕಂಡುಕೊಂಡಳು. ಆದ್ದರಿಂದ ಶ್ರೀರಾಮಕೃಷ್ಣರನ್ನು ರಾಧೆಯ ಅವತಾರವೆಂದೇ ಭಾವಿಸಿ "ದುಲಾಲಿ" ಎಂದು ಸಂಬೋಧಿಸುತ್ತಿದ್ದಳು. 'ದುಲಾಲಿ'ಯ ಅನಿರೀಕ್ಷಿತ ದರ್ಶನದಿಂದ ಗಂಗಾಮಾತೆಯು ತಾನು ಧನ್ಯಳೆಂದು ಭಾವಿಸಿದಳು. ತನ್ನ ಇಷ್ಟು ಕಾಲದ ವ್ಯಾಕುಲತೆ ಮತ್ತು ಸಾಧನೆ ಇಂದು ಸಫಲವಾಯಿತೆಂದು ಅವಳು ಪರಮಾನಂದವನ್ನು ಅನುಭವಿಸಿದಳು. ಶ್ರೀರಾಮಕೃಷ್ಣರೂ ಕೂಡ ಚಿರಪರಿಚಿತ ವ್ಯಕ್ತಿಯನ್ನು ಕಂಡಂತೆ ಆಗಿ ಎಲ್ಲಾ ವಿಷಯಗಳನ್ನೂ ಮರೆತು ಅವಳ ಆಶ್ರಮದಲ್ಲಿಯೇ ಕೆಲವು ಕಾಲ ತಂಗಿದ್ದರು. ಅವರು ಎಷ್ಟೊಂದು ಪರಸ್ಪರರನ್ನು ಪ್ರೀತಿಸುತ್ತಿದ್ದರೆಂದರೆ ಶ್ರೀರಾಮಕೃಷ್ಣರು ತಮ್ಮೊಡನೆ ದಕ್ಷಿಣೇಶ್ವರಕ್ಕೆ ಹಿಂದಿರುಗುವುದಿಲ್ಲ ಎಂದು ಮಥುರ ಮುಂತಾದವರು ಭಾವಿಸಿದ್ದರು. ಅವರನ್ನೇ ಅನುಸರಿಸುತ್ತಿದ್ದ ಮಥುರನ ಮನಸ್ಸಿನಲ್ಲಿ ಈ ಭಾವನೆ ತುಂಬಾ ವ್ಯಥೆಯನ್ನುಂಟು ಮಾಡಿತು. ಏನೇ ಆಗಲಿ ಕೊನೆಗೆ ಶ್ರೀರಾಮಕೃಷ್ಣರ ಮಾತೃಭಕ್ತಿಯೇ ಜಯಗಳಿಸಿತು ಮತ್ತು ವ್ರಜದಲ್ಲಿ ತಂಗುವ ಅವರ ಸಂಕಲ್ಪವನ್ನು ಬದಲಾಯಿಸಿತು. ಇದನ್ನು ಕುರಿತು ಶ್ರೀರಾಮಕೃಷ್ಣರು ಹೇಳುತ್ತಿದ್ದರು : "ವ್ರಜಕ್ಕೆ ಹೋಗಿ ಎಲ್ಲಾ ಮರೆತುಬಿಟ್ಟಿದ್ದೆ. ಪುನಃ ಹಿಂದಿರುಗುವುದಿಲ್ಲ ಎಂದು ಭಾವಿಸಿದ್ದೆ. ಆದರೆ ಕೆಲವೇ ದಿನಗಳಲ್ಲಿ ತಾಯಿಯ ನೆನಪಾಯಿತು. ಅವರಿಗೆ ಎಷ್ಟು ಕಷ್ಟವಾಗಬಹುದು. ಮುದಿ ವಯಸ್ಸು, ಅವರನ್ನು ನೋಡಿಕೊಳ್ಳುವವರಾರು ಎಂದೆನಿಸಿತು. ಈ ವಿಚಾರ ಮನಸ್ಸಿಗೆ ಬಂದ ಕೂಡಲೇ ಅಲ್ಲಿ ಇರಲಾಗಲಿಲ್ಲ".

21. ಈ ಅಲೌಕಿಕ ಪುರುಷರ ಪ್ರತಿಯೊಂದು ಮಾತು ಮತ್ತು ಕೃತಿಯು ಅದ್ಭುತವೆನಿಸುತ್ತವೆ. ಮೇಲುನೋಟಕ್ಕೆ ಪರಸ್ಪರ ವಿರುದ್ಧವೆಂದು ಕಾಣುವ ಗುಣಗಳು ಇವರಲ್ಲಿ ಅಪೂರ್ವರೀತಿಯಲ್ಲಿ ಸಮ್ಮಿಲನಗೊಳ್ಳುವುದನ್ನು ಕಂಡು ಆಶ್ಚರ್ಯವಾಗುವುದು. ಶ್ರೀ ಜಗದಂಬೆಯ ಪಾದಪದ್ಮದಲ್ಲಿ ಶರೀರ ಮನಸ್ಸು ಸರ್ವಸ್ವವನ್ನೂ ಅರ್ಪಿಸಿದರೂ ಶ್ರೀರಾಮಕೃಷ್ಣರಿಗೆ ಸತ್ಯವನ್ನು ಮಾತ್ರ ಅರ್ಪಿಸಲಾಗಲಿಲ್ಲ. ಜಗತ್ತಿನ ಪ್ರತಿಯೊಬ್ಬರೊಡನೆಯೂ ಲೌಕಿಕ ಸಂಬಂಧವನ್ನು ತ್ಯಜಿಸಿಯೂ ಕೂಡ ತಾಯಿಯ ಮೇಲಿನ ಪ್ರೀತಿಯನ್ನು ಬಿಡಲಾಗಲಿಲ್ಲ ಮತ್ತು ಅವರಿಗೆ ಸಂಬಂಧಿಸಿದ ಕರ್ತವ್ಯವನ್ನು ಮರೆಯಲಾಗ

ಲಿಲ್ಲ. ತಮ್ಮ ಪತ್ನಿಯೊಡನೆ ಕಿಂಚಿತ್ತೂ ಶಾರೀರಿಕ ಸಂಬಂಧ ಇಲ್ಲದಿದ್ದರೂ ಗುರುಭಾವ ದಿಂದ ಅವರೊಡನೆ ಯಾವಾಗಲೂ ಪ್ರೇಮಪೂರ್ಣವಾದ ಸಂಬಂಧವನ್ನು ಇಟ್ಟುಕೊಂಡಿ ದ್ದರು. ಹೀಗೆ ಶ್ರೀರಾಮಕೃಷ್ಣರ ಅಲೌಕಿಕ ವರ್ತನೆಯ ಬಗ್ಗೆ ಎಷ್ಟೋ ದೃಷ್ಟಾಂತ ಗಳನ್ನು ನೀಡಬಹುದು. ಹಿಂದಿನ ಯಾವ ಆಚಾರ್ಯರ ಅಥವಾ ಅವತಾರಪುರುಷರ ಜೀವನದಲ್ಲಿ ಈ ರೀತಿಯ ವಿರುದ್ಧ ವರ್ತನೆಗಳ ಸಮರಸದಿಂದ ಕೂಡಿರುವುದನ್ನು ಕಾಣುತ್ತೇವೆ ? ಈ ರೀತಿ ಎಲ್ಲಿಯೂ ಯಾವಾಗಲೂ ಕಾಣಲಾಗುವುದಿಲ್ಲ ಎಂದು ಯಾರು ತಾನೆ ಹೇಳುವುದಿಲ್ಲ ? ಅವರು ಭಗವದವತಾರವೆಂದು ಒಪ್ಪಿಕೊಳ್ಳಲಿ ಬಿಡಲಿ, ಆದರೆ ಇಂಥ ಒಂದು ದೃಷ್ಟಾಂತ ಆಧ್ಯಾತ್ಮಿಕ ಜಗತ್ತಿನಲ್ಲಿ ಎಲ್ಲಿಯೂ ಸಿಕ್ಕುವುದಿಲ್ಲ ಎನ್ನುವುದನ್ನು ಯಾರು ತಾನೆ ಒಪ್ಪುವುದಿಲ್ಲ ? ಶ್ರೀರಾಮಕೃಷ್ಣರ ವೃದ್ಧಮಾತೆ ಜೀವನದ ಕೊನೆಯ ವರ್ಷಗಳಲ್ಲಿ ಶ್ರೀರಾಮಕೃಷ್ಣರೊಡನೆ ದಕ್ಷಿಣೇಶ್ವರದಲ್ಲಿ ವಾಸಿಸುತ್ತಿ ದ್ದರು. ಶ್ರೀರಾಮಕೃಷ್ಣರೇ ಸ್ವತಃ ಅವರ ಸೇವೆ, ಶುಶ್ರೂಷೆ ಮಾಡುತ್ತಿದ್ದರು ಎಂಬು ದನ್ನು ಅವರ ಬಾಯಿಂದಲೇ ಕೇಳಿರುವೆವು. ಮತ್ತೆ ತಾಯಿಯು ತೀರಿಕೊಂಡಾಗ ಶ್ರೀರಾಮಕೃಷ್ಣರು ಶೋಕ ಸಂತಪ್ತರಾಗಿ ಕಾತರತೆಯಿಂದ ಎಷ್ಟೊಂದು ಕಣ್ಣೀರು ಸುರಿ ಸಿದರೆಂದರೆ ಸಂಸಾರದಲ್ಲಿ ಇಂಥದ್ದನ್ನು ಕಾಣುವುದು ತುಂಬಾ ಅಪರೂಪ. ಮಾತೃ ವಿಯೋಗದಿಂದ ಅವರು ಅಷ್ಟೊಂದು ದುಃಖಿತರಾದರೂ ತಾವು ಸಂನ್ಯಾಸಿ ಎನ್ನುವು ದನ್ನು ಮರೆಯಲಿಲ್ಲ. ತಾವು ಸಂನ್ಯಾಸಿಯಾಗಿ ಅಂತ್ಯಸಂಸ್ಕಾರ ಮತ್ತು ಶ್ರಾದ್ಧ ಮುಂತಾ ದುವುಗಳನ್ನು ಮಾಡುವ ಅಧಿಕಾರ ಇಲ್ಲದುದರಿಂದ ರಾಮಲಾಲನ ಮೂಲಕ ಮಾಡಿಸಿ ದರು. ತಾವು ಏಕಾಂತದಲ್ಲಿ ಕುಳಿತು ತಾಯಿಗಾಗಿ ರೋದಿಸುತ್ತ ತಮ್ಮ ಮಾತೃಋಣವನ್ನು ತೀರಿಸಿದರು. ಈ ವಿಷಯವಾಗಿ ಶ್ರೀರಾಮಕೃಷ್ಣರು ಹೇಳುತ್ತಿದ್ದರು : "ನೋಡಪ್ಪ ಸಂಸಾರದಲ್ಲಿ ತಾಯಿತಂದೆಗಳು ಪರಮಗುರುಗಳು. ಅವರು ಎಲ್ಲಿಯವರೆಗೆ ಬದುಕಿರು ತ್ತಾರೊ ಅಲ್ಲಿಯವರೆಗೂ ಶಕ್ತ್ಯನುಸಾರ ಅವರ ಸೇವೆ ಮಾಡಬೇಕು. ಮತ್ತೆ ಅವರು ತೀರಿ ಹೋದ ಮೇಲೆ ಎಷ್ಟು ಸಾಧ್ಯವೊ ಅಷ್ಟು ಶ್ರಾದ್ಧ ಮಾಡಬೇಕು. ಬಡವನಾದರೆ ಶ್ರಾದ್ಧ ಮಾಡುವ ಶಕ್ತಿಯಿಲ್ಲದಿದ್ದರೆ ಅವನು ಕಾಡಿಗೆ ಹೋಗಿ ತಂದೆತಾಯಿಗಳನ್ನು ಸ್ಮರಿಸುತ್ತ ಅವರಿಗಾಗಿ ಕಣ್ಣೀರು ಸುರಿಸುತ್ತಾ ರೋದಿಸಬೇಕು. ಆಗ ಅವರ ಋಣದಿಂದ ಮುಕ್ತ ನಾಗಬಹುದು. ಕೇವಲ ಭಗವಂತನಿಗಾಗಿ ಮಾತ್ರ ತಂದೆತಾಯಿಗಳ ಮಾತನ್ನು ಉಲ್ಲಂಘಿ ಸಿದರೆ ಅದರಿಂದ ದೋಷವಿಲ್ಲ. ಉದಾಹರಣೆಗೆ ಪ್ರಹ್ಲಾದನು ತಂದೆ ಎಷ್ಟೇ ಹೇಳಿದರೂ ಕೃಷ್ಣನಾಮವನ್ನು ಉಚ್ಚರಿಸುವುದನ್ನು ಬಿಡಲಿಲ್ಲ. ಧ್ರುವನು ತಾಯಿ ಬೇಡವೆಂದರೂ ಕೇಳದೆ ತಪಸ್ಸಿಗಾಗಿ ಕಾಡಿಗೆ ಹೊರಟು ಹೋದನು. ಅದರಿಂದ ಅವನಿಗೇನೂ ದೋಷ ವುಂಟಾಗಲಿಲ್ಲ." ಹೀಗೆ ಶ್ರೀರಾಮಕೃಷ್ಣರು ತಮ್ಮ ಮಾತೃ ಭಕ್ತಿಯ ಮೂಲಕವೂ ಗುರು ಭಾವವನ್ನು ವ್ಯಕ್ತಪಡಿಸಿ ಲೋಕಶಿಕ್ಷಣ ನೀಡಿರುವರು.

22. ಶ್ರೀರಾಮಕೃಷ್ಣರು ಗಂಗಾಮಾತೆಯಿಂದ ಬಹಳ ಕಷ್ಟದಿಂದಲೇ ಬೀಳ್ಕೊಂಡು ಮಥುರನಾಥನೊಡನೆ ಕಾಶಿಗೆ ಹೋದರು. ಅಲ್ಲಿ ಕೆಲವು ದಿನಗಳು ಇದ್ದ ಮೇಲೆ ದೀಪಾ

ವಳಿಯ ಅಮಾವಾಸ್ಯೆಯ ದಿನದಂದು ಶ್ರೀರಾಮಕೃಷ್ಣರು ಶ್ರೀ ಅನ್ನಪೂರ್ಣಾದೇವಿಯ ಸುವರ್ಣಪ್ರತಿಮೆಯ ದರ್ಶನವನ್ನು ಮಾಡಿ ಪ್ರೇಮಭಾವದಲ್ಲಿ ಮುಗ್ಧರಾಗಿದ್ದರು. ಕಾಶಿಯಿಂದ ಗಯೆಗೆ ಹೋಗುವ ಇಚ್ಛೆ ಮಥುರನಿಗಿತ್ತು. ಆದರೆ ಶ್ರೀರಾಮಕೃಷ್ಣರು ಅಲ್ಲಿಗೆ ಹೋಗಲು ಒಪ್ಪದಿದ್ದುದರಿಂದ ಆ ಸಂಕಲ್ಪವನ್ನು ಅವನು ಬಿಡಬೇಕಾಯಿತು. ಶ್ರೀರಾಮಕೃಷ್ಣರ ತಂದೆಯು ಗಯಾಧಾಮದಲ್ಲಿದ್ದಾಗ ಗದಾಧರನು ಕನಸಿನಲ್ಲಿ ಕಾಣಿಸಿಕೊಂಡು ಅವನ ಮನೆಯಲ್ಲಿ ಜನಿಸುವುದಾಗಿ ತಿಳಿಸಿದ್ದನು ಮತ್ತು ಅದರಿಂದಾಗಿಯೇ ಶ್ರೀರಾಮಕೃಷ್ಣರು ಹುಟ್ಟಿದಾಗ ಅವರಿಗೆ ಗದಾಧರ ಎಂದು ನಾಮಕರಣ ಮಾಡಲಾಯಿತು. ಈ ವಿಷಯವನ್ನು ನಾವು ಶ್ರೀರಾಮಕೃಷ್ಣರ ಬಾಯಿಂದಲೇ ಕೇಳಿರುವೆವು. ಗಯಾಧಾಮಕ್ಕೆ ಹೋಗಿ ಅಲ್ಲಿ ಗದಾಧರನ ದರ್ಶನವನ್ನು ಮಾಡಿದಾಗ ತಾವು ದೇಹಧಾರಣೆ ಮಾಡಿರುವ ವಿಷಯ ಮರೆತುಹೋಗಿ ಒಮ್ಮೆಯೇ ಅವನೊಡನೆ ತಾವು ಒಂದಾಗಿಬಿಡಬಹುದು ಎಂಬ ಭಯದಿಂದಲೇ ಶ್ರೀರಾಮಕೃಷ್ಣರು ಮಥುರನೊಡನೆ ಗಯೆಗೆ ಹೋಗಲು ನಿರಾಕರಿಸಿದರು. ಈ ವಿಷಯವನ್ನು ಅವರು ಕೆಲವೊಮ್ಮೆ ನಮಗೆ ಹೇಳಿರುವರು. ತಾನೆ ಹಿಂದಿನ ಯುಗಗಳಲ್ಲಿ ಶ್ರೀರಾಮಚಂದ್ರ, ಶ್ರೀಕೃಷ್ಣ, ಶ್ರೀಗೌರಾಂಗ ಮುಂತಾದ ರೂಪಗಳಲ್ಲಿ ಅವತರಿಸಿದ್ದು, ಈಗ ಈ ಶರೀರದ ಮೂಲಕ ಧರೆಗೆ ಇಳಿದಿರುವುದು ಎಂಬ ದೃಢವಿಶ್ವಾಸ ಶ್ರೀರಾಮಕೃಷ್ಣರಲ್ಲಿತ್ತು. ಆದ್ದರಿಂದ ಅವರ ಈಗಿನ ದೇಹಮನಸ್ಸುಗಳ ಉತ್ಪತ್ತಿಸ್ಥಾನ ಗಯಾಧಾಮ ಎಂಬುದು ಅವರ ತಂದೆಯ ಸ್ವಪ್ನದಿಂದ ಸ್ಪಷ್ಟವಾಗುತ್ತದೆ. ಯಾವ ಯಾವ ಸ್ಥಳಗಳಲ್ಲಿ ಬೇರೆ ಬೇರೆ ಅವತಾರ ಪುರುಷರು ತಮ್ಮ ಲೀಲೆಯನ್ನು ಸಮಾಪ್ತಿಗೊಳಿಸಿರುವರೊ ಆ ಸ್ಥಳಗಳನ್ನು ನೋಡುವುದಕ್ಕೆ ಹೋಗಲು ಶ್ರೀರಾಮಕೃಷ್ಣರು ಹಿಂಜರಿಯುತ್ತಿದ್ದರು. ಶ್ರೀರಾಮಕೃಷ್ಣರು ಹೇಳುತ್ತಿದ್ದರು, ಆ ಎಲ್ಲಾ ಸ್ಥಾನಗಳಿಗೆ ಹೋದರೆ ತಮ್ಮ ಶರೀರ ಉಳಿಯುವುದಿಲ್ಲ ಎಂದು. ಅಲ್ಲಿ ಎಂಥ ಒಂದು ಗಭೀರ ಸಮಾಧಿ ಉಂಟಾಗುವುದೆಂದರೆ ಮನಸ್ಸು ಇದರಿಂದ ಕೆಳಗಿಳಿದು ಬರಲು ಒಪ್ಪುವುದೇ ಇಲ್ಲ ಎಂದು ಅವರು ಹೇಳುತ್ತಿದ್ದರು. ಶ್ರೀ ಗೌರಾಂಗನು ತನ್ನ ಲೀಲೆಯನ್ನು ಸಮಾಪ್ತಿಗೊಳಿಸಿದ ಸ್ಥಳವಾದ ಪುರಿಧಾಮಕ್ಕೆ ಹೋಗುವ ವಿಷಯದಲ್ಲಿ ಶ್ರೀರಾಮಕೃಷ್ಣರು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು. ಇದು ತಮ್ಮ ವಿಷಯಕ್ಕೆ ಮಾತ್ರ ಅನ್ವಯಿಸುವುದಲ್ಲ. ಭಕ್ತರಲ್ಲಿ ಕೆಲವರು ಯಾವುದೋ ದೇವತೆಯ ಅಂಶದಿಂದ ಹುಟ್ಟಿರುವರು ಎಂದು ಅವರ ಭಾವಕ್ಕೆ ಗೋಚರವಾಗುತ್ತಿತ್ತು. ಅಂಥ ಭಕ್ತರು ಆ ದೇವತೆಯ ವಿಶೇಷ ಲೀಲಾಸ್ಥಾನಕ್ಕೆ ಹೋಗುವುದನ್ನು ಅವರು ಈ ಮೇಲಿನ ಕಾರಣಕ್ಕಾಗಿಯೇ ನಿಷೇಧಿಸುತ್ತಿದ್ದರು. ಶ್ರೀರಾಮಕೃಷ್ಣರ ಈ ಭಾವವನ್ನು ಓದುಗರಿಗೆ ತಿಳಿಸಿಕೊಡುವುದು ಬಹಳ ಕಷ್ಟ. ಇದನ್ನು ಭಯವೆಂದೂ ಕರೆಯುವಂತಿಲ್ಲ. ಏಕೆಂದರೆ ಸಾಧಾರಣ ಮನುಷ್ಯರೂ ಕೂಡ ಸಮಾಧಿಯನ್ನು ಪಡೆದ ಮೇಲೆ ಮೃತ್ಯುವಿನ ಭಯವನ್ನು ಮೀರಿ ಹೋಗುತ್ತಾರೆ. ಕೌಮಾರ, ಯೌವನ, ಮುಂತಾದ ದೈಹಿಕ ಪರಿಣಾಮಗಳಂತೆ ಮೃತ್ಯುವೂ ಒಂದು ಪರಿಣಾಮವೆಂದು ಅವರು ಪರಿಗಣಿಸುತ್ತಾರೆ. ಇಚ್ಛಾಮಾತ್ರದಿಂದಲೇ ಗಭೀರ ಸಮಾಧಿಯನ್ನು ಪಡೆಯು

ಬಲ್ಲ ಅವತಾರ ಪುರುಷರು ಮೃತ್ಯುವನ್ನು ಜಯಿಸಿ ನಿರ್ಭೀತರಾಗಿರುತ್ತಾರೆ ಎಂಬುದನ್ನು ಹೇಳಬೇಕಾಗಿಯೇ ಇಲ್ಲ, ಜನಸಾಧಾರಣರಂತೆ ಶರೀರವನ್ನು ರಕ್ಷಿಸಿಕೊಳ್ಳುವ ಅಥವಾ ಉಳಿಸಿಕೊಳ್ಳುವ ಆಗ್ರಹವೂ ಅವರಲ್ಲಿ ಇರುವಂತೆ ಇಲ್ಲ. ಏಕೆಂದರೆ ಆ ರೀತಿ ದೇಹವನ್ನು ರಕ್ಷಿಸಿಕೊಳ್ಳುವ ಆಕಾಂಕ್ಷೆ ಇರುವುದು ತಮ್ಮ ಸ್ವಂತಸುಖ ಅಥವಾ ಭೋಗಕ್ಕಾಗಿ. ಆದರೆ ಯಾರ ಮನಸ್ಸಿನಲ್ಲಿ ಸ್ವಾರ್ಥದ ಲವಲೇಶವೂ ಇಲ್ಲವೊ ಅವರ ವಿಷಯದಲ್ಲಿ ಈ ಮಾತನ್ನು ಹೇಳುವಂತಿಲ್ಲ. ಹಾಗಿರುವಾಗ ಶ್ರೀರಾಮಕೃಷ್ಣರ ಮನಸ್ಸಿನ ಈ ಭಾವವನ್ನು ನಾವು ಹೇಗೆ ಅರ್ಥಮಾಡಿಕೊಳ್ಳುವುದು ? ನಮ್ಮ ಮನಸ್ಸಿನಲ್ಲಿ ಏಳುವ ಭಾವನೆಗಳನ್ನು ಪ್ರಕಾಶಪಡಿಸಲು ಶಬ್ದ ಸಮೂಹವಿದೆ. ಆದರೆ ಶ್ರೀರಾಮಕೃಷ್ಣರಂತಹ ಮಹಾಪುರುಷರ ಮನಸ್ಸಿನಲ್ಲಿ ಏಳುವ ಭಾವಗಳನ್ನು ಪ್ರಕಾಶಪಡಿಸುವ ಸಾಮರ್ಥ್ಯ ಈ ಶಬ್ದಗಳಿಗೆ ಎಲ್ಲಿದೆ ? ಆದ್ದರಿಂದ ಇಲ್ಲಿ ತರ್ಕಬುದ್ಧಿಯನ್ನು ಬಿಟ್ಟು ಶ್ರೀರಾಮಕೃಷ್ಣರು ಈ ವಿಷಯ ದಲ್ಲಿ ಏನು ಹೇಳಿರುವರೊ ಅದರಲ್ಲಿ ವಿಶ್ವಾಸವಿರಿಸುವುದು ಮತ್ತು ಕಲ್ಪನೆಯ ಸಹಾಯದ ಮೂಲಕ ಆ ಉಚ್ಚಭಾವದ ಚಿತ್ರವನ್ನು ಮನಸ್ಸಿನಲ್ಲಿ ಮುದ್ರಿತವಾಗುವಂತೆ ಮಾಡಲು ಪ್ರಯತ್ನಿಸುವುದು ಇದೊಂದೇ ಮಾರ್ಗ.

23. ಯಾವುದೇ ಸ್ಥಳ, ವ್ಯಕ್ತಿ ಅಥವಾ ವಸ್ತು ಇವುಗಳಿಂದ ಆವಿರ್ಭಾವಗೊಂಡ ಅಂಶವು ಪುನಃ ಅದೇ ಸ್ಥಳ ಅಥವಾ ವ್ಯಕ್ತಿ ಅಥವಾ ವಸ್ತುವಿನ ಅತ್ಯಂತ ಸಮೀಪ ಹೋದಾಗ ಅದರಲ್ಲಿಯೇ ಲಯ ಹೊಂದುವುದು. ಈ ವಿಷಯವನ್ನು ಶ್ರೀರಾಮ ಕೃಷ್ಣರು ಹೇಳುತ್ತಿದ್ದರು ಮತ್ತು ಶಾಸ್ತ್ರದಲ್ಲಿಯೂ ಇದಕ್ಕೆ ಅನೇಕ ದೃಷ್ಟಾಂತಗಳನ್ನು ಕಾಣಬಹುದು. ಬ್ರಹ್ಮದಿಂದ ಜೀವವು ಉತ್ಪತ್ತಿಯಾಗುವುದು ಅಥವಾ ಆವಿರ್ಭಾವ ವಾಗುವುದು. ಅದೇ ಜೀವವು ಮತ್ತೆ ಜ್ಞಾನ ಲಾಭದ ಮೂಲಕ ಬ್ರಹ್ಮದ ಸಮೀಪ ಹೋದಾಗ ಅದರಲ್ಲಿಯೇ ಲೀನವಾಗಿ ಹೋಗುವುದು. ಅನಂತ ಮನಸ್ಸಿನಿಂದ ನಮ್ಮ ನಿಮ್ಮ ಮತ್ತು ಎಲ್ಲರ ವ್ಯಕ್ತಿಗತ ಮನಸ್ಸು ಉತ್ಪತ್ತಿಯಾಗಿದೆ ಅಥವಾ ಆವಿರ್ಭಾವ ಗೊಂಡಿದೆ. ನಮ್ಮಲ್ಲಿ ಯಾರದಾದರೂ ಮನಸ್ಸು ನಿರ್ಲಿಪ್ತತೆ, ಕರುಣೆ, ಪವಿತ್ರತೆ ಮುಂತಾದ ಸದ್ಗುಣಗಳನ್ನು ಪಡೆದು ಅನಂತ ಮನಸ್ಸಿನ ಸಾಮೀಪ್ಯವನ್ನು ಅಥವಾ ಸಾದೃಶ್ಯವನ್ನು ಪಡೆದಾಗ ಅದು ಅದರಲ್ಲಿಯೇ ಲೀನವಾಗಿ ಹೋಗುವುದು. ಸ್ಥೂಲ ಜಗತ್ತಿಗೂ ಇದೇ ಮಾತು ಅನ್ವಯಿಸುತ್ತದೆ. ಸೂರ್ಯನಿಂದ ಪೃಥ್ವಿಯು ಬಂದಿದೆ. ಈ ಪೃಥ್ವಿಯು ಯಾವುದೇ ರೀತಿಯಲ್ಲಿ ಸೂರ್ಯನ ಸಮೀಪ ಹೋದರೆ ಅದರಲ್ಲಿಯೇ ಲೀನವಾಗಿ ಹೋಗುವುದು. ಆದ್ದರಿಂದ ಶ್ರೀರಾಮಕೃಷ್ಣರ ಅಭಿಪ್ರಾಯದ ಹಿಂದೆ ಒಂದು ವಿಶೇಷಾರ್ಥವಿದೆ. ಶ್ರೀರಾಮಕೃಷ್ಣರ ದೇಹ ಮನಸ್ಸುಗಳು ನಿಜವಾಗಿಯೂ ಗದಾಧರ ಎಂಬ ವಸ್ತು ಅಥವಾ ವ್ಯಕ್ತಿ ವಿಶೇಷದಿಂದ ಉತ್ಪನ್ನವಾಗಿದ್ದರೆ ಅಥವಾ ಆವಿರ್ಭಾವಗೊಂಡಿದ್ದರೆ ಅವು ಆ ವ್ಯಕ್ತಿ ಅಥವಾ ವಸ್ತು ವಿಶೇಷದ ಸಮೀಪ ಹೋದಾಗ ಪರಸ್ಪರ ಪ್ರೇಮದ ಆಕರ್ಷಣೆಯಿಂದ ಅದರೊಡನೆ ಒಂದಾಗಿ ಹೋಗುವುವು. ಈ ವಿಷಯ ಯುಕ್ತಿಯುಕ್ತವಾಗಿಯೇ ಇದೆ.

24. ಅವತಾರ ಪುರುಷರು ಇತರ ಸಾಧಾರಣ ಜೀವಿಗಳಂತಲ್ಲ ಎಂಬುದನ್ನು ಯುಕ್ತಿಯ ಮೂಲಕ ಸಮರ್ಥಿಸುವ ಆವಶ್ಯಕತೆ ಇಲ್ಲ. ಅವರಲ್ಲಿ ಕಲ್ಪನಾತೀತವಾದ ಶಕ್ತಿಯ ಪ್ರಕಾಶವನ್ನು ಕಾಣುತ್ತೇವೆ. ಅದನ್ನು ನೋಡಿಯೇ ಸಾಧಾರಣ ಜೀವಿಗಳು ಅವರಿಗೆ ತಲೆ ಬಾಗಿ ತಮ್ಮ ಹೃದಯದ ಪೂಜೆಯನ್ನು ಸಲ್ಲಿಸುವರು ಮತ್ತು ಅವರಲ್ಲಿ ಶರಣಾಗುವರು. ಮಹರ್ಷಿ ಕಪಿಲ ಮುಂತಾದ ಭಾರತದ ತೀಕ್ಷ್ಣ ದೃಷ್ಟಿಯುಳ್ಳ ದಾರ್ಶನಿಕರು ಈ ರೀತಿ ಅಪೂರ್ವ ಶಕ್ತಿ ಸಂಪನ್ನರಾದ ಪುರುಷರ ಜೀವನ ರಹಸ್ಯವನ್ನು ಭೇದಿಸಲು ಬಹಳಷ್ಟು ಪ್ರಯತ್ನಿಸಿರುವರು. ಇತರ ಸಾಧಾರಣ ವ್ಯಕ್ತಿಗಳಿಗಿಂತಲೂ ಅಧಿಕವಾದ ಶಕ್ತಿಯ ಪ್ರಕಾಶ ಅವರಲ್ಲಿ ಕಂಡು ಬರುವುದಕ್ಕೆ ಕಾರಣವೇನು ? ಈ ವಿಷಯವನ್ನು ನಿರ್ಣಯಿಸುವಾಗ ಕಪಿಲಾದಿ ಮಹರ್ಷಿಗಳು ಸಾಮಾನ್ಯ ಕರ್ಮ ನಿಯಮವು ಅವರಿಗೆ ಅನ್ವಯಿಸುವುದಿಲ್ಲ ಎಂದು ಕಂಡುಕೊಂಡರು. ಸಾಧಾರಣ ವ್ಯಕ್ತಿಗಳು ಆಚರಿಸುವ ಶುಭಾಶುಭಕರ್ಮಗಳು ಸ್ವಾರ್ಥ ಸುಖವನ್ನು ಅನುಸರಿಸಿಕೊಂಡು ಹೋಗುತ್ತವೆ. ಆದರೆ ಇವರು ಮಾಡುವ ಕಾರ್ಯಗಳನ್ನು ಪರಿಶೀಲಿಸಿದಾಗ ಅಂಥ ಉದ್ದೇಶವೇ ಇಲ್ಲದಿರುವುದನ್ನು ನೋಡುತ್ತೇವೆ. ಇತರರ ದುಃಖ ನಿವಾರಣೆಯೇ ಇವರ ಕಾರ್ಯಗಳ ಹಿಂದಿರುವ ಪ್ರಧಾನ ಪ್ರೇರಣೆ ಮತ್ತು ಆ ಉದ್ದೇಶದ ಮುಂದೆ ತಮ್ಮ ಸ್ವಂತ ಭೋಗ ಸುಖವನ್ನು ಬಲಿ ಕೊಡುವರು. ಮತ್ತೆ ಆ ಉದ್ದೇಶದ ಹಿಂದೆ ಹೆಸರು ಕೀರ್ತಿಯ ಆಸೆ ಸ್ವಲ್ಪವೂ ಕಂಡು ಬರುವುದಿಲ್ಲ. ಏಕೆಂದರೆ ಲೋಕೈಷಣೆ, ಮಾನ, ಯಶಸ್ಸು ಮುಂತಾದುವುಗಳನ್ನು ಇವರು ಕಾಕಪಿಷ್ಟದಂತೆ ಪರಿತ್ಯಜಿಸುವರು. ನರ ಮತ್ತು ನಾರಾಯಣ ಋಷಿದ್ವಯರು ಬದರಿಕಾಶ್ರಮದಲ್ಲಿ ಬಹುಕಾಲ ತಪಸ್ಸನ್ನಾಚರಿಸಿದರು. ಜಗತ್ತಿನ ಕಲ್ಯಾಣವನ್ನು ಹೇಗೆ ಸಾಧಿಸುವುದೆಂಬುದೇ ಅವರ ತಪಸ್ಸಿನ ಉದ್ದೇಶವಾಗಿತ್ತು. ಶ್ರೀರಾಮಚಂದ್ರನು ಪ್ರಾಣಪ್ರಿಯಳಾದ ಸೀತೆಯನ್ನು ಪ್ರಜೆಗಳ ಹಿತಕ್ಕಾಗಿ ತ್ಯಾಗ ಮಾಡಿದನು. ಶ್ರೀಕೃಷ್ಣನು ಮಾಡಿದ ಪ್ರತಿಯೊಂದು ಕಾರ್ಯವೂ ಸತ್ಯ ಮತ್ತು ಧರ್ಮವನ್ನು ಪ್ರತಿಷ್ಠಾಪಿಸುವುದಕ್ಕಾಗಿಯೆ. ಬುದ್ಧನು ಜನ್ಮ ಜರ, ಮರಣಾದಿ ದುಃಖಗಳಿಂದ ಜೀವಿಗಳನ್ನು ಉದ್ಧಾರ ಮಾಡುವುದಕ್ಕಾಗಿಯೆ ರಾಜ್ಯ ಸಂಪತ್ತುಗಳನ್ನು ತ್ಯಾಗ ಮಾಡಿದನು. ದುಃಖ ಶೋಕಗಳಿಂದ ಕೂಡಿದ ಭೂಮಿಯ ಮೇಲೆ ಪ್ರೇಮ ಸ್ವರೂಪ ಪರಮಪಿತನ ಪ್ರೇಮಸಾಮ್ರಾಜ್ಯವನ್ನು ಸ್ಥಾಪಿಸಲು ಏಸುಕ್ರಿಸ್ತನು ತನ್ನ ಪ್ರಾಣವನ್ನು ಅರ್ಪಿಸಿದನು. ಮಹಮ್ಮದನು ಅಧರ್ಮದ ವಿರುದ್ಧವಾಗಿಯೇ ಕತ್ತಿಯೆತ್ತಿದನು. ಶಂಕರರು ಅದ್ವೈತಾನುಭವದಿಂದಲೇ ಯಥಾರ್ಥ ಶಾಂತಿ ಎಂಬುದನ್ನು ಜೀವಿಗಳಿಗೆ ಬೋಧಿಸಲು ತಮ್ಮ ಶಕ್ತಿಯನ್ನೆಲ್ಲಾ ವ್ಯಯಿಸಿದರು. ಶ್ರೀಚೈತನ್ಯರು ಹರಿನಾಮದಲ್ಲಿಯೆ ಜೀವಿಗಳ ಉದ್ಧಾರಶಕ್ತಿ ಅಡಗಿದೆ ಎಂಬುದನ್ನು ಮನಗಂಡು ಸಂಸಾರದ ಭೋಗ ಸುಖಗಳಿಗೆ ತಿಲಾರ್ಪಣವಿತ್ತು ಹರಿನಾಮ ಪ್ರಚಾರಕ್ಕಾಗಿಯೇ ತಮ್ಮ ಜೀವನವನ್ನು ಮುಡುಪಾಗಿಟ್ಟರು. ಯಾವ ಸ್ವಾರ್ಥತೆ ಇವರುಗಳ ಕಾರ್ಯವನ್ನು ಪ್ರೇರೇಪಿಸಿತು ? ಯಾವ ಆತ್ಮ ಸುಖದ ಲಾಭಕ್ಕಾಗಿ ಇವರುಗಳು ಜೀವನದಲ್ಲಿ ಇಷ್ಟೊಂದು ಕಷ್ಟಗಳನ್ನು ಸ್ವೀಕರಿಸಿದರು ?

25. ಅಸಾಧಾರಣ ಮಾನಸಿಕ ಅನುಭವದ ಪರಿಣಾಮವಾಗಿ ಮುಕ್ತಪುರುಷನ ಶರೀರದಲ್ಲಿ ಅನೇಕ ಲಕ್ಷಣಗಳು ಕಾಣಿಸಿಕೊಳ್ಳುವುವು, ಎಂಬುದನ್ನು ಶಾಸ್ತ್ರಗಳು ಸೂಚಿಸುತ್ತವೆ. ದಾರ್ಶನಿಕರು ಈ ಅವತಾರ ಪುರುಷರ ಜೀವನದಲ್ಲಿ ಆ ಎಲ್ಲಾ ಲಕ್ಷಣಗಳೂ ವಿಶೇಷ ರೀತಿಯಲ್ಲಿ ಪ್ರಕಾಶಿಸುತ್ತಿರುವುದನ್ನು ಕಂಡರು. ಆದ್ದರಿಂದ ಇವರನ್ನೂ ಒಂದು ಹೊಸ ವರ್ಗಕ್ಕೆ ಸೇರಿಸುವುದು ಅನಿವಾರ್ಯವಾಯಿತು. ಇವರಲ್ಲಿ ಲೋಕಹಿತವನ್ನು ಸಾಧಿಸುವ ಒಂದು ಉದಾರಭಾವ ತೀವ್ರವಾಗಿರುತ್ತದೆ, ಎಂದು ಸಾಂಖ್ಯಕಾರನಾದ ಕಪಿಲನು ಹೇಳುತ್ತಾನೆ. ಆದ್ದರಿಂದ ಹಿಂದಿನ ಜನ್ಮಗಳ ತಪಸ್ಸಿನ ಪ್ರಭಾವದಿಂದಲೆ ಇವರು ಮುಕ್ತಿಯನ್ನು ಪಡೆದಿದ್ದರೂ ನಿರ್ವಾಣ ಪದವಿಯನ್ನು ಏರುವುದಿಲ್ಲ, ಪ್ರಕೃತಿಯಲ್ಲಿ ಲೀನವಾಗಿರುತ್ತಾರೆ. ಅಥವಾ ಪ್ರಕೃತಿಯಲ್ಲಿರುವ ಎಲ್ಲಾ ಶಕ್ತಿಯು ತಮ್ಮದೇ ಶಕ್ತಿ ಎಂಬ ಅನುಭವವನ್ನು ಪಡೆದು ಒಂದು ಕಲ್ಪದವರೆಗೆ ಆ ಸ್ಥಿತಿಯಲ್ಲಿರುತ್ತಾರೆ. ಈ ಕಾರಣದಿಂದಾಗಿಯೆ ಇವರುಗಳ ಪೈಕಿ ಯಾರು ಯಾವ ಕಲ್ಪದಲ್ಲಿ ಈ ರೀತಿ ಶಕ್ತಿಸಂಪನ್ನರೆಂದು ತಮ್ಮನ್ನು ಅರಿತುಕೊಳ್ಳುತ್ತಾರೆಯೊ ಅವರು ಆ ಕಲ್ಪದಲ್ಲಿ ಜನಸಾಧಾರಣರಿಂದ ಈಶ್ವರ ಎಂದು ಕರೆಸಿಕೊಳ್ಳುತ್ತಾರೆ. ಏಕೆಂದರೆ ಪ್ರಕೃತಿಯಲ್ಲಿ ಏನೇನು ಶಕ್ತಿಯಿದೆಯೊ ಅದೆಲ್ಲವೂ ನನ್ನದು ಎಂದು ಯಾರಿಗೆ ಅರಿವುಂಟಾಗುವುದೊ ಅವರು ಆ ಎಲ್ಲ ಶಕ್ತಿಯನ್ನೂ ತಮಗಿಚ್ಛೆ ಬಂದಂತೆ ಪ್ರಯೋಗಿಸಬಹುದು ಮತ್ತು ಹಿಂತೆಗೆದುಕೊಳ್ಳಬಹುದು. ನಮ್ಮ ಈ ಶರೀರ ಮನಸ್ಸುಗಳಲ್ಲಿ ಪ್ರಕೃತಿಯ ಯಾವ ಶಕ್ತಿ ಇರುವುದೊ ಅದನ್ನು ನಮ್ಮದೆಂದು ತಿಳಿದಿರುವುದರಿಂದಲೆ ನಾವು ಅದನ್ನು ಪ್ರಯೋಗಿಸಲು ಸಮರ್ಥರಾಗಿದ್ದೇವೆ. ಅದೇ ರೀತಿ ಅವರೂ ಕೂಡ ಪ್ರಕೃತಿಯಲ್ಲಿರುವ ಸಮಸ್ತ ಶಕ್ತಿಯೂ ತಮ್ಮದೆಂದು ಅರಿತಿರುವುದರಿಂದ ಅದೆಲ್ಲವನ್ನೂ ತಮಗಿಷ್ಟ ಬಂದಂತೆ ಪ್ರಯೋಗಿಸಲು ಸಮರ್ಥರಾಗಿರುವರು. ಸಾಂಖ್ಯಕಾರನಾದ ಕಪಿಲನು ಸಾರ್ವಕಾಲಿಕನಾದ ಒಬ್ಬ ನಿತ್ಯ ಈಶ್ವರನ ಅಸ್ತಿತ್ವವನ್ನು ಒಪ್ಪದಿದ್ದರೂ ಒಂದು ಕಲ್ಪಕ್ಕೆ ಸೀಮಿತರಾದ ಸರ್ವ ಶಕ್ತಿವಂತರಾದ ಪುರುಷರ ಅಸ್ತಿತ್ವವನ್ನು ಒಪ್ಪಿಕೊಂಡು ಅವರನ್ನು 'ಪ್ರಕೃತಿಲೀನ' ಎಂದು ಕರೆಯುತ್ತಾನೆ.

26. ವೇದಾಂತವು ಒಬ್ಬನೆ ಈಶ್ವರನ ಅಸ್ತಿತ್ವವನ್ನು ಒಪ್ಪುತ್ತದೆ. ಅವನೇ ಜೀವ ಮತ್ತು ಜಗತ್ತಿನ ರೂಪದಲ್ಲಿ ಪ್ರಕಾಶಿಸುತ್ತಿರುವುದು. ಎಲ್ಲ ವಿಶಿಷ್ಟ ಶಕ್ತಿವಂತ ಪುರುಷರು ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವದ ಈಶ್ವರನ ವಿಶೇಷಾಂಶ ಸಂಭೂತರೆಂದು ವೇದಾಂತವು ಹೇಳುತ್ತದೆ. ಇಷ್ಟೇ ಅಲ್ಲದೆ ಈ ಪುರುಷರು ಲೋಕಕಲ್ಯಾಣದ ವಿಶೇಷ ಕಾರ್ಯಕ್ಕಾಗಿ ಜನ್ಮಗ್ರಹಣ ಮಾಡುತ್ತಾರೆ ಮತ್ತು ಅದಕ್ಕೆ ಉಪಯೋಗವಾಗುವ ಶಕ್ತಿಸಂಪನ್ನರಾಗಿ ಅವರು ಬರುತ್ತಾರೆ ಎಂಬುದರಿಂದಲೇ ಅವರನ್ನು 'ಅಧಿಕಾರಿಕ' ಎಂದು ಕರೆಯುತ್ತಾರೆ. 'ಅಧಿಕಾರಿಕ' ಎಂದರೆ ಯಾವುದೊ ಒಂದು ವಿಶೇಷ ಕಾರ್ಯದ ಅಧಿಕಾರ ಅಥವಾ ಆ ಕಾರ್ಯವನ್ನು ಪೂರ್ತಿಗೊಳಿಸುವ ಹೊಣೆ ಮತ್ತು ಸಾಮರ್ಥ್ಯ ಈ ರೀತಿಯ ಪುರುಷರಲ್ಲಿಯೂ ಶಕ್ತಿಯ ತಾರತಮ್ಯವಿರುವುದು. ಇವರಲ್ಲಿ ಕೆಲವರ ಕಾರ್ಯವು ಸಮಗ್ರ ವಿಶ್ವವನ್ನು ಸಕಲ ಜನರನ್ನು ಮತ್ತು ಸರ್ವಕಾಲವನ್ನೂ

ವ್ಯಾಪಿಸಿರುತ್ತದೆ. ಇನ್ನು ಕೆಲವರ ಕಾರ್ಯವು ಯಾವುದೊ ಒಂದು ಪ್ರದೇಶದ ಅಥವಾ ದೇಶದ ಜನ ಸಮೂಹವನ್ನು ವ್ಯಾಪಿಸಿರುತ್ತದೆ. ಇದನ್ನು ಗಮನಿಸಿದ ವೇದಾಂತಕಾರರು ಇವರಲ್ಲಿ ಕೆಲವರನ್ನು ಈಶ್ವರಾವತಾರವೆಂದೂ ಮತ್ತೆ ಕೆಲವರನ್ನು ಸಾಮಾನ್ಯ ಅಧಿಕಾರ ವುಳ್ಳ ನಿತ್ಯ ಮುಕ್ತ ಈಶ್ವರಕೋಟಿ ಪುರುಷರೆಂದೂ ವಿಂಗಡಿಸಿರುವರು. ವೇದಾಂತಕಾರರ ಈ ಅಭಿಪ್ರಾಯವನ್ನು ಅವಲಂಬಿಸಿ ಪುರಾಣಕಾರರು ಭಕ್ತಿಯ ಪ್ರಭಾವದಿಂದ ತಮ್ಮ ಕಲ್ಪನೆಯನ್ನು ಮೆರೆಸಿ ಈ ಅವತಾರ ಪುರುಷರಲ್ಲಿ ಯಾರು ಎಷ್ಟೆಷ್ಟು ಭಗವಂತನ ಅಂಶ ವನ್ನು ಪಡೆದಿರುವರು ಎಂಬ ಲೆಕ್ಕಾಚಾರ ಮಾಡಿರುವರು. ಇದರ ಪರಿಣಾಮವಾಗಿಯೆ :

ಏತೇ ಚಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್ । (ಭಾಗವತ)—

ಇವೇ ಮುಂತಾದ ಅಭಿಪ್ರಾಯಗಳು ಹುಟ್ಟಿದುವು.

ನಾವು ಮೊದಲೇ ಹೇಳಿರುವಂತೆ ಗುರುಭಾವವು ಸ್ವಯಂ ಈಶ್ವರನ ಭಾವನೆ. ಅಜ್ಞಾನದಲ್ಲಿ ಮುಳುಗಿರುವ ಜೀವನು ಅದರಿಂದ ಪಾರಾಗಲು ಸ್ವತಃ ಅಸಮರ್ಥ ನಾಗಿರುವುದರಿಂದ ಈಶ್ವರನೇ ಅಪಾರ ಕರುಣೆಯಿಂದ ಅವನನ್ನು ಉದ್ಧರಿಸಲು ಮುಂದೆ ಬರುವನು. ಈಶ್ವರನ ಈ ಕರುಣಾಪೂರ್ಣ ಆಕಾಂಕ್ಷೆ ಮತ್ತು ಅದಕ್ಕನುಗುಣವಾದ ಕ್ರಿಯೆಗಳು ಇದೇ ಶ್ರೀಗುರು ಮತ್ತು ಗುರುಭಾವ. ಸಾಧಾರಣ ಜನರು ಗ್ರಹಿಸಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗಲೆಂದು ಈ ಗುರುಭಾವವು ಕೆಲವೊಮ್ಮೆ ವಿಶೇಷ ಮಾನವಾ ಕೃತಿಯನ್ನು ಪಡೆದು ನಮ್ಮ ಮುಂದೆ ಇಳಿದು ಬರುತ್ತದೆ. ಈ ಎಲ್ಲ ಪುರುಷರನ್ನೆ ಜಗತ್ತು ಅವತಾರ ಎಂದು ಪೂಜಿಸುತ್ತದೆ. ಆದ್ದರಿಂದ ಅವತಾರ ಪುರುಷರೇ ಸಾಧಾರಣ ಮಾನವರ ಯಥಾರ್ಥ ಗುರು ಎಂದು ತಿಳಿದು ಬರುತ್ತದೆ.

27. ಅಧಿಕಾರಿಕ ಪುರುಷರ ಶರೀರ ಮನಸ್ಸುಗಳು ಯಾವ ರೀತಿ ಸಂಘಟಿತವಾಗಿ ರುತ್ತವೆಂದರೆ ಈಶ್ವರಭಾವ, ಪ್ರೇಮ, ಉಚ್ಚ ಪ್ರಕಾರದ ಶಕ್ತಿ ಇವುಗಳನ್ನು ಅರಗಿಸಿ ಕೊಳ್ಳುವ ಸಾಮರ್ಥ್ಯ ಅವಕ್ಕೆ ಇರುತ್ತದೆ. ಜೀವನು ಸ್ವಲ್ಪ ಆಧ್ಯಾತ್ಮಿಕ ಶಕ್ತಿ ಮತ್ತು ಲೋಕ ಮಾನ್ಯತೆಯನ್ನು ಪಡೆದರೆ ಸಾಕು ಅಹಂಕಾರದಿಂದ ಹಿಗ್ಗಿ ಹೋಗುತ್ತಾನೆ. ಅಧಿ ಕಾರಿಕ ಪುರುಷರು ಆ ಶಕ್ತಿಯನ್ನು ಅವನಿಗಿಂತ ಸಹಸ್ರ ಸಹಸ್ರಪಟ್ಟು ಅಧಿಕ ಪ್ರಮಾಣ ದಲ್ಲಿ ಪಡೆದಿದ್ದರೂ ಸ್ವಲ್ಪವೂ ವಿಚಲಿತವಾಗದೆ, ಅಹಂಕಾರಕ್ಕೊಳಗಾಗದೆ, ಬುದ್ಧಿಯ ಸ್ಥಿಮಿತವನ್ನು ಕಳೆದುಕೊಳ್ಳದೆ ಉಳಿಯುವರು. ಸಾಧಾರಣ ಜೀವನು ಎಲ್ಲಾ ರೀತಿಯ ಬಂಧನಗಳಿಂದ ಮುಕ್ತನಾಗಿ ಸಮಾಧಿಸ್ಥಿತಿಯನ್ನು ಪಡೆದು ಒಮ್ಮೆ ಆತ್ಮಾನುಭವದ ಪರಮಾನಂದವನ್ನು ಪಡೆದರೆ ಸಾಕು ಮತ್ತೆ ಸಂಸಾರಕ್ಕೆ ಹಿಂದಿರುಗಲು ಯಾವ ಕಾರಣ ದಿಂದಲೂ ಇಷ್ಟ ಪಡುವುದಿಲ್ಲ. ಅಧಿಕಾರಿಕ ಪುರುಷರ ವಿಷಯದಲ್ಲಾದರೊ ಅವರು ಜೀವನದಲ್ಲಿ ಆ ಆನಂದವನ್ನು ಅನುಭವಿಸಿದಷ್ಟೂ ಇತರರನ್ನು ಯಾವ ರೀತಿ ಆ ಆನಂದದಲ್ಲಿ ಭಾಗಿಗಳನ್ನಾಗಿ ಮಾಡುವುದು ಎಂಬುದೇ ಚಿಂತೆಯಾಗಿರುತ್ತದೆ. ಜೀವರಿಗೆ ಭಗವದ್ದರ್ಶನವನ್ನು ಪಡೆದ ಮೇಲೆ ಮತ್ತೆ ಮಾಡುವುದೇನೂ ಇರುವುದಿಲ್ಲ. ಅಧಿಕಾರಿಕ

ಪುರುಷರು ಭಗವದ್ದರ್ಶನವನ್ನು ಪಡೆದ ಮೇಲೆಯೆ ತಾವು ಬಂದಿರುವ ಉದ್ದೇಶದ ಅರಿವಾಗಿ ಆ ಕಾರ್ಯವನ್ನು ಸಾಧಿಸಲು ಪ್ರಾರಂಭಿಸುತ್ತಾರೆ. ಆದ್ದರಿಂದ ತಾವು ಬಂದ ಉದ್ದೇಶ ಸಫಲವಾಗುವವರೆಗೂ ಸಾಧಾರಣ ಮುಕ್ತ ಪುರುಷರಂತೆ ಈ ಶರೀರ ಈಗಲೇ ಹೋಗುವುದಾದರೆ ಹೋಗಲಿ ಎಂದು ಅವರು ಭಾವಿಸುವುದೇ ಇಲ್ಲ, ಮನುಷ್ಯ ಲೋಕದಲ್ಲಿ ಬದುಕಿರಬೇಕೆಂಬ ಆಗ್ರಹವನ್ನೇ ವ್ಯಕ್ತಪಡಿಸುತ್ತಾರೆ. ಆದರೆ ಅವರ ಬದುಕಿರಬೇಕೆಂಬ ಆಸೆಗೂ ಸಾಧಾರಣ ಜೀವಿಗಳ ಬದುಕಿರಬೇಕೆಂಬ ಆಸೆಗೂ ಅಜಗಜಾಂತರ ವ್ಯತ್ಯಾಸವಿರುತ್ತದೆ. ತಮ್ಮ ಕಾರ್ಯ ಮುಗಿದ ಮೇಲೆ ಅಧಿಕಾರಿಕ ಪುರುಷರು ಒಂದು ಕ್ಷಣವೂ ಸಂಸಾರದಲ್ಲಿರಲು ಇಷ್ಟ ಪಡದೆ ಪರಮಾನಂದದಿಂದ ಸಮಾಧಿಯಲ್ಲಿ ದೇಹವನ್ನು ತ್ಯಜಿಸಿ ಬಿಡುತ್ತಾರೆ. ಜೀವರಿಗೆ ಇಚ್ಛಾ ಮಾತ್ರದಿಂದ ಸಮಾಧಿಯಲ್ಲಿ ದೇಹವನ್ನು ತ್ಯಜಿಸುವುದಂತೂ ದೂರದ ಮಾತು, ತಮ್ಮ ಜೀವನದ ಕಾರ್ಯ ಮುಗಿದು ಹೋಗಿದೆ ಎಂಬ ಅರಿವೂ ಕೂಡ ಅವರಿಗುಂಟಾಗುವುದಿಲ್ಲ. ಈ ಜೀವನದಲ್ಲಿ ಅನೇಕ ಆಸೆಗಳು ಇನ್ನೂ ಪೂರ್ಣವಾಗಿಲ್ಲ ಎಂಬ ಭಾವನೆಯೆ ಇರುತ್ತದೆ. ಇನ್ನೂ ಅನೇಕ ವಿಷಯಗಳಲ್ಲಿಯೂ ಇದೇ ರೀತಿಯ ಭೇದಗಳನ್ನು ಕಾಣುತ್ತೇವೆ. ಈ ಕಾರಣದಿಂದಾಗಿ ನಮ್ಮ ಅಳತೆಗೋಲಿನಿಂದ ಅವತಾರ ಅಥವಾ ಅಧಿಕಾರಿಕ ಪುರುಷರ ಜೀವನ ಮತ್ತು ಕಾರ್ಯಗಳನ್ನು ಅಳೆಯಲು ಹೋದರೆ ನಾವು ತೀವ್ರ ಭ್ರಾಂತಿಗೆ ಒಳಗಾಗಬೇಕಾಗುತ್ತದೆ.

'ಗಯೆಗೆ ಹೋದರೆ ಶರೀರ ಉಳಿಯುವುದಿಲ್ಲ', 'ಜಗನ್ನಾಥಕ್ಕೆ ಹೋದರೆ ಚಿರ ಸಮಾಧಿಯಲ್ಲಿ ಮಗ್ನರಾಗುವರು'—ಶ್ರೀರಾಮಕೃಷ್ಣರ ಈ ಮಾತುಗಳನ್ನು ಅರ್ಥಮಾಡಿಕೊಳ್ಳಲು ಮೇಲೆ ಹೇಳಿದ ಶಾಸ್ತ್ರದ ವಿಷಯವನ್ನು ಸ್ವಲ್ಪ ಮಟ್ಟಿಗಾದರೂ ಅರ್ಥಮಾಡಿಕೊಳ್ಳುವುದು ಆವಶ್ಯಕ. ಈ ಉದ್ದೇಶದಿಂದಲೇ ನಾವು ಆದಷ್ಟು ಸಂಕ್ಷೇಪವಾಗಿ ಅದನ್ನು ವಿವರಿಸಿದೆವು. ಶ್ರೀರಾಮಕೃಷ್ಣರ ಯಾವ ಭಾವವೂ ಶಾಸ್ತ್ರಕ್ಕೆ ವಿರುದ್ಧವಾದುದಲ್ಲ ಎಂಬುದನ್ನು ಮೇಲಿನ ವಿವರಣೆಯಿಂದ ಅರ್ಥಮಾಡಿಕೊಳ್ಳಬಹುದು.

ಶ್ರೀರಾಮಕೃಷ್ಣರು ಮಥುರನೊಡನೆ ಗಯೆಗೆ ಹೋಗಲು ಇಷ್ಟಪಡದಿದ್ದುದನ್ನು ಮೊದಲೇ ತಿಳಿಸಿರುವೆವು. ಇದರಿಂದಾಗಿ ಯಾರೂ ಗಯೆಗೆ ಹೋಗಲಿಲ್ಲ. ವೈದ್ಯನಾಥದಿಂದ ಎಲ್ಲರೂ ಕಲ್ಕತ್ತೆಗೆ ಹಿಂದಿರುಗಿದರು.

28, ಕಾಶೀ ಬೃಂದಾವನ ಮುಂತಾದ ತೀರ್ಥ ಸ್ಥಳಗಳಿಗೆ ಹೋದುದಲ್ಲದೆ ಶ್ರೀರಾಮಕೃಷ್ಣರು ಒಮ್ಮೆ ಶ್ರೀಚೈತನ್ಯನ ಜನ್ಮಸ್ಥಳವಾದ ನವದ್ವೀಪವನ್ನು ಸಂದರ್ಶಿಸಲು ಹೋಗಿದ್ದರು. ಆಗಲೂ ಮಥುರನಾಥನೆ ಅವರನ್ನು ಕರೆದುಕೊಂಡು ಹೋಗಿದ್ದನು. ಶ್ರೀಗೌರಾಂಗನ ವಿಷಯದಲ್ಲಿ ಶ್ರೀರಾಮಕೃಷ್ಣರು ನಮಗೆ ಒಮ್ಮೆ ಹೇಳಿರುವುದರಿಂದ ತಿಳಿದು ಬರುವುದೇನೆಂದರೆ ಅವತಾರ ಪುರುಷರ ಮನಸ್ಸಿನ ಮುಂದೆ ಎಲ್ಲಾ ಸಮಯದಲ್ಲಿಯೂ ಎಲ್ಲಾ ಸತ್ಯಗಳೂ ಗೋಚರವಾಗುವುದಿಲ್ಲ. ಆದರೆ ಆಧ್ಯಾತ್ಮಿಕ ವಿಷಯಕ್ಕೆ ಸಂಬಂಧಿಸಿದ ಯಾವುದೇ ತತ್ತ್ವವನ್ನು ಅವರು ತಿಳಿಯಲು ಇಚ್ಛೆಪಟ್ಟರೆ ಅದು ಅತ್ಯಂತ ಸುಲಭವಾಗಿ ಅವರ ಬುದ್ಧಿಗೆ ಗೋಚರವಾಗುವುದು. ಶ್ರೀಗೌರಾಂಗನು ಅವತಾರ

ಪುರುಷ ಎಂಬ ವಿಷಯದಲ್ಲಿ ನಮ್ಮಲ್ಲನೇಕರಿಗೆ ಸಂದೇಹವಿತ್ತು. ವೈಷ್ಣವರು ಎಂದರೆ ಕೀಳು ಮಟ್ಟದವರೆಂಬ ಭಾವನೆಯೂ ಇತ್ತು. ಈ ಸಂದೇಹ ನಿವಾರಣೆಗಾಗಿ ಶ್ರೀರಾಮ ಕೃಷ್ಣರನ್ನು ಅನೇಕ ಬಾರಿ ಪ್ರಶ್ನಿಸಿದ್ದೆವು. ಶ್ರೀರಾಮಕೃಷ್ಣರು ಇದಕ್ಕುತ್ತರನಾಗಿ ತಿಳಿಸಿ ಕೊಟ್ಟರು—"ನನಗೂ ಹಾಗೆ ಅನ್ನಿಸಿತ್ತು ಮೊದಲು. ಚೈತನ್ಯನು ಅವತಾರವಾಗಲು ಹೇಗೆ ಸಾಧ್ಯ, ಭಾಗವತ ಪುರಾಣಗಳಲ್ಲಿ ಈ ವಿಷಯದ ಗಂಧವೇ ಇಲ್ಲ ಎಂದೆಲ್ಲ ಭಾವಿಸು ತ್ತಿದ್ದೆ. ಈ ಬೋಳು ತಲೆಯ ವೈಷ್ಣವರು ಅವನನ್ನು ಅವತಾರ ಪಟ್ಟಕ್ಕೆ ಏರಿಸಿರುವರು ಎಂದು ಅನ್ನಿಸುತ್ತಿತ್ತು. ನಾನು ಮಥುರನೊಡನೆ ನವದ್ವೀಪಕ್ಕೆ ಹೋಗಿದ್ದೆ. ಅವನು ಅವತಾರವಾಗಿದ್ದರೆ ಅಲ್ಲಿ ಸ್ವಲ್ಪವಾದರೂ ಅದರ ಪ್ರಕಾಶವಿರಲೇಬೇಕು, ನೋಡಿದಾಗ ನನಗದು ಅರ್ಥವಾಗಲೇ ಬೇಕು ಎಂದು ಭಾವಿಸಿದೆ. ದಿವ್ಯಭಾವದ ಆವಿರ್ಭಾವವನ್ನು ಗುರುತಿಸಲು ಅಲ್ಲಿ ಇಲ್ಲಿ ಓಡಾಡಿದೆ, ಬೇರೆ ಬೇರೆ ಗೋಸ್ವಾಮಿಗಳ ಮನೆಗೆ ಹೋದೆ. ಆದರೆ ಎಲ್ಲಿಯೂ ನನಗೆ ಯಾವ ವೈಶಿಷ್ಟ್ಯವೂ ಕಂಡು ಬರಲಿಲ್ಲ. ಎಲ್ಲಾ ಕಡೆಯೂ ಕೈ ಎತ್ತಿ ನಿಂತ ಮರದ ವಿಗ್ರಹಗಳೇ ಕಾಣುತ್ತಿದ್ದವು. ನನಗದನ್ನು ನೋಡಿ ಸಾಕಾಯಿತು. ಯಾಕಪ್ಪಾ ಅಲ್ಲಿಗೆ ಹೋದೆ ಎನಿಸಿತು. ಅನಂತರ ಹಿಂದಿರುಗಲು ದೋಣಿ ಹತ್ತ ಬೇಕೆಂದಿರುವಾಗ ನನಗೊಂದು ಅದ್ಭುತ ದರ್ಶನವಾಯಿತು. ಎಳೆ ವಯಸ್ಸಿನ ಇಬ್ಬರು ಸುಂದರ ಬಾಲಕರನ್ನು ಕಂಡೆ. ನಾನೆಂದೂ ಅಂಥ ಸೌಂದರ್ಯವನ್ನು ನೋಡಿರಲಿಲ್ಲ. ಅವರ ಮೈ ಬಣ್ಣ ಎರಕ ಹೊಯ್ದ ಚಿನ್ನದಂತಿತ್ತು. ಇಬ್ಬರ ತಲೆಯ ಸುತ್ತಲೂ ಪ್ರಭಾವಳಿ ಇತ್ತು. ಕೈಯನ್ನು ಎತ್ತಿ ನನ್ನ ಕಡೆಯೆ ನೋಡುತ್ತಾ ಆಕಾಶದ ಮೂಲಕ ನನ್ನೆಡೆಗೆ ಓಡಿಬರುತ್ತಿದ್ದರು. 'ಅವರು ಬರುತ್ತಿದ್ದಾರೆ, ಅವರು ಬರುತ್ತಿದ್ದಾರೆ' ಎಂದು ನಾನು ಕೂಗಿಕೊಂಡೆ. ನಾನು ಹೀಗೆ ಹೇಳುತ್ತಿದ್ದಂತೆಯೆ ಅವರು ಬಂದು ಇದನ್ನು (ತಮ್ಮ ದೇಹವನ್ನು) ಪ್ರವೇಶಿಸಿದರು. ನಾನು ಪ್ರಜ್ಞೆ ತಪ್ಪಿ ಕೆಳಗೆ ಬಿದ್ದೆ. ನಾನು ನೀರಿಗೆ ಬೀಳುವುದರಲ್ಲಿದ್ದೆ, ಆದರೆ ನನ್ನ ಪಕ್ಕದಲ್ಲಿದ್ದ ಹೃದಯನು ನನ್ನನ್ನು ಹಿಡಿದು ಕೊಂಡನು. ಹೀಗೆಯೆ ಅನೇಕ ದರ್ಶನಗಳು ಅವನು ಅವತಾರ ಪುರುಷನೆಂಬುದನ್ನು ನನಗೆ ದೃಢ ಪಡಿಸಿದವು." ಶ್ರೀರಾಮಕೃಷ್ಣರು ಇಂಥ ಅನೇಕ ವಿಷಯಗಳನ್ನು ಹೇಳಿರು ವರು. ಒಂದು ದಿನ ಗೌರಾಂಗನು ಬೀದಿಯಲ್ಲಿ ಸಂಕೀರ್ತನೆ ಮಾಡಿಕೊಂಡು ಹೋಗು ತ್ತಿದ್ದ ದರ್ಶನವನ್ನು ನಮಗೆ ಹೇಳಿರುವರು. ಇದನ್ನು ಬೇರೆ ಕಡೆ ಪ್ರಸ್ತಾಪಿಸಿರುವೆವು.*

29. ಮೇಲೆ ಹೇಳಿದ ತೀರ್ಥ ಪರ್ಯಟನೆಗಳಲ್ಲದೆ ಶ್ರೀರಾಮಕೃಷ್ಣರು ಒಮ್ಮೆ ಮಥುರನೊಡನೆ ಕಾಲ್ನಾಕ್ಕೆ ಹೋಗಿದ್ದರು. ಮಹಾಪ್ರಭು ಚೈತನ್ಯನ ಪಾದಸ್ಪರ್ಶದಿಂದ ಬಂಗಾಳದ ಗಂಗಾ ತೀರದ ಅನೇಕ ಪ್ರದೇಶಗಳು ತೀರ್ಥಸ್ಥಾನಗಳಾಗಿವೆ ಎಂಬುದನ್ನು ಪ್ರತ್ಯೇಕ ಹೇಳಬೇಕಾಗಿಲ್ಲ. ಕಾಲ್ನಾ ಅವುಗಳಲ್ಲಿ ಒಂದು ವಿಶಿಷ್ಟ ತೀರ್ಥಸ್ಥಾನ. ಮತ್ತೆ ವರ್ಧಮಾನ ರಾಜವಂಶಸ್ಥರು ಕಟ್ಟಿಸಿದ ೧೦೮ ಶಿವಮಂದಿರಗಳು ಕಾಲ್ನಾದ ಶೋಭೆ

* ಸಪ್ತಮ ಅಧ್ಯಾಯ ಪೂರ್ವಭಾಗವನ್ನು ನೋಡಿ.

ಯನ್ನು ಅಧಿಕಗೊಳಿಸಿವೆ. ಆದರೆ ಶ್ರೀರಾಮಕೃಷ್ಣರು ಈಗ ಕಾಲ್ನಾಕ್ಕೆ ಹೋಗುವ ಉದ್ದೇಶವೇ ಬೇರೆಯಾಗಿತ್ತು. ಅಲ್ಲಿಯ ಪ್ರಸಿದ್ಧ ಸಾಧು ಭಗವಾನ್‌ದಾಸ ಬಾಬಾಜಿ ಯನ್ನು ನೋಡುವುದೇ ಅವರ ಮನೋಭೀಷ್ಟವಾಗಿತ್ತು.

30. ಭಗವಾನ್‌ದಾಸನಿಗೆ ಆಗ ಎಂಭತ್ತಕ್ಕೂ ಅಧಿಕ ವಯಸ್ಸಾಗಿತ್ತು. ಅವನು ಯಾವ ಕುಲದಲ್ಲಿ ಜನಿಸಿದನೆಂಬುದು ನಮಗೆ ತಿಳಿಯದು. ಆದರೆ ಅವನ ಜ್ವಲಂತ ತ್ಯಾಗ ವೈರಾಗ್ಯ ಮತ್ತು ಭಗವದ್ಭಕ್ತಿಯ ವಿಷಯ ಬಂಗಾಳದಲ್ಲೆಲ್ಲಾ ಜನ ಜನಿತವಾಗಿತ್ತು. ಒಂದೇ ಜಾಗದಲ್ಲಿ ಅಲುಗಾಡದೆ ಕುಳಿತು ಹಗಲುರಾತ್ರಿ ಜಪತಪ, ಧ್ಯಾನ ಧಾರಣಾದಿ ಗಳನ್ನು ಮಾಡುತ್ತಿದ್ದನಂತೆ. ಇದರ ಪರಿಣಾಮವಾಗಿ ಕೊನೆಯಲ್ಲಿ ಪಾದಗಳೆರಡೂ ಜಡ ವಾಗಿ ಹೋಗಿದ್ದವು. ಆದರೆ ಎಂಭತ್ತು ವರ್ಷ ಮೀರಿ ಹೋಗಿದ್ದರೂ, ಮೇಲೇಳುವಷ್ಟೂ ಶಕ್ತಿ ಇಲ್ಲದಿದ್ದರೂ ಅವನಿಗೆ ಹರಿನಾಮ ಸಂಕೀರ್ತನೆಯಲ್ಲಿ ಅತ್ಯುತ್ಸಾಹ. ಹರಿನಾಮ ವನ್ನು ಉಚ್ಚರಿಸುತ್ತಾ ಆನಂದಬಾಷ್ಪವನ್ನು ಸುರಿಸುತ್ತಿದ್ದನು. ಈ ಭಕ್ತಿ ದಿನದಿನವೂ ವೃದ್ಧಿಯಾಗುತ್ತಿತ್ತೇ ಹೊರತು ಕಡಮೆಯಾಗುತ್ತಿರಲಿಲ್ಲ. ಅವನು ಅಂದಿನ ವೈಷ್ಣವ ಸಮಾಜಕ್ಕೆ ಜೀವಕಳೆಯಂತಿದ್ದನು. ತ್ಯಾಗಿ ವೈಷ್ಣವ ಸಾಧುಗಳನೇಕರು ಅವನ ಉಜ್ವಲ ಆದರ್ಶ ಮತ್ತು ಉಪದೇಶಗಳಿಂದ ತಮ್ಮ ಜೀವನವನ್ನು ರೂಪಿಸಿಕೊಳ್ಳುವ ಅವಕಾಶವನ್ನು ಪಡೆದಿದ್ದರು. ಅವನೆಡೆಗೆ ಯಾರೇ ಹೋದರೂ ಅವನ ತ್ಯಾಗ, ತಪಸ್ಸು, ಪವಿತ್ರತೆ ಮತ್ತು ಭಕ್ತಿ ಇವುಗಳನ್ನು ಹೃತ್ಪೂರ್ವಕವಾಗಿ ಅನುಭವಿಸಿ ಅಪೂರ್ವ ಆನಂದ ದೊಡನೆ ಹಿಂದಿರುಗುತ್ತಿದ್ದರು. ಮಹಾಪ್ರಭು ಚೈತನ್ಯನ ಪ್ರೇಮಧರ್ಮದ ಸಂಬಂಧದಲ್ಲಿ ಭಗವಾನ್ ದಾಸನು ಯಾವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದನೊ ಜನರು ಅದನ್ನೆ ಪೂರ್ಣಸತ್ಯವನ್ನಾಗಿ ಸ್ವೀಕರಿಸಿ ಅನುಷ್ಠಿಸುತ್ತಿದ್ದರು. ಬಾಬಾಜಿಯು ಕೇವಲ ಸ್ವಂತ ಸಾಧನೆಯಲ್ಲಿಯೆ ಮಗ್ನನಾಗಿರಲಿಲ್ಲ. ಆದರೆ ವೈಷ್ಣವ ಸಮಾಜದ ಹಿತದ ಕಡೆಗೂ ಅವನ ಗಮನವಿತ್ತು. ತ್ಯಾಗೀ ವೈಷ್ಣವರು ಹೇಗೆ ತ್ಯಾಗಮಾರ್ಗವನ್ನನುಸರಿಸುತ್ತಾರೆ, ಇತರ ಸಾಧಾರಣಸಂಸಾರಿಗಳು ಚೈತನ್ಯಮಾರ್ಗವನ್ನು ಆಶ್ರಯಿಸಿ ಹೇಗೆ ಶಾಂತಿಯನ್ನು ಪಡೆಯುತ್ತಾರೆ–ಈ ಎಲ್ಲ ವಿಷಯಗಳನ್ನು ಕುರಿತು ಅವನು ಚಿಂತಿಸುತ್ತಿದ್ದನು ಮತ್ತು ಇದಕ್ಕೆ ಸಂಬಂಧಿಸಿದ ಚಟುವಟಿಕೆಗಳಲ್ಲೂ ಮಗ್ನನಾಗಿರುತ್ತಿದ್ದನು. ವೈಷ್ಣವ ಸಮಾಜ ದಲ್ಲಿ ಎಲ್ಲಿ ಏನು ನಡೆಯುತ್ತಿದೆ, ಎಲ್ಲಿ ಯಾವ ಸಾಧು ಏನು ಮಾಡುತ್ತಿದ್ದಾನೆ ಎಂಬುದ ನ್ನೆಲ್ಲ ಜನರು ಬಂದು ಬಾಬಾಜಿಗೆ ತಿಳಿಸುತ್ತಿದ್ದರು. ಅವನೂ ಕೂಡ ಅದನ್ನೆಲ್ಲ ಕೇಳಿ ಅದಕ್ಕನುಗುಣವಾದ ಸಲಹೆಗಳನ್ನು ನೀಡುತ್ತಿದ್ದನು. ತ್ಯಾಗ, ತಪಸ್ಸು ಮತ್ತು ಪ್ರೇಮದ ಜಗತ್ತಿನಲ್ಲಿ ಒಂದು ಅದೃಶ್ಯವಾದ ದೃಢವಾದ ಸಂಬಂಧವಿದೆ! ಜನರು ಬಾಬಾಜಿಯ ಉಪದೇಶವನ್ನು ಶಿರಸಾವಹಿಸಿ ಸ್ವಪ್ರೇರಣೆಯಿಂದಲೇ ಅದನ್ನು ಅನುಸರಿಸುತ್ತಿದ್ದರು. ಹೀಗೆ ಗುಪ್ತಚರರ ಸಹಾಯವಿಲ್ಲದೆಯೆ ಬಾಬಾಜಿಯು ತನ್ನ ತೀಕ್ಷ್ಣದೃಷ್ಟಿಯಿಂದ ವೈಷ್ಣವ ಸಮಾಜದಲ್ಲಿ ನಡೆಯುತ್ತಿದ್ದುದನ್ನೆಲ್ಲಾ ಅರಿಯುತ್ತಿದ್ದನು. ಸಮಾಜದ ಪ್ರತಿ ಯೊಬ್ಬ ವ್ಯಕ್ತಿಯ ಮೇಲೂ ಅವನ ಪ್ರಭಾವವಿತ್ತು. ಅವನ ತೀಕ್ಷ್ಣ ದೃಷ್ಟಿ ಮತ್ತು

ಪ್ರಭಾವದ ಮುಂದೆ ಸರಳ ವಿಶ್ವಾಸಿಯ ಉತ್ಸಾಹ ಹೇಗೆ ವೃದ್ಧಿಸುತ್ತಿತ್ತೋ ಹಾಗೆಯೇ ಕಪಟ ವ್ಯಕ್ತಿಗಳು ಭೀತಿಯಿಂದ ತಮ್ಮ ಸ್ವಭಾವವನ್ನು ಪರಿವರ್ತಿಸಿಕೊಳ್ಳುತ್ತಿದ್ದರು.

31. ಶ್ರೀರಾಮಕೃಷ್ಣರು ಅನುರಾಗದ ತೀವ್ರ ಪ್ರೇರಣೆಯಿಂದ ಭಗವಂತನನ್ನು ಕಾಣಲು ಹನ್ನೆರಡು ವರ್ಷ ಸುದೀರ್ಘ ತಪಸ್ಸನ್ನು ಆಚರಿಸಿದರು. ಇದರ ನಂತರ ಅವರಲ್ಲಿ ಅನನ್ಯ ಸದೃಶ ಗುರುಭಾವವು ಪ್ರಕಾಶಗೊಂಡಿತು. ಇದೇ ಸಂದರ್ಭದಲ್ಲಿ ಉತ್ತರ ಭಾರತದ ಅನೇಕ ಭಾಗಗಳಲ್ಲಿ ಒಂದು ವಿಶೇಷ ಧಾರ್ಮಿಕ ಆಂದೋಳನ ನಡೆಯುತ್ತಿತ್ತು. ಕಲ್ಕತ್ತೆ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಹರಿಸಭೆ ಮತ್ತು ಬ್ರಹ್ಮಸಮಾಜದ ಆಂದೋಳನ, ಉತ್ತರ ಪಶ್ಚಿಮ ಪಂಜಾಬ್ ಪ್ರಾಂತಗಳಲ್ಲಿ ಶ್ರೀಯುತ ದಯಾನಂದ ಸ್ವಾಮಿಜಿಯವರ ವೇದ ಧರ್ಮದ ಆಂದೋಲನ (ಆರ್ಯ ಸಮಾಜ), ಬಂಗಾಳದಲ್ಲಿ ವಿಶುದ್ಧ ವೇದಾಂತಭಾವ, ಕರ್ತಾಭಜ ಸಂಪ್ರದಾಯ ಮತ್ತು ರಾಧಾಸ್ವಾಮಿ ಮತ, ಗುಜರಾತಿನಲ್ಲಿ ಸ್ವಾಮಿ ನಾರಾಯಣ ಮತ–ಈ ರೀತಿ ಅನೇಕ ಸ್ಥಳಗಳಲ್ಲಿ ಅನೇಕ ಮತ ಧರ್ಮಗಳು ಹುಟ್ಟಿಕೊಂಡಿದ್ದವು. ಇವೆಲ್ಲವೂ ಹೆಚ್ಚು ಕಡಮೆ ಇದೇ ಸಮಯದಲ್ಲಿಯೇ ಪ್ರಚಲಿತವಿದ್ದ ಆಂದೋಳನಗಳು. ಈ ಆಂದೋಲನಗಳ ಸವಿಸ್ತಾರ ವಿವರಣೆಯು ಇಲ್ಲಿ ನಮ್ಮ ಉದ್ದೇಶವಲ್ಲ. ಕಲ್ಕತ್ತೆಯ ಕಲುಟೋಲಾ ಎಂಬ ಹೆಸರಿನ ಪ್ರದೇಶದಲ್ಲಿ ಸ್ಥಾಪಿತ ವಾದ ಒಂದು ಹರಿಸಭೆಗೆ ಶ್ರೀರಾಮಕೃಷ್ಣರು ಭೇಟಿ ಇತ್ತಿದ್ದರು. ಅಲ್ಲಿ ನಡೆದ ಘಟನೆ ಯನ್ನು ಇಲ್ಲಿ ಓದುಗರಿಗೆ ತಿಳಿಸಿಕೊಡುತ್ತೇವೆ.

32. ಶ್ರೀರಾಮಕೃಷ್ಣರು ಆಹ್ವಾನಿತರಾಗಿ ಒಂದು ದಿನ ಆ ಹರಿಸಭೆಗೆ ಹೋಗಿ ದ್ದರು. ಹೃದಯನೂ ಅವರೊಡನಿದ್ದನು. ಕೆಲವರು ಹೇಳುತ್ತಾರೆ ಪಂಡಿತ ವೈಷ್ಣವ ಚರಣನು ಅಂದು ಅಲ್ಲಿ ಭಾಗವತ ಪಾಠ ಮಾಡುವವನಿದ್ದನು ಮತ್ತು ಅವನ ಬಾಯಿಂದ ಭಾಗವತವನ್ನು ಕೇಳುವುದಕ್ಕೋಸ್ಕರ ಶ್ರೀರಾಮಕೃಷ್ಣರು ಅಲ್ಲಿಗೆ ಹೋಗಿದ್ದರು ಎಂದು. ಆದರೆ ಶ್ರೀರಾಮಕೃಷ್ಣರು ಈ ಮಾತನ್ನು ನಮಗೆ ಹೇಳಿದುದು ನೆನಪಿಲ್ಲ. ಏನೇ ಆಗಲಿ ಶ್ರೀರಾಮಕೃಷ್ಣರು ಅಲ್ಲಿಗೆ ಹೋದಾಗ ಭಾಗವತ ಪಾಠ ನಡೆಯುತ್ತಿತ್ತು ಮತ್ತು ಅಲ್ಲಿ ನೆರೆದ ಎಲ್ಲರೂ ತನ್ಮಯರಾಗಿ ಅದನ್ನು ಕೇಳುತ್ತಿದ್ದರು. ಶ್ರೀರಾಮಕೃಷ್ಣರು ಅದನ್ನು ನೋಡಿ ಶ್ರೋತೃಗಳ ಮಧ್ಯದಲ್ಲಿ ಹೋಗಿ ಕುಳಿತು ಭಾಗವತ ಪಠಣವನ್ನು ಕೇಳತೊಡಗಿ ದರು.

ಆ ಹರಿಸಭೆಯ ಸದಸ್ಯರುಗಳು ತಾವು ಶ್ರೀಚೈತನ್ಯನ ಶ್ರೀಪಾದವನ್ನು ಸಂಪೂರ್ಣ ಆಶ್ರಯಿಸಿರುವುದಾಗಿ ನಂಬಿದ್ದರು. ಈ ವಿಷಯವನ್ನು ನಿರಂತರ ನೆನಸಿಕೊಳ್ಳುವುದಕ್ಕೋ ಸ್ಕರ ಚೈತನ್ಯನಿಗಾಗಿ ಒಂದು ಆಸನವನ್ನು ಹಾಕಿರುತ್ತಿದ್ದರು. ಚೈತನ್ಯನು ಆ ಆಸನದ ಮೇಲೆ ಕುಳಿತಿರುವನೆಂದು ಕಲ್ಪಿಸಿಕೊಂಡು ಅದರ ಮುಂದೆಯೆ ಪೂಜೆ, ಪಠಣ ಮುಂತಾದ ಸಭೆಯ ಅನುಷ್ಠಾನಗಳು ನಡೆಯುತ್ತಿದ್ದವು. ಆ ಆಸನವನ್ನು "ಶ್ರೀ ಚೈತನ್ಯನ ಆಸನ" ಎಂದು ಕರೆಯುತ್ತಿದ್ದರು. ಎಲ್ಲರೂ ಭಕ್ತಿಭಾವದಿಂದ ಅದರ ಮುಂದೆ ಪ್ರಣಾಮ ಮಾಡುತ್ತಿದ್ದರು ಮತ್ತು ಯಾರನ್ನೂ ಅದರ ಮೇಲೆ ಕುಳಿತುಕೊಳ್ಳಲು ಬಿಡುತ್ತಿರಲಿಲ್ಲ.

ಬೇರೆ ದಿನಗಳಂತೆಯೆ ಅಂದೂ ಕೂಡ ಹೂವಿನ ಹಾರ ಮುಂತಾದುವುಗಳಿಂದ ಭೂಷಿತ ವಾದ ಆ ಆಸನದ ಮುಂದೆಯೆ ಭಾಗವತ ಪಾಠ ನಡೆಯುತ್ತಿತ್ತು. ಪಾಠಕನು ಶ್ರೀಮಹಾ ಪ್ರಭುವಿಗೆ ಹರಿಕಥೆಯನ್ನು ಓದಿ ಹೇಳುತ್ತಿರುವುದಾಗಿ ಭಾವಿಸಿಕೊಂಡು ಭಕ್ತಿಭಾವದಿಂದ ಪಠಣವನ್ನು ಮಾಡುತ್ತಿದ್ದನು. ಶ್ರೋತೃಗಳೂ ಕೂಡ ಅವನ ಮುಂದೆಯೇ ಕುಳಿತು ಹರಿಕಥಾಮೃತವನ್ನು ತಾವು ಪಾನ ಮಾಡುತ್ತಿರುವುದಾಗಿ ಭಾವಿಸಿಕೊಂಡು ಉಲ್ಲಾಸ ಭರಿತರಾಗಿದ್ದರು. ಶ್ರೀರಾಮಕೃಷ್ಣರ ಆಗಮನದಿಂದ ಶ್ರೋತೃಗಳ ಮತ್ತು ಪಾಠಕರ ಆ ಉಲ್ಲಾಸ ಮತ್ತು ಭಕ್ತಿಭಾವ ನೂರುಪಟ್ಟು ವೃದ್ಧಿಯಾಯಿತು.

33. ಭಾಗವತದ ಆ ಅಮೃತೋಪಮ ಕಥೆಯನ್ನು ಕೇಳುತ್ತಾ ಕೇಳುತ್ತಾ ಶ್ರೀರಾಮಕೃಷ್ಣರು ಮೈಮರೆತರು. ಭಕ್ತಿ ಪರವಶತೆಯಲ್ಲಿ "ಶ್ರೀ ಚೈತನ್ಯಾಸನ"ದ ಕಡೆಗೆ ಇದ್ದಕ್ಕಿದ್ದಂತೆಯೆ ಓಡತೊಡಗಿದರು. ಆ ಆಸನದ ಮೇಲೆ ಹೋಗಿ ನಿಂತುಕೊಂಡು ಎಂತಹ ಒಂದು ಗಾಢ ಸಮಾಧಿಯಲ್ಲಿ ಮಗ್ನರಾದರೆಂದರೆ ಅವರ ದೇಹವು ನಿರ್ಜೀವ ವಾದಂತೆ ಕಾಣಿಸಿಕೊಂಡಿತು. ಆದರೆ ಅವರ ಜ್ಯೋತಿರ್ಮಯ ಮುಖದಲ್ಲಿ ಅದೇ ಅಪೂರ್ವ ಪ್ರೇಮಮಯ ನಗು ಬೆಳಗುತ್ತಿತ್ತು. ಎಲ್ಲಾ ಚೈತನ್ಯದೇವನ ಮೂರ್ತಿಗಳಲ್ಲಿ ಕಂಡುಬರುವಂತೆ ಶ್ರೀರಾಮಕೃಷ್ಣರು ಕೈಗಳನ್ನು ಮೇಲೆತ್ತಿಕೊಂಡಿದ್ದರು ಮತ್ತು ಕೈ ಬೆರಳುಗಳು ಮೇಲ್ಮುಖವಾಗಿದ್ದವು. ಇದನ್ನು ನೋಡಿದ ಭಕ್ತರನೇಕರು ಶ್ರೀರಾಮ ಕೃಷ್ಣರು ಭಾವಮುಖದಲ್ಲಿ ಶ್ರೀ ಚೈತನ್ಯನೊಡನೆ ಒಂದಾಗಿರುವರೆಂದು ಭಾವಿಸಿದರು. ಶ್ರೀರಾಮಕೃಷ್ಣರ ದೇಹಮನಸ್ಸು ಮತ್ತು ಶ್ರೀಚೈತನ್ಯನ ದೇಹಮನಸ್ಸು ಇವುಗಳ ನಡುವೆ ಸ್ಥೂಲದೃಷ್ಟಿಯಿಂದ ದೇಶ ಕಾಲ ಮತ್ತು ಇನ್ನೂ ಅನೇಕ ಅಂತರಗಳು ಇದ್ದರೂ ಭಾವಮುಖದಲ್ಲಿದ್ದ ಶ್ರೀರಾಮಕೃಷ್ಣರಿಗೆ ಇವಾವುದರ ಅರಿವೂ ಇರಲಿಲ್ಲ. ಪಾಠಕನು ನಿಲ್ಲಿಸಿ ಶ್ರೀರಾಮಕೃಷ್ಣರನ್ನು ಸ್ಥಂಭೀಭೂತನಾಗಿ ನೋಡುತ್ತಿದ್ದಾನೆ. ಶ್ರೋತೃಗಳಿಗೆ ಶ್ರೀರಾಮಕೃಷ್ಣರ ಆ ಭಾವಾವೇಶವನ್ನು ಅರ್ಥಮಾಡಿಕೊಳ್ಳಲು ಆಗದಿದ್ದರೂ ಅವರು ಯಾವುದೊ ಅವ್ಯಕ್ತ ಭಯ ಭಕ್ತಿಯಿಂದ ಮುಗ್ಧರಾಗಿ ಕುಳಿತಿದ್ದಾರೆ. ಒಳಿತು ಕೆಡುಕಿನ ಯಾವ ವಿಷಯವನ್ನೂ ಯಾರಿಗೂ ಆಗ ಹೇಳಲಾಗಲಿಲ್ಲ. ಶ್ರೀರಾಮಕೃಷ್ಣರ ಪ್ರಬಲ ಭಾವ ಪ್ರವಾಹದಲ್ಲಿ ಎಲ್ಲರೂ ಕೊಚ್ಚಿಕೊಂಡು ಹೋಗಿ ಯಾವುದೋ ಒಂದು ಪ್ರದೇಶ ದಲ್ಲಿ ತೇಲುತ್ತಿರುವಂತೆ ಅನಿಸುತ್ತಿತ್ತು. ಯಾವುದೊ ಅನಿರ್ವಚನೀಯ ಆನಂದದಲ್ಲಿ ಎಲ್ಲರೂ ಏನು ಮಾಡಬೇಕೆಂದು ತಿಳಿಯದೆ ಕುಳಿತಿದ್ದರು. ಅನಂತರ ಅದೇ ಅವ್ಯಕ್ತಭಾವ ದಿಂದ ಪ್ರೇರಿತರಾಗಿ ಎಲ್ಲರೂ ಸೇರಿಕೊಂಡು ಉಚ್ಚ ಸ್ವರದಲ್ಲಿ ಹರಿನಾಮ ಸಂಕೀರ್ತನೆ ಪ್ರಾರಂಭಿಸಿದರು. ಭಗವಂತನ ಯಾವ ನಾಮವನ್ನು ಆರಿಸಿಕೊಂಡು ಮನಸ್ಸು ಸಮಾಧಿ ಯಲ್ಲಿ ಮಗ್ನವಾಗುವುದೊ ಅದೇ ನಾಮದ ಮೂಲಕ ಮನಸ್ಸು ಕೆಳಗಿಳಿದು ಬಂದು ಬಾಹ್ಯ ಜಗತ್ತಿನ ಅನುಭವವನ್ನು ಪಡೆಯುವುದು. ಶ್ರೀರಾಮಕೃಷ್ಣರ ಜೀವನದಲ್ಲಿ ನಾವು ಇದನ್ನು ಮತ್ತೆ ಮತ್ತೆ ನೋಡಿರುವೆವು. ಈಗಲೂ ಹಾಗೆಯೇ ಆಯಿತು. ಸಂಕೀರ್ತ ನೆಯ ಹರಿನಾಮವನ್ನು ಕೇಳುತ್ತಿದ್ದಂತೆಯೆ ಶ್ರೀರಾಮಕೃಷ್ಣರ ದೇಹದಲ್ಲಿ ಪ್ರಜ್ಞೆ ಕಾಣಿಸಿ

ಕೊಂಡಿತು. ಭಾವಪರವಶರಾಗಿ ಶ್ರೀರಾಮಕೃಷ್ಣರು ಭಕ್ತರೊಡನೆ ಸಂಕೀರ್ತನೆ ಮಾಡುತ್ತಾ ನರ್ತಿಸತೊಡಗಿದರು, ಮತ್ತೆ ಕೆಲವೊಮ್ಮೆ ಭಾವಾತಿರೇಕದಿಂದ ಸ್ಥಿರವಾಗಿ ನಿಶ್ಚೇಷ್ಟಿತರಾಗುತ್ತಿದ್ದರು. ಶ್ರೀರಾಮಕೃಷ್ಣರ ಈ ರೀತಿಯ ಅವಸ್ಥೆಯನ್ನು ನೋಡಿ ಭಕ್ತರಲ್ಲಿ ಇನ್ನೂ ಉತ್ಸಾಹ ವೃದ್ಧಿಯಾಯಿತು. ಎಲ್ಲರೂ ಸಂಕೀರ್ತನೆಯಲ್ಲಿ ಉನ್ಮತ್ತ ರಾದರು. ಆಗ ಶ್ರೀರಾಮಕೃಷ್ಣರು "ಶ್ರೀ ಚೈತನ್ಯನ ಆಸನ"ದ ಮೇಲೆ ನಿಂತುಕೊಂಡುದು ಸರಿಯೊ ತಪ್ಪೋ ಎಂದು ವಿಚಾರ ಮಾಡುವವರಾರು ? ಹೀಗೆ ಬಹಳ ಹೊತ್ತಿನ ನೃತ್ಯ, ಸಂಕೀರ್ತನೆಯ ನಂತರ ಎಲ್ಲರೂ ಜಯಧ್ವನಿ ಮಾಡಿದರು. ಅಂದಿನ ಸಭೆ ಮುಕ್ತಾಯ ಗೊಂಡಿತು. ಶ್ರೀರಾಮಕೃಷ್ಣರು ಸ್ವಲ್ಪಹೊತ್ತಿನ ನಂತರ ದಕ್ಷಿಣೇಶ್ವರಕ್ಕೆ ಹಿಂದಿರುಗಿದರು.

34. ಶ್ರೀರಾಮಕೃಷ್ಣರ ದಿವ್ಯ ಪ್ರಭಾವದಿಂದ ಸ್ವಲ್ಪ ಹೊತ್ತಿನ ಮಟ್ಟಿಗೆ ಅಲ್ಲಿ ನೆರೆದಿದ್ದವರ ದೋಷದೃಷ್ಟಿಯು ಸ್ತಬ್ಧವಾಗಿತ್ತು ನಿಜ. ಅವರು ಅಲ್ಲಿಂದು ಹೊರಟು ಹೋದ ಕೂಡಲೇ ಮತ್ತೆ ಅವರೆಲ್ಲ ಪುನರ್ಮೂಷಿಕರಾದರು. ನಿಜವಾಗಿಯೂ ಯಾರು ಜ್ಞಾನವನ್ನು ಉಪೇಕ್ಷಿಸಿ ಕೇವಲ ಭಕ್ತಿ ಮಾರ್ಗವನ್ನೇ ಅನುಸರಿಸುತ್ತಾರೋ ಅವರಲ್ಲೆಲ್ಲಾ ಈ ದೋಷವನ್ನು ಕಾಣುತ್ತೇವೆ. ಅಲ್ಲಿ ನೆರೆದಿದ್ದ ಭಕ್ತರೆಲ್ಲರೂ ಶ್ರೀಹರಿಯ ನಾಮ ಸಂಕೀರ್ತನೆಯ ಸಹಾಯದಿಂದ ಸ್ವಲ್ಪ ಹೊತ್ತಿನ ಮಟ್ಟಿಗೆ ಉಚ್ಚ ಆಧ್ಯಾತ್ಮಿಕ ಸ್ಥಿತಿ ಯನ್ನು ಸುಲಭವಾಗಿ ಏರಿದ್ದರು. ಆದರೆ ಮರುಕ್ಷಣವೇ ಅಷ್ಟೇ ಕೆಳಮಟ್ಟಕ್ಕೆ ಇಳಿದರು. ಇದರಲ್ಲಿ ಅವರ ವಿಶೇಷ ದೋಷವೇನೂ ಇಲ್ಲ. ಏಕೆಂದರೆ ಉತ್ತೇಜನದ ನಂತರ ಕೆಳ ಮಟ್ಟಕ್ಕಿಳಿಯುವುದು ಪ್ರಾಕೃತಿಕವಾದ ಶರೀರ ಮನಸ್ಸುಗಳ ಧರ್ಮ. ಭರತ ಇಳಿತ ಗಳಿದ್ದಂತೆ–ಹಿಗ್ಗು ಕುಗ್ಗುಗಳು ಪ್ರಕೃತಿಯ ನಿಯಮ. ಹರಿಸಭೆಯಲ್ಲಿ ನೆರೆದಿದ್ದ ಭಕ್ತರು ಭಾವ ಪ್ರವಾಹವು ಇಳಿದ ಮೇಲೆ ತಮ್ಮ ತಮ್ಮ ಸಂಸ್ಕಾರಗಳ ವಶವರ್ತಿಗಳಾಗಿ ಶ್ರೀರಾಮಕೃಷ್ಣರ ಕ್ರಿಯೆಗಳ ಸಮಾಲೋಚನೆಯಲ್ಲಿ ಮಗ್ನರಾದರು. ಒಂದು ಪಕ್ಷದವರು ಶ್ರೀರಾಮಕೃಷ್ಣರು ಭಾವಮುಖರಾಗಿ "ಶ್ರೀ ಚೈತನ್ಯಾಸನ"ವನ್ನು ಏರಿದುದು ಸರಿಯೆಂದು ಸಮರ್ಥಿಸಿದರೆ ಇನ್ನೊಂದು ಪಕ್ಷದವರು ಅದನ್ನು ತೀವ್ರವಾಗಿ ಖಂಡಿಸಿದರು. ಎರಡೂ ಪಕ್ಷಗಳ ನಡುವೆ ಘೋರ ವಾಗ್ಯುದ್ಧ ನಡೆಯಿತು. ಆದರೆ ಯಾವ ತೀರ್ಮಾನಕ್ಕೂ ಬರಲಾಗಲಿಲ್ಲ.

ಕ್ರಮೇಣ ಈ ವಿಷಯ ಬಾಯಿಂದ ಬಾಯಿಗೆ ಹರಡುತ್ತಾ ವೈಷ್ಣವ ಸಮಾಜ ದಲ್ಲೆಲ್ಲಾ ಪ್ರಚಾರಿತವಾಯಿತು. ಭಗವಾನ್‌ದಾಸ ಬಾಬಾಜಿಯ ಕಿವಿಗೂ ಬಿತ್ತು. ಮುಂದೆ ಹೀಗಾಗುವುದನ್ನು ತಪ್ಪಿಸಬೇಕೆಂದು ಅವನು ತೀರ್ಮಾನಿಸಿದ. ಏಕೆಂದರೆ ಭಗವದ್ಭಾವದ ಸೋಗು ಹಾಕಿಕೊಂಡು ಹೆಸರು ಕೀರ್ತಿಗಾಗಿ ಧೂರ್ತರೂ ಕೂಡ ಆ. ಆಸನವನ್ನು ಏರಿಬಿಡಬಹುದೆಂದು ಅವನು ಭಾವಿಸಿದನು. ಹರಿಸಭೆಯಲ್ಲಿ ಆ ಆಸನ ವನ್ನು ಹೇಗೆ ರಕ್ಷಿಸಬೇಕು ಎಂಬುದನ್ನು ಚರ್ಚಿಸಲು ಅವನು ಅಲ್ಲಿಗೆ ಬಂದನು.

35. ತನ್ನ ಇಷ್ಟ ದೇವತೆಯ ಆಸನವನ್ನು ನಗಣ್ಯರಾದ ಶ್ರೀರಾಮಕೃಷ್ಣರು ಏರಿದುದನ್ನು ಕೇಳಿದಾಗ ಭಗವಾನ್ ದಾಸನಿಗೆ ತುಂಬ ಬೇಸರವಾಯಿತು. ಅಷ್ಟೇ

ಅಲ್ಲದೆ ಕೋಪದಿಂದ ಅವರನ್ನು ಕಟುವಾಗಿ ನಿಂದಿಸಿ, ಅವರನ್ನು ಢಾಂಬಿಕರೆಂದು ಕರೆಯಲು ಹಿಂಜರಿಯಲಿಲ್ಲ. ಅವನು ಹರಿಸಭೆಗೆ ಬಂದಾಗ ಅವನ ಕೋಪ ಇನ್ನೂ ಏರಿತು, ಅಂಥ ಒಂದು ಅನಿಷ್ಟ ಸಂಭವಿಸಲು ಅವಕಾಶ ಕೊಟ್ಟಿದ್ದಕ್ಕೆ ಆ ಭಕ್ತರನ್ನು ಚೆನ್ನಾಗಿ ಬಯ್ದನು. ಸ್ವಲ್ಪ ಕ್ರೋಧ ಶಮನವಾದ ಮೇಲೆ ಮುಂದೆ ಆ ರೀತಿ ಆಗದಂತೆ ನೋಡಿಕೊಳ್ಳಲು ಏನು ಮಾಡಬೇಕೆಂಬುದರ ಬಗ್ಗೆ ಅವರಿಗೆ ನಿರ್ದೇಶನ ನೀಡಿದನು. ಆದರೆ ಯಾರ ದೆಸೆಯಿಂದ ಹರಿಸಭೆಯಲ್ಲಿ ಇಷ್ಟೆಲ್ಲಾ ಗೋದಲವುಂಟಾಯಿತೋ ಅವರಿಗೆ ಇದಾವುದರ ವಿಷಯವೂ ತಿಳಿಯಲಿಲ್ಲ.

36. ಈ ಘಟನೆಯಾದ ಕೆಲವು ದಿನಗಳ ನಂತರ ಶ್ರೀರಾಮಕೃಷ್ಣರು ಸ್ವಪ್ರೇರಣೆಯಿಂದ ಹೃದಯ ಮತ್ತು ಮಥುರನಾಥರನ್ನು ಕರೆದುಕೊಂಡು ಕಾಲ್ನಾಕ್ಕೆ ಹೋದರು. ಬೆಳಕು ಹರಿಯುವುದಕ್ಕೆ ಮುಂಚೆಯೆ ದೋಣಿಯು ಘಟ್ಟವನ್ನು ತಲುಪಿತು. ಮಥುರನು ಇಳಿದುಕೊಳ್ಳುವ ಜಾಗವನ್ನು ಹುಡುಕಲು ಹೊರಟನು. ಶ್ರೀರಾಮಕೃಷ್ಣರು ಆ ಸಮಯದಲ್ಲಿ ಹೃದಯನೊಡನೆ ನಗರ ದರ್ಶನಕ್ಕೆ ಹೊರಟರು. ಅವರಿವರನ್ನು ಕೇಳಿಕೊಂಡು ಭಗವಾನ್‌ದಾಸ ಬಾಬಾಜಿಯ ಆಶ್ರಮವನ್ನು ಬಂದು ತಲುಪಿದರು.

ಬಾಲಕ ಸ್ವಭಾವದ ಶ್ರೀರಾಮಕೃಷ್ಣರಿಗೆ ಪೂರ್ವ ಪರಿಚಿತರಲ್ಲದ ವ್ಯಕ್ತಿಗಳನ್ನು ಸಂಧಿಸುವಾಗ ಏನೋ ಒಂದು ರೀತಿಯ ಭಯ, ಲಜ್ಜೆ ಉಂಟಾಗುತ್ತಿತ್ತು. ಶ್ರೀರಾಮಕೃಷ್ಣರ ಈ ಭಾವವನ್ನು ನಾವು ಅನೇಕ ಬಾರಿ ಗಮನಿಸಿರುವೆವು. ಬಾಬಾಜಿಯ ದರ್ಶನವನ್ನು ಪಡೆಯಲು ಹೋದಾಗಲೂ ಇದೇ ಸ್ಥಿತಿ ಉಂಟಾಯಿತು. ಹೃದಯನನ್ನು ಮುಂದೆ ಹೋಗಲು ಹೇಳಿ ತಾವು ತಲೆಯಿಂದ ಕಾಲಿನವರೆಗೆ ಬಟ್ಟೆಯನ್ನು ಮುಚ್ಚಿಕೊಂಡು ಅವನ ಹಿಂದೆ ಹಿಂದೆಯೆ ಆಶ್ರಮಕ್ಕೆ ಹೋದರು. ಹೃದಯನು ಬಾಬಾಜಿಯ ಹತ್ತಿರ ಹೋಗಿ ಈ ರೀತಿ ನಿವೇದಿಸಿದನು : "ನನ್ನ ಮಾವ ಅವರು ಭಗವಂತನ ಹೆಸರನ್ನು ಹೇಳುತ್ತಲೇ ಭಾವ ವಿಹ್ವಲರಾಗುತ್ತಾರೆ. ಅನೇಕ ದಿನಗಳಿಂದ ಅವರಿಗೆ ಈ ರೀತಿ ಆಗುತ್ತಿದೆ. ನಿಮ್ಮನ್ನು ನೋಡಲು ಅವರು ಬಂದಿರುವರು."

37. ಬಾಬಾಜಿಯ ಹತ್ತಿರ ಹೋದಕೂಡಲೇ ಅವನ ವಿಶೇಷ ಶಕ್ತಿಯೊಂದು ತನಗೆ ತಿಳಿಯಿತೆಂದು ಹೃದಯನು ಹೇಳುತ್ತಾನೆ. ಏಕೆಂದರೆ ಅವನು ನಮಸ್ಕರಿಸಿ ಮೇಲೆ ಹೇಳಿದ ಮಾತನ್ನು ಆಡುವುದಕ್ಕೆ ಮುಂಚೆಯೆ ಬಾಬಾಜಿಯು ಆ ರೀತಿ ಹೇಳುವುದನ್ನು ಕೇಳಿದ: "ಆಶ್ರಮದಲ್ಲಿ ಯಾರೊ ಮಹಾ ಪುರುಷರು ಬಂದಿದ್ದಾರೆ ಎಂದು ನನಗನ್ನಿಸುತ್ತಿದೆ." ಈ ರೀತಿ ಹೇಳುತ್ತಾ, ಬಾಬಾಜಿ ಅತ್ತ ಇತ್ತ ನೋಡುತ್ತಿದ್ದನಂತೆ. ಆದರೆ ಹೃದಯನಲ್ಲದೆ ಅಲ್ಲಿ ಬೇರಾರೂ ಬಂದಿರುವುದು ಕಾಣಿಸದಿದ್ದುದರಿಂದ ತನ್ನ ಮುಂದಿದ್ದ ವ್ಯಕ್ತಿಗಳೊಡನೆ ಪ್ರಸ್ತುತ ವಿಷಯದಲ್ಲಿಯೇ ತೊಡಗಿದನು. ಯಾವನೋ ವೈಷ್ಣವ ಸಾಧು ಏನೊ ಅನ್ಯಾಯ ಮಾಡಿದ್ದನು, ಅವನ ವಿಷಯದಲ್ಲಿ ಏನು ಮಾಡಬೇಕು—ಈ ವಿಷಯದ ಚರ್ಚೆ ನಡೆಯುತ್ತಿತ್ತು. ಬಾಬಾಜಿಯು ಆ ಸಾಧುವಿನ ದುಷ್ಕೃತ್ಯದಿಂದ ಕೋಪಗೊಂಡಿದ್ದನು. ಅವನನ್ನು ಸಂಪ್ರದಾಯದಿಂದ ಬಹಿಷ್ಕರಿಸುವುದಾಗಿ ತಿರಸ್ಕಾರ

ದಿಂದ ಹೇಳುತ್ತಿದ್ದನು. ಆ ಸಮಯದಲ್ಲಿ ಶ್ರೀರಾಮಕೃಷ್ಣರು ಅಲ್ಲಿಗೆ ಬಂದು ನಮಸ್ಕರಿಸಿ ದೀನ ಭಾವದಿಂದ ಒಂದು ಕಡೆ ಕುಳಿತುಕೊಂಡರು. ಅವರು ಬಟ್ಟೆ ಮುಚ್ಚಿಕೊಂಡಿದ್ದ ರಿಂದ ಅವರ ಮುಖ ಮಂಡಲ ಸರಿಯಾಗಿ ಯಾರಿಗೂ ಕಾಣಿಸುತ್ತಿರಲಿಲ್ಲ. ಅವರು ಆ ರೀತಿ ಒಂದು ಕುಳಿತಾಗ ಅವರನ್ನು ಪರಿಚಯಿಸುವ ಈ ಮೇಲಿನ ಮಾತನ್ನು ಹೃದಯನು ಬಾಬಾಜಿಗೆ ಹೇಳಿದನು. ಹೃದಯನ ಮಾತನ್ನು ಕೇಳಿ ಬಾಬಾಜಿಯು ಪ್ರಸ್ತುತ ವಿಷಯ ವನ್ನು ಬಿಟ್ಟು ಶ್ರೀರಾಮಕೃಷ್ಣರು ಮತ್ತು ಹೃದಯನಿಗೆ ನಮಸ್ಕರಿಸಿದನು ಮತ್ತು ಎಲ್ಲಿಂದ ಬಂದಿರಿ ಎಂದು ಮಧುರವಾಗಿ ಪ್ರಶ್ನಿಸಿದನು.

38. ಬಾಬಾಜಿಯು ಹೃದಯನೊಡನೆ ಮಾತನಾಡುತ್ತಿರುವಾಗ ಜಪಮಾಲೆ ಯನ್ನು ತಿರುಗಿಸುತ್ತಿದ್ದನು. ಹೃದಯನು ಕೇಳಿದ: "ನೀವು ಇನ್ನೂ ಮಾಲೆಯನ್ನು ಇಟ್ಟುಕೊಂಡಿದ್ದೀರಲ್ಲ ಏಕೆ ? ನೀವು ಸಿದ್ಧ ಪುರುಷರು. ನೀವು ಅದನ್ನು ಇಟ್ಟು ಕೊಳ್ಳುವ ಆವಶ್ಯಕತೆಯಾದರೂ ಏನಿದೆ ?" ಶ್ರೀರಾಮಕೃಷ್ಣರ ಅಭಿಪ್ರಾಯದಂತೆ ಹೃದಯನು ಆ ಪ್ರಶ್ನೆಯನ್ನು ಹಾಕಿದನೋ ಅಥವಾ ಸ್ವಪ್ರೇರಣೆಯಿಂದಲೇ ಕೇಳಿದನೋ ಎಂಬುದು ನಮಗೆ ತಿಳಿಯದು. ಅವನು ತಾನಾಗಿಯೇ ಕೇಳಿರಬಹುದೆಂದು ನಮಗನ್ನಿಸು ತ್ತದೆ. ಏಕೆಂದರೆ ಸದಾ ಶ್ರೀರಾಮಕೃಷ್ಣರ ಸೇವೆಯಲ್ಲಿ ನಿರತನಾಗಿದ್ದ ಅವನು ಸಮಾಜದ ಅನೇಕ ಬಗೆಯ ವ್ಯಕ್ತಿಗಳನ್ನು ಕಂಡು ಅರಿತಿದ್ದನು. ಇದರಿಂದಾಗಿ ಅವನ ಬುದ್ಧಿಯೂ ತೀಕ್ಷ್ಣವಾಗಿತ್ತು ಮತ್ತು ಎಲ್ಲಿ ಹೇಗೆ ವರ್ತಿಸಬೇಕೆಂಬ ವ್ಯವಹಾರ ಪ್ರಜ್ಞೆಯೂ ಇತ್ತು. ಬಾಬಾಜಿಯು ಹೃದಯನ ಈ ಪ್ರಶ್ನೆಯನ್ನು ಕೇಳಿ ಮೊದಲು ನಮ್ರತೆಯನ್ನು ವ್ಯಕ್ತಪಡಿಸಿ ಅನಂತರ ಹೇಳಿದನು : "ಸ್ವಂತ ಪ್ರಯೋಜನವಿಲ್ಲದಿದ್ದರೂ ಲೋಕ ಶಿಕ್ಷಣಕ್ಕಾಗಿ ಇವನ್ನೆಲ್ಲಾ ಇಟ್ಟುಕೊಳ್ಳುವುದು ಆವಶ್ಯಕ. ಇಲ್ಲದಿದ್ದರೆ ಜನರು ನನ್ನನ್ನು ನೋಡಿ ಅದೇ ರೀತಿ ಅನುಸರಿಸಿ ಭ್ರಷ್ಟರಾಗುತ್ತಾರೆ."

39. ಯಾವಾಗಲೂ ಶ್ರೀಜಗನ್ಮಾತೆಯನ್ನೇ ಸಂಪೂರ್ಣ ಆಶ್ರಯಿಸಿಕೊಂಡಿದ್ದ ಬಾಲಕ ಸ್ವಭಾವದ ಶ್ರೀರಾಮಕೃಷ್ಣರಿಗೆ ನಿರ್ಭರತೆಯು ಅತ್ಯಂತ ಸಹಜವೂ ಸ್ವಾಭಾ ವಿಕವೂ ಆಗಿತ್ತು. ತಮ್ಮ ಅಹಂಕಾರದ ಪ್ರೇರಣೆಯಿಂದ ಯಾವುದೇ ಕೆಲಸ ಮಾಡು ವುದು ಅತ್ಯಂತ ದೂರದ ಮಾತು. ಅಷ್ಟೇ ಅಲ್ಲದೆ ಬೇರೆಯವರು ಆ ರೀತಿ ಮಾಡಿದರೆ, ನಾನು ಮಾಡುತ್ತೇನೆ ಎಂದು ಹೇಳುವುದನ್ನು ಕೇಳಿದರೆ ಅವರ ಮನಸ್ಸಿಗೆ ಅತ್ಯಂತ ವೇದನೆಯಾಗುತ್ತಿತ್ತು. ಈಶ್ವರನ ದಾಸ ಭಾವದಲ್ಲಿ ಎಲ್ಲೋ ಕೆಲವೊಮ್ಮೆ 'ನಾನು' ಎಂಬ ಶಬ್ದವನ್ನು ಉಪಯೋಗಿಸುವುದನ್ನು ಬಿಟ್ಟು ನಮ್ಮಂತೆ ಯಾವಾಗಲೂ ಆ ಶಬ್ದ ವನ್ನು ಉಪಯೋಗಿಸುತ್ತಿರಲಿಲ್ಲ. ಸ್ವಲ್ಪ ಸಮಯದ ಮಟ್ಟಿಗೆ ಶ್ರೀರಾಮಕೃಷ್ಣರನ್ನು ನೋಡಿದವರು ಅವರ ಈ ಸ್ವಭಾವವನ್ನು ನೋಡಿ ವಿಸ್ಮಿತರಾಗಿದ್ದರು. ಇತರರು 'ನಾನು ಮಾಡುತ್ತೇನೆ' ಎಂಬುದನ್ನು ಕೇಳಿದಾಗ ಶ್ರೀರಾಮಕೃಷ್ಣರು ಕುಪಿತರಾಗುತ್ತಿದ್ದುದನ್ನು ನೋಡಿ ಇತರರು ಮೂಕ ವಿಸ್ಮಿತರಾಗುತ್ತಿದ್ದರು. ಇಷ್ಟೊಂದು ಇವರು ಕೋಪ ಮಾಡಿ ಕೊಳ್ಳಲು ಅವನು ಏನು ಅಂಥ ಕಾರ್ಯವನ್ನು ಮಾಡಿದ್ದಾನೆ ಎಂದು ಅವರು ಭಾವಿಸು

ತ್ತಿದ್ದರು. ಶ್ರೀರಾಮಕೃಷ್ಣರು ಭಗವಾನ್‌ದಾಸನ ಎಡೆಗೆ ಬಂದಾಗ ಅವನು ಸಾಧು ಒಬ್ಬನನ್ನು ಸಮಾಜದಿಂದ ಉಚ್ಚಾಟಿಸುವುದಾಗಿ ಬೆದರಿಸುತ್ತಿದ್ದುದನ್ನು ಅವರು ಕೇಳಿದರು. ಮರುಕ್ಷಣದಲ್ಲೇ ಅವರು ಲೋಕ ಶಿಕ್ಷಣಕ್ಕಾಗಿಯೇ ತಾನು ಮಾಲೆ, ತಿಲಕಾದಿಗಳನ್ನು ತ್ಯಜಿಸಿಲ್ಲ ಎಂದು ಹೇಳುತ್ತಿರುವುದನ್ನು ಕೇಳಿದರು. ಬಾಬಾಜಿಯು ಮತ್ತೆ ಮತ್ತೆ "ನಾನು ಓಡಿಸುತ್ತೇನೆ, ನಾನು ಲೋಕ ಶಿಕ್ಷಣ ನೀಡುತ್ತೇನೆ, ನಾನು ಮಾಲೆ, ತಿಲಕಾದಿಗಳನ್ನು ತ್ಯಜಿಸಿಲ್ಲ" ಎಂದು ಹೇಳುತ್ತಿರುವುದನ್ನು ಕೇಳಿ ಶ್ರೀರಾಮಕೃಷ್ಣರಿಗೆ ಕೋಪ ತಡೆಯಲಾಗಲಿಲ್ಲ. ನಮ್ಮಂತೆ ಅವರು ಸಭ್ಯತೆಗೆ ಶರಣಾದವರಲ್ಲ. ಕೂಡಲೇ ಮೇಲೆದ್ದು ಬಾಬಾಜಿಯನ್ನು ನಿರ್ದೇಶಿಸಿ ಹೇಳಿದರು: "ಏನು ಈಗಲೂ ನಿನಗೆ ಇಷ್ಟೊಂದು ಅಹಂಕಾರ ? ನೀನು ಲೋಕ ಶಿಕ್ಷಣವನ್ನು ನೀಡುತ್ತೀಯೇನು ? ನೀನು ಓಡಿಸುತ್ತೀಯೇನು ? ನೀನು ತ್ಯಾಗ ಮತ್ತು ಗ್ರಹಣ ಮಾಡುತ್ತೀಯೇನು ? ಲೋಕ ಶಿಕ್ಷಣ ಮಾಡುವುದಕ್ಕೆ ನೀನ್ಯಾರು ? ಜಗತ್ತು ಯಾರದೊ ಅವನು ಶಿಕ್ಷಣ ನೀಡುತ್ತಿದ್ದರೆ ನೀನೇನು ಮಾಡಬಲ್ಲೆ ?" ಆಗ ಶ್ರೀರಾಮಕೃಷ್ಣರು ಹೊದ್ದುಕೊಂಡಿದ್ದ ಬಟ್ಟೆ ಬಿದ್ದು ಹೋಯಿತು. ಸೊಂಟಕ್ಕೆ ಸುತ್ತಿಕೊಂಡಿದ್ದ ಬಟ್ಟೆಯು ಸಡಿಲವಾಗಿ ಕಳಚಿಬಿತ್ತು. ಅವರ ಮುಖ ಮಂಡಲವು ಒಂದು ಅಪೂರ್ವ ದಿವ್ಯ ತೇಜಸ್ಸಿನಿಂದ ಬೆಳಗುತ್ತಿತ್ತು. ಅವರು ಸಂಪೂರ್ಣ ಮೈ ಮರೆತಿದ್ದರು. ಯಾರಿಗೆ ಏನು ಹೇಳುತ್ತಿರುವೆನೆಂಬ ಪರಿವೆಯೇ ಇರಲಿಲ್ಲ. ಈ ಎರಡು ಮಾತುಗಳನ್ನು ಆಡುತ್ತಿದ್ದಂತೆಯೆ ಅವರು ಭಾವಾತಿಶಯದಿಂದ ನಿಶ್ಚೇಷ್ಟಿತರೂ ನಿಸ್ಪಂದರೂ ಆದರು, ಹಾಗೆಯೆ ಸಮಾಧಿಸ್ಥರಾಗಿ ನಿಂತು ಬಿಟ್ಟರು.

ಸಿದ್ಧ ಪುರುಷ ಬಾಬಾಜಿಗೆ ಎಲ್ಲರೂ ಗೌರವ ಭಕ್ತಿಯನ್ನು ತೋರಿಸುತ್ತಿದ್ದರು. ಅವನ ಮಾತನ್ನು ವಿರೋಧಿಸುವುದಕ್ಕಾಗಲಿ ಅಥವಾ ಅವನಲ್ಲಿ ದೋಷವನ್ನು ನೋಡುವುದಕ್ಕಾಗಲಿ ಇದುವರೆಗೂ ಯಾರೂ ಸಮರ್ಥರಿರಲಿಲ್ಲ ಮತ್ತು ಯಾರೂ ಆ ಸಾಹಸವನ್ನು ಮಾಡಿರಲಿಲ್ಲ. ಶ್ರೀರಾಮಕೃಷ್ಣರ ಈ ವರ್ತನೆಯನ್ನು ನೋಡಿ ಅವನು ಮೊದಲು ವಿಸ್ಮಿತನಾದನು, ಆದರೆ ಸಾಧಾರಣ ವ್ಯಕ್ತಿಗಳು ಇಂಥ ಪರಿಸ್ಥಿತಿಯಲ್ಲಿ ಕ್ರೋಧ ಪರವಶರಾಗುವಂತೆ ಬಾಬಾಜಿಯು ಕೋಪಕ್ಕೊಳಗಾಗಲಿಲ್ಲ. ಅವನ ತಪಸ್ಸಿನಿಂದುಂಟಾದ ಸರಳತೆಯು ಶ್ರೀರಾಮಕೃಷ್ಣರ ಮಾತನ್ನು ಯಥಾರ್ಥವಾಗಿ ಅರ್ಥ ಮಾಡಿಕೊಳ್ಳಲು ಸಹಾಯಕವಾಯಿತು. ಅವನಿಗನ್ನಿಸಿತು ನಿಜವಾಗಿಯೂ ಈ ಜಗತ್ತಿನಲ್ಲಿ ಈಶ್ವರನನ್ನು ಬಿಟ್ಟು ಬೇರೆ ಕರ್ತೃಗಳಿಲ್ಲ. ಅಹಂಕಾರಿಯಾದ ಮಾನವನು ತಾನೇ ಎಲ್ಲಾ ಮಾಡುತ್ತೇನೆ ಎಂದು ಎಷ್ಟೇ ಹೇಳಿಕೊಂಡರೂ ನಿಜವಾಗಿಯೂ ಆ ಅಹಂಕಾರ ದಾಸ ಮಾತ್ರವೇ. ಅದಕ್ಕೆ ಎಷ್ಟು ಅಧಿಕಾರ ನೀಡಲಾಗಿದೆಯೊ ಅಷ್ಟರ ಮಟ್ಟಿಗೆ ಮಾತ್ರ ಅದು ತಿಳಿದುಕೊಳ್ಳಲು ಮತ್ತು ಮಾಡಲು ಸಮರ್ಥವಾಗುತ್ತದೆ. ಸಂಸಾರಿಯಾದ ಮಾನವನು ಏನು ಬೇಕಾದರೂ ಮಾಡಲಿ ಭಕ್ತ ಮತ್ತು ಸಾಧಕರು ಈ ವಿಷಯವನ್ನು ಸ್ವಲ್ಪ ಮಟ್ಟಿಗಾದರೂ ಮರೆಯುವುದು ಉಚಿತವಲ್ಲ. ಇದರಿಂದ ಅವನು ಮಾರ್ಗಚ್ಯುತನಾಗಿ ಜಾರಿ ಬೀಳುವ ಸಂಭವವುಂಟು. ಶ್ರೀರಾಮಕೃಷ್ಣರ ಶಕ್ತಿಪೂರ್ಣವಾದ ಆ ಮಾತುಗಳು

ಬಾಬಾಜಿಯ ಅಂತರ್ದೃಷ್ಟಿಯು ಜಾಗ್ರತವಾಗುವಂತೆ ಮಾಡಿದುವು. ಅದರಿಂದಾಗಿ ಅವನು ತನ್ನ ದೋಷವನ್ನು ಅರಿತು ನಮ್ರನಾದನು. ಮತ್ತೆ ಶ್ರೀರಾಮಕೃಷ್ಣರ ಶರೀರ ದಲ್ಲಿ ಅಪೂರ್ವ ಭಾವ ವಿಕಾಸವನ್ನು ನೋಡಿ ಅವನಿಗೆ ಅವರು ಸಾಧಾರಣ ವ್ಯಕ್ತಿಯಲ್ಲ ಎಂದೆನಿಸಿತು.

40. ಅನಂತರ ಭಗವದ್ವಿಷಯವಾಗಿ ಮಾತನಾಡುತ್ತ ಅಲ್ಲಿ ಅಪೂರ್ವ ಆನಂದ ಪ್ರವಾಹ ಉಂಟಾಯಿತೆಂಬುದನ್ನು ನಾವು ಊಹಿಸಬಹುದು. ಆ ಸಂದರ್ಭದಲ್ಲಿ ಶ್ರೀರಾಮಕೃಷ್ಣರ ಭಾವಾವೇಶ, ದಿವ್ಯ ಆನಂದ ಇವುಗಳನ್ನು ನೋಡಿ ಬಾಬಾಜಿಯು ಮೋಹಿತನಾದನು. ಅವನು ಇಷ್ಟು ಕಾಲವೂ ಮಹಾಭಾವದ ವಿಷಯವಾಗಿ ಶಾಸ್ತ್ರ ದಲ್ಲಿ ಓದಿದ್ದನು, ಅದರ ಬಗ್ಗೆ ವಿಚಾರ ಮಾಡಿದ್ದನು. ಈಗ ಅದು ಶ್ರೀರಾಮಕೃಷ್ಣ ರಲ್ಲಿ ನಿತ್ಯ ಪ್ರಕಾಶಿತವಾಗಿರುವುದನ್ನೂ ನೋಡಿದನು. ಸ್ವಾಭಾವಿಕವಾಗಿಯೇ ಶ್ರೀರಾಮ ಕೃಷ್ಣರಲ್ಲಿ ಅಪಾರ ಭಕ್ತಿ ಶ್ರದ್ಧೆ ಉಂಟಾಯಿತು. ಅನಂತರ ಅವನಿಗೆ ತಿಳಿದು ಬಂತು, ಇವರೇ ದಕ್ಷಿಣೇಶ್ವರದ ಪರಮಹಂಸರು ಮತ್ತು ಇವರೇ ಕಲುಟೋಲದ ಹರಿಸಭೆಯಲ್ಲಿ "ಚೈತನ್ಯನ ಆಸನ"ದ ಮೇಲೆ ಕುಳಿತುಕೊಂಡವರು ಎಂದು. ಆಗ ಇವರನ್ನು ಅಷ್ಟೊಂದು ನಿಂದಿಸಿದೆನಲ್ಲಾ ಎಂದು ಅವನು ಪರಿತಪಿಸಿದನು. ಅವನು ವಿನೀತ ಭಾವದಿಂದ ಶ್ರೀರಾಮ ಕೃಷ್ಣರಿಗೆ ಪ್ರಣಾಮ ಮಾಡಿ ತನ್ನನ್ನು ಅದಕ್ಕಾಗಿ ಕ್ಷಮಿಸಬೇಕೆಂದು ಕೇಳಿಕೊಂಡನು. ಈ ರೀತಿ ಶ್ರೀರಾಮಕೃಷ್ಣ ಮತ್ತು ಬಾಬಾಜಿ ಇವರ ಅಂದಿನ ಪ್ರೇಮಾಭಿನಯ ಸಮಾಪ್ತಿ ಗೊಂಡಿತು. ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತಿನ ನಂತರ ಹೃದಯನೊಡನೆ ಮಥುರ ನಿದ್ದಲ್ಲಿಗೆ ಹೋದರು ಮತ್ತು ಈ ಘಟನೆಯನ್ನು ಅವನಿಗೆ ಆದ್ಯಂತವಾಗಿ ವಿವರಿಸಿ ಬಾಬಾಜಿಯ ಉಚ್ಚ ಆಧ್ಯಾತ್ಮಿಕ ಸ್ಥಿತಿಯನ್ನು ಮುಕ್ತ ಕಂಠದಿಂದ ಪ್ರಶಂಸಿಸಿದರು. ಮಥುರಬಾಬುವೂ ಕೂಡ ಇದನ್ನು ಕೇಳಿ ಬಾಬಾಜಿಯನ್ನು ನೋಡಲು ಹೋದನು. ಆಶ್ರಮದಲ್ಲಿದ್ದ ದೇವರ ಸೇವೆಗಾಗಿ ಮತ್ತು ಒಂದು ದಿನದ ಮಹೋತ್ಸವಕ್ಕಾಗಿ ಕಾಣಿಕೆ ಯನ್ನು ನೀಡಿದನು.

# ನಾಲ್ಕನೆಯ ಅಧ್ಯಾಯ

# ಗುರುಭಾವ ವಿಷಯದಲ್ಲಿ ಕೊನೆಯ ಮಾತು

ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮ ಮಾಯಯಾ ॥
ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

ಅಧ್ಯಾಯ 4. 6, 7, 8.

"ಜನ್ಮರಹಿತನೂ ಅವ್ಯಯ ಸ್ವಭಾವವುಳ್ಳವನೂ ಪ್ರಾಣಿಗಳ ನಿಯಾಮಕನೂ ಆಗಿದ್ದರೂ ನನ್ನ ಪ್ರಕೃತಿಯನ್ನು ಆಶ್ರಯಿಸಿ ನನ್ನ ಮಾಯೆಯ ಮೂಲಕ ಅವತಾರ ಮಾಡುತ್ತೇನೆ. ಧರ್ಮದ ಅವನತಿಯೂ ಅಧರ್ಮದ ಉನ್ನತಿಯೂ ಆದಾಗಲೆಲ್ಲ ನಾನು ಅವತಾರ ಮಾಡುತ್ತೇನೆ. ಸಾಧುಗಳ ರಕ್ಷಣೆಗಾಗಿಯೂ ದುಷ್ಟರ ವಿನಾಶಕ್ಕಾಗಿಯೂ ಮತ್ತು ಧರ್ಮದ ಸಂಸ್ಥಾಪನೆಗಾಗಿಯೂ ಪ್ರತಿಯುಗದಲ್ಲಿಯೂ ಅವತರಿಸುತ್ತೇನೆ."

1. ಬ್ರಹ್ಮಜ್ಞನು ಸರ್ವಜ್ಞನಾಗುವುದು ಹೇಗೆ 2. ಇದಕ್ಕೆ ಶ್ರೀರಾಮಕೃಷ್ಣರ ವಿವರಣೆ 3. ಒಂದು ವಸ್ತುವಿನ ಆದಿ ಅಂತ್ಯವನ್ನು ತಿಳಿದರೆ ಅದನ್ನು ಸಂಪೂರ್ಣ ಅರಿತಂತಾಗುತ್ತದೆ 4. ಬ್ರಹ್ಮಜ್ಞ ಪುರುಷನು ಸಿದ್ಧಸಂಕಲ್ಪನಾದರೂ ಪ್ರಾಪಂಚಿಕ ಸಂಕಲ್ಪ ಮಾಡುವುದಿಲ್ಲ 5. ಶ್ರೀರಾಮಕೃಷ್ಣರ ಜೀವನದಲ್ಲಿ ಇದಕ್ಕೆ ಸಂಬಂಧಿಸಿದ ಘಟನೆ 6. ಶ್ರೀರಾಮಕೃಷ್ಣರು ಎಲ್ಲವನ್ನೂ ಎರಡು ಪ್ರಜ್ಞಾಸ್ತರಗಳಿಂದ ನೋಡುತ್ತಿದ್ದರು 7. ಶ್ರೀರಾಮಕೃಷ್ಣರ ಎರಡು ಬಗೆಯ ದರ್ಶನದ ದೃಷ್ಟಾಂತ 8. ಈ ವಿಷಯದ ಬಗ್ಗೆ ಅವರ ಹೇಳಿಕೆ ಮತ್ತು ಅವರ ದರ್ಶನ 9. ಅವರ ಇಂದ್ರಿಯ, ಮನಸ್ಸು ಮತ್ತು ಬುದ್ಧಿ ಜನಸಾಮಾನ್ಯರದಕ್ಕಿಂತ ಹೆಚ್ಚು ಸೂಕ್ಷ್ಮವಾಗಿದ್ದುವು 10. ಅವರ ಸೂಕ್ಷ್ಮದೃಷ್ಟಿಗೆ ದೃಷ್ಟಾಂತಗಳು 11. ಈಶ್ವರನು ತನ್ನ ನಿಯಮವನ್ನು ಬದಲಾಯಿಸಬಲ್ಲ 12. ಮೂರಂತಸ್ತಿನ ಮನೆಯ ಪಕ್ಕದಲ್ಲಿದ್ದ ಗುಡಿಸಿಲಿಗೆ ಸಿಡಿಲು ಹೊಡೆದುದು 13. ಕೆಂಪುದಾಸವಾಳದ ಗಿಡದಲ್ಲಿ ಬಿಳಿಯ ಹೂವು 14. ಇಡೀ ಪ್ರಪಂಚವೇ ಜಗನ್ಮಾತೆಯ ಕ್ರೀಡಾಂಗಣ 15. ಕೆಲವು ಸ್ಥಳಗಳಲ್ಲಿ ವಿಶೇಷ ಶಕ್ತಿಯು ಪ್ರಕಾಶವಿರುತ್ತದೆ 16. ಬೃಂದಾವನದಲ್ಲಿ ಶ್ರೀಕೃಷ್ಣನ ಲೀಲಾ ಸ್ಥಾನಗಳನ್ನು ಶ್ರೀ ಚೈತನ್ಯನು ಕಂಡುಹಿಡಿದನು 17. ವಿಷ್ಣುಪುರದಲ್ಲಿ ಶ್ರೀರಾಮಕೃಷ್ಣರಿಗೆ ಹಳೆಯ ಮೃಣ್ಮಯಿ ವಿಗ್ರಹದ ದರ್ಶನ 18. ಶ್ರೀರಾಮಕೃಷ್ಣರಿಗಿದ್ದ ಜನರ ಮನೋಭಾವ ಮತ್ತು ಗುರಿಯನ್ನು ಕಂಡುಹಿಡಿಯುವ ಶಕ್ತಿ : ಮೊದಲನೆಯ ದೃಷ್ಟಾಂತ 19. ಎರಡನೆಯ ದೃಷ್ಟಾಂತ 20. ಮೂರನೆಯ ದೃಷ್ಟಾಂತ 21. ಶ್ರೀ ರಾಮಕೃಷ್ಣರ

ಮನೋರಚನೆಯೇ ಬೇರೆಯಾಗಿತ್ತು. ಅವರು ಜನರನ್ನು ಮತ್ತು ವಸ್ತುವನ್ನು ಅಳೆಯುವ ವಿಧಾನ 22. ಇದಕ್ಕೊಂದು ದೃಷ್ಟಾಂತ : 'ನನಗೆ ಹೊಟ್ಟೆ ಹೊರೆಯುವ ಶಿಕ್ಷಣ ಬೇಡ' 23. ಎರಡನೆಯ ದೃಷ್ಟಾಂತ : ಧ್ಯಾನಕ್ಕೆ ಕುಳಿತ ಕೂಡಲೇ ಅವರಿಗಾಗುತ್ತಿದ್ದ ಅನುಭವ 24. ಮೂರನೆಯ ದೃಷ್ಟಾಂತ : ಪೂಜೆಯ ವೇಳೆ ತಮ್ಮನ್ನೇ ಪೂಜಿಸಿಕೊಂಡುದು. ಅವರಿಗೆ ಪಿತೃತರ್ಪಣ ಕೊಡಲಾಗದಿದ್ದುದು 25. ಅದ್ವೈತಾನುಭವವೇ ಮಾನವಜೀವನದ ಚರಮೋದ್ದೇಶ 26. ಸ್ವಸಂವೇದ್ಯ ಮತ್ತು ಪರಸಂವೇದ್ಯ ದರ್ಶನ 27. ವಸ್ತುವಿನ ಮತ್ತು ವ್ಯಕ್ತಿಯ ಯಥಾರ್ಥ ಸ್ಥಿತಿಯನ್ನು ತಿಳಿಯದೆ ಶ್ರೀರಾಮಕೃಷ್ಣರ ಮನಸ್ಸು ಶಾಂತವಾಗುತ್ತಿರಲಿಲ್ಲ 28. ಶಾಕ್ತ ಮತ್ತು ವೈಷ್ಣವರಲ್ಲಿದ್ದ ಪರಸ್ಪರ ದ್ವೇಷ 29. ಈ ದ್ವೇಷ ನಿವಾರಣೆಗಾಗಿ ತಮ್ಮ ಕುಟುಂಬದವರೆಲ್ಲರಿಗೂ ಶಕ್ತಿಮಂತ್ರ ಕೊಡಿಸಿದರು 30. ಸಾಧುಗಳು ಔಷಧಿ ಕೊಡುವುದು ಅವರ ಆಧ್ಯಾತ್ಮಿಕ ಅವನತಿಗೆ ಕಾರಣ. ಡಾಂಬಿಕತೆಯ ಖಂಡನೆ 31. ಯಥಾರ್ಥ ಸಾಧುಗಳ ಜೀವನದಿಂದ ಶಾಸ್ತ್ರವು ಸಜೀವವಾಗುತ್ತದೆ 32. ನೈಜ ಸಾಧುಗಳಲ್ಲಿಯೂ ಸಂಕುಚಿತ ಮನೋಭಾವವಿರುವುದನ್ನು ಶ್ರೀರಾಮಕೃಷ್ಣರು ಕಂಡರು 33. ತೀರ್ಥ ಸ್ಥಳದಲ್ಲಿ ಧರ್ಮಹೀನತೆಯನ್ನು ಅವರು ಗಮನಿಸಿದರು 34. ಅವರು ತಮ್ಮದೆ ಉದಾರ ಮತವನ್ನು ಗುರುತಿಸಿದರು 35. 'ಎಲ್ಲ ಧರ್ಮಗಳೂ ಸತ್ಯ–ಎಷ್ಟು ಮತಗಳೊ ಅಷ್ಟು ಪಥಗಳು' ಎಂಬ ಸತ್ಯವನ್ನು ತಾವೇ ಮೊದಲು ಅನುಭವಿಸಿದವರೆಂಬುದನ್ನು ಅವರು ಕಂಡುಕೊಂಡರು 36. ಧರ್ಮಪ್ರಚಾರಕ್ಕಾಗಿ ಜಗನ್ಮಾತೆಯೇ ತಮಗೆ ಶಕ್ತಿಯನ್ನು ನೀಡಿರುವುದಾಗಿ ಅವರು ಅರಿತರು 37. ಅವರು ಅಹಂಕಾರದಿಂದ ಗುರುವಿನ ಪಟ್ಟಕ್ಕೇರಲಿಲ್ಲ 38. ಇದಕ್ಕೆ ಪ್ರಮಾಣ–ಭಾವಮುಖದಲ್ಲಿ ಜಗನ್ಮಾತೆಯೊಡನೆ ಜಗಳವಾಡುವುದು 39. ಇದಕ್ಕೆ ಇನ್ನೊಂದು ದೃಷ್ಟಾಂತ 40. ಶ್ರೀರಾಮಕೃಷ್ಣರು ಜಗದಂಬಾ ರಾಜ್ಯದ ಕಾರ್ಯನಿರ್ವಾಹಕ ಅಧಿಕಾರಿ 41. ಅವರು ತಮ್ಮ ಭಕ್ತರನ್ನು ಸಂಧಿಸಲು ಹಾತೊರೆಯುತ್ತಿದ್ದರು 42. ಯಾರಿಗೆ ಕೊನೆಯ ಜನ್ಮವೊ ಅವರು ತಮ್ಮೆಡೆಗೆ ಬರುತ್ತಾರೆಂಬ ಅವರ ವಿಶ್ವಾಸ 43. ಜಗನ್ಮಾತೆಯಲ್ಲಿ ಪೂರ್ಣ ನಿರ್ಭರತೆಯಿಂದಲೇ ಈ ವಿಶ್ವಾಸದ ಉದಯ 44. ಶ್ರೀರಾಮಕೃಷ್ಣರ ಈ ಮಾತಿನ ಅರ್ಥವೇನು 45. ಗುರುಭಾವದ ಘನೀಭೂತ ಸ್ಥಿತಿಯೇ ದಿವ್ಯಭಾವ 46. ಶಾಂಭವೀ ಮತ್ತು ಶಾಕ್ತೀ ದೀಕ್ಷೆ 47. ದಿವ್ಯಭಾವವನ್ನು ಪಡೆದ ಗುರುಗಳಲ್ಲಿ ಶ್ರೀರಾಮಕೃಷ್ಣರು ಸರ್ವಶ್ರೇಷ್ಠ 48. ಅವತಾರಪುರುಷರಲ್ಲಿ ಯಾವಾಗಲೂ ಎಲ್ಲ ಶಕ್ತಿಗಳೂ ಆವಿರ್ಭವಿಸುವುದಿಲ್ಲ 49. ಶ್ರೀರಾಮಕೃಷ್ಣರು ಕೇಶವಚಂದ್ರನನ್ನು ಭೇಟಿಯಾದುದು

1. ವೇದಾದಿ ಶಾಸ್ತ್ರಗಳು ಹೇಳುತ್ತವೆ ಬ್ರಹ್ಮಜ್ಞನು ಸರ್ವಜ್ಞನಾಗುತ್ತಾನೆ ಎಂದು. ಸಾಧಾರಣ ಮಾನವರಂತೆ ಅವನ ಮನಸ್ಸಿನಲ್ಲಿ ಯಾವುದೇ ರೀತಿಯ ಮಿಥ್ಯಾ ಕಲ್ಪನೆಯು ಉದಯಿಸುವುದಿಲ್ಲ. ಅವನು ಯಾವುದೇ ವಿಷಯವನ್ನು ತಿಳಿಯಲಿಚ್ಛಿಸಿದರೂ ಕೂಡಲೇ ಅವನ ಅಂತರ್ದೃಷ್ಟಿಗೆ ಗೋಚರವಾಗುವುದು, ಅಥವಾ ಆ ವಿಷಯದ ತತ್ತ್ವ ಅವನ ಅರಿವಿಗೆ ಬರುವುದು. ಮೊದಲು ನಾವು ಈ ಮಾತನ್ನು ಅರ್ಥ ಮಾಡಿಕೊಳ್ಳದೆ ಶಾಸ್ತ್ರದ ವಿರುದ್ಧವಾಗಿ ಎಷ್ಟೋ ವಾದಿಸುತ್ತಿದ್ದೆವು. ಈ ಮಾತು ಸತ್ಯವಾದರೆ ಭಾರತದ ಹಿಂದಿನ ಬ್ರಹ್ಮಜ್ಞರಿಗೆ ಜಡ ವಿಜ್ಞಾನದ ವಿಷಯ ತಿಳಿದೇ ಇರಲಿಲ್ಲವಲ್ಲ ಏಕೆ?

ಜಲಜನಕ ಮತ್ತು ಆಮ್ಲಜನಕಗಳು ಕೂಡಿದಾಗ ನೀರು ಉಂಟಾಗುತ್ತದೆ ಎಂಬ ವಿಷಯ ಭಾರತದ ಯಾರಾದರೂ ಬ್ರಹ್ಮಜ್ಞರಿಗೆ ತಿಳಿದಿತ್ತೇನು ? ವಿಕಿರಣಗಳ ಸಹಾಯದಿಂದ ಕೆಲವೇ ಕ್ಷಣಗಳಲ್ಲಿ ಅಮೆರಿಕದಲ್ಲಿ ನಡೆದ ಸುದ್ದಿಯನ್ನು ಇಲ್ಲಿಯೇ ಕುಳಿತು ತಿಳಿಯಬಹು ದೆಂಬ ವಿಷಯ ಅವರಿಗೆ ತಿಳಿದಿತ್ತೇನು ? ಅಥವಾ ಯಂತ್ರ ಸಹಾಯದಿಂದ ಮನುಷ್ಯನು ಹಕ್ಕಿಯಂತೆ ಆಕಾಶದಲ್ಲಿ ಹಾರಾಡಬಲ್ಲನು ಎಂಬ ವಿಷಯ ಅವರಿಗೇಕೆ ತಿಳಿದಿರಲಿಲ್ಲ— ಎಂಬೆಲ್ಲಾ ಪ್ರಶ್ನೆಗಳು ನಮ್ಮ ಮನಸ್ಸಿನಲ್ಲಿ ಏಳುತ್ತಿದ್ದವು.

2. ಶ್ರೀರಾಮಕೃಷ್ಣರನ್ನು ಸಂಧಿಸಿದ ಮೇಲೆ ನಮಗೆ ತಿಳಿದು ಬಂತು, ಶಾಸ್ತ್ರದ ಈ ಮಾತನ್ನು ಈ ರೀತಿ ತಿಳಿಯಲು ಹೋದರೆ ಏನೂ ಅರ್ಥವಾಗುವುದಿಲ್ಲ ಎಂದು. ಶಾಸ್ತ್ರವು ಯಾವ ದೃಷ್ಟಿಯಿಂದ ಈ ಮಾತನ್ನು ಹೇಳಿರುವುದೊ ಆ ದೃಷ್ಟಿಯಿಂದಲೇ ಅದನ್ನು ತಿಳಿಯಲು ಪ್ರಯತ್ನಿಸಿದರೆ ಅದರ ಸತ್ಯತೆಯ ಅರಿವಾಗುವುದು. ಶ್ರೀರಾಮ ಕೃಷ್ಣರು ಶಾಸ್ತ್ರದ ಈ ಮಾತನ್ನು ಒಂದೆರಡು ಗ್ರಾಮ್ಯ ದೃಷ್ಟಾಂತಗಳ ಸಹಾಯದಿಂದ ನಮಗೆ ತಿಳಿಸಿಕೊಟ್ಟರು: "ಪಾತ್ರೆಯಲ್ಲಿ ಅನ್ನ ಬೇಯುತ್ತಿದೆ. ಅನ್ನ ಬೆಂದಿದೆಯೇ ಎಂದು ನೋಡಲು ಒಂದು ಅಗುಳನ್ನು ಒತ್ತಿ ನೋಡಿದರೆ ಸಾಕು. ಎಲ್ಲಾ ಅನ್ನವು ಬೆಂದಿದೆ ಎಂದು ತಿಳಿದು ಬರುತ್ತದೆ. ಇದು ಹೇಗೆ ? ನೀನು ಎಲ್ಲಾ ಅನ್ನವನ್ನೂ ಒತ್ತಿ ನೋಡ ಲಿಲ್ಲ. ಆದರೂ ಅನ್ನ ಬೆಂದಿದೆ ಎಂದು ಹೇಗೆ ಗೊತ್ತಾಯಿತು ? ಹೀಗೆಯೇ ಸಂಸಾರವು ನಿತ್ಯವೊ ಅನಿತ್ಯವೊ ಎಂಬುದನ್ನು ಅರಿಯಲು ಸಂಸಾರದ ಎರಡು ಮೂರು ವಸ್ತು ಗಳನ್ನು ಪರೀಕ್ಷಿಸಿ ನೋಡಿದರೆ ಸಾಕು. ಮನುಷ್ಯನು ಹುಟ್ಟುತ್ತಾನೆ, ಕೆಲವು ದಿನಗಳು ಬದುಕಿರುತ್ತಾನೆ. ಅನಂತರ ಸತ್ತು ಹೋಗುತ್ತಾನೆ. ಹಸುವೂ ಹೀಗೆಯೇ. ಆಡೂ ಕೂಡ ಹೀಗೆಯೇ. ಹೀಗೆ ನೋಡುತ್ತಾ ಹೋದರೆ ನಾಮ ರೂಪಗಳಿರುವ ವಸ್ತುಗಳೆಲ್ಲ ದರ ಅವಸ್ಥೆಯು ಇದೇ ಎಂದು ತಿಳಿದು ಬರುತ್ತದೆ. ಪೃಥ್ವಿ, ಸೂರ್ಯ, ಚಂದ್ರ ಇವು ಗಳೆಲ್ಲಕ್ಕೂ ನಾಮ ರೂಪಗಳಿವೆ. ಆದ್ದರಿಂದ ಇವುಗಳೆಲ್ಲವೂ ಹಾಗೆಯೇ. ಹೀಗೆ ಇಡೀ ಜಗತ್ತಿನ ಸ್ವಭಾವವು ಇದೇ ಎಂದು ತಿಳಿದು ಬರುತ್ತದೆ. ಆಗ ಜಗತ್ತಿನಲ್ಲಿರುವ ಎಲ್ಲಾ ವಸ್ತುಗಳ ಸ್ವಭಾವವೂ ಹೀಗೆಯೇ ಎಂದು ತಿಳಿದಂತಾಯಿತಲ್ಲವೇ ? ಹೀಗೆ ಸಂಸಾರವು ಅನಿತ್ಯ, ಅಸತ್ ಎಂದು ತಿಳಿದ ಮೇಲೆ ಅದನ್ನು ಮತ್ತೆ ಪ್ರೀತಿಸಲಾಗುವುದಿಲ್ಲ. ಮನಸ್ಸಿ ನಿಂದ ಅದನ್ನು ತ್ಯಜಿಸಿ ಬಿಡುತ್ತೀಯೆ. ಮನಸ್ಸು ವಾಸನೆಯಿಂದ ಮುಕ್ತವಾಗುವುದು. ಯಾವಾಗ ಅದನ್ನು ತ್ಯಾಗ ಮಾಡುತ್ತೀಯೋ ಆಗ ಜಗತ್ಕಾರಣನಾದ ಭಗವಂತನ ದರ್ಶನವಾಗುತ್ತದೆ. ಹೀಗೆ ಯಾರಿಗೆ ಭಗವಂತನ ದರ್ಶನವಾಗಿದೆಯೊ, ಅವನು ಸರ್ವಜ್ಞನಾಗದೆ ಮತ್ತೇನಾಗುವನು ಹೇಳು ?"

3. ಶ್ರೀರಾಮಕೃಷ್ಣರು ಇಷ್ಟೆಲ್ಲಾ ಹೇಳಿದ ಮೇಲೆ ಇದು ಸರಿ ಎಂದೆನಿಸಿತು. ಒಂದು ದೃಷ್ಟಿಯಲ್ಲಿ ಸರ್ವಜ್ಞನಾಗುತ್ತಾನೆ ನಿಜ. ಯಾವುದೋ ಒಂದು ವಸ್ತುವಿನ ಆದಿ, ಮಧ್ಯ ಮತ್ತು ಅಂತ್ಯಗಳನ್ನು ಅರಿಯುವುದು ಮತ್ತು ಆ ಪದಾರ್ಥವು ಯಾವುದರಿಂದ ಉತ್ಪತ್ತಿಯಾಗಿದೆ ಎಂಬುದನ್ನು ಅರಿಯುವುದು ಇದನ್ನೇ ತಾನೆ ಆ ಪದಾರ್ಥದ ಜ್ಞಾನ

ಎಂದು ಕರೆಯುವುದು. ಆದ್ದರಿಂದ ಮೇಲೆ ಹೇಳಿದ ರೀತಿಯಲ್ಲಿ ಜಗತ್ತನ್ನು ಅರಿತು ಕೊಂಡರೆ ಅದನ್ನು ಜ್ಞಾನವೆಂದು ಕರೆಯಬಹುದು. ಮತ್ತೆ ಆ ಜ್ಞಾನವು ಜಗತ್ತಿನಲ್ಲಿ ರುವ ಎಲ್ಲಾ ಪದಾರ್ಥಗಳಿಗೂ ಅನ್ವಯಿಸುತ್ತದೆ. ಆ ಜ್ಞಾನವನ್ನು ಜಗತ್ತಿನಲ್ಲಿರುವ ಎಲ್ಲಾ ಪದಾರ್ಥಗಳ ಜ್ಞಾನ ಎಂದು ಕರೆಯಬಹುದು. ಆ ಜ್ಞಾನವನ್ನು ಪಡೆದವನನ್ನು ಸರ್ವಜ್ಞನೆಂದು ಹೇಳಿದರೆ ತಪ್ಪಾಗಲಾರದು. ಆದ್ದರಿಂದ ಶಾಸ್ತ್ರದ ಮಾತು ಸತ್ಯವೇ ಆಗಿದೆ.

4. ಬ್ರಹ್ಮಜ್ಞ ಪುರುಷನು ಸತ್ಯ ಸಂಕಲ್ಪನೂ ಸಿದ್ಧ ಸಂಕಲ್ಪನೂ ಆಗುತ್ತಾನೆ. ಶಾಸ್ತ್ರದ ಈ ಮಾತಿನ ಅರ್ಥವು ಆಗ ಸ್ವಲ್ಪ ಮಟ್ಟಿಗೆ ಆಯಿತು. ಯಾವುದೇ ವಿಷಯ ವನ್ನು ಅರಿಯಬೇಕಾದರೂ ಮನಸ್ಸನ್ನು ಏಕಾಗ್ರಗೊಳಿಸಿ ಅದರ ಬಗ್ಗೆ ವಿಚಾರ ಮಾಡ ಬೇಕು. ಇದು ನಮಗೆಲ್ಲರಿಗೂ ತಿಳಿದಿರುವ ವಿಷಯ. ಬ್ರಹ್ಮಜ್ಞ ಪುರುಷನು ಮನಸ್ಸನ್ನು ಸಂಪೂರ್ಣ ವಶೀಕರಿಸಿ ತನ್ನದಾಗಿಸಿಕೊಂಡಿರುತ್ತಾನೆ. ಆದ್ದರಿಂದ ಅವನು ಯಾವುದೇ ವಿಷಯವನ್ನು ತಿಳಿಯಬೇಕಾದರೂ ಮನಸ್ಸಿನ ಸರ್ವಶಕ್ತಿಯನ್ನು ಒಗ್ಗೂಡಿಸಿ ಅದರ ಬಗ್ಗೆ ವಿಚಾರ ಮಾಡುತ್ತಾನೆ. ಆಗ ಕೂಡಲೇ ಅತ್ಯಂತ ಸುಲಭವಾಗಿ ಆ ವಿಷಯದ ಜ್ಞಾನ ಅವನಿಗುಂಟಾಗುವುದು. ಇದರಲ್ಲಿ ಏನೂ ಆಶ್ಚರ್ಯವಿಲ್ಲ. ಆದರೆ ಇಲ್ಲಿ ಗಮನಿಸ ಬೇಕಾದ ಒಂದು ವಿಚಾರವಿದೆ : ಯಾರು ಸಮಗ್ರ ಜಗತ್ತನ್ನು ಅನಿತ್ಯವೆಂದು ದೃಢ ವಾಗಿ ಅರಿತಿರುವರೋ ಮತ್ತು ಜಗತ್ಕಾರಣವಾದ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡಿರು ವರೋ ಅವರು ರೈಲುಬಂಡಿಯನ್ನು ಕಂಡು ಹಿಡಿಯುವ, ವಿನಾಶಕರ ಯಂತ್ರಗಳನ್ನು ನಿರ್ಮಿಸುವ ಸಂಕಲ್ಪ ಮಾಡುತ್ತಾರೋ ಎಂಬುದು ಸಂಶಯ. ಅವರ ಮನಸ್ಸಿನಲ್ಲಿ ಇಂತಹ ಸಂಕಲ್ಪವೇ ಉದಯಿಸುವುದು ಅಸಾಧ್ಯವಾದರೆ ಅವರು ಅಂತಹ ಯಂತ್ರ ಗಳನ್ನೂ ನಿರ್ಮಿಸಲಾರರು. ಶ್ರೀರಾಮಕೃಷ್ಣರ ದಿವ್ಯ ಸಂಗದಿಂದ ಇದು ನಿಜವೆಂದು ನಮಗೆ ಸ್ಪಷ್ಟವಾಯಿತು. ನಿಜವಾಗಿಯೂ ಅವರಲ್ಲಿ ಇಂತಹ ಪ್ರವೃತ್ತಿ ಉಂಟಾಗುವುದು ಸಾಧ್ಯವೇ ಇಲ್ಲ. ಶ್ರೀರಾಮಕೃಷ್ಣರು ಕಾಶೀಪುರದಲ್ಲಿ ದಾರುಣ ರೋಗದಿಂದ ನರಳು ತ್ತಿದ್ದರು. ಆಗ ಸ್ವಾಮಿ ವಿವೇಕಾನಂದರು ಮತ್ತು ನಾವು ತಮ್ಮ ಮನಶ್ಶಕ್ತಿಯ ಸಹಾಯ ದಿಂದ ರೋಗವನ್ನು ವಾಸಿಮಾಡಿಕೊಳ್ಳಬೇಕೆಂದು ಅವರನ್ನು ಒತ್ತಾಯಿಸಿದೆವು. ನಮ್ಮ ಒಳಿತಿಗಾದರೂ ಹಾಗೆ ಮಾಡಬೇಕೆಂದು ಕೇಳಿಕೊಂಡೆವು. ಆದರೆ ಅವರಿಗೆ ಆ ರೀತಿ ಮಾಡಲು ಅಥವಾ ಅಂಥ ಸಂಕಲ್ಪ ಮಾಡಲು ಸಾಧ್ಯವಾಗಲಿಲ್ಲ. ಅವರು ಆ ರೀತಿ ಮಾಡಲು ಹೋದಾಗ ಮನಸ್ಸಿನಲ್ಲಿ ಆ ಸಂಕಲ್ಪವು ದೃಢವಾಗಿ ಉಳಿಯಲಿಲ್ಲವಂತೆ. ಅವರು ಹೇಳಿದರು: "ಈ ಚರ್ಮ ಮಾಂಸದ ಹಂದರದ ಮೇಲೆ ಮನಸ್ಸನ್ನು ಹೇಗೆ ನಿಲ್ಲಿಸುವುದು ? ಸಚ್ಚಿದಾನಂದದಿಂದ ಮನಸ್ಸನ್ನು ಹಿಂತಿರುಗಿಸಲು ಸಾಧ್ಯವಾಗುತ್ತಲೇ ಇಲ್ಲ. ಶರೀರವನ್ನು ತುಚ್ಛವೆಂದು ಪರಿಗಣಿಸಿ ಮನಸ್ಸನ್ನು ಜಗನ್ಮಾತೆಯ ಪಾದಪದ್ಮದಲ್ಲಿ ಶಾಶ್ವತವಾಗಿ ಅರ್ಪಿಸಿರುವೆನು. ಈಗ ಅದನ್ನು ಅಲ್ಲಿಂದ ಎಳೆತಂದು ಈ ಶರೀರದ ಕಡೆಗೆ ಹರಿಸುವುದು ಸಾಧ್ಯವೇನು ?"

5. ಇಲ್ಲಿ ಇನ್ನೊಂದು ಘಟನೆಯನ್ನು ಉಲ್ಲೇಖಿಸಿದರೆ ಈ ವಿಷಯವನ್ನು ಓದುಗರಿಗೆ ಅರ್ಥಮಾಡಿಕೊಳ್ಳುವುದು ಸುಲಭವಾಗುತ್ತದೆ. ಬಾಗ್ ಬಜಾರಿನ ಬಲರಾಂ ಬಸುವಿನ ಮನೆಗೆ ಒಂದು ದಿನ ಶ್ರೀರಾಮಕೃಷ್ಣರು ಹೋಗಿದ್ದರು. ಆಗ ಸಮಯ ಹತ್ತು ಘಂಟೆಯಿರಬಹುದು. ಶ್ರೀರಾಮಕೃಷ್ಣರು ಅಂದು ಅಲ್ಲಿಗೆ ಬರುವುದು ಮೊದಲೇ ನಿಶ್ಚಿತವಾಗಿತ್ತು. ಸ್ವಾಭಾವಿಕವಾಗಿಯೇ ನರೇಂದ್ರನಾಥ ಮುಂತಾದ ಯುವಕ ಭಕ್ತರು ಅವರ ದರ್ಶನ ಪಡೆಯಲು ಅಲ್ಲಿ ಬಂದು ನೆರೆದಿದ್ದರು. ಕೆಲವೊಮ್ಮೆ ಶ್ರೀರಾಮಕೃಷ್ಣರೊಡನೆ ಮತ್ತೆ ಕೆಲವೊಮ್ಮೆ ತಮ್ಮ ತಮ್ಮಲ್ಲಿಯೇ ನಾನಾ ವಿಷಯದ ಬಗ್ಗೆ ಮಾತುಕಥೆ ನಡೆಯತೊಡಗಿತು. ಸೂಕ್ಷ್ಮ ಇಂದ್ರಿಯಾತೀತವನ್ನು ನೋಡುವ ಬಗ್ಗೆ ಮಾತನಾಡುತ್ತಾ ಕ್ರಮೇಣ ಸೂಕ್ಷ್ಮದರ್ಶಕ ಯಂತ್ರದ ವಿಷಯ ಬಂದಿತು. ಸ್ಥೂಲ ಚಕ್ಷುವಿನಿಂದ ನೋಡಲಾಗದ ಸೂಕ್ಷ್ಮ ಪದಾರ್ಥಗಳನ್ನು ಇದರಿಂದ ನೋಡಬಹುದು. ಒಂದು ಸಣ್ಣ ಕೂದಲು ಅದರ ಮೂಲಕ ನೋಡಿದಾಗ ಒಂದು ಕೋಲಿನಂತೆ ಕಾಣಿಸುವುದು. ದೇಹದ ಪ್ರತಿಯೊಂದು ರೋಮವೂ ಪರಂಗಿ ಎಲೆಯ ದಂಟಿನಂತೆ ಟೊಳ್ಳಾಗಿ ಕಾಣಿಸುತ್ತದೆ. ಈ ವಿಷಯವನ್ನು ಕೇಳಿ ಶ್ರೀರಾಮಕೃಷ್ಣರು ತಮ್ಮ ಕುತೂಹಲವನ್ನು ವ್ಯಕ್ತಪಡಿಸಿದರು. ಬಾಲಕನಂತೆ ಅದರ ಮೂಲಕ ಒಂದೆರಡು ವಸ್ತುಗಳನ್ನು ನೋಡಬೇಕೆಂದು ಆಗ್ರಹಪಡಿಸಿದರು. ಅಂದೇ ಯಾರ ಮೂಲಕವಾದರೂ ಒಂದು ಯಂತ್ರವನ್ನು ತೆಗೆದುಕೊಂಡು ಬಂದು ಶ್ರೀರಾಮಕೃಷ್ಣರಿಗೆ ತೋರಿಸಬೇಕೆಂದು ಭಕ್ತರು ನಿಶ್ಚಯಿಸಿದರು.

ಅನಂತರ ವಿಚಾರಿಸಿದಾಗ ಸ್ವಾಮಿ ಪ್ರೇಮಾನಂದರ ಸಹೋದರನಾದ ಬಿಪಿನ್ ಬಿಹಾರಿ ಘೋಷನ ಹತ್ತಿರ ಒಂದು ಸೂಕ್ಷ್ಮದರ್ಶಕ ಯಂತ್ರ ಇದೆಯೆಂದು ತಿಳಿದು ಬಂತು. ಅವನು ಕೆಲವೇ ದಿನಗಳ ಹಿಂದೆಯೇ ಡಾಕ್ಟರ್ ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ಉತ್ತೀರ್ಣನಾಗಿದ್ದನು. ಅವನಿಗೆ ಪುರಸ್ಕಾರವಾಗಿ ಮೆಡಿಕಲ್ ಕಾಲೇಜಿನವರು ಆ ಯಂತ್ರವನ್ನು ನೀಡಿದ್ದರು. ಆ ಯಂತ್ರವನ್ನು ತಂದು ಶ್ರೀರಾಮಕೃಷ್ಣರಿಗೆ ತೋರಿಸಬೇಕೆಂದು ಅವನಿಗೆ ಹೇಳಿ ಕಳುಹಿಸಿದೆವು. ಅವನು ವಿಷಯ ತಿಳಿದು ಕೆಲವೇ ಘಂಟೆಗಳಲ್ಲಿ ಯಂತ್ರವನ್ನು ತೆಗೆದುಕೊಂಡು ಬಂದನು. ಅದನ್ನು ಸರಿಯಾಗಿ ಅಳವಡಿಸಿ ಶ್ರೀರಾಮಕೃಷ್ಣರು ಅದರ ಮೂಲಕ ನೋಡಲು ಅವರನ್ನು ಕರೆದನು.

ಶ್ರೀರಾಮಕೃಷ್ಣರು ಮೇಲೆದ್ದರು, ನೋಡುವುದಕ್ಕೆ ಹೊರಟರು. ಆದರೆ ನೋಡದೆಯೆ ಮತ್ತೆ ಹಿಂದಿರುಗಿದರು ! ಎಲ್ಲರೂ ಕಾರಣವನ್ನು ಕೇಳಿದಾಗ ಅವರೆಂದರು : "ಮನಸ್ಸು ಈಗ ಎಂಥಾ ಉನ್ನತ ಸ್ತರದಲ್ಲಿದೆಯೆಂದರೆ ಅದನ್ನು ಕೆಳಗಿಳಿಸಿ ಅಲ್ಪ ವಿಷಯಗಳನ್ನು ನೋಡಲು ಸಾಧ್ಯವಾಗುತ್ತಿಲ್ಲ." ಶ್ರೀರಾಮಕೃಷ್ಣರ ಮನಸ್ಸು ಕೆಳಗಿಳಿಯಬಹುದೆಂದು ನಾವು ಬಹಳ ಹೊತ್ತು ನಿರೀಕ್ಷಿಸಿದೆವು. ಆದರೆ ಅಂದು ಶ್ರೀರಾಮಕೃಷ್ಣರ ಮನಸ್ಸು ಆ ಉಚ್ಚ ಭಾವ ಭೂಮಿಯಿಂದ ಕೆಳಗಿಳಿಯಲೇ ಇಲ್ಲ. ಅಂದು ಸೂಕ್ಷ್ಮದರ್ಶಕ ಯಂತ್ರದ ಮೂಲಕ ವಸ್ತುವನ್ನು ನೋಡುವುದಾಗಲಿಲ್ಲ. ಬಿಪಿನ್ ಬಿಹಾರಿಯು ನಮ್ಮಲ್ಲಿ ಕೆಲವರಿಗೆ ಅದನ್ನು ತೋರಿಸಿ ಯಂತ್ರವನ್ನು ಹಿಂದೆ ತೆಗೆದುಕೊಂಡು ಹೋದನು.

6. ಶ್ರೀರಾಮಕೃಷ್ಣರ ಮನಸ್ಸು ದೇಹಭಾವವನ್ನು ತೊರೆದು ಉಚ್ಚ ಭಾವ ಭೂಮಿಗಳಲ್ಲಿ ಸಂಚರಿಸುತ್ತಿತ್ತು. ಆಗ ಅವರಿಗೆ ಆಯಾಯ ಭೂಮಿಕೆಗೆ ಸಂಬಂಧಿಸಿದ ಅಸಾಧಾರಣ ದರ್ಶನಗಳು ಉಂಟಾಗುತ್ತಿದ್ದವು. ದೇಹಭಾವವನ್ನು ಸಂಪೂರ್ಣ ತೊರೆದು ಅವರು ಸರ್ವೋಚ್ಚ ಅದ್ವೈತ ಸ್ಥಿತಿಯನ್ನು ಮುಟ್ಟಿದಾಗ ಅವರ ಹೃದಯ ಸ್ಪಂದನ ಮುಂತಾದ ದೈಹಿಕ ಕ್ರಿಯೆಗಳು ಸ್ವಲ್ಪ ಹೊತ್ತಿನ ಮಟ್ಟಿಗೆ ನಿಂತುಹೋಗುತ್ತಿದ್ದುವು. ಶರೀರವು ಸತ್ತುಹೋಗಿರುವಂತೆ ಕಾಣುತ್ತಿತ್ತು ಮತ್ತು ಮಾನಸಿಕ ಚಿಂತನೆ, ಕಲ್ಪನೆಗಳೆಲ್ಲ ಸಂಪೂರ್ಣ ಸ್ತಬ್ಧವಾಗುತ್ತಿದ್ದವು. ಅವರು ಅಖಂಡ ಸಚ್ಚಿದಾನಂದದಲ್ಲಿ ಒಮ್ಮೆಯೇ ಭೇದವಿಲ್ಲದೆ ಒಂದಾಗಿಬಿಡುತ್ತಿದ್ದರು. ಮತ್ತೆ ಈ ಉಚ್ಚ ಸ್ಥಿತಿಯಿಂದ ಕ್ರಮೇಣ ಕೆಳಗಿನ ಸ್ಥಿತಿಗೆ ಇಳಿದು ಒಂದು ಕೊನೆಯಲ್ಲಿ ಈ ದೇಹ ನನ್ನದು ಎಂಬ ಮಾನವ ಸಾಧಾರಣ ಸ್ಥಿತಿಗೆ ಬರುತ್ತಿದ್ದರು. ಆಗ ಅವರು ನಮ್ಮಂತೆಯೇ ಕಣ್ಣುಗಳಿಂದ ನೋಡುತ್ತಿದ್ದರು, ಕಿವಿಗಳಿಂದ ಕೇಳುತ್ತಿದ್ದರು, ಚರ್ಮದಿಂದ ಸ್ಪರ್ಶಿಸುತ್ತಿದ್ದರು ಮತ್ತು ಮನಸ್ಸಿನಿಂದ ಆಲೋಚಿಸುತ್ತಿದ್ದರು.

ಪಾಶ್ಚಾತ್ಯ ದಾರ್ಶನಿಕನಾದ ರಾಲ್ಫ್ ವಾಲ್ಡೋ ಎಮರ್‌ಸನ್ನನು ಮಾನವನ ಮನಸ್ಸು ಸಮಾಧಿ ಭೂಮಿಯಲ್ಲಿ ಈ ರೀತಿ ಆರೋಹಣ, ಅವರೋಹಣ ಮಾಡುವುದರ ಸೂಚನೆಯನ್ನು ಪಡೆದಿದ್ದನು. ಇದರ ಆಧಾರದ ಮೇಲೆ ಅವನು ಮಾನವ ದೇಹದಲ್ಲಿ ಚೈತನ್ಯವು ಯಾವಾಗಲೂ ಒಂದೇ ಸ್ಥಿತಿಯಲ್ಲಿರುವುದಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದನು. ಈ ಅಭಿಪ್ರಾಯವು ಯುಕ್ತಿಯುಕ್ತವಾಗಿದೆ ಮತ್ತು ಭಾರತದ ಹಿಂದಿನ ಋಷಿಗಳೆಲ್ಲರೂ ಅನುಮೋದಿಸುತ್ತಾರೆ. ಆದರೆ ಸಾಧಾರಣ ಮನುಷ್ಯನು ಈ ಉಚ್ಚ ಅದ್ವೈತ ಭೂಮಿಯನ್ನು ಬಹಳ ಕಾಲ ಆರೋಹಣ ಮಾಡದೆ ಇರುವುದರಿಂದ ಅದರ ವಿಷಯವನ್ನು ಸಂಪೂರ್ಣ ಮರೆತುಬಿಟ್ಟಿರುವನು. ಕೇವಲ ಇಂದ್ರಿಯಗಳಿಂದ ಮಾತ್ರ ಜ್ಞಾನವನ್ನು ಪಡೆಯಲು ಸಾಧ್ಯ ಎಂಬ ದೃಢ ವಿಶ್ವಾಸ ಅವನಿಗೆ ಉಂಟಾಗಿಬಿಟ್ಟಿದೆ. ಇದರಿಂದಾಗಿ ಅವನು ಸಂಸಾರದಲ್ಲಿಯೇ ಲಂಗರು ಹಾಕಿಕೊಂಡು ನಿಶ್ಚಿಂತವಾಗಿಬಿಟ್ಟಿದ್ದಾನೆ. ಅಧಿಕಾರಿಕ ಪುರುಷರು ಅಥವಾ ಅವತಾರ ಪುರುಷರು ಇದಕ್ಕೆ ವಿರುದ್ಧವಾದ ಜೀವನವನ್ನು ನಡೆಸುತ್ತಾ ಈ ಮೋಹವನ್ನು ನಾಶಮಾಡುವುದಕ್ಕಾಗಿಯೇ ಮತ್ತೆ ಮತ್ತೆ ಹುಟ್ಟಿ ಬರುತ್ತಾರೆ.

7. ಅದು ಏನೇ ಇರಲಿ, ಶ್ರೀರಾಮಕೃಷ್ಣರು ವಸ್ತುಗಳನ್ನು ಮತ್ತು ವ್ಯಕ್ತಿಗಳನ್ನು ನಾವು ಅವುಗಳನ್ನು ನೋಡುವಂತೆಯೇ ನೋಡುತ್ತಿರಲಿಲ್ಲ. ಉನ್ನತ ಆಧ್ಯಾತ್ಮಿಕಸ್ತರದಿಂದ ಅವರು ಅವುಗಳನ್ನು ನೋಡುತ್ತಿದ್ದರು. ಅವರಿಗೆ ಎಲ್ಲವೂ ಬೇರೆಯಾಗಿಯೇ ಕಾಣುತ್ತಿದ್ದವು. ಆದ್ದರಿಂದ ಅವರು ಸಂಸಾರದ ಯಾವುದೇ ವಿಷಯವನ್ನಾಗಲಿ ನಮ್ಮಂತೆ ಒಂದೇ ದೃಷ್ಟಿಕೋನದಿಂದ ನೋಡುತ್ತಿರಲಿಲ್ಲ. ಇದರಿಂದಾಗಿ ನಮ್ಮ ಮಾತನ್ನು ಮತ್ತು ಭಾವವನ್ನು ಅವರಿಗೆ ಗ್ರಹಿಸುವುದು ಸಾಧ್ಯವಾದರೂ ಅವರ ಮಾತು ಮತ್ತು ಭಾವವನ್ನು ನಮಗೆ ಅರ್ಥಮಾಡಿಕೊಳ್ಳಲು ಆಗುತ್ತಿರಲಿಲ್ಲ. ನಾವು ಮನುಷ್ಯನನ್ನು ಮನುಷ್ಯ

ನೆಂದು, ಹಸುವನ್ನು ಹಸುವೆಂದು, ಪರ್ವತವನ್ನು ಪರ್ವತವೆಂದು ಅಷ್ಟೇ ತಿಳಿಯುತ್ತೇವೆ. ಅವರಿಗೆ ಮನುಷ್ಯ, ಹಸು, ಪರ್ವತ ಇವು ಮನುಷ್ಯ, ಹಸು, ಪರ್ವತಗಳಾಗಿರುವುದು ಅಷ್ಟೇ ಅಲ್ಲದೆ ಅವುಗಳೊಳಗೆ ಜಗತ್ಕಾರಣವಾದ ಅಖಂಡ ಸಚ್ಚಿದಾನಂದವು ವಿರಾಜಿಸುವುದನ್ನು ಅವರು ಕಾಣುತ್ತಿದ್ದರು. ಹೊರಗಿನ ಆವರಣದ ಪ್ರಭೇದದಿಂದಾಗಿ ಕೆಲವದರಲ್ಲಿ ಆ ಸತ್ಯವು ಹೆಚ್ಚು ಪ್ರಕಾಶಮಾನವಾಗಿಯೂ ಮತ್ತೆ ಕೆಲವದರಲ್ಲಿ ಕಡಮೆ ಪ್ರಕಾಶ ಮಾನವಾಗಿಯೂ ಕಾಣುತ್ತಿತ್ತು ಅಷ್ಟೆ. ಶ್ರೀರಾಮಕೃಷ್ಣರು ಹೇಳುತ್ತಿದ್ದರು :

8. "ಮರ, ಮನುಷ್ಯ, ಹಸು, ಹುಲ್ಲು, ನೀರು ಇವೆಲ್ಲವೂ ಬೇರೆ ಬೇರೆ ಕೋಶಗಳಂತೆ ಕಾಣುತ್ತವೆ. ತಲೆದಿಂಬಿನ ಚೀಲ ಇರುತ್ತದಲ್ಲಾ ಹಾಗೆ. ಕೆಲವನ್ನು ಕಚ್ಚಾಹತ್ತಿಯ ಬಟ್ಟೆಯಿಂದ ಮಾಡಿರುತ್ತಾರೆ. ಇನ್ನು ಕೆಲವನ್ನು ಬೇರೆ ವಿಧದ ಬಟ್ಟೆಗಳಿಂದ ಮಾಡಿರುತ್ತಾರೆ. ಕೆಲವು ಚೌಕಾಕಾರವಾಗಿರುತ್ತವೆ. ಮತ್ತೆ ಕೆಲವು ಗುಂಡಗಿರುತ್ತವೆ ಈ ಜಗತ್ತು ಹಾಗೆಯೇ. ದಿಂಬಿನ ಚೀಲಗಳು ಬೇರೆಯಾದರೂ ಅವುಗಳೊಳಗೆ ಇರುವ ಹತ್ತಿಯೆಲ್ಲಾ ಒಂದೇ. ಹಾಗೆಯೇ ಮನುಷ್ಯ, ಹಸು, ಹುಲ್ಲು, ನೀರು, ಪರ್ವತ ಇತ್ಯಾದಿ ಕೋಶಗಳೆಲ್ಲದರಲ್ಲಿ ಅಖಂಡ ಸಚ್ಚಿದಾನಂದದ ವಸ್ತುವೇ ನೆಲೆಸಿರುವುದು. ನನಗೆ ಹೇಗೆ ಅನಿಸುತ್ತದೆ ಗೊತ್ತೆ ? ಜಗನ್ಮಾತೆಯೆ ಬೇರೆ ಬೇರೆ ವಿಧದ ಹೊದ್ದಿಕೆಯನ್ನು ಹೊದ್ದುಕೊಂಡಿರುವಳು. ಆಕೆಯೆ ಬೇರೆ ಬೇರೆ ರೂಪಗಳನ್ನು ಪಡೆದಿರುವಳು ಮತ್ತು ಅವುಗಳ ಮೂಲಕ ಇಣುಕಿ ನೋಡುತ್ತಿರುವಳು. ನಾನು ಒಂದು ಸ್ಥಿತಿಯಲ್ಲಿರುವಾಗ ಜಗತ್ತು ಯಾವಾಗಲೂ ಹಾಗೆಯೇ ಕಾಣುತ್ತಿತ್ತು. ಜನಗಳಿಗೆ ಇದು ಅರ್ಥವಾಗಲಿಲ್ಲ. ಅವರು ಬಂದು ನನ್ನನ್ನು ಸಮಾಧಾನ ಪಡಿಸುತ್ತಿದ್ದರು. ರಾಮಲಾಲನ ತಾಯಿ ಮತ್ತಿತರರು ಎಷ್ಟೊಂದು ಅಳುತ್ತಿದ್ದರು. ಅವರನ್ನೆಲ್ಲಾ ನೋಡಿ ನನಗನ್ನಿಸುತ್ತಿತ್ತು ಜಗನ್ಮಾತೆಯೆ ಅನೇಕ ಬಗೆಯ ಉಡುಪುಗಳನ್ನು ಧರಿಸಿ ಒಂದು ಈ ರೀತಿ ಮಾಡುತ್ತಿರುವಳು ಎಂದು. ಈ ವಿಚಿತ್ರ ವೇಷವನ್ನು ನೋಡಿ, "ನೀನು ಚೆನ್ನಾಗಿ ವೇಷವನ್ನು ಹಾಕಿಕೊಂಡಿದ್ದೀಯೆ" ಎಂದು ಹೇಳಿ ಬಿದ್ದುಬಿದ್ದು ನಗುತ್ತಿದ್ದೆ. ಒಂದು ದಿನ ಕಾಳೀ ಮಂದಿರವಲ್ಲಿ ಆಸನದ ಮೇಲೆ ಕುಳಿತು ಮಾತೆಯನ್ನು ಚಿಂತಿಸುತ್ತಿದ್ದೆ. ಆದರೆ ಆಕೆಯ ಮೂರ್ತಿ ಏನು ಮಾಡಿದರೂ ಮನಸ್ಸಿಗೆ ಬರುತ್ತಿರಲಿಲ್ಲ. ಅನಂತರ ಏನು ನೋಡಿದೆ ಗೊತ್ತೆ ? ರಮಣಿ ಎಂಬ ವೇಶ್ಯೆಯೊಬ್ಬಳು ಸ್ನಾನ ಮಾಡಲು ನದಿಗೆ ಬರುತ್ತಿದ್ದಳು, ಜಗನ್ಮಾತೆಯು ಅವಳಂತೆಯೇ ಕಾಣಿಸಿಕೊಂಡು ಪೂಜೆಗೆ ಉಪಯೋಗಿಸುವ ಜಲಪಾತ್ರೆಯ ಪಕ್ಕದಲ್ಲಿ ಇಣಕಿ ನೋಡುತ್ತಿದ್ದಳು. ನಾನು ನಕ್ಕು ಹೇಳಿದೆ 'ಏನಮ್ಮಾ ಇದು, ನಿನಗೆ ಇಂದು ರಮಣಿಯಂತೆ ಆಗಬೇಕೆನಿಸಿತೆ ? ಅದೂ ಒಳ್ಳೆಯದೆ. ಈ ರೂಪದಲ್ಲಿಯೆ ಇಂದು ನೀನು ಪೂಜೆಯನ್ನು ಸ್ವೀಕರಿಸು.' ಈ ರೀತಿ ಅವಳು ನನಗೆ ತಿಳಿಸಿಕೊಟ್ಟಳು : 'ವೇಶ್ಯೆಯೂ ಕೂಡ ನಾನೇ, ನನ್ನನ್ನು ಹೊರತು ಬೇರೆ ಏನೂ ಇಲ್ಲ' ಎಂದು. ಒಂದು ದಿನ ನಾನು ಗಾಡಿಯಲ್ಲಿ ಮೇಛೋ ಬಜಾರ್ ರಸ್ತೆಯ ಮೂಲಕ ಹೋಗುತ್ತಿದ್ದೆ. ಆಗ ಜಗನ್ಮಾತೆಯು ವೇಶ್ಯೆಯ ರೂಪದಲ್ಲಿ ಇದ್ದುದನ್ನು ಕಂಡೆ. ಅವಳು ಸುಂದರವಾದ ವೇಷಭೂಷಣಗಳನ್ನು ಹಾಕಿ

ಕೊಂಡಿದ್ದಳು. ತಲೆಯನ್ನು ಚೆನ್ನಾಗಿ ಬಾಚಿಕೊಂಡಿದ್ದಳು. ಹಣೆಯ ಮೇಲೆ ಕುಂಕುಮ ಧರಿಸಿದ್ದಳು. ವರಾಂಡದಲ್ಲಿ ನಿಂತು ಹುಕ್ಕಾ ಸೇದುತ್ತಾ ಜನರನ್ನು ಮರುಳುಗೊಳಿಸುತ್ತಿದ್ದಳು. ಅದನ್ನು ನೋಡಿ ಚಕಿತನಾಗಿ ಹೇಳಿದೆ : 'ತಾಯಿ, ಇಲ್ಲಿ ನೀನು ಹೀಗೆ ಇರುವೆಯಲ್ಲ!' ನಾನು ಆಕೆಗೆ ನಮಸ್ಕರಿಸಿದೆ." ಎಲ್ಲ ವಸ್ತುಗಳನ್ನು ಮತ್ತು ವ್ಯಕ್ತಿಗಳನ್ನು ಹೀಗೆ ಉನ್ನತ ಸ್ತರದಿಂದ ನಾವು ನೋಡುವುದನ್ನು ಮರೆತೇ ಬಿಟ್ಟಿದ್ದೇವೆ. ಹಾಗಿರುವಾಗ ಶ್ರೀರಾಮಕೃಷ್ಣರ ಈ ಎಲ್ಲ ಅನುಭವಗಳನ್ನು ಅರ್ಥಮಾಡಿಕೊಳ್ಳುವುದೆಂತು ?

9. ಮತ್ತೆ ಶ್ರೀರಾಮಕೃಷ್ಣರು ನಮ್ಮಂತೆ ದೇಹಬುದ್ಧಿಯಿಂದಿರುವಾಗ ಅವರಲ್ಲಿ ಭೋಗಸುಖದ ಆಸೆ ಎಳ್ಳಷ್ಟೂ ಇರುತ್ತಿರಲಿಲ್ಲ. ಇದರಿಂದಾಗಿ ಅವರ ಬುದ್ಧಿ ಮತ್ತು ದೃಷ್ಟಿ ನಮಗಿಂತ ಅತ್ಯಧಿಕ ಸೂಕ್ಷ್ಮವಾಗಿದ್ದವು, ನಮಗಿಂತ ಅತ್ಯಧಿಕ ವಿಷಯಗಳನ್ನು ಗ್ರಹಿಸುವ ಮತ್ತು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ಅವಕ್ಕಿತ್ತು. ನಮ್ಮೆಲ್ಲರಲ್ಲೂ ಭೋಗಸುಖದ ಆಸೆ ಪ್ರಬಲವಾಗಿರುತ್ತದೆ. ಉಣ್ಣುವುದು, ನಿದ್ರಿಸುವುದು, ನೋಡುವುದು, ಕೇಳುವುದು, ಓಡಾಡುವುದು, ಇತರರೊಡನೆ ಮಾತನಾಡುವುದು ಇತ್ಯಾದಿ ವಿಷಯಗಳ ಕಡೆಗೆ ನಮ್ಮ ಸಂಪೂರ್ಣ ಗಮನವಿರುತ್ತದೆ. ಆದ್ದರಿಂದ ಇದಕ್ಕೆ ಅನುಕೂಲವಾದ ವಸ್ತು ಅಥವಾ ವ್ಯಕ್ತಿಗಳನ್ನಲ್ಲದೆ ಇತರ ವಸ್ತು ಮತ್ತು ವ್ಯಕ್ತಿಗಳನ್ನು ನಾವು ಸಂಪೂರ್ಣ ಕಡೆಗಣಿಸುತ್ತೇವೆ. ಈ ರೀತಿ ಉಪೇಕ್ಷಿಸಲ್ಪಟ್ಟ ವ್ಯಕ್ತಿ ಮತ್ತು ವಿಷಯಗಳ ಸ್ವಭಾವವನ್ನು ಅರಿಯುವ ಅವಕಾಶವೇ ನಮಗುಂಟಾಗುವುದಿಲ್ಲ. ಈ ರೀತಿ ಕೆಲವೇ ವಸ್ತು ಮತ್ತು ವ್ಯಕ್ತಿಗಳನ್ನು ನಮ್ಮದನ್ನಾಗಿ ಮಾಡಿಕೊಳ್ಳುವ ಪ್ರಯತ್ನದಲ್ಲಿಯೇ ನಮ್ಮ ಇಡೀ ಜೀವನವು ಕಳೆದುಹೋಗುವುದು. ಇದರಿಂದಾಗಿಯೇ ಇತರ ಸಾಧಾರಣ ವ್ಯಕ್ತಿಗಳಲ್ಲಿ ಜ್ಞಾನವನ್ನು ಪಡೆಯುವ ಸಾಮರ್ಥ್ಯದಲ್ಲಿ ಅಷ್ಟೊಂದು ತಾರತಮ್ಯ ಕಂಡುಬರುವುದು. ನಮ್ಮೆಲ್ಲರಲ್ಲೂ ಕಣ್ಣು, ಕಿವಿ, ಮುಂತಾದ ಇಂದ್ರಿಯಗಳು ಸಮಾನವಾಗಿ ಕೆಲಸ ಮಾಡುತ್ತಿದ್ದರೂ ಅವುಗಳ ಮೂಲಕ ಸಮಾನವಾಗಿ ಜ್ಞಾನವನ್ನು ಪಡೆಯಲಾಗುತ್ತಿಲ್ಲ. ನಮ್ಮಲ್ಲಿ ಯಾರಿಗೆ ಸ್ವಾರ್ಥತೆ ಮತ್ತು ಭೋಗೇಚ್ಛೆ ಕಡಮೆ ಇರುತ್ತದೊ ಅವರು ಇತರರೆಲ್ಲರಿಗಿಂತ ಹೆಚ್ಚು ಸುಲಭವಾಗಿ ಎಲ್ಲಾ ವಿಷಯದ ಜ್ಞಾನವನ್ನು ಪಡೆಯುವ ಸಾಮರ್ಥ್ಯವನ್ನು ಪಡೆದಿರುತ್ತಾರೆ.

10, ಶ್ರೀರಾಮಕೃಷ್ಣರು ಸಾಧಾರಣ ಸ್ಥಿತಿಯಲ್ಲಿದ್ದಾಗಲೂ ಅವರ ದೃಷ್ಟಿ ಎಷ್ಟೊಂದು ತೀಕ್ಷ್ಣವಾಗಿತ್ತು ಎಂಬುದಕ್ಕೆ ಇಲ್ಲಿ ಒಂದೆರಡು ಉದಾಹರಣೆಗಳನ್ನು ಕೊಡಬಹುದು. ಅವರು ಸೂಕ್ಷ್ಮ ಆಧ್ಯಾತ್ಮಿಕ ತತ್ತ್ವಗಳನ್ನು ವಿವರಿಸುವಾಗ ಎಷ್ಟೋ ದೃಷ್ಟಾಂತಗಳನ್ನು ಮತ್ತು ರೂಪಕಗಳನ್ನು ಉಪಯೋಗಿಸುತ್ತಿದ್ದರು. ಇವುಗಳಿಂದ ಅವರ ತೀಕ್ಷ್ಣದೃಷ್ಟಿಯ ಪರಿಚಯ ನಮಗೆ ಬಹಳಷ್ಟು ಆಗುತ್ತದೆ. ಇವುಗಳ ಮೂಲಕ ಶ್ರೀರಾಮಕೃಷ್ಣರು ಜಟಿಲ ವಿಷಯಗಳನ್ನೂ ಕೂಡ ನಮ್ಮ ಮುಂದೆ ಅತ್ಯಂತ ಸ್ಪಷ್ಟವಾಗಿ ಚಿತ್ರಿಸುತ್ತಿದ್ದರು ಮತ್ತು ಅವು ಒಮ್ಮೆಯೆ ನಮ್ಮ ಹೃದ್ಗತವಾಗುವಂತೆ ಮಾಡುತ್ತಿದ್ದರು.

ಜಟಿಲವಾದ ಸಾಂಖ್ಯದರ್ಶನದ ಸಂಬಂಧವಾಗಿ ಮಾತುಕತೆ ನಡೆಯುತ್ತಿದೆ. ಶ್ರೀರಾಮಕೃಷ್ಣರು ಪುರುಷ ಮತ್ತು ಪ್ರಕೃತಿಗಳಿಂದ ಈ ಜಗತ್ತು ಉತ್ಪತ್ತಿಯಾಗಿದೆ ಎಂಬುದನ್ನು ವಿವರಿಸುತ್ತಾ ಹೇಳಿದರು: "ಪುರುಷನು ಅಕರ್ತ. ಅವನು ಏನೂ ಮಾಡುವುದಿಲ್ಲ. ಪ್ರಕೃತಿಯೇ ಎಲ್ಲಾ ಕಾರ್ಯವನ್ನು ಮಾಡುವುದು. ಪುರುಷನು ಪ್ರಕೃತಿಯ ಎಲ್ಲಾ ಕಾರ್ಯಗಳನ್ನೂ ಸಾಕ್ಷಿರೂಪದಲ್ಲಿ ನೋಡುತ್ತಿರುತ್ತಾನೆ. ಪ್ರಕೃತಿಗೂ ಪುರುಷನನ್ನು ಬಿಟ್ಟು ಯಾವ ಕಾರ್ಯವನ್ನೂ ಮಾಡಲಾಗುವುದಿಲ್ಲ". ಶ್ರೋತೃಗಳೆಲ್ಲ ವಿದ್ಯಾವಂತರು. ಕೆಲವರು ದೊಡ್ಡ ದೊಡ್ಡ ಅಧಿಕಾರದಲ್ಲಿರುವವರು. ಕೆಲವರು ಡಾಕ್ಟರರು ಮತ್ತೆ ಕೆಲವರು ವಕೀಲರು ಮತ್ತು ನ್ಯಾಯಾಧೀಶರುಗಳು. ಇನ್ನು ಕೆಲವರು ಶಾಲಾಕಾಲೇಜುಗಳಲ್ಲಿ ಉಪಾಧ್ಯಾಯರುಗಳು. ಶ್ರೀರಾಮಕೃಷ್ಣರ ಈ ಮಾತನ್ನು ಕೇಳಿ ಎಲ್ಲರೂ ಮುಖ ಮುಖ ನೋಡುತ್ತಿದ್ದಾರೆ. ಶ್ರೀರಾಮಕೃಷ್ಣರು ಅವರ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡು ಹೇಳಿದರು: "ನೀವು ಮದುವೆ ಮನೆಗೆ ಹೋಗಿಲ್ಲವೇನು ? ಮನೆಯ ಯಜಮಾನನು ಹುಕ್ಕಾ ಎಳೆಯುತ್ತಾ ಒಂದು ಮೂಲೆಯಲ್ಲಿ ಕುಳಿತುಕೊಂಡು ಅಪ್ಪಣೆ ಹೊರಡಿಸುತ್ತಿರುತ್ತಾನೆ. ಯಜಮಾನಿಯು ಆ ಕಡೆ ಈ ಕಡೆ ಓಡಾಡುತ್ತಾ ಎಲ್ಲಾ ಕೆಲಸಗಳನ್ನೂ ನಡೆಸಿಕೊಂಡು ಹೋಗುತ್ತಿರುತ್ತಾಳೆ. ಅವಳ ಬಟ್ಟೆಯೆಲ್ಲಾ ಅರಿಶಿನ ಕುಂಕುಮದ ಕಲೆ. ಆ ಕೆಲಸ ಆಗಿಲ್ಲವೇ ಈ ಕೆಲಸ ಆಗಿಲ್ಲವೇ ?—ಎಂದು ನೋಡುವುದು ಕೇಳುವುದರಲ್ಲೇ ವ್ಯಸ್ತವಾಗಿರುತ್ತಾಳೆ. ಮನೆಗೆ ಬಂದ ಹೆಂಗಸರು ಮತ್ತು ಮಕ್ಕಳನ್ನು ಆದರಿಸುವುದು, ಅವರ ಊಟೋಪಚಾರಗಳನ್ನು ನೋಡಿಕೊಳ್ಳುವುದು—ಇವುಗಳಲ್ಲಿ ಮಗ್ನಳಾಗಿರುತ್ತಾಳೆ. ಆಗಾಗ ಯಜಮಾನನ ಹತ್ತಿರ ಬಂದು ತಲೆ ಕೈ ಆಡಿಸುತ್ತಾ ಹೇಳುತ್ತಿರುತ್ತಾಳೆ: 'ಇದನ್ನು ಹೀಗೆ ಮಾಡಿಯಾಗಿದೆ. ಅದು ಹಾಗಾಯಿತು. ಇದನ್ನು ಹೀಗೆ ಮಾಡಬೇಕಾಗಿದೆ, ಅದಿನ್ನೂ ಮುಗಿದಿಲ್ಲ' ಇತ್ಯಾದಿ. ಯಜಮಾನನು ಧೂಮಪಾನ ಮಾಡುತ್ತಲೇ ಸರಿಸರಿ ಎಂದು ತಲೆ ಅಲ್ಲಾಡಿಸುತ್ತಾನೆ. ಇದೂ ಹಾಗೆಯೇ." ಶ್ರೀರಾಮಕೃಷ್ಣರ ಮಾತನ್ನು ಕೇಳಿ ಎಲ್ಲರೂ ನಕ್ಕರು ಮತ್ತು ಸಾಂಖ್ಯದರ್ಶನದ ವಿಷಯವು ಅವರಿಗೆ ಅರ್ಥವಾಯಿತು.

ಮುಂದೆ ಇನ್ನೊಂದು ವಿಷಯ ಬರುತ್ತದೆ. ಶ್ರೀರಾಮಕೃಷ್ಣರು ಹೇಳುತ್ತಾರೆ: "ವೇದಾಂತದ ಪ್ರಕಾರ ಬ್ರಹ್ಮ ಮತ್ತು ಬ್ರಹ್ಮಶಕ್ತಿ, ಪುರುಷ ಮತ್ತು ಪ್ರಕೃತಿ ಅಭೇದ. ಅಂದರೆ ಪುರುಷ ಮತ್ತು ಪ್ರಕೃತಿ ಬೇರೆ ಬೇರೆ ಪದಾರ್ಥಗಳಲ್ಲ, ಎರಡೂ ಒಂದೇ. ಕೆಲವೊಮ್ಮೆ ಪುರುಷ ಭಾವದಲ್ಲಿ ಮತ್ತೆ ಕೆಲವೊಮ್ಮೆ ಪ್ರಕೃತಿ ಭಾವದಲ್ಲಿ ಅದು ಇರುತ್ತದೆ." ನಮಗಿದು ಅರ್ಥವಾಗುತ್ತಿಲ್ಲ ಎಂಬುದನ್ನು ಗಮನಿಸಿ ಶ್ರೀರಾಮಕೃಷ್ಣರು ಮುಂದುವರಿಸಿದರು: "ಇದು ಹೇಗೆ ಗೊತ್ತೇನು ? ಸರ್ಪವು ಕೆಲವೊಮ್ಮೆ ಚಲಿಸುತ್ತದೆ. ಮತ್ತೆ ಕೆಲವೊಮ್ಮೆ ಸ್ಥಿರವಾಗಿ ಒಂದು ಕಡೆ ಬಿದ್ದಿರುತ್ತದೆ. ಇದು ಯಾವಾಗ ಸ್ಥಿರವಾಗಿರುತ್ತದೊ ಇದು ಪುರುಷ ಭಾವ. ಆಗ ಪ್ರಕೃತಿಯು ಪುರುಷನೊಡನೆ ಒಂದಾಗಿರುತ್ತದೆ. ಮತ್ತೆ ಸರ್ಪವು ಚಲಿಸುತ್ತಿದ್ದರೆ ಆಗ ಪ್ರಕೃತಿಯು ಪುರುಷನಿಂದ ಬೇರೆಯಾಗಿ ಕೆಲಸ ಮಾಡು

ತ್ತಿರುವಂತೆ." ಈ ದೃಷ್ಟಾಂತವನ್ನು ಕೇಳಿದಾಗ ಇಷ್ಟೊಂದು ಸರಳ ವಿಷಯ ನಮಗೆ ಅರ್ಥವಾಗಲಿಲ್ಲವಲ್ಲ ಎಂದೆನಿಸಿತು.

ಅನಂತರ ಇನ್ನೊಂದು ವಿಷಯ ಎತ್ತಬಹುದು ; ಮಾಯೆಯು ಈಶ್ವರನ ಶಕ್ತಿ, ಈಶ್ವರನಲ್ಲಿಯೇ ಇದೆ. ಹಾಗಾದರೆ ಈಶ್ವರನು ನಮ್ಮಂತೆಯೇ ಮಾಯಾಬದ್ಧನೆ ? ಶ್ರೀರಾಮಕೃಷ್ಣರು ಉತ್ತರಿಸುತ್ತಾರೆ : "ಇಲ್ಲಪ್ಪ, ಮಾಯೆಯು ಈಶ್ವರನದೇ ಆದರೂ ಮತ್ತು ಮಾಯೆಯು ಈಶ್ವರನಲ್ಲಿ ಸದಾ ಇರುವುದಾದರೂ ಈಶ್ವರನು ಎಂದೂ ಮಾಯಾಬದ್ಧನಾಗುವುದಿಲ್ಲ. ನೋಡು, ಸರ್ಪವು ಯಾರನ್ನು ಕಚ್ಚುತ್ತದೊ ಅವನು ಸಾಯುತ್ತಾನೆ. ಸರ್ಪದ ಬಾಯಲ್ಲಿ ಯಾವಾಗಲೂ ವಿಷವಿರುತ್ತದೆ, ಅದು ಯಾವಾಗಲೂ ಬಾಯಿಂದಲೇ ತಿನ್ನುತ್ತದೆ. ಆದರೆ ಅದು ಸಾಯುವುದೇ ಇಲ್ಲ. ಹಾಗೆಯೇ ಇದೂ ಕೂಡ." ಎಲ್ಲರಿಗೂ ಅರ್ಥವಾಯಿತು, ಇದು ಸಾಧ್ಯವೆನಿಸಿತು.

11. ಈ ಎಲ್ಲ ದೃಷ್ಟಾಂತಗಳಿಂದ ಸಾಧಾರಣ ಸ್ಥಿತಿಯಲ್ಲಿರುವಾಗಲೂ ಶ್ರೀರಾಮ ಕೃಷ್ಣರ ತೀಕ್ಷ್ಣದೃಷ್ಟಿಯ ಮುಂದೆ ಯಾವ ಪದಾರ್ಥವೂ ಯಾವ ಭಾವವೂ ಮರೆ ಮಾಚಿಕೊಂಡಿರಲಾರದು ಎಂದು ತಿಳಿದುಬರುತ್ತದೆ. ಮಾನವ ಸ್ವಭಾವದ ವಿಷಯ ದಲ್ಲಂತೂ ಹೇಳಬೇಕಾಗಿಯೇ ಇಲ್ಲ, ಬಾಹ್ಯ ಪ್ರಕೃತಿಯ ಒಳಗಡೆ ಉಂಟಾಗುವ ಪರಿ ವರ್ತನೆಗಳು ಕೂಡ ಅವರ ದೃಷ್ಟಿಯ ಗೋಚರಕ್ಕೆ ಒಳಗಾಗದೇ ಇರಲು ಸಾಧ್ಯವೇ ಇರಲಿಲ್ಲ. ಯಂತ್ರಗಳ ಮೂಲಕ ನಾವು ಯಾವ ಪ್ರಾಕೃತಿಕ ಬದಲಾವಣೆಗಳನ್ನು ಕಾಣು ತ್ತೇವೆಯೋ ಅದರ ಬಗ್ಗೆ ನಾವಿಲ್ಲಿ ಹೇಳುತ್ತಿಲ್ಲ. ಆಶ್ಚರ್ಯ ವಿಷಯವೇನೆಂದರೆ ಬಾಹ್ಯ ಪ್ರಕೃತಿಯ ಪದಾರ್ಥಗಳಲ್ಲಿ ಲೋಕದ ದೃಷ್ಟಿಗೆ ಕಾಣದ ಅಸಾಧಾರಣ ಪರಿವರ್ತನೆಗಳೇ ಶ್ರೀರಾಮಕೃಷ್ಣರ ದೃಷ್ಟಿಗೆ ಗೋಚರವಾಗುತ್ತಿದ್ದವು. ಭಗವಂತನ ಇಚ್ಛೆಯಿಂದಲೆ ಸೃಷ್ಟಿಯ ಒಳಗೆ ಎಲ್ಲಾ ಪದಾರ್ಥಗಳೂ ವಿಕಾಸಗೊಳ್ಳುತ್ತವೆ. ಅಥವಾ ಅವನೇ ಎಲ್ಲಾ ವಸ್ತು ಮತ್ತು ವ್ಯಕ್ತಿಗಳ ಭಾಗ್ಯಚಕ್ರದ ನಿಯಾಮಕ. ಈ ಭಾವವನ್ನು ಶ್ರೀರಾಮ ಕೃಷ್ಣರಿಗೆ ಹೃದ್ಗತವಾಗಲೆಂದೇ ಜಗನ್ಮಾತೆಯು ಸಾಧಾರಣ ನಿಯಮಗಳಿಗೆ ಅಪವಾದ ವಾದ ಅಸಾಧಾರಣ ಪ್ರಾಕೃತಿಕ ವಿಕಾಸಗಳನ್ನು ಶ್ರೀರಾಮಕೃಷ್ಣರಿಗೆ ಆಗಾಗ ತೋರಿಸಿ ಕೊಡುತ್ತಿದ್ದಳು. "ಯಾರು ನಿಯಮವನ್ನು ಮಾಡಿರುವರೊ, ಯಾರದು ನಿಯಮವೊ ಅವನು ಇಚ್ಛಿಸಿದರೆ ಆ ನಿಯಮವನ್ನು ತಿರುಗುಮುರುಗು ಮಾಡಬಹುದು ಅಥವಾ ಇನ್ನೊಂದು ಬಗೆಯ ನಿಯಮವನ್ನು ಮಾಡಬಹುದು." ಈ ಮಾತಿನ ಅರ್ಥವು ನಮಗುಂಟಾದುದು ಬಾಲ್ಯ ಕಾಲದಿಂದಲೂ ಅವರಿಗುಂಟಾದ ಆ ರೀತಿಯ ದರ್ಶನಗಳ ಮೂಲಕವೇ. ಇದಕ್ಕೆ ದೃಷ್ಟಾಂತವಾಗಿ ಕೆಲವು ಘಟನೆಗಳನ್ನು ಇಲ್ಲಿ ಹೇಳಬಹುದು.

12. ಆಗ ನಾವು ಕಾಲೇಜಿನಲ್ಲಿ ಓದುತ್ತಿದ್ದೆವು. ವಿದ್ಯುಚ್ಛಕ್ತಿಯ ಅದ್ಭುತಕ್ರಿಯೆ ಗಳನ್ನು ತಿಳಿದು ಆಶ್ಚರ್ಯವಾಗುತ್ತಿತ್ತು. ಬಾಲ್ಯ ಚಾಪಲ್ಯದಿಂದ ಒಂದು ದಿನ ಶ್ರೀರಾಮಕೃಷ್ಣರ ಮುಂದೆ ಈ ವಿಷಯವನ್ನು ಉಲ್ಲೇಖಿಸಿ ಅದರ ಬಗ್ಗೆ ಮಾತನಾಡು ತ್ತಿದ್ದೆವು. ಶ್ರೀರಾಮಕೃಷ್ಣರು ವಿದ್ಯುತ್ ಶಬ್ದವನ್ನು ಮತ್ತೆ ಮತ್ತೆ ಕೇಳಿ ಬಾಲಕರಂತೆ

ಕುತೂಹಲದಿಂದ ಪ್ರಶ್ನಿಸಿದರು: "ಏನ್ರಯ್ಯಾ ಅದು, ನೀವೇನೋ ಮಾತನಾಡುತ್ತಿರು ವಿರಿ. ಎಲಕ್ಟ್ರಿಟಿಕ್ ಅಂದರೆ ಏನು ?" ಶ್ರೀರಾಮಕೃಷ್ಣರು ಇಂಗ್ಲಿಷ್ ಶಬ್ದವನ್ನು ಬಾಲಕ ರಂತೆ ಆ ರೀತಿ ಉಚ್ಚರಿಸುವುದನ್ನು ಕೇಳಿ ನಾವೆಲ್ಲರೂ ನಗತೊಡಗಿದೆವು. ಅನಂತರ ವಿದ್ಯುಚ್ಛಕ್ತಿಯ ಸಂಬಂಧವಾಗಿ ಅವರಿಗೆ ಹೇಳಿದೆವು. ವಜ್ರನಿವಾರಕ ದಂಡದ (Lightning Conductor) ಉಪಯುಕ್ತತೆ, ಎಲ್ಲದಕ್ಕಿಂತ ಎತ್ತರವಾಗಿರುವ ಪದಾರ್ಥಗಳ ಮೇಲೆಯೆ ಸಿಡಿಲು ಹೊಡೆಯುವುದು, ಆದ್ದರಿಂದಲೇ ಎತ್ತರವಾದ ಮನೆಯ ಮೇಲೆ ಅದಕ್ಕಿಂತಲೂ ಸ್ವಲ್ಪ ಎತ್ತರವಾಗಿ ಈ ದಂಡವನ್ನು ಲಗತ್ತಿಸಬೇಕು— ಇತ್ಯಾದಿ ಅನೇಕ ವಿಷಯಗಳನ್ನು ಅವರಿಗೆ ಹೇಳಿದೆವು. ನಮ್ಮ ಮಾತನ್ನು ಕೇಳಿ ಶ್ರೀರಾಮ ಕೃಷ್ಣರು ಹೇಳಿದರು : "ಆದರೆ ನಾನು ಮೂರು ಮಹಡಿಯ ಮನೆಯ ಪಕ್ಕದಲ್ಲಿ ಸಣ್ಣ ಜೋಪಡಿಯನ್ನು ನೋಡಿದ್ದೆ. ಆ ದುಷ್ಟ ಸಿಡಿಲು. ಆ ಮನೆಗೆ ಹೊಡೆಯುವುದರ ಬದಲು ಜೋಪಡಿಗೆ ಹೊಡೆಯಿತು. ಇದಕ್ಕೆ ನೀವೇನು ಹೇಳುತ್ತೀರಿ ? ಈ ಎಲ್ಲ ವಿಷಯಗಳನ್ನು ಸರಿಯಾಗಿ ವಿವರಿಸಲು ಸಾಧ್ಯವೇನು ? ನಿಯಮವು ಜಗನ್ಮಾತೆಯ ಇಚ್ಛೆ ಯಿಂದಲೇ ಇರುವುದು ಮತ್ತು ಆಕೆಯ ಇಚ್ಛೆಯಿಂದಲೇ ಅದು ಬದಲಾಗುವುದು". ನಾವು ಶ್ರೀರಾಮಕೃಷ್ಣರಿಗೆ ಪ್ರಾಕೃತಿಕ ನಿಯಮಗಳನ್ನು ವಿವರಿಸಲು ಪ್ರಯತ್ನ ಪಟ್ಟೆವು. ಆ ಸಂದರ್ಭದಲ್ಲಿ ಅವರಿಗೆ ಸೂಕ್ತ ಉತ್ತರವನ್ನು ನೀಡಲು ಮಥುರನಾಥನಂತೆಯೇ ನಾವು ಅಸಮರ್ಥರಾದೆವು. ಮಿಂಚು ಮೂರು ಹಂತದ ಮನೆಯ ಕಡೆಗೆ ಆಕರ್ಷಿತವಾ ದರೂ ಅದು ತನ್ನ ದಾರಿಯನ್ನು ಬದಲಾಯಿಸಿ ಜೋಪಡಿಗೆ ಹೊಡೆಯಿತು ಎಂದು ಅವ ರಿಗೆ ವಿವರಿಸಿದೆವು. ಸಾಮಾನ್ಯವಾಗಿ ಎಲ್ಲಾ ಸಂದರ್ಭಗಳಲ್ಲಿಯೂ ಅತ್ಯಂತ ಎತ್ತರವಾದ ವಸ್ತುಗಳಿಗೆ ಹೊಡೆಯುವುದಾದರೂ ಕೆಲವು ಅಪವಾದಗಳೂ ಇರುತ್ತವೆ. ಆದರೆ ಶ್ರೀರಾಮಕೃಷ್ಣರು ಪ್ರಕೃತಿಯ ಘಟನೆಗಳು ಉಲ್ಲಂಘಿಸಲಾಗದ ನಿಯಮಗಳಿಂದ ನಡೆಯು ತ್ತವೆ ಎಂಬುದನ್ನು ಒಪ್ಪಲೇ ಇಲ್ಲ. ಅವರು ಹೇಳಿದರು: "ಸಾವಿರಾರು ಪ್ರದೇಶಗಳಲ್ಲಿ ಮಿಂಚು ನೀವು ಹೇಳಿದಂತೆಯೇ ವರ್ತಿಸುತ್ತದೆ ಎಂದಿಟ್ಟುಕೊಳ್ಳೋಣ. ಆದರೆ ಇದಕ್ಕೆ ಅಪವಾದಗಳು ಇರುವುದರಿಂದ ಆ ನಿಯಮವು ವ್ಯತ್ಯಯವಾಗುತ್ತದೆ ಎಂಬುದಂತೂ ನಿಶ್ಚಯ."

13. ಸಸ್ಯಶಾಸ್ತ್ರಜ್ಞರ ಪ್ರಕಾರ ಬಿಳಿ ಅಥವಾ ಕೆಂಪು ಹೂವುಗಳನ್ನು ಬಿಡುವ ಗಿಡಗಳು ಅತ್ಯಂತ ಅಪರೂಪಕ್ಕೆ ಕೆಲವೊಮ್ಮೆ ಬೇರೆ ಬಗೆಯ ಹೂವುಗಳನ್ನು ಬಿಡುತ್ತವೆ. ಆದರೆ ಇದು ಎಷ್ಟೊಂದು ಅಸಾಧಾರಣವೆಂದರೆ ಜನ ಸಾಧಾರಣರು ಅದನ್ನು ಗಮನಿಸು ವುದೇ ಇಲ್ಲ ಎಂದು ಹೇಳಿದರೆ ಉತ್ಪ್ರೇಕ್ಷೆಯೇನೂ ಅಲ್ಲ. ಶ್ರೀರಾಮಕೃಷ್ಣರ ಜೀವನ ದಲ್ಲಿ ಬರುವ ಘಟನೆಯನ್ನು ನೋಡಿ ಪ್ರಕೃತಿಯ ನಿಯಮಗಳು ಯಾವಾಗಲೂ ಒಂದೇ ಸಮನಾಗಿ ಇರುವುದಿಲ್ಲ, ಈಶ್ವರೇಚ್ಛೆಯಿಂದ ಬದಲಾಗಬಹುದು ಎಂಬ ವಿಷಯವನ್ನು ಮಥುರನು ವಿರೋಧಿಸಿದನು. ಆ ಸಂದರ್ಭದಲ್ಲಿ ಅದಕ್ಕೆ ದೃಷ್ಟಾಂತವೊಂದು ಅವರಿಗೆ ಕಾಣಿಸಿತು. ಅದನ್ನು ಮಥುರನಿಗೆ ತೋರಿಸಿದಾಗ ಅವನು ಬಾಯಿಮುಚ್ಚಿಕೊಳ್ಳ ಬೇಕಾಯಿತು.

14. ಹೀಗೇ ಶ್ರೀರಾಮಕೃಷ್ಣರು ಒಂದು ಜೀವಂತ ಕಲ್ಲನ್ನು ನೋಡಿದ್ದರು. ಬೆನ್ನೆಲುಬಿನ ಕೆಳಭಾಗವು (Coccyx) ಪ್ರಾಣಿಗಳ ಬಾಲದಂತೆ ಸ್ವಲ್ಪ ವೃದ್ಧಿಯಾಗಿ ಮತ್ತೆ ಅದು ಹಿಂದಿನ ಸ್ಥಿತಿ ಪಡೆಯುವುದನ್ನು ನೋಡಿದ್ದರು. ಸ್ತ್ರೀಭಾವದ ಪ್ರಾಬಲ್ಯದಿಂದ ಪುರುಷನ ಶರೀರದಲ್ಲಿ ಸ್ತ್ರೀ ಶರೀರದ ಲಕ್ಷಣಗಳು ಕಾಣಿಸಿಕೊಳ್ಳುವುದನ್ನು ಅವರು ಗಮನಿಸಿದ್ದರು. ಭೂತ ಪ್ರೇತಾದಿ ಅನೇಕ ಬಗೆಯ ಜೀವಿಗಳನ್ನು ಅವರು ಕಂಡಿದ್ದರು. ಹೀಗೆ ಶ್ರೀರಾಮಕೃಷ್ಣರ ಜೀವನದಲ್ಲಿ ಅನೇಕ ಅಸಾಮಾನ್ಯ ಘಟನೆಗಳು ಸಂಭವಿಸಿದುವು. ಪಾಶ್ಚಾತ್ಯ ಚಿಂತನೆಯ ಪ್ರಭಾವದಿಂದ ಪ್ರಕೃತಿಯು ಬುದ್ಧಿಶಕ್ತಿ ಇಲ್ಲದ ಜಡವಸ್ತುವೆಂದು ಸಾಮಾನ್ಯವಾಗಿ ಪರಿಗಣಿಸುತ್ತೇವೆ. ಇದರಿಂದಾಗಿ ಈ ಎಲ್ಲ ಅಸಾಧಾರಣ ಘಟನೆಗಳು ಕಾರ್ಯಕಾರಣ ಸಂಬಂಧದಿಂದ ಬೇರೆಯಾದ ಅಸ್ವಾಭಾವಿಕ ಪ್ರಾಕೃತಿಕ ಘಟನೆಗಳು (natural aberrations) ಎಂದು ಹೇಳಿ ನಿಶ್ಚಿಂತರಾಗಿ ಬಿಡುತ್ತೇವೆ. ಪ್ರಕೃತಿಯು ಯಾವ ನಿಯಮಗಳಿಂದ ಕೆಲಸ ಮಾಡುತ್ತದೆಯೊ ಅವೆಲ್ಲ ನಮಗೆ ಗೊತ್ತಿವೆ ಎಂದು ಭಾವಿಸುತ್ತೇವೆ. ಶ್ರೀರಾಮಕೃಷ್ಣರ ವಿಶ್ವಾಸವೇ ಬೇರೆಯಾಗಿತ್ತು. ಸಮಗ್ರ ಪ್ರಕೃತಿಯು ಚೈತನ್ಯಮಯಿ ಜಗನ್ಮಾತೆಯ ಲೀಲಾ ವಿಲಾಸವಲ್ಲದೆ ಬೇರೇನೂ ಅಲ್ಲ ಎಂಬುದನ್ನು ಅವರು ಪ್ರತ್ಯಕ್ಷ ಕಂಡಿದ್ದರು. ಆದ್ದರಿಂದ ಈ ಎಲ್ಲ ಅಸಾಧಾರಣ ಘಟನೆಗಳೂ ಆಕೆಯ ಇಚ್ಛೆಯಿಂದಲೇ ಸಂಭವಿಸುತ್ತವೆ ಎಂಬುದು ಅವರ ವಿಶ್ವಾಸ. ಈ ವಿಶ್ವಾಸದಿಂದಾಗಿ ಅವರು ನಮಗಿಂತ ಅಧಿಕವಾಗಿ ಶಾಂತಿ ಆನಂದಗಳನ್ನು ಅನುಭವಿಸುತ್ತಿದ್ದರು ಎಂಬುದನ್ನು ಪ್ರತ್ಯೇಕ ಹೇಳಬೇಕಾಗಿಲ್ಲ. ಶ್ರೀರಾಮಕೃಷ್ಣರ ಜೀವನದಲ್ಲಿ ಬರುವ ಇಂತಹ ದೃಷ್ಟಾಂತಗಳನ್ನು ನಾವು ಆಗಲೇ ಉಲ್ಲೇಖಿಸಿರುವೆವು ಮತ್ತು ಮುಂದೆಯೂ ಉಲ್ಲೇಖಿಸುತ್ತೇವೆ. ಈಗ ಹೇಳಿರುವಷ್ಟರಿಂದಲೇ ನಾವು ಹೇಳಬೇಕಾದ ವಿಷಯವನ್ನು ಓದುಗರು ಅರ್ಥ ಮಾಡಿಕೊಳ್ಳಬಹುದು. ಆದ್ದರಿಂದ ಹಿಂದಿನ ವಿಷಯಕ್ಕೆ ಹೋಗುತ್ತೇವೆ.

15. ಶ್ರೀರಾಮಕೃಷ್ಣರು ಪ್ರತಿಯೊಂದು ವಸ್ತು ಮತ್ತು ವ್ಯಕ್ತಿಯನ್ನು ಎರಡು ದೃಷ್ಟಿಯಿಂದ ನೋಡುತ್ತಿದ್ದರು ಮತ್ತು ಅದಕ್ಕನುಗುಣವಾಗಿ ಆಯಾಯಾ ವಸ್ತು ಹಾಗೂ ವ್ಯಕ್ತಿಯ ಸ್ವಭಾವವನ್ನು ನಿರ್ಣಯಿಸುತ್ತಿದ್ದರು. ನಮ್ಮಂತೆ ಸಾಧಾರಣ ದೃಷ್ಟಿಯಿಂದ ಯಾವುದನ್ನೂ ಅವರು ನಿರ್ಣಯಿಸುತ್ತಿರಲಿಲ್ಲ. ಆದ್ದರಿಂದ ತೀರ್ಥಯಾತ್ರೆ ಮತ್ತು ಸಾಧು ಸಂದರ್ಶನ ಇವುಗಳನ್ನೂ ಕೂಡ ಶ್ರೀರಾಮಕೃಷ್ಣರು ಎರಡು ದೃಷ್ಟಿಗಳಿಂದ ಮಾಡಿದರು. ಉಚ್ಚ ಭಾವ ಭೂಮಿಯಿಂದ ನೋಡುತ್ತಾ ಶ್ರೀರಾಮಕೃಷ್ಣರು ಯಾವ ತೀರ್ಥಸ್ಥಳದಲ್ಲಿ ಎಷ್ಟು ಆಧ್ಯಾತ್ಮಿಕ ಶಕ್ತಿ ಅಡಗಿದೆ, ಮನುಷ್ಯನ ಮನಸ್ಸನ್ನು ಉನ್ನತ ಮಟ್ಟಕ್ಕೇರಿಸುವ ಶಕ್ತಿ ಅದಕ್ಕೆಷ್ಟಿದೆ ಎಂಬುದನ್ನು ಅವರು ನಿರ್ಧರಿಸುತ್ತಿದ್ದರು. ವಿಷಯಬುದ್ಧಿಯಿಂದ ಮುಕ್ತವಾದ ಅವರ ಪವಿತ್ರ ಮನಸ್ಸೇ ಈ ಸೂಕ್ಷ್ಮ ವಿಷಯವನ್ನು ತಿಳಿಸಿಕೊಡುವ ಒಂದು ಸೂಕ್ಷ್ಮಯಂತ್ರವಾಗಿತ್ತು. ತೀರ್ಥಸ್ಥಳ ಅಥವಾ ದೇವಸ್ಥಾನಕ್ಕೆ ಹೋದ ಕೂಡಲೇ ಅದು ಉಚ್ಚ ಭಾವಭೂಮಿಗೆ ಏರಿ ಆ ಸ್ಥಾನದ ದಿವ್ಯ ಪ್ರಕಾಶವನ್ನು ಶ್ರೀರಾಮಕೃಷ್ಣರಿಗೆ ತೋರಿಸಿ ಕೊಡುತ್ತಿತ್ತು. ಉಚ್ಚ ಭಾವಭೂಮಿ

ಯಿಂದಲೇ ಶ್ರೀರಾಮಕೃಷ್ಣರು ಕಾಶಿಯನ್ನು ಸ್ವರ್ಣಮಯವನ್ನಾಗಿ ಕಂಡಿದ್ದರು, ಕಾಶಿಯಲ್ಲಿ ಮರಣ ಹೊಂದಿದರೆ ಹೇಗೆ ಜೀವನು ಮುಕ್ತನಾಗುವನು ಎಂಬುದನ್ನು ಅರ್ಥ ಮಾಡಿಕೊಂಡಿದ್ದರು. ಶ್ರೀ ಬೃಂದಾವನದಲ್ಲಿ ದಿವ್ಯ ಭಾವದ ವಿಶೇಷ ಅಭಿವ್ಯಕ್ತಿಯನ್ನು ಅನುಭವಿಸಿದ್ದರು ಹಾಗೂ ನವದ್ವೀಪದಲ್ಲಿ ಈಗಲೂ ಶ್ರೀಗೌರಾಂಗನ ಸೂಕ್ಷ್ಮ ಆವಿರ್ಭಾವ ಇರುವುದನ್ನು ಪ್ರತ್ಯಕ್ಷ ಕಂಡಿದ್ದರು.

16. ಬೃಂದಾವನದಲ್ಲಿ ಶ್ರೀ ಚೈತನ್ಯದೇವನೇ ಮೊದಲ ಬಾರಿಗೆ ದಿವ್ಯಭಾವದ ಅಭಿವ್ಯಕ್ತಿಯನ್ನು ಅನುಭವಿಸಿದ್ದನು ಎಂದು ಹೇಳುತ್ತಾರೆ. ಅವನು ಬರುವುದಕ್ಕೆ ಮುಂಚೆ ವ್ರಜದ ತೀರ್ಥಸ್ಥಾನಗಳೆಲ್ಲವೂ ಲುಪ್ತಪ್ರಾಯವಾಗಿದ್ದವು. ಅವನು ಆ ಸ್ಥಳಗಳಲ್ಲಿ ತಿರುಗಾಡುತ್ತಿರುವಾಗ ಬೇರೆ ಬೇರೆ ಜಾಗಗಳಲ್ಲಿ ಕೃಷ್ಣನ ಬೇರೆ ಬೇರೆ ರೀತಿಯ ದಿವ್ಯ ಅನುಭವಗಳನ್ನು ಪಡೆಯುತ್ತಿದ್ದನು. ಆ ರೀತಿ ಅನುಭವವಾದ ಜಾಗಗಳೆಲ್ಲವೂ ಹಿಂದೆ ವಾಸ್ತವಿಕವಾದ ಶ್ರೀಕೃಷ್ಣನ ಲೀಲಾಸ್ಥಾನವಾಗಿದ್ದುವು. ರೂಪ, ಸನಾತನ ಮುಂತಾದ ಅವನ ಶಿಷ್ಯರಿಗೆ ಮೊದಲು ಈ ವಿಷಯದಲ್ಲಿ ವಿಶ್ವಾಸವುಂಟಾಯಿತು. ಅನಂತರ ಅವರ ಮೂಲಕ ಕೇಳಿ ಇಡೀ ಭಾರತೀಯರೆಲ್ಲರೂ ಅದರಲ್ಲಿ ವಿಶ್ವಾಸವಿರಿಸಿದರು. ಚೈತನ್ಯದೇವನ ಈ ರೀತಿಯ ಬೃಂದಾವನ ಆವಿಷ್ಕಾರದ ಕಥೆಯಲ್ಲಿ ನಮಗೆ ಸ್ವಲ್ಪವೂ ವಿಶ್ವಾಸವಿರಲಿಲ್ಲ. ಈ ರೀತಿ ಆಗಲು ಸಾಧ್ಯವೇ ಇಲ್ಲ ಎಂದು ಭಾವಿಸಿದ್ದೆವು. ಉಚ್ಚ ಭಾವ ಭೂಮಿಯನ್ನು ಏರಿ ವಸ್ತುಗಳ ಅಥವಾ ವ್ಯಕ್ತಿಗಳ ಯಥಾರ್ಥ ಸ್ವರೂಪವನ್ನು ಅರಿಯುವ ಸಾಮರ್ಥ್ಯವನ್ನು ಶ್ರೀರಾಮಕೃಷ್ಣರಲ್ಲಿ ಕಂಡು ನಮಗೆ ಈ ವಿಷಯದಲ್ಲಿ ಸ್ವಲ್ಪ ನಂಬಿಕೆಯುಂಟಾಯಿತು. ಶ್ರೀರಾಮಕೃಷ್ಣರ ಜೀವನದಲ್ಲಿ ಬರುವ ಒಂದೆರಡು ಘಟನೆಗಳನ್ನು ಇಲ್ಲಿ ದೃಷ್ಟಾಂತ ರೂಪದಲ್ಲಿ ಕೊಡಬಹುದು.

17. ಶ್ರೀರಾಮಕೃಷ್ಣರ ಅಳಿಯ ಹೃದಯರಾಮನ ಮನೆ ಕಾಮಾರಪುಕುರದ ಹತ್ತಿರ ಶಿಹೋರ್ ಗ್ರಾಮದಲ್ಲಿತ್ತು. ಶ್ರೀರಾಮಕೃಷ್ಣರು ಆಗಾಗ ಅಲ್ಲಿಗೆ ಹೋಗಿ ವಾಸಿಸುತ್ತಿದ್ದರು. ಒಮ್ಮೆ ಶ್ರೀರಾಮಕೃಷ್ಣರು ಅಲ್ಲಿ ಇದ್ದಾಗ ಹೃದಯನ ಕಿರಿಯ ತಮ್ಮ ರಾಜಾರಾಮನಿಗೂ ಮತ್ತು ಗ್ರಾಮದ ಇನ್ನೊಬ್ಬ ವ್ಯಕ್ತಿಗೂ ಜಗಳವುಂಟಾಯಿತು. ಮೊದಲು ಬಯ್ದಾಟದಿಂದ ಪ್ರಾರಂಭವಾಗಿ ಅನಂತರ ಕೈಕೈಗೆ ಹತ್ತಿಕೊಂಡಿತು. ರಾಜಾರಾಮನು ಕೈಗೆ ಸಿಕ್ಕಿದ ಒಂದು ಹುಕ್ಕಾದಿಂದ ಆ ವ್ಯಕ್ತಿಯ ತಲೆಗೆ ಹೊಡೆದನು. ಹೊಡೆಸಿಕೊಂಡ ವ್ಯಕ್ತಿಯು ರಾಜಾರಾಮನ ವಿರುದ್ಧ ಮೊಕದ್ದಮೆ ಹೂಡಿದನು. ಶ್ರೀರಾಮಕೃಷ್ಣರ ಮುಂದೆಯೇ ಘಟನೆ ನಡೆದುದರಿಂದ ಮತ್ತು ಅವರು ಸತ್ಯವಾದಿಗಳು ಎಂಬುದು ಅವನಿಗೆ ತಿಳಿದಿದ್ದುದರಿಂದ ಸಾಕ್ಷಿಯಾಗಿ ಅವರ ಹೆಸರನ್ನು ಸೂಚಿಸಿದನು. ಹೀಗಾಗಿ ಸಾಕ್ಷೀ ನೀಡಲು ಶ್ರೀರಾಮಕೃಷ್ಣರು ವನವಿಷ್ಣುಪುರಕ್ಕೆ ಹೋಗಬೇಕಾಯಿತು. ಅಲ್ಲಿಗೆ ಹೋಗುವುದಕ್ಕೆ ಮುಂಚೆ ಅವರು ರಾಜಾರಾಮನ ಅಚಾತುರ್ಯಕ್ಕಾಗಿ ಅವನನ್ನು ಚೆನ್ನಾಗಿ ಬಯ್ದರು. ಅಲ್ಲಿಗೆ ಹೊದಮೇಲೆ ಮತ್ತೆ ಅವನಿಗೆ ಹೇಳಿದರು, "ಆ ದೂರಿತ್ತವನಿಗೆ ಹಣವನ್ನು ಕೊಟ್ಟು ಈ ಮೊಕದ್ದಮೆಯನ್ನು ರದ್ದುಗೊಳಿಸು. ಇಲ್ಲದಿದ್ದರೆ ನೀನೇ

ತಪ್ಪಿತಸ್ಥನಾಗುತ್ತೀಯೆ. ನಾನು ಸುಳ್ಳು ಹೇಳಲಾಗುವುದಿಲ್ಲ. ನನ್ನನ್ನು ಕೇಳಿದಾಗ ಕಂಡ ದ್ದನ್ನು ಕಂಡಂತೆಯೇ ಹೇಳಿಬಿಡುತ್ತೇನೆ." ರಾಜಾರಾಮನು ಹೆದರಿ ಮೊಕದ್ದಮೆಯನ್ನು ಕೊನೆಗೊಳಿಸಿದನು. ಶ್ರೀರಾಮಕೃಷ್ಣರು ಈ ಅವಕಾಶವನ್ನು ವನವಿಷ್ಣುಪುರವನ್ನು ನೋಡಲು ಬಳಸಿಕೊಂಡರು.

ಒಂದು ಕಾಲದಲ್ಲಿ ಆ ಸ್ಥಾನವು ತುಂಬಾ ಸಂಪದ್ಭರಿತವಾಗಿತ್ತು. ಅಲ್ಲಿ ಕಾಣಿಸುವ ಲಾಲ್‌ಬಂಧ್, ಕೃಷ್ಣಬಂಧ್ ಮುಂತಾದ ಕೊಳಗಳು, ಅನೇಕ ದೊಡ್ಡ ದೇವಾಲಯಗಳು, ಅಗಲವಾದ ಬೀದಿಗಳು, ಅನೇಕ ಅಂಗಡಿಗಳಿಂದ ಕೂಡಿದ ಮಾರುಕಟ್ಟೆಗಳು, ಮುರಿದು ಬಿದ್ದ ಅನೇಕ ಮನೆಗಳು ಮತ್ತು ದೇವಸ್ಥಾನಗಳು ಇತ್ಯಾದಿಗಳು ಇದಕ್ಕೆ ಸಾಕ್ಷಿಯಾಗಿವೆ. ವಿಷ್ಣುಪುರದ ರಾಜರುಗಳು ಹಿಂದೆ ಅತ್ಯಂತ ಧರ್ಮಭೀರುಗಳೂ ಶಕ್ತಿಶಾಲಿಗಳೂ ವಿದ್ಯಾ ಪೋಷಕರೂ ಆಗಿದ್ದರು. ಆ ನಗರವು ಮೊದಲು ಸಂಗೀತದ ಬೆಳವಣಿಗೆಗೆ ಪ್ರಸಿದ್ಧವಾ ಗಿತ್ತು. ರೂಪ ಸನಾತನ ಮುಂತಾದ ಶ್ರೀಚೈತನ್ಯನ ಅನುಯಾಯಿಗಳು ಕಾಲವಾದ ಸ್ವಲ್ಪ ಕಾಲದ ನಂತರ ರಾಜಕುಟುಂಬದವರು ವೈಷ್ಣವರಾಗಿ ಪರಿವರ್ತಿತರಾಗಿದ್ದರು. ಕಲ್ಕತ್ತೆಯ ಬಾಗ್ ಬಜಾರಿನಲ್ಲಿ ಸ್ಥಾಪಿತವಾಗಿರುವ ಶ್ರೀ ಮದನ ಮೋಹನನ ವಿಗ್ರಹವು ಮೊದಲು ಈ ರಾಜಪರಿವಾರಕ್ಕೆ ಸೇರಿತ್ತು. ಗೋಕುಲ್‌ಚಂದ್ರ ಮಿತ್ರನು ಒಮ್ಮೆ ಅಲ್ಲಿಯ ರಾಜರಿಗೆ ಬಹಳಷ್ಟು ಹಣಕೊಟ್ಟಿದ್ದನಂತೆ. ಅವನು ಆ ವಿಗ್ರಹವನ್ನು ನೋಡಿ ಆಕರ್ಷಿತ ನಾಗಿ ಹಣದ ಬದಲು ಅದನ್ನೇ ತೆಗೆದುಕೊಂಡು ಬಂದನಂತೆ. ಮದನ ಮೋಹನ ವಿಗ್ರಹ ವಲ್ಲದೆ ಅಲ್ಲಿ ಬೇರೆ ರಾಜರಿಂದ ಪ್ರತಿಷ್ಠಿತವಾದ ಮೃಣ್ಮಯಿ ಎಂಬ ಹೆಸರಿನ ಅತ್ಯಂತ ಪ್ರಾಚೀನ ದೇವೀ ಮೂರ್ತಿಯೊಂದಿತ್ತು. ಮೃಣ್ಮಯಿ ದೇವಿಯು ತುಂಬಾ ಜಾಗ್ರತ ಳೆಂದು ಜನರು ಹೇಳುತ್ತಿದ್ದರು. ರಾಜ ಮನೆತನದವರು ಕಷ್ಟ ಕಾಲದಲ್ಲಿರುವಾಗ ಒಬ್ಬಳು ಹುಚ್ಚಿ ಆ ವಿಗ್ರಹವನ್ನು ಭಗ್ನಗೊಳಿಸಿದ್ದಳು. ಆದ್ದರಿಂದ ಹೊಸವಿಗ್ರಹವೊಂದನ್ನು ಅದೇ ಸ್ಥಳದಲ್ಲಿ ಪ್ರತಿಷ್ಠಾಪಿಸಿದ್ದರು.

ಶ್ರೀರಾಮಕೃಷ್ಣರು ಬೇರೆಲ್ಲ ದೇವಸ್ಥಾನಗಳನ್ನು ಸಂದರ್ಶಿಸಿ ಮೃಣ್ಮಯಿಯನ್ನು ನೋಡಲು ಹೋಗುತ್ತಿದ್ದರು. ದಾರಿಯಲ್ಲಿ ಒಂದು ಕಡೆ ಅವರು ಭಾವ ಸಮಾಧಿಯನ್ನು ಪಡೆದರು. ಆಗ ಮಣ್ಮಯಿಯ ಮುಖ ಮಾತ್ರ ಅವರಿಗೆ ಕಾಣಿಸಿತು. ಅವರು ದೇವ ಸ್ಥಾನಕ್ಕೆ ಹೋಗಿ ಅಲ್ಲಿಯ ಹೊಸ ಮೂರ್ತಿಯನ್ನು ನೋಡಿದಾಗ ಅದು ತಾವು ಸಮಾಧಿಯಲ್ಲಿ ಕಂಡ ಮೂರ್ತಿಯಂತಿರಲಿಲ್ಲ. ಈ ವ್ಯತ್ಯಾಸಕ್ಕೆ ಕಾರಣವೇನೆಂದು ಅವರಿಗೆ ತಿಳಿಯಲಿಲ್ಲ. ವಿಚಾರಿಸಿದಾಗ ತಿಳಿದು ಬಂತು ಹೊಸ ಮೂರ್ತಿಯು ಹಳೆಯ ಮೂರ್ತಿ ಗಿಂತ ತುಂಬಾ ಭಿನ್ನವಾಗಿದೆ ಎಂದು. ಹೊಸ ಮೂರ್ತಿಯನ್ನು ಮಾಡುವಾಗ ಕುಂಬಾ ರನು ತನ್ನ ಕೌಶಲವನ್ನು ತೋರಿಸಲು ಮುಖವನ್ನು ಬದಲಾಯಿಸಿದ್ದನು. ಮುರಿದ ಹಳೆಯ ವಿಗ್ರಹದ ತಲೆಯನ್ನು ಬ್ರಾಹ್ಮಣನೊಬ್ಬನು ತನ್ನ ಮನೆಯಲ್ಲಿ ಜಾಗರೂಕತೆ ಯಿಂದ ಇರಿಸಿಕೊಂಡಿದ್ದನು. ಸ್ವಲ್ಪ ಕಾಲದ ನಂತರ ಆ ಭಕ್ತ ಬ್ರಾಹ್ಮಣನು ಆ ತಲೆ ಯನ್ನು ಸೇರಿಸಿ ಇನ್ನೊಂದು ವಿಗ್ರಹವನ್ನು ಮಾಡಿಸಿದನು. ಲಾಲ್‌ಬಂಧ್ ಕೊಳದ

ಹತ್ತಿರ ಒಂದು ಸುಂದರ ಪ್ರದೇಶದಲ್ಲಿ ಅದನ್ನು ಪ್ರತಿಷ್ಠಾಪಿಸಿ ನಿತ್ಯಪೂಜೆ ಮಾಡು ತ್ತಿದ್ದನು.

18. ತಮ್ಮೆಡೆಗೆ ಬಂದ ವ್ಯಕ್ತಿಗಳ ಉದ್ದೇಶ ಮತ್ತು ಮನೋಭಾವವನ್ನು ಅರಿತು ಕೊಳ್ಳುವ ಸಾಮರ್ಥ್ಯವು ಶ್ರೀರಾಮಕೃಷ್ಣರಿಗಿತ್ತು. ಇದರ ವಿಷಯವಾಗಿ ಇಲ್ಲಿ ಒಂದು ದೃಷ್ಟಾಂತವನ್ನು ಕೊಡಬಹುದು. ಸ್ವಾಮಿ ಬ್ರಹ್ಮಾನಂದರನ್ನು ಶ್ರೀರಾಮಕೃಷ್ಣರು ತಮ್ಮ ಪುತ್ರನೆಂದು ಪ್ರೀತಿಸುತ್ತಿದ್ದರು. ಒಂದು ದಿನ ಅವರು ದಕ್ಷಿಣೇಶ್ವರದಲ್ಲಿ ಶ್ರೀರಾಮ ಕೃಷ್ಣರ ಕೊಠಡಿಯ ಪೂರ್ವ ದಿಕ್ಕಿನಲ್ಲಿರುವ ವರಾಂಡದಲ್ಲಿ ನಿಂತು ಶ್ರೀರಾಮಕೃಷ್ಣ ರೊಡನೆ ಮಾತನಾಡುತ್ತಿದ್ದರು. ಆ ಸಂದರ್ಭದಲ್ಲಿ ಒಂದು ಕುದುರೆ ಗಾಡಿಯು ಆ ಕಡೆ ಬರತೊಡಗಿತು. ಅದರಲ್ಲಿ ಕೆಲವು ಜನ ಗಂಡಸರು ಕುಳಿತುಕೊಂಡಿದ್ದರು. ಅದನ್ನು ನೋಡಿದ ಕೂಡಲೇ ಕಲ್ಕತ್ತೆಯ ಯಾವುದೋ ಶ್ರೀಮಂತನದೆಂದು ಅವರಿಗನ್ನಿಸಿತು. ಕಲ್ಕತ್ತೆಯಿಂದ ಶ್ರೀರಾಮಕೃಷ್ಣರನ್ನು ನೋಡಲು ಆಗ ಅನೇಕರು ಬರುತ್ತಿದ್ದರು, ಹಾಗೆಯೇ ಇವರೂ ಬರುತ್ತಿರುವರೆಂದು ಸ್ವಾಮಿ ಬ್ರಹ್ಮಾನಂದರು ಅದರ ಕಡೆಗೆ ಹೆಚ್ಚು ಗಮನ ಕೊಡಲಿಲ್ಲ

ಆದರೆ ಶ್ರೀರಾಮಕೃಷ್ಣರು ಆ ಗಾಡಿಯನ್ನು ಕಂಡ ಕೂಡಲೇ ಭಯದಿಂದ ಓಡಿ ಹೋಗಿ ಕೊಠಡಿಯ ಒಳಗೆ ಕುಳಿತು ಬಿಟ್ಟರು. ಸ್ವಾಮಿ ಬ್ರಹ್ಮಾನಂದರು ಆಶ್ಚರ್ಯದಿಂದ ಅವರ ಹಿಂದೆಯೇ ಕೊಠಡಿಗೆ ಹೋದರು. ಅವರನ್ನು ನೋಡಿ ಶ್ರೀರಾಮಕೃಷ್ಣರು ಹೇಳಿ ದರು : "ಹೋಗು ಹೋಗು, ಅವರು ನನ್ನನ್ನು ನೋಡಬೇಕೆಂದು ಹೇಳಿದರೆ ನಾನು ಅವ ರನ್ನು ಈಗ ನೋಡುವುದಕ್ಕೆ ಆಗುವುದಿಲ್ಲವೆಂದು ಹೇಳು." ಬ್ರಹ್ಮಾನಂದರು ಹೊರಗೆ ಬಂದರು. ಅಷ್ಟು ಹೊತ್ತಿಗೆ ಆಗುಂತಕರು ಅವರ ಹತ್ತಿರ ಬಂದು "ಒಬ್ಬರು ಸಾಧುಗಳು ಇಲ್ಲಿ ಇರುತ್ತಾರಲ್ಲವೆ?" ಎಂದು ಕೇಳಿದರು. ಸ್ವಾಮಿ ಬ್ರಹ್ಮಾನಂದರು ಶ್ರೀರಾಮಕೃಷ್ಣರ ಹೆಸರನ್ನು ಪ್ರಸ್ತಾಪಿಸಿ ಹೇಳಿದರು: "ಹೌದು, ನೀವು ಅವರನ್ನು ನೋಡಬೇಕೇನು?" ಅವ ರಲ್ಲಿ ಒಬ್ಬರು ಹೇಳಿದರು : "ನಮ್ಮ ಸಂಬಂಧಿಕರೊಬ್ಬರಿಗೆ ತೀವ್ರ ಕಾಯಿಲೆಯಾಗಿದೆ ಯಾವುದೇ ಔಷಧಿಯಿಂದಲೂ ಅವರ ರೋಗ ಗುಣವಾಗುತ್ತಿಲ್ಲ. ಈ ಸಾಧುಗಳು ಏನಾ ದರೂ ಔಷಧಿ ಕೊಡಬಹುದೇನೊ ಎಂದು ನಾವು ಬಂದಿದ್ದೇವೆ." ಸ್ವಾಮಿ ಬಹ್ಮಾನಂದರು ಹೇಳಿದರು: "ನಿಮ್ಮದು ತಪ್ಪು ತಿಳಿವಳಿಕೆ. ಅವರು ಯಾರಿಗೂ ಯಾವ ಔಷಧಿಯನೂ ಕೊಡುವುದಿಲ್ಲ. ಬ್ರಹ್ಮಚಾರಿ ದುರ್ಗಾನಂದನ ವಿಷಯವನ್ನು ನೀವು ಕೇಳಿರಬಹುದು ಅವನು ಅಲ್ಲಿ ಪಂಚವಟಿಯ ಒಂದು ಗುಡಿಸಲಿನಲ್ಲಿ ಇದ್ದಾನೆ. ನೀವು ಅವನನ್ನು ಅಲ್ಲಿ ಕಾಣಬಹುದು." ಅವರು ಹೊರಟು ಹೋದಮೇಲೆ ಶ್ರೀರಾಮಕೃಷ್ಣರು ಸ್ವಾಮಿ ಬ್ರಹ್ಮಾ ನಂದರಿಗೆ ಹೇಳಿದರು : "ಅವರಲ್ಲಿ ತುಂಬಾ ತಮಸ್ಸಿನ ಶಕ್ತಿ ಇರುವುದನ್ನು ಕಂಡೆ. ಅವ ರೊಡನೆ ಮಾತನಾಡುವುದಿರಲಿ, ಅವರನ್ನು ನೋಡುವುದಕ್ಕೂ ಕೂಡ ಆಗಲಿಲ್ಲ. ಅದಕ್ಕೇ ಭಯದಿಂದ ಓಡಿ ಬಂದೆ." ಹೀಗೆ ಪ್ರತಿದಿನವೂ ಶ್ರೀರಾಮಕೃಷ್ಣರು ಉನ್ನತ ಪ್ರಜ್ಞಾಸ್ತರ ದಿಂದ ವಿವಿಧ ಸ್ಥಳ, ವಸ್ತು ಮತ್ತು ವ್ಯಕ್ತಿಗಳಲ್ಲಿ ವಿಭಿನ್ನ ರೀತಿಯ ಶಕ್ತಿಯ ಆವಿರ್ಭಾವ

ವನ್ನು ಕಾಣುತ್ತಿದ್ದರು. ಶ್ರೀರಾಮಕೃಷ್ಣರ ಅನುಭವದ ಆಧಾರದಿಂದ ಉಚ್ಚ ನೀಚ ಭಾವಗಳು ಅವುಗಳಲ್ಲಿ ನಿಜವಾಗಿ ಇರುವುದರಲ್ಲಿ ನಮಗೆ ವಿಶ್ವಾಸವುಂಟಾಯಿತು. ಇನ್ನೂ ಕೆಲವು ಉದಾಹರಣೆಗಳನ್ನು ಇಲ್ಲಿ ಉಲ್ಲೇಖಿಸಿ ಸಾಧಾರಣ ಪ್ರಜ್ಞಾಸ್ತರದಲ್ಲಿರುವಾಗ ಅವರು ತೀರ್ಥಸ್ಥಳಗಳಲ್ಲಿ ಏನು ಅನುಭವಿಸಿದರು ಎಂಬುದನ್ನು ವಿವರಿಸುತ್ತೇವೆ.

19. ವಿಶಾಲ ಮನೋಭಾವದ ಸ್ವಾಮಿ ವಿವೇಕಾನಂದರಿಗೆ ಬಾಲ್ಯದಿಂದಲೂ ಕೂಡ ಇತರರ ದುಃಖವನ್ನು ನೋಡಿ ಸಹಿಸಲಾಗುತ್ತಿರಲಿಲ್ಲ. ಇತರರಿಂದ ಯಾವುದೇ ರೀತಿಯಲ್ಲಿ ತಾವು ಉಪಕಾರವನ್ನು ಪಡೆದಿದ್ದರೆ, ಬೇರೆಯವರೂ ಹಾಗೆಯೇ ಪಡೆಯ ಲೆಂದು ಬಯಸುತ್ತಿದ್ದರು ಮತ್ತು ಬೇರೆಯವರನ್ನು ಅವರೆಡೆಗೆ ಹೋಗಿ ತಮ್ಮಂತೆಯೆ ಉಪಕೃತರಾಗಲು ಹುರಿದುಂಬಿಸುತ್ತಿದ್ದರು. ಓದು ಬರಹ, ಧರ್ಮ ಕರ್ಮ ಇತ್ಯಾದಿ ಎಲ್ಲಾ ವಿಷಯಗಳಲ್ಲಿಯೂ ಸ್ವಾಮೀಜಿಯವರ ಮನೋಭಾವ ಇದೇ ರೀತಿಯಾಗಿತ್ತು. ಕಾಲೇಜಿನಲ್ಲಿ ಓದುತ್ತಿದ್ದಾಗ ಸಹಪಾಠಿಗಳನ್ನು ಸೇರಿಸಿ ಬೇರೆ ಬೇರೆ ಸ್ಥಳಗಳಲ್ಲಿ ನಿಯ ಮಿತ ದಿನದಲ್ಲಿ ಪ್ರಾರ್ಥನೆ, ಧ್ಯಾನ ಮುಂತಾದವುಗಳನ್ನು ಮಾಡುತ್ತಿದ್ದರು. ಮಹರ್ಷಿ ದೇವೇಂದ್ರನಾಥ್ ಮತ್ತು ಕೇಶವಚಂದ್ರಸೇನ್ ಇವರ ಪರಿಚಯವಾದ ಮೇಲೆ ಸ್ವಾಮೀಜಿಯವರು ಇತರರನ್ನೂ ಅವರೆಡೆಗೆ ಕರೆದುಕೊಂಡು ಹೋಗುತ್ತಿದ್ದರು.

ಶ್ರೀರಾಮಕೃಷ್ಣರ ದರ್ಶನವನ್ನು ಪಡೆದು ಅವರ ಅಪೂರ್ವ ತ್ಯಾಗ, ವೈರಾಗ್ಯ, ಭಗವದ್ಭಕ್ತಿ ಇವುಗಳನ್ನು ನೋಡಿದ ಮೇಲೆ ಸ್ವಾಮೀಜಿಯವರು ತಮ್ಮ ಸಹಪಾಠಿ ಗಳನ್ನೂ ಅವರೆಡೆಗೆ ಕರೆದುಕೊಂಡು ಹೋಗಿ ಪರಿಚಯ ಮಾಡಿಸುತ್ತಿದ್ದರು. ಇದೊಂದು ಅವರ ಜೀವನದ ವ್ರತವಾಗಿಬಿಟ್ಟಿತ್ತು. ನಾವು ಹೀಗೆ ಹೇಳಿರುವುದರಿಂದ ಬುದ್ಧಿವಂತ ರಾದ ಸ್ವಾಮೀಜಿಯವರು ತಮಗೆ ತಿಳಿದಿರುವವರನ್ನೆಲ್ಲಾ ಶ್ರೀರಾಮಕೃಷ್ಣರೆಡೆಗೆ ಕರೆದು ಕೊಂಡು ಹೋಗುತ್ತಿದ್ದರೆಂದು ಭಾವಿಸಬಾರದು. ಅನೇಕ ದಿನದ ಪರಿಚಯದ ನಂತರ ಯಾರಿಗೆ ಸತ್ತ್ವಭಾವ ಮತ್ತು ಧರ್ಮಬುದ್ಧಿ ಇದೆ ಎಂದು ಅವರಿಗನ್ನಿಸುತ್ತಿತ್ತೋ ಅವರನ್ನು ಮಾತ್ರ ತಮ್ಮೊಡನೆ ದಕ್ಷಿಣೇಶ್ವರಕ್ಕೆ ಕರೆದುಕೊಂಡು ಹೋಗುತ್ತಿದ್ದರು.

ಸ್ವಾಮೀಜಿಯವರು ಈ ರೀತಿ ಅನೇಕ ಬಂಧು ಬಾಂಧವರನ್ನು ಶ್ರೀರಾಮಕೃಷ್ಣ ರೆಡೆಗೆ ಕರೆದುಕೊಂಡು ಹೋಗಿದ್ದರು. ಆದರೆ ಶ್ರೀರಾಮಕೃಷ್ಣರು ದಿವ್ಯದೃಷ್ಟಿಯಿಂದ ಅವರ ಅಂತರ್ಯವನ್ನು ನೋಡಿದಾಗ ಅವರ ಸ್ವಭಾವವೇ ಬೇರೆ ರೀತಿ ಕಾಣುತ್ತಿತ್ತು. ಈ ವಿಷಯವನ್ನು ನಾವು ಶ್ರೀರಾಮಕೃಷ್ಣರು ಮತ್ತು ಸ್ವಾಮೀಜಿ ಇವರೀರ್ವರ ಬಾಯಿಂದಲೂ ಕೇಳಿರುವೆವು. ಸ್ವಾಮೀಜಿಯವರು ಹೇಳುತ್ತಾರೆ: "ಶ್ರೀರಾಮಕೃಷ್ಣರು ನನ್ನನ್ನು ಸ್ವೀಕರಿಸಿ ಉಪದೇಶಗಳನ್ನಿತ್ತು ಕೃಪೆ ತೋರಿದರು. ಇದೇ ರೀತಿ ನಾನು ಅವ ರೆಡೆಗೆ ಕರೆದುಕೊಂಡು ಹೋಗುತ್ತಿದ್ದವರ ಮೇಲೆಯೂ ಕೃಪೆತೋರಬೇಕೆಂದು ನಾನು ಅವರನ್ನು ಪೀಡಿಸುತ್ತಿದ್ದೆ, ಬಾಲಕ ಸ್ವಭಾವದವನಾದ ನಾನು ಅವರೊಡನೆ ಹಠ ಹಿಡಿದು ವಾದ ಮಾಡುತ್ತಿದ್ದೆ. ಹೇಳುತ್ತಿದ್ದೆ : 'ಏಕೆ ಮಹಾಶಯರೆ, ಈಶ್ವರನು ಪಕ್ಷಪಾತಿಯಲ್ಲ. ಕೆಲವರ ಮೇಲೆ ಕೃಪೆ ತೋರಿಸುವುದು, ಕೆಲವರ ಮೇಲೆ ಕೃಪೆ ತೋರಿಸದೆ ಇರುವುದು

ಹೇಗೆ ಸಾಧ್ಯ ? ಅವರನ್ನು ನೀವು ನನ್ನಂತೆ ಏಕೆ ಸ್ವೀಕರಿಸಬಾರದು ? ಇಚ್ಛೆ ಪಟ್ಟರೆ ಮತ್ತು ಪ್ರಯತ್ನಪಟ್ಟರೆ ಪ್ರತಿಯೊಬ್ಬನೂ ವಿದ್ಯಾವಂತನೂ, ಪಂಡಿತನೂ ಆಗಬಹುದು, ಧಾರ್ಮಿಕನೂ ಆಗಬಹುದು ಮತ್ತು ಭಗವಂತನನ್ನು ಪಡೆಯಬಹುದು. ಇದು ಖಂಡಿತ.' ಇದಕ್ಕೆ ಶ್ರೀರಾಮಕೃಷ್ಣರು ಹೇಳುತ್ತಿದ್ದರು: 'ಏನು ಮಾಡಲಪ್ಪ, ನನಗೆ ತಾಯಿ ತೋರಿಸಿ ಕೊಡುತ್ತಾಳೆ, ಅವರ ಒಳಗಡೆ ಭಯಂಕರ ಪಶುಭಾವ ಇದೆ, ಅವರಿಗೆ ಈ ಜನ್ಮದಲ್ಲಿ ಧರ್ಮಸಿದ್ಧಿ ಸದು ಎಂದು. ನಾನೇನು ಮಾಡಲಿ ? ಅದೇನು ನೀನು ಹೇಳುವುದು ? ವ್ಯಕ್ತಿ ಇಚ್ಛೆ ಪಟ್ಟರೆ ಮತ್ತು ಪ್ರಯತ್ನ ಪಟ್ಟರೆ ಇದೇ ಜನ್ಮದಲ್ಲಿ ಅವನಿಚ್ಛಿಸಿದಂತೆ ಆಗಲು ಸಾಧ್ಯವೇ ?' ಆಗ ಅವರ ಮಾತನ್ನು ಕೇಳುವವರಾರು ? ನಾನು ಹೇಳುತ್ತಿದ್ದೆ : 'ಅದು ಹೇಗೆ ಮಹಾಶಯರೆ ? ಇಚ್ಛಿಸಿದರೆ ಮತ್ತು ಪ್ರಯತ್ನಿಸಿದರೆ ತಾವು ಇಚ್ಛಿಸಿದಂತಾಗುವುದಿಲ್ಲವೆ ? ಆಗಿಯೇ ಆಗುತ್ತದೆ. ಆಗಲೇ ಬೇಕು. ನನಗೆ ನಿಮ್ಮ ಮಾತಿನಲ್ಲಿ ವಿಶ್ವಾಸವಿಲ್ಲ'. ಶ್ರೀರಾಮಕೃಷ್ಣರು ಮತ್ತೆ ಅದನ್ನೇ ಹೇಳುತ್ತಿದ್ದರು: 'ನೀನು ನಂಬು ಬಿಡು, ನನಗೆ ತಾಯಿ ಆ ರೀತಿ ತೋರಿಸಿಕೊಟ್ಟಿದ್ದಾಳೆ.' ನಾನು ಅವರ ಮಾತನ್ನು ಸ್ವೀಕರಿಸುತ್ತಲೇ ಇರಲಿಲ್ಲ. ಅನಂತರ ಅನೇಕ ದಿನಗಳ ನಂತರ ತುಂಬ ಅನುಭವಗಳಾದ ಮೇಲೆ ಶ್ರೀರಾಮಕೃಷ್ಣರು ಹೇಳುತ್ತಿದ್ದುದೇ ಸತ್ಯ, ನನ್ನ ಗ್ರಹಿಕೆ ಸುಳ್ಳು ಎಂದು ತಿಳಿದು ಬಂತು."

20. ಹೀಗೆ ಚರ್ಚೆ ಮಾಡಿ ಮಾಡಿ ಕೊನೆಗೆ ತಮಗೆ ಶ್ರೀರಾಮಕೃಷ್ಣರ ಎಲ್ಲಾ ಮಾತುಗಳಲ್ಲಿಯೂ ವಿಶ್ವಾಸವುಂಟಾಯಿತು ಎಂದು ಸ್ವಾಮೀಜಿ ಹೇಳುತ್ತಿದ್ದರು. ಸ್ವಾಮೀಜಿಯವರು ಶ್ರೀರಾಮಕೃಷ್ಣರ ಪ್ರತಿಯೊಂದು ಮಾತನ್ನೂ ಪರೀಕ್ಷಿಸಿಯೇ ಸ್ವೀಕರಿಸುತ್ತಿದ್ದರು. ಇದಕ್ಕೆ ಸಂಬಂಧಿಸಿದ ಒಂದು ಘಟನೆಯನ್ನು ಇಲ್ಲಿ ಉದಾಹರಿಸಬಹುದು. ೧೮೮೪ರ ರಥಯಾತ್ರೆಯ ದಿನ ಶ್ರೀರಾಮಕೃಷ್ಣರು ಸ್ವಾಮೀಜಿಯವರೊಡನೆ ಪಂಡಿತ ಶಶಧರ ತರ್ಕ ಚೂಡಾಮಣಿಯನ್ನು ನೋಡಲು ಹೋದರು. ಜಗನ್ಮಾತೆಯಿಂದ ಯಾರು ಆದೇಶವನ್ನು ಪಡೆದಿರುತ್ತಾರೋ ಅವರೇ ಯಥಾರ್ಥ ಧರ್ಮ ಪ್ರಚಾರಕ್ಕೆ ಸಮರ್ಥರು, ಉಳಿದವರು ಪ್ರಚಾರಕರಂತೆ ಸೋಗು ಹಾಕಿಕೊಳ್ಳುತ್ತಾರೆ ಅಷ್ಟೆ, ಅವರ ಮಾತಿಗೆ ಬೆಲೆಯಿರುವುದಿಲ್ಲ. ಶ್ರೀರಾಮಕೃಷ್ಣರು ಶಶಧರನಿಗೆ ಈ ವಿಷಯವನ್ನು ಹೇಳುತ್ತಾ ಒಂದು ಲೋಟ ನೀರು ಬೇಕೆಂದು ಕೇಳಿದರು. ಶ್ರೀರಾಮಕೃಷ್ಣರಿಗೆ ನಿಜವಾಗಿಯೂ ಬಾಯಾರಿಕೆಯಾಗಿತ್ತೇ ಅಥವಾ ಬೇರೆ ಉದ್ದೇಶದಿಂದ ನೀರನ್ನು ಕೇಳಿದರೇ ಎಂಬುದು ನಮಗೆ ತಿಳಿಯದು. ಏಕೆಂದರೆ ಸಾಧು ಸಂನ್ಯಾಸಿಗಳು ಗೃಹಸ್ಥರ ಮನೆಗೆ ಹೋದರೆ ಅಲ್ಲಿ ಏನನ್ನಾದರೂ ಸ್ವೀಕರಿಸದೆ ಹಿಂದಿರುಗಿದರೆ ಗೃಹಸ್ಥರಿಗೆ ಅಮಂಗಳ ಉಂಟಾಗುವುದೆಂದು ಶ್ರೀರಾಮಕೃಷ್ಣರು ಹೇಳುತ್ತಿದ್ದುದನ್ನು ನಾವು ಕೇಳಿರುವೆವು. ಆದ್ದರಿಂದ ಅವರು ಯಾರ ಮನೆಗೆ ಹೋದರೂ ಆ ಮನೆಯವರು ಏನೂ ಕೊಡದಿದ್ದರೂ ಅಥವಾ ಕೊಡುವುದಕ್ಕೆ ಮರೆತರೂ ತಾವೇ ಸ್ವತಃ ಕೇಳಿ ಏನನ್ನಾದರೂ ಸ್ವೀಕರಿಸುತ್ತಿದ್ದರು.

ಅದು ಏನೇ ಆಗಲಿ ಈಗ ಇಲ್ಲಿ ಶ್ರೀರಾಮಕೃಷ್ಣರು ನೀರನ್ನು ಕೇಳಿದ ಕೂಡಲೇ ತಿಲಕ, ಮಾಲೆ, ಮುಂತಾದ ಧಾರ್ಮಿಕ ಚಿಹ್ನೆಗಳನ್ನು ಧರಿಸಿದ್ದ ವ್ಯಕ್ತಿಯೊಬ್ಬನು ಸಂಭ್ರಮದಿಂದ ಒಂದು ಲೋಟ ನೀರನ್ನು ಶ್ರೀರಾಮಕೃಷ್ಣರಿಗೆ ತಂದುಕೊಟ್ಟನು. ಆದರೆ ಶ್ರೀರಾಮಕೃಷ್ಣರು ಅದನ್ನು ಕುಡಿಯಲು ಎತ್ತಿದಾಗ ಅವರಿಗೆ ಅದನ್ನು ಕುಡಿಯಲಾಗ ಲಿಲ್ಲ. ಹತ್ತಿರದಲ್ಲಿದ್ದ ಇನ್ನೊಬ್ಬ ವ್ಯಕ್ತಿಯು ಅದನ್ನು ಗಮನಿಸಿ ಆ ನೀರನ್ನು ಚೆಲ್ಲಿ ಬೇರೆ ನೀರನ್ನು ತಂದುಕೊಟ್ಟನು. ಶ್ರೀರಾಮಕೃಷ್ಣರು ಆ ನೀರನ್ನು ಸ್ವಲ್ಪ ಕುಡಿದು ಶಶಧರ ನಿಂದ ಬೀಳ್ಕೊಂಡು ಮನೆಯಿಂದ ಹೊರಟರು. ಉಳಿದವರೆಲ್ಲ ಭಾವಿಸಿದರು ಮೊದಲು ತಂದ ನೀರಿನಲ್ಲಿ ಏನೋ ಬಿದ್ದಿರಬೇಕು. ಆದ್ದರಿಂದಲೇ ಅವರಿಗೆ ಕುಡಿಯಲಾಗಲಿಲ್ಲ ಎಂದು.

ಸ್ವಾಮೀಜಿ ಅವರು ಶ್ರೀರಾಮಕೃಷ್ಣರ ಪಕ್ಕದಲ್ಲೇ ಕುಳಿತಿದ್ದರು. ಅವರು ಆ ನೀರಿ ನಲ್ಲಿ ಏನೂ ಹುಳಹುಪ್ಪಟೆ ಬಿದ್ದಿರದೆ ಇರುವುದನ್ನು ಕಂಡಿದ್ದರು. ಆದರೂ ಕೂಡ ಶ್ರೀರಾಮಕೃಷ್ಣರು ಅದನ್ನು ಕುಡಿಯಲು ಒಪ್ಪಿರಲಿಲ್ಲ. ಇದಕ್ಕೆ ಕಾರಣವೇನಿರಬಹುದು ಎಂದು ಸ್ವಾಮೀಜಿಯವರು ಚಿಂತಿಸಿದರು. ಸ್ಪರ್ಶ ದೋಷವೇ ಇದಕ್ಕೆ ಕಾರಣವಿರಬಹು ದೆಂದು ಅವರು ನಿರ್ಧರಿಸಿದರು. ಏಕೆಂದರೆ ಯಾರಲ್ಲಿ ವಿಷಯಬುದ್ಧಿ ಅತ್ಯಂತ ಪ್ರಬಲ ವಾಗಿರುತ್ತದೋ, ಯಾರು ಮೋಸ, ವಂಚನೆ ಮಾಡುತ್ತಾರೋ, ಯಾರು ಇತರರಿಗೆ ಅನಿಷ್ಟವನ್ನು ಉಂಟುಮಾಡಿ ಹಣಸಂಪಾದನೆ ಮಾಡುತ್ತಾರೋ, ಯಾರು ಕಾಮಕಾಂಚ ನಾಸಕ್ತರಾಗಿದ್ದು ಧರ್ಮದ ಸೋಗು ಹಾಕಿಕೊಳ್ಳುತ್ತಾರೋ ಅವರು ಏನಾದರೂ ಖಾದ್ಯ ವಸ್ತುವನ್ನು ತಂದರೆ ಅದನ್ನು ಶ್ರೀರಾಮಕೃಷ್ಣರಿಗೆ ತಿನ್ನಲಾಗುತ್ತಿರಲಿಲ್ಲ. ಇದನ್ನು ಶ್ರೀರಾಮಕೃಷ್ಣರೇ ಹೇಳುವುದನ್ನು ಮೊದಲು ಸ್ವಾಮೀಜಿಯವರು ಕೇಳಿದ್ದರು.

ಈಗ ಸ್ವಾಮೀಜಿಯವರು ಈ ವಿಷಯವನ್ನು ಪರೀಕ್ಷಿಸುವ ನಿರ್ಧಾರವನ್ನು ಮಾಡಿದರು. ಅಂದು ಶ್ರೀರಾಮಕೃಷ್ಣರು ಅವರನ್ನು ತಮ್ಮೊಡನೆ ಬರಬೇಕೆಂದು ಕೇಳಿ ಕೊಂಡರೂ ಒಪ್ಪದೆ ತಮಗೆ ಬೇರೇನೋ ಕೆಲಸವಿದೆ ಎಂದು ಹೇಳಿ ಶ್ರೀರಾಮಕೃಷ್ಣ ರನ್ನು ಗಾಡಿಗೆ ಹತ್ತಿಸಿದರು. ಶ್ರೀರಾಮಕೃಷ್ಣರು ಹೋದ ಮೇಲೆ ಸ್ವಾಮೀಜಿಯವರು ಆ ಧಾರ್ಮಿಕ ಚಿಹ್ನೆಯನ್ನು ಧರಿಸಿದ ವ್ಯಕ್ತಿಯ ಪರಿಚಯವನ್ನು ಪಡೆಯಲು ಹೋದರು. ಅವನ ತಮ್ಮನ ಪರಿಚಯ ಮೊದಲೇ ಇತ್ತು. ಅವನನ್ನು ಏಕಾಂತದಲ್ಲಿ ಕರೆದು ಅಣ್ಣನ ಚಾರಿತ್ರ್ಯದ ಬಗ್ಗೆ ಪ್ರಶ್ನಿಸಿದರು. ಅವನು ಮೊದಲು ಸ್ವಲ್ಪ ಹಿಂಜರಿದು ಕೊನೆಯಲ್ಲಿ ಹೇಳಿದನು 'ನನ್ನ ಅಣ್ಣನ ದೋಷಗಳ ಬಗ್ಗೆ ಹೇಗೆ ಹೇಳಲಿ ?' ಎಂದು. ಸ್ವಾಮೀಜಿ ಯವರು ಹೇಳುತ್ತಾರೆ, "ಅದರಿಂದಲೇ ನನಗೆ ತಿಳಿದು ಹೋಯಿತು. ಅನಂತರ ಆ ಮನೆಯ ಇನ್ನೊಬ್ಬ ಪರಿಚಿತ ವ್ಯಕ್ತಿಯನ್ನು ಪ್ರಶ್ನಿಸಿದೆ. ಆಗ ನನಗೆ ಈ ವಿಷಯದಲ್ಲಿ ನಿಃಸಂಶಯ ಉಂಟಾಯಿತು. ಶ್ರೀರಾಮಕೃಷ್ಣರು ಜನರ ಅಂತರಂಗವನ್ನು ಹೇಗೆ ತಿಳಿದು ಕೊಳ್ಳುತ್ತಾರೆ ಎಂಬುದನ್ನು ಭಾವಿಸಿ ನನಗೆ ಅತ್ಯಾಶ್ಚರ್ಯವಾಯಿತು."

21. ಸಾಧಾರಣ ಪ್ರಜ್ಞಾಸ್ತರದಲ್ಲಿರುವಾಗ ಶ್ರೀರಾಮಕೃಷ್ಣರು ಎಲ್ಲ ವಸ್ತುಗಳ ಆಂತರಿಕ ಗುಣಾವಗುಣಗಳನ್ನು ಅರ್ಥಮಾಡಿಕೊಳ್ಳುತ್ತಿದ್ದರು. ಈ ವಿಷಯವನ್ನು

ಹೇಳುವಾಗ ಅವರ ಮಾನಸಿಕ ಸ್ಥಿತಿ ಎಂತಹುದು ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು. ಅವರು ಯಾವುದನ್ನು ಪ್ರಮಾಣವಾಗಿಟ್ಟುಕೊಂಡು ಇತರ ವಸ್ತುಗಳನ್ನು ಮತ್ತು ವಿಷಯಗಳನ್ನು ಅಳೆಯುತ್ತಿದ್ದರು ಎಂಬುದನ್ನೂ ನಾವು ತಿಳಿದಿರಬೇಕಾಗುತ್ತದೆ. 'ಲೀಲಾಪ್ರಸಂಗ'ದ ಬೇರೆ ಬೇರೆ ಭಾಗಗಳಲ್ಲಿ ನಾವು ಈ ಸಂಗತಿಯನ್ನು ಸೂಕ್ಷ್ಮವಾಗಿ ತಿಳಿಸಿರುವೆವು. ಆದ್ದರಿಂದ ಇಲ್ಲಿ ಅದನ್ನು ಸಂಕ್ಷೇಪವಾಗಿ ವಿವರಿಸಿದರೆ ಸಾಕು. ನಾವು ಮೊದಲೇ ನೋಡಿರುವಂತೆ ಶ್ರೀರಾಮಕೃಷ್ಣರ ಮನಸ್ಸು ಯಾವುದೇ ಪಾರ್ಥಿವ ವಸ್ತುಗಳಲ್ಲಿಯೂ ಆಸಕ್ತವಾಗಿರಲಿಲ್ಲ. ಇದರಿಂದಾಗಿ ಅವರು ಯಾವುದನ್ನೇ ಆಗಲಿ ಗ್ರಹಿಸಬೇಕೆಂದು ಇಚ್ಛಿಸಿದರೆ ಆ ಕುರಿತು ಮನಸ್ಸು ಕೂಡಲೇ ಯುಕ್ತವಾಗುತ್ತಿತ್ತು. ಹಾಗೆಯೇ ಯಾವುದನ್ನೇ ಆಗಲಿ ತ್ಯಜಿಸಬೇಕೆಂದು ನಿರ್ಧರಿಸಿದ ಕೂಡಲೇ ಅದು ಮನಸ್ಸಿನಿಂದ ಕಳಚಿ ಬಿಡುತ್ತಿತ್ತು. ಒಮ್ಮೆ ಬಿಟ್ಟಿದ್ದನ್ನು ಅವರು ಜೀವನ ಪರ್ಯಂತವೂ ಅದರ ಕಡೆ ತಿರುಗಿ ನೋಡುತ್ತಿರಲಿಲ್ಲ. ಮತ್ತೆ ಶ್ರೀರಾಮಕೃಷ್ಣರಲ್ಲಿ ಅಪೂರ್ವ ನಿಷ್ಠೆ, ಅದ್ಭುತ ವಿಚಾರಶೀಲತೆ ತೀವ್ರ ಏಕಾಗ್ರತೆ ಇವುಗಳಿದ್ದುವು. ಇದರಿಂದಾಗಿ ಯಾವುದನ್ನು ಇಚ್ಛಿಸಬೇಕು, ಎಷ್ಟು ಕಾಲ ಇಚ್ಛಿಸಬೇಕು ಮತ್ತು ಎಲ್ಲಿ ಇಚ್ಛಿಸಬೇಕು ಎಂಬುದು ಅವರ ಮನಸ್ಸಿನಲ್ಲಿ ಸ್ಥಿರವಾಗಿತ್ತು. ಒಂದು ಕ್ಷಣವೂ ಇದಕ್ಕೆ ವಿರುದ್ಧವಾಗಿ ಅವರಿಗೆ ಚಿಂತಿಸಲೂ ಕಲ್ಪಿಸಲೂ ಆಗುತ್ತಿರಲಿಲ್ಲ. ಯಾವುದೇ ವಿಷಯವನ್ನು ತ್ಯಜಿಸುವಾಗ ಅಥವಾ ಗ್ರಹಿಸುವಾಗ ಅವರ ಮನಸ್ಸಿನ ಒಂದು ಭಾಗ ಕೇಳುತ್ತಿತ್ತು, 'ನೀನು ಏಕೆ ಆ ರೀತಿ ಮಾಡುತ್ತಿರುವೆ ಹೇಳು ?' ಈ ಪ್ರಶ್ನೆಗೆ ಯಥಾರ್ಥ ಯುಕ್ತಿಯುಕ್ತವಾದ ಉತ್ತರ ದೊರೆತ ಮೇಲೆಯೇ ಅದು 'ಒಳ್ಳೆಯದು ಹಾಗೆಯೇ ಮಾಡು' ಎಂದು ಹೇಳುತ್ತಿತ್ತು. ಹೀಗೆ ಒಂದು ನಿರ್ಧಾರಕ್ಕೆ ಬಂದ ಮೇಲೆ ಆ ಮನಸ್ಸಿನ ಇನ್ನೊಂದು ಭಾಗ ಹೇಳುತ್ತಿತ್ತು: 'ಹಾಗಾದರೆ ಅದನ್ನು ದೃಢವಾಗಿ ಹಿಡಿದುಕೊ. ನೀನೆಂದೂ ಅದಕ್ಕೆ ವಿರುದ್ಧವಾಗಿ ವರ್ತಿಸಕೂಡದು. ಮಲಗಿರುವಾಗ, ನಿದ್ರಿಸುವಾಗ, ಉಣ್ಣುವಾಗ, ವಿಶ್ರಮಿಸಿರುವಾಗ ಯಾವಾಗಲೂ ಅದನ್ನೇ ಗಟ್ಟಿಯಾಗಿ ಹಿಡಿದುಕೊಂಡಿರಬೇಕು.' ಅನಂತರ ಅವರ ಇಡೀ ಮನಸ್ಸು ಆ ವಿಷಯವನ್ನು ಸಂಪೂರ್ಣ ಗ್ರಹಿಸಿ ಅದಕ್ಕನುಗುಣವಾಗಿಯೇ ವರ್ತಿಸುತ್ತಿತ್ತು. ಅವರ ಎಲ್ಲ ನಡೆನುಡಿಗಳು ಅದಕ್ಕನುಸಾರವಾಗಿಯೇ ಇರುತ್ತಿದ್ದುವು. ಮರೆತೂ ಕೂಡ ಅವರು ಅದಕ್ಕೆ ವಿರುದ್ಧವಾಗಿ ವರ್ತಿಸುತ್ತಿರಲಿಲ್ಲ. ಹಾಗೆ ಅವರು ವರ್ತಿಸಲು ಹೋದಾಗ ಒಳಗಿನಿಂದ ಯಾರೋ ಅವರ ಇಂದ್ರಿಯಗಳನ್ನೆಲ್ಲ ಹಿಡಿದುಕೊಂಡು ಅವರನ್ನು ಹಾಗೆ ಮಾಡಲು ಬಿಡದಿರುವಂತೆ ಅವರಿಗನ್ನಿಸುತ್ತಿತ್ತು. ಅವರು ತಮ್ಮ ಇಡೀ ಜೀವನದಲ್ಲಿ ವಸ್ತುಗಳು ಮತ್ತು ವ್ಯಕ್ತಿಗಳ ವಿಷಯದಲ್ಲಿ ಹೇಗೆ ವರ್ತಿಸಿದರು ಎಂಬುದನ್ನು ಗಮನಿಸಿದಾಗ ನಮಗೆ ಈ ಮೇಲಿನ ಮಾತು ಸ್ಪಷ್ಟವಾಗುವುದು.

22. ನೋಡಿ–ಬಾಲಕ ಗದಾಧರನು ಶಾಲೆಗೆ ಹೋಗಲು ಪ್ರಾರಂಭಿಸುವಷ್ಟರಲ್ಲಿಯೇ ಈ ಹೊಟ್ಟೆ ಹೊರೆಯುವ ವಿದ್ಯೆಯಿಂದ ನನಗೆ ಪ್ರಯೋಜನವಿಲ್ಲ. ಈ ವಿದ್ಯೆಯನ್ನು ನಾನು ಕಲಿಯುವುದಿಲ್ಲ ಎಂದು ಹೇಳಿಬಿಟ್ಟನು. ಶ್ರೀರಾಮಕೃಷ್ಣರ ಅಣ್ಣ ರಾಮ

ಕುಮಾರನು ತಮ್ಮನ ಹಿತ ಚಿಂತನೆಯಿಂದ ಅವರನ್ನು ಕಲಕತ್ತೆಗೆ ಕರೆದುಕೊಂಡು ಹೋಗಿ ಅಲ್ಲಿ ತಾನು ನಡೆಸುತ್ತಿದ್ದ ಸಂಸ್ಕೃತ ಶಾಲೆಗೆ ಸೇರಿಸಲು ಪ್ರಯತ್ನಿಸಿದನು. ಆದರೆ ಶ್ರೀರಾಮಕೃಷ್ಣರು ತಮ್ಮ ನಿರ್ಧಾರವನ್ನು ಬದಲಾಯಿಸಲೇ ಇಲ್ಲ. ಪಂಡಿತನಾದ ರಾಮ ಕುಮಾರನಿಗೆ ಸಂಸ್ಕೃತ ಪಾಠಶಾಲೆಯಿಂದ ಸಂಸಾರ ನಿರ್ವಹಣೆಗೆ ಸಾಕಾಗುವಷ್ಟು ಹಣ ದೊರೆಯುತ್ತಿರಲಿಲ್ಲ. ಆದ್ದರಿಂದಲೇ ಬೇರೆ ಉಪಾಯವಿಲ್ಲದೆ ರಾಸಮಣಿಯ ದೇವಾಲಯ ದಲ್ಲಿ ಪೌರೋಹಿತ್ಯವನ್ನು ಸ್ವೀಕರಿಸಿದ್ದನು. ಇದು ಶ್ರೀರಾಮಕೃಷ್ಣರಿಗೆ ತಿಳಿದಿತ್ತು. ಯಾರು ಯರೋ ಶ್ರೀಮಂತರ ಮನ ಮೆಚ್ಚಿಸಿ ಹಣ ಸಂಪಾದನೆ ಮಾಡುವುದಕ್ಕಿಂತ ಅದೇ ಒಳ್ಳೆಯದೆಂದು ಅವರು ಅಣ್ಣನ ಕೃತಿಯನ್ನು ಅನುಮೋದಿಸಿದ್ದರು.

23. ಇನ್ನೊಂದು ಘಟನೆ–ಸಾಧನೆಯ ಸಮಯದಲ್ಲಿ ಶ್ರೀರಾಮಕೃಷ್ಣರು ಧ್ಯಾನಕ್ಕೆ ಕುಳಿತ ಕೂಡಲೇ ದೇಹದ ಪ್ರತಿಯೊಂದು ಕೀಲುಗಳೂ 'ಖಟ್ ಖಟ್' ಎಂದು ಶಬ್ದದೊಡನೆ, ಬಂಧಿಸಲ್ಪಟ್ಟಂತೆ ಅವರಿಗೆ ಅನುಭವವಾಗುತ್ತಿತ್ತು. ಅವರು ಯಾವ ರೀತಿ ಆಸನದಲ್ಲಿ ಕುಳಿತುಕೊಳ್ಳುತ್ತಿದ್ದರೋ ಅದೇ ರೀತಿ ಅವರು ಬಹಳ ಹೊತ್ತು ಕುಳಿತಿರ ಬೇಕೆಂದು ಒಳಗಿನಿಂದ ಯಾರೋ ಬೀಗ ಮುದ್ರೆಯನ್ನಿಟ್ಟಂತೆ ಆಗುತ್ತಿತ್ತು. ಬೀಗ ತೆಗೆಯು ದವರೆಗೂ ಕೈ ಕಾಲು, ಕುತ್ತಿಗೆ ಇವು ಯಾವುದನ್ನೂ ಅವರಿಗೆ ಅಲುಗಾಡಿಸಲು ಆಗುತ್ತಿರ ಲಿಲ್ಲ. ಅಷ್ಟೇ ಅಲ್ಲದೆ ಕೆಲವೊಮ್ಮೆ ಶೂಲವನ್ನು ಹಿಡಿದ ವ್ಯಕ್ತಿಯೊಬ್ಬನು ಹತ್ತಿರ ಕುಳಿತು 'ನೀನು ಭಗವಂತನನ್ನು ಬಿಟ್ಟು ಬೇರೆ ಏನನ್ನಾದರೂ ಚಿಂತಿಸಿದರೆ ಈ ಶೂಲದಿಂದ ಇರಿದು ಬಿಡುತ್ತೇನೆ' ಎಂದು ಗದರಿಸಿದಂತೆ ಅನುಭವವಾಗುತ್ತಿತ್ತು.

24. ಇನ್ನೊಂದು ಘಟನೆಯನ್ನು ನೋಡಿ–ಪೂಜೆಯ ವೇಳೆಯಲ್ಲಿ ಮನಸ್ಸಿಗೆ ಅವರು ಜಗನ್ಮಾತೆಯಿಂದ ತಾವು ಅಭಿನ್ನ ಎಂದು ಹೇಳಿದಾಕ್ಷಣ ಅದು ಹಾಗೆಯೇ ಚಿಂತಿ ಸುತ್ತಿತ್ತು. ಅವರು ಜಗನ್ಮಾತೆಯ ಪಾದಪದ್ಮಕ್ಕೆ ಪುಷ್ಪಾಂಜಲಿಯನ್ನು ಅರ್ಪಿಸಲು ಹೋದರೆ ಕೈ ತಾನಾಗಿಯೇ ಹಿಂತಿರುಗಿ ಅವರ ಮಸ್ತಕದ ಕಡೆಗೆ ಸೆಳೆಯಲ್ಪಡುತ್ತಿತ್ತು. ಹಾಗೆಯೇ ಸಂನ್ಯಾಸದೀಕ್ಷೆಯನ್ನು ಪಡೆದ ಕೂಡಲೇ ಅವರ ಮನಸ್ಸು ಎಲ್ಲಾ ಭೂತ ಗಳಲ್ಲೂ ಒಂದೇ ಅದ್ವೈತ ಸತ್ಯವನ್ನು ಕಾಣತೊಡಗಿತು. ಆಗ ಶ್ರೀರಾಮಕೃಷ್ಣರು ಪಿತೃ ತರ್ಪಣಕೊಡಲು ಹೋದರೆ ಅವರ ಕೈ ಮರಗಟ್ಟುತ್ತಿತ್ತು. ಕೈ ಜೋಡಿಸಿ ನೀರನ್ನು ಎತ್ತಲಾಗುತ್ತಲೇ ಇರಲಿಲ್ಲ. ಆಗ ಅವರಿಗೆ ತಿಳಿಯಿತು. ಸಂನ್ಯಾಸ ಪಡೆದ ಮೇಲೆ ಯಾವ ಕರ್ಮವೂ ಉಳಿಯುವುದಿಲ್ಲ ಎಂದು. ಹೀಗೆ ಎಷ್ಟೋ ಉದಾಹರಣೆಗಳನ್ನು ಕೊಡ ಬಹುದು. ಇದೆಲ್ಲದರಿಂದ ನಮಗೆ ಸ್ಪಷ್ಟವಾಗುವುದೇನೆಂದರೆ ಅನಾಸಕ್ತಿ, ವಿಚಾರಶೀಲತೆ, ಏಕಾಗ್ರತೆ ಮತ್ತು ನಿಷ್ಠೆ ಇವು ಅವರ ಮನಸ್ಸಿಗೆ ಅತ್ಯಂತ ಸಹಜವೂ ಸ್ವಾಭಾವಿಕವೂ ಆಗಿದ್ದುವು. ಇನ್ನೊಂದು ವಿಷಯ ತಿಳಿಯುವುದೇನೆಂದರೆ ಶ್ರೀರಾಮಕೃಷ್ಣರ ಈ ರೀತಿಯ ದರ್ಶನಗಳು ಶಾಸ್ತ್ರದಲ್ಲಿ ಹೇಳಿರುವುದಕ್ಕೆ ಅನುರೂಪವಾಗಿರುವುದರಿಂದ ಶಾಸ್ತ್ರದ ಮಾತು ಸತ್ಯ. ಸ್ವಾಮಿ ವಿವೇಕಾನಂದರು ಹೇಳುತ್ತಿದ್ದರು. "ಈ ಬಾರಿ ಶ್ರೀರಾಮಕೃಷ್ಣರು ನಿರಕ್ಷರ ರಾಗಿ ಬಂದಿರುವುದಕ್ಕೆ ಇದೇ ಕಾರಣ. ವೇದ, ವೇದಾಂತ ಮತ್ತು ಇತರ ಧರ್ಮಗ್ರಂಥ

ಗಳಲ್ಲಿ ಹೇಳಿರುವ ಆಧ್ಯಾತ್ಮಿಕ ಸ್ಥಿತಿಗಳೆಲ್ಲವೂ ಸತ್ಯ ಮತ್ತು ವಾಸ್ತವಿಕ, ಆ ಎಲ್ಲ ಮಾರ್ಗ ಗಳ ಮೂಲಕ ನಡೆದರೆ ಮನುಷ್ಯನು ಅದೇ ರೀತಿಯ ಸ್ಥಿತಿಗಳನ್ನು ಮುಟ್ಟಬಹುದು– ಇದನ್ನು ಪ್ರಮಾಣೀಕರಿಸುವುದೇ ಅವರ ಉದ್ದೇಶವಾಗಿತ್ತು."

25. ಶ್ರೀರಾಮಕೃಷ್ಣರ ಮನಸ್ಸಿನ ಈ ಸ್ವಭಾವವನ್ನು ಕುರಿತು ವಿಚಾರ ಮಾಡುತ್ತಾ ಹೋದರೆ ನಮಗೆ ಈ ಕೆಳಗಿನ ಮಾತು ಸ್ಪಷ್ಟವಾಗುವುದು : ನಿರ್ವಿಕಲ್ಪ ಸಮಾಧಿಯನ್ನು ಪಡೆದು ಭಗವಂತನೊಡನೆ ಅದ್ವೈತಾನುಭವವನ್ನು ಪಡೆಯುವುದೇ ಮಾನವ ಜೀವನದ ಚರಮ ಗುರಿ. ಆ ಸ್ಥಿತಿಯನ್ನು ಮುಟ್ಟಿದಾಗ ಶ್ರೀರಾಮಕೃಷ್ಣರು ಹೇಳುವಂತೆ, "ಎಲ್ಲಾ ನರಿಗಳೂ ಒಂದೇ ರೀತಿ ಕೂಗುತ್ತವೆ." ಇದರ ಅರ್ಥವೇನೆಂದರೆ ಎಲ್ಲಾ ನರಿಗಳು ಒಂದೇ ರೀತಿ ಕೂಗುವಂತೆ ನಿರ್ವಿಕಲ್ಪ ಸಮಾಧಿಯನ್ನು ಪಡೆದವರೆಲ್ಲರೂ ಭಗವತ್ಸಂಬಂಧವಾಗಿ ಒಂದೇ ರೀತಿ ಮಾತನಾಡುವರು. ಪ್ರೇಮಾವತಾರನಾದ ಶ್ರೀ ಚೈತನ್ಯನ ಬಗ್ಗೆ ಶ್ರೀರಾಮಕೃಷ್ಣರು ಹೀಗೆ ಹೇಳುತ್ತಿದ್ದರು, "ಆನೆಯ ದಂತ ಹೊರಗಿನ ಶತ್ರುಗಳನ್ನು ಕೊಲ್ಲುವುದಕ್ಕೆ ಇರುತ್ತದೆ ಮತ್ತು ಹೊರಗೆ ಕಾಣಿಸದೆ ಒಳಗಡೆ ಇರುವ ದಂತ ಆಹಾರವನ್ನು ಅಗಿಯುವುದಕ್ಕೆ ಇರುತ್ತದೆ. ಹಾಗೆಯೇ ಈ ಮಹಾಮಹಿಮನ ದ್ವೈತಭಾವವು ಹೊರಗಿನ ಮನೋಭಾವ ; ಅದ್ವೈತಭಾವ ಒಳಗಿನದು." ಆದ್ದರಿಂದ ಅದ್ವೈತ ಜ್ಞಾನದ ದೃಷ್ಟಿಯಿಂದಲೇ ಶ್ರೀರಾಮಕೃಷ್ಣರು ಎಲ್ಲವನ್ನೂ ನಿರ್ಣಯಿಸು ತ್ತಿದ್ದರು ಎಂದು ಹೇಳುವಂತಿಲ್ಲ. ಯಾವುದೇ ಭಾವನೆ, ಕರ್ಮ ಅಥವಾ ಧಾರ್ಮಿಕ ಚಟು ವಟಿಕೆಗಳು ಆ ಸ್ಥಿತಿಯನ್ನು ಮುಟ್ಟಲು ಎಷ್ಟರ ಮಟ್ಟಿಗೆ ಸಹಾಯಕವಾಗುತ್ತದೋ ಅಷ್ಟರ ಮಟ್ಟಿಗೆ ಅವು ಇತರ ಭಾವನೆ ಮುಂತಾದುವುಗಳಿಗಿಂತ ಉನ್ನತವೆಂದು ಪರಿಗಣಿ ಸುತ್ತಿದ್ದರು.

26. ಮತ್ತೆ ಶ್ರೀರಾಮಕೃಷ್ಣರ ಆಧ್ಯಾತ್ಮಿಕ ದರ್ಶನಗಳನ್ನು ಕುರಿತು ವಿಚಾರಿಸಿ ದಾಗ ಇನ್ನೊಂದು ವಿಷಯ ನಮ್ಮ ಗಮನಕ್ಕೆ ಬರುತ್ತದೆ. ಅವರ ದರ್ಶನಗಳಲ್ಲಿ ಕೆಲವು ಸ್ವಸಂವೇದ್ಯ, ಮತ್ತೆ ಕೆಲವು ಪರಸಂವೇದ್ಯ. ಅಂದರೆ ಕೆಲವು ದರ್ಶನಗಳು ಶ್ರೀರಾಮ ಕೃಷ್ಣರ ಮಾನಸಿಕ ಆಲೋಚನೆಗಳ ರೂಪಗಳು. ಅವು ಅವರ ನಿಷ್ಠೆ ಮತ್ತು ನಿರಂತರ ಸಾಧನೆಯ ಫಲವಾಗಿ ಘನೀಭೂತವಾದ ಆಲೋಚನೆಗಳು. ಅವು ಅವರಿಗೆ ಮಾತ್ರ ಪ್ರಕಾಶವಾಗುತ್ತಿದ್ದವು. ಇನ್ನು ಕೆಲವು ದರ್ಶನಗಳು ಅವರು ಉನ್ನತ ಸ್ತರಗಳಿಗೆ ಏರಿ ದಂತೆಲ್ಲ ಕಾಣಿಸಿಕೊಳ್ಳುತ್ತಿದ್ದವು. ಈ ದರ್ಶನಗಳ ವಸ್ತುಗಳು ವಾಸ್ತವಿಕ ಅಸ್ತಿತ್ವವುಳ್ಳ ವುಗಳು. ಅವು ಇತರರಿಗೆ ತಿಳಿಯದಾದರೂ ಅವು ಸತ್ಯ ಅಥವಾ ಮುಂದೆ ಸತ್ಯವಾಗುತ್ತ ವೆಂದು ಅವರಿಗೆ ತೋರುತ್ತಿತ್ತು. ಮತ್ತೆ ಇತರರು ಮುಂದೆ ಅವು ಸತ್ಯವಾಗುವುದನ್ನು ನೋಡುತ್ತಿದ್ದರು. ಮೊದಲನೆಯ ಶ್ರೇಣಿಯ ದರ್ಶನಗಳನ್ನು ಸತ್ಯವೆಂದು ತಿಳಿಯಬೇಕಾ ದರೆ ಅವರಂತೆಯೆ ಶ್ರದ್ಧಾ, ಭಕ್ತಿ, ನಿಷ್ಠೆ ಇತ್ಯಾದಿಗಳನ್ನು ಪಡೆದಿರಬೇಕು. ಅಥವಾ ಶ್ರೀರಾಮಕೃಷ್ಣರು ಯಾವ ಸ್ತರದಲ್ಲಿ ಆ ದರ್ಶನಗಳನ್ನು ಪಡೆದರೋ ಆ ಸ್ತರವನ್ನು ಏರಬೇಕು. ಎರಡನೇ ಶ್ರೇಣಿಯ ದರ್ಶನಗಳನ್ನು ಸತ್ಯವೆಂದು ತಿಳಿಯುವುದಕ್ಕೆ ಶ್ರದ್ಧೆಯೂ

ಬೇಡ, ಸಾಧನೆಯೂ ಬೇಡ. ಅವುಗಳ ಫಲವನ್ನು ನೋಡಿಯೇ ನಂಬಿಕೆಯುಂಟಾಗುವುದು.

27. ಶ್ರೀರಾಮಕೃಷ್ಣರ ಮಾನಸಿಕ ಸ್ಥಿತಿಯ ಬಗ್ಗೆ ನಮಗೆ ತಿಳಿದಿರುವಂತೆ ಅವರು ಸಾಧಾರಣ ಪ್ರಜ್ಞಾಸ್ತರದಲ್ಲಿರುವಾಗಲೂ ಅವರ ಮನಸ್ಸು ನಿಶ್ಚಿಂತೆಯಿಂದಿರುತ್ತಿರಲಿಲ್ಲ. ಯಾವುದೇ ವಸ್ತು ಅಥವಾ ವ್ಯಕ್ತಿಯನ್ನು ನೋಡಿದ ಕೂಡಲೇ ಅವುಗಳ ಸ್ವಭಾವ ಮತ್ತು ರೀತಿನೀತಿಗಳ ಬಗ್ಗೆ ಅವರ ಮನಸ್ಸು ಆಲೋಚಿಸುತ್ತಿತ್ತು ಮತ್ತು ಯಾವುದಾದರೂ ಒಂದು ನಿರ್ಧಾರಕ್ಕೆ ಬರದೆ ಸುಮ್ಮನಿರುತ್ತಿರಲಿಲ್ಲ. ಬಾಲ್ಯಕಾಲದಲ್ಲಿ ಅವರು ಪಂಡಿತರು ಶಾಸ್ತ್ರವನ್ನು ಓದುವುದು ಹಣ ಸಂಪಾದನೆಗಾಗಿಯೇ ಎಂದು ನಿರ್ಧರಿಸಿದರು. ಇದರಿಂದಾಗಿ ಅವರು ಹೊಟ್ಟೆ ಪಾಡಿನ ವಿದ್ಯೆ ತಮಗೆ ಬೇಡವೆಂದು ತಿರಸ್ಕರಿಸಿದ್ದರು. ಅವರು ಪ್ರಾಪ್ತವಯಸ್ಸಿಗೆ ಬಂದ ಮೇಲೆ ಅನೇಕ ಕಡೆಗಳಲ್ಲಿ ಅನೇಕ ಬಗೆಯ ಜನರ ಸಂಪರ್ಕವನ್ನು ಪಡೆದರು ಮತ್ತು ಅವರ ಬಗ್ಗೆ ಅನೇಕ ರೀತಿಯ ನಿರ್ಧಾರಕ್ಕೆ ಬಂದರು. ಈಗಿನ ನಮ್ಮ ಚರ್ಚೆಯ ವಿಷಯ ಅವರ ಈ ನಿರ್ಣಯಗಳೇ ಆಗಿವೆ.

28. ಶ್ರೀಚೈತನ್ಯನ ದೇಹತ್ಯಾಗದ ನಂತರ ಬಂಗಾಳದಲ್ಲಿ ಶಾಕ್ತ ಮತ್ತು ವೈಷ್ಣವರ ನಡುವೆ ಪರಸ್ಪರ ದ್ವೇಷಭಾವನೆ ವೃದ್ಧಿಯಾಯಿತು. ರಾಮಪ್ರಸಾದ ಮುಂತಾದ ಕೆಲವು ಶಕ್ತಿ ಸಾಧಕರು ತಮ್ಮ ಅನುಭವದ ಮೂಲಕ ಕೃಷ್ಣ ಮತ್ತು ಕಾಳಿ ಒಂದೇ ಎಂದು ಬೋಧಿಸಿದರು. ಆದರೂ ಸಾಧಾರಣ ಜನರು ಅವರ ಮಾತಿಗೆ ಬೆಲೆ ಕೊಡದೆ ಈ ವಿದ್ವೇಷ ಭಾವನೆಯನ್ನು ಉಳಿಸಿಕೊಂಡೇ ಇದ್ದರು. ಎರಡೂ ಪಕ್ಷದವರು ಇನ್ನೊಂದು ಪಕ್ಷದ ದೇವರನ್ನು ನಿಂದಿಸುವುದು ಪರಿಹಾಸ್ಯಮಾಡುವುದು ನಡೆದೇ ಇತ್ತು. ಶ್ರೀರಾಮಕೃಷ್ಣರಿಗೆ ಇದು ಬಾಲ್ಯಕಾಲದಿಂದಲೂ ತಿಳಿದಿತ್ತು. ಎರಡೂ ಪಂಥದ ಸಾಧನೆಗಳನ್ನು ಮಾಡಿ ಸಿದ್ಧಿಯನ್ನು ಪಡೆದು ಅವೆರಡೂ ಸತ್ಯವೆಂದು ಪ್ರತಿಪಾದಿಸಿದರು. ಶಾಕ್ತ ಮತ್ತು ವೈಷ್ಣವರಲ್ಲಿದ್ದ ಈ ಪರಸ್ಪರ ದ್ವೇಷಕ್ಕೆ ಕಾರಣ ಧಾರ್ಮಿಕತೆಯ ಅಭಾವ ಮತ್ತು ಅಹಂಕಾರ ಎಂಬುದನ್ನು ಅವರು ಅರಿತುಕೊಂಡರು.

29. ಶ್ರೀರಾಮಕೃಷ್ಣರ ತಂದೆಯು ಶ್ರೀರಾಮಚಂದ್ರನ ಉಪಾಸಕನಾಗಿದ್ದನು. ರಘುವೀರ ಶಿಲೆಯನ್ನು ಅಲೌಕಿಕ ರೀತಿಯಲ್ಲಿ ಪಡೆದು ಅದನ್ನು ಮನೆಯಲ್ಲಿ ಪ್ರತಿಷ್ಠಾಪಿಸಿದ್ದನು. ಹೀಗೆ ಶ್ರೀರಾಮಕೃಷ್ಣರು ವೈಷ್ಣವ ವಂಶದಲ್ಲಿ ಜನಿಸಿದವರಾದರೂ ಶಿವ ಮತ್ತು ವಿಷ್ಣು ಇವರಿಬ್ಬರ ಮೇಲೆಯೂ ಅವರಿಗೆ ಬಾಲ್ಯಕಾಲದಿಂದಲೂ ಸಮಾನವಾದ ಭಕ್ತಿಯಿತ್ತು. ಬಾಲ್ಯಕಾಲದಲ್ಲಿ ಅವರು ಶಿವನ ವೇಷವನ್ನು ಧರಿಸಿ ಸಮಾಧಿಸ್ಥರಾದ ವಿಷಯವನ್ನು ಈಗಲೂ ಅಲ್ಲಿಯ ನೆರೆಹೊರೆಯವರು ಹೇಳುತ್ತಾರೆ ಮತ್ತು ಆ ಜಾಗವನ್ನು ತೋರಿಸುತ್ತಾರೆ. ಈ ವಿಷಯವನ್ನೇ ಸಮರ್ಥಿಸುವ ಇನ್ನೊಂದು ಮಾತನ್ನು ಇಲ್ಲಿ ಪ್ರಸ್ತಾಪಿಸಬಹುದು. ಶ್ರೀರಾಮಕೃಷ್ಣರು ತಮ್ಮ ಪರಿವಾರದ ಪ್ರತಿಯೊಬ್ಬರಿಗೂ ಒಂದು ಸಮಯದಲ್ಲಿ ವಿಷ್ಣುಮಂತ್ರ ಮತ್ತು ಶಕ್ತಿಮಂತ್ರ ಈ ಎರಡರ ದೀಕ್ಷೆಯನ್ನು ಕೊಡಿಸಿದ್ದರು. ಅವರುಗಳ ಮನಸ್ಸಿನಿಂದ ದ್ವೇಷಭಾವನೆಯನ್ನು ಸಂಪೂರ್ಣ ತೊಡೆದು ಹಾಕುವುದೇ ಇದರ ಉದ್ದೇಶವಾಗಿತ್ತು.

30. ಬಹಳ ಹಿಂದಿನ ಕಾಲದಲ್ಲಿ ಧರ್ಮರಾಜನಾದ ಅಶೋಕನು ಜನ ಸಾಧಾರಣರ ಒಳಿತಿಗಾಗಿ ಧರ್ಮ ಮತ್ತು ಶಿಕ್ಷಣವನ್ನು ಎಲ್ಲೆಲ್ಲಿಯೂ ಪ್ರಸರಿಸುವ ಸಂಕಲ್ಪ ಮಾಡಿದನು. ಮನುಷ್ಯ ಮತ್ತು ಪಶುಗಳ ಶಾರೀರಿಕ ರೋಗ ನಿವಾರಣೆಗಾಗಿ ಆಸ್ಪತ್ರೆಗಳನ್ನು ಕಟ್ಟಿಸಿದನು ಮತ್ತು ಔಷಧಿ ಗಿಡಗಳನ್ನು ನೆಡೆಸಿದನು. ಇಷ್ಟೇ ಅಲ್ಲದೆ ಬೌದ್ಧ ಸಂನ್ಯಾಸಿಗಳ ಮೂಲಕ ಔಷಧಿ ಮತ್ತು ಗಿಡಮೂಲಿಕೆಗಳನ್ನು ವಿದೇಶಗಳಿಗೂ ಕಳುಹಿಸಿದನು. ಬಹುಶಃ ಆ ಸಮಯದಿಂದಿತ್ತೀಚೆಗೆ ಸಾಧುಗಳು ಔಷಧಿಗಳನ್ನು ಇಟ್ಟುಕೊಳ್ಳುವ ರೂಢಿ ಬಂದಿರಬೇಕು. ಮತ್ತೆ ತಾಂತ್ರಿಕಯುಗದಲ್ಲಿ ಈ ಪದ್ಧತಿಯು ಹೆಚ್ಚು ಪ್ರಚಲಿತವಾಯಿತು. ಈ ಪದ್ಧತಿಯಿಂದಾಗಿ ಸಾಧುಗಳ ಆಧ್ಯಾತ್ಮಿಕ ಅವನತಿಯನ್ನು ಗಮನಿಸಿ ಸಂಹಿತಾಕಾರರು ಅವನ್ನು ಖಂಡಿಸಿದರು. ಆದರೂ ಕೂಡ ಈ ಪದ್ಧತಿಯು ಇನ್ನೂ ಭಾರತದಲ್ಲಿ ಉಳಿದು ಕೊಂಡು ಬಂದಿದೆ. ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿರುವಾಗ ಮತ್ತು ಬೇರೆ ಬೇರೆ ತೀರ್ಥಸ್ಥಳಗಳಲ್ಲಿ ಅನೇಕ ಸಾಧುಗಳು ಪ್ರಾಪಂಚಿಕ ಸುಖದ ದಾಸರಾಗಿರುವುದನ್ನು ಕಂಡರು. ಹೀಗೆ ಶ್ರೀರಾಮಕೃಷ್ಣರು ಸಾಧುಗಳಲ್ಲಿಯೂ ಆಧ್ಯಾತ್ಮಿಕ ಕೊರತೆಯನ್ನು ಗಮನಿಸಿದ್ದರು. ಅವರು ಹೇಳುತ್ತಿದ್ದರು, "ಔಷಧಿಕೊಡುವ, ಭೂತೋಚ್ಚಾಟನೆ ಮಾಡುವ, ದೇಹದ ಮೇಲೆ ಧಾರ್ಮಿಕ ಚಿಹ್ನೆಗಳನ್ನು (ತಿಲಕ, ಮರದ ಚಪ್ಪಲಿ ಇತ್ಯಾದಿಗಳು) ಧರಿಸಿರುವ ಸಾಧುಗಳನ್ನು ಖಂಡಿತಾ ನಂಬಬೇಡಿ. ಅವರ ಧಾರ್ಮಿಕ ಚಿಹ್ನೆಗಳು ಸೈನ್‌ಬೋರ್ಡುಗಳಂತೆ ಇರುತ್ತವೆ."

31. ಭಂಡ ಮತ್ತು ಭ್ರಷ್ಟ ಸಾಧುಗಳನ್ನು ನೋಡಿ ಈ ಸಾಧು ಸಂಪ್ರದಾಯವನ್ನೇ ನಿರ್ಮೂಲಗೊಳಿಸಬೇಕೆಂಬುದು ಅವರ ಅಭಿಪ್ರಾಯವಾಗಿತ್ತೆಂದು ಯಾರೂ ಭಾವಿಸಬಾರದು. ಪಾಶ್ಚಾತ್ಯ ಜನ ಸಾಧಾರಣರು ಹೀಗೆ ಮಾಡಬಯಸುತ್ತಾರೆ. ಶ್ರೀರಾಮಕೃಷ್ಣರಿಗೆ ಸಾಧು ಸಂನ್ಯಾಸಿಗಳ ಮೇಲೆ ಅಪಾರ ಗೌರವವಿತ್ತು. ಭಿಕ್ಷಾಟನೆ ಮಾಡುವ ಸಾಮಾನ್ಯ ಸಾಧುವೂ ಕೂಡ ಸಚ್ಚಾರಿತ್ರ್ಯವುಳ್ಳ ಗೃಹಸ್ಥನಿಗೆ ಹೋಲಿಸಿದರೆ ಶ್ರೇಷ್ಠನೆಂದು ಶ್ರೀರಾಮಕೃಷ್ಣರು ಅನೇಕ ಬಾರಿ ಹೇಳುತ್ತಿದ್ದುದನ್ನು ನಾವು ಕೇಳಿದ್ದೇವೆ. ಆ ಸಾಧುವು ಯೋಗಾಭ್ಯಾಸ ಅಥವಾ ಇತರ ಧಾರ್ಮಿಕ ಸಾಧನೆಗಳನ್ನು ಮಾಡದಿರಬಹುದು. ಆದರೂ ಕೂಡ ಅವನಲ್ಲಿ ಒಳ್ಳೆಯ ನಡತೆಯಿದ್ದು ಇಡೀ ಜೀವನವನ್ನು ಭಿಕ್ಷೆ ಬೇಡಿ ಕಳೆದರೆ, ಅವನು ತ್ಯಾಗದಲ್ಲಿ ಗೃಹಸ್ಥನಿಗಿಂತ ತುಂಬಾ ಮುಂದಿದ್ದಾನೆ ಎಂದೇ ತಿಳಿಯಬೇಕು. ಶ್ರೀರಾಮಕೃಷ್ಣರ ಪಾಲಿಗೆ ಭಗವಂತನಿಗಾಗಿ ತ್ಯಾಗ ಮಾಡುವುದೇ ಮನುಷ್ಯನ ಚಾರಿತ್ರ್ಯದ ಮಾಪಕವಾಗಿತ್ತು.

ನಿಷ್ಠಾವಂತ ಸಾಧುಗಳನ್ನು, ಅವರು ಯಾವುದೇ ಸಂಪ್ರದಾಯಕ್ಕೆ ಸೇರಿರಲಿ, ಶ್ರೀರಾಮಕೃಷ್ಣರು ತುಂಬಾ ಗೌರವಿಸುತ್ತಿದ್ದರು. ಭಾರತದ ಸನಾತನ ಧರ್ಮವು ಉಳಿದಿರುವುದು ಇಂತಹ ಶ್ರೇಷ್ಠ ಪುರುಷರ ಅನುಭವಗಳಿಂದ. ಭಗವತ್ಸಾಕ್ಷಾತ್ಕಾರವನ್ನು ಪಡೆದು ಮಾಯಾ ಬಂಧನದಿಂದ ಮುಕ್ತರಾಗಿ ಜೀವನದ ಅತ್ಯಂತಿಕ ಸ್ಥಿತಿಯನ್ನು ಮುಟ್ಟಿದ ಸಾಧುಪುರುಷರೇ ವೇದ ಮುಂತಾದ ಶಾಸ್ತ್ರಗಳ ವಾಕ್ಯಗಳನ್ನು ಪ್ರಮಾಣೀಕರಿ

ಸಿದವರು. ಏಕೆಂದರೆ ವೈಶೇಷಿಕರೇ ಮುಂತಾದ ದಾರ್ಶನಿಕರು ಆಪ್ತಪುರುಷನೇ ವೇದ ವನ್ನು ಪ್ರಕಾಶಿಸುವವನು ಎಂದು ಅವಿರೋಧವಾಗಿ ಸಾರುತ್ತಾರೆ. ಆದ್ದರಿಂದ ಇದನ್ನು ಅರಿತಿದ್ದ ಶ್ರೀರಾಮಕೃಷ್ಣರು ಅವರನ್ನು ತುಂಬಾ ಗೌರವಿಸುತ್ತಿದ್ದರು.

32. ಶ್ರೀರಾಮಕೃಷ್ಣರಿಗೆ ನಿಷ್ಠಾವಂತ ಸಾಧುಗಳ ಮೇಲೆ ಇಷ್ಟೊಂದು ಪ್ರೀತಿ ಗೌರವಗಳಿತ್ತು ಮತ್ತು ಅವರ ಸಂಗವನ್ನು ಹೆಚ್ಚು ಬಯಸುತ್ತಿದ್ದರು. ಆದರೂ ಕೂಡ ಅವರಲ್ಲಿ ಒಂದು ಕೊರತೆಯನ್ನು ಕಾಣುತ್ತಿದ್ದರು. ಇದು ಆಗಾಗ ಅವರ ಮನಸ್ಸಿಗೆ ವೇದನೆಯನ್ನುಂಟುಮಾಡುತ್ತಿತ್ತು. ಆ ಸಾಧುಗಳು ತಮ್ಮಂತೆ ಎಲ್ಲಾ ಪಂಥದವರೊಡನೆ ಒಂದೇ ಸಮನಾಗಿ ಬೆರೆಯದಿರುವುದನ್ನು ಅವರು ಗಮನಿಸಿದರು. ಈ ಒಂದು ಸಂಕುಚಿತ ಮನೋಭಾವವು ಮುಂದುವರಿದ ಸಾಧಕರಲ್ಲಿಯೂ, ಅದ್ವೈತ ಸಂಪ್ರದಾಯದ ಸಂನ್ಯಾಸಿ ಗಳಲ್ಲಿಯೂ ಇರುವುದನ್ನು ಅವರು ಗಮನಿಸಿದರು. ಇನ್ನು ಭಕ್ತಿ ಸಂಪ್ರದಾಯದ ಸಾಧು ಗಳ ವಿಷಯದಲ್ಲಂತೂ ಹೇಳಬೇಕಾಗಿಯೇ ಇಲ್ಲ. ಅದ್ವೈತಸ್ತರವನ್ನು ಏರಿ ಸಮತೆಯ ಉದಾರ ಮನೋಭಾವವನ್ನು ಇನ್ನೂ ಪಡೆಯದ ಸಾಧುಗಳು ಇತರ ಮತದ ಜನ ಗಳನ್ನು ಹೀನ ದೃಷ್ಟಿಯಿಂದ, ತುಚ್ಛ ಮನೋಭಾವದಿಂದ ಕಾಣುತ್ತಿದ್ದರು ಅಥವಾ ಅಹಂಕಾರಯುಕ್ತ ಕನಿಕರದಿಂದ ಅವರನ್ನು ನೋಡುತ್ತಿದ್ದರು. ಒಂದೇ ಗುರಿಯೆಡೆಗೆ ಹೋಗುತ್ತಿದ್ದ ಈ ಎಲ್ಲ ಸಂಪ್ರದಾಯದವರು ಪರಸ್ಪರ ದ್ವೇಷಿಸುವುದನ್ನು ನೋಡಿ ಉದಾರ ಮನೋಭಾವದ ಶ್ರೀರಾಮಕೃಷ್ಣರಿಗೆ ತುಂಬಾ ಕಷ್ಟವಾಗುತ್ತಿತ್ತು. ಈ ರೀತಿಯ ಸಂಕುಚಿತ ಮನೋಭಾವಕ್ಕೆ ಆಧ್ಯಾತ್ಮಿಕತೆಯ ಕೊರತೆಯೇ ಕಾರಣವೆಂಬುದನ್ನು ಅವರು ಸ್ಪಷ್ಟವಾಗಿ ಕಂಡರು.

33. ದಕ್ಷಿಣೇಶ್ವರದ ತಮ್ಮ ಕೊಠಡಿಯಲ್ಲಿ ಕುಳಿತು ಶ್ರೀರಾಮಕೃಷ್ಣರು ಗೃಹಸ್ಥ ಮತ್ತು ಸಂನ್ಯಾಸಿಗಳೆಲ್ಲರಲ್ಲಿಯೂ ಪ್ರತಿದಿನ ಈ ಆಧ್ಯಾತ್ಮಿಕ ಕೊರತೆಯನ್ನು ಮತ್ತು ಸಂಕುಚಿತ ಮತಾಂಧತೆಯನ್ನು ಕಾಣುತ್ತಿದ್ದರು. ತೀರ್ಥಸ್ಥಳಗಳಿಗೆ ಭೇಟಿ ಇತ್ತಾಗ ಈ ದೋಷಗಳು ಅಲ್ಲಿ ಇನ್ನೂ ಪ್ರಬಲವಾಗಿರುವುದನ್ನು ಕಂಡರು. ಮಥುರನಿಂದ ಕಾಣಿಕೆ ಸ್ವೀಕರಿಸುವಾಗ ಬ್ರಾಹ್ಮಣರ ನಡುವೆ ನಡೆದ ಕಚ್ಚಾಟ, ಕಾಶಿಯಲ್ಲಿ ದೇವಿಯ ಪೂಜೆಯ ಸಮಯದಲ್ಲಿ ಕುಡಿದ ತಾಂತ್ರಿಕ ಸಾಧಕರ ಅಸಭ್ಯ ವರ್ತನೆ, ದಂಡಿ ಸಾಧುಗಳು ಹೆಸರು ಕೀರ್ತಿಗಾಗಿ ಪರದಾಡುವ ಬಗೆ, ಬೃಂದಾವನದಲ್ಲಿ ವೈಷ್ಣವ ಬಾಬಾಗಳು ಮಧುರ ಭಾವ ಸಾಧನೆಯ ನೆವದಲ್ಲಿ ಸ್ತ್ರೀಸಂಗ ಮಾಡುವುದು, ಇವೇ ಮುಂತಾದ ಅನೇಕ ಘಟನೆಗಳ ಯಥಾರ್ಥ ರೂಪವು ಶ್ರೀರಾಮಕೃಷ್ಣರ ತೀಕ್ಷ್ಣದೃಷ್ಟಿಗೆ ಗೋಚರವಾಗದೆ ಇರಲಿಲ್ಲ. ಇದರ ಮೂಲಕ ಅವರು ಸಮಾಜದ ಮತ್ತು ದೇಶದ ನಿಜವಾದ ಸ್ಥಿತಿಯನ್ನು ಅರ್ಥ ಮಾಡಿಕೊಂಡರು. ಅವರು ಅದ್ವೈತಾನುಭವವನ್ನು ಪಡೆಯದೆ ಇದ್ದಿದ್ದರೆ ಕೇವಲ ಈ ಘಟನೆಗಳನ್ನು ನೋಡುವುದರಿಂದ ಅವರಿಗೇನೂ ಅಷ್ಟೊಂದು ಪ್ರಯೋಜನವಾಗುತ್ತಿರ ಲಿಲ್ಲ. ಮೊದಲೇ ಈ ಅನುಭವವನ್ನು ಪಡೆದಿದ್ದರಿಂದ ಮನುಷ್ಯ ಜೀವನದ ಚರಮ ಗುರಿ ಏನು ಎಂಬುದು ಅವರಿಗೆ ಸ್ಥಿರವಾಗಿತ್ತು. ಇದರ ಹಿನ್ನೆಲೆಯಲ್ಲಿ ಅವರು ಎಲ್ಲ ವಿಷಯ

ಗಳನ್ನೂ ತುಲನಾತ್ಮಕವಾಗಿ ಅಧ್ಯಯನ ಮಾಡಲು ಸಾಧ್ಯವಾಯಿತು. ವೈಯಕ್ತಿಕ ಮತ್ತು ಸಾಮಾಜಿಕ ಜೀವನದ ಈ ರೀತಿಯ ಅಧ್ಯಯನ ಮತ್ತು ಅನುಭವಗಳು ಎಲ್ಲಾ ವಿಷಯ ಗಳ ನೈಜ ಮೌಲ್ಯವನ್ನು ಅಳೆಯಲು ಅವರಿಗೆ ಸಾಧ್ಯವಾಯಿತು, ಪ್ರಗತಿ, ಸಭ್ಯತೆ, ಧರ್ಮ, ಶಿಕ್ಷಣ, ಭಕ್ತಿ, ನಿಷ್ಠೆ, ಯೋಗ, ಕರ್ಮ, ಇವೇ ಮುಂತಾದ ಪ್ರೇರಕ ಶಕ್ತಿಗಳು ಮನುಷ್ಯನನ್ನು ಯಾವ ಗುರಿಯೆಡೆಗೆ ಕರೆದುಕೊಂಡು ಹೋಗುತ್ತಿವೆ ಅಥವಾ ಇವುಗಳ ಪರಿಣತ ರೂಪವು ಮನುಷ್ಯನನ್ನು ಯಾವ ಸ್ಥಿತಿಗೆ ಏರಿಸುತ್ತವೆ ಎಂಬುದನ್ನು ಶ್ರೀರಾಮ ಕೃಷ್ಣರು ನಿಃಸಂಶಯವಾಗಿ ಅರಿತಿದ್ದರು. ಯಥಾರ್ಥ ಸಾಧು ಯಾರು ಎಂಬ ಪ್ರಜ್ಞೆ ಅವರಿಗಿಲ್ಲದಿದ್ದಿದ್ದರೆ ಯಾವ ಸಾಧು ಎಷ್ಟು ದೂರ ಮುಂದುವರಿದಿದ್ದಾನೆ ಎಂದು ಅವರಿಗೆ ಹೇಗೆ ತಿಳಿಯುತ್ತಿತ್ತು ? ತೀರ್ಥಸ್ಥಳಗಳಲ್ಲಿ ಮತ್ತು ದೇವತಾಮೂರ್ತಿಗಳಲ್ಲಿ ಬಹುಜನರ ಚಿಂತಾಶಕ್ತಿಯ ಪ್ರಭಾವದಿಂದ ಆಧ್ಯಾತ್ಮಿಕತೆಯು ಘನೀಭೂತವಾಗಿ ಪ್ರಕಾಶಿಸುತ್ತಿರುವು ದನ್ನು ಅವರು ನಿಃಸಂಶಯವಾಗಿ ಕಂಡಿರದಿದ್ದಿದ್ದರೆ, ಅತ್ಯಂತ ಸತ್ಯನಿಷ್ಠರಾದ ಶ್ರೀರಾಮ ಕೃಷ್ಣರು ಜನಸಾಧಾರಣರಿಗೆ ತೀರ್ಥಪರ್ಯಟಣೆ ಮಾಡಲು ಮತ್ತು ಸಾಕಾರಮೂರ್ತಿಯನ್ನು ಉಪಾಸನೆ ಮಾಡಲು ಅಷ್ಟೊಂದು ದೃಢವಾಗಿ ಪ್ರೋತ್ಸಾಹ ನೀಡುತ್ತಿದ್ದರೇನು ? ಅಥವಾ ವಿವಿಧ ಧರ್ಮಗಳ ಗುರಿಯೇನು ಮತ್ತು ಅವುಗಳು ಮನುಷ್ಯನನ್ನು ಹೇಗೆ ಉನ್ನ ತಿಗೆ ಕೊಂಡೊಯ್ಯುತ್ತವೆ ಎಂಬುದು ಅವರಿಗೆ ತಿಳಿದಿರದಿದ್ದರೆ ಆ ಧರ್ಮಾನುಯಾಯಿ ಗಳ ಸಂಕುಚಿತ ಮನೋಭಾವವು ದೂಷಣೀಯವೆಂದು ಅವರಿಗೆ ಹೇಗೆ ಅರ್ಥವಾಗು ತ್ತಿತ್ತು ? ನಾವೂ ಕೂಡ ಪ್ರತಿನಿತ್ಯ ಸಾಧುಗಳನ್ನು, ತೀರ್ಥಸ್ಥಳಗಳನ್ನು ದೇವದೇವಿಯರ ಮೂರ್ತಿಗಳನ್ನು ನೋಡುತ್ತೇವೆ ; ಧರ್ಮ ಮತ್ತು ಶಾಸ್ತ್ರಮತಗಳ ಕೋಲಾಹಲವನ್ನು ಕೇಳಿ ಕಿವುಡರಾಗುತ್ತೇವೆ. ಬುದ್ಧಿ ಕೌಶಲತೆ ಮತ್ತು ವಾದ ವಿವಾದಗಳ ಪ್ರಭಾವಕ್ಕೊಳ ಗಾಗಿ ಕೆಲವೊಮ್ಮೆ ಈ ಮತ ಸತ್ಯ, ಕೆಲವೊಮ್ಮೆ ಅದು ಸತ್ಯ ಅನಿಸುತ್ತದೆ. ಜೀವನದ ದೈನಂದಿನ ಘಟನೆಗಳನ್ನು ಚಿಂತಿಸುತ್ತಾ ಮಾನವನ ಗುರಿಯು ಏನು ಎಂಬುವರ ಬಗ್ಗೆ ನಮಗೆ ನಿಶ್ಚಯಕ್ಕೆ ಬರಲಾಗುವುದಿಲ್ಲ. ಹೀಗೆ ಯಾವುದೇ ವಿಷಯದಲ್ಲೂ ಒಂದು ದೃಢ ನಿಶ್ಚಯಕ್ಕೆ ಬರಲಾಗದೆ ಸಂದೇಹದಿಂದ ಡೋಲಾಯಮಾನ ಸ್ಥಿತಿಯಲ್ಲಿರುತ್ತೇವೆ. ಕೆಲ ವೊಮ್ಮೆ ನಾಸ್ತಿಕರಾಗಿ ಪ್ರಾಪಂಚಿಕ ಸುಖವೇ ಜೀವನದ ಸಾರಸರ್ವಸ್ವ ಎಂದು ಭಾವಿಸಿ ನಿಶ್ಚಿಂತರಾಗಿ ಕುಳಿತುಕೊಳ್ಳುತ್ತೇವೆ. ಈ ರೀತಿ ನಮ್ಮ ನಿಲುವನ್ನು ಬದಲಾಯಿಸುತ್ತಿದ್ದರೆ ನಮಗೆ ಅದರಿಂದ ಏನಾದರೂ ಪ್ರಯೋಜನವಾದೀತೇ ? ಶ್ರೀರಾಮಕೃಷ್ಣರ ಮನಸ್ಸಿನ ಸ್ವರೂಪವೇ ಬೇರೆಯಾಗಿತ್ತು, ಅವರು ಒಮ್ಮೆ ನೋಡಿದರೆ ಎಲ್ಲವನ್ನೂ ಅರ್ಥ ಮಾಡಿ ಕೊಂಡುಬಿಡುತ್ತಿದ್ದರು. ಪಶುಸ್ವಭಾವದ ನಮ್ಮ ಮನಸ್ಸಿಗೆ ಜಗದ್ಗುರು ಮಹಾಪುರುಷರ ಸಹಾಯವಿಲ್ಲದೇ ನೂರಾರು ಜನ್ಮಗಳಾದರೂ ಆ ರೀತಿ ಅರ್ಥ ಮಾಡಿಕೊಳ್ಳಲು ಸಾಧ್ಯ ವಾಗಲಾರದು. ಅವರ ಮನಸ್ಸು ಮತ್ತು ನಮ್ಮ ಮನಸ್ಸು ಒಂದೇ ರೀತಿ ಕಂಡರೂ ಅವು ಗಳಲ್ಲಿ ಎಂಥಾ ಒಂದು ಅಂತರವಿತ್ತು ಎಂಬುದನ್ನು ಅವರ ಕೃತಿ ಮತ್ತು ವರ್ತನೆಗಳಿಂದ ನಾವು ಊಹಿಸಬಹುದು. ಆದ್ದರಿಂದಲೇ ಭಕ್ತಿ ಶಾಸ್ತ್ರಗಳು ಅವತಾರ ಪುರುಷರ ಮನಸ್ಸು

ಶುದ್ಧಸತ್ತ್ವಗುಣದಿಂದ ಉಂಟಾಗಿದೆ ಎಂದು ಹೇಳುತ್ತವೆ.

34. ಹೀಗೆ ದಿವ್ಯ ಮತ್ತು ಸಾಧಾರಣ ಸ್ತರಗಳೆರಡರಿಂದಲೂ ನೋಡುತ್ತಾ ದೇಶದ ಧರ್ಮಗ್ಲಾನಿಯನ್ನು ವಿವಿಧ ಧರ್ಮಗಳ ಮತಾಂಧತೆಯನ್ನು ಅವರು ಅರ್ಥ ಮಾಡಿಕೊಂಡರು. ಎಲ್ಲಾ ಮತಧರ್ಮಗಳು ಸತ್ಯವೇ. ಬೇರೆ ಬೇರೆ ಮನೋಭಾವದವರಿಗೆ ಬೇರೆ ಬೇರೆ ಮಾರ್ಗಗಳನ್ನು ತೋರಿಸುತ್ತಾ ಎಲ್ಲರನ್ನೂ ಒಂದೇ ಲಕ್ಷ್ಯದೆಡೆಗೆ ಒಯ್ಯು ವುದು ಅವುಗಳ ಉದ್ದೇಶ. ಈ ಸತ್ಯವನ್ನು ಅರ್ಥಮಾಡಿಕೊಳ್ಳದೆ ವಿವಿಧ ಧರ್ಮಗಳು ಕಚ್ಚಾಡುವುದನ್ನು ಅವರು ಗಮನಿಸಿದರು. ಹಿಂದಿನ ಆಚಾರ್ಯರುಗಳು ಸರ್ವಧರ್ಮ ಗಳ ಈ ಸಮಾನತೆಯನ್ನು ಅರಿತಿರಲಿಲ್ಲ ಅಥವಾ ಅರಿತಿದ್ದರೂ ಪ್ರಚಾರ ಮಾಡಲಿಲ್ಲ. ದೇಶ, ಕಾಲ, ಪಾತ್ರಗಳು ಅದಕ್ಕೆ ಯುಕ್ತವಾಗಿಲ್ಲ ಎಂದು ಅವರು ಭಾವಿಸಿದ್ದಿರಬೇಕು. ಶ್ರೀರಾಮಕೃಷ್ಣರು ತಮ್ಮ ಈ ಸರ್ವಧರ್ಮ ಸಮದರ್ಶಿತ್ವ ಭಾವವನ್ನು ಜಗತ್ತಿನಲ್ಲಿಯೇ ಸಂಪೂರ್ಣ ಹೊಸದೆಂದು ತಿಳಿದುಕೊಂಡರು. ಅದು ತಮ್ಮದೇ ಸಂಪತ್ತು, ತಾವೇ ಅದನ್ನು ಜಗತ್ತಿಗೆ ನೀಡಬೇಕು ಎಂದು ಅವರು ಭಾವಿಸಿದರು.

35. "ಎಲ್ಲ ಧರ್ಮಮತಗಳು ಸತ್ಯ. ಎಷ್ಟು ಮತಗಳೋ ಅಷ್ಟು ಪಥಗಳು." ಶ್ರೀರಾಮಕೃಷ್ಣರ ಈ ಮಾತನ್ನು ಪ್ರಥಮ ಬಾರಿಗೆ ಕೇಳಿ ಜಗತ್ತು ಮುಗ್ಧವಾಯಿತು. ಈ ವಿಷಯ ನಮಗೆಲ್ಲರಿಗೂ ತಿಳಿದಿದೆ. ಹಿಂದಿನ ಕೆಲವು ಋಷಿಗಳು ಮತ್ತು ಆಚಾರ್ಯರು ಗಳಲ್ಲಿ ಈ ರೀತಿಯ ಉದಾರಭಾವವು ಕಂಡುಬರುತ್ತದೆ ನಿಜ. ಆದರೆ ಸ್ವಲ್ಪ ವಿಚಾರ ಮಾಡಿ ನೋಡಿದರೆ ನಮಗೆ ಅರ್ಥವಾಗುತ್ತದೆ, ಆ ಎಲ್ಲಾ ಆಚಾರ್ಯರು ಬೇರೆ ಬೇರೆ ಧರ್ಮಗಳಿಂದ ತಮಗೆ ಬೇಕಾದ ಅಂಶಗಳನ್ನು ತೆಗೆದುಕೊಂಡು ತಮ್ಮ ಬುದ್ಧಿಶಕ್ತಿಯ ಬಲದಿಂದ ಒಂದು ರೀತಿಯ ಸಮನ್ವಯವನ್ನು ಮಾಡಿದರು. ಆದರೆ ಶ್ರೀರಾಮಕೃಷ್ಣರು ಬೇರೆ ಆಚಾರ್ಯರುಗಳಂತೆ ಧರ್ಮಗಳ ಯಾವ ಭಾಗವನ್ನೂ ತ್ಯಜಿಸಲಿಲ್ಲ. ಅವರು ಎಲ್ಲಾ ಧರ್ಮಗಳನ್ನೂ ಸಮಾನವಾಗಿ ಪ್ರೀತಿಸಿದರು ಮತ್ತು ಅವುಗಳನ್ನು ತಮ್ಮ ಜೀವನ ದಲ್ಲಿ ಅನುಸರಿಸಿ ಅವುಗಳೆಲ್ಲದರ ಗುರಿಯನ್ನೂ ಮುಟ್ಟಿದರು. ಈ ರೀತಿ ಹಿಂದಿನ ಯಾವ ಆಚಾರ್ಯರೂ ಆ ಸತ್ಯವನ್ನು ಸಾಕ್ಷಾತ್ಕರಿಸಿಕೊಂಡಿರಲಿಲ್ಲ. ಏನೇ ಆಗಲಿ ಈ ವಿಷಯ ವನ್ನು ಇಲ್ಲಿ ವಿಸ್ತಾರವಾಗಿ ವಿಚಾರ ಮಾಡುವುದು ನಮ್ಮ ಉದ್ದೇಶವಲ್ಲ. ಈ ರೀತಿಯ ಉದಾರ ಭಾವವನ್ನು ಶ್ರೀರಾಮಕೃಷ್ಣರಲ್ಲಿ ಬಾಲ್ಯಕಾಲದಿಂದಲೂ ನಾವು ಕಾಣುತ್ತೇವೆ ಎಂಬುದನ್ನು ನಾವು ಇಲ್ಲಿ ಹೇಳಲು ಇಷ್ಟಪಡುತ್ತೇವೆ. ಆದರೆ ಅವರು ತೀರ್ಥದರ್ಶನ ಗಳನ್ನು ಮಾಡಿ ಹಿಂದಿರುಗುವವರೆಗೂ ಈ ಸಮನ್ವಯ ಭಾವವನ್ನು ತಾವು ಮಾತ್ರ ಅನುಭವಿಸಿರುವುದು ಎಂಬುದು ಅವರಿಗೆ ತಿಳಿದಿರಲಿಲ್ಲ. ಹಿಂದಿನ ಋಷಿಗಳು, ಆಚಾರ್ಯರು ಭಗವಂತನನ್ನು ಪಡೆಯಲು ಯಾವುದೋ ಒಂದು ಮಾರ್ಗವನ್ನು ತೋರಿಸಿದರು. ಅವ ರಾರೂ ಎಲ್ಲಾ ಮಾರ್ಗಗಳಿಂದಲೂ ಒಂದೇ ಗುರಿಯನ್ನು ತಲುಪಬಹುದೆಂಬುದನ್ನು ಬೋಧಿಸಲಿಲ್ಲವೆಂಬುದು ಶ್ರೀರಾಮಕೃಷ್ಣರಿಗೆ ತಿಳಿದಿರಲಿಲ್ಲ. ಶ್ರೀರಾಮಕೃಷ್ಣರು ತಮ್ಮ ಸಾಧನೆಯ ಸಮಯದಲ್ಲಿ ಎಲ್ಲವನ್ನೂ ತಾಯಿಯ ಪಾದಪದ್ಮಕ್ಕೆ ಅರ್ಪಿಸಿದರು. ಅವರಿಗೆ

ಅದ್ವೈತಭಾವದಿಂದ ಸಾಮಾನ್ಯ ಸ್ತರಕ್ಕೆ ಇಳಿದುಬರಲು ಇಷ್ಟವಿರಲಿಲ್ಲ. ಆದರೆ ಜಗನ್ಮಾತೆಯೇ ಅಲೌಕಿಕ ವಿಧಾನಗಳ ಮೂಲಕ ಅವರು ವ್ಯಾವಹಾರಿಕ ಸ್ತರಕ್ಕೆ ಬರುವಂತೆ ಮಾಡಿದಳು. ಇದೆಲ್ಲವೂ ಜಗತ್ತಿನಲ್ಲಿರುವ ಪರಮತ ಅಸಹಿಷ್ಣುತೆಯನ್ನು ಹೋಗಲಾಡಿಸುವುದಕ್ಕಾಗಿಯೇ ಎಂಬುದು ಶ್ರೀರಾಮಕೃಷ್ಣರಿಗೆ ತಿಳಿದಿತ್ತು. ಈ ಅಪೂರ್ವ ಹಿತಕರ ಸತ್ಯಕ್ಕಾಗಿ ಜಗತ್ತು ಹಾತೊರೆಯುತ್ತಿತ್ತು ಎಂಬುದನ್ನು ಅವರು ತಿಳಿದಿದ್ದರು. ಈ ಸಿದ್ಧಾಂತಕ್ಕೆ ನಾವು ಹೇಗೆ ಬಂದೆವು ಎಂಬುದನ್ನು ಈಗ ವಿವರಿಸಲು ಪ್ರಯತ್ನಿಸುತ್ತೇವೆ.

36. ಭಗವತ್ಸಾಕ್ಷಾತ್ಕಾರವು ಸಾಧನೆಯನ್ನವಲಂಬಿಸಿರುತ್ತದೆ, ಅದು ಕೇವಲ ಮಾತಿನ ವಿಷಯವಲ್ಲ ಎಂಬ ನಂಬಿಕೆ ಶ್ರೀರಾಮಕೃಷ್ಣರಿಗೆ ಬಾಲ್ಯಕಾಲದಿಂದಲೂ ಇತ್ತು, ಮತ್ತೆ ಸಾಧನೆಯ ಸಮಯದಲ್ಲಿ ಮತ್ತು ಅನಂತರವೂ ಕೂಡ ಸಾಧನೆಯಿಂದ ಪಡೆದ ಶಕ್ತಿಯನ್ನು ಇತರರಿಗೆ ವರ್ಗಾಯಿಸಬಹುದು ಎಂದು ಅವರು ಆಗಾಗ ಭಾವಿಸುತ್ತಿದ್ದರು. ಅವರ ಈ ನಂಬಿಕೆಯ ಬಗ್ಗೆ ನಾವಾಗಲೇ ಕೆಲವು ಕಡೆಗಳಲ್ಲಿ ಸೂಚಿಸಿರುವೆವು. ಜಗನ್ಮಾತೆಯೇ ತಮ್ಮಲ್ಲಿ ಆ ಶಕ್ತಿಯನ್ನು, ಬೇರೆ ಬೇರೆ ಸಮಯಗಳಲ್ಲಿ ಮಥುರ ಮುಂತಾದವರ ಮೇಲೆ ಪ್ರಯೋಗಿಸಲು, ಇರಿಸಿರುವುದಾಗಿ ಅವರು ಅನುಭವಿಸಿದ್ದರು. ಇದರ ಪರಿಣಾಮವಾಗಿ ತಮ್ಮ ದೇಹ ಮತ್ತು ಮನಸ್ಸುಗಳ ಮೂಲಕ ಜಗನ್ಮಾತೆಯೇ ಇತರರನ್ನು ಅನುಗ್ರಹಿಸುತ್ತಿರುವಳು ಎಂಬ ನಂಬಿಕೆ ಶ್ರೀರಾಮಕೃಷ್ಣರಲ್ಲಿತ್ತು. ಯಾವಾಗ ಹೇಗೆ ಅನುಗ್ರಹಿಸುವಳು ಎಂಬುದು ಅವರಿಗೆ ತಿಳಿದಿರಲಿಲ್ಲ. ಬಾಲಕ ಸ್ವಭಾವದವರಾದ ಅವರು ಅದನ್ನು ತಿಳಿಯುವ ಪ್ರಯತ್ನವನ್ನೂ ಮಾಡಿರಲಿಲ್ಲ. ಪ್ರತಿಯೊಂದಕ್ಕೂ ಅವರು ನಿಃಸಂಕೋಚವಾಗಿ ಆಕೆಯನ್ನೇ ಅವಲಂಬಿಸಿದ್ದರು. ಆದರೆ ಇಡೀ ಭಾರತದಲ್ಲಿ ಧರ್ಮ ಪ್ರಚಾರವಾಗುತ್ತದೆ, ಜಗತ್ತೇ ಆಧ್ಯಾತ್ಮಿಕ ಪ್ರವಾಹದಿಂದ ತುಂಬಿ ಹೋಗುವುದು ಎಂಬ ವಿಷಯ ಅವರಿಗೆ ಕನಸಿನಲ್ಲೂ ಹೊಳೆದಿರಲಿಕ್ಕಿಲ್ಲ. ಆದರೆ ಈಗ ಅವರ ಮನಸ್ಸಿಗೆ ಹೊಳೆಯತೊಡಗಿತು ಜಗನ್ಮಾತೆಯು ತಮ್ಮ ದೇಹ ಮನಸ್ಸುಗಳ ಮೂಲಕ ಧರ್ಮ ಪ್ರಚಾರದ ದಿವ್ಯಲೀಲೆಯನ್ನು ಆಗಲೇ ಪ್ರಾರಂಭಿಸಿರುವಳು ಎಂದು. ಆದರೆ ಏನಂತೆ, ಜಗನ್ಮಾತೆಯು ಯಾವ ದಿಕ್ಕಿನಲ್ಲಿ ಎಲ್ಲಿಗೆ ಮತ್ತು ಹೇಗೆ ಅವರನ್ನು ನಡೆಸಿಕೊಂಡು ಹೋಗುತ್ತಾಳೆ ಎಂಬುದನ್ನು ಆಕೆ ತಿಳಿಸಿಕೊಡದಿದ್ದರೆ ಅವರು ಮಾಡುವುದಾದರೂ ಏನು ? 'ತಾಯಿ ನನ್ನವಳು ನಾನು ತಾಯಿಗೆ ಸೇರಿದವನು', ಇದೇ ಮನೋಭಾವವನ್ನೇ ಯಾವಾಗಲೂ ಅವರು ಇಟ್ಟುಕೊಂಡವರು. ವಾಸ್ತವಿಕವಾಗಿಯೂ ಅವರು ಜಗನ್ಮಾತೆಯ ಬಾಲಕನಂತೆಯೇ ಇದ್ದರು, ತಾಯಿಯ ಇಚ್ಛೆಗೆ ಬೇರೆಯಾದ ತಮ್ಮದೇ ಆದ ಒಂದು ಇಚ್ಛೆ ಅವರಿಗೆ ಇರಲೇ ಇಲ್ಲ. ಮಾತೆಯನ್ನು ವಿವಿಧ ಭಾವಗಳಲ್ಲಿ ವಿವಿಧ ಪಥಗಳ ಮೂಲಕ ಅರಿಯಬೇಕು, ಎಂಬ ಒಂದು ಇಚ್ಛೆ ಅವರಲ್ಲಿತ್ತು., ಅದನ್ನು ಕೂಡ ಮಾತೆಯೇ ಅವರ ಮನಸ್ಸಿನಲ್ಲಿ ಇಟ್ಟಿರುವುದು ಎಂಬುದನ್ನು ಅವಳು ಅನೇಕ ವಿಧದಲ್ಲಿ ತೋರಿಸಿಕೊಟ್ಟಿದ್ದಳು, ಆದ್ದರಿಂದ ಈಗಿನ ಹೊಸಪಾತ್ರದ ಅಭಿನಯಕ್ಕೂ ಬಾಲಕ ಸ್ವಭಾವದ ಶ್ರೀರಾಮಕೃಷ್ಣರು ತಾಯಿಯ ನಿರ್ದೇಶವನ್ನೇ ನಿರೀಕ್ಷಿಸಿದರು. ಹಿಂದಿನಂತೆ ಈಗಲೂ ಕೂಡ

ಜಗನ್ಮಾತೆಯು ಅವರನ್ನು ಕರೆದುಕೊಂಡು ತನ್ನ ಆಟವನ್ನು ಮುಂದುವರಿಸಿದಳು.

37. ತೀರ್ಥಸ್ಥಳಗಳಿಗೆ ಅವರು ಭೇಟಿ ಇತ್ತಾಗ ಅವರಿಗೆ ಮೇಲೆ ಹೇಳಿದ ಸತ್ಯಗಳು ಅನುಭವಕ್ಕೆ ಬಂದಿದ್ದವು. ಆದರೆ ನಮ್ಮಂತೆ ಅಹಂಕಾರದಿಂದ ಆಚಾರ್ಯ ಪದವಿಯನ್ನು ಏರಿರಲಿಲ್ಲ. ಬೃಂದಾವನದಲ್ಲಿ ತಪಸ್ವಿನಿ ಗಂಗಾಮಾತೆಯ ಜೊತೆ ತಮ್ಮ ಇಡೀ ಜೀವನವನ್ನು ಕಳೆಯಬೇಕೆಂಬ ಅವರ ನಿರ್ಧಾರದಿಂದ ಈ ಮಾತು ಸ್ಪಷ್ಟವಾಗುವುದು. 'ತಾಯಿ ತನ್ನ ಕೆಲಸವನ್ನು ಮಾಡುತ್ತಾಳೆ. ಜಗತ್ತಿನ ಕೆಲಸವನ್ನು ಮಾಡುವುದಕ್ಕೆ ಲೋಕಶಿಕ್ಷಣ ನೀಡುವುದಕ್ಕೆ ನಾನಾರು ?' ಎಂಬ ಮನೋಭಾವವೇ ಅವರ ಜೀವನದುದ್ದಕ್ಕೂ ಕಂಡು ಬರುತ್ತದೆ. ಆದರೆ ಅವರ ಈ ರೀತಿಯ ಮನೋಭಾವದಿಂದಾಗಿಯೇ ಜಗನ್ಮಾತೆಯ ಕಾರ್ಯದಲ್ಲಿ ಒಂದು ಸೂಕ್ತ ಉಪಕರಣವಾದರು ಮತ್ತು ಇದರಿಂದಾಗಿಯೇ ಅವರು ಭಾವಮುಖದಲ್ಲಿ ಇದ್ದರು. ಅವರಲ್ಲಿ ಗುರುಭಾವ ಪ್ರಕಾಶವಾದುದೂ ಕೂಡ ಈ ಮನೋಭಾವದಿಂದಾಗಿಯೇ. ಇದುವರೆವಿಗೂ ಶ್ರೀರಾಮಕೃಷ್ಣರು ಗುರುಭಾವದ ಆವೇಶಕ್ಕೆ ಒಳಗಾದಾಗ ತಮ್ಮ ಮೂಲಕ ಏನು ಸಂಭವಿಸಿತು ಎನ್ನುವುದು ಆ ಆವೇಶದ ನಂತರವೇ ತಿಳಿದುಬರುತ್ತಿತ್ತು. ಆದರೆ ಈಗ ಆ ಭಾವವನ್ನು ನಿರಂತರವಾಗಿ ಇರಿಸಿಕೊಳ್ಳುವುದು ಅವರ ದೇಹ ಮನಸ್ಸುಗಳಿಗೆ ಸ್ವಾಭಾವಿಕವಾಗಿತ್ತು. ಗುರುಭಾವವು ಸ್ವಾಭಾವಿಕವಾಗಿ ಯಾವಾಗಲೂ ನೈಜ ಆಧ್ಯಾತ್ಮಿಕ ಗುರುವಿನ ಸ್ಥಾನದಲ್ಲಿ ಈಗ ನೆಲೆಸಿದ್ದರು. ಇದಕ್ಕೆ ಮುಂಚೆ ಅವರು ನಮ್ಮ ಸಾಧಕನಂತೆಯೋ ಅಥವಾ ಮಗುವಿನಂತೆಯೋ ಇರುತ್ತಿದ್ದರು. ಆಗ ಅವರಲ್ಲಿ ಗುರುಭಾವವು ಆಗಾಗ ಕಾಣಿಸಿಕೊಳ್ಳುತ್ತಿತ್ತು. ಈಗ ಅದಕ್ಕೆ ತದ್ವಿರುದ್ಧ. ಅವರು ಹೆಚ್ಚು ಕಾಲ ಗುರುಭಾವದಲ್ಲಿಯೇ ಇರುತ್ತಿದ್ದರು ಮತ್ತು ನಮ್ಮ ಸಾಧಕ ಅಥವಾ ಬಾಲಕ ಭಾವ ಆಗಾಗ ಕಾಣಿಸಿಕೊಳ್ಳುತ್ತಿತ್ತು.

38. ಅಹಂಕಾರದ ಪ್ರಭಾವದಿಂದ ಅವರು ಗುರುಗಿರಿಯನ್ನು ಮಾಡುವುದು ಸಾಧ್ಯವೇ ಇರಲಿಲ್ಲ. ಅವರು ಭಾವಮುಖದಲ್ಲಿದ್ದಾಗ ಕೆಲವೊಮ್ಮೆ ಮಗುವಿನಂತೆ ತಾಯಿಯೊಡನೆ ಜಗಳ ಮಾಡುತ್ತಿದ್ದರು. ಇದರಿಂದ ಮೇಲಿನ ಮಾತು ಪ್ರಮಾಣಿತವಾಗುವುದು. ಶ್ರೀರಾಮಕೃಷ್ಣರ ಆಧ್ಯಾತ್ಮಿಕತೆಗೆ ಆಕರ್ಷಿತರಾಗಿ ಅರಳಿದ ತಾವರೆಯನ್ನು ದುಂಬಿಗಳು ಮುತ್ತುವಂತೆ ಜನರು ಅವರನ್ನು ಮುತ್ತತೊಡಗಿದರು. ಇಂತಹ ಒಂದು ಸಂದರ್ಭದಲ್ಲಿ ನಾವು ಒಮ್ಮೆ ದಕ್ಷಿಣೇಶ್ವರಕ್ಕೆ ಹೋದಾಗ ಶ್ರೀರಾಮಕೃಷ್ಣರು ಭಾವಮುಖದಲ್ಲಿ ತಾಯಿಯೊಡನೆ ಮಾತನಾಡುತ್ತಿದ್ದರು: "ನೀನೇನು ಮಾಡುತ್ತಿದ್ದೀ ? ಈ ರೀತಿ ಜನರ ತಂಡವನ್ನೇ ಕರೆತರುವುದೇ ? ನನಗೆ ಸ್ನಾನಕ್ಕೂ ಸಮಯವಿಲ್ಲ, ಊಟಕ್ಕೂ ಸಮಯವಿಲ್ಲ." (ಶ್ರೀರಾಮಕೃಷ್ಣರು ಆಗ ಗಂಟಲು ಬೇನೆಯಿಂದ ನರಳುತ್ತಿದ್ದರು.) ಅವರು ತಮ್ಮ ದೇಹವನ್ನು ನಿರ್ದೇಶಿಸಿ ಹೇಳಿದರು: "ಇದು ಬಿರುಕು ಬಿಟ್ಟ ಮಡ್ಡಳೆಯಂತೆ. ಇನ್ನೂ ಹೆಚ್ಚು ಹೊಡೆದರೆ ಒಡೆದೇ ಹೋಗುತ್ತದೆ. ಆಮೇಲೇನು ಮಾಡುತ್ತೀ ?"

39. ಮತ್ತೆ ಇನ್ನೊಂದು ದಿನ ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಹತ್ತಿರ ಕುಳಿತಿದ್ದೆವು. ಆಗ ಕ್ರಿಸ್ತಶಕ ೧೮೮೪ ಅಕ್ಟೋಬರ್ ತಿಂಗಳು, ಇದಕ್ಕೆ ಕೆಲವು ದಿನಗಳ ಮುಂಚೆ

ಪ್ರತಾಪ್ ಹಾಜರಾನ ತಾಯಿಯು ರೋಗಗ್ರಸ್ತಳಾದ ಸುದ್ದಿ ಬಂದಿತ್ತು. ಶ್ರೀರಾಮ ಕೃಷ್ಣರು ಹಾಜರಾನನ್ನು ಬಹಳ ಒತ್ತಾಯ ಮಾಡಿ ಅವಳ ಸೇವೆ ಮಾಡಲು ಕಳುಹಿಸಿ ಕೊಟ್ಟಿದ್ದರು. ಆದರೆ ಸುದ್ದಿ ಬಂತು, ಪ್ರತಾಪಚಂದ್ರನು ಮನೆಗೆ ಹೋಗದೆ ದೇವ ಘರಕ್ಕೆ ಹೋಗಿದ್ದಾನೆ ಎಂದು. ಶ್ರೀರಾಮಕೃಷ್ಣರು ಇದನ್ನು ಕೇಳಿ ಸ್ವಲ್ಪ ಮುನಿಸಿ ಕೊಂಡರು. ಅದು ಇದು ಮಾತನಾಡುತ್ತಾ ಶ್ರೀರಾಮಕೃಷ್ಣರು ಒಂದು ಹಾಡನ್ನು ಹೇಳಲು ನಮಗೆ ಹೇಳಿದರು. ಸ್ವಲ್ಪಹೊತ್ತಿನ ನಂತರ ಶ್ರೀರಾಮಕೃಷ್ಣರಿಗೆ ಭಾವಾವೇಶ ವುಂಟಾಯಿತು. ಅಂದೂಕೂಡ ಅವರು ಬಾಲಕನಂತೆ ತಾಯಿಯೊಡನೆ ವಾದಿಸತೊಡಗಿ ದರು. ಅವರೆಂದರು: "ಕೆಲಸಕ್ಕೆ ಬಾರದ ಅಲೆಮಾರಿಗಳನ್ನೆಲ್ಲ ಏಕೆ ಇಲ್ಲಿಗೆ ಕರೆದುಕೊಂಡು ಬರುತ್ತಿದ್ದೀಯೆ ? (ಸ್ವಲ್ಪಹೊತ್ತು ಸುಮ್ಮನಿದ್ದು) ನಾನು ಅಷ್ಟೊಂದು ದುಡಿಯಲಾರೆ. ಒಂದು ಸೇರು ಹಾಲಿನಲ್ಲಿ ಕಾಲು ಸೇರಿನಷ್ಟು ನೀರಿದ್ದರೆ ಪರವಾಗಿಲ್ಲ. ಆದರೆ ಈಗ ನೀರು ತುಂಬಾ ಜಾಸ್ತಿಯಾಗಿಬಿಟ್ಟಿದೆ. ಒಂದು ಸೇರು ಹಾಲಿಗೆ ಐದು ಸೇರು ನೀರು ಬೆರೆಸಿದ್ದರೆ ಏನು ಮಾಡುವುದು ? ಗಾಳಿ ಊದಿ ಊದಿ ಸಾಕಾಯಿತು. ಹೊಗೆಯಿಂದ ಕಣ್ಣೆಲ್ಲಾ ಉರಿಯುತ್ತಿದೆ. ಬೇಕಾದರೆ ನೀನೇ ಹೋಗಿ ಮಾಡು. ನನಗೆ ಬೆಂಕಿ ಉರಿಸಿ ಉರಿಸಿ ಸಾಕಾ ಯಿತು. ಇನ್ನೆಂದೂ ಅಂಥವರನ್ನು ಕರೆದುಕೊಂಡು ಬರಬೇಡ." ಯಾರನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಶ್ರೀರಾಮಕೃಷ್ಣರು ಈ ಮಾತನ್ನು ಆಡುತ್ತಿದ್ದಾರೆ, ಅವರು ಎಂಥಾ ದುರದೃಷ್ಟಶಾಲಿ—ಇದನ್ನು ನೆನೆಸಿಕೊಡು ನಾವು ಭಯಚಕಿತರಾಗಿ ಸುಮ್ಮನೆ ಕುಳಿತು ಬಿಟ್ಟೆವು. ಹೀಗೆ ತಾಯಿಯೊಡನೆ ವಾದಿಸುವುದು ಶ್ರೀರಾಮಕೃಷ್ಣರಿಗೆ ಒಂದು ನಿತ್ಯಕರ್ಮ ವಾಗಿತ್ತು. ಇದರಿಂದ ನಮಗೆ ಏನು ತಿಳಿದುಬರುತ್ತದೆ ಎಂದರೆ, ಇತರರು ಆಚಾರ್ಯ ಪದವಿಯ ಸನ್ಮಾನಕ್ಕಾಗಿ ಬಾಯಿಬಿಡುತ್ತಾರೆ ; ಆದರೆ ಶ್ರೀರಾಮಕೃಷ್ಣರು ಅದನ್ನು ತುಚ್ಛವೆಂದು ಭಾವಿಸಿ ಅದನ್ನು ಹಿಂತೆಗೆದುಕೋ ಎಂದು ತಾಯಿಗೆ ಹೇಳುತ್ತಿದ್ದಾರೆ.

40. ಹೀಗೆ ಜಗನ್ಮಾತೆಯು ತನ್ನ ಅಚಿಂತ್ಯ ಲೀಲೆಯ ಮೂಲಕ ಶ್ರೀರಾಮ ಕೃಷ್ಣರು ತಮ್ಮ ಜೀವನದುದ್ದಕ್ಕೂ ಅದ್ಭುತ ಅನುಭವಗಳನ್ನು ಪಡೆಯುವಂತೆ ಮಾಡಿ ದಳು. ಅವರಲ್ಲಿ ಅತ್ಯಂತ ಉದಾರವಾದ ಆಧ್ಯಾತ್ಮಿಕ ಭಾವವು ಉದಯವಾಗುವಂತೆ ಮಾಡಿದಳು. ಇಂತಹ ಭಾವವನ್ನು ಜಗತ್ತಿನ ಇನ್ನಾವ ಮಹಾಪುರುಷರುಗಳಲ್ಲಿಯೂ ಉದಯವಾಗುವಂತೆ ಮಾಡಲಿಲ್ಲ. ಈ ವಿಷಯವನ್ನು ಶ್ರೀರಾಮಕೃಷ್ಣರಿಗೆ ತಿಳಿಸಿಕೊಟ್ಟ ವಳೂ ಅವಳೇ. ಅವರಲ್ಲಿ ಎಂತಹ ಅದ್ಭುತಶಕ್ತಿ ಅಡಗಿದೆ ಮತ್ತು ಈ ಶಕ್ತಿಯನ್ನು ಜಗ ತ್ತಿಗೆ ನೀಡುವುದಕ್ಕಾಗಿ ತಾನು ಅವರನ್ನು ಎಂತಹ ಅತ್ಯುತ್ತಮ ಉಪಕರಣವನ್ನಾಗಿ ರೂಪಿಸಿರುವೆನು ಎಂಬುದನ್ನೂ ಸಹ ಶ್ರೀರಾಮಕೃಷ್ಣರಿಗೆ ತಿಳಿಸಿಕೊಟ್ಟಳು. ಶ್ರೀರಾಮ ಕೃಷ್ಣರು ಹೊರ ಜಗತ್ತಿನಲ್ಲಿ ಪೂರ್ಣ ಆಧ್ಯಾತ್ಮಿಕ ಕೊರತೆಯನ್ನು ಕಂಡರು. ಮಾತೆಯ ಅನುಗ್ರಹದಿಂದ ಅದನ್ನು ಹೋಗಲಾಡಿಸುವ ಪ್ರಚಂಡ ಶಕ್ತಿಯು ತಮ್ಮಲ್ಲಿರುವುದೆಂಬು ದನ್ನು ಕಂಡುಕೊಂಡರು. ಈ ಯುಗದಲ್ಲಿ ಮಾತೆಯು ರಕ್ತಬೀಜಾಸುರನನ್ನು ಕೊಲ್ಲಲು ಮತ್ತೆ ಯುದ್ಧಭೂಮಿಗೆ ಇಳಿದಿರುವಳು ಎಂಬುದನ್ನು ಶ್ರೀರಾಮಕೃಷ್ಣರು ಅರ್ಥ ಮಾಡಿ

ಕೊಂಡರು. ಅಜ್ಞಾನದಿಂದುಂಟಾದ ಮೋಹವೇ ಇಲ್ಲಿ ಆ ಅಸುರರು. ಇಡೀ ಜಗತ್ತಿನ ಜನರೇ ಮಾತೆಯ ಈ ಕರುಣಾ ಲೀಲೆಯನ್ನು ವೀಕ್ಷಿಸಿ ಧನ್ಯರಾಗುವರು ಮತ್ತು ಆನಂದ ಹಾಗೂ ಕೃತಜ್ಞತೆಯಿಂದ ಆಕೆಯನ್ನು ಕೊಂಡಾಡುವರು ಎಂದು ಶ್ರೀರಾಮಕೃಷ್ಣರು ಭಾವಿಸಿದರು. ಅತಿಯಾದ ಉಷ್ಣತೆ ಮೋಡವನ್ನು ಸೃಷ್ಟಿಸುವಂತೆ, ಇಳಿತದ ನಂತರ ಉಬ್ಬರ ಬರುವಂತೆ ಮತ್ತು ವಿಪತ್ತಿನ ನಂತರ ಸಂಪತ್ತು ವೃದ್ಧಿಸುವಂತೆ ಅಸಂಖ್ಯ ಜನರ ಬಹುಕಾಲದ ಹೃದಯದ ಕೊರತೆಯನ್ನು ನೀಗಿಸಲು ಜಗನ್ಮಾತೆಯ ಕರುಣೆಯು ಗುರುವಿನ ರೂಪದಲ್ಲಿ ಕಾಣಿಸಿಕೊಳ್ಳುವುದು. ಆ ಗುರುವು ಜನರೊಡನೆ ಬೆರೆತು ಬಾಳುವನು. ಜಗನ್ಮಾತೆಯು ತನ್ನ ಕೃಪೆಯಿಂದ ಶ್ರೀರಾಮಕೃಷ್ಣರಿಗೆ ಈ ವಿಷಯ ಸ್ಪಷ್ಟವಾಗುವಂತೆ ಮಾಡಿದಳು, ತಾನು ಅವರೊಡನೆ ಹಿಂದೆ ಅನೇಕ ಬಾರಿ ಈ ರೀತಿ ಆಟ ಆಡಿರುವೆ, ಮತ್ತೆ ಮುಂದೆಯೂ ಆಡುವುದಿದೆ ಎಂಬುದನ್ನೂ ತೋರಿಸಿಕೊಟ್ಟಳು. ಜನಸಾಮಾನ್ಯರಂತೆ ಅವರಿಗೆ ಮುಕ್ತಿ ಇಲ್ಲ. 'ಅವರು ಸರ್ಕಾರಿ ಅಧಿಕಾರಿ ಇದ್ದ ಹಾಗೆ. ಮಾತೆಯ ರಾಜ್ಯದಲ್ಲಿ ಎಲ್ಲಿ ಏನು ತೊಂದರೆ ಉಂಟಾದರೂ ಅವರು ಅದನ್ನು ಸರಿಪಡಿಸಲು ಹೋಗಬೇಕು.' ಶ್ರೀರಾಮಕೃಷ್ಣರಿಗೆ ಈಗ ಈ ಎಲ್ಲ ವಿಷಯಗಳೂ ಸ್ಪಷ್ಟವಾಗತೊಡಗಿದವು.

41. ಜಗನ್ಮಾತೆಯು ತನ್ನ ಕೃಪೆಯಿಂದ "ಎಷ್ಟು ಮತವೋ ಅಷ್ಟು ಪಥ" ಎಂಬ ಉದಾರ ಸತ್ಯವನ್ನು ಶ್ರೀರಾಮಕೃಷ್ಣರಿಗೆ ತೋರಿಸಿಕೊಟ್ಟಳು. ಇದನ್ನು ಅರ್ಥ ಮಾಡಿಕೊಂಡ ಮೇಲೆ ಅವರು ಈ ಸತ್ಯವನ್ನು ಸ್ವೀಕರಿಸುವ ಪುಣ್ಯ ವ್ಯಕ್ತಿಗಳು ಯಾರು ಎಂಬುದನ್ನು ಯೋಚಿಸತೊಡಗಿದರು. ಇದರಿಂದ ತಮ್ಮ ಜೀವನವನ್ನು ಉತ್ತಮಪಡಿಸಿಕೊಳ್ಳುವುದಲ್ಲದೆ ಜಗತ್ತಿಗೂ ಇದನ್ನು ಸಾರಿ ಜಗನ್ಮಾತೆಯ ಈ ಲೀಲೆಯಲ್ಲಿ ಭಾಗಿಗಳಾಗುವವರು ಯಾರು ಎಂಬ ವಿಚಾರದಲ್ಲಿ ಅವರು ಕಾತರರಾಗಿದ್ದರು. ಹಿಂದೆ ಮಥುರಾನಾಥ ಮತ್ತು ಶ್ರೀರಾಮಕೃಷ್ಣ ಇವರ ಪ್ರೀತಿಯ ಸಂಬಂಧವಾಗಿ ಹೇಳುವಾಗ ಅವರು ತಮ್ಮ ಭಕ್ತರನ್ನು ದಿವ್ಯದರ್ಶನದಲ್ಲಿ ಕಂಡ ವಿಷಯವನ್ನು ಆಗಲೇ ತಿಳಿಸಿರುವೆವು. ಜಗನ್ಮಾತೆಯ ಅಚಿಂತ್ಯ ಲೀಲೆಯಿಂದ ಶ್ರೀರಾಮಕೃಷ್ಣರ ಪರಿಶುದ್ಧ ಮನಸ್ಸಿಗೆ ಈಗ ಆ ಭಕ್ತರ ಮುಖಗಳು ಜೀವಂತವಾಗಿ ಕಾಣಿಸಿಕೊಳ್ಳತೊಡಗಿದವು. ಅವರು ಎಷ್ಟು ಜನ ಬರುತ್ತಾರೆ, ಯಾವಾಗ ಬರುತ್ತಾರೆ, ಯಾರಿಂದ ಯಾವ ಕೆಲಸ ಆಗಬೇಕಾಗಿದೆ, ಯಾರು ಅವರಲ್ಲಿ ಸಂನ್ಯಾಸಿಗಳಾಗುತ್ತಾರೆ ಅಥವಾ ಗೃಹಸ್ಥರಾಗಿ ಉಳಿಯುತ್ತಾರೆ, ಅವರಲ್ಲಿ ಯಾರು ಜಗನ್ಮಾತೆಯ ಲೀಲೆಯನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು ಸಮರ್ಥರು, ಯಾರು ಆಂಶಿಕವಾಗಿ ಮಾತ್ರ ಅರ್ಥಮಾಡಿಕೊಳ್ಳುತ್ತಾರೆ—ಈ ಎಲ್ಲ ವಿಷಯಗಳನ್ನು ಜಗನ್ಮಾತೆಯು ಅವರಿಗೆ ತೋರಿಸಿಕೊಟ್ಟಳು. ಅವರು ನಮಗೆ ಹೇಳುತ್ತಿದ್ದರು : "ಆಗ ನನಗೆ ನಿಮ್ಮನ್ನೆಲ್ಲ ನೋಡಬೇಕೆಂಬ ತೀವ್ರವಾದ ವ್ಯಾಕುಲತೆ ಉಂಟಾಯಿತು. ಒದ್ದೆಯ ಟವಲನ್ನು ಹಿಂಡಿದಂತೆ ನನ್ನ ಹೃದಯಕ್ಕೆ ವೇದನೆಯುಂಟಾಗುತ್ತಿತ್ತು. ನನಗೆ ಅಳಬೇಕೆನಿಸುತ್ತಿತ್ತು. ಉಳಿದವರು ರಾದ್ಧಾಂತ ಮಾಡುತ್ತಾರೆಂದು ನಾನು ಹಾಗೆ ಮಾಡಲಿಲ್ಲ, ಹೇಗೋ ಕಷ್ಟ ಪಟ್ಟು ತಡೆದುಕೊಂಡಿದ್ದೆ. ಆದರೆ ದಿನ ಕಳೆದು

ರಾತ್ರಿಯಾಗುತ್ತಿದ್ದಂತೆಯೇ, ದೇವಾಲಯಗಳಲ್ಲಿ ಆರತಿ ಪ್ರಾರಂಭವಾಗುತ್ತಿದ್ದಂತೆಯೇ, ನಾನು ಅತ್ಯಂತ ವ್ಯಾಕುಲನಾಗುತ್ತಿದ್ದೆ. ತಡೆಯಲಾಗದೆ, ಮತ್ತೊಂದು ದಿನ ಕಳೆದು ಹೋಯಿತಲ್ಲ, ಆದರೆ ಅವರಿನ್ನೂ ಬರಲೇ ಇಲ್ಲವಲ್ಲ ಎಂದು ಯೋಚಿಸುತ್ತಾ ಮರುಗುತ್ತಿದ್ದೆ. ಕುಟಿಯ ಮಹಡಿಯ ಮೇಲೆ ಹತ್ತಿ 'ನೀವೆಲ್ಲಾ ಎಲ್ಲಿದ್ದೀರಿ, ಬನ್ನಿ' ಎಂದು ಕೂಗಿ ಕರೆಯುತ್ತಾ ರೋದಿಸುತ್ತಿದ್ದೆ. ಓ, ನಾನು ಹುಚ್ಚನಾಗುತ್ತೇನೆ ಎಂದೆನಿಸುತ್ತಿತ್ತು. ಅನಂತರ ಕೆಲವು ದಿನಗಳ ಮೇಲೆ ನೀವೆಲ್ಲಾ ಒಬ್ಬೊಬ್ಬರಾಗಿ ಬರತೊಡಗಿದಿರಿ. ಆಗ ನನಗೆ ಸ್ವಲ್ಪ ಶಾಂತಿಯುಂಟಾಯಿತು. ಮೊದಲೇ ನೋಡಿದ್ದರಿಂದಲೇ ನೀವು ಬಂದ ಹಾಗೆಲ್ಲಾ ನಾನು ಗುರುತಿಸಲು ಸಾಧ್ಯವಾಯಿತು. ಅನಂತರ ಪೂರ್ಣನು ಬಂದಾಗ ತಾಯಿಯು ಹೇಳಿದಳು: 'ಈ ಪೂರ್ಣನೊಂದಿಗೆ ನೀನು ಯಾರ್‍ಯಾರು ಬರುತ್ತಾರೆಂದು ನೋಡಿದ್ದೆಯೋ ಅವರೆಲ್ಲಾ ಬರುವುದು ಪೂರ್ಣವಾಯಿತು. ಈ ಶ್ರೇಣಿಯ ಜನರು ಇನ್ನು ಯಾರೂ ಬರುವವರಿಲ್ಲ.' ತಾಯಿಯು ನನಗೆ ತಿಳಿಸಿರುವಳು 'ಇವರೆಲ್ಲ ನಿನ್ನ ಅಂತರಂಗದವರು' ಎಂದು." ಅದ್ಭುತ ದರ್ಶನ—ಅದರ ಸಫಲತೆಯು ಅದ್ಭುತ ! ಶ್ರೀರಾಮಕೃಷ್ಣರ ಈ ಎಲ್ಲ ಮಾತುಗಳನ್ನು ನಿಮಗೆ ಎಷ್ಟರ ಮಟ್ಟಿಗೆ ಅರ್ಥಮಾಡಿಕೊಳ್ಳಲು ಸಾಧ್ಯ ? ಶ್ರೀರಾಮಕೃಷ್ಣರು ಈಗಿನ ಸ್ಥಿತಿಯ ಬಗ್ಗೆ ಈ ಹಿಂದೆ ನಾವು ಏನೇನು ಹೇಳಿದ್ದೆವೋ ಅವೆಲ್ಲ ಕೇವಲ ಕಲ್ಪನೆಯ ಮಾತುಗಳಲ್ಲ, ಪಾಠಕರಿಗೆ ಇದನ್ನು ಸೂಚಿಸುವುದಕ್ಕಾಗಿಯೇ ನಾವು ಶ್ರೀರಾಮಕೃಷ್ಣರ ಈ ಮಾತುಗಳನ್ನು ಇಲ್ಲಿ ಉಲ್ಲೇಖಿಸಿದೆವು.

42. ತಮ್ಮ ಉದಾರ ಮತದ ಅನುಭವ ಮತ್ತು ಅದನ್ನು ಗ್ರಹಿಸುವ ಅಧಿಕಾರಿಗಳಾರು ಎಂಬುದನ್ನು ನಿರ್ಣಯಿಸುವಾಗ ಶ್ರೀರಾಮಕೃಷ್ಣರಿಗೆ ಇನ್ನೊಂದು ವಿಷಯವು ಗಮನಕ್ಕೆ ಬಂತು. ಅದನ್ನು ಅವರು ನಮಗೆ ಅನೇಕ ಬಾರಿ ತಿಳಿಸಿರುವರು. ಅವರು ಹೇಳುತ್ತಿದ್ದರು: "ಯಾರದು ಕೊನೆಯ ಜನ್ಮವೋ ಅವರು ಇಲ್ಲಿಗೆ ಬರುತ್ತಾರೆ. ಯಾರು ಒಮ್ಮೆಯಾದರೂ ಭಗವಂತನನ್ನು ಹೃತ್ಪೂರ್ವಕ ಕರೆದಿರುವರೋ ಅವರು ಇಲ್ಲಿಗೆ ಬರಲೇಬೇಕು." ಈ ಮಾತನ್ನು ಕೇಳಿದವರ ಮನಸ್ಸಿನಲ್ಲಿ ಏನೇನು ಆಲೋಚನೆಗಳು ಉದಯಿಸಿದವು ಎಂಬುದನ್ನು ಹೇಳುವುದು ತುಂಬಾ ಕಷ್ಟ. ಕೆಲವರು ಭಾವಿಸಿದರು ಅದು ಸಂಪೂರ್ಣ ಯುಕ್ತಿಹೀನವಾದುದು. ಕೆಲವರು ಶ್ರೀರಾಮಕೃಷ್ಣರ ಭಕ್ತಿವಿಶ್ವಾಸದಿಂದ ಉಂಟಾದ ಅಸಂಬದ್ಧ ಪ್ರಲಾಪ ಎಂದು ಭಾವಿಸಿದರು. ಮತ್ತೆ ಕೆಲವರು ಇದು ಶ್ರೀರಾಮಕೃಷ್ಣರ ಬುದ್ಧಿಭ್ರಮಣೆಯ ಫಲ ಅಥವಾ ಇದು ಅವರ ಅಹಂಕಾರವನ್ನು ಸೂಚಿಸುತ್ತದೆ ಎಂದೆಲ್ಲಾ ಚಿಂತಿಸಿದರು. ಮತ್ತೆ ಕೆಲವರು ಇದು ನಮಗೆ ಅರ್ಥವಾಗದಿದ್ದರೂ ಶ್ರೀರಾಮಕೃಷ್ಣರು ಹೇಳುತ್ತಿರುವುದರಿಂದ ಸತ್ಯವಾಗಿರಬಹುದೆಂದು ಆಲೋಚಿಸಿದರು. ಈ ರೀತಿ ಯೋಚಿಸಿ ಇದರ ಬಗ್ಗೆ ವಾದಿಸುವುದರಿಂದ ವಿಶ್ವಾಸಹಾನಿಯಾಗುವುದೆಂದು ಭಾವಿಸಿ ಕಣ್ಣು, ಕಿವಿ ಮುಚ್ಚಿಕೊಂಡರು. ಮತ್ತೆ ಕೆಲವರು ಶ್ರೀರಾಮಕೃಷ್ಣರೇ ತಿಳಿಸಿಕೊಟ್ಟರೆ ಅರ್ಥಮಾಡಿಕೊಳ್ಳುತ್ತೇವೆ ಎಂದು ಭಾವಿಸಿ ಆ ಮಾತಿನಲ್ಲಿ ವಿಶ್ವಾಸ ಅಥವಾ ಅವಿಶ್ವಾಸ ಎರಡನ್ನೂ ಇರಿಸದೆ ತಟಸ್ಥರಾಗಿದ್ದರು. ಆದರೆ ಅಹಂಕಾರಕ್ಕೆ ಎಡೆಗೊಡದೆ ಜಗನ್ಮಾ

ತೆಯೇ ಶ್ರೀರಾಮಕೃಷ್ಣರಿಗೆ ಉದಾರ ಅನುಭವವನ್ನಿತ್ತು ಅವರನ್ನು ಆಚಾರ್ಯ ಪದವಿಯಲ್ಲಿ ಕೂರಿಸಿದವಳು. ಈ ಮಾತನ್ನು ನಾವು ನೆನಸಿಕೊಂಡಾಗ ಅವರ ಈ ಮೇಲಿನ ಮಾತಿನ ಅರ್ಥವಾಗುವುದು ಕಷ್ಟವಾಗುವುದಿಲ್ಲ. ಇಷ್ಟೇ ಅಲ್ಲದೆ ಸ್ವಲ್ಪ ವಿಚಾರ ಮಾಡಿದರೆ ನಮಗೆ ತಿಳಿಯುತ್ತದೆ, ಶ್ರೀರಾಮಕೃಷ್ಣರ ಈ ಮಾತು ಅವರು ಸಹಜವಾಗಿಯೂ ಸ್ವಾಭಾವಿಕವಾಗಿಯೂ ವರ್ತಮಾನದ ಉಚ್ಚ ಆಧ್ಯಾತ್ಮಿಕ ಸ್ಥಿತಿಯನ್ನು ಏರಿರುವರು ಎಂಬುದಕ್ಕೆ ಪ್ರಮಾಣಸ್ವರೂಪವಾಗಿದೆ ಎಂದು.

43. ಶ್ರೀರಾಮಕೃಷ್ಣರು ಮಗುವಿನಂತೆ ಎಲ್ಲದಕ್ಕೂ ಜಗನ್ಮಾತೆಯನ್ನೇ ಆಶ್ರಯಿಸಿದ್ದುದರಿಂದ ತಮ್ಮಲ್ಲಿರುವ ಅದ್ಭುತ ಆಧ್ಯಾತ್ಮಿಕ ಶಕ್ತಿ ಮತ್ತು ಇತರರಿಗೆ ಅದನ್ನು ನೀಡುವ ಸಾಮರ್ಥ್ಯ ಇವು ತಮ್ಮ ಪ್ರಯತ್ನದ ಫಲ ಎಂದು ಅವರು ಎಂದೂ ಭಾವಿಸಿದವರಲ್ಲ. ಅದರಲ್ಲಿ ಅವರು ಜಗನ್ಮಾತೆಯ ಲೀಲೆಯನ್ನೆ ಕಂಡರು. ಆ ಅದ್ಭುತ ಲೀಲೆಯನ್ನು ಕಂಡು ಆಶ್ಚರ್ಯಚಕಿತರಾದರು. ಎಂಥಾ ಅದ್ಭುತಲೀಲೆ ತಾಯಿಯದು ! ಅವಳು ಅಸಾಧ್ಯವನ್ನೂ ಸಾಧಿಸುತ್ತಾಳೆ. ತಮ್ಮಂತಹ ಅನಕ್ಷರಸ್ಥನಿಂದಲೂ ಅದ್ಭುತ ಕೆಲಸ ಮಾಡಿಸುತ್ತಿರುವಳು ! ಆಕೆಯ ಇಂದಿನ ಲೀಲೆಯು ಹಿಂದಿನ ಎಲ್ಲಾ ಲೀಲೆಗಳನ್ನೂ ನೂರುಪಾಲು, ಸಾವಿರಪಾಲು ಮೀರಿಸುವುದು. ಮೂಕನನ್ನು ವಾಗ್ಮಿಯನ್ನಾಗಿಯೂ ಹೆಳವನನ್ನು ಪರ್ವತಾರೋಹಿಯನ್ನಾಗಿಯೂ ಮಾಡುತ್ತಿರುವಳು. ಜನರು ಮುಗ್ಧರಾಗಿ ಆಕೆಯನ್ನು ಕೊಂಡಾಡುತ್ತಿರುವರು ! ಮಾತೆಯ ಈ ಲೀಲೆಯಿಂದ ವೇದ, ಬೈಬಲ್, ಪುರಾಣ, ಖುರಾನ್ ಮುಂತಾದ ಶಾಸ್ತ್ರಗಳೆಲ್ಲವೂ ಸತ್ಯವೆಂದು ಪ್ರಮಾಣೀಕರಿಸಲ್ಪಟ್ಟವು. ಧರ್ಮವು ಸಂಸ್ಥಾಪಿಸಲ್ಪಟ್ಟಿತು. ಹಿಂದೆಂದೂ ನೀಗಿಸಲಾಗದ ಜಗತ್ತಿನ ಕೊರತೆಯನ್ನು ನೀಗಿಸಿರುವಳು. ಧನ್ಯ ಮಾತೆ, ಧನ್ಯ ಲೀಲಾಮಯಿ ಬ್ರಹ್ಮಶಕ್ತಿ ! ಇಂಥ ಭಾವನೆಗಳೇ ಶ್ರೀರಾಮಕೃಷ್ಣರ ಮನಸ್ಸನ್ನು ತುಂಬಿದ್ದವು. ಶ್ರೀರಾಮಕೃಷ್ಣರು ಈ ಅನುಭವವನ್ನು ಸಂಪೂರ್ಣ ಸತ್ಯವೆಂದು ಸ್ವೀಕರಿಸಿದರು. ತಾಯಿಯ ಈ ಲೀಲೆಯ ವ್ಯಾಪ್ತಿಯೇನು ? ಇದರಲ್ಲಿ ಯಾರು ತಮಗೆ ಸಹಾಯಕರಾಗುತ್ತಾರೆ ? ಯಾರಲ್ಲಿ ಈ ಶಕ್ತಿಯ ಬೀಜವು ಮೊಳೆಯುತ್ತದೆ ಎಂಬುದನ್ನೆಲ್ಲ ಅವರು ಆಕೆಯನ್ನು ಕೇಳಿದರು. ಇದಕ್ಕೆ ಉತ್ತರವಾಗಿ ಶ್ರೀರಾಮಕೃಷ್ಣರು ಅಂತರಂಗ ಭಕ್ತರ ದರ್ಶನವನ್ನು ಪಡೆದರು. ಯಾರದು ಕೊನೆಯ ಜನ್ಮವೋ ಯಾರು ಭಗವಂತನಿಗಾಗಿ ಅತ್ಯಂತ ಪ್ರಾಮಾಣಿಕತೆಯಿಂದ ಒಮ್ಮೆಯಾದರೂ ಅವನನ್ನು ಕರೆದಿರುವರೋ ಅವರೇ ಈ ಅದ್ಭುತ ಉದಾರ ಹೊಸ ಮತವನ್ನು ಸ್ವೀಕರಿಸಲು ಯೋಗ್ಯರು ಎಂಬ ವಿಶ್ವಾಸವು ಅವರಿಗುಂಟಾಯಿತು. ಇದೂ ಕೂಡ ಅವರು ಜಗನ್ಮಾತೆಯನ್ನು ಸಂಪೂರ್ಣವಾಗಿ ಅವಲಂಬಿಸಿದುದರ ಫಲವೇ. ಮಾತೆಯನ್ನು ಅವಲಂಬಿಸಿದ ಬಾಲಕನು ಇದಲ್ಲದೆ ಬೇರೆ ಯಾವ ನಿರ್ಣಯಕ್ಕೂ ಬರಲು ಸಾಧ್ಯವಿಲ್ಲ. ಇದರಿಂದಾಗಿ ಲೇಶಮಾತ್ರವೂ ಅಹಂಕಾರ ಅವರಲ್ಲಿರಲಿಲ್ಲ.

44. ಆದ್ದರಿಂದ 'ಯಾರದು ಕೊನೆಯ ಜನ್ಮವೋ ಅವರು ಇಲ್ಲಿಗೆ ಬರಬೇಕು, ಒಮ್ಮೆಯಾದರೂ ಭಗವಂತನನ್ನು ನಿಜವಾಗಿಯೂ ಕರೆದಿರುವವರು ಇಲ್ಲಿಗೆ ಬರಲೇ ಬೇಕು'

—ಶ್ರೀರಾಮಕೃಷ್ಣರ ಈ ಮಾತಿನಲ್ಲಿರುವ "ಇಲ್ಲಿ" ಎಂಬ ಶಬ್ದಕ್ಕೆ "ತಾಯಿಯ ಹೊಸ ಉದಾರ ಭಾವ" ಎಂಬ ಅರ್ಥವನ್ನು ನೀಡಬಹುದು. ಹಾಗೆ ಮಾಡಿದಾಗ ಅದು ಯುಕ್ತಿ ಹೀನವಾಗುವುದಿಲ್ಲ ಮತ್ತು ಯಾರೂ ಅದನ್ನು ಆಕ್ಷೇಪಿಸಲಾರರು. ಆದರೆ ಈ ಅರ್ಥ ವನ್ನು ಸ್ವೀಕರಿಸಿದಾಗ ಇನ್ನೊಂದು ಪ್ರಶ್ನೆ ಏಳುವುದು : ಅವರು ಜಗನ್ಮಾತೆಯ 'ಎಷ್ಟು ಮತವೋ ಅಷ್ಟು ಪಥ' ಎಂಬ ಉದಾರ ಭಾವವನ್ನು ತಾವಾಗಿಯೇ ನೇರವಾಗಿ ಸ್ವೀಕರಿ ಸುತ್ತಾರೋ ಅಥವಾ ಆಕೆಯ ಯಂತ್ರ ಸ್ವರೂಪವಾಗಿರುವ ಶ್ರೀರಾಮಕೃಷ್ಣರನ್ನು ಆಶ್ರಯಿಸುತ್ತಾರೋ ? ಈ ಪ್ರಶ್ನೆಗೆ ಉತ್ತರವನ್ನು ಪ್ರತಿಯೊಬ್ಬರೂ ತಮ್ಮ ತಮ್ಮ ಅನುಭವಗಳ ಆಧಾರದ ಮೇಲೆ ನಿರ್ಧರಿಸಿಕೊಳ್ಳಬೇಕಾಗುತ್ತದೆ. ಈ ಉದಾರ ತತ್ತ್ವದ ಅನುಭವದ ಫಲವೇ ಇದಕ್ಕೆ ಉತ್ತರ ನೀಡಬಲ್ಲುದಾಗಿದೆ. ಎಲ್ಲಿಯವರೆಗೆ ಆ ಅನುಭವವು ಉಂಟಾಗುವುದಿಲ್ಲವೋ ಅಲ್ಲಿಯವರೆವಿಗೂ ಸುಮ್ಮನಿರುವುದೇ ಉಚಿತವೆಂದು ನಮಗನಿ ಸುತ್ತದೆ. ಈ ವಿಷಯದಲ್ಲಿ ನಮ್ಮ ಅಭಿಪ್ರಾಯವೇನು ಎಂದು ನೀವು ಕೇಳುವುದಾದರೆ ನಾವು ಹೀಗೆ ಹೇಳಬೇಕಾಗುತ್ತದೆ : ಈ ಉದಾರ ಭಾವವನ್ನು ನಿಜವಾಗಿಯೂ ಅನುಭವಿ ಸಿದವರು ಜಗದಂಬೆಯು ಯಾರ ಮೂಲಕ ಇದನ್ನು ಜಗತ್ತಿನಲ್ಲಿ ಪ್ರಥಮ ಬಾರಿಗೆ ಪ್ರಚಾರ ಮಾಡಿದಳೋ ಅವರ ದರ್ಶನವನ್ನು ಪಡೆಯಲೇ ಬೇಕು ಮತ್ತು ಅವರಿಗೆ ಶ್ರದ್ಧಾ ಭಕ್ತಿಯನ್ನು ತೋರಿಸಲೇ ಬೇಕು. ಶ್ರೀರಾಮಕೃಷ್ಣರು ಇದನ್ನು ಅಪೇಕ್ಷಿಸುವು ದಿಲ್ಲ. ಇತರರಾರನ್ನೂ ಈ ರೀತಿ ಮಾಡಲು ಒತ್ತಾಯಿಸುವುದೂ ಇಲ್ಲ. ಆದರೆ ಅವರು ಜಗನ್ಮಾತೆಯ ಮೇಲಿನ ಪ್ರೇಮದಿಂದಾಗಿ ಸ್ವಪ್ರೇರಣೆಯಿಂದಲೇ ಆ ರೀತಿ ಮಾಡುತ್ತಾರೆ. ಈ ವಿಷಯದಲ್ಲಿ ಹೆಚ್ಚು ಹೇಳುವುದು ಪ್ರಯೋಜನವಿಲ್ಲ.

45. ಜಗನ್ಮಾತೆಯ ಇಚ್ಛೆಯಿಂದ ಯಾರಲ್ಲಿ ಗುರುಭಾವವು ಸ್ವಲ್ಪ ಮಟ್ಟಿ ಗಾದರೂ ಜಾಗ್ರತವಾಗುವುದೋ ಆ ವ್ಯಕ್ತಿಯ ಕಾರ್ಯಕಲಾಪಗಳು, ಚಲನವಲನಗಳು ಮತ್ತು ಇತರರ ಮೇಲೆ ಅವನು ತೋರಿಸುವ ಅಹೇತುಕ ಕರುಣೆ ಇವೆಲ್ಲ ಮಾನವ ಬುದ್ಧಿಗೆ ನಿಲುಕದವು. ತಂತ್ರವು ಇದನ್ನು ಮತ್ತೆ ಮತ್ತೆ ಸಾರುತ್ತದೆ. ಈ ರೀತಿಯ ಭಾವ ಪ್ರಕಾಶವನ್ನು ತಂತ್ರವು ದಿವ್ಯ ಭಾವ ಎಂದು ಕರೆಯುತ್ತದೆ. ಇಂಥಾ ದಿವ್ಯಭಾವ ದಿಂದ ಕೂಡಿದ ವ್ಯಕ್ತಿಗಳು ಇತರರಿಗೆ ನೀಡುವ ಉಪದೇಶ, ದೀಕ್ಷೆ ಮುಂತಾದುವುಗಳು ಶಾಸ್ತ್ರ ವಿಧಿನಿಯಮಗಳ ಪರಿಧಿಯ ಹೊರಗೆ ಇರುತ್ತವೆ ಎಂಬುದನ್ನು ತಂತ್ರ ತಿಳಿಸು ತ್ತದೆ. ಅವರಿಗೆ ಯಾರ ಮೇಲಾದರೂ ಕರುಣೆ ಉಂಟಾದರೆ ಇಚ್ಛೆ ಅಥವಾ ಸ್ಪರ್ಶಮಾತ್ರ ದಿಂದಲೇ ಆ ವ್ಯಕ್ತಿಯಲ್ಲಿ ಆಧ್ಯಾತ್ಮಿಕ ಶಕ್ತಿಯನ್ನು ಜಾಗ್ರತಗೊಳಿಸಿ ಅವನನ್ನು ಸಮಾ ಧಿಗೆ ಏರಿಸಬಲ್ಲರು, ಅಥವಾ ಅವನಲ್ಲಿ ಆಂಶಿಕವಾಗಿ ಆಸಕ್ತಿಯನ್ನು ಜಾಗ್ರತಗೊಳಿಸಿ ಅವನು ಅದರ ಮೂಲಕ ಈ ಜನ್ಮದಲ್ಲಿಯೇ ಸಿದ್ಧಿಯನ್ನು ಪಡೆಯುವಂತೆ ಮಾಡಬಲ್ಲರು.

46. ತಂತ್ರವು ಹೇಳುತ್ತದೆ : ಗುರುಭಾವವು ಸ್ವಲ್ಪಮಟ್ಟಿಗೆ ಜಾಗ್ರತವಾದಾಗ ಆಚಾರ್ಯನು ಶಿಷ್ಯನಿಗೆ "ಶಾಕ್ತೀ" ಎಂಬ ದೀಕ್ಷೆಯನ್ನು ನೀಡುತ್ತಾನೆ ಮತ್ತು ಗುರು ಭಾವವು ವಿಶೇಷ ರೀತಿಯಲ್ಲಿ ಜಾಗ್ರತವಾದಾಗ "ಶಾಂಭವೀ" ಎಂಬ ದೀಕ್ಷೆಯನ್ನು

ನೀಡಲು ಸಮರ್ಥನಾಗುತ್ತಾನೆ. ಸಾಮಾನ್ಯಗುರುಗಳು ತಂತ್ರದ ಪ್ರಕಾರ "ಮಾಂತ್ರೀ" ಅಥವಾ "ಮಾನವೀ" ಎಂಬ ದೀಕ್ಷೆಯನ್ನು ನೀಡಬಹುದು. ಶಾಕ್ತೀ ಮತ್ತು ಶಾಂಭವೀ ದೀಕ್ಷೆಯ ಬಗ್ಗೆ ರುದ್ರಯಾಮಲ, ಷಡನ್ವಯ, ಮಹಾರತ್ನ, ವಾಯವೀಯ ಸಂಹಿತಾ, ಶಾರದಾ, ವಿಶ್ವಸಾರ ಮುಂತಾದ ತಂತ್ರಗಳು ಒಂದೇ ಅಭಿಪ್ರಾಯವನ್ನು ಸೂಚಿಸುತ್ತವೆ. ಇಲ್ಲಿ ವಾಯವೀಯ ಸಂಹಿತೆಯ ಶ್ಲೋಕಗಳನ್ನು ಉದ್ಧರಿಸುತ್ತೇವೆ.

ಶಾಂಭವೀ ಚೈವ ಶಾಕ್ತೀ ಚ ಮಾಂತ್ರೀ ಚೈವ ಶಿವಾಗಮೇ ।
ದೀಕ್ಷೋಪದಿಶ್ಯತೇ ತ್ರೈಧಾ ಶಿವೇನ ಪರಮಾತ್ಮನಾ ॥
ಗುರೋರಾಲೋಕಮಾತ್ರೇಣ ಸ್ಪರ್ಶಾತ್ ಸಂಭಾಷಣಾದಪಿ ।
ಸದ್ಯಃ ಸಂಜ್ಞಾ ಭವೇಜ್ಜಂತೋರ್ದೀಕ್ಷಾ ಸಾ ಶಾಂಭವೀ ಮತಾ ॥
ಶಾಕ್ತೀ ಜ್ಞಾನವತೀ ದೀಕ್ಷಾ ಶಿಷ್ಯದೇಹಂ ಪ್ರವಿಶ್ಯತಿ ।
ಗುರುಣಾ ಜ್ಞಾನಮಾರ್ಗೇನ ಕ್ರಿಯತೇ ಜ್ಞಾನಚಕ್ಷುಷಾ ॥
ಮಾಂತ್ರೀ ಕ್ರಿಯಾವತೀ ದೀಕ್ಷಾ ಕುಂಭಮಂಡಲಪೂರ್ವಿಕಾ ।

ಅರ್ಥ: ಆಗಮಶಾಸ್ತ್ರದಲ್ಲಿ ಪರಮಾತ್ಮನಾದ ಶಿವನು ಮೂರು ಬಗೆಯ ದೀಕ್ಷೆಯನ್ನು ಉಪದೇಶಿಸಿರುವನು—ಶಾಂಭವೀ, ಶಾಕ್ತೀ ಮತ್ತು ಮಾಂತ್ರೀ. ಶಾಂಭವೀ ದೀಕ್ಷೆಯೆಂದರೆ ಗುರುವಿನ ದರ್ಶನ ಸ್ಪರ್ಶ ಅಥವಾ ಸಂಭಾಷಣೆಯ ಮೂಲಕವೇ ಜೀವನಿಗೆ ಹಠಾತ್ತನೆ ಜ್ಞಾನೋದಯವಾಗುವುದು. ಶಾಕ್ತೀ ದೀಕ್ಷೆಯ ಮೂಲಕ ಗುರುವು ದಿವ್ಯಜ್ಞಾನದ ಸಹಾಯದಿಂದ ಶಿಷ್ಯನಲ್ಲಿ ತನ್ನ ಶಕ್ತಿಯು ಪ್ರವೇಶಿಸುವಂತೆ ಮಾಡಿ ಅವನಲ್ಲಿ ಆಧ್ಯಾತ್ಮಿಕ ಭಾವವನ್ನು ಜಾಗ್ರತಗೊಳಿಸುವನು. ಮಾಂತ್ರೀ ದೀಕ್ಷೆಯ ಪ್ರಕಾರ ಗುರುವು ಮಂಡಲ, ಘಟಸ್ಥಾಪನೆ ಮತ್ತು ದೇವತಾರ್ಚನೆ ಇವುಗಳ ಮೂಲಕ ಮಂತ್ರವನ್ನು ಶಿಷ್ಯನ ಕಿವಿಯಲ್ಲಿ ಉಚ್ಚರಿಸುವನು.

ರುದ್ರಯಾಮಲ ಹೇಳುತ್ತದೆ, ಶಾಕ್ತೀ ಮತ್ತು ಶಾಂಭವೀ ದೀಕ್ಷೆಗಳು ಸದ್ಯೋಮುಕ್ತಿಯನ್ನು ನೀಡುತ್ತವೆ ಎಂದು:

ಶಾಕ್ತೀ ಚ ಶಾಂಭವೀ ಚಾನ್ಯಾ ಸದ್ಯೋಮುಕ್ತಿವಿಧಾಯಿನೀ ।

ಸಿದ್ಧೈಃ ಸ್ವಶಕ್ತಿಮಾಲೋಕ್ಯ ತಯಾ ಕೇವಲಯಾ ಶಿಶೋಃ ।
ನಿರುಪಾಯಂ ಕೃತಾ ದೀಕ್ಷಾ ಶಾಕ್ತೇಯಿ ಪರಿಕೀರ್ತಿತಾ ॥
ಅಭಿಸಂಧಿಂ ವಿನಾಚಾರ್ಯಶಿಷ್ಯಯೋರುಭಯೋರಪಿ ।
ದೇಶಿಕಾನುಗ್ರಹೇಣೈವ ಶಿವತಾ ವ್ಯಕ್ತಿಕಾರಿಣೀ ॥

ಅರ್ಥ: ಸಿದ್ಧ ಪುರುಷರು ಯಾವ ಬಾಹ್ಯ ಉಪಾಯವನ್ನೂ ಅವಲಂಬಿಸದೆ ಕೇವಲ ತಮ್ಮ ಆಧ್ಯಾತ್ಮಿಕ ಶಕ್ತಿಯ ಸಹಾಯದಿಂದಲೇ ಶಿಷ್ಯನಲ್ಲಿ ದಿವ್ಯಜ್ಞಾನವನ್ನು ಉಂಟುಮಾಡಿದರೆ, ಅದನ್ನು ಶಾಕ್ತೀ ದೀಕ್ಷೆ ಎನ್ನುತ್ತಾರೆ. ಶಾಂಭವೀ ದೀಕ್ಷೆಯಲ್ಲಿ

ಆಚಾರ್ಯನ ಮನಸ್ಸಿನಲ್ಲಿ ದೀಕ್ಷೆ ನೀಡುತ್ತೇನೆಂದಾಗಲಿ ಹಾಗೂ ಶಿಷ್ಯನ ಮನಸ್ಸಿನಲ್ಲಿ ಅದನ್ನು ಪಡೆಯುತ್ತೇನೆಂದಾಗಲೀ ಪೂರ್ವ ಸಂಕಲ್ಪ ಇರುವುದಿಲ್ಲ. ಪರಸ್ಪರರನ್ನು ನೋಡಿದಾಕ್ಷಣವೇ ಆಚಾರ್ಯನಿಗೆ ಶಿಷ್ಯನ ಮೇಲೆ ಕರುಣೆ ಉದಯಿಸಿ ಅವನ ಮೇಲೆ ಕೃಪೆದೋರುವ ಇಚ್ಛೆಯಾಗುವುದು. ಇದರಿಂದಲೇ ಶಿಷ್ಯನ ಒಳಗೆ ಅದ್ವೈತ ವಸ್ತುವಿನ ಜ್ಞಾನವುಂಟಾಗಿ ಅವನು ಶಿಷ್ಯತ್ವ ಸ್ವೀಕರಿಸುತ್ತಾನೆ.

ಈ ಪ್ರಕಾರದ ದೀಕ್ಷೆಗೆ ಶಾಸ್ತ್ರಾನುಸಾರವಾದ ಕಾಲಾಕಾಲ ವಿಚಾರದ ಆವಶ್ಯಕತೆ ಇಲ್ಲ ಎಂದು ಪುರಶ್ಚರಣೋಲ್ಲಾಸ ತಂತ್ರ ಹೇಳುತ್ತದೆ ;

> ದೀಕ್ಷಾಯಾಂ ಚಂಚಲಾಪಾಂಗಿ ನ ಕಾಲನಿಯಮಃ ಕ್ವಚಿತ್ ।
> ಸದ್ಗುರೋರ್ದರ್ಶನಾದೇವ ಸೂರ್ಯಪರ್ವೇ ಚ ಸರ್ವದಾ ॥
> ಶಿಷ್ಯಮಾಹೂಯ ಗುರುಣಾ ಕೃಪಯಾ ಯದಿ ದೀಯತೇ ।
> ತತ್ರ ಲಗ್ನಾದಿಕಂ ಕಿಂಚಿತ್ ನ ವಿಚಾರ್ಯಂ ಕದಾಚನ ॥

ಅರ್ಥ : ಹೇ ಚಂಚಲನಯನಳಾದ ಪಾರ್ವತಿಯೇ, ವೀರ ಮತ್ತು ದಿವ್ಯಭಾವ ದಿಂದ ಕೂಡಿದ ಗುರುವಿನ ಮೂಲಕ ದೀಕ್ಷೆಯನ್ನು ಪಡೆಯುವಾಗ ಕಾಲವಿಚಾರದ ಯಾವ ಆವಶ್ಯಕತೆಯೂ ಇರುವುದಿಲ್ಲ. ಉತ್ತರಾಯಣ ಕಾಲದಲ್ಲಿ ಸದ್ಗುರುವಿನ ದರ್ಶನವಾದರೆ ಮತ್ತು ಅವನು ಕೃಪೆ ತೋರಿ ಶಿಷ್ಯನನ್ನು ದೀಕ್ಷೆ ಸ್ವೀಕರಿಸಲು ಆಹ್ವಾನಿಸಿದರೆ ಆಗ ಲಗ್ನ ಮುಂತಾದುವುಗಳ ಕಡೆ ಗಮನ ಕೊಡಕೂಡದು.

47. ದಿವ್ಯಭಾವದಿಂದ ಕೂಡಿದ ಸಾಧಾರಣ ಗುರುಗಳ ವಿಚಾರವಾಗಿ ಶಾಸ್ತ್ರವು ಈ ರೀತಿಯ ವ್ಯವಸ್ಥೆಯನ್ನು ಮಾಡಿದೆ. ಶ್ರೀರಾಮಕೃಷ್ಣರಾದರೋ ಅಲೌಕಿಕ ಪುರುಷರು. ಸದಾ ಜಗನ್ಮಾತೆಯ ಕೈಯಲ್ಲಿ ಯಂತ್ರಸ್ವರೂಪದಂತೆ ಇದ್ದವರು. ಅಹೇತುಕ ಕರುಣೆಯಿಂದ ಶಿಷ್ಯರನ್ನು ಅನುಗ್ರಹಿಸುತ್ತಿದ್ದರು. ಅಂಥವರು ದೀಕ್ಷೆಯನ್ನು ನೀಡುವ, ಆಧ್ಯಾತ್ಮಿಕ ಶಕ್ತಿಯನ್ನು ಸಂಚಾರ ಮಾಡುವ ಪ್ರಕಾರವನ್ನು ನಾವು ನಿರ್ಣಯಿಸುವುದಾದರೂ ಹೇಗೆ ? ಏಕೆಂದರೆ ಜಗನ್ಮಾತೆಯು ಶ್ರೀರಾಮಕೃಷ್ಣರ ಮೂಲಕ ತಂತ್ರೋಕ್ತ ದಿವ್ಯಭಾವವನ್ನು ಮಾತ್ರ ತೋರಿಸಿಕೊಡಲಿಲ್ಲ. ಅದರ ಜೊತೆಗೆ ಎಷ್ಟು ಮತವೋ ಅಷ್ಟು ಪಥ ಎಂಬ ಅತ್ಯುದಾರವಾದ ಸಾಧನೆ ಮತ್ತು ಅನುಭವವನ್ನು ಶ್ರೀರಾಮಕೃಷ್ಣರ ಮೂಲಕ ಜಗತ್ತಿನ ಹಿತಕ್ಕಾಗಿ ತೋರಿಸಿಕೊಟ್ಟಳು. ಹಿಂದಿನ ಯಾವ ದಿವ್ಯಭಾವದಿಂದ ಕೂಡಿದ ಗುರುಗಳೂ ಈ ಉದಾರ ಭಾವವನ್ನು ಪ್ರಕಾಶಪಡಿಸಿರಲಿಲ್ಲ. ಆದ್ದರಿಂದ ಈಗಿನಿಂದ ಶ್ರೀರಾಮಕೃಷ್ಣರ ಜೀವನದಲ್ಲಿ ಒಂದು 'ಹೊಸ ಅಧ್ಯಾಯ ಪ್ರಾರಂಭವಾಯಿತು ಎನ್ನುತ್ತೇವೆ.

48. ಭಕ್ತಿಭಾವದ ಓದುಗರು ನಮ್ಮ ಈ ಮಾತುಗಳನ್ನು ಕೇಳಿ ಆಶ್ಚರ್ಯದಿಂದ ಕೇಳಬಹುದು : "ಇದೆಂತಹ ಮಾತು ನಿಮ್ಮದು. ನೀವು ಶ್ರೀರಾಮಕೃಷ್ಣರನ್ನು ಅವತಾರ ಪುರುಷರೆಂದು ಪರಿಗಣಿಸುವುದಾದರೆ ಅವರ ಈ ಭಾವವು ಅಥವಾ ಶಕ್ತಿ ಪ್ರಕಾಶವು

ಒಂದು ಸಮಯದಲ್ಲಿ ಇರಲಿಲ್ಲ ಎಂದು ಹೇಗೆ ಹೇಳುತ್ತೀರಿ ?" ಇದಕ್ಕೆ ಉತ್ತರವಾಗಿ ನಾವು ಹೇಳುತ್ತೇವೆ : ಶ್ರೀರಾಮಕೃಷ್ಣರ ಮಾತಿನ ಆಧಾರದ ಮೇಲೆಯೇ ನಾವು ಈ ರೀತಿ ಹೇಳುತ್ತಿರುವುದು. ನರದೇಹವನ್ನು ಧರಿಸಿದ ಭಗವಂತನಿಗೂ ಎಲ್ಲ ಸಮಯದ ಲ್ಲಿಯೂ ಎಲ್ಲ ಪ್ರಕಾರದ ಈಶ್ವರೀಯ ಭಾವ ಮತ್ತು ಶಕ್ತಿಗಳು ಅಭಿವ್ಯಕ್ತವಾಗುವುದಿಲ್ಲ. ಯಾವಾಗ ಯಾವುದು ಆವಶ್ಯಕವೋ ಅದು ಮಾತ್ರ ಪ್ರಕಾಶಗೊಳ್ಳುವುದು. ಕಾಶೀಪುರ ದಲ್ಲಿ ಶ್ರೀರಾಮಕೃಷ್ಣರು ದೀರ್ಘವ್ಯಾಧಿಯಿಂದ ನರಳುತ್ತಿರುವಾಗ ತಮ್ಮ ಆಂತರಿಕ ಭಾವ ಮತ್ತು ಶಕ್ತಿಯ ಪ್ರಕಾಶವನ್ನು ನಿರ್ದೇಶಿಸಿ ಒಂದು ದಿನ ನಮಗೆ ಹೀಗೆ ಹೇಳಿದರು:

"ಮಾತೆಯು ತೋರಿಸಿರುವಳು, ಈಗ ಇಲ್ಲಿ ಎಂಥಾ ಶಕ್ತಿ ಇದೆಯೆಂದರೆ ನಾನು ಜನರನ್ನು ಸ್ಪರ್ಶಿಸಬೇಕಾಗಿಯೂ ಇಲ್ಲ. ನಾನು ನಿಮಗೆ ಅವರನ್ನು ಸ್ಪರ್ಶಿಸಲು ಹೇಳು ತ್ತೇನೆ. ನಿಮ್ಮ ಸ್ಪರ್ಶದಿಂದಲೇ ಅವರ ಚೈತನ್ಯ ಜಾಗ್ರತವಾಗುವುದು. ತಾಯಿಯು ಈಗ ಇದನ್ನು (ದೇಹವನ್ನು) ಗುಣಪಡಿಸಿದರೆ ಎಷ್ಟೊಂದು ಜನ ಬಂದು ಮುತ್ತುತ್ತಾರೆಂದರೆ ನಿಮಗೆ ಆ ಜನ ಜಂಗುಳಿಯನ್ನು ಹೊರಗೆ ತಳ್ಳಲು ಸಾಧ್ಯವೇ ಆಗುವುದಿಲ್ಲ. ನೀವು ಎಷ್ಟು ಕಷ್ಟಪಡಬೇಕಾಗುವುದೆಂದರೆ ನಿಮ್ಮ ದೇಹದ ನೋವನ್ನು ಗುಣಪಡಿಸಿಕೊಳ್ಳಲು ಔಷಧಿ ತೆಗೆದುಕೊಳ್ಳಬೇಕಾಗುವುದು."

ಶ್ರೀರಾಮಕೃಷ್ಣರ ಈ ಮಾತಿನಿಂದ ತಿಳಿದುಬರುವುದು ತಮ್ಮಲ್ಲಿ ಹಿಂದೆ ಇಲ್ಲದ ಶಕ್ತಿಯನ್ನು ಆಗ ಅವರು ತಮ್ಮಲ್ಲಿ ಅನುಭವಿಸುತ್ತಿದ್ದರು ಎಂದು. ಈ ವಿಷಯದಲ್ಲಿ ಇನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದು.

49. ಶ್ರೀರಾಮಕೃಷ್ಣರು ದಿವ್ಯಭಾವದ ಆವೇಗದಿಂದ ಭಕ್ತರನ್ನು ವ್ಯಾಕುಲರಾಗಿ ಕರೆಯುವುದರಿಂದಲೇ ನಿಶ್ಚಿಂತರಾಗಲಿಲ್ಲ. ತಾಯಿಯ ಪ್ರೇರಣೆಯಿಂದ ಅವರು ಬೇಲ್ ಘರಿಯಾದ ಉದ್ಯಾನದಲ್ಲಿ ಕೇಶವಚಂದ್ರಸೇನನನ್ನು ಸಂಧಿಸಲು ಹೋದರು. ಅವರು ದಕ್ಷಿಣೇಶ್ವರದಲ್ಲಿರುವುದು ಭಕ್ತರಿಗೆಲ್ಲ ತಿಳಿಯಲೆಂಬುದೇ ಇದರ ಹಿಂದಿರುವ ಉದ್ದೇಶ ವಾಗಿತ್ತು. ಈ ಘಟನೆಯಾದ ಕೆಲವೇ ದಿನಗಳಲ್ಲಿ ಸ್ವಾಮಿ ವಿವೇಕಾನಂದ ಮತ್ತು ಬ್ರಹ್ಮಾ ನಂದ ಮುಂತಾದ ಪ್ರಮುಖ ಭಕ್ತರು ಒಬ್ಬೊಬ್ಬರಾಗಿ ಬರತೊಡಗಿದರು. ಇವರೊಡನೆ ಶ್ರೀರಾಮಕೃಷ್ಣರ ದಿವ್ಯಲೀಲೆಯನ್ನು ಅವರ ಇಚ್ಛೆಯಾದರೆ ಮುಂದೊಂದು ಸಂದರ್ಭ ದಲ್ಲಿ ವಿವರಿಸುತ್ತೇವೆ. ಶ್ರೀರಾಮಕೃಷ್ಣರು ಈ ದಿವ್ಯಭಾವದಲ್ಲಿ ಭಕ್ತರೊಡನೆ ಹೇಗೆ ಕಳೆ ಯುತ್ತಿದ್ದರು ಎಂಬುದನ್ನು ಚಿತ್ರಿಸಲು ಇಲ್ಲಿ ಒಂದು ಉದಾಹರಣೆಯನ್ನು ಕೊಡುತ್ತೇವೆ. ಅದರೊಂದಿಗೆ ಈ ಭಾಗವನ್ನು ಸಮಾಪ್ತಿಗೊಳಿಸುತ್ತೇವೆ.

# ಶ್ರೀರಾಮಕೃಷ್ಣರ ಗೃಹಸ್ಥ ಶಿಷ್ಯರು


ಕೇಶವಚಂದ್ರ ಸೇನ


ಬಲರಾಮ ಬೋಸ್


ಮಹೇಂದ್ರನಾಥ ಗುಪ್ತ


ಡಾ. ಮಹೇಂದ್ರಲಾಲ ಸರ್ಕಾರ


ಗಿರೀಶಚಂದ್ರ ಘೋಷ


ವಿಜಯಕೃಷ್ಣ ಗೋಸ್ವಾಮಿ


ದುರ್ಗಾಚರಣ್ ನಾಗ್


ಪೂರ್ಣಚಂದ್ರ ಘೋಷ್


ಅಘೋರ್‌ಮಣಿ ದೇವಿ


ರಾಮಚಂದ್ರ ದತ್ತ


ಶಂಭುಚರಣ್ ಮಲ್ಲಿಕ್


ಸುರೇಂದ್ರನಾಥ್ ಮಿತ್ರ

## ಐದನೆಯ ಅಧ್ಯಾಯ

# ಭಕ್ತ ಸಂಗದಲ್ಲಿ ಶ್ರೀರಾಮಕೃಷ್ಣರು
# ಕ್ರಿ. ಶ. ೧೮೮೫ರ ನವಯಾತ್ರೆ

ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।
ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ (ಗೀತೆ, 9, 31)

"ಅವನು ಬೇಗನೆ ಧರ್ಮಾತ್ಮನಾಗುತ್ತಾನೆ, ಶಾಶ್ವತ ಶಾಂತಿಯನ್ನು ಪಡೆಯುತ್ತಾನೆ. ಎಲೈ ಕೌಂತೇಯ, ನನ್ನ ಭಕ್ತ ಎಂದಿಗೂ ನಾಶವಾಗುವುದಿಲ್ಲ ಎಂದು ತಿಳಿ."

1. ಶ್ರೀರಾಮಕೃಷ್ಣರಲ್ಲಿ ದಿವ್ಯ ಮತ್ತು ಮಾನವ ಭಾವಗಳ ಸಮನ್ವಯ 2. ವಿಜಯಕೃಷ್ಣ ಗೋಸ್ವಾಮಿಯ ದರ್ಶನ 3. ಶ್ರೀರಾಮಕೃಷ್ಣರ ಅಲೌಕಿಕ ವರ್ತನೆಯನ್ನು ಕಂಡು ಭಕ್ತರ ಭಾವನೆ 4. ಪ್ರೇಮಾನಂದರು ಭಾವಸಮಾಧಿಗಾಗಿ ಹಠಹಿಡಿದುದು 5. ಶ್ರೀರಾಮಕೃಷ್ಣರು ಭಕ್ತರಿಗಾಗಿ ಅಷ್ಟೊಂದು ಭಾವಿಸುತ್ತಿದ್ದುದಕ್ಕೆ ಕಾರಣ 6. ಈ ಸಂಬಂಧವಾಗಿ ಸ್ವಾಮಿ ವಿವೇಕಾನಂದರಿಗೆ ಶ್ರೀರಾಮಕೃಷ್ಣರ ಉತ್ತರ 7. ಶ್ರೀರಾಮಕೃಷ್ಣರು ಗುಣವಂತರನ್ನೂ ಗೌರವಾನ್ವಿತರನ್ನೂ ಸನ್ಮಾನಿಸುತ್ತಿದ್ದರು 8. ತಮ್ಮ ಅಭಿಮಾನವನ್ನು ಹೋಗಲಾಡಿಸಲು ಅವರು ಎಷ್ಟೊಂದು ಪ್ರಯತ್ನಿಸಿದ್ದರು ! 9. ಪ್ರಾಪಂಚಿಕರು ಇದಕ್ಕೆ ವಿರುದ್ಧವಾಗಿ ವರ್ತಿಸುತ್ತಾರೆ 10. ಶ್ರೀರಾಮಕೃಷ್ಣರ ಆಗಮನದ ಸಮಯದಲ್ಲಿ ಧರ್ಮಾಂದೋಲನ ಮತ್ತು ಅದರ ಕಾರಣ 11. ಪಂಡಿತ ಶಶಧರನ ಧರ್ಮಪ್ರಚಾರ 12. ಶಶಧರನನ್ನು ನೋಡಬೇಕೆಂಬ ಶ್ರೀರಾಮಕೃಷ್ಣರ ಇಚ್ಛೆ 13. ಅವರ ಶುದ್ಧ ಮನಸ್ಸಿನಲ್ಲಿ ಏಳುತ್ತಿದ್ದ ಆಸೆಗಳು ಪೂರ್ತಿಯಾಗಲೇಬೇಕು 14. ೧೮೮೫ರ ನವಯಾತ್ರೆಯ ಸಮಯದಲ್ಲಿ ಶ್ರೀರಾಮಕೃಷ್ಣರು ಎಲ್ಲೆಲ್ಲಿಗೆ ಹೋಗಿದ್ದರು ? 15. ಈಶಾನ ಬಾಬುವನ್ನು ಕುರಿತು 16. ಪಂಡಿತ ಶಶಧರನಿಗೆ ಉಪದೇಶ 17. ಸ್ವಾಮಿ ಯೋಗಾನಂದರ ಆಚಾರನಿಷ್ಠೆ 18. ಬಲರಾಮನ ಮನೆಯಲ್ಲಿ ರಥಯಾತ್ರೆ 19. ಸ್ತ್ರೀಭಕ್ತರಿಗೆ ಶ್ರೀರಾಮಕೃಷ್ಣರ ಮೇಲಿದ್ದ ಭಕ್ತಿ 20. ಅವರ ಅನನ್ಯಮನಸ್ಕತೆಗೆ ಕೆಲವು ಉದಾಹರಣೆಗಳು 21. ಅವರು ಸ್ತ್ರೀಭಕ್ತರನ್ನು ದಕ್ಷಿಣೇಶ್ವರಕ್ಕೆ ಆಹ್ವಾನಿಸಿದುದು 22. ದೋಣಿಯಲ್ಲಿ ಸ್ತ್ರೀಭಕ್ತರಿಗೆ ಉಪದೇಶ 23. ಭಾವಾವೇಶದಲ್ಲಿ ಕುಂಡಲಿನಿಯ ದರ್ಶನ ಮತ್ತು ಶ್ರೀರಾಮಕೃಷ್ಣರ ನುಡಿ 24. ಭಾವಸಮಾಧಿಯಿಂದ ಇಳಿದ ಮೇಲೆ ಭಕ್ತರ ಆಹಾರದ ಬಗ್ಗೆ ಚಿಂತಿಸಿದರು 25. ದೇಹದಲ್ಲಿ ಹುಣ್ಣು ಇದ್ದರೆ ಶ್ರೀರಾಮಕೃಷ್ಣರ ದಿವ್ಯದೇಹವನ್ನು ಸ್ಪರ್ಶಿಸಲಾಗದು 26. ಬಾಲಸ್ವಭಾವದ ಶ್ರೀರಾಮಕೃಷ್ಣರು ಬಾಲಕನಂತೆ ಭಯಗೊಳ್ಳುತ್ತಿದ್ದರು 27. ಪಂಡಿತ ಶಶಧರನು ಎರಡನೆಯ ಬಾರಿ ಶ್ರೀರಾಮಕೃಷ್ಣರನ್ನು ಸಂಧಿಸಿದನು 28. ಈ ಘಟನೆಯನ್ನು

ಕುರಿತು ಶ್ರೀ ರಾಮಕೃಷ್ಣರ ವಿವರಣೆ 29. ಶ್ರೀರಾಮಕೃಷ್ಣರ ಜೀವನ ಬೇರೆ ಅವತಾರಗಳಲ್ಲಿ ನಂಬಿಕೆ ಹುಟ್ಟಿಸುತ್ತದೆ.

1. ದಿವ್ಯ ಭಾವದಿಂದ ಕೂಡಿದ ಶ್ರೀರಾಮಕೃಷ್ಣರ ಅದ್ಭುತ ಚರಿತೆಯನ್ನು ಸ್ವಲ್ಪ ಮಟ್ಟಿಗಾದರೂ ಅರ್ಥಮಾಡಿಕೊಳ್ಳಬೇಕಾದರೆ ಅವರು ಭಕ್ತರೊಡನೆ ಹೇಗೆ ವರ್ತಿಸು ತ್ತಿದ್ದರು ಎಂಬುದನ್ನು ನೋಡಬೇಕು. ಅವರು ನಾನಾ ಪ್ರಕಾರದ ಭಕ್ತರ ಸಂಗದಲ್ಲಿ ಪ್ರತಿದಿನ ಹೇಗೆ ವ್ಯವಹರಿಸುತ್ತಿದ್ದರು, ಹೇಗೆ ಮಾತನಾಡುತ್ತಿದ್ದರು, ಹೇಗೆ ಅವರೊಡನೆ ನಕ್ಕು ನಲಿಯುತ್ತಿದ್ದರು, ಹೇಗೆ ಭಾವಸಮಾಧಿಗೆ ಹೋಗುತ್ತಿದ್ದರು, ಇವನ್ನೆಲ್ಲಾ ವಿಮರ್ಶೆಮಾಡಿ ನೋಡಬೇಕಾಗುತ್ತದೆ. ಆಗಲೇ ಅವರ ದಿವ್ಯಭಾವದ ಲೀಲೆಯು ಸ್ವಲ್ಪ ಮಟ್ಟಿಗಾದರೂ ಅರ್ಥವಾಗುವುದು. ಆದ್ದರಿಂದ ಅವರು ಭಕ್ತರೊಡನೆ ಕೆಲವು ದಿನ ನಡೆ ಸಿದ ಲೀಲೆಯ ವಿಷಯವನ್ನು ಇಲ್ಲಿ ಪ್ರಸ್ತುತಪಡಿಸುತ್ತೇವೆ. ಈ ಅಸಾಧಾರಣ ಪುರುಷರ ಸಾಮಾನ್ಯಕ್ರಿಯೆಗಳೂ ಕೂಡ ಉದ್ದೇಶರಹಿತ ಅಥವಾ ಅರ್ಥಹೀನವಾಗಿರ ಲಿಲ್ಲ ಎಂಬುದನ್ನು ನಾವು ನೋಡುತ್ತೇವೆ. ದೇವ ಮತ್ತು ಮಾನವ ಭಾವದ ಈ ಅಪೂರ್ವ ಸಮ್ಮಿಲನವನ್ನು ಬೇರೆಲ್ಲೂ ಕಾಣುವುದು ದುರ್ಲಭ. ನಾವು ಇಪ್ಪತ್ತು ವರ್ಷ ಗಳು ಪ್ರಪಂಚದ ಬಹುಭಾಗಗಳಲ್ಲಿ ಸುತ್ತಾಡಿದರೂ ಅಂತಹ ಇನ್ನೊಂದು ವ್ಯಕ್ತಿಯನ್ನು ನೋಡಲಿಲ್ಲ. "ಹಲ್ಲು ಇರುವವರೆಗೂ ನಾವು ಅದರ ಮೌಲ್ಯವನ್ನು ತಿಳಿಯುವುದಿಲ್ಲ," ಎಂಬ ಬಂಗಾಳಿ ಗಾದೆಯೊಂದಿದೆ. ಶ್ರೀರಾಮಕೃಷ್ಣರ ವಿಷಯದಲ್ಲಿ ನಮ್ಮಲ್ಲಿಯೂ ಅನೇಕರಿಗೆ ಹಾಗೆಯೇ ಆಯಿತು. ಶ್ರೀರಾಮಕೃಷ್ಣರು ಶ್ಯಾಮಪುಕುರದಲ್ಲಿರುವಾಗ ಒಂದು ದಿನ ವಿಜಯಕೃಷ್ಣ ಗೋಸ್ವಾಮಿಯು ಅವರನ್ನು ನೋಡಲು ಬಂದನು. ಅವನು ಅವರ ವಿಚಾರವಾಗಿ ನಮಗೆ ಹೀಗೆ ಹೇಳಿದ :

2. ವಿಜಯನು ಢಾಕಾದ ತನ್ನ ಮನೆಯಲ್ಲಿ ಧ್ಯಾನ ಮಾಡುತ್ತಾ ಕುಳಿತಿದ್ದ. ಆಗ ಅವನಿಗೆ ಶ್ರೀರಾಮಕೃಷ್ಣರ ದರ್ಶನವಾಯಿತು. ಅದು ನಿಜವೇ ಅಥವಾ ಬುದ್ಧಿಯ ಭ್ರಮೆಯೆ ಎಂಬುದನ್ನು ಪರೀಕ್ಷಿಸಲು ಅವನು ತನ್ನ ಮುಂದಿದ್ದ ದೇಹದ ಅಂಗಾಂಗಗಳ ನ್ನೆಲ್ಲ ಸ್ಪರ್ಶಿಸಿ ನೋಡಿದನು. ಅವನು ಬಹಿರಂಗವಾಗಿ ಇದನ್ನು ಶ್ರೀರಾಮಕೃಷ್ಣರಿಗೂ ಮತ್ತು ನಮಗೂ ವಿವರಿಸಿ ಹೇಳಿದ. ಅವನು ಮುಂದುವರಿಸಿ ಹೀಗೆ ಹೇಳುತ್ತಾನೆ : "ನಾನು ದೇಶದ ಹಲವು ಕಡೆಗಳಲ್ಲಿ ಗಿರಿ ಪರ್ವತಗಳಲ್ಲಿ, ಓಡಾಡಿ ಅನೇಕ ಸಾಧು ಮಹಾ ತ್ಮರನ್ನು ನೋಡಿರುವೆನು. ಆದರೆ (ಶ್ರೀರಾಮಕೃಷ್ಣರನ್ನು ನಿರ್ದೇಶಿಸಿ) ಇಂತಹ ಇನ್ನೊಬ್ಬ ವ್ಯಕ್ತಿಯನ್ನು ಎಲ್ಲಿಯೂ ನೋಡಲಿಲ್ಲ. ಇಲ್ಲಿ ಆಧ್ಯಾತ್ಮಿಕ ಭಾವದ ಪೂರ್ಣ ಪ್ರಕಾಶವಿದೆ. ಬೇರೆ ಕೆಲವು ಕಡೆ ಎರಡಾಣೆ, ಇನ್ನು ಕೆಲವು ಕಡೆ ಒಂದಾಣೆ ಮತ್ತು ಕೆಲವು ಕಡೆ ಒಂದು ಕಾಸು ಅಥವಾ ಅರ್ಧಕಾಸು ಅಷ್ಟೆ. ಎಲ್ಲಿಯೂ ನಾಲ್ಕು ಆಣೆ ಯಷ್ಟೂ ನೋಡಲಿಲ್ಲ."

ಶ್ರೀರಾಮಕೃಷ್ಣರು [ಮುಗುಳ್ನಗುತ್ತಾ, ನಮ್ಮನ್ನುದ್ದೇಶಿಸಿ] : "ಇವನೇನು ಹೇಳುತ್ತಿರುವನು !"

ವಿಜಯ [ಶ್ರೀರಾಮಕೃಷ್ಣರಿಗೆ] : "ನಾನು ನಿಮ್ಮನ್ನು ಅಂದು ಢಾಕಾದಲ್ಲಿ ನೋಡಿ ರುವೆನು. ನೀವು ಏನೇ ಹೇಳಿದರೂ ನಾನು ನಂಬುವುದಿಲ್ಲ. ನೀವು ಸುಲಭವಾಗಿ ಸಿಕ್ಕುವು ದರಿಂದ ಇಷ್ಟೊಂದು ಗೊಂದಲವುಂಟಾಗಿದೆ. ದಕ್ಷಿಣೇಶ್ವರವು ಕಲ್ಕತ್ತದ ಹತ್ತಿರವಿದೆ. ನಾವು ಯಾವಾಗ ಬೇಕಾದರೂ ನಿಮ್ಮನ್ನು ಕಾಣಬಹುದು. ಇಲ್ಲಿಗೆ ಬರುವುದಕ್ಕೂ ಯಾವ ಕಷ್ಟವಿಲ್ಲ, ಅನೇಕ ದೋಣಿಗಳಿವೆ, ಗಾಡಿಗಳಿವೆ. ನೀವು ಅಷ್ಟು ಸುಲಭವಾಗಿ ನಮಗೆ ದೊರಕುವುದರಿಂದ ನಾವು ನಿಮ್ಮನ್ನು ಅರ್ಥಮಾಡಿಕೊಳ್ಳುತ್ತಿಲ್ಲ. ನೀವು ಯಾವುದೊ ಪರ್ವತದ ತುದಿಯಲ್ಲಿ ಕುಳಿತುಕೊಂಡಿದ್ದಿದ್ದರೆ ಮತ್ತು ನಿಮ್ಮನ್ನು ನೋಡಲು ಅನ್ನ ನೀರು ಬಿಟ್ಟು ತುಂಬಾ ನಡೆಯಬೇಕಾಗಿದ್ದಿದ್ದರೆ ಆಗ ನಿಮ್ಮ ಬೆಲೆ ನಮಗರ್ಥವಾಗುತ್ತಿತ್ತು. ನೀವು ಈಗ ಇಲ್ಲಿ ಅತ್ಯಂತ ಸಮೀಪವೇ ಇರುವುದರಿಂದ ದೂರ ದಲ್ಲಿ ಇನ್ನೂ ಶ್ರೇಷ್ಠರು ಇರಬಹುದೆಂದು ನಾವು ಭಾವಿಸುತ್ತೇವೆ. ಆದ್ದರಿಂದಲೇ ಅಲ್ಲಿ ಇಲ್ಲಿ ಓಡಾಡುತ್ತಾ ಕೊನೆಯಿಲ್ಲದ ಕಷ್ಟ ಅನುಭವಿಸುತ್ತೇವೆ."

3. ಇದು ನಿಜವಾಗಿಯೂ ಸರಿ. ಕರುಣಾಮಯರಾದ ಶ್ರೀರಾಮಕೃಷ್ಣರು ತಮ್ಮೆ ಡೆಗೆ ಬಂದವರನ್ನೆಲ್ಲಾ ತಮ್ಮವರೆಂದೇ ಸ್ವೀಕರಿಸುತ್ತಿದ್ದರು. ಒಮ್ಮೆ ಸ್ವೀಕರಿಸಿದರೆ ಅವರೇ ಹೋಗಬೇಕೆಂದರೂ ಬಿಡುತ್ತಿರಲಿಲ್ಲ. ಕೆಲವೊಮ್ಮೆ ಮೃದುವಾಗಿಯೂ, ಕೆಲವೊಮ್ಮೆ ಕಠೋರವಾಗಿಯೂ ಅವರೊಡನೆ ವರ್ತಿಸುತ್ತಾ ಜನ್ಮಜನ್ಮಾರ್ಜಿತ ಸಂಸ್ಕಾರ ರಾಶಿಯನ್ನು ಸುಟ್ಟುಹಾಕುತ್ತಿದ್ದರು. ಹೊಸ ಭಾವದ ಅಚ್ಚಿನಲ್ಲಿ ಅವರಿಗೆ ಹೊಸ ವ್ಯಕ್ತಿತ್ವವನ್ನು ಕೊಟ್ಟು ಅವರಿಗೆ ಚಿರಶಾಂತಿಯನ್ನು ನೀಡಿದರು. ಭಕ್ತರು ತಮ್ಮ ತಮ್ಮ ಜೀವನದ ವಿಷಯವನ್ನು ಬಿಚ್ಚಿ ತೋರಿಸಿದರೆ ಆಗ ಈ ಮಾತಿನಲ್ಲಿ ಸಂದೇಹವೇ ಉಳಿಯುವುದಿಲ್ಲ. ನರೇಂದ್ರನಾಥನು ಒಮ್ಮೆ ಪ್ರಪಂಚವನ್ನು ತ್ಯಜಿಸಬೇಕೆಂದು ನಿರ್ಧರಿಸಿದ. ಅವನು ಸಾಂಸಾ ರಿಕ ಕಷ್ಟದಿಂದ ಬೇಸತ್ತು ಹೋಗಿದ್ದ. ಭಗವಂತನನ್ನು ಇಷ್ಟೊಂದು ಕಾಲವೂ ಆಶ್ರಯಿ ಸಿಯೂ ಅವನ ದರ್ಶನವಾಗಲಿಲ್ಲ ಮತ್ತು ಶ್ರೀರಾಮಕೃಷ್ಣರೂ ಏನೂ ಮಾಡಲಿಲ್ಲ ಎಂದು ಅವನ ಮನಸ್ಸಿಗೆ ಅತ್ಯಂತ ವೇದನೆಯುಂಟಾಗಿತ್ತು. ಅವನು ಗುಪ್ತವಾಗಿ ಪ್ರಪಂಚ ವನ್ನು ತ್ಯಜಿಸುವುದಕ್ಕೆ ಸಿದ್ಧತೆ ನಡೆಸಿದ್ದ. ಆದರೆ ಶ್ರೀರಾಮಕೃಷ್ಣರು ಹಾಗೆ ಮಾಡಲು ಬಿಡಲಿಲ್ಲ. ತಮ್ಮ ದಿವ್ಯಶಕ್ತಿಯಿಂದ ಅವನ ಉದ್ದೇಶವನ್ನು ಅರ್ಥಮಾಡಿಕೊಂಡು ಅವ ನನ್ನು ದಕ್ಷಿಣೇಶ್ವರಕ್ಕೆ ಕರೆದುಕೊಂಡು ಹೋದರು. ಅವನನ್ನು ಸ್ಪರ್ಶಿಸಿ ಭಾವಾವೇಶದಲ್ಲಿ ಹಾಡಿದರು : "ನನಗೆ ಮಾತನಾಡಲೂ ಭಯ ಮಾತಾಡದಿರಲೂ ಭಯ ; ಓ ರಾಮ್ ನಿನ್ನನ್ನು ಕಳೆದುಕೊಳ್ಳುತ್ತೇನೋ ಎಂದು ಭಯ." ಪ್ರಪಂಚವನ್ನು ತ್ಯಜಿಸಲು ಅವನಿಗೆ ಅವಕಾಶವನ್ನು ಕೊಡುವುದರ ಬದಲು ಅವನನ್ನು ತಮ್ಮ ಹತ್ತಿರ ಇಟ್ಟುಕೊಂಡು ಅನೇಕ ರೀತಿಯಲ್ಲಿ ಸಮಾಧಾನಪಡಿಸಿದರು. ಗಿರೀಶನು ತನ್ನ ವಕಾಲತ್ತನ್ನು ಅವರಿಗೆ ವಹಿಸಿ ಕೊಟ್ಟು ನಿಶ್ಚಿಂತನಾಗಿದ್ದರೂ ಪೂರ್ವಸಂಸ್ಕಾರಗಳು ಅವನನ್ನು ಇನ್ನೂ ಕಾಡಿಸುತ್ತಿದ್ದವು, ಭಯಗೊಳಿಸುತ್ತಿದ್ದವು. ಅವನಿಗೆ ಅಭಯವನ್ನಿತ್ತು ಶ್ರೀರಾಮಕೃಷ್ಣರು ಹೇಳುತ್ತಾರೆ : "ನಿನ್ನನ್ನೇನು ಸಾಮಾನ್ಯ ಹಾವು ಹಿಡಿದಿರುವುದೇನು ? ದೊಡ್ಡ ಸರ್ಪವೇ ಹಿಡಿದಿದೆ.

ನಿನ್ನ ಬಿಲಕ್ಕೆ ಓಡಿಹೋದರೂ ನೀನು ಸಾಯಲೇ ಬೇಕು. ನೀನು ನೋಡಿಲ್ಲವೇ, ನೀರು ಹಾವು ಕಪ್ಪೆಯನ್ನು ಹಿಡಿದರೆ ಅದು ಸಾಯುವುದಕ್ಕೆ ಮುಂಚೆ ಸಾವಿರ ಬಾರಿ ವಟಗುಟ್ಟ ಬೇಕಾಗುತ್ತದೆ. ಕೆಲವು ತಪ್ಪಿಸಿಕೊಂಡೇ ಹೋಗಿಬಿಡುತ್ತವೆ. ಆದರೆ ಸರ್ಪ ಅಥವಾ ಕಾಳಸರ್ಪವು ಕಪ್ಪೆಯನ್ನು ಹಿಡಿದರೆ ಅದು ಮೂರು ಬಾರಿಗಿಂತ ಹೆಚ್ಚಾಗಿ ವಟಗುಟ್ಟ ಬೇಕಾಗಿಲ್ಲ. ಅಷ್ಟರೊಳಗೇ ಅದರ ಒದ್ದಾಟ ಮುಗಿದಿರುತ್ತದೆ. ಅಪರೂಪಕ್ಕೆ ಒಂದು ವೇಳೆ ತಪ್ಪಿಸಿಕೊಂಡು ಹೋದರೂ ಅದು ಬಿಲದಲ್ಲಿ ಹೋದಾಗ ಸತ್ತುಹೋಗುತ್ತದೆ. ಇಲ್ಲಿಯೂ ಹಾಗೆಯೇ ಎಂದು ತಿಳಿ." ಆದರೆ ಆಗ ಶ್ರೀರಾಮಕೃಷ್ಣರ ಆ ಮಾತುಗಳನ್ನು ಕಾರ್ಯಗಳನ್ನು ಅರ್ಥಮಾಡಿಕೊಳ್ಳುವವರು ಯಾರು? ಅವರಂಥವರು ಎಲ್ಲಾ ಕಡೆಯೂ ಇರುತ್ತಾರೆ ಎಂದು ಎಲ್ಲಾ ಭಾವಿಸಿದರು. ಶ್ರೀರಾಮಕೃಷ್ಣರು ಎಲ್ಲರೊಡನೆಯೂ ಮುಕ್ತ ವಾಗಿ ಬೆರೆಯುತ್ತಿದ್ದರು. ಯಾರ ಮನೆಗಾದರೂ ಕರೆಯದೆ ಹೋಗುತ್ತಿದ್ದರು. ಎಲ್ಲರೂ ಹೀಗೆಯೇ ಎಂದು ನಾವು ಭಾವಿಸಿದ್ದೆವು. ಶ್ರೀರಾಮಕೃಷ್ಣರ ಕರುಣೆಯ ಪರಿಧಿಯೊಳಗೆ ಇದ್ದ ಭಕ್ತರಿಗೆ ಆಗ ಎಷ್ಟೊಂದು ಉತ್ಸಾಹ, ಎಷ್ಟೊಂದು ಹೆಮ್ಮೆ, ಅಭಿಮಾನ! ಆಧ್ಯಾತ್ಮಿಕ ಸಾಧನೆಯೆಂದರೆ ಬಹಳ ಸುಲಭವಾದ ವಿಷಯ ಎಂದು ಆಗ ಎಲ್ಲರಿಗೂ ಅನ್ನಿಸುತ್ತಿತ್ತು. ನಮಗೆ ಯಾವ ಆಧ್ಯಾತ್ಮಿಕ ಅನುಭವವನ್ನು ಯಾವಾಗ ಪಡೆಯಬೇಕೆನ್ನಿಸುತ್ತದೋ ಆಗಲೇ ಸಿದ್ಧಿಸಿಬಿಡುತ್ತದೆ; ಶ್ರೀರಾಮಕೃಷ್ಣರನ್ನು ಸ್ವಲ್ಪ ವ್ಯಾಕುಲತೆಯಿಂದ ಒತ್ತಾಯಪಡಿಸಿದರೆ ಸಾಕು ಅವರು ತಮ್ಮ ಸ್ಪರ್ಶದ ಮೂಲಕವಾಗಲೀ, ಮಾತಿನ ಮೂಲಕ ವಾಗಲೀ ಅಥವಾ ಕೇವಲ ಇಚ್ಛೆಯಿಂದಲೇ ಏನು ಬೇಕಾದರೂ ಕೊಡುತ್ತಾರೆ! ಇದಕ್ಕೆ ಎಷ್ಟೋ ದೃಷ್ಟಾಂತಗಳನ್ನು ನೀಡಬಹುದು.

4. ಬಾಬುರಾಮನಿಗೆ (ಸ್ವಾಮಿ ಪ್ರೇಮಾನಂದ) ಭಾವಸಮಾಧಿಯನ್ನು ಪಡೆಯ ಬೇಕೆಂಬ ಆಸೆಯಾಯಿತು. ಅವನು ಶ್ರೀರಾಮಕೃಷ್ಣರ ಹತ್ತಿರ ಹೋಗಿ "ನನಗದು ಉಂಟಾಗುವಂತೆ ಮಾಡಿ" ಎಂದು ಹಠಹಿಡಿದ. ಶ್ರೀರಾಮಕೃಷ್ಣರು ಅವನನ್ನು ಸಮಾಧಾನಪಡಿಸುತ್ತಾ ಹೇಳಿದರು: "ಒಳ್ಳೆಯದು, ತಾಯಿಗೆ ಹೇಳುತ್ತೇನೆ. ನನ್ನ ಇಚ್ಛೆಯಿಂದ ಏನಾದರೂ ಆಗುವುದೇ ?" ಆದರೆ ಅವರ ಮಾತನ್ನು ಕೇಳಬೇಕಲ್ಲ. ಬಾಬುರಾಮನು ಮತ್ತೆ "ಅದು ನನಗೆ ಉಂಟಾಗುವಂತೆ ಮಾಡಿ" ಎಂದೇ ಮತ್ತೆ ಮತ್ತೆ ಪೀಡಿಸುತ್ತಾ ಅಳ ತೊಡಗಿದ. ಇದಾದ ಕೆಲವು ದಿನಗಳ ನಂತರ ತನ್ನ ಹುಟ್ಟೂರಾದ ಆಂಟ್‌ಪುರಕ್ಕೆ ಕೆಲಸದ ನಿಮಿತ್ತ ಹೋಗಬೇಕಾಯಿತು, ಅದು ೧೮೮೪ರಲ್ಲಿ. ಈ ಕಡೆ ಶ್ರೀರಾಮಕೃಷ್ಣರಿಗೆ ಒಂದು ಚಿಂತೆ, ಅವನಿಗೆ ಭಾವಸಮಾಧಿ ಹೇಗೆ ಉಂಟಾಗುವುದು ಎಂದು. ಅವರು ಕಂಡವರಿಗೆಲ್ಲಾ ಹೇಳುತ್ತಿದ್ದರು: "ಬಾಬುರಾಮನು ತನಗೆ ಭಾವ ಉಂಟಾಗಲೆಂದು ಹಠ ಮಾಡುತ್ತಾನೆ, ಅಳುತ್ತಾನೆ. ಅವನಿಗೆ ಆಗುವುದೇ ? ಆಗದಿದ್ದರೆ ಅವನು ಇಲ್ಲಿಯ (ನನ್ನ) ಮಾತನ್ನು ಕೇಳುವುದಿಲ್ಲ." ಆಗ ಅವರು ಜಗನ್ಮಾತೆಗೆ ಹೇಳಿದರು, "ತಾಯಿ ಬಾಬುರಾಮನಿಗೆ ಸ್ವಲ್ಪ ಭಾವ ಉಂಟಾಗುವಂತೆ ಮಾಡು" ಎಂದು. ತಾಯಿಯು ಉತ್ತರಿಸಿದಳು "ಅವನಿಗೆ ಭಾವ ಉಂಟಾಗುವುದಿಲ್ಲ. ಅವನಿಗೆ ಜ್ಞಾನ ಉಂಟಾಗುತ್ತದೆ" ಎಂದು. ಜಗನ್ಮಾತೆಯು ಈ

ಮಾತನ್ನು ಕೇಳಿ ಶ್ರೀರಾಮಕೃಷ್ಣರಿಗೆ ಚಿಂತೆ ಉಂಟಾಯಿತು. ಅವರು ತುಂಬಾ ಕಳಕಳಿಯಿಂದ ನಮ್ಮಲ್ಲಿ ಕೆಲವರಿಗೆ ಹೇಳಿದರು : "ಬಾಬುರಾಂ ಹೀಗೆ ಕೇಳುತ್ತಾನೆಂದು ತಾಯಿಗೆ ಹೇಳಿದೆ. ಆದರೆ ಅವಳು ಅವನಿಗೆ ಭಾವ ಉಂಟಾಗುವುದಿಲ್ಲ, ಜ್ಞಾನ ಉಂಟಾಗುತ್ತದೆ ಎನ್ನುತ್ತಾಳೆ. ಆಗಲಿ, ಅವನು ಅದನ್ನಾದರೂ ಪಡೆಯಲಿ. ಆಗ ಅವನು ಶಾಂತನಾಗುವನು. ನನಗೆ ಅವನನ್ನು ಕುರಿತು ತುಂಬಾ ಚಿಂತೆ ಉಂಟಾಗಿತ್ತು. ಅವನು ಹೊರಡುವ ಮುನ್ನ ಕರುಳು ಕತ್ತರಿಸುವಂತೆ ಅತ್ತನು." ಬಾಬುರಾಮನು ಯಾವುದಾದರೂ ಒಂದು ಆಧ್ಯಾತ್ಮಿಕ ಅನುಭವವನ್ನು ಪಡೆಯಲಿ ಎಂಬ ವಿಚಾರದಲ್ಲಿ ಅವರು ಎಷ್ಟು ಕಾತರರಾಗಿದ್ದರು ! ಮತ್ತೆ ತಮ್ಮ ಕಾತರತೆಯನ್ನು ವ್ಯಕ್ತಪಡಿಸುವಾಗ ಅವನಿಗೆ ಯಾವ ಅನುಭವವೂ ಆಗದಿದ್ದರೆ ಅವನು ತಮ್ಮ ಮಾತನ್ನು ಸ್ವೀಕರಿಸುವುದಿಲ್ಲ ಎಂಬ ಚಿಂತೆಯನ್ನು ವ್ಯಕ್ತಪಡಿಸಿದರು—ಬಾಬುರಾಮನು ತಮ್ಮ ಮಾತನ್ನು ಸ್ವೀಕರಿಸುವುದು ಅಥವಾ ಸ್ವೀಕರಿಸದೆ ಇರುವುದು ಇದರ ಮೇಲೆಯೇ ಅವರ ಸಂಪೂರ್ಣ ಜೀವನವು ಅವಲಂಬಿಸಿದೆಯೋ ಎನ್ನುವಂತೆ !

5. ಅವರು ಆಗಾಗ ತಮ್ಮ ಬಾಲಕ ಭಕ್ತರ ಸಂಬಂಧವಾಗಿ ಹೇಳುತ್ತಿದ್ದರು : "ನೋಡು, ನಾನು ಇವರ ಬಗ್ಗೆ ಇಷ್ಟೊಂದು ಚಿಂತಿಸುತ್ತೇನಲ್ಲ ಏಕೆ ? ಇವನಿಗೆ ಏನಾಯಿತು ? ಅವನಿಗೆ ಏನಾಯಿತು ? ಈ ಕಾತರತೆಯೆಲ್ಲ ಏಕೆ ? ಅವರೆಲ್ಲಾ ಇಸ್ಕೂಲ್ ಹುಡುಗರು. ಅವರಲ್ಲಿ ಏನೂ ಇಲ್ಲ ನನಗಾಗಿ ಒಂದು ಬತ್ತಾಸ್ ತರಲು ಕಾಸಿಲ್ಲದವರು. ಆದರೂ ಕೂಡ ಅವರ ಬಗ್ಗೆ ಯಾಕೆ ಅಷ್ಟೊಂದು ಚಿಂತೆ ? ಯಾರಾದರೂ ಎರಡುದಿನ ಬರದೆ ಇದ್ದರೆ ನನ್ನ ಪ್ರಾಣ ಹಿಂಡಿದಂತಾಗುತ್ತದೆ. ಅವರ ಸುದ್ದಿಯನ್ನು ತಿಳಿಯಬೇಕೆಂದು ಇಚ್ಛೆಯಾಗುತ್ತದೆ. ಹೀಗೇಕೆ ?" ಇದನ್ನು ಕೇಳಿದವನು ಹೀಗೆ ಉತ್ತರಿಸಬಹುದು: "ಏಕೆ ಹಾಗೆ ಆಗುವುದೆಂದು ಹೇಗೆ ಹೇಳುವುದು, ಮಹಾಶಯರೇ ? ಅವರ ಒಳಿತಿಗಾಗಿಯೇ ಎಂಬುದಂತೂ ನಿಶ್ಚಯ."

ಶ್ರೀರಾಮಕೃಷ್ಣರು : "ಏನು ಗೊತ್ತೆ ? ಇವರೆಲ್ಲ ಶುದ್ಧಸತ್ತ್ವ; ಕಾಮಕಾಂಚನ ಇನ್ನೂ ಇವರನ್ನು ಸ್ಪರ್ಶಿಸಿಲ್ಲ. ಇವರು ಭಗವಂತನೆಡೆಗೆ ಮನಸ್ಸನ್ನು ಹರಿಸಿದರೆ ಅವನನ್ನು ಪಡೆಯಬಹುದು. ಅದಕ್ಕಾಗಿಯೇ ಇಲ್ಲಿಯ (ನನ್ನ) ಸ್ವಭಾವ ಗಾಂಜಾಕೋರರದಂತೆ. ಗಾಂಜಾಕೋರರಿಗೆ ಒಬ್ಬರೇ ಗಾಂಜಾಸೇದಿದರೆ ತೃಪ್ತಿಯಾಗುವುದಿಲ್ಲ. ಒಂದು ಸಾರಿ ಎಳೆದು ಅದನ್ನು ಇನ್ನೊಬ್ಬರಿಗೆ ಕೊಡಬೇಕು. ಆಗಲೇ ಸರಿಯಾಗಿ ಅಮಲೇರುವುದು. ಇಲ್ಲಿಯೂ ಹಾಗೆಯೇ. ಮೊದಮೊದಲು ನರೇಂದ್ರನ ಬಗ್ಗೆ ಹೇಗನಿಸುತ್ತಿತ್ತು, ಗೊತ್ತೇ ? ಹಾಗೆ ಇವರಾರ ಬಗ್ಗೆಯೂ ಅನಿಸುವುದಿಲ್ಲ. ಎರಡು ದಿನ ನರೇಂದ್ರನಾಥ ಬರದಿದ್ದರೆ ಟವಲನ್ನು ಹಿಂಡಿದಂತೆ ಹೃದಯವೇದನೆಯಾಗುತ್ತಿತ್ತು. ಜನರು ಏನು ಹೇಳುವರೋ ಎಂದು ಹುಣಿಸೆ ಮರದ ಹತ್ತಿರ ಹೋಗಿ ಅತ್ತುಕರೆಯುತ್ತಿದ್ದೆ. ಹಾಜರಾ ಒಮ್ಮೆ ಹೇಳಿದ: 'ನಿಮ್ಮದು ಇದೆಂಥಾ ಸ್ವಭಾವ. ನೀವು ಪರಮಹಂಸಾವಸ್ಥೆಯಲ್ಲಿದ್ದೀರಿ. ನೀವು ಯಾವಾಗಲೂ ಭಗವಂತನನ್ನೇ ನೆನೆಯುತ್ತಾ ಸಮಾಧಿಯಲ್ಲಿ ಅವನೊಡನೆ ಒಂದಾಗಿ ಇರಬೇಕು.

ಅದು ಬಿಟ್ಟು ನರೇಂದ್ರನು ಬರಲಿಲ್ಲ, ಭವನಾಥನಿಗೆ ಏನಾಯಿತು—ಇದನ್ನೆಲ್ಲ ಕುರಿತು ಚಿಂತಿಸುವುದೇಕೆ ?' ಕೇಳಿ ನನಗೆ ಯೋಚನೆಯುಂಟಾಯಿತು. ಹೌದಲ್ಲ, ಇನ್ನು ಆ ರೀತಿ ಮಾಡಬಾರದು ಎಂದೆನಿಸಿತು. ಆಮೇಲೆ ಹುಣಸೆಮರದ ತಳದಿಂದ ಹಿಂದಿರುಗಿ ಬರುತ್ತಿರುವಾಗ ಜಗನ್ಮಾತೆಯು ಕಲ್ಕತ್ತೆಯ ಒಂದು ಸ್ಪಷ್ಟ ಚಿತ್ರವನ್ನು ತೋರಿಸಿದಳು ಆ ನಗರವು ನನ್ನ ಕಣ್ಮುಂದೆಯೇ ಇರುವಂತಿತ್ತು. ಜನರೆಲ್ಲ ಹಗಲೂ ರಾತ್ರೆ ಕಾಮಕಾಂಚನದಲ್ಲೇ ಮಗ್ನರಾಗಿ ತೊಳಲಾಡುತ್ತಿದ್ದರು. ನನಗದನ್ನು ನೋಡಿದಾಗ ನನ್ನ ಹೃದಯದಲ್ಲಿ ಕರುಣೆ ಉಕ್ಕಿಬಂತು. ನಾನು ಯೋಚಿಸಿದೆ : 'ಈ ಜನರ ಒಳಿತಿಗಾಗಿ ಲಕ್ಷಗಟ್ಟಲೆ ಕಷ್ಟವನ್ನು ಅನುಭವಿಸಿದರೂ ಪರವಾಗಿಲ್ಲ. ನಾನು ಸಂತೋಷದಿಂದ ಅನುಭವಿಸುತ್ತೇನೆ.' ನಾನು ಹಿಂತಿರುಗಿ ಬಂದು ಹಾಜರಾನಿಗೆ ಹೇಳಿದೆ. 'ನಾನು ಅವರ ಬಗ್ಗೆ ಚಿಂತಿಸುತ್ತೇನೆ. ನಿನಗೇನಂತೆ ಅದರಿಂದ ?' "

6. "ನರೇಂದ್ರನು ಒಮ್ಮೆ ಹೇಳಿದ 'ನೀವು ಅಷ್ಟೊಂದು ನರೇಂದ್ರ, ನರೇಂದ್ರ ಅನ್ನುತ್ತೀರಿ ಏಕೆ ? ಆ ರೀತಿ ನರೇಂದ್ರ, ನರೇಂದ್ರ ಅನ್ನುತ್ತಿದ್ದರೆ ನರೇದ್ರನಂತೆಯೆ ಆಗಿ ಬಿಡುತ್ತೀರಿ. ಭರತರಾಜನು ಹರಿಣವನ್ನೇ ಚಿಂತಿಸುತ್ತಾ ಹರಿಣವೇ ಆಗಿಬಿಟ್ಟ.' ನರೇಂದ್ರನ ಮಾತಿನಲ್ಲಿ ನನಗೆ ತುಂಬಾ ವಿಶ್ವಾಸ ತಾನೆ ? ಕೇಳಿ ಭಯವಾಯಿತು. ತಾಯಿಯನ್ನು ವಿಚಾರಿಸಿದೆ. ಅವಳೆಂದಳು 'ಅವನಿನ್ನೂ ಹುಡುಗ. ಅವನ ಮಾತನ್ನೇಕೆ ಕೇಳುತ್ತೀಯೆ ? ನೀನು ಅವನಲ್ಲಿ ನಾರಾಯಣನನ್ನು ಕಾಣುತ್ತಿದ್ದೀಯೆ, ಅದಕ್ಕೇ ಅವನೆಡೆಗೆ ಅಷ್ಟೊಂದು ಆಕರ್ಷಣೆ.' ಅದನ್ನು ಕೇಳಿ ನನಗೆ ಭರವಸೆಯುಂಟಾಯಿತು. ನರೇಂದ್ರನ ಹತ್ತಿರ ಬಂದು ಹೇಳಿದೆ, 'ನಿನ್ನ ಮಾತನ್ನು ನಾನು ಕೇಳುವುದಿಲ್ಲ. ನಿನ್ನಲ್ಲಿ ನಾರಾಯಣನನ್ನು ನಾನು ಕಾಣುವುದರಿಂದಲೇ ನಿನ್ನ ಕಡೆಗೆ ಅಷ್ಟೊಂದು ಆಕರ್ಷಣೆ ಎಂದು ತಾಯಿ ಹೇಳಿದ್ದಾಳೆ. ಎಂದು ನಾರಾಯಣನನ್ನು ನೋಡುವುದಿಲ್ಲವೋ ಅಂದಿನಿಂದ ನಿನ್ನ ಮುಖವನ್ನೂ ನೋಡಲಾಗುವುದಿಲ್ಲ.' " ಹೀಗೆ ಅದ್ಭುತ ವ್ಯಕ್ತಿಯಾದ ಶ್ರೀರಾಮಕೃಷ್ಣರ ಪ್ರತಿಯೊಂದು ಆಗುಹೋಗುಗಳಲ್ಲಿಯೂ ಒಂದು ಅರ್ಥವಿತ್ತು. ನಾವು ತಪ್ಪಾರ್ಥ ಮಾಡಿಕೊಂಡು ನಮಗೆ ತೊಂದರೆಯಾಗದಿರಲೆಂದು ಅವರು ನಮಗೆ ವಿವರಿಸಿ ಹೇಳುತ್ತಿದ್ದರು.

7. ಶ್ರೀರಾಮಕೃಷ್ಣರು ಇತರರ ಸದ್ಗುಣಗಳಿಗೆ ಯಾವಾಗಲೂ ಬೆಲೆ ಕೊಡುತ್ತಿದ್ದರು ಮತ್ತು ಕೀರ್ತಿಶಾಲಿ ವ್ಯಕ್ತಿಗಳನ್ನು ಗೌರವಿಸುತ್ತಿದ್ದರು. ಅವರು ಹೇಳುತ್ತಾರೆ: "ಗೌರವಾನ್ವಿತ ವ್ಯಕ್ತಿಗಳಿಗೆ ಮಾನ್ಯತೆ ನೀಡದಿದ್ದರೆ ಭಗವಂತನು ಕೋಪಗೊಳ್ಳುತ್ತಾನೆ. ಅವನ ಶಕ್ತಿಯಿಂದಲೇ ಅವರು ಉನ್ನತಿಗೇರಿರುವುದು. ಅವನೇ ಅವರನ್ನು ಆ ಸ್ಥಾನದಲ್ಲಿ ಇಟ್ಟಿರುವುದು. ಅವರಿಗೆ ಅಗೌರವ ತೋರಿಸಿದರೆ ಭಗವಂತನನ್ನೇ ನಿಂದಿಸಿದಂತಾಗುವುದು." ಆದ್ದರಿಂದ ವಿಶೇಷ ಸದ್ಗುಣ ಸಂಪನ್ನ ವ್ಯಕ್ತಿ ಎಲ್ಲಿಯಾದರೂ ಇರುವನೆಂದು ಅವರಿಗೆ ತಿಳಿದು ಬಂದರೆ ಅವನನ್ನು ಹೇಗಾದರೂ ನೋಡುವ ಆಸಕ್ತಿಯನ್ನು ಶ್ರೀರಾಮಕೃಷ್ಣರು ತೋರಿಸುತ್ತಿದ್ದರು. ಆ ವ್ಯಕ್ತಿಯೇ ಶ್ರೀರಾಮಕೃಷ್ಣರ ಹತ್ತಿರ ಬಂದರೆ ಒಳ್ಳೆಯದಾಯಿತು. ಇಲ್ಲದಿದ್ದರೆ ತಾವಾಗಿಯೇ ಆಹ್ವಾನಿತರಾಗದೆಯೇ ಹೋಗಿ ಅವನನ್ನು

ಸಂಧಿಸಿ ಮಾತನಾಡಿಸುತ್ತಿದ್ದರು. ಬರ್ದ್ವಾನದ ಆಸ್ಥಾನ ಪಂಡಿತನಾದ ಪದ್ಮಲೋಚನ, ಪಂಡಿತ ಈಶ್ವರ ಚಂದ್ರ ವಿದ್ಯಾಸಾಗರ, ಕಾಶಿಯ ಪ್ರಸಿದ್ಧ ವೈಣಿಕ ವಿದ್ವಾಂಸನಾದ ಮಹೇಶ್, ಬೃಂದಾವನದ ಗಂಗಾಮಾತಾ, ಪ್ರಸಿದ್ಧ ಭಕ್ತನಾದ ಕೇಶವಚಂದ್ರಸೇನ್ ಇನ್ನೂ ಅನೇಕರ ವಿಶೇಷ ಸದ್ಗುಣಗಳನ್ನು ಅವರು ಕೇಳಿದ್ದರು. ತಾವಾಗಿಯೇ ಅವರನ್ನು ಅರಸಿಕೊಂಡು ಹೋಗಿ ಶ್ರೀರಾಮಕೃಷ್ಣರು ಅವರನ್ನು ನೋಡಲು ಅವರ ಮನೆಯ ಬಾಗಿಲಿಗೆ ಹೋಗಿದ್ದರು.

8. ಶ್ರೀರಾಮಕೃಷ್ಣರು ಕೇಳದೆಯೇ ಯಾರ ಮನೆಗಾದರೂ ಹೋಗುವುದರಲ್ಲಿ ಆಶ್ಚರ್ಯವೇನಿಲ್ಲ. 'ನಾನು ದೊಡ್ಡ ಮನುಷ್ಯ,' 'ನಾನಾಗಿಯೇ ಇತರರನ್ನು ಸಂಧಿಸಲು ಹೋದರೆ ನನ್ನ ಘನತೆಗೆ ಕುಂದುಂಟಾಗುವುದು,' 'ನಾನು ಗೌರವವನ್ನು ಕಳೆದುಕೊಳ್ಳು ತ್ತೇನೆ'–ಈ ತೆರನಾದ ಅಹಂಕಾರ ಅವರಲ್ಲಿರಲೇ ಇಲ್ಲ. ಅವರು ಹೆಮ್ಮೆ, ಅಹಂಕಾರ ಗಳನ್ನು ಸಂಪೂರ್ಣ ಸುಟ್ಟು ಭಸ್ಮ ಮಾಡಿದ್ದರು. ಅವರು ಬಡವರು ಉಂಡ ಎಲೆಯನ್ನು ಎತ್ತಿ ಆ ಜಾಗವನ್ನು ಪರಿಶುದ್ಧಗೊಳಿಸಿದ್ದರು, ಅವರನ್ನು ನಾರಾಯಣ ಎಂದೇ ಭಾವಿಸಿ ಶ್ರೀರಾಮಕೃಷ್ಣರು ಒಮ್ಮೆ ಆ ಜನಗಳ ಎಂಜಲನ್ನೂ ತಿಂದಿದ್ದರು. ದೇವಸ್ಥಾನದ ಆಳು ಗಳು ಶೌಚಾದಿಗಳನ್ನು ಮಾಡುವ ಜಾಗವನ್ನು ತಮ್ಮ ಕೂದಲಿನಿಂದ ಶುದ್ಧಗೊಳಿಸಿದ್ದರು. ಜಗನ್ಮಾತೆಯನ್ನು ವ್ಯಾಕುಲತೆಯಿಂದ ಪ್ರಾರ್ಥಿಸಿದ್ದರು, "ತಾಯಿ, ನಾನು ಅವರಿಗಿಂತ ಶ್ರೇಷ್ಠನೆಂದು ನಾನೆಂದೂ ಭಾವಿಸದಂತಾಗಲಿ" ಎಂದು. ಆದ್ದರಿಂದ ಅವರಲ್ಲಿ ಈ ಅಹಂಕಾರದ ಕೊರತೆ ಆಶ್ಚರ್ಯವೇನಲ್ಲ. ಇತರರು ಸ್ವಲ್ಪಮಟ್ಟಿಗಾದರೂ ಅಭಿಮಾನ ಶೂನ್ಯರಾದುದನ್ನು ನೋಡಿದಾಗ 'ಏನಾಶ್ಚರ್ಯ' ಎಂದು ಉದ್ಗರಿಸುತ್ತೇವೆ. ಆದರೆ ಶ್ರೀರಾಮಕೃಷ್ಣರಾದರೋ ನಮ್ಮಂತೆ ಈ ಪ್ರಪಂಚದವರಾಗಿರಲಿಲ್ಲ.

ಒಮ್ಮೆ ಶ್ರೀರಾಮಕೃಷ್ಣರು ತಮ್ಮ ಪಂಚೆಯ ತುದಿಯನ್ನು ಹೆಗಲಮೇಲೆ ಹಾಕಿ ಕೊಂಡು ಕಾಳೀಮಂದಿರದ ತೋಟದಲ್ಲಿ ಓಡಾಡುತ್ತಿದ್ದರು. ಅಲ್ಲಿಗೆ ಬಂದ ಒಬ್ಬ ವ್ಯಕ್ತಿಯು ಅವರನ್ನು ತೋಟದ ಮಾಲಿ ಎಂದು ಭಾವಿಸಿ "ಏಯ್, ಆ ಹೂವುಗಳನ್ನು ಕಿತ್ತುಕೊಡು" ಎಂದು ಕೇಳಿದನು. ಶ್ರೀರಾಮಕೃಷ್ಣರು ಮಾತನಾಡದೆ ಹೂವನ್ನು ಕಿತ್ತು ಕೊಟ್ಟು ಅಲ್ಲಿಂದ ಹೊರಟು ಹೋದರು. ಒಮ್ಮೆ ಮಥುರನ ಮಗನಾದ ತ್ರೈಲೋಕ್ಯನು ಹೃದಯನ ಮೇಲೆ ಕೋಪಗೊಂಡು ಅವನಿಗೆ ದೇವಸ್ಥಾನ ಬಿಟ್ಟು ಹೋಗಲು ಆಜ್ಞಾಪಿ ಸಿದನು. ಅವನ ಕೋಪಾತಿರೇಕದಲ್ಲಿ ಶ್ರೀರಾಮಕೃಷ್ಣರೂ ಬೇಕಾದರೆ ಬಿಟ್ಟು ಹೋಗ ಬಹುದು ಎಂದು ಇತರರಿಗೆ ಸೂಚ್ಯವಾಗಿ ಹೇಳಿದ್ದನು. ಇದು ಶ್ರೀರಾಮಕೃಷ್ಣರ ಕಿವಿಗೆ ಬಿದ್ದಕೂಡಲೇ ಟವಲನ್ನು ಹೆಗಲ ಮೇಲೆ ಹಾಕಿಕೊಂಡು ಮುಗುಳ್ನಗುತ್ತಾ, ಕೂಡಲೇ ಆ ಜಾಗವನ್ನು ಬಿಟ್ಟು ಹೊರಟೇ ಬಿಟ್ಟರು. ಅವರು ಮಹಾದ್ವಾರದ ಹತ್ತಿರ ಹೋಗಿದ್ದರು. ಅಷ್ಟರಲ್ಲಿ ತ್ರೈಲೋಕ್ಯನು ಏನಾದರೂ ಅನಿಷ್ಟವಾಗಬಹುದೆಂದು ಹೆದರಿ ಅವರ ಹತ್ತಿರ ಬಂದು ಪ್ರಾರ್ಥಿಸಿಕೊಂಡನು: "ನೀವು ಹೋಗಬೇಕೆಂದು ನಾನು ಹೇಳಲಿಲ್ಲ. ನೀವೇಕೆ ಹೋಗುತ್ತಿದ್ದೀರಿ ? ದಯವಿಟ್ಟು ಬನ್ನಿ." ಶ್ರೀರಾಮಕೃಷ್ಣರು ಮೊದಲಿನಂತೆಯೇ

ಮೀಗುಳ್ಳಗುತ್ತಾ ಹಿಂದಿರುಗಿ ಬಂದು ತಮ್ಮ ಕೊಠಡಿಯಲ್ಲಿ ಕುಳಿತರು.

9. ಈ ರೀತಿ ಅನೇಕ ಘಟನೆಗಳನ್ನು ಉಲ್ಲೇಖಿಸಬಹುದು. ಶ್ರೀರಾಮಕೃಷ್ಣರ ಈ ರೀತಿಯ ವರ್ತನೆಗಳಿಂದ ನಮಗೇನೂ ಅಷ್ಟೊಂದು ಆಶ್ಚರ್ಯವಾಗುವುದಿಲ್ಲ. ಆದರೆ ಸಂಸಾರದಲ್ಲಿ ಇತರರು ಯಾರಾದರೂ ಈ ರೀತಿ ಸ್ವಲ್ಪಮಟ್ಟಿಗಾದರೂ ಮಾಡಿದರೆ ಅವನನ್ನು ಧನ್ಯ ಧನ್ಯ ಎಂದು ಕೊಂಡಾಡುತ್ತೇವೆ. ಏಕೆಂದರೆ ಈ ಪ್ರಪಂಚದಲ್ಲಿ ಬಾಳಬೇಕಾದರೆ ನಮ್ಮ ಹಿತದ ಕಡೆಗೆ ಗಮನ ಕೊಡಬೇಕು, ದುರ್ಬಲರನ್ನು ಮೆಟ್ಟಿ ಮುಂದೆ ಸಾಗಬೇಕು. ನಾಚಿಕೆಯಿಲ್ಲದೆ ನಮ್ಮ ಹಿರಿಮೆಯನ್ನು ಸಾರಬೇಕು ಮತ್ತು ನಮ್ಮ ದೌರ್ಬಲ್ಯವನ್ನು ಸಾಧ್ಯವಾದಷ್ಟು ಮುಚ್ಚಿಡಬೇಕು—ಇದೇ ನಮ್ಮ ಸಾಮಾನ್ಯವಾದ ಅಭಿಮತವಾಗಿರುತ್ತದೆ. ಇದನ್ನು ನಾವು ಮಾತಿನ ಮೂಲಕ ವ್ಯಕ್ತಪಡಿಸದಿರಬಹುದು ಅಷ್ಟೇ. ಯಾರಾದರೂ ನಿಷ್ಠೆಯಿಂದ ಭಗವಂತನನ್ನು ಆಶ್ರಯಿಸಿ ಬಾಳಿದರೆ ಅವನು ಕೆಲಸಕ್ಕೆ ಬಾರದವನಾಗುತ್ತಾನೆಂದು ನಾವು ಒಳಗಿಂದೊಳಗೇ ಚಿಂತಿಸುತ್ತಿರುತ್ತೇವೆ. ರಾಜಕೀಯ, ಸಾಮಾಜಿಕ ರೀತಿ ನೀತಿಗಳು, ವೈಯಕ್ತಿಕ ನೀತಿ, ಅಂತರಾಷ್ಟ್ರೀಯ ನೀತಿ ಇವುಗಳೆಲ್ಲದರಲ್ಲೂ ಹೀಗೆಯೇ.

10. ಕ್ರಿಸ್ತಾಬ್ಧ ೧೮೮೫ರ ಹೊತ್ತಿಗೆ ಆಗಲೇ ಶ್ರೀರಾಮಕೃಷ್ಣರು ಪ್ರಸಿದ್ಧರಾಗಿದ್ದರು. ಅನೇಕ ಹೊಸಬರು ಅವರೆಡೆಗೆ ಆಕರ್ಷಿತರಾಗಿ ದಕ್ಷಿಣೇಶ್ವರಕ್ಕೆ ಬಂದು ಅವರನ್ನು ನೋಡಿ ಧನ್ಯರಾಗುತ್ತಿದ್ದರು. ಕಲ್ಕತ್ತೆಯ ಪ್ರತಿಯೊಬ್ಬರೂ ಕೂಡ ದಕ್ಷಿಣೇಶ್ವರದ ಪರಮಹಂಸರನ್ನು ಕೇಳಿದ್ದರು ಮತ್ತು ಅನೇಕರು ಅವರನ್ನು ಕಂಡಿದ್ದರು. ಕಲ್ಕತ್ತೆಯಲ್ಲಿ ಆಗ ಒಂದು ಧಾರ್ಮಿಕ ಅಂತಃಸ್ರೋತ ಹರಿಯುತ್ತಿತ್ತು. ನಗರದ ಹಲವು ಕಡೆಗಳಲ್ಲಿ ಹರಿಸಭೆ, ಬ್ರಹ್ಮಸಮಾಜ, ಭಗವತ್ ಸಂಕೀರ್ತನೆ, ಧಾರ್ಮಿಕ ಉಪನ್ಯಾಸಗಳು ಮುಂತಾದುವು ನಡೆಯುತ್ತಿದ್ದುವು. ಇತರರಿಗೆ ತಿಳಿದಿರದಿದ್ದರೂ ಶ್ರೀರಾಮಕೃಷ್ಣರಿಗೆ ಅದರ ಕಾರಣ ಗೊತ್ತಿತ್ತು. ಶ್ರೀರಾಮಕೃಷ್ಣರು ಆಗಾಗ ಅದರ ಬಗ್ಗೆ ನಮಗೆ ಹೇಳುತ್ತಿದ್ದರು. ಅವರು ಇದರ ವಿಚಾರವಾಗಿ ಸ್ತ್ರೀ ಭಕ್ತಳೊಬ್ಬಳಿಗೆ ಹೀಗೆ ಹೇಳುತ್ತಾರೆ: "ನೋಡು, ಈ ಹರಿಸಭೆ ಮುಂತಾದ ಧಾರ್ಮಿಕ ಸಂಸ್ಥೆಗಳೆಲ್ಲ (ತಮ್ಮ ದೇಹದ ಕಡೆ ನಿರ್ದೇಶಿಸಿ) ಇದರಿಂದಾಗಿಯೇ. ಮೊದಲು ಇವುಗಳಿದ್ದವೇ ? ಎಲ್ಲವೂ ನಿರ್ಜೀವವಾಗಿದ್ದವು. ಆದರೆ ಇದು ಬಂದ ಮೇಲೆ ಅವೆಲ್ಲ ಮತ್ತೆ ಜೀವಂತವಾದವು. ಒಳಗಿಂದೊಳಗೆ ಒಂದು ಧಾರ್ಮಿಕ ಪ್ರವಾಹ ಹರಿಯುತ್ತಿದೆ." ಇನ್ನೊಮ್ಮೆ ಅವರು ನಮಗೆ ಹೇಳಿದರು: "ಯುವ ಬೇಗಾಳಿಗಳು ಭಕ್ತಿ ಇತ್ಯಾದಿಗಳನ್ನು ಲೆಕ್ಕಿಸುತ್ತಿದ್ದರೇನು ? ತಲೆ ಬಗ್ಗಿಸಿ ಪ್ರಣಾಮ ಮಾಡುವುದಕ್ಕೂ ಬರುತ್ತಿರಲಿಲ್ಲ. ನಾನೇ ಅವರ ಮುಂದೆ ತಲೆ ಬಗ್ಗಿಸುತ್ತಿದ್ದೆ. ಆಗ ಅವರು ಕ್ರಮೇಣ ತಲೆ ಬಗ್ಗಿಸಿ ಪ್ರಣಾಮ ಮಾಡುವುದನ್ನು ಕಲಿತರು. ನಾನು ಕೇಶವನನ್ನು ನೋಡಲು ಅವನ ಮನೆಗೆ ಹೋಗಿದ್ದೆ. ಅವನು ಕುರ್ಚಿಯ ಮೇಲೆ ಕುಳಿತಿದ್ದ. ನಾನು ತಲೆ ತಗ್ಗಿಸಿ ಅವನಿಗೆ ನಮಸ್ಕರಿಸಿದೆ. ಅವನು ಪ್ರತಿಯಾಗಿ ತಲೆಯಾಡಿಸಿದ ಅಷ್ಟೆ. ನಾನು ಅಲ್ಲಿಂದ ಹೊರಡುವಾಗ ತಲೆಯನ್ನು ಭೂಮಿಗೆ ಮುಟ್ಟಿಸಿ ಅವನಿಗೆ ನಮಸ್ಕರಿಸಿದೆ. ಅವನು ಕೈಜೋಡಿಸಿ ತನ್ನ

ತಲೆಗೆ ಮುಟ್ಟಿಸಿದ. ನಾವು ಹೆಚ್ಚು ಹೆಚ್ಚು ಸಂಧಿಸಿದಂತೆಲ್ಲ, ನನ್ನ ಮಾತನ್ನು ಹೆಚ್ಚು ಕೇಳಿದಂತೆಲ್ಲ ಮತ್ತು ನಾನು ಹೆಚ್ಚು ತಲೆತಗ್ಗಿಸಿ ಅವನಿಗೆ ನಮಸ್ಕಾರ ಮಾಡಿದಂತೆಲ್ಲ ಅವನು ತಲೆ ತಗ್ಗಿಸಿ ನಮಸ್ಕರಿಸಲು ಪ್ರಾರಂಭಿಸಿದ. ಭಕ್ತಿ ಮುಂತಾದ ವಿಷಯಗಳ ಬಗ್ಗೆ ಅವರಿಗೇನಾದರೂ ಗೊತ್ತಿತ್ತೇ ? ಅಥವಾ ಸ್ವಲ್ಪವಾದರೂ ಶ್ರದ್ಧೆ ಇತ್ತೇ ?"

11. ನವವಿಧಾನ ಬ್ರಹ್ಮಸಮಾಜವು ಶ್ರೀರಾಮಕೃಷ್ಣರ ಸಂಪರ್ಕವನ್ನು ಪಡೆದ ಮೇಲೆ ಕಲ್ಕತ್ತೆಯಲ್ಲಿ ಅದರ ದೊಡ್ಡ ದೊಡ್ಡ ಸಭೆ ಸಮಾರಂಭಗಳು ನಡೆಯುತ್ತಿದ್ದವು. ಪಂಡಿತ್ ಶಶಧರನು ಅಲ್ಲಿಗೆ ಬಂದು ಹಿಂದೂ ಧರ್ಮದ ಬಗ್ಗೆ ಮಾತನಾಡುತ್ತಿದ್ದನು. ಪಾಶ್ಚಾತ್ಯ ವಿಜ್ಞಾನದ ದೃಷ್ಟಿಯಿಂದ ಹಿಂದೂಗಳ ಅನುಷ್ಠಾನವನ್ನು ವಿವರಿಸಲು ಪ್ರಯತ್ನಿಸುತ್ತಿದ್ದ. "ನಾನಾ ಮುನಿಗಳು ನಾನಾ ಮತಗಳು" ಎಂಬ ಮಾತು ಎಲ್ಲ ವಿಷಯಕ್ಕೂ ಎಲ್ಲ ಸಮಯದಲ್ಲೂ ಅನ್ವಯಿಸುತ್ತದೆ. ಶಶಧರನ ವೈಜ್ಞಾನಿಕ ಧರ್ಮವ್ಯಾಖ್ಯಾನಕ್ಕೂ ಇದು ಅನ್ವಯಿಸುತ್ತದೆ. ಆದರೆ ಶ್ರೋತೃಗಳಿಗೇನೂ ಕಡಮೆಯಿರಲಿಲ್ಲ. ಗುಮಾಸ್ತರು, ವಿದ್ಯಾರ್ಥಿಗಳು ಅಧಿಕಾರಿಗಳು ಅನೇಕ ಮಂದಿ ಬರುತ್ತಿದ್ದರು. ಆಲ್ಬರ್ಟ್ ಹಾಲಿನಲ್ಲಿ ಅವನು ಉಪನ್ಯಾಸ ನೀಡುತ್ತಿದ್ದನು. ಅದು ಕಿಕ್ಕಿರಿದು ಜನರಿಂದ ತುಂಬಿರುತ್ತಿತ್ತು. ಎಲ್ಲರೂ ಶಾಂತರಾಗಿ ಆಸಕ್ತಿಯಿಂದ ಪಂಡಿತನ ಅದ್ಭುತ ಧಾರ್ಮಿಕ ವ್ಯಾಖ್ಯಾನವನ್ನು ಕೇಳುತ್ತಿದ್ದರು. ನಾವು ಒಂದು ದಿನ ಅವನ ಉಪನ್ಯಾಸವನ್ನು ಸ್ವಲ್ಪ ಹೊತ್ತು ಕೇಳಿದ ನೆನಪು. ಹೇಗೋ ತಲೆ ತೂರಿಸಿ ಪಂಡಿತನ ಸುಂದರ ಮುಖವನ್ನು ನೋಡಬೇಕೆಂದು ನಾವು ಹೆಣಗುತ್ತಿದ್ದುದುಂಟು. ಅವನು ಕಪ್ಪುಗಡ್ಡ ಬಿಟ್ಟಿದ್ದ. ಎದೆಯ ಮೇಲೆ ಕಾವಿ ಬಣ್ಣದ ರುದ್ರಾಕ್ಷಿ ಮಾಲೆಯು ಕಂಗೊಳಿಸುತ್ತಿತ್ತು. ಕಲ್ಕತ್ತೆಯ ಎಲ್ಲೆಲ್ಲಿಯೂ ಪಂಡಿತ್ ಶಶಧರನ ಉಪನ್ಯಾಸದ ವಿಚಾರವೇ.

12. ಸುದ್ದಿ ಕಿವಿಯಿಂದ ಕಿವಿಗೆ ಹರಡುತ್ತದೆ. ದಕ್ಷಿಣೇಶ್ವರದ ಮಹಾಪುರುಷರ ವಿಷಯವನ್ನು ಪಂಡಿತ್ ಶಶಧರನು ಮತ್ತು ಪಂಡಿತನ ಗುಣವನ್ನು ಶ್ರೀರಾಮಕೃಷ್ಣರು ಕೇಳಲು ಬಹುಕಾಲ ಹಿಡಿಯಲಿಲ್ಲ. ಭಕ್ತರು ಶ್ರೀರಾಮಕೃಷ್ಣರೆಡೆಗೆ ಬಂದು ಅವನ ವಿಚಾರವಾಗಿ ಹೇಳುತ್ತಿದ್ದರು: "ಒಳ್ಳೇ ಪಂಡಿತ, ಸೊಗಸಾಗಿ ಮಾತನಾಡುತ್ತಾನೆ. ಮೂವತ್ತೆರಡು ಅಕ್ಷರದ ಹರಿನಾಮವನ್ನು ಅಂದು ಅವನು ದೇವಿಯ ಅರ್ಥ ಬರುವಂತೆ ವ್ಯಾಖ್ಯಾನ ಮಾಡಿದನು. ಎಲ್ಲರೂ ಕೇಳಿ ಭೇಷ್ ಭೇಷ್ ಎಂದು ಉದ್ಗಾರ ಮಾಡಿದರು." ಶ್ರೀರಾಮಕೃಷ್ಣರು ಇದನ್ನು ಕೇಳಿ ಹೇಳಿದರು: "ಹೌದೇ. ನಾನೂ ಒಮ್ಮೆ ಕೇಳಬೇಕೆಂದೆನಿಸುತ್ತಿದೆ."

13. ಶ್ರೀರಾಮಕೃಷ್ಣರ ಶುದ್ಧ ಮನಸ್ಸಿನಲ್ಲಿ ಯಾವುದೇ ಆಸೆ ಉದ್ಭವಿಸಿದರೂ ಅದು ಯಾವುದೋ ಒಂದು ರೀತಿಯಲ್ಲಿ ಪೂರ್ತಿಗೊಂಡೇ ತೀರುತ್ತಿತ್ತು. ಯಾವುದೋ ಅದೃಶ್ಯಶಕ್ತಿ ಅದಕ್ಕಿರುವ ಅಡಚಣೆಗಳನ್ನೆಲ್ಲ ತೆಗೆದುಹಾಕುತ್ತಿತ್ತು. ಯಾವಾಗಲೂ ಶುದ್ಧ ಭಾವನೆಗಳನ್ನೇ ಮನಸ್ಸಿನಲ್ಲಿ ಚಿಂತಿಸುತ್ತಾ ಮಾತು ಕೃತಿಗಳೆರಡರಲ್ಲಿಯೂ ಸತ್ಯವನ್ನೇ

ಪರಿಪಾಲಿಸುವವರ ಮನಸ್ಸಿನಲ್ಲಿ ಪ್ರಯತ್ನಪಟ್ಟರೂ ಕೂಡ ಯಾವುದೇ ರೀತಿಯ ಮಿಥ್ಯಾ ವಿಚಾರಗಳು ಏಳುವುದಿಲ್ಲ. ಅವರ ಮನಸ್ಸಿನಲ್ಲಿ ಯಾವುದೇ ಆಸೆ ಉಂಟಾದರೂ ಮುಂದೆ ಅದು ಪೂರ್ತಿಯಾಗಿಯೇ ಆಗುತ್ತದೆ. ಆದರೆ ಇದು ಸಾಮಾನ್ಯ ವ್ಯಕ್ತಿಗನ್ವಯಿಸುವುದಿಲ್ಲ. ಶ್ರೀರಾಮಕೃಷ್ಣರ ಮನಸ್ಸಿನಲ್ಲಿ ಏಳುತ್ತಿದ್ದ ಆಸೆಗಳೆಲ್ಲವೂ ಯಾವುದೋ ಅನಿರೀಕ್ಷಿತ ರೀತಿಯಲ್ಲಿ ತಪ್ಪದೆ ಪೂರ್ತಿಯಾಗುತ್ತಿದ್ದುದನ್ನು ನೋಡಿ ನಮ್ಮಲ್ಲಿ ಈ ನಂಬಿಕೆ ಉಂಟಾಯಿತು. ಆದರೂ ಅವರು ಬದುಕಿರುವಾಗ ಅವರಲ್ಲಿ ಸಂಪೂರ್ಣ ನಂಬಿಕೆ ನಮಗಿತ್ತೇನು ? ಅವರು ಹೇಳುತ್ತಿದ್ದರು: "ಕೇಶವ ಮತ್ತು ವಿಜಯರಲ್ಲಿ ಜ್ಞಾನವು ದೀಪದಂತೆ ಬೆಳಗುತ್ತಿದೆ. ಆದರೆ ನರೇಂದ್ರನಲ್ಲಿ ಜ್ಞಾನಸೂರ್ಯನನ್ನೇ ಕಂಡೆ. ಕೇಶವನು ತನ್ನ ಒಂದು ಶಕ್ತಿಯಿಂದ ಜಗತ್ತನ್ನು ಅಲುಗಾಡಿಸಿದ. ಆದರೆ ನರೇಂದ್ರನಲ್ಲಿ ಅಂತಹ ಹದಿನೆಂಟು ಶಕ್ತಿಗಳಿವೆ." ಈ ಮಾತುಗಳು ಕೇವಲ ಅವರ ಮನಸ್ಸಿನ ಆಲೋಚನೆಗಳಲ್ಲ, ಸಮಾಧಿಯಲ್ಲಿ ಅವರು ಪಡೆದ ಅನುಭವಗಳು. ಆದರೆ, ನಮಗೆ ಆಗ ಅವುಗಳಲ್ಲಿ ಪೂರ್ಣ ವಿಶ್ವಾಸವಿತ್ತೇನು ? ಕೆಲವೊಮ್ಮೆ ನಮಗೆ ಅನ್ನಿಸುತ್ತಿತ್ತು, ಅದು ಸತ್ಯವಿರಬಹುದು. ಅವರು ಜನರ ಹೃದಯವನ್ನು ನೋಡುತ್ತಾರೆ, ಅವರ ಮಾತಿನಲ್ಲಿ ಏನೋ ರಹಸ್ಯವಿದೆ ಎಂದು. ಮತ್ತೆ ಕೆಲವೊಮ್ಮೆ ನಮಗೆ ಆಶ್ಚರ್ಯವಾಗುತ್ತಿತ್ತು, ಜಗತ್ಪ್ರಸಿದ್ಧನಾದ ಕೇಶವ ಚಂದ್ರಸೇನನಲ್ಲಿ ಮತ್ತು ಈ ಶಾಲೆಯ ಹುಡುಗನಾದ ನರೇಂದ್ರನಲ್ಲಿ ! ಶ್ರೀರಾಮ ಕೃಷ್ಣರು ಅವರ ಬಗ್ಗೆ ಹೇಳಿದ ಮಾತಿನಲ್ಲಿ ಏನಾದರೂ ಸತ್ಯವಿದೆಯೇ ಎಂದು. ಶ್ರೀರಾಮ ಕೃಷ್ಣರ ಅನುಭವಗಳ ಬಗ್ಗೆಯೇ ನಮಗೆ ಆ ರೀತಿ ಸಂದೇಹಗಳಿರುವಾಗ ಅವರ ಆಸೆಗಳು ಪೂರ್ಣವಾಗುವ ವಿಷಯದಲ್ಲಿ ಸಂದೇಹವಿರಲಿಲ್ಲ ಎಂದು ಹೇಗೆ ಹೇಳುವುದು ?

14. ಪಂಡಿತ್ ಶಶಧರನ ಬಗ್ಗೆ ಈ ಮೇಲಿನ ಮಾತುಕತೆಯಾದ ಕೆಲವೇ ದಿನ ಗಳಲ್ಲಿ ರಥಯಾತ್ರೆ ಬಂತು. ಒಂಬತ್ತು ದಿನ ಈ ಉತ್ಸವ ನಡೆಯುವುದರಿಂದ ನವಯಾತ್ರೆ ಯೆಂದೂ ಕರೆಯುತ್ತಾರೆ. ಕ್ರಿ.ಶ. ೧೮೮೫ರ ನವಯಾತ್ರೆಯ ಸಂದರ್ಭದಲ್ಲಿ ಶ್ರೀರಾಮ ಕೃಷ್ಣರ ಸಂಬಂಧವಾದ ಅನೇಕ ವಿಷಯಗಳು ನಮ್ಮ ಮನಸ್ಸಿಗೆ ಬರುತ್ತವೆ. ಅದೇ ವರ್ಷವೇ ಶ್ರೀರಾಮಕೃಷ್ಣರು ಆಹ್ವಾನದ ಮೇರೆಗೆ ರಥಯಾತ್ರೆಯ ಪ್ರಥಮ ದಿನದಂದು ಈಶಾನ್‌ಚಂದ್ರ ಮುಖ್ಯೋಪಾಧ್ಯಾಯನ ಮನೆಗೆ ಹೋಗಿದ್ದರು. ಅಲ್ಲಿಂದ ಮಧ್ಯಾಹ್ನ ಪಂಡಿತ್ ಶಶಧರನನ್ನು ನೋಡಲು ಹೋಗಿದ್ದರು. ಸಂಜೆಯ ಹೊತ್ತಿಗೆ ಬಲರಾಮ್ ಬೋಸ್‌ನ ಮನೆಯಲ್ಲಿ ರಥೋತ್ಸವಕ್ಕೆ ಬಂದಿದ್ದರು. ಅಂದು ರಾತ್ರಿ ಅಲ್ಲೇ ಇದ್ದು ಮರು ದಿನ ಬೆಳಗ್ಗೆ ಕೆಲವು ಭಕ್ತರೊಡನೆ ದೋಣಿಯಲ್ಲಿ ದಕ್ಷಿಣೇಶ್ವರಕ್ಕೆ ಹಿಂದಿರುಗಿದ್ದರು. ಇದಾದ ಕೆಲವು ದಿನಗಳ ಮೇಲೆ ಶಶಧರನು ಆಲಂಬಜಾರ್ ಅಥವಾ ಉತ್ತರವರಾಹ ನಗರದ ಒಂದು ಜಾಗಕ್ಕೆ ಉಪನ್ಯಾಸ ನೀಡಲು ಬಂದಿದ್ದನು. ಅಲ್ಲಿಂದ ಅವನು ಶ್ರೀರಾಮ ಕೃಷ್ಣರನ್ನು ನೋಡಲು ದಕ್ಷಿಣೇಶ್ವರಕ್ಕೆ ಹೋದನು. ಅನಂತರ ರಥ ಹಿಂದಿರುಗುವ ದಿನ ಬೆಳಗ್ಗೆ ಶ್ರೀರಾಮಕೃಷ್ಣರು ಮತ್ತೆ ಬಲರಾಮನ ಮನೆಗೆ ಹೋಗಿದ್ದರು. ಅಂದು ರಾತ್ರಿ ಮತ್ತು ಮರುದಿನ ರಾತ್ರಿ ಭಕ್ತರೊಡನೆ ಆನಂದದಿಂದ ಕಳೆದರು. ಮೂರನೆಯ ದಿನ

ಬೆಳಗ್ಗೆ ಗೋಪಾಲನ ತಾಯಿ ಮುಂತಾದ ಭಕ್ತರೊಡನೆ ದೋಣಿಯಲ್ಲಿ ದಕ್ಷಿಣೇಶ್ವರಕ್ಕೆ ಹಿಂದಿರುಗಿದರು. ರಥ ಹಿಂತಿರುಗುವ ದಿನ ಶಶಧರನು ತಾನಾಗಿಯೇ ಶ್ರೀರಾಮಕೃಷ್ಣ ರನ್ನು ನೋಡಲು ಬಲರಾಮನ ಮನೆಗೆ ಬಂದಿದ್ದನು. ಅಂದು ಅವನು ಕಣ್ಣೀರು ಸುರಿ ಸುತ್ತಾ ಕೈಜೋಡಿಸಿ ಶ್ರೀರಾಮಕೃಷ್ಣರಿಗೆ ನಿವೇದಿಸಿಕೊಂಡನು : "ತಾತ್ತ್ವಿಕ ವಿಚಾರ ಮಾಡಿ ಮಾಡಿ ನನ್ನ ಹೃದಯ ಶುಷ್ಕವಾಗಿಬಿಟ್ಟಿದೆ. ನನಗೆ ಒಂದು ಹನಿ ಭಕ್ತಿಯನ್ನು ಕೊಡಿ." ಶ್ರೀರಾಮಕೃಷ್ಣರು ಅದರಿಂದ ಭಾವಾವಿಷ್ಟರಾಗಿ ಅಂದು ಪಂಡಿತನ ಹೃದಯ ವನ್ನು ಸ್ಪರ್ಶಿಸಿದರು. ಆ ಸಂದರ್ಭದ ವಿಷಯವನ್ನು ಈಗ ಸವಿಸ್ತಾರವಾಗಿ ಹೇಳುತ್ತೇವೆ.

15. ರಥಯಾತ್ರೆಯ ಮೊದಲನೆಯ ದಿನ ಶ್ರೀರಾಮಕೃಷ್ಣರು ಈಶಾನನ ಮನೆಗೆ ಬಂದಾಗ ಅವರೊಡನೆ ಯೋಗೇನ್ (ಸ್ವಾಮಿ ಯೋಗಾನಂದ), ಹಾಜರಾ, ಮುಂತಾದ ಕೆಲವು ಭಕ್ತರಿದ್ದರು. ಈಶಾನನ ತಾಯಿಯಂತಹ ದಯಾಳುವೂ, ದಾನಶೀಲಳೂ ಮತ್ತು ಭಗವದ್ಭಕ್ತಳೂ ಆದ ವ್ಯಕ್ತಿಯನ್ನು ಸಂಸಾರದಲ್ಲಿ ಕಾಣುವುದು ಬಹಳ ಕಷ್ಟ. ಅವಳಿಗೆ ಎಂಟು ಜನ ಗಂಡುಮಕ್ಕಳು, ಎಲ್ಲರೂ ವಿದ್ಯಾವಂತರು. ಮೂರನೆಯ ಮಗನಾದ ಸತೀ ಶನು ನರೇಂದ್ರನ ಸಹಪಾಠಿಯಾಗಿದ್ದ. ಅವನು ಪಕವಾಜ್ ಅನ್ನು ಚೆನ್ನಾಗಿ ನುಡಿಸು ತ್ತಿದ್ದನು. ನರೇಂದ್ರನ ಹಾಡಿಗೆ ಅವನು ಅನೇಕ ಬಾರಿ ನುಡಿಸಿರುವನು. ಈಶಾನನ ದಯೆಯ ಸಂಬಂಧವಾಗಿ ಒಂದು ದಿನ ಹೇಳಿದ್ದರು, ಅದು ವಿದ್ಯಾಸಾಗರನದಕ್ಕಿಂತ ಏನೂ ಕಡಮೆ ಇರಲಿಲ್ಲ ಎಂದು. ಈಶಾನನು ತನ್ನ ಸ್ವಂತ ಊಟವನ್ನೇ ಹಸಿದ ಭಿಕ್ಷುಕರಿಗೆ ಕೊಟ್ಟು ತಾನು ಏನು ಸಿಕ್ಕುವುದೋ ಅದನ್ನು ಉಂಡ ಎಷ್ಟೋ ಸಂದರ್ಭಗಳು ಇವೆ. ಇದನ್ನು ಸ್ವಾಮೀಜಿ ಅವರು ತಾವೇ ಕಣ್ಣಾರೆ ಕಂಡಿದ್ದರು. ಇತರರ ಕಷ್ಟದ ವಿಷಯ ವನ್ನು ಕೇಳಿ ಅದನ್ನು ಪರಿಹರಿಸುವ ಸಾಧ್ಯತೆ ತನಗೆ ಇಲ್ಲದಿದ್ದಾಗ ಅದಕ್ಕಾಗಿ ಅವನು ಕಣ್ಣೀರು ಸುರಿಸಿದುದನ್ನು ವಿವೇಕಾನಂದರು ಕಂಡಿದ್ದರು. ಅವನು ಎಷ್ಟು ದಯಾಳುವೋ ಅಷ್ಟೇ ಸಾಧನೆಯನ್ನೂ ಮಾಡುತ್ತಿದ್ದ. ಅವನು ದಕ್ಷಿಣೇಶ್ವರದಲ್ಲಿ ಬೆಳಗಿನಿಂದ ಸಂಜೆಯ ವರೆವಿಗೂ ನಿಯಮ ಪೂರ್ವಕವಾಗಿ ಜಪ ಮಾಡುತ್ತಿದ್ದುದನ್ನು ನಾವು ಕೇಳಿರುವೆವು. ಈ ಜಾಪಕ ಈಶಾನನ ಮೇಲೆ ಶ್ರೀರಾಮಕೃಷ್ಣರಿಗೆ ವಿಶೇಷ ಪ್ರೀತಿಯಿತ್ತು. ಒಂದು ದಿನ ಅವನು ಜಪ ಮುಗಿಸಿ ಶ್ರೀರಾಮಕೃಷ್ಣರೆಡೆಗೆ ಬಂದು ಅವರ ಪಾದಕ್ಕೆರಗಿದಾಗ ಅವರು ಭಾವಾವಿಷ್ಟರಾಗಿ ತಮ್ಮ ಶ್ರೀಚರಣವನ್ನು ಅವನ ತಲೆಯ ಮೇಲಿಟ್ಟಿದ್ದರು. ಅನಂತರ ಬಾಹ್ಯ ಪ್ರಜ್ಞೆಯನ್ನು ಪಡೆದು ಜೋರಾಗಿ ಈಶಾನನಿಗೆ ಹೇಳಿದರು: "ಅರೇ ಬ್ರಾಹ್ಮಣ, ಮುಳುಗಯ್ಯ, ಮುಳುಗಯ್ಯ" ಎಂದು (ಅಂದರೆ ಮೇಲೆ ಮೇಲೆ ತೇಲುತ್ತಲೇ ಜಪ ಮಾಡದೆ ಭಗವಂತನ ಹೆಸರಿನಲ್ಲಿ ತನ್ಮಯನಾಗು). ಆಗ ಅವನ ಬೆಳಗಿನ ಪೂಜೆ ಮತ್ತು ಜಪ ಸಂಜೆ ನಾಲ್ಕು ಗಂಟೆಯವರೆಗೂ ನಡೆಯುತ್ತಿತ್ತು. ಆಗ ಅವನು ಸ್ವಲ್ಪ ಆಹಾರ ವನ್ನು ಸ್ವೀಕರಿಸುತ್ತಿದ್ದನು. ಅನಂತರ ಮಾತುಕತೆ ಅಥವಾ ಭಜನೆ ಇತ್ಯಾದಿಗಳಲ್ಲಿ ಸ್ವಲ್ಪ ಹೊತ್ತು ಕಳೆದು ಪುನಃ ಸಂಜೆಯ ಜಪಕ್ಕೆ ಕುಳಿತುಕೊಳ್ಳುತ್ತಿದ್ದ. ಸಂಸಾರದ ಜವಾಬ್ದಾರಿ ಯನ್ನೆಲ್ಲಾ ಮಕ್ಕಳಿಗೆ ವಹಿಸಿ ಬಿಡುತ್ತಿದ್ದ. ಶ್ರೀರಾಮಕೃಷ್ಣರು ಆಗಾಗ ಅವನ ಮನೆಗೆ

ಬರುತ್ತಿದ್ದರು. ಅವನು ಕಲಕತ್ತೆಯಲ್ಲಿದ್ದಾಗ ಶ್ರೀರಾಮಕೃಷ್ಣರನ್ನು ನೋಡಲು ದಕ್ಷಿಣೇಶ್ವರಕ್ಕೆ ಬರುತ್ತಿದ್ದ. ಇಲ್ಲವೇ ಪವಿತ್ರ ದೇವಸ್ಥಾನ ಅಥವಾ ತೀರ್ಥಸ್ಥಳಗಳಿಗೆ ಹೋಗಿ ತಪಸ್ಸು ಮಾಡುತ್ತಿದ್ದ.

16. ಆ ವರ್ಷ ಶ್ರೀರಾಮಕೃಷ್ಣರು ರಥಯಾತ್ರೆಯ ದಿನ ಈಶಾನನ ಮನೆಗೆ ಬಂದು ಭಾಟ್‌ಪಾಡದ ಕೆಲವು ಬ್ರಾಹ್ಮಣರೊಡನೆ ಅನೇಕ ಧಾರ್ಮಿಕ ವಿಷಯಗಳನ್ನು ಮಾತನಾಡಿದ್ದರು. ಅನಂತರ ಸ್ವಾಮಿ ವಿವೇಕಾನಂದರ ಮೂಲಕ ಪಂಡಿತ್ ಶಶಧರನ ವಿಷಯವಾಗಿ ಕೇಳಿದರು. ಅವನು ಅಲ್ಲಿಯೇ ಹತ್ತಿರದಲ್ಲಿ ವಾಸಿಸುತ್ತಿರುವನೆಂದು ತಿಳಿದು ಅವನನ್ನು ನೋಡಲು ಶ್ರೀರಾಮಕೃಷ್ಣರು ಹೋದರು. ಪಂಡಿತನು ಕಲ್ಕತ್ತೆಗೆ ಬಂದ ವಿಷಯ ಸ್ವಾಮೀಜಿಗೆ ಮೊದಲಿನಿಂದಲೂ ತಿಳಿದಿತ್ತು. ಏಕೆಂದರೆ ಯಾರು ಅವನನ್ನು ಉಪನ್ಯಾಸ ನೀಡಲು ಆಹ್ವಾನಿಸಿದ್ದರೋ ಅವರ ನಿಕಟ ಪರಿಚಯ ಸ್ವಾಮೀಜಿಯವರಿಗಿತ್ತು. ಕಾಲೇಜ್ ಸ್ಟ್ರೀಟ್‌ನಲ್ಲಿದ್ದ ಅವನ ವಾಸಸ್ಥಳಕ್ಕೆ ಸ್ವಾಮೀಜಿಯವರು ಆಗಾಗ ಹೋಗುತ್ತಿದ್ದರು ಕೂಡ. ಅಷ್ಟೇ ಅಲ್ಲದೆ ಪಂಡಿತನ ಧಾರ್ಮಿಕ ವ್ಯಾಖ್ಯಾನದಲ್ಲಿ ಬಹಳ ದೋಷಗಳಿವೆ ಎಂದು ಸ್ವಾಮೀಜಿಯವರಿಗೆ ಅನಿಸಿತ್ತು. ಆದ್ದರಿಂದ ಅದರ ಬಗ್ಗೆ ಚರ್ಚಿಸಲು ಅವರು ಆಗಾಗ ಅವನ ಮನೆಗೆ ಹೋಗುತ್ತಿದ್ದರು. ಸ್ವಾಮಿ ವಿವೇಕಾನಂದರಿಗೆ ಪಂಡಿತನ ಬಗ್ಗೆ ಅನೇಕ ವಿಷಯ ತಿಳಿದಿತ್ತು. ಅದನ್ನೆಲ್ಲ ಅವರು ಶ್ರೀರಾಮಕೃಷ್ಣರಿಗೆ ತಿಳಿಸಿದರು. ಶ್ರೀರಾಮಕೃಷ್ಣರು ಸ್ವಾಮೀಜಿಯವರ ಜೊತೆ ಪಂಡಿತನನ್ನು ನೋಡಲು ಹೋಗಿ ಬಹು ಮೂಲ್ಯ ಸಲಹೆಗಳನ್ನು ಅಂದು ಇತ್ತರು. ಅಂದು ಶ್ರೀರಾಮಕೃಷ್ಣರು ಅವನಿಗೆ ಹೇಳಿದರು, ಜಗನ್ಮಾತೆಯ ಆದೇಶವನ್ನು ಪಡೆಯದೆ ಧರ್ಮೋಪದೇಶವನ್ನು ಮಾಡಲು ಹೋದರೆ ಅದು ನಿಷ್ಫಲವಾಗುವುದು ಮತ್ತು ಅಹಂಕಾರ ವೃದ್ಧಿಯಾಗುವುದು ಹಾಗೂ ಅದರಿಂದ ಅವನಿಗೆ ಹಾನಿಯೇ ಉಂಟಾಗುವುದು ಎಂದು. ಶ್ರೀರಾಮಕೃಷ್ಣರ ಶಕ್ತಿಶಾಲಿ ಮಾತುಗಳಿಂದ ಪ್ರಭಾವಿತನಾಗಿ ಪಂಡಿತನು ಮುಂದೆ ಕೆಲಕಾಲದ ನಂತರ ಧರ್ಮೋಪದೇಶವನ್ನು ಬಿಟ್ಟು ಕಾಮಾಖ್ಯಕ್ಕೆ ಹೋಗಿ ತಪಸ್ಸನ್ನು ಆಚರಿಸಿದನು.

17. ಅಂದು ಶ್ರೀರಾಮಕೃಷ್ಣರು ಪಂಡಿತನಿಂದ ಬೀಳ್ಕೊಂಡು ಯೋಗೇನನೊಡನೆ ಸಂಜೆಯ ಹೊತ್ತಿಗೆ ಬಲರಾಮನ ಮನೆಗೆ ಹೋದರು. ಯೋಗೇನನು ಆಗ ಆಹಾರದ ವಿಷಯದಲ್ಲಿ ತುಂಬಾ ಮಡಿವಂತನಾಗಿದ್ದ, ಯಾರ ಮನೆಯಲ್ಲೂ ನೀರನ್ನೂ ಕುಡಿಯುತ್ತಿರಲಿಲ್ಲ. ಅವನು ಅಂದು ತನ್ನ ಮನೆಯಲ್ಲಿ ಸ್ವಲ್ಪ ಮಾತ್ರ ತಿಂಡಿಯನ್ನು ತಿಂದು ಶ್ರೀರಾಮಕೃಷ್ಣರೊಡನೆ ಹೊರಟಿದ್ದ. ಶ್ರೀರಾಮಕೃಷ್ಣರೂ ಕೂಡ ಎಲ್ಲಿಯೂ ಅವನನ್ನು ತಿನ್ನಲು ಒತ್ತಾಯಿಸಲಿಲ್ಲ. ಏಕೆಂದರೆ ಅವನ ಶಿಷ್ಟಾಚಾರದ ವಿಷಯವಾಗಿ ಅವರಿಗೆ ತಿಳಿದಿತ್ತು. ಯೋಗೇನನು ಬಲರಾಮನ ಮನೆಯಲ್ಲಿ ಮಾತ್ರ ಹಾಲು ಹಣ್ಣನ್ನು ಸ್ವೀಕರಿಸುತ್ತಿದ್ದ. ಏಕೆಂದರೆ ಬಲರಾಮನು ದೊಡ್ಡ ಭಕ್ತ ಮತ್ತು ಶ್ರೀರಾಮಕೃಷ್ಣರ ಮೇಲೆ ಅವನಿಗೆ ತುಂಬಾ ಗೌರವ. ಈ ವಿಷಯ ಶ್ರೀರಾಮಕೃಷ್ಣರಿಗೂ ಗೊತ್ತಿತ್ತು. ಆದ್ದರಿಂದ ಅವನ ಮನೆಗೆ ಹೋದ ಕೂಡಲೇ ಅವರು ಬಲರಾಮ ಮತ್ತಿತರರಿಗೆ ಹೇಳಿದರು: "ಅವನು

(ಯೋಗೇನ್) ಇಂದು ಏನನ್ನೂ ತೆಗೆದುಕೊಂಡಿಲ್ಲ. ದಯವಿಟ್ಟು ಅವನಿಗೆ ತಿನ್ನಲು ಏನಾದರೂ ಕೊಡಿ." ಬಲರಾಮನು ಪ್ರೀತಿಯಿಂದ ಅವನನ್ನು ಮನೆಯ ಒಳಗೆ ಕರೆದು ಕೊಂಡು ಹೋಗಿ ಉಪಾಹಾರವನ್ನು ಕೊಟ್ಟನು. ಯಾವಾಗಲೂ ಭಾವಸಮಾಧಿಯಲ್ಲಿರು ತ್ತಿದ್ದ ಶ್ರೀರಾಮಕೃಷ್ಣರಿಗೆ ತಮ್ಮ ಭಕ್ತರ ಶಾರೀರಿಕ ಮತ್ತು ಮಾನಸಿಕ ಆವಶ್ಯಕತೆಗಳ ವಿಷಯದ ಕಡೆಗೂ ಎಷ್ಟೊಂದು ಗಮನವಿರುತ್ತಿತ್ತು ! ಇದಕ್ಕೆ ಉದಾಹರಣೆಯಾಗಿ ಈ ಮೇಲಿನ ಘಟನೆಯನ್ನು ಉಲ್ಲೇಖಿಸಿದೆವು.

18. ರಥಯಾತ್ರೆಯ ಸಂದರ್ಭದಲ್ಲಿ ಶ್ರೀರಾಮಕೃಷ್ಣರು ಬಲರಾಮನ ಮನೆಯ ಲ್ಲಿದ್ದರೆ ಅದೊಂದು ದೊಡ್ಡ ಆನಂದದ ಸಂಭ್ರಮ. ಅಂದು ಸಂಜೆಯಾದ ನಂತರ ಶ್ರೀ ಜಗನ್ನಾಥ ಮುಂತಾದ ವಿಗ್ರಹಗಳನ್ನು ಮಾಲ್ಯಚಂದನಾದಿಗಳಿಂದ ಅಲಂಕರಿಸಿ ಒಳಗಿನ ದೇವರ ಕೋಣೆಯಿಂದ ಹೊರಗೆ ತರಲಾಯಿತು. ಮೊದಲೇ ಸಜ್ಜುಗೊಳಿಸಿದ್ದ ಸಣ್ಣ ರಥ ದಲ್ಲಿ ವಿಗ್ರಹಗಳನ್ನು ಇರಿಸಿ ಮತ್ತೆ ಪೂಜೆ ನಡೆಯಿತು. ಬಲರಾಮನ ಪುರೋಹಿತ ವಂಶಕ್ಕೆ ಸೇರಿದ ಮತ್ತು ಶ್ರೀರಾಮಕೃಷ್ಣರ ಭಕ್ತನಾದ ಫಕೀರನು ಅಂದು ಪೂಜೆ ಮಾಡಿ ದನು.

ಫಕೀರನು ನಿಷ್ಠೆಯಿಂದ ಧಾರ್ಮಿಕ ಸಾಧನೆಗಳನ್ನು ಮಾಡುತ್ತಿದ್ದ. ಶಾಲೆಯಲ್ಲಿ ಓದುತ್ತಿರುವಾಗ ಅವನಿಗೆ ಬಲರಾಮನೇ ಆಶ್ರಯನಾಗಿದ್ದ. ಬಲರಾಮನ ಏಕೈಕ ಪುತ್ರ ನಾದ ರಾಮಕೃಷ್ಣನಿಗೆ ಅವನು ಪಾಠ ಹೇಳುತ್ತಿದ್ದ. ಅವನು ನಿಷ್ಠಾವಂತನೂ, ಭಕ್ತಿ ವಂತನೂ ಆಗಿದ್ದು ಶ್ರೀರಾಮಕೃಷ್ಣರನ್ನು ಮೊದಲ ಬಾರಿಗೆ ನೋಡಿದ ಕೂಡಲೇ ಅವರ ಪರಮ ಭಕ್ತನಾದ. ಶ್ರೀರಾಮಕೃಷ್ಣರು ಅವನ ಬಾಯಿಂದ ಆಗಾಗ ಸ್ತೋತ್ರಾದಿಗಳನ್ನು ಕೇಳಲು ಇಷ್ಟಪಡುತ್ತಿದ್ದರು. ಒಂದು ದಿನ ಶ್ರೀಶಂಕರಾಚಾರ್ಯರು ರಚಿಸಿದ 'ಕಾಲೀ' ಸ್ತೋತ್ರವನ್ನು ಹೇಗೆ ಪಠಿಸಬೇಕೆಂಬುದನ್ನು ಶ್ರೀರಾಮಕೃಷ್ಣರು ಅವನಿಗೆ ತೋರಿಸಿ ಕೊಟ್ಟರು. ಅದನ್ನು ನಿಧಾನವಾಗಿ ಪ್ರತಿಯೊಂದು ಶಬ್ದವನ್ನು ಸ್ಪಷ್ಟವಾಗಿ ಉಚ್ಚರಿ ಸುತ್ತಾ ಹೇಳಬೇಕೆಂದು ಅವರು ತಿಳಿಸಿಕೊಟ್ಟರು. ಅಂದು ಶ್ರೀರಾಮಕೃಷ್ಣರು ಫಕೀರ ನನ್ನು ತಾವು ತಂಗಿದ್ದ ಉತ್ತರ ವರಾಂಡಕ್ಕೆ ಕರೆದುಕೊಂಡು ಹೋಗಿ ಭಾವಾವೇಶದಿಂದ ಅವನನ್ನು ಸ್ಪರ್ಶಿಸಿ ಅವನಿಗೆ ಧ್ಯಾನ ಮಾಡಲು ಹೇಳಿದರು. ಇದರ ಪರಿಣಾಮವಾಗಿ ಅವನಿಗೆ ಅದ್ಭುತ ದರ್ಶನಗಳಾಗಿದ್ದವು.

ಈಗ ಸಂಕೀರ್ತನದೊಂದಿಗೆ ರಥ ಎಳೆಯುವುದು ಪ್ರಾರಂಭವಾಯಿತು. ಶ್ರೀರಾಮ ಕೃಷ್ಣರು ತಾವೇ ರಥದ ಹಗ್ಗವನ್ನು ಸ್ವಲ್ಪ ಹೊತ್ತು ಎಳೆದರು. ಅನಂತರ ಭಾವಾವೇಶ ದಿಂದ ತಾಳಹಾಕುತ್ತಾ ನರ್ತಿಸತೊಡಗಿದರು. ಅವರು ಭಾವೋನ್ಮತ್ತರಾಗಿ ನರ್ತಿಸುವು ದನ್ನು ಕಂಡು ಎಲ್ಲರೂ ಭಕ್ತಿಯಿಂದ ಮೈ ಮರೆತರು. ಕೆಳಗಿನ ಅಂಗಳದ ಸುತ್ತ ಇರುವ ಮೊದಲನೇ ಮಹಡಿಯ ವರಾಂಡದಲ್ಲಿ ರಥವನ್ನು ಅನೇಕ ಸುತ್ತು ಎಳೆದರು. ಭಕ್ತ ರೆಲ್ಲರೂ ಭಾವಾವೇಶದಿಂದ ಹಾಡುತ್ತಿದ್ದರು ಮತ್ತು ನರ್ತಿಸುತ್ತಿದ್ದರು. ಕೊನೆಯಲ್ಲಿ ಶ್ರೀ ಜಗನ್ನಾಥ, ಶ್ರೀ ಗೋವಿಂದ, ಶ್ರೀಮತಿ ರಾಧೆ, ಶ್ರೀಚೈತನ್ಯ ಮತ್ತು ಅವನ

ಭಕ್ತರು ಇವರಿಗೆಲ್ಲ ಜಯಕಾರವನ್ನು ಮಾಡುತ್ತಾ ಸಂಕೀರ್ತನೆಯನ್ನು ಸಮಾಪ್ತಿಗೊಳಿಸಿದರು. ಅನಂತರ ಶ್ರೀ ಜಗನ್ನಾಥ ಮುಂತಾದ ವಿಗ್ರಹಗಳನ್ನು ರಥದಿಂದ ಇಳಿಸಿ ಎರಡನೇ ಮಹಡಿಯಲ್ಲಿ ಏಳುದಿನದ ವರೆಗೆ ಒಂದು ಪ್ರತ್ಯೇಕ ಸ್ಥಳದಲ್ಲಿ ಇರಿಸಿದರು. ಇದರ ಅರ್ಥವೇನೆಂದರೆ ಏಳು ದಿನದ ರಥಯಾತ್ರೆಯ ನಂತರ ಜಗನ್ನಾಥನು ಮತ್ತೆ ತನ್ನ ಸ್ಥಳಕ್ಕೆ ಹಿಂತಿರುಗಬೇಕು ಎಂದು. ಮೇಲೆ ಹೇಳಿದ ಸ್ಥಳದಲ್ಲಿ ಜಗನ್ನಾಥನನ್ನು ಕೂರಿಸಿದ ಮೇಲೆ ಅವನಿಗೆ ನೈವೇದ್ಯ ಮಾಡಿದರು. ಪ್ರಸಾದವನ್ನು ಮೊದಲು ಶ್ರೀರಾಮಕೃಷ್ಣರಿಗೆ ಕೊಟ್ಟು ಅನಂತರ ಇತರರಿಗೆ ಹಂಚಲಾಯಿತು. ಶ್ರೀರಾಮಕೃಷ್ಣರು ಮತ್ತು ಯೋಗೇನ್ ಅಂದು ರಾತ್ರಿ ಅಲ್ಲೇ ಬಲರಾಮನ ಮನೆಯಲ್ಲೇ ಕಳೆದರು. ಇತರ ಅನೇಕ ಭಕ್ತರು ತಮ್ಮ ತಮ್ಮ ಮನೆಗೆ ಹಿಂದಿರುಗಿದರು.

19. ಮರುದಿನ ಬೆಳಗ್ಗೆ ಎಂಟು ಅಥವಾ ಒಂಬತ್ತು ಘಂಟೆಗೆ ಶ್ರೀರಾಮಕೃಷ್ಣರು ದೋಣಿಯ ಮೂಲಕ ದಕ್ಷಿಣೇಶ್ವರಕ್ಕೆ ಹೊರಟರು. ಹೊರಡುವುದಕ್ಕೆ ಮುನ್ನ ಅವರು ಜಗನ್ನಾಥನಿಗೆ ಪ್ರಣಾಮ ಮಾಡಿದರು ಮತ್ತು ಅಲ್ಲಿದ್ದ ಭಕ್ತರೆಲ್ಲರಿಂದ ಪ್ರಣಾಮವನ್ನು ಸ್ವೀಕರಿಸಿದರು. ಸ್ತ್ರೀ ಭಕ್ತರೆಲ್ಲರೂ ಸ್ವಲ್ಪದೂರ ಅವರ ಹಿಂದೆಯೇ ಹೋಗಿ ಅನಂತರ ಖಿನ್ನ ಮನಸ್ಕರಾಗಿ ಹಿಂದಿರುಗಿದರು. ಏಕೆಂದರೆ ಅಂಥಾ ಶ್ರೀರಾಮಕೃಷ್ಣರನ್ನು ಬೀಳ್ಕೊಡುವುದಕ್ಕಾದರೂ ಹೇಗೆ ಮನಸ್ಸಾಗುವುದು ? ಒಬ್ಬಳು ಭಕ್ತಳು ಮಾತ್ರ ಹೊರಗಿನ ಅಂಗಳದ ವರಾಂಡದವರೆಗೂ ಅವರನ್ನನುಸರಿಸಿದಳು. ಅವಳು ಎಷ್ಟೊಂದು ಪ್ರೇಮರತಳಾಗಿದ್ದಳೆಂದರೆ ಅಲ್ಲಿ ಅಪರಿಚಿತ ಪುರುಷರು ಇರುವ ಪರಿವೆಯೇ ಅವಳಿಗಿರಲಿಲ್ಲ.

ಶ್ರೀರಾಮಕೃಷ್ಣರು ಸ್ತ್ರೀ ಭಕ್ತರಿಂದ ಬೀಳ್ಕೊಂಡು ಹೊರಟು ಹೋಗುವಾಗ ಅವರೂ ಒಂದು ಆಧ್ಯಾತ್ಮಿಕ ಭಾವದಲ್ಲಿದ್ದರು. ಆ ಭಕ್ತಳು ತಮ್ಮ ಹಿಂದೆ ಬರುತ್ತಿರುವಳೆಂಬುದೇ ತಿಳಿದಿರಲಿಲ್ಲ. ಆಗ ಅವರು ಹಾಗೆ ನಡೆದುಕೊಂಡು ಹೋಗುತ್ತಿರುವುದನ್ನು ಯಾರು ನೋಡಿದರೋ ಅವರಿಗೆ ಮಾತ್ರ ಅದು ಅರ್ಥವಾಗಬೇಕೇ ಹೊರತು ಇತರರಿಗೆ ಅದನ್ನು ವಿವರಿಸುವುದು ಕಷ್ಟ. ಹನ್ನೆರಡು ವರ್ಷ ಅವರು ಏಕಾಗ್ರತೆಯನ್ನು ಅಭ್ಯಾಸ ಮಾಡಿದ್ದರ ಫಲವಾಗಿ ಅವರ ಮನಸ್ಸು ಮತ್ತು ಬುದ್ಧಿ ಅವರು ಎಲ್ಲಿ ಇರಿಸಿದರೆ ಅಲ್ಲಿ ಇರುತ್ತಿದ್ದುವು, ಯಾವ ಕೆಲಸದಲ್ಲಿ ಬೇಕೋ ಅದರಲ್ಲಿ ಮಾತ್ರ ಮಗ್ನವಾಗಿರುತ್ತಿದ್ದುವು, ಅತ್ತಿತ್ತ ಸ್ವಲ್ಪವೂ ಚಲಿಸುತ್ತಿರಲಿಲ್ಲ. ಅವರ ದೇಹ ಮತ್ತು ಇಂದ್ರಿಯಗಳು ಎಷ್ಟರ ಮಟ್ಟಿಗೆ ಅವರ ಹಿಡಿತದಲ್ಲಿದ್ದವೆಂದರೆ ಆಯಾಯ ಸಂದರ್ಭಗಳಲ್ಲಿ ಬರುವ ಮನಸ್ಸಿನ ಭಾವಗಳನ್ನು ಯಥಾರ್ಥ ರೀತಿಯಲ್ಲಿ ವ್ಯಕ್ತಪಡಿಸುತ್ತಿದ್ದವು, ಸ್ವಲ್ಪವೂ ಚೆಲ್ಲಾಟವಾಡುತ್ತಿರಲಿಲ್ಲ. ಇದನ್ನು ನಾವು ಅರ್ಥಮಾಡಿಕೊಳ್ಳುವುದು ಕಷ್ಟ. ಏಕೆಂದರೆ ನಮ್ಮ ಮನಸ್ಸಿನ ಕಡೆ ನಮ್ಮ ಮನಸ್ಸನ್ನು ಹರಿಸಿದಾಗ ಅದೊಂದು ವಿರುದ್ಧ ಆಲೋಚನೆಗಳ ಯುದ್ಧ ಭೂಮಿಯಂತೆ ಕಂಡು ಬರುತ್ತದೆ. ಅಭ್ಯಾಸಬಲದಿಂದ ನಮ್ಮ ದೇಹ ಮನಸ್ಸುಗಳು ಆಂತರಿಕ ಪ್ರೇರಣೆಗಳಿಗೆ ತಕ್ಕಂತೆ ಕುಣಿದಾಡುತ್ತವೆ, ನಾವು ಎಷ್ಟೇ ಪ್ರಯತ್ನಪಟ್ಟರೂ ಅವು ನಮ್ಮ ಹಿಡಿತಕ್ಕೆ ಬರುವುದಿಲ್ಲ. ನಮ್ಮ ಮತ್ತು ಶ್ರೀರಾಮಕೃಷ್ಣರ ಮನಸ್ಸುಗಳ ಸ್ವಭಾವದಲ್ಲಿ ಅಷ್ಟೊಂದು ವ್ಯತ್ಯಾಸವುಂಟು !

20. ಇದಕ್ಕೆ ಉದಾಹರಣೆಯಾಗಿ ಎಷ್ಟೋ ಘಟನೆಗಳನ್ನು ಉಲ್ಲೇಖಿಸಬಹುದು. ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿ ಜಗನ್ಮಾತೆ ಕಾಳಿಗೆ ನಮಸ್ಕರಿಸಲು ತಮ್ಮ ಕೊಠಡಿಯಿಂದ ಹೊರಟರು. ಅವರು ತಮ್ಮ ಕೊಠಡಿಯ ಪೂರ್ವ ವರಾಂಡಕ್ಕೆ ಬಂದು ಮೆಟ್ಟಿಲನ್ನು ಇಳಿದು ಅಂಗಳದ ಮೂಲಕ ನೇರವಾಗಿ ಕಾಳಿ ದೇವಸ್ಥಾನದ ಕಡೆಗೆ ಹೊರಟರು. ಮಧ್ಯದಲ್ಲಿ ರಾಧಾಗೋವಿಂದ ದೇವಸ್ಥಾನವಿದೆ. ಕಾಳಿದೇವಸ್ಥಾನಕ್ಕೆ ಹೋಗಲು ಇಷ್ಟಪಟ್ಟಿದ್ದರೆ ಮೊದಲು ರಾಧಾಗೋವಿಂದನ ದೇವಸ್ಥಾನಕ್ಕೆ ಹೋಗಿ ಅಲ್ಲಿ ನಮಸ್ಕರಿಸಿಯಾದ ಮೇಲೆ ಕಾಳೀದೇವಸ್ಥಾನಕ್ಕೆ ಹೋಗಬಹುದಿತ್ತು. ಆದರೆ ಅವರು ಹಾಗೆ ಮಾಡುತ್ತಲೇ ಇರಲಿಲ್ಲ, ಅವರು ನೇರವಾಗಿ ಕಾಳೀದೇವಸ್ಥಾನಕ್ಕೆ ಹೋಗಿ ನಮಸ್ಕರಿಸುತ್ತಿದ್ದರು. ಹಿಂದಿರುಗಿ ಬರುವಾಗ ಮಾತ್ರವೇ ಅವರು ರಾಧಾಗೋವಿಂದ ದೇವಸ್ಥಾನಕ್ಕೆ ಹೋಗುತ್ತಿದ್ದರು, ಕಾಳಿಯ ಮೇಲೆ ಅವರಿಗೆ ಹೆಚ್ಚು ಪ್ರೀತಿಯಿದ್ದುದರಿಂದ ಅವರು ಹಾಗೆ ಮಾಡುತ್ತಾರೆ ಎಂದು ಮೊದಲು ನಾವು ಭಾವಿಸಿದ್ದೆವು. ಒಂದು ದಿನ ಅವರೇ ನಮಗೆ ಹೇಳಿದರು : "ನೋಡು, ಇದು ಯಾಕೆ ಹೀಗೆ, ಹೇಳುತ್ತೀಯಾ ? ನಾನು ಕಾಳೀ ದೇವಸ್ಥಾನಕ್ಕೆ ಹೋಗಬೇಕೆಂದು ಮನಸ್ಸು ಮಾಡಿದರೆ ನೇರವಾಗಿ ಅಲ್ಲಿಗೇ ಹೋಗಬೇಕು. ಆ ಕಡೆ ಈ ಕಡೆ ಹೋಗುವುದಾಗಲಿ ಅಥವಾ ರಾಧಾಗೋವಿಂದ ದೇವಸ್ಥಾನಕ್ಕೆ ಹೋಗಿ ಪ್ರಣಾಮ ಮಾಡುವುದಾಗಲಿ ಸಾಧ್ಯವೇ ಇಲ್ಲ. ಯಾರೋ ನನ್ನನ್ನು ಕಾಲು ಹಿಡಿದು ಎಳೆದುಕೊಂಡು ಅತ್ತಿತ್ತ ಎಲ್ಲಿಯೂ ಹೋಗಲು ಬಿಡದೆ ನೇರವಾಗಿ ಕಾಳೀ ದೇವಸ್ಥಾನಕ್ಕೆ ಕರೆದುಕೊಂಡು ಹೋದಂತೆ ಆಗುತ್ತದೆ. ಜಗನ್ಮಾತೆ ಕಾಳಿಯನ್ನು ನೋಡಿಯಾದ ಮೇಲೆ ನಾನು ಇಷ್ಟಬಂದ ಕಡೆ ಹೋಗಬಹುದು. ಇದು ಯಾಕೆ ಹೀಗೆ, ಹೇಳುತ್ತೀಯಾ ?" ನಮಗೆ ತಿಳಿಯದೆಂದು ಹೇಳಿದೆವು. ಆದರೆ ಮನಸ್ಸಿನಲ್ಲಿಯೇ ಭಾವಿಸಿದೆವು : "ಇದು ಸಾಧ್ಯವೇ ? ಮೊದಲು ರಾಧಾಗೋವಿಂದ ದೇವಸ್ಥಾನಕ್ಕೆ ಹೋಗಿ ನಮಸ್ಕರಿಸಿಯಾದ ಮೇಲೆ ಕಾಳೀ ದೇವಸ್ಥಾನಕ್ಕೆ ಹೋಗಬಹುದು. ಅದರಲ್ಲೇನು ತೊಂದರೆ ? ಮಾತೆ ಕಾಳಿಯನ್ನು ನೋಡುವುದರಲ್ಲಿ ಅವರಿಗೆ ಹೆಚ್ಚು ಆಸಕ್ತಿಯಿದ್ದುದರಿಂದ ಹಾಗೆ ಆಗುತ್ತಿದ್ದಿರಬೇಕು." ಆದರೆ ಅದನ್ನು ಹೊರಗಡೆ ವ್ಯಕ್ತಪಡಿಸಲಾಗಲಿಲ್ಲ. ಶ್ರೀರಾಮಕೃಷ್ಣರು ಕೆಲವೊಮ್ಮೆ ಈ ವಿಷಯವನ್ನು ಕುರಿತು ಹೀಗೆ ಹೇಳುತ್ತಿದ್ದರು : "ಏನು ಗೊತ್ತೇ ? ಯಾವಾಗ ಮನಸ್ಸಿನಲ್ಲಿ ಇದನ್ನು ಮಾಡಬೇಕು ಎನಿಸುತ್ತದೊ ಆಗಲೇ ಅದನ್ನು ಮಾಡಬೇಕಾಗುತ್ತದೆ. ಸ್ವಲ್ಪವೂ ತಡಮಾಡಿದರೆ ಆಗುವುದಿಲ್ಲ." ಏಕನಿಷ್ಠೆಯ ಮನಸ್ಸಿನ ಸ್ವಭಾವವೇ ಹೀಗೆ ಎಂಬುದನ್ನು ಆಗ ನಾವು ಅರ್ಥಮಾಡಿಕೊಂಡಿರಲಿಲ್ಲ. ಶ್ರೀರಾಮಕೃಷ್ಣರ ಮನಸ್ಸು ತುಂಬ ಕಾಲದಿಂದಲೇ ಸಂಪೂರ್ಣ ಏಕನಿಷ್ಠವಾಗಿತ್ತು, ಸ್ವಲ್ಪವೂ ವಿಚಲತೆ ಎಂಬುದೇ ಇರಲಿಲ್ಲ. ಎಲ್ಲಾ ವಿರುದ್ಧ ಆಲೋಚನೆಗಳ ಮತ್ತು ಭಾವನೆಗಳ ಸೆಣಸಾಟವು ಬಹಳ ಹಿಂದೆಯೇ ಮುಗಿದು ಹೋಗಿತ್ತು. ಅವರ ಮನಸ್ಸಿನಲ್ಲಿ ಒಂದೇ ಒಂದು ಪ್ರಧಾನ ಚಿಂತನಾಧಾರೆಯಿತ್ತು. ಆ ಸಂದರ್ಭದಲ್ಲಿ ಈ ವಿಷಯ ನಮಗರ್ಥವಾಗಿರಲಿಲ್ಲ. ಮತ್ತೆ ಕೆಲವೊಮ್ಮೆ ಅವರು ಹೇಳುತ್ತಿದ್ದರು: "ನೋಡು, ನಾನು ನಿರ್ವಿಕಲ್ಪ ಸಮಾಧಿಯಲ್ಲಿದ್ದಾಗ ಏನೂ ಉಳಿಯುವುದಿಲ್ಲ.

ನಾನೂ ಇಲ್ಲ ನೀನೂ ಇಲ್ಲ, ನೋಡುವುದೂ ಇಲ್ಲ ಕೇಳುವುದೂ ಇಲ್ಲ, ಮಾತೂ ಇಲ್ಲ ಮೌನವೂ ಇಲ್ಲ. ಆ ಸ್ಥಿತಿಯಿಂದ ಒಂದೆರಡು ಮೆಟ್ಟಿಲು ಕೆಳಗೆ ಬಂದಾಗಲೂ ಕೂಡ ನಾನು ಎಂಥಾ ಒಂದು ದಿವ್ಯಭಾವದಲ್ಲಿರುತ್ತೇನೆಂದರೆ ವಿವಿಧ ವ್ಯಕ್ತಿಗಳು ಮತ್ತು ವಸ್ತುಗಳ ಕಡೆ ಗಮನ ಹರಿಸಲಾಗುವುದೇ ಇಲ್ಲ. ಆಗ ನಾನು ಊಟಕ್ಕೆ ಕುಳಿತರೆ ಮತ್ತು ಐವತ್ತು ಬಗೆಯ ಪದಾರ್ಥಗಳನ್ನು ನನ್ನ ಮುಂದೆ ಇಟ್ಟಿದ್ದರೆ ಆಗ ನನ್ನ ಕೈ ಅವುಗಳೆಲ್ಲದರ ಕಡೆ ಹೋಗುವುದೇ ಇಲ್ಲ. ಅದು ಒಂದೇ ಜಾಗದಿಂದ ಒಂದೇ ತಟ್ಟೆಯಿಂದ ಮಾತ್ರ ಆಹಾರ ತೆಗೆದುಕೊಳ್ಳುತ್ತದೆ. ನಾನು ಕೆಲವೊಮ್ಮೆ ಎಂಥಾ ಸ್ಥಿತಿಯಲ್ಲಿರುತ್ತೇನೆಂದರೆ, ಅನ್ನ, ಬೇಳೆ, ತರಕಾರಿ, ಪಾಯಸ ಎಲ್ಲವನ್ನೂ ಬೆರೆಸಿ ತಿನ್ನಬೇಕಾಗುತ್ತದೆ". ಅದ್ವೈತ ಸ್ಥಿತಿಗಿಂತ ಎರಡು ಮೂರು ಮೆಟ್ಟಿಲು ಕೆಳಗಿನ ಸ್ಥಿತಿಯ ಬಗ್ಗೆ ಕೇಳಿ ನಮಗೆ ಅತ್ಯಾಶ್ಚರ್ಯವಾಯಿತು. ಅವರು ಮುಂದುವರಿಸಿದರು, "ನನಗೆ ಇನ್ನೊಂದು ಅವಸ್ಥೆ ಉಂಟಾಗುತ್ತದೆ, ಆಗ ನನಗೆ ಯಾರನ್ನೂ ಮುಟ್ಟಲಾಗುವುದಿಲ್ಲ. (ಭಕ್ತರನ್ನು ನಿರ್ದೇಶಿಸಿ) ಇವರಲ್ಲಿ ಯಾರಾದರೂ ನನ್ನನ್ನು ಮುಟ್ಟಿದರೆ ನಾನು ವೇದನೆಯಿಂದ ಕೂಗಿಕೊಳ್ಳಬೇಕಾಗುತ್ತದೆ." ಇದರ ರಹಸ್ಯವನ್ನು ಆಗ ನಮ್ಮಲ್ಲಿ ಅರ್ಥ ಮಾಡಿಕೊಳ್ಳುವವರು ಯಾರಿದ್ದರು ? ಶ್ರೀರಾಮಕೃಷ್ಣರಲ್ಲಿ ಶುದ್ಧ ಸತ್ತ್ವಗುಣದ ಆಧಿಕ್ಯ ಎಷ್ಟರ ಮಟ್ಟಿಗಿತ್ತೆಂದರೆ ಅತ್ಯಲ್ಪ ಅಶುದ್ಧಿಯನ್ನೂ ಅವರಿಗೆ ಸಹಿಸಲಾಗುತ್ತಿರಲಿಲ್ಲ. ಮತ್ತೆ ಅವರು ಹೇಳುತ್ತಾರೆ, "ನನಗೆ ಇನ್ನೊಂದು ರೀತಿಯ ಅವಸ್ಥೆ ಉಂಟಾಗುತ್ತದೆ. ಆಗ ನಾನು ಬಾಬುರಾಮನನ್ನು ಮಾತ್ರ ಸ್ಪರ್ಶಿಸಲು ಸಾಧ್ಯ. ಅವನು ನನ್ನನ್ನು ಹಿಡಿದುಕೊಂಡರೆ ನನಗೆ ವೇದನೆಯಾಗುವುದಿಲ್ಲ. ಅವನು ನನಗೆ ತಿನ್ನಿಸಿದರೆ ನಾನು ತಿನ್ನಬಲ್ಲೆ." ಈ ಮಾತು ಇಲ್ಲಿಗೆ ಸಾಕು, ಈಗ ಹಿಂದಿನ ಪ್ರಸಂಗಕ್ಕೆ ಬರೋಣ.

21. ಶ್ರೀರಾಮಕೃಷ್ಣರು ಹೊರಗೆ ಬಂದು ಹಿಂತಿರುಗಿ ನೋಡುತ್ತಾರೆ, ಆ ಸ್ತ್ರೀ ಭಕ್ತಳು ತಮ್ಮ ಹಿಂದೆಯೇ ಬರುತ್ತಿದ್ದಾಳೆ. ನೋಡಿ ಹಾಗೆಯೇ ನಿಂತರು. 'ಮಾ ಆನಂದ ಮಯಿ ಮಾ ಆನಂದಮಯಿ' ಎಂದು ಹೇಳುತ್ತಾ ಅವರು ಆಕೆಗೆ ಮತ್ತೆ ಮತ್ತೆ ಪ್ರಣಾಮ ಮಾಡಿದರು. ಭಕ್ತಳೂ ಕೂಡ ಶ್ರೀರಾಮಕೃಷ್ಣರ ಪಾದದ ಮೇಲೆ ತಲೆಯಿಟ್ಟು ಪ್ರತಿ ನಮಸ್ಕಾರ ಮಾಡಿದಳು. ಆಕೆ ಮೇಲೆದ್ದ ಮೇಲೆ ಶ್ರೀರಾಮಕೃಷ್ಣರು "ತಾಯಿ, ನನ್ನ ಜೊತೆ ಏಕೆ ಬರುವುದಿಲ್ಲ, ಏಕೆ ಬರುವುದಿಲ್ಲ ?" ಎಂದು ಕೇಳಿದರು. ಅವರು ಈ ಮಾತುಗಳನ್ನು ಎಂಥಾ ಭಾವದಲ್ಲಿ ಹೇಳಿದರೆಂದರೆ ಆ ಭಕ್ತಳಿಗೆ ಬಲವಾದ ಆಕರ್ಷಣೆಯುಂಟಾಯಿತು. ಆಕೆ ಪಲ್ಲಕ್ಕಿಯಲ್ಲಿ ಅಲ್ಲದೆ ಮನೆಯಿಂದ ಹೊರಗೆ ಹೋದವಳಲ್ಲ. ಅವಳಿಗೆ ಆಗ ಸುಮಾರು ಮೂವತ್ತು ವಯಸ್ಸು. ಸರಿ ತಪ್ಪುಯಾವುದನ್ನೂ ಗಮನಿಸದೆ ಆಕೆಯು ಶ್ರೀರಾಮಕೃಷ್ಣರ ಜೊತೆ ದಕ್ಷಿಣೇಶ್ವರಕ್ಕೆ ಹೊರಟಳು. ಹೊರಡುವುದಕ್ಕಿಂತ ಮುಂಚೆ ಮನೆಯೊಳಗೆ ಹೋಗಿ ಬಲರಾಮನ ಪತ್ನಿಗೆ "ನಾನು ಶ್ರೀರಾಮಕೃಷ್ಣರ ಜೊತೆ ದಕ್ಷಿಣೇಶ್ವರಕ್ಕೆ ಹೋಗುತ್ತಿದ್ದೇನೆ" ಎಂದು ತಿಳಿಸಿದಳು. ಅವಳು ಹೋಗುತ್ತಾಳೆಂದು ಕೇಳಿ ಇನ್ನೊಬ್ಬಳು ಭಕ್ತಳು ತನ್ನ ಕೆಲಸವನ್ನೆಲ್ಲಾ ಅಲ್ಲಿಯೇ ಬಿಟ್ಟು

ಹೊರಟಳು. ಶ್ರೀರಾಮಕೃಷ್ಣರು ನೇರವಾಗಿ ಹೋಗಿ ದೋಣಿಯಲ್ಲಿ ಕುಳಿತರು. ಅವರ ಜೊತೆ ಯೋಗೇನ್ ಮತ್ತು ಇತರ ಬಾಲಕಭಕ್ತರು ಇದ್ದರು. ಆ ಇಬ್ಬರು ಮಹಿಳಾ ಭಕ್ತರು ಓಡಿ ಬಂದು ದೋಣಿಯನ್ನು ಹತ್ತಿದರು ಮತ್ತು ಹೊರಗಡೆ ಹಲಗೆಯ ಮೇಲೆ ಕುಳಿತುಕೊಂಡರು. ದೋಣಿ ಹೊರಟಿತು.

22. ದೋಣಿ ಹೋಗುತ್ತಿರುವಾಗ ಸ್ತ್ರೀ ಭಕ್ತಳು ಶ್ರೀರಾಮಕೃಷ್ಣರನ್ನು ಕೇಳಿದಳು : "ಭಗವಂತನನ್ನೇ ಕರೆಯಬೇಕು. ಅವನಿಗೆ ಹದಿನಾರಾಣೆ ಮನಸ್ಸನ್ನು ಕೊಡಬೇಕು ಎಂದಿಚ್ಛೆಯಾಗುತ್ತದೆ. ಆದರೆ ಮನಸ್ಸು ಮಾತ್ರ ಏನು ಮಾಡಿದರೂ ಕೇಳುವುದಿಲ್ಲ, ಏನು ಮಾಡುವುದು ?"

ಶ್ರೀರಾಮಕೃಷ್ಣರು : "ಅವನನ್ನೇ ಆಶ್ರಯಿಸಿಕೊಂಡಿರು. ಈ ಪ್ರಪಂಚದಲ್ಲಿ ಗಾಳಿಗೆ ಹಾರಾಡುವ ತರಗೆಲೆಯಂತಿರಬೇಕು. ಉಂಡ ಎಲೆಯನ್ನು ಹೊರಗೆ ಎಸೆಯುತ್ತಾರೆ. ಗಾಳಿ ಅದನ್ನು ಎಲ್ಲಿ ಬೇಕೆಂದರೆ ಅಲ್ಲಿಗೆ ಹಾರಿಸಿಕೊಂಡು ಹೋಗುತ್ತದೆ. 'ಅದು ಹೇಗೆ ಗೊತ್ತೆ ? ಬಿಸುಟ ಎಲೆಯು ಯಾವುದೋ ಮೂಲೆಯಲ್ಲಿರುತ್ತದೆ. ಗಾಳಿ ಚಲಿಸಿದಂತೆ ಅದು ಚಲಿಸುತ್ತದೆ. ಇಲ್ಲಿಯೂ ಹಾಗೆಯೇ, ಭಗವಂತನನ್ನು ಆಶ್ರಯಿಸಿ ಬಾಳಬೇಕು. ಭಗವತ್ಪ್ರಜ್ಞೆಯು ನಡೆಸಿದಂತೆ ಮನಸ್ಸು ಚಲಿಸಬೇಕು ಅಷ್ಟೇ."

ಈ ಮಾತುಕತೆ ನಡೆಯುತ್ತಿದ್ದಂತೆ ದೋಣಿಯು ದೇವಸ್ಥಾನದ ಘಟ್ಟವನ್ನು ಸೇರಿತು. ದೋಣಿಯಿಂದ ಇಳಿದವರೇ ಶ್ರೀರಾಮಕೃಷ್ಣರು ಕಾಳೀ ಮಂದಿರಕ್ಕೆ ಹೋದರು. ಮಹಿಳಾ ಭಕ್ತರು ಶ್ರೀಮಾತೆಯವರು ತಂಗಿದ್ದ ನಹಬತ್ತಿಗೆ ಹೋದರು. ಶ್ರೀಮಾತೆಯವರಿಗೆ ನಮಸ್ಕರಿಸಿ ಅವರು ಕಾಳೀ ಮಂದಿರದ ಕಡೆ ಹೊರಟರು. ಅಷ್ಟು ಹೊತ್ತಿಗೆ ಶ್ರೀರಾಮಕೃಷ್ಣರು ಬಾಲಕ ಭಕ್ತರೊಡನೆ ಜಗನ್ಮಾತೆಗೆ ನಮಸ್ಕರಿಸಿ ನಾಟ್ಯಶಾಲೆಗೆ ಬಂದು ಭಕ್ತಿಭಾವದಿಂದ ಮಧುರಸ್ವರದಲ್ಲಿ ಹಾಡತೊಡಗಿದರು :

ಜಗವ ಮರುಳು ಮಾಡಿಹೆ ನೀ
ಪರಶಿವ ಮನಮೋಹಿನೀ !
ಮೂಲಾಧಾರ ಕಮಲದಲ್ಲಿ
ವೀಣಾರವ ವಿನೋದಿನೀ.

ದೇಹ ದೇಹ ಯಂತ್ರದಲ್ಲಿ
ಸುಷುಮ್ನಾದಿ ತಂತ್ರದಲ್ಲಿ
ಗುಣಭೇದದ ಮಂತ್ರದಲ್ಲಿ
ಗುಣತ್ರಯ ವಿಭಾಗಿನೀ

ಮಹಾಮಾಯೆ ಅನಾಯಾಸ
ದಿಂದ ಮೋಹ ಪಾಶದಿ
ಜಗವ ಬಿಗಿದು ನೀನು ಮಾತ್ರ
ತತ್ತ್ವಾಕಾಶದಲ್ಲಿ ನಿಂತೆ
ಅಚಲ ಮಿಂಚಿನಂದದಿ !

ನಾಟ್ಯಶಾಲೆಯ ಉತ್ತರ ಭಾಗದಲ್ಲಿ ಜಗನ್ಮಾತೆಗೆ ಅಭಿಮುಖವಾಗಿ ಕುಳಿತು ಹೀಗೆ ಶ್ರೀರಾಮಕೃಷ್ಣರು ಹಾಡುತ್ತಿದ್ದರು. ಉಳಿದ ಭಕ್ತರಲ್ಲಿ ಕೆಲವರು ಕುಳಿತುಕೊಂಡಿದ್ದರು ಮತ್ತೆ ಕೆಲವರು ನಿಂತುಕೊಂಡಿದ್ದರು. ಅವರ ಮಧುರ ಗಾನವನ್ನು ಕೇಳುತ್ತಾ ಎಲ್ಲರೂ ಮುಗ್ಧರಾಗಿದ್ದರು. ಶ್ರೀರಾಮಕೃಷ್ಣರು ಹಾಡುತ್ತಾ ಹಾಡುತ್ತಾ ಭಾವಾವೇಶದಿಂದ ಹಠಾತ್ತನೆ ಮೇಲೆದ್ದರು. ಈಗ ಹಾಡು ನಿಂತುಹೋಯಿತು. ಅವರ ಮುಖದ ಅಪೂರ್ವ ನಗೆ ಸುತ್ತಲೂ ಆನಂದವನ್ನು ಹರಡಿತು. ಭಕ್ತರೆಲ್ಲರೂ ನಿಷ್ಪಂದರಾಗಿ ಶ್ರೀರಾಮಕೃಷ್ಣರ ಶ್ರೀಮೂರ್ತಿಯನ್ನೇ ಎವೆಯಿಕ್ಕದೆ ನೋಡುತ್ತಿದ್ದರು. ಆಗ ಶ್ರೀರಾಮಕೃಷ್ಣರ ಶರೀರವು ಸ್ವಲ್ಪ ಬಾಗಿರುವುದನ್ನು ನೋಡಿ ಎಲ್ಲಿ ಬಿದ್ದುಬಿಡುವರೋ ಎಂದು ಚಿಕ್ಕ ನರೇಂದ್ರನು ಅವರನ್ನು ಹಿಡಿದುಕೊಳ್ಳಲು ಮುಂದೆ ಹೋದನು. ಆದರೆ ಅವರನ್ನು ಮುಟ್ಟಿದ್ದೇ ತಡ ಶ್ರೀರಾಮಕೃಷ್ಣರು ತೀವ್ರ ವೇದನೆಯಿಂದ ಚೀತ್ಕಾರ ಮಾಡಿದರು. ತಾನು ಈಗ ಅವರನ್ನು ಸ್ಪರ್ಶಿಸಬಾರದೆಂದು ತಿಳಿದು ಚಿಕ್ಕ ನರೇನನು ಹಿಂದೆ ಸರಿದು ನಿಂತನು. ಶ್ರೀರಾಮಕೃಷ್ಣರ ಚೀತ್ಕಾರವನ್ನು ಕೇಳಿ ರಾಮಲಾಲನು ಮಂದಿರದಿಂದ ಬೇಗಬೇಗನೆ ಬಂದು ಶ್ರೀರಾಮಕೃಷ್ಣರನ್ನು ಹಿಡಿದುಕೊಂಡನು. ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತು ಅದೇ ಸ್ಥಿತಿಯಲ್ಲಿದ್ದು ಭಗವನ್ನಾಮವನ್ನು ಕೇಳುತ್ತಾ ಸಾಮಾನ್ಯ ಪ್ರಜ್ಞಾವಸ್ಥೆಗೆ ಬಂದರು. ಆದರೆ ಅವರ ಅಮಲು ಇನ್ನೂ ಇಳಿದಿರಲಿಲ್ಲ, ಅವರ ಕಾಲುಗಳು ತುಂಬಾ ನಡುಗುತ್ತಿದ್ದವು.

ಅದೇ ಅವಸ್ಥೆಯಲ್ಲೇ ತೆವಳುತ್ತಾ ನೃತ್ಯಶಾಲೆಯ ಉತ್ತರಭಾಗದ ಮೆಟ್ಟಿಲನ್ನು ಇಳಿದು ಅಂಗಳಕ್ಕೆ ಬಂದರು. ಬಾಲಕನಂತೆ ಅವರು "ನಾನು ಬೀಳುವುದಿಲ್ಲ ತಾಯಿ, ನಾನು ಬೀಳುವುದಿಲ್ಲ" ಎಂದು ಹೇಳುತ್ತಿದ್ದರು. ಆಗ ಅವರನ್ನು ನೋಡಿದಾಗ ಮೂರು ನಾಲ್ಕು ವರ್ಷದ ಬಾಲಕನೇ ಎಂದೆನಿಸುತ್ತಿತ್ತು. ಈ ಮಾತನ್ನು ಆಡುತ್ತಾ ತಾಯಿಯನ್ನೇ ತದೇಕ ದೃಷ್ಟಿಯಿಂದ ನೋಡುತ್ತಾ ಅವರು ಭರವಸೆಯಿಂದ ಮುಂದೆ ಸಾಗುತ್ತಿದ್ದರು. ಒಂದು ಸಾಮಾನ್ಯ ವಿಷಯದಲ್ಲಿಯೂ ತಾಯಿಯ ಮೇಲೆ ಅಷ್ಟೊಂದು ನಿರ್ಭರತೆ. ಇದನ್ನು ನಾವು ಬೇರೆಲ್ಲಿಯಾದರೂ ಕಾಣಲಾದೀತೆ ?

23. ಈಗ ಶ್ರೀರಾಮಕೃಷ್ಣರು ತಮ್ಮ ಕೊಠಡಿಗೆ ಹೋಗಿ ಪಶ್ಚಿಮದಿಕ್ಕಿನ ವರಾಂಡದಲ್ಲಿ ಕುಳಿತರು. ಆಗಲೂ ಅವರು ಭಾವಾವಿಷ್ಟರಾಗಿದ್ದರು. ಆ ಭಾವ ಇಳಿಯುತ್ತಲೇ ಇಲ್ಲ—ಕೆಲವೊಮ್ಮೆ ಸ್ವಲ್ಪ ಕಡಮೆಯಾಗುತ್ತಿತ್ತು, ಕೆಲವೊಮ್ಮೆ ವೃದ್ಧಿಯಾಗಿ ಅವರು ಬಾಹ್ಯಪ್ರಜ್ಞೆಯನ್ನು ಕಳೆದುಕೊಳ್ಳುತ್ತಿದ್ದರು. ಹೀಗೆ ಸ್ವಲ್ಪ ಹೊತ್ತು ಕಳೆದ ಮೇಲೆ ಶ್ರೀರಾಮಕೃಷ್ಣರು ಭಾವಾವಸ್ಥೆಯಲ್ಲಿಯೇ ಭಕ್ತರನ್ನು ಉದ್ದೇಶಿಸಿ "ಸರ್ಪವನ್ನು ನೋಡಿದ್ದೀರಾ ? ಅದು ತುಂಬಾ ತೊಂದರೆ ಕೊಡುತ್ತದೆ" ಎಂದು ಹೇಳಿದರು. ಮತ್ತೆ ಅವರು ಭಕ್ತರನ್ನು ಮರೆತು ಸರ್ಪಾಕೃತಿಯ ಕುಲಕುಂಡಲಿಯನ್ನು (ಶ್ರೀರಾಮಕೃಷ್ಣರು ಈಗಿನ ತಮ್ಮ ಭಾವಾವಸ್ಥೆಯಲ್ಲಿ ಅದನ್ನೇ ಕಂಡಿದ್ದರು ಎಂಬುದು ಸುಸ್ಪಷ್ಟ.) ಉದ್ದೇಶಿಸಿ ಹೇಳಿದರು : "ನೀನು ಈಗ ಹೋಗು. ನಾನು ಧೂಮಪಾನ ಮಾಡಬೇಕು, ಮುಖ

ತೊಳೆಯಬೇಕು, ಹಲ್ಲು ಉಜ್ಜಬೇಕು." ಈ ರೀತಿ ಅವರು ಒಮ್ಮೊಮ್ಮೆ ಭಕ್ತರೊಡನೆ ಮಾತನಾಡುತ್ತಾ ಮತ್ತೆ ಕೆಲವೊಮ್ಮೆ ಭಾವಾವಸ್ಥೆಯಲ್ಲೇ ಕಂಡ ಮೂರ್ತಿಯೊಡನೆ ಮಾತನಾಡುತ್ತ ಕ್ರಮೇಣ ಸಾಧಾರಣ ಮಾನವರಂತೆ ಬಾಹ್ಯಪ್ರಜ್ಞೆಯನ್ನು ಪಡೆದರು.

24. ಅವರು ಸಾಧಾರಣ ಸ್ಥಿತಿಯಲ್ಲಿರುವಾಗ ಅವರಿಗೆ ಭಕ್ತರ ಹಿತಚಿಂತನೆಯೇ. ಶ್ರೀಮಾತೆಯವರಿಗೆ ಹೇಳಿ ಕಳುಹಿಸಿ ತರಕಾರಿ ಮುಂತಾದುವುಗಳು ಇವೆಯೇ ಎಂದು ವಿಚಾರಿಸಿದರು. ಏನೂ ಇಲ್ಲ ಎಂದು ಶ್ರೀಮಾತೆಯವರು ತಿಳಿಸಿದ ಮೇಲೆ ಈಗ ಯಾರು ಮಾರುಕಟ್ಟೆಗೆ ಹೋಗುತ್ತಾರೆ ? ಎಂದು ಶ್ರೀರಾಮಕೃಷ್ಣರು ಚಿಂತಿಸತೊಡಗಿದರು. ಏನಾದರೂ ಸ್ವಲ್ಪ ಸೊಪ್ಪು ತರಕಾರಿ ಇಲ್ಲದಿದ್ದರೆ ಕಲ್ಕತ್ತೆಯಿಂದ ಬಂದ ಸ್ತ್ರೀ–ಪುರುಷ ಭಕ್ತರು ಊಟ ಮಾಡುವುದಾದರೂ ಹೇಗೆ ? ತುಂಬಾ ಯೋಚಿಸಿ ಅನಂತರ ಸ್ತ್ರೀ ಭಕ್ತರಿಗೆ "ನಿಮಗೆ ಮಾರುಕಟ್ಟೆಗೆ ಹೋಗಿ ಬರಲಾಗುತ್ತದೆಯೆ ?" ಎಂದು ವಿಚಾರಿಸಿದರು. ಅವರು ಆಗಲಿ ಎಂದು ಮಾರುಕಟ್ಟೆಗೆ ಹೋಗಿ ಬದನೇಕಾಯಿ, ಆಲೂಗೆಡ್ಡೆ, ಮತ್ತು ಸೊಪ್ಪನ್ನು ಖರೀದಿಸಿಕೊಂಡು ಬಂದರು. ಶ್ರೀಮಾತೆಯವರು ಅದನ್ನೆಲ್ಲ ಉಪಯೋಗಿಸಿ ಅಡಿಗೆ ಮಾಡಿದರು. ದೇವಸ್ಥಾನದಿಂದಲೂ ಎಂದಿನಂತೆ ಒಂದು ದೊಡ್ಡ ತಟ್ಟೆಯ ತುಂಬಾ ಪ್ರಸಾದ ಬಂತು. ಶ್ರೀರಾಮಕೃಷ್ಣರ ಊಟವಾದ ಮೇಲೆ ಭಕ್ತರೆಲ್ಲರೂ ಪ್ರಸಾದವನ್ನು ಸ್ವೀಕರಿಸಿದರು.

25. ಶ್ರೀರಾಮಕೃಷ್ಣರು ಭಾವಾವಸ್ಥೆಯಲ್ಲಿರುವಾಗ ಚಿಕ್ಕ ನರೇಂದ್ರನು ಅವರನ್ನು ಮುಟ್ಟಿದ್ದಕ್ಕೆ ಅವರಿಗೇಕೆ ಅಷ್ಟೊಂದು ವೇದನೆಯಾಯಿತು ಎಂಬುದಕ್ಕೆ ಭಕ್ತರು ಕಾರಣವನ್ನು ಹುಡುಕಿದರು. ಚಿಕ್ಕ ನರೇಂದ್ರನ ಎಡ ಕಣ್ಣೆಲೆಯಲ್ಲಿ ಒಂದು ಚಿಕ್ಕ ಬಾವು ಎದ್ದಿತ್ತು; ಅದು ಕ್ರಮೇಣ ದೊಡ್ಡದಾಗುತ್ತಿತ್ತು. ಅದು ಮುಂದೆ ತುಂಬಾ ತೊಂದರೆ ಕೊಡಬಹುದೆಂದು ವೈದ್ಯರು ಅದಕ್ಕೆ ಔಷಧಿ ಹಚ್ಚಿ, ಘಾಯವಾಗುವಂತೆ ಮಾಡಿದ್ದರು. ನಾವು ಹಿಂದೆ ಕೇಳಿದ್ದೆವು, ಶರೀರದಲ್ಲಿ ಏನಾದರೂ ಘಾಯವಿದ್ದರೆ ದೇವತಾಮೂರ್ತಿಯನ್ನು ಸ್ಪರ್ಶಿಸಬಾರದು ಎಂದು. ಆದರೆ ಈ ಮಾತು ನಮ್ಮ ಕಣ್ಮುಂದೆಯೇ ಪ್ರಮಾಣಿತವಾಗುತ್ತದೆ ಎಂದು ಆಗ ನಾವು ಭಾವಿಸಿದ್ದೆವೇನು ? ಅವರು ಭಾವಾವಸ್ಥೆಯಲ್ಲಿದ್ದಾಗ ಯಾವ ದಿವ್ಯ ಶಕ್ತಿಯು ಅವರ ಅಂತರ್ಯದಲ್ಲಿ ಕೆಲಸ ಮಾಡುತ್ತಿತ್ತು ಎಂಬುದನ್ನು ನಾವು ತಿಳಿದುಕೊಳ್ಳಲಾರೆವು, ಆದರೂ ಆ ಶಕ್ತಿಯ ಪ್ರೇರಣೆಯಿಂದಲೇ, ಅವರಿಗೆ ಬಾಹ್ಯಜ್ಞಾನವಿಲ್ಲದಿದ್ದರೂ, ನೋವಿನಿಂದ ಆ ರೀತಿ ಚೀತ್ಕರಿಸಿದ್ದರು. ಶ್ರೀರಾಮಕೃಷ್ಣರು ಚಿಕ್ಕ ನರೇಂದ್ರನನ್ನು ಅತ್ಯಂತ ಶುದ್ಧಸ್ವಭಾವದವನೆಂದು ಹೇಳುತ್ತಿದ್ದುದು ನಮಗೆ ಗೊತ್ತು. ತಾವು ಸಾಧಾರಣ ಸ್ಥಿತಿಯಲ್ಲಿದ್ದಾಗ ಅವನ ದೇಹದಲ್ಲಿ ಘಾಯವಿದ್ದರೂ ಅವನನ್ನು ಸ್ಪರ್ಶಿಸುತ್ತಿದ್ದರು ಮತ್ತು ಅವನು ತಮ್ಮ ಪಾದವನ್ನು ಸ್ಪರ್ಶಿಸಲು ಬಿಡುತ್ತಿದ್ದರು. ಆದ್ದರಿಂದ ಭಾವದ ಸಮಯದಲ್ಲಿ ತಾನು ಅವರನ್ನು ಸ್ಪರ್ಶಿಸಬಾರದು ಎಂದು ಅವನಿಗೆ ಹೇಗೆ ತಿಳಿಯಬೇಕು ? ಅಲ್ಲಿಂದ ಮುಂದೆ ಆ ಘಾಯವು ವಾಸಿಯಾಗುವವರೆಗೂ ಅವನು ಶ್ರೀರಾಮಕೃಷ್ಣರನ್ನು ಅವರು ಭಾವಾವಸ್ಥೆಯಲ್ಲಿರುವಾಗ ಸ್ಪರ್ಶಿಸಲಿಲ್ಲ.

ಶ್ರೀರಾಮಕೃಷ್ಣರೊಡನೆ ಭಗವದ್ವಿಚಾರವಾಗಿ ಮಾತನಾಡುತ್ತ ಇಡೀ ದಿನವೂ ಕಳೆದು ಹೋಯಿತು. ಸಂಜೆ ಆಗುತ್ತಿದ್ದಂತೆಯೇ ಭಕ್ತರು ತಮ್ಮ ತಮ್ಮ ಮನೆಗೆ ಹೊರಟರು. ಇಬ್ಬರು ಸ್ತ್ರೀಭಕ್ತರೂ ಕೂಡ ಶ್ರೀರಾಮಕೃಷ್ಣರು ಮತ್ತು ಶ್ರೀಮಾತೆಯವರಿಂದ ಬೀಳ್ಕೊಂಡು ಕಲಕತ್ತೆಗೆ ನಡೆದುಕೊಂಡು ಹೊರಟರು.

* * *

26. ಮೇಲೆ ಹೇಳಿದ ಘಟನೆಯಾಗಿ ಎರಡು ಮೂರು ದಿನಗಳಾಗಿವೆ. ಇಂದು ಪಂಡಿತ್ ಶಶಧರನು ಶ್ರೀರಾಮಕೃಷ್ಣರನ್ನು ನೋಡಲು ದಕ್ಷಿಣೇಶ್ವರಕ್ಕೆ ಬಂದನು. ಬಾಲಕ ಸ್ವಭಾವದ ಶ್ರೀರಾಮಕೃಷ್ಣರಿಗೆ ಅನೇಕ ವೇಳೆ ಬಾಲಕರಂತೆ ಭಯವಾಗುತ್ತಿತ್ತು. ಯಾರಾದರೂ ಅತ್ಯಂತ ಖ್ಯಾತ ವ್ಯಕ್ತಿಯೊಬ್ಬರು ತಮ್ಮನ್ನು ನೋಡಲು ಬರುತ್ತಾರೆಂದು ಕೇಳಿದರೆ ಅವರಿಗೆ ಭಯವಾಗುತ್ತಿತ್ತು. ತಮಗೆ ಓದು ಬರಹ ಏನೂ ತಿಳಿಯದು, ಯಾವಾಗ ಭಾವಾವೇಶವುಂಟಾಗುತ್ತದೋ ಹೇಳಲಾಗುವುದಿಲ್ಲ. ಮತ್ತೆ ಭಾವದ ಸಮಯದಲ್ಲಿ ತಮ್ಮ ಶರೀರದ ಪ್ರಜ್ಞೆಯೇ ಇರುವುದಿಲ್ಲ. ಹಾಗಿರುವಾಗ ಉಟ್ಟ ಬಟ್ಟೆಯ ವಿಚಾರವೇನು ? ಇಂಥ ಅವಸ್ಥೆಯಲ್ಲಿ ಬಂದವರು ಏನಂದುಕೊಳ್ಳುತ್ತಾರೆ. ಹೀಗೆಲ್ಲ ಅವರು ಭಾವಿಸುತ್ತಿದ್ದರು. ನಮಗೆ ಅನಿಸುತ್ತಿತ್ತು : ಆಗಂತುಕರು ಏನು ಭಾವಿಸಿದರೆ ಏನಂತೆ. ಅದರಿಂದ ಅವರಿಗಾಗುವುದಾದರೂ ಏನು ? 'ಜನರು ಕೀಟಗಳಿದ್ದಂತೆ, ಲಜ್ಜಾ, ಘೃಣ ಭಯ ಇರಬಾರದು' ಎಂದು ಅವರೇ ಯಾವಾಗಲೂ ಹೇಳುತ್ತಾರೆ. ಹಾಗಾದರೆ ಇವರು ಹೆಸರು ಕೀರ್ತಿಗಳಿಗಾಗಿ ಹಾತೊರೆಯುತ್ತಾರೇನು ? ಆದರೆ ತುಂಬಾ ಆಲೋಚನೆ ಮಾಡಿದ ಮೇಲೆ ತಿಳಿದು ಬಂತು : ಬಾಲಕನು ಅಪರಿಚಿತ ವ್ಯಕ್ತಿಯನ್ನು ಕಂಡಾಗ ಭಯ ಪಡುತ್ತಾನೆ, ಲಜ್ಜೆಯಿಂದ ಹಿಂದೆ ಸರಿಯುತ್ತಾನೆ. ಆದರೆ ಸ್ವಲ್ಪ ಪರಿಚಯವಾದ ಮೇಲೆ ಅದೇ ವ್ಯಕ್ತಿಯ ಹೆಗಲ ಮೇಲೆ ಕುಳಿತು ಕೂದಲೆಳೆದು ನಿಶ್ಶಂಕೆಯಿಂದ ಅನೇಕ ಚೇಷ್ಟೆ ಮಾಡುತ್ತಾನೆ. ಶ್ರೀರಾಮಕೃಷ್ಣರ ಭಾವವೂ ಅದೇ ರೀತಿಯ. ಮಹಾರಾಜ ಯತೀಂದ್ರ ಮೋಹನ್, ಸುಪ್ರಸಿದ್ಧ ಕೃಷ್ಣದಾಸ್ ಪಾಲ್ ಮುಂತಾದವರೊಡನೆ ಅವರು ನಿಃಸಂಕೋಚವಾಗಿ ಮಾತನಾಡಿದರು. ಅವರಿಗೆ ಹೆಸರು ಕೀರ್ತಿಯ ಆಸೆಯಿದ್ದಿದ್ದರೆ ಅವರುಗಳೊಡನೆ ಆ ರೀತಿ ಮಾತನಾಡಲು ಸಾಧ್ಯವಾಗುತ್ತಲೇ ಇರಲಿಲ್ಲ.*

ಇನ್ನು ಕೆಲವೊಮ್ಮೆ ಆಗಂತುಕರಿಗೆ ಅಮಂಗಳವಾಗುವುದೆಂದು ಶ್ರೀರಾಮಕೃಷ್ಣರು

---

* ಮಹಾರಾಜ ಯತೀಂದ್ರ ಮೋಹನನನ್ನು ಮೊದಲ ಬಾರಿಗೆ ಕಂಡಾಗ ಶ್ರೀರಾಮಕೃಷ್ಣರು ಹೇಳಿದರು "ನೋಡಪ್ಪ, ನಾನು ನಿನ್ನನ್ನು ಮಹಾರಾಜ ಎಂದು ಕರೆಯಲಾಗುವುದಿಲ್ಲ. ಸುಳ್ಳು ಹೇಳುವುದಾದರೂ ಹೇಗೆ ?" ಮಹಾರಾಜ ಯತೀಂದ್ರ ಮೋಹನನು ಮಾತಿನ ಸಂದರ್ಭದಲ್ಲಿ ತನ್ನನ್ನು ಧರ್ಮರಾಜ ಯುಧಿಷ್ಠಿರನಿಗೆ ಹೋಲಿಸಿಕೊಂಡನು. ಆಗ ಶ್ರೀರಾಮಕೃಷ್ಣರು ಕ್ರುದ್ಧರಾಗಿ ಅವನನ್ನು ನಿಂದಿಸಿದ್ದರು. ಕೃಷ್ಣದಾಸ್ ಪಾಲ್‌ನು ಜಗತ್ತಿಗೆ ಉಪಕಾರ ಮಾಡುವುದನ್ನು ಬಿಟ್ಟು ಬೇರೆ ಧರ್ಮವೇ ಇಲ್ಲ ಎಂದು ಶ್ರೀರಾಮಕೃಷ್ಣರೊಡನೆ ವಾದ ಮಾಡಿದನು. ಆಗಲೂ ಶ್ರೀರಾಮಕೃಷ್ಣರು ಕೋಪದಿಂದ ಅವನ ತಪ್ಪು ಗ್ರಹಿಕೆಯನ್ನು ಖಂಡಿಸಿದ್ದರು.

ಭಯಪಡುತ್ತಿದ್ದರು. ತಮ್ಮ ಆಚರಣೆಯನ್ನು ಮತ್ತು ವ್ಯವಹಾರವನ್ನು ಬಂದವರು ಸರಿಯಾಗಿ ಅರ್ಥ ಮಾಡಿಕೊಳ್ಳುತ್ತಾರೋ ಇಲ್ಲವೋ ಎಂಬುದು ಶ್ರೀರಾಮಕೃಷ್ಣರಿಗೆ ಮುಖ್ಯವಾಗಿರಲಿಲ್ಲ. ಆದರೆ ಬಂದವರು ಸರಿಯಾಗಿ ಅರ್ಥಮಾಡಿಕೊಳ್ಳದೆ ತಮ್ಮನ್ನು ಟೀಕಿಸಿದರೆ ಅದರಿಂದ ಅವರಿಗೇ ಅನಿಷ್ಟವಾಗುವುದು ಎಂದು ಶ್ರೀರಾಮಕೃಷ್ಣರು ಭಯ ಪಡುತ್ತಿದ್ದರು. ಆದ್ದರಿಂದಲೇ ಗಿರೀಶಚಂದ್ರನು ಒಮ್ಮೆ ಶ್ರೀರಾಮಕೃಷ್ಣರ ಮುಂದೆ ಅಭಿಮಾನದಿಂದ ಕಟೂಕ್ತಿಗಳನ್ನು ಪ್ರಯೋಗಿಸಿದಾಗ ಅವರು ಹೇಳಿದ್ದರು: "ನೋಡಪ್ಪಾ, ನನಗೇನು ಹೇಳಿದರೂ ಪರವಾಗಿಲ್ಲ. ಆದರೆ ನನ್ನ ತಾಯಿಗೆ ಏನೂ ಹೇಳಲಿಲ್ಲವಷ್ಟೆ." ಈ ವಿಷಯವನ್ನು ಇಲ್ಲಿಗೆ ನಿಲ್ಲಿಸೋಣ.

27. ಪಂಡಿತ್ ಶಶಧರನು ತಮ್ಮನ್ನು ನೋಡಲು ಬರುತ್ತಾನೆಂದು ಕೇಳಿದಾಗ ಶ್ರೀರಾಮಕೃಷ್ಣರ ಭಯಕ್ಕೆ ಕೊನೆಯೇ ಇರಲಿಲ್ಲ. ಯೋಗೇನ್, ಚಿಕ್ಕನರೇಂದ್ರ ಮತ್ತು ಇನ್ನೂ ಮುಂತಾದವರಿಗೆ ಹೇಳಿದರು, "ನೋಡಪ್ಪಾ, ನೀವೆಲ್ಲ ಆಗ ಇಲ್ಲಿಯೇ ಇರಿ !" ಎಂದು. ತಾವು ಮೂರ್ಖರು ಪಂಡಿತನೊಡನೆ ಏನು ಮಾತನಾಡಬೇಕೊ ತಿಳಿಯದು, ನಾವೆಲ್ಲಾ ಅಲ್ಲಿ ಇದ್ದು ಪಂಡಿತನೊಡನೆ ಮಾತನಾಡಿ ಅವರನ್ನು ಬಚಾಯಿಸಬೇಕು, ಎಂಬುದು ಅವರ ಮಾತಿನ ಅರ್ಥ. ಬಾಲಕ ಸ್ವಭಾವದವರಾದ ಅವರ ಈ ಭಯದ ಮಾತನ್ನು ಇತರರಿಗೆ ಅರ್ಥೈಸುವುದು ದುಷ್ಕರ. ಆದರೆ ಪಂಡಿತ ಶಶಧರನು ಅಲ್ಲಿಗೆ ಬಂದ ಮೇಲೆ ಶ್ರೀರಾಮಕೃಷ್ಣರು ಬೇರೆಯೇ ವ್ಯಕ್ತಿಯಾಗಿದ್ದರು. ಪಂಡಿತನನ್ನು ನೋಡಿದಾಗ ಅವರಿಗೆ ಅರ್ಧ ಬಾಹ್ಯದಶೆ ಉಂಟಾಯಿತು. ಮುಖದಲ್ಲಿ ಮಂದಸ್ಮಿತ, ದೃಷ್ಟಿ ಸ್ಥಿರ. ಶಶಧರನನ್ನು ಉದ್ದೇಶಿಸಿ ಹೇಳಿದರು, "ನೋಡಪ್ಪಾ ನೀನು ಪಂಡಿತ. ಏನಾದರೂ ಸ್ವಲ್ಪ ಹೇಳು" ಎಂದು.

ಶಶಧರ್ : "ಮಹಾಶಯರೇ, ತತ್ತ್ವಶಾಸ್ತ್ರಗಳನ್ನು ಅಧ್ಯಯನ ಮಾಡಿ ನನ್ನ ಹೃದಯವು ಶುಷ್ಕವಾಗಿಬಿಟ್ಟಿದೆ. ಆದ್ದರಿಂದ ಭಕ್ತಿರಸವನ್ನು ಪಡೆಯಲು ನಿಮ್ಮೆಡೆಗೆ ಬಂದಿದ್ದೇನೆ. ನೀವು ಹೇಳಿ, ನಾನು ಕೇಳುತ್ತೇನೆ."

ಶ್ರೀರಾಮಕೃಷ್ಣರು : "ನಾನೇನು ಹೇಳಲಿ ಅಪ್ಪಾ ! ಸಚ್ಚಿದಾನಂದ ಏನು ಎಂದು ಯಾರಿಗೂ ಹೇಳಲಾಗುವುದಿಲ್ಲ. ಅದಕ್ಕಾಗಿಯೇ ಅವನು ಮೊದಲು ಅರ್ಧನಾರೀಶ್ವರ ನಾದನು. ಏಕೆಂದರೆ ತಾನೇ ಪುರುಷ ಮತ್ತು ಪ್ರಕೃತಿ ಆಗಿರುವೆನೆಂದು ತೋರಿಸಲು. ಅನಂತರ ಇನ್ನೂ ಕೆಳಗಿಳಿದು ಬೇರೆ ಬೇರೆ ಪುರುಷನೂ ಬೇರೆ ಬೇರೆ ಪ್ರಕೃತಿಯೂ ಆದನು."

ಹೀಗೆ ಪ್ರಾರಂಭಿಸಿ ಶ್ರೀರಾಮಕೃಷ್ಣರು ನಿಗೂಢ ಆಧ್ಯಾತ್ಮಿಕ ತತ್ತ್ವಗಳನ್ನು ಹೇಳತೊಡಗಿದರು. ಹೇಳುತ್ತಿದ್ದಂತೆಯೆ ಅವರು ಉತ್ತೇಜಿತರಾಗಿ ಶಶಧರನನ್ನು ಉದ್ದೇಶಿಸಿ ಹೇಳಿದರು.

ಶ್ರೀರಾಮಕೃಷ್ಣರು : "ಸಚ್ಚಿದಾನಂದ ಸತ್ಯದಲ್ಲಿ ಎಲ್ಲಿಯವರೆಗೆ ಮನಸ್ಸು ಲಯ ವಾಗುವುದಿಲ್ಲವೋ ಅಲ್ಲಿಯವರೆಗೆ ಭಗವಂತನನ್ನು ಕರೆಯುವುದು ಮತ್ತು ಸಾಂಸಾರಿಕ

ಚಟುವಟಿಕೆ ಇವೆರಡೂ ನಡೆಯುತ್ತವೆ. ಯಾವಾಗ ಮನಸ್ಸು ಅವನಲ್ಲಿ ಲಯವಾಗು ವುದೋ ಆಗ ಯಾವ ಕೆಲಸದ ಪ್ರಯೋಜನವೂ ಇರುವುದಿಲ್ಲ. ಉದಾಹರಣೆಗೆ ಕೀರ್ತನ ಕಾರನು "ನಿತಾಯಿ ನನ್ನ ಉನ್ಮತ್ತ ಆನೆ" ಎಂದು ಹಾಡುತ್ತಿದ್ದಾನೆ ಎಂದಿಟ್ಟುಕೊ. ಪ್ರಾರಂಭದಲ್ಲಿ ಹಾಡಿನ ಅರ್ಥ, ಶ್ರುತಿ, ತಾಳ, ರಾಗ ಇದೆಲ್ಲದರ ಕಡೆಗೂ ಮನಸ್ಸಿರು ತ್ತದೆ. ಯಾವಾಗ ಹಾಡಿನ ಭಾವದಲ್ಲಿ ಮನಸ್ಸು ಲಯವಾಗುವುದೋ ಆಗ ಕೇವಲ "ಉನ್ಮತ್ತ ಆನೆ, ಉನ್ಮತ್ತ ಆನೆ" ಎಂದು ಮಾತ್ರ ಹಾಡುತ್ತಾನೆ. ಮುಂದೆ ಭಾವದಲ್ಲಿ ಮನಸ್ಸು ಇನ್ನೂ ಲಯವಾಗಲು 'ಆನೆ, ಆನೆ' ಎಂದು ಮಾತ್ರ ಹಾಡುತ್ತಾನೆ, ಮನಸ್ಸು ಆಳಕ್ಕೆ ಹೋದಂತೆಲ್ಲ 'ಆನೆ'ಯೂ ಉಳಿಯುವುದಿಲ್ಲ. 'ಆ' ಎಂದು ಹೇಳುತ್ತಲೇ ನಿಸ್ತಬ್ಧ ನಾಗಿಬಿಡುತ್ತಾನೆ."

ಶ್ರೀರಾಮಕೃಷ್ಣರು ಹೀಗೆ 'ಆ' ಎಂದು ಹೇಳುತ್ತಾ ಭಾವಾವೇಶದಲ್ಲಿ ಮಗ್ನ ರಾದರು. ಬಾಯಲ್ಲಿ ಮಾತೇ ಹೊರಡಲಿಲ್ಲ. ನಿಷ್ಪಂದರಾಗಿ ನಿಂತುಬಿಟ್ಟರು. ಇದೇ ಸ್ಥಿತಿ ಯಲ್ಲಿ ಅವರು ಪ್ರಸನ್ನವದನರಾಗಿ ಬಾಹ್ಯಜ್ಞಾನ ಶೂನ್ಯರಾಗಿ ಸುಮಾರು ಹದಿನೈದು ನಿಮಿಷ ನಿಂತಿದ್ದರು. ಭಾವಾವಸಾನದ ನಂತರ ಮತ್ತೆ ಶಶಧರನೊಡನೆ ಮಾತನಾಡ ತೊಡಗಿದರು.

ಶ್ರೀರಾಮಕೃಷ್ಣರು: "ಎಲೈ ಪಂಡಿತನೇ, ನಿನ್ನೊಳಗೆ ನೋಡಿದೆ. ನೀನು ಒಳ್ಳೆಯ ವ್ಯಕ್ತಿ. ಅಡಿಗೆ ಮುಂತಾದುವುಗಳೆಲ್ಲ ಆದ ಮೇಲೆ ಎಲ್ಲರಿಗೂ ಊಟ ಬಡಿಸಿ ಹೆಗಲ ಮೇಲೆ ಟವಲ್ ಹಾಕಿಕೊಂಡು ಸ್ನಾನಮಾಡಲು ಮತ್ತು ಬಟ್ಟೆ ಒಗೆಯಲು ಗೃಹಿಣಿಯು ಕೊಳಕ್ಕೆ ಹೋಗುತ್ತಾಳೆ. ಮತ್ತೆ ಅವಳು ಅಡಿಗೆ ಮನೆಗೆ ಹಿಂದಿರುಗುವುದಿಲ್ಲ. ಹಾಗೆಯೇ ನೀನೂ ಕೂಡ ಇತರರಿಗೆ ದೇವರ ಬಗ್ಗೆ ಹೇಳುವುದನ್ನೆಲ್ಲಾ ಮುಗಿಸಿ ಹೋದ ಮೇಲೆ ಮತ್ತೆ ಹಿಂದಿರುಗುವುದಿಲ್ಲ."

ಶ್ರೀರಾಮಕೃಷ್ಣರ ಈ ಮಾತುಗಳನ್ನು ಕೇಳಿ ಶಶಧರನು "ಇದೆಲ್ಲ ನಿಮ್ಮ ಕೃಪೆ" ಎಂದು ಹೇಳಿ ಮತ್ತೆ ಮತ್ತೆ ಅವರ ಪಾದಕ್ಕೆ ವಂದಿಸಿದನು. ಶ್ರೀರಾಮಕೃಷ್ಣರ ಮಾತು ಗಳನ್ನು ಕೇಳಿ ಅವನಿಗೆ ಆಶ್ಚರ್ಯವಾಯಿತು. ಅವನ ಹೃದಯ ಕರಗಿ ಕಂಬನಿ ಗರೆದನು. ಅವನು ಇದುವರೆಗೂ ತಾನು ಭಗವಂತನನ್ನು ಕಾಣುವುದೇ ಇಲ್ಲ ಎಂದು ಭಾವಿಸಿದ್ದ.

28. ಈಗ ಈ ಘಟನೆಯನ್ನು ಶ್ರೀರಾಮಕೃಷ್ಣರು ವಿವರಿಸಿದಂತೆ ನಿಮ್ಮ ಮುಂದೆ ಇಡುತ್ತೇವೆ. ಅವರು ಶಶಧರನು ದಕ್ಷಿಣೇಶ್ವರಕ್ಕೆ ಬಂದುಹೋದ ಮರುದಿನ ನಮ್ಮ ಸ್ನೇಹಿತನೊಬ್ಬನು ಅಲ್ಲಿಗೆ ಹೋಗಿದ್ದಾಗ ಅವರು ಈ ಘಟನೆಯನ್ನು ವಿವರಿಸಿ ಹೇಳಿ ದ್ದರು.

ಶ್ರೀರಾಮಕೃಷ್ಣರು : "ನೋಡು, ಇಲ್ಲಿ ಓದುಬರಹ ಏನೂ ಇಲ್ಲ. ನಾನೊಬ್ಬ ಮೂರ್ಖ. ಪಂಡಿತನು ಬರುತ್ತಾನೆ ಎಂದು ಕೇಳಿದಾಗ ಬಹಳ ಭಯವಾಯಿತು. ಉಟ್ಟ ಬಟ್ಟೆಯ ಕಡೆಗೂ ಗಮನವಿಲ್ಲ. ಏನೋ ಹೇಳುವುದಕ್ಕೆ ಹೋಗಿ ಏನೋ ಹೇಳಿಬಿಡುತ್ತೇ ನೆಂದು ದಿಗಿಲಾಯಿತು. ತಾಯಿಗೆ ಹೇಳಿದೆ : 'ನೋಡಮ್ಮಾ ನಾನು ಶಾಸ್ತ್ರ ಗೀಸ್ತ್ರ ಏನೂ

ಓದಿಲ್ಲ. ನೋಡಿಕೊ.' ಅನಂತರ ಅವರಿಗೆಲ್ಲ ಇಲ್ಲೇ ಇರಿ ಎಂದು ಹೇಳಿದೆ—ನೀವೆಲ್ಲಾ ಇದ್ದರೆ ನನಗೆ ಸ್ವಲ್ಪ ಭರವಸೆ ಉಂಟಾಗುತ್ತದೆ ಎಂದು. ಪಂಡಿತನು ಬಂದು ಕುಳಿತಿದ್ದಾನೆ. ಆಗಲೂ ಭಯಬಿಟ್ಟಿಲ್ಲ. ಸುಮ್ಮನೆ ಕುಳಿತು ಅವನನ್ನೇ ನೋಡುತ್ತಿದ್ದೆ. ಅವನ ಮಾತನ್ನೇ ಕೇಳುತ್ತಿದ್ದೆ. ಆ ಸಮಯದಲ್ಲಿ ತಾಯಿಯು ಪಂಡಿತನ ಒಳಗನ್ನು ನನಗೆ ತೋರಿಸಿಬಿಟ್ಟಳು. ಶಾಸ್ತ್ರಗೀಸ್ತ್ರದಿಂದ ಏನಾಗುತ್ತದೆ ? ವಿವೇಕ ವೈರಾಗ್ಯಗಳಿಲ್ಲದೆ ಇದ್ದರೆ ಅದು ಯಾವ ಕೆಲಸಕ್ಕೂ ಬಾರದು. ಆಗ ಸರಸರ ಎಂದು ಏನೋ ತಲೆಯ ಕಡೆಗೆ ಹರಿಯಿತು, ಭಯಗಿಯ ಎಲ್ಲಾ ಓಡಿ ಹೋಯಿತು. ಒಮ್ಮೆಯೆ ಪರವಶನಾಗಿಬಿಟ್ಟೆ. ನಾನು ಮುಖ ಮೇಲೆತ್ತಿದೆ. ಮಾತಿನಧಾರೆ ನನ್ನ ಬಾಯಿಂದ ಹೊರಚಿಮ್ಮತೊಡಗಿತು. ಮಾತು ಹೊರ ಬಂದಂತೆಲ್ಲ ಒಳಗಿನಿಂದ ಯಾರೋ ಮತ್ತೆ ಮಾತನ್ನು ತಳ್ಳಿ ಕೊಡುತ್ತಿರುವಂತೆ ಅನಿಸುತ್ತಿತ್ತು. ಹಳ್ಳಿಯಲ್ಲಿ ಒಬ್ಬ ವ್ಯಕ್ತಿ ಬತ್ತವನ್ನು ಅಳೆಯುತ್ತಿರುತ್ತಾನೆ. ಒಬ್ಬನು ಒಂದು, ಎರಡು ಎಂದು ಎಣಿಸುತ್ತಿರುತ್ತಾನೆ. ಇನ್ನೊಬ್ಬನು ಹಿಂದುಗಡೆ ಕುಳಿತು ಬತ್ತದ ರಾಶಿಯನ್ನು ತಳ್ಳಿ ಕೊಡುತ್ತಾನೆ. ಹಾಗೆಯೇ ಇಲ್ಲಿಯೂ ಕೂಡ. ಆದರೆ ನಾನು ಏನು ಹೇಳಿದೆನೊ ನನಗೆ ಗೊತ್ತಿಲ್ಲ. ನನಗೆ ಸ್ವಲ್ಪ ಪ್ರಜ್ಞೆ ಬಂದ ಮೇಲೆ ನೋಡಿದೆ ಪಂಡಿತನು ಅಳುತ್ತಿದ್ದ. ಅವನು ಸಂಪೂರ್ಣ ಬದಲಾಗಿಬಿಟ್ಟಿದ್ದ. ಈ ರೀತಿಯ ಅವಸ್ಥೆ ಕೆಲವೊಮ್ಮೆ ಉಂಟಾಗುತ್ತದೆ. ಕೇಶವನು ನೌಕಾಯಾತ್ರೆಗೆ ನನ್ನನ್ನು ಕರೆದುಕೊಂಡು ಹೋಗುವುದಾಗಿ ಹೇಳಿ ಕಳುಹಿಸಿದ. ಅವನ ಜೊತೆ ವಿದೇಶೀ ವ್ಯಕ್ತಿಯೊಬ್ಬನು (ಪಾದ್ರಿ ಕುಕ್) ಬರುತ್ತಾನೆಂದು ಕೇಳಿದೆ. ಅಂದೂ ಕೂಡ ಭಯದಿಂದ ಹುಣಿಸೇ ಮರದ ಕಡೆಗೆ ಆಗಾಗ ಹೋಗುತ್ತಿದ್ದೆ. ಅನಂತರ ಅವರೆಲ್ಲ ಬಂದು ನಾನು ನೌಕೆಯನ್ನು ಏರಿದ ಮೇಲೆ ಇದೇ ರೀತಿ ಆಯಿತು. ಆಗ ಏನೆಲ್ಲ ಹೇಳಿದೆ ! ಅನಂತರ ಇವರೆಲ್ಲ ನನಗೆ ತಿಳಿಸಿದರು—ಚೆನ್ನಾಗಿ ಉಪದೇಶ ನೀಡಿದೆ ಎಂದು. ನನಗೆ ಮಾತ್ರ ಏನೂ ಗೊತ್ತಿರಲೇ ಇಲ್ಲ."

29. ಅದ್ಭುತ ಶ್ರೀರಾಮಕೃಷ್ಣರ ಅದ್ಭುತ ಸ್ಥಿತಿಯ ವಿಷಯವನ್ನು ನಾವು ತಿಳಿಯುವುದಾದರೂ ಹೇಗೆ ? ನಾವು ಮೂಕ ವಿಸ್ಮಿತರಾಗಿ ಅವರು ಹೇಳುತ್ತಿದ್ದುದನ್ನು ಕೇಳುತ್ತಿದ್ದೆವು. ಯಾವುದೋ ಒಂದು ಅಪೂರ್ವ ಶಕ್ತಿ ಅವರ ಶರೀರ ಮನಸ್ಸುಗಳನ್ನು ಆಶ್ರಯಿಸಿಕೊಂಡು ಈ ಎಲ್ಲ ಅಪೂರ್ವ ಲೀಲಾನಾಟಕವನ್ನು ಆಡುತ್ತಿರುವುದು. ಒಂದು ಅಪೂರ್ವ ಆಕರ್ಷಣೆಯ ಮೂಲಕ ಇತರರನ್ನು ದಕ್ಷಿಣೇಶ್ವರದೆಡೆಗೆ ಸೆಳೆದು ಅವರನ್ನು ಆಧ್ಯಾತ್ಮಿಕ ಜೀವನದ ಉನ್ನತ ಸ್ತರಕ್ಕೆ ಏರುವಂತೆ ಮಾಡುತ್ತಿತ್ತು. ಇದನ್ನೆಲ್ಲ ನೋಡಿದರೂ ನಮಗೆ ಅರ್ಥವಾಗುತ್ತಿರಲಿಲ್ಲ. ಮುಂದೆ ಫಲವನ್ನು ನೋಡಿದ ಮೇಲೆಯೆ ಅದರ ಸತ್ಯತೆ ನಮಗೆ ಅರಿವಾದೀತು. ಎಷ್ಟೋ ವೇಳೆ ದುಷ್ಟ ಸ್ವಭಾವದ ವ್ಯಕ್ತಿಗಳು ದ್ವೇಷಿಸುವುದಕ್ಕಾಗಿಯೇ ಶ್ರೀರಾಮಕೃಷ್ಣರೆಡೆಗೆ ಬರುತ್ತಿದ್ದರು. ಶ್ರೀರಾಮಕೃಷ್ಣರು ಆ ದಿವ್ಯ ಶಕ್ತಿಯ ಪ್ರಭಾವದಲ್ಲಿ ಮೈಮರೆತು ಭಾವಾವೇಶದಲ್ಲಿ ಅವರನ್ನು ಸ್ಪರ್ಶಿಸುತ್ತಿದ್ದರು. ತತ್‌ಕ್ಷಣವೇ ಅವರ ಸ್ವಭಾವದಲ್ಲಿ ಸಂಪೂರ್ಣ ಬದಲಾವಣೆ ಉಂಟಾಗಿ ಅವರು ಒಂದು ಹೊಸ ಜೀವನವನ್ನು ಪಡೆಯುತ್ತಿದ್ದರು. ನಾವು ಇಂಥ ಸಂದರ್ಭಗಳನ್ನು ಎಷ್ಟೊಂದು

ನೋಡಿರುವೆವು ! ಕ್ರಿಸ್ತನು ವೇಶ್ಯೆಯಾದ ಮೇರಿಯನ್ನು ಸ್ಪರ್ಶಿಸಿ ಆಕೆಗೆ ಹೊಸ ಜೀವನ ವನ್ನು ಕೊಟ್ಟನು. ಶ್ರೀ ಚೈತನ್ಯನು ಭಾವಾವೇಶದಲ್ಲಿ ಯಾರ ಹೆಗಲ ಮೇಲೆ ಕುಳಿತರೂ ಅವರ ಸಂಶಯ, ಅವಿಶ್ವಾಸ ಎಲ್ಲ ಕರಗಿಹೋಗಿ ಅವರು ದೊಡ್ಡ ಭಕ್ತರಾಗುತ್ತಿದ್ದರು. ಅವತಾರ ಪುರುಷರ ಜೀವನದಲ್ಲಿ ಬರುವ ಈ ಎಲ್ಲ ಘಟನೆಗಳ ವರ್ಣನೆಯನ್ನು ಓದಿ ದಾಗ ಅವರ ಶಿಷ್ಯರುಗಳು ಮತಾಂಧತೆಯಿಂದ ತಮ್ಮ ಮತಕ್ಕೆ ಪುಷ್ಟಿಯನ್ನು ನೀಡುವ ಬುದ್ಧಿಯಿಂದ ಈ ಎಲ್ಲ ಘಟನೆಗಳನ್ನು ಕಲ್ಪಿಸಿರುವರು ಎಂದು ನಮಗನಿಸುತ್ತಿತ್ತು. ಧರ್ಮದ ಯಥಾರ್ಥ ಸ್ವರೂಪವನ್ನು ತಿಳಿಯಲು ಇವೆಲ್ಲ ಅಡಚಣೆಗಳು ಎಂದು ನಾವು ಭಾವಿಸುತ್ತಿದ್ದೆವು. ಹರಿನಾಮವನ್ನು ಉಚ್ಚರಿಸುತ್ತ ಶ್ರೀಚೈತನ್ಯನು ಬಾಹ್ಯ ಜ್ಞಾನವನ್ನು ಕಳೆದುಕೊಳ್ಳುತ್ತಿದ್ದನಂತೆ. ಈ ವಿಷಯವನ್ನು ನವವಿಧಾನ ಸಮಾಜದಲ್ಲಿ ಪ್ರಕಾಶಿತ ವಾದ "ಭಕ್ತಿ ಚೈತನ್ಯ ಚಂದ್ರಿಕಾ" ಎಂಬ ಪುಸ್ತಕದಲ್ಲಿ ಸತ್ಯವೆಂದು ಸ್ವೀಕರಿಸಿರುವುದನ್ನು ನೋಡಿದಾಗ ಆ ಗ್ರಂಥಕರ್ತನಿಗೆ ತಲೆ ಕೆಟ್ಟಿರಬೇಕು ಎಂದು ನಾವು ಭಾವಿಸಿದ್ದೆವು. ಆಗ ನಾವು ಅಷ್ಟೊಂದು ಕೂಪ ಮಂಡೂಕಗಳಂತಿದ್ದೆವು. ನಮಗೆ ಶ್ರೀರಾಮಕೃಷ್ಣರ ದರ್ಶನ ವಾಗದಿದ್ದರೆ ಎಂಥ ದುರವಸ್ಥೆಯಲ್ಲಿರುತ್ತಿದ್ದೆವು ! ಈಗ ಶ್ರೀರಾಮಕೃಷ್ಣರ ಸಹವಾಸ ದಿಂದ 'ಮಾಡನ್ನು ಮಾಡಲಾಗದಿದ್ದರೂ ಮಾಡಿನ ದೋಷವನ್ನು ನೋಡಬಲ್ಲೆವು'– ಎಂಬ ಸ್ಥಿತಿಯಲ್ಲಾದರೂ ಇರುವೆವು. ಶ್ರೀರಾಮಕೃಷ್ಣರ ದರ್ಶನದಿಂದ ಈಗ ಸಂಶಯ ಬುದ್ಧಿಯಿಂದ ಮುಕ್ತರಾಗಿದ್ದೇವೆ. ಹಾಗೂ ಇತರರು ಹೇಳಿದುದನ್ನೆಲ್ಲ ಧರ್ಮವೆಂದು ಸ್ವೀಕರಿಸುವ ಪ್ರವೃತ್ತಿಯಿಂದಲೂ ಮುಕ್ತರಾಗಿದ್ದೇವೆ. ಭಕ್ತಿ ವಿಶ್ವಾಸಗಳನ್ನು ಇತರ ವಸ್ತುಗಳಂತೆ ಒಬ್ಬನು ಇನ್ನೊಬ್ಬನಿಗೆ ಕೊಡಲು ಸಾಧ್ಯ ಎಂಬುದನ್ನು ನಾವು ಈಗ ಅರಿ ತಿದ್ದೇವೆ. ಅಹೇತುಕ ಕೃಪಾಸಿಂಧುವಾದ ಶ್ರೀರಾಮಕೃಷ್ಣರ ಕೃಪೆಯ ಕಣದಿಂದ ಅಮೃ ತತ್ತ್ವವನ್ನು ಪಡೆಯುತ್ತೇವೆಂಬ ಭರವಸೆಯನ್ನು ಇಟ್ಟುಕೊಂಡಿದ್ದೇವೆ.

# ಆರನೆಯ ಅಧ್ಯಾಯ

# ಭಕ್ತಸಂಗದಲ್ಲಿ ಶ್ರೀರಾಮಕೃಷ್ಣರು

## ಗೋಪಾಲನ ತಾಯಿಯ ಕಥೆ—೧*

ನವೀನನೀರದಶ್ಯಾಮಂ ನೀಲೇಂದೀವರಲೋಚನಮ್ ।
ವಲ್ಲವೀನಂದನಂ ವಂದೇ ಕೃಷ್ಣಂ ಗೋಪಾಲರೂಪಿಣಮ್ ॥
ಸ್ಫುರದ್ಬರ್ಹದಲೋದ್ಬದ್ಧನೀಲಕುಂಜಿತಮೂರ್ಧಜಮ್ ।
ವಲ್ಲವೀವದನಾಂಭೋಜಮಯೂಪಾನಮಧುವ್ರತಮ್ ॥

(ಶ್ರೀಗೋಪಾಲ ಸ್ತೋತ್ರ)

ನವೀನ ಮೋಡದಂತೆ ಶ್ಯಾಮಲವರ್ಣನೂ, ನೀಲೋತ್ಪಲದಂಥ ಕಣ್ಣುಳ್ಳವನೂ, ಹೊಳೆಯುವ ನವಿಲು ಗರಿಯೊಂದಿಗೆ ಕಟ್ಟಲ್ಪಟ್ಟ ಗುಂಗುರು ಕೂದಲುಳ್ಳವನೂ, ಗೋಪಿಯರ ವದನಕಮಲದಲ್ಲಿ ಮಧುಪಾನ ಮಾಡುತ್ತಿರುವ ದುಂಬಿಯಂತಿರುವವನೂ ಆದ ಗೋಪಾಲ ರೂಪಿ ಶ್ರೀಕೃಷ್ಣನನ್ನು ವಂದಿಸುತ್ತೇನೆ.

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥ (ಗೀತೆ ೭–೨೧.)

ಯಾವ ಯಾವ ರೂಪದಲ್ಲಿ ಭಕ್ತನು ದೇವರನ್ನು ಅರ್ಚಿಸಲು ಇಚ್ಛಿಸುತ್ತಾನೊ ನಾನು ಅದರಲ್ಲಿಯೇ ಅವನ ಶ್ರದ್ಧೆಯನ್ನು ದೃಢಗೊಳಿಸುತ್ತೇನೆ.

ನನ್ನ ಹೆಸರಿನಲ್ಲಿ ಯಾರು ಒಂದು ಮಗುವನ್ನು ಸ್ವೀಕರಿಸುತ್ತಾರೋ ಅವರು ನನ್ನನ್ನೇ ಸ್ವೀಕರಿಸುತ್ತಾರೆ.— Matthew–18, 5.

1. ಗೋಪಾಲನ ತಾಯಿಗೆ ಶ್ರೀರಾಮಕೃಷ್ಣರ ಪ್ರಥಮ ದರ್ಶನ 2. ಪಟಲಡಂಗದ ಗೋವಿಂದಚಂದ್ರದತ್ತ 3. ಭಕ್ತಳಾದ ಅವನ ಪತ್ನಿ 4. ಅವರ ಪುರೋಹಿತ ಕುಟುಂಬ, ಬಾಲವಿಧವೆ ಅಘೋರಮಣಿದೇವಿ 5. ಅಘೋರಮಣಿಯ ಆಚಾರನಿಷ್ಠೆ

---

* ದಿವ್ಯಭಾವದಲ್ಲಿದ್ದ ಶ್ರೀರಾಮಕೃಷ್ಣರು ವಿಶೇಷ ಸಾಧಕ ಭಕ್ತರೊಡನೆ ಹೇಗೆ ವ್ಯವಹರಿಸುತ್ತಿದ್ದರು ಎಂಬುದನ್ನು ನಾವು ತೋರಿಸುತ್ತಿದ್ದೇವೆ. ಅದಕ್ಕೆ ಒಂದು ಅತ್ಯುತ್ತಮ ಉದಾಹರಣೆಯಾಗಿ ಅವರ ಭಕ್ತಳಾದ ಗೋಪಾಲನ ತಾಯಿಯ ವಿಷಯವನ್ನು ಇಲ್ಲಿ ವಿವರಿಸುತ್ತೇವೆ. ಆಕೆಗೆ ಅದ್ಭುತ ದಿವ್ಯ ದರ್ಶನಗಳಾಗುತ್ತಿದ್ದುವು. ಯಾರಿಗಾದರೂ ನಾವು ಉತ್ಪ್ರೇಕ್ಷಿಸುತ್ತಿದ್ದೇವೆಂದು ಅನಿಸಿದರೆ ಅವರಿಗೆ ನಾವು ಹೇಳುವುದಿಷ್ಟೇ : ನಾವು ಏನನ್ನೂ ಇದಕ್ಕೆ ಸೇರಿಸಲಿಲ್ಲ. ಭಾಷೆಯನ್ನು ಕೂಡ ಬದಲಾಯಿಸಲಿಲ್ಲ. ನಾವಿದನ್ನು ಸಂಗ್ರಹಿಸಿದಂತೆಯೆ ನಿಮ್ಮ ಮುಂದೆ ಇಡುತ್ತಿದ್ದೇವೆ. ಮತ್ತೆ ಇದನ್ನು ನಾವು ಯಾರ ಮೂಲಕ ಸಂಗ್ರಹಿಸಿದ್ದೇವೆಂದರೆ ಅವರು ಎಲ್ಲ ವಿಷಯದಲ್ಲೂ ಸತ್ಯಕ್ಕೇ ಗಮನ ಕೊಡುವವರು ಮತ್ತು ಸತ್ಯಕ್ಕೆ ಸ್ವಲ್ಪ ದೂರವಾದರೂ ಮನ ನೊಂದುಕೊಳ್ಳುವವರು. ಅವರು ಆಕೆಯ ಪ್ರಶಂಸಕರಂತೂ ಅಲ್ಲವೇ ಅಲ್ಲ, ಆಕೆಯ ಎಷ್ಟೋ ಆಚರಣೆಗಳನ್ನು ತೀವ್ರವಾಗಿ ಖಂಡಿಸುವವರೂ ಆಗಿದ್ದರು.

6. ಅವಳು ಗೋವಿಂದ ಬಾಬುವಿನ ದೇವಸ್ಥಾನದಲ್ಲಿ ತಪಸ್ಸು ಮಾಡುತ್ತಾ ಇದ್ದಳು 7. ಪ್ರಾಚ್ಯ ಮತ್ತು ಪಾಶ್ಚಾತ್ಯ ಮಹಿಳೆಯರಲ್ಲಿ ಧರ್ಮನಿಷ್ಠೆಯ ವೈವಿಧ್ಯ 8. ಅಘೋರಮಣಿಯು ಎರಡನೆಯ ಬಾರಿ ಶ್ರೀರಾಮಕೃಷ್ಣರನ್ನು ಸಂಧಿಸಿದಳು 9. ಗೋವಿಂದ ಬಾಬುವಿನ ತೋಟಕ್ಕೆ ಶ್ರೀರಾಮಕೃಷ್ಣರ ಭೇಟಿ 10. ಅಘೋರಮಣಿಯ ದಿನಚರಿ 11. ಗೋಪಾಲನ ದಿವ್ಯದರ್ಶನದಿಂದ ಅಘೋರಮಣಿಯಲ್ಲಿ ಉಂಟಾದ ಸ್ಥಿತಿ 12. ಆ ಸ್ಥಿತಿಯಲ್ಲಿ ಅವಳು ಶ್ರೀರಾಮಕೃಷ್ಣರೆಡೆಗೆ ಬರುತ್ತಾಳೆ. 13. ಬಾಲಗೋಪಾನ ಬಾಲಲೀಲೆ 14. 'ನೀನು ಎಲ್ಲವನ್ನೂ ಪಡೆದಂತಾಯಿತು' ಎಂದು ಶ್ರೀರಾಮಕೃಷ್ಣರು ಆಕೆಗೆ ಹೇಳುತ್ತಾರೆ 15. ಈ ದಿವ್ಯ ದರ್ಶನದಿಂದ ಅವಳ ಜೀವನದಲ್ಲಿ ಪರಿವರ್ತನೆ 16. ಎರಡು ತಿಂಗಳ ನಿರಂತರ ದಿವ್ಯದರ್ಶನ.

1. ಗೋಪಾಲನ ತಾಯಿಯು ಶ್ರೀರಾಮಕೃಷ್ಣರನ್ನು ಮೊದಲು ಯಾವಾಗ ಭೇಟಿಯಾದಳೆಂದು ಹೇಳುವುದು ಕಷ್ಟ. ನಾವು ೧೮೮೪ರ ಚೈತ್ರ ಅಥವಾ ವೈಶಾಖ ಮಾಸದಲ್ಲಿ ದಕ್ಷಿಣೇಶ್ವರಕ್ಕೆ ಹೋದಾಗ ಪ್ರಥಮ ಬಾರಿಗೆ ಅವಳನ್ನು ನೋಡಿದೆವು. ಆಗ ಅವಳು ಆರು ತಿಂಗಳಿಂದ ಶ್ರೀರಾಮಕೃಷ್ಣರೆಡೆಗೆ ಬರುತ್ತಿದ್ದಳು ಮತ್ತು ಅವಳೊಡನೆ ಭಗವಾನ್ ಬಾಲಗೋಪಾಲನ ಅಪೂರ್ವ ಲೀಲೆಯು ನಡೆಯುತ್ತಿತ್ತು. ನಮಗೆ ಈಗ ಸರಿಯಾಗಿ ನೆನಪಿದೆ—ಅಂದು ಗೋಪಾಲನ ತಾಯಿಯು ಶ್ರೀರಾಮಕೃಷ್ಣರ ಕೋಣೆಯ ಉತ್ತರ–ಪಶ್ಚಿಮ ಮೂಲೆಯಲ್ಲಿ ಶ್ರೀರಾಮಕೃಷ್ಣರೆಡೆಗೆ ಮುಖ ಮಾಡಿಕೊಂಡು ಕುಳಿತಿದ್ದಳು. ಅವಳಿಗೆ ಆಗ ಸುಮಾರು ಅರುವತ್ತು ವರ್ಷ. ಆದರೆ ಹಾಗೆ ಅನಿಸುತ್ತಿರಲಿಲ್ಲ. ಏಕೆಂದರೆ ಆ ವೃದ್ಧೆಯ ಮುಖದ ಮೇಲೆ ಬಾಲಕಿಯ ಆನಂದ ಬೆಳಗುತ್ತಿತ್ತು. ನಮ್ಮನ್ನು ಆಕೆಗೆ ಪರಿಚಯಿಸಿದಾಗ ಅವಳೆಂದಳು, "ನೀನು ಗಿ–ಯ ಮಗನೇ ? ನೀನು ನಮ್ಮವನೇ ! ಅಯ್ಯೋ ಗಿ–ಯ ಮಗನು ಭಕ್ತನಾಗಿಬಿಟ್ಟನಲ್ಲ. ಈ ಬಾರಿ ಗೋಪಾಲನು ಯಾರನ್ನೂ ಬಿಡುವುದೇ ಇಲ್ಲ. ಒಬ್ಬೊಬ್ಬರನ್ನಾಗಿ ಎಲ್ಲರನ್ನೂ ಎಳೆಯುತ್ತಿದ್ದಾನೆ. ಅದೂ ಒಳ್ಳೆಯದೇ. ಹಿಂದೆ ನಿನ್ನೊಡನೆ ಸಾಂಸಾರಿಕ ಸಂಬಂಧವಿತ್ತು. ಈಗ ಅದಕ್ಕಿಂತಲೂ ನಿಕಟವಾದ ಸಂಬಂಧವುಂಟಾಯಿತು." ಇದು ಇಪ್ಪತ್ತನಾಲ್ಕು ವರ್ಷಗಳ ಹಿಂದಿನ ಮಾತು. ಕ್ರಿ.ಶ. ೧೮೮೪ರ ಡಿಸೆಂಬರ್ ತಿಂಗಳು ಆಕಾಶವು ಅತ್ಯಂತ ಸ್ವಚ್ಛವಾಗಿತ್ತು. ಮತ್ತೆ ನಮಗೆ ನೆನಪಿರುವಂತೆ ಆ ವರ್ಷದ ನವೆಂಬರ್ ತಿಂಗಳಿಂದಲೂ ಸ್ವಲ್ಪ ಚಳಿ ಇತ್ತು. ತುಂಬಾ ಶಖೆಯೂ ತುಂಬಾ ಚಳಿಯೂ ಇಲ್ಲದ ಆ ಹೇಮಂತ ಋತುವಿನಲ್ಲಿ ಗೋಪಾಲನ ತಾಯಿಯು ಶ್ರೀರಾಮಕೃಷ್ಣರನ್ನು ಪ್ರಥಮ ಬಾರಿಗೆ ಸಂಧಿಸಿದ್ದಳು. ಅವಳು ಕಾಮಾರಹಾಟಿಯ ಗಂಗಾತೀರದಲ್ಲಿದ್ದ ಒಂದು ದೇವಸ್ಥಾನದ ತೋಟದಿಂದ ಬಂದಿದ್ದಳು. ಅದು ಪಟಲ್‌ಡಂಗಾದ ಗೋವಿಂದಚಂದ್ರ ದತ್ತನಿಗೆ ಸೇರಿತ್ತು. ಅವರು ಅಂದು ದೋಣಿಯ ಮೂಲಕ ಶ್ರೀರಾಮಕೃಷ್ಣರನ್ನು ನೋಡಲು ಬಂದಿದ್ದರು. ಅವರು ಎಂದು ಏಕೆ ಹೇಳುತ್ತೇವೆಂದರೆ ಗೋಪಾಲನ ತಾಯಿಯು ಅಂದು ಒಬ್ಬಳೇ ಬರಲಿಲ್ಲ. ತೋಟದ ಯಜಮಾನನ ಪತ್ನಿ (ವಿಧವೆ) ಮತ್ತು ಕಾಮಿನೀ ಎಂಬ ಅವಳ ದೂರದ ಸಂಬಂಧಿಕಳು ಗೋಪಾಲನ ತಾಯಿಯ ಜೊತೆ ಇದ್ದರು. ಆಗ ಶ್ರೀರಾಮಕೃಷ್ಣರ ಹೆಸರು ಕಲ್ಕತ್ತದಲ್ಲಿ ಅನೇಕರಿಗೆ ತಿಳಿದಿತ್ತು.

ಅವರ ಅಲೌಕಿಕ ಚರಿತ್ರೆಯನ್ನು ಕೇಳಿ, ಅವರನ್ನು ನೋಡಬೇಕೆಂದು ಇವರು ಉತ್ಸುಕ ರಾಗಿದ್ದರು ಕಾರ್ತಿಕ ಮಾಸದಲ್ಲಿ ಕಾಮಾರಹಾಟಿ ದೇವಸ್ಥಾನದ ದೇವತೆಗೆ ವಿಶೇಷ ಪೂಜೆ ನಡೆಯುತ್ತಿತ್ತು. ಅದಕ್ಕಾಗಿ ಗೋವಿಂದ ಬಾಬುವಿನ ಪತ್ನಿಯು ಆ ಸಮಯದಲ್ಲಿ ಪ್ರತಿವರ್ಷ ಕಾಮಾರಹಾಟಿಯ ತೋಟದಲ್ಲಿ ಬಂದು ನೆಲಸುತ್ತಿದ್ದಳು ಮತ್ತು ಪೂಜೆಯ ಎಲ್ಲ ವ್ಯವಸ್ಥೆಗಳನ್ನು ನೋಡಿಕೊಳ್ಳುತ್ತಿದ್ದಳು. ದಕ್ಷಿಣೇಶ್ವರವು ಅಲ್ಲಿಂದ ಎರಡು ಅಥವಾ ಮೂರು ಮೈಲಿ ಅಷ್ಟೇ. ಆದ್ದರಿಂದ ಅಲ್ಲಿಗೆ ಹೋಗುವುದು ಸುಲಭವೇ ಇತ್ತು. ಗೋವಿಂದ ಬಾಬುವಿನ ಪತ್ನಿ ಮತ್ತು ಗೋಪಾಲನ ತಾಯಿ ಈ ಅವಕಾಶವನ್ನು ಉಪ ಯೋಗಿಸಿಕೊಂಡು ದಕ್ಷಿಣೇಶ್ವರಕ್ಕೆ ಬಂದರು.

ಶ್ರೀರಾಮಕೃಷ್ಣರು ಅವರಿಬ್ಬರನ್ನು ಆದರದಿಂದ ಬರಮಾಡಿಕೊಂಡು ತಮ್ಮ ಕೊಠಡಿಯ ಒಳಗೆ ಕೂರಿಸಿ ಅನೇಕ ಆಧ್ಯಾತ್ಮಿಕ ಉಪದೇಶಗಳನ್ನಿತ್ತರು ಮತ್ತು ಭಕ್ತಿ ಗೀತೆಗಳನ್ನು ಹಾಡಿದರು. ಅನಂತರ ಇನ್ನೊಮ್ಮೆ ಬರಬೇಕೆಂದು ಹೇಳಿ ಅವರನ್ನು ಕಳಿಸಿ ಕೊಟ್ಟರು. ಹೊರಡುವಾಗ ಗೋವಿಂದನ ಪತ್ನಿಯು ಕಾಮಾರಹಟಿಗೆ ಒಮ್ಮೆ ಬಂದು ತಮ್ಮ ಪಾದಧೂಳಿಯಿಂದ ಅದನ್ನು ಪವಿತ್ರಗೊಳಿಸಬೇಕೆಂದು ಶ್ರೀರಾಮಕೃಷ್ಣರನ್ನು ಆಹ್ವಾನಿಸಿದಳು. ಶ್ರೀರಾಮಕೃಷ್ಣರು ಅವಕಾಶವಾದಾಗ ಒಮ್ಮೆ ಬರುತ್ತೇನೆ ಎಂದು ಹೇಳಿದರು. ಅಂದು ಶ್ರೀರಾಮಕೃಷ್ಣರು ಅವರಿಬ್ಬರನ್ನು ತುಂಬ ಪ್ರಶಂಸಿಸಿದ್ದರು : "ಆಹಾ! ಕಣ್ಣು ಮುಖಗಳಲ್ಲಿ ಎಂಥಾ ಭಾವ ! ಭಕ್ತಿ ಪ್ರೇಮದಿಂದ ತೇಲಾಡುತ್ತಿರುವಂತಿದೆ, ಪ್ರೇಮಮಯ ಚಕ್ಷು. ಹಣೆಯ ಮೇಲಿನ ತಿಲಕವೂ ಚೆನ್ನಾಗಿತ್ತು." ಅಂದರೆ ಅವರ ಚಲನ ವಲನ, ವೇಷಭೂಷಣ ಇತ್ಯಾದಿಗಳು ಅವರ ಆಂತರಿಕ ಭಕ್ತಿಭಾವವನ್ನು ಹೊರಸೂಸು ತ್ತಿದ್ದವು. ಸ್ವಲ್ಪವೂ ಆಡಂಬರವೆಂಬುದಿರಲಿಲ್ಲ.

2. ಗೋವಿಂದಚಂದ್ರದತ್ತನು ಕಲಕತ್ತೆಯ ಒಬ್ಬ ಪ್ರಸಿದ್ಧ ಐರೋಪ್ಯನ ಮನೆ ಯಲ್ಲಿ ಮುತ್ಸದ್ದಿಯಾಗಿದ್ದನು. ಅವನ ದಕ್ಷತೆ ಮತ್ತು ಕಾರ್ಯಕುಶಲತೆಯಿಂದಾಗಿ ಅವನು ದೊಡ್ಡ ಶ್ರೀಮಂತನಾದನು. ಆದರೆ ಕೆಲಕಾಲದ ನಂತರ ಪಾರ್ಶ್ವವಾಯು ಹೊಡೆದು ನಿಷ್ಕ್ರಿಯನಾಗಬೇಕಾಯಿತು. ಅವನ ಒಬ್ಬನೇ ಒಬ್ಬ ಮಗ ಮೊದಲೇ ತೀರಿಕೊಂಡಿದ್ದ. ಅವನು ಮಗನನ್ನೇ ಅನುಸರಿಸಿದನು. ಈಗ ಉಳಿದವರು ಇಬ್ಬರು ಹೆಣ್ಣುಮಕ್ಕಳು— ಭೂತ ಮತ್ತು ನಾರಾಣ್, ಮತ್ತು ಅವರ ಮಕ್ಕಳು. ಅವನಿಗೆ ಸಾಕಷ್ಟು ಸಂಪತ್ತು ಇದ್ದುದರಿಂದ ತನ್ನ ಜೀವನದ ಕೊನೆಯ ಭಾಗವನ್ನು ಧಾರ್ಮಿಕ ವಿಚಾರ ಮತ್ತು ಸತ್ಕರ್ಮಗಳಲ್ಲಿ ಕಳೆದನು. ಅವನು ರಾಮಾಯಣ, ಮಹಾಭಾರತಗಳ ಮೇಲೆ ತನ್ನ ಮನೆ ಯಲ್ಲಿ ಉಪನ್ಯಾಸ ಏರ್ಪಡಿಸುತ್ತಿದ್ದ. ಕಾಮಾರಹಾಟಿಯ ತೋಟದಲ್ಲಿ ರಾಧಾ ಮತ್ತು ಕೃಷ್ಣರ ಮೂರ್ತಿಯನ್ನು ಅತ್ಯಂತ ಸಂಭ್ರಮದಿಂದ ಪ್ರತಿಷ್ಠಾಪಿಸಿದ್ದ, ಭಾಗವತ ಮುಂತಾದ ಶಾಸ್ತ್ರಗಳ ಪಠಣ ಮಾಡಿಸಿದ್ದ. ಅವನು ಮತ್ತು ಅವನ ಪತ್ನಿ ಇಬ್ಬರೂ ಸೇರಿ ಬ್ರಾಹ್ಮಣರಿಗೆ ಮತ್ತು ಬಡಜನರಿಗೆ ಬೆಲೆಬಾಳುವ ವಸ್ತುಗಳನ್ನು ದಾನಮಾಡಿದ್ದರು. ಇವಿಷ್ಟೇ ಅಲ್ಲದೆ ಹಬ್ಬಗಳಂತೂ ಯಾವಾಗಲೂ ನಡೆದೇ ಇದ್ದುವು—ಹನ್ನೆರಡು ತಿಂಗಳು ಗಳಿಗೆ ಹದಿಮೂರು ಹಬ್ಬ ನಡೆಯುತ್ತಿತ್ತು,

3. ಗೋವಿಂದನು ತೀರಿಹೋದ ಮೇಲೆ ಅವನ ಧರ್ಮಪತ್ನಿಯು ಮೊದಲಿನಂತೆಯೇ ದೇವತಾರ್ಚನೆಯನ್ನು ಮುಂದುವರಿಸಿದಳು. ಆದರೆ ಅನೇಕ ಕಾರಣಗಳಿಂದಾಗಿ ಸಂಪತ್ತಿನ ಅಧಿಕಾಂಶ ನಷ್ಟವಾಯಿತು. ಆದ್ದರಿಂದ ದೇವತಾ ಸೇವೆಯಲ್ಲಿ ಏನೂ ಕುಂದುಂಟಾಗದಂತೆ ನೋಡಿಕೊಳ್ಳಲು ಗೋವಿಂದ ಬಾಬುವಿನ ಪತ್ನಿಯು ತಾನೇ ಕಾಮಾರಹಾಟಿಗೆ ಬಂದು ಅದರ ಎಲ್ಲ ವ್ಯವಸ್ಥೆಗಳನ್ನು ನೋಡಿಕೊಳ್ಳುತ್ತಿದ್ದಳು. ಅವಳು ಸಾಂಪ್ರದಾಯಿಕ ಮನೆತನದವಳು, ಜೀವನದಲ್ಲಿ ತುಂಬ ಕಷ್ಟ ನಷ್ಟಗಳನ್ನು ಅನುಭವಿಸಿದ್ದಳು. ಆಧ್ಯಾತ್ಮಿಕ ಜೀವನದಲ್ಲಿ ಮಾತ್ರ ಶಾಂತಿ ಲಭಿಸುವುದೆಂದು ಅವಳಿಗೆ ಅತ್ಯಂತ ಖಚಿತವಾಗಿತ್ತು. ಆದರೆ ಈ ಪ್ರಾಪಂಚಿಕ ಬಂಧನಗಳನ್ನು ಅಷ್ಟು ಸುಲಭವಾಗಿ ತೊಡೆದುಹಾಕುವಂತಿರಲಿಲ್ಲ. ಆಕೆಯು ತನ್ನ ಇಬ್ಬರು ಹೆಣ್ಣು ಮಕ್ಕಳನ್ನು ಮತ್ತು ಅಳಿಯಂದಿರನ್ನು ನೋಡಿಕೊಳ್ಳಬೇಕಾಗಿತ್ತು. ಅಷ್ಟೇ ಅಲ್ಲದೆ ಸಾಮಾಜಿಕ ಮಾನ/ಸಂಭ್ರಮಗಳನ್ನು ಉಳಿಸಿಕೊಳ್ಳಬೇಕಾಗಿತ್ತು. ಪತಿಯು ತೀರಿಹೋದಂದಿನಿಂದಲೂ ಅವಳು ಕಠೋರ ಬ್ರಹ್ಮಚರ್ಯ ಜೀವನವನ್ನು ನಡೆಸುತ್ತಿದ್ದಳು. ನೆಲದ ಮೇಲೆ ಮಲಗುವುದು, ದಿನಕ್ಕೆ ಮೂರು ಬಾರಿ ಸ್ನಾನ, ಸಂಜೆಯಲ್ಲಿ ಮಾತ್ರ ಊಟ, ವ್ರತ, ಉಪವಾಸ, ವಿಗ್ರಹಾರಾಧನೆ, ಜಪ, ಧ್ಯಾನ, ದಾನ ಇತ್ಯಾದಿಗಳಲ್ಲಿ ಕಾಲ ಕಳೆಯುತ್ತಿದ್ದಳು.

4. ಕಾಮಾರಹಾಟಿಯ ದೇವಸ್ಥಾನದ ಅತಿ ಸಮೀಪದಲ್ಲಿಯೇ ಗೋವಿಂದ ಬಾಬುವಿನ ಪುರೋಹಿತನ ವಂಶಸ್ಥರು ವಾಸಿಸುತ್ತಿದ್ದರು. ಪುರೋಹಿತ ನೀಲಮಾಧವ ಬಂದೋಪಾಧ್ಯಾಯನು ಗಣ್ಯ ವ್ಯಕ್ತಿಯಾಗಿದ್ದನು. ಗೋಪಾಲನ ತಾಯಿಯು ಇವನ ಸೋದರಿ. ಅವಳ ಮೊದಲ ಹೆಸರು ಅಘೋರಮಣೀದೇವಿ. ಅವಳು ಬಾಲಕಿಯಾಗಿರುವಾಗಲೇ ವಿಧವೆಯಾದುದರಿಂದ ತಂದೆಯ ಮನೆಯಲ್ಲಿಯೇ ವಾಸಿಸುತ್ತಿದ್ದಳು. ಗೋವಿಂದನ ಪತ್ನಿಯೊಡನೆ ವಿಶೇಷ ಸ್ನೇಹವುಂಟಾದ ಮೇಲೆ ಅಘೋರಮಣಿಯು ದೇವಸ್ಥಾನದಲ್ಲಿ ದೇವತಾಸೇವೆಯಲ್ಲಿಯೇ ಕಾಲ ಕಳೆಯುತ್ತಿದ್ದಳು. ಕ್ರಮೇಣ ಅವಳ ಭಕ್ತಿಯು ಅಧಿಕವಾಗಲು ಆ ಗಂಗಾತೀರದ ದೇವಸ್ಥಾನದಲ್ಲಿಯೇ ವಾಸಿಸಬೇಕೆಂದು ತೀವ್ರ ಆಕಾಂಕ್ಷೆ ಉಂಟಾಯಿತು. ಗೋವಿಂದನ ಪತ್ನಿಯ ಅನುಮತಿ ಪಡೆದು ಮಹಿಳಾಭವನದ ಒಂದು ಕೊಠಡಿಯಲ್ಲಿ ವಾಸಿಸತೊಡಗಿದಳು. ದಿನದಲ್ಲಿ ಒಂದೆರಡು ಬಾರಿ ಮಾತ್ರ ತಂದೆಯ ಮನೆಗೆ ಹೋಗಿ ನೋಡಿಕೊಂಡು ಬರುತ್ತಿದ್ದಳು.

ಗೋವಿಂದನ ಪತ್ನಿಯು ಹೇಗೆ ಕಠೋರ ಬ್ರಹ್ಮಚರ್ಯವನ್ನು ಪಾಲಿಸುತ್ತಿದ್ದಳೊ ಮತ್ತು ಸಾಧನೆಗಳನ್ನು ಮಾಡುತ್ತಿದ್ದಳೊ ಹಾಗೆಯೆ ಅಘೋರಮಣಿಯೂ ಕೂಡ. ಆದ್ದರಿಂದ ಅವರಿಬ್ಬರಲ್ಲೂ ಮಾನಸಿಕವಾಗಿ ಹೊಂದಾಣಿಕೆ ಇತ್ತು. ಹೊರಗಡೆ ಮಾತ್ರ ಗೋವಿಂದನ ಪತ್ನಿಗೆ ಬಹಳ ಸಂಪತ್ತು ಇದ್ದುದರಿಂದ ಲೋಕಮಾನ್ಯತೆಗೆ ಅನುಸಾರವಾಗಿ ನಡೆಯಬೇಕಿತ್ತು. ಅಘೋರಮಣಿಯು ಬಡವಳಾದುದರಿಂದ ಆಕೆಗೆ ಇವಾವುದರ ಹಂಗೂ ಇರಲಿಲ್ಲ, ಮಕ್ಕಳೂ ಯಾರೂ ಇಲ್ಲದುದರಿಂದ ಯಾವ ಸಾಂಸಾರಿಕ ತಾಪತ್ರಯವೂ ಇರಲಿಲ್ಲ. ತನ್ನ ಆಭರಣಗಳನ್ನು ಮಾರಿ ಬಂದ ಹಣ ಐನೂರು ಆರುನೂರು

ರೂಪಾಯಿಗಳಿದ್ದವು ಅಷ್ಟೇ. ಅದನ್ನೂ ಕೂಡ ಅವಳು ಪತ್ರ ಬರೆಸಿ ಗೋವಿಂದನ ಪತ್ನಿಯ ಹತ್ತಿರವೇ ಇಟ್ಟಿದ್ದಳು. ಅದರಿಂದ ಬರುವ ಬಡ್ಡಿ ಮತ್ತು ಆಗಾಗ ಆವಶ್ಯಕತೆ ಇದ್ದಾಗ ಮೂಲಧನದಿಂದ ಸ್ವಲ್ಪ ಹಣ ತೆಗೆದುಕೊಂಡು ಅವಳ ಜೀವನಯಾಪನೆ ನಡೆಯುತ್ತಿತ್ತು. ಗೋವಿಂದನ ಪತ್ನಿಯೂ ಕೂಡ ಎಲ್ಲಾ ವಿಷಯದಲ್ಲಿಯೂ ಅವಳಿಗೆ ಮತ್ತು ಅವಳ ಸಹೋದರನ ಮನೆಯವರಿಗೆ ಸಹಾಯ ಮಾಡುತ್ತಿದ್ದಳು.

5. ಅಘೋರ ಮಣಿ ಬಾಲ ವಿಧವೆ. ಪತಿಯ ಸುಖವನ್ನು ಕಾಣದವಳು. ಮಹಿಳೆಯರು ಹೇಳುತ್ತಾರೆ, ಬಾಲವಿಧವೆಯರು ತುಂಬಾ ನಿಷ್ಠಾವಂತರು, ಅವರು ಉಪ್ಪನ್ನೂ ತೊಳೆದು ತಿನ್ನುತ್ತಾರೆ ಎಂದು. ಅಘೋರಮಣಿ ಕೂಡ ಹಾಗೆಯೆ. ಒಂದು ದಿನ ಅವಳು ಅನ್ನವನ್ನು ಬೇಯಿಸಿ ಆ ಪಾತ್ರೆಯಿಂದಲೇ ಶ್ರೀರಾಮಕೃಷ್ಣರ ತಟ್ಟೆಗೆ ಬಡಿಸುತ್ತಿದ್ದಳು. ಆಗ ಅನ್ನ ತಿರುಗಿಸುವ ಕೋಲು ಹೇಗೋ ಅವರಿಗೆ ತಾಕಿತು. ಅಘೋರ ಮಣಿಯು ಆ ಪಾತ್ರೆಯ ಅನ್ನವನ್ನು ಊಟ ಮಾಡಲೇ ಇಲ್ಲ. ಕೋಲನ್ನೂ ಕೂಡ ನದಿಗೆ ಎಸೆದು ಬಿಟ್ಟಳು. ಇದು ನಡೆದದ್ದು ಆಕೆ ಶ್ರೀರಾಮಕೃಷ್ಣರೆಡೆಗೆ ಬರಲು ಇನ್ನೂ ಪ್ರಾರಂಭಿಸಿದಾಗ.

ದಕ್ಷಿಣೇಶ್ವರದ ನಹಬತ್‌ನಲ್ಲಿ ಎರಡು ಮೂರು ಒಲೆಗಳಿದ್ದುವು. ಶ್ರೀ ಕಾಳೀ ಮಂದಿರದಲ್ಲಿ ನೈವೇದ್ಯವಾಗುವುದು ತುಂಬಾ ತಡವಾಗುತ್ತಿತ್ತು. ಕೆಲವೊಮ್ಮೆ ಮಧ್ಯಾಹ್ನ ಒಂದುವರೆ ಘಂಟೆಯಾಗುತ್ತಿತ್ತು. ಶ್ರೀರಾಮಕೃಷ್ಣರಿಗೆ ಆರೋಗ್ಯ ಸರಿ ಇಲ್ಲದಾಗ ಶ್ರೀ ಮಾತೆ ಶಾರದಾದೇವಿಯವರು ಆ ಒಲೆಯಲ್ಲಿ ಅವರಿಗಾಗಿ ಸ್ವಲ್ಪ ಅಡುಗೆ ಮಾಡುತ್ತಿದ್ದರು. ಶ್ರೀರಾಮಕೃಷ್ಣರ ಭಕ್ತರು ಆಗಾಗ ರಾತ್ರಿಯಲ್ಲಿ ತಂಗಿದರೆ ಅವರಿಗಾಗಿ ತೊವ್ವೆ, ಚಪಾತಿ ಇತ್ಯಾದಿಗಳನ್ನು ಅದೇ ಒಲೆಯಲ್ಲಿ ಮಾಡುತ್ತಿದ್ದರು. ಮತ್ತೆ ಕಲ್ಕತ್ತೆ ಮುಂತಾದ ಕಡೆಗಳಿಂದ ಮಹಿಳಾ ಭಕ್ತರು ಶ್ರೀರಾಮಕೃಷ್ಣರನ್ನು ನೋಡಲು ಬಂದವರು ಅದೇ ನಹಬತ್ತಿನಲ್ಲಿಯೇ ಶ್ರೀಮಾತೆಯವರೊಡನೆ ಇಡೀ ದಿನ ಕಳೆಯುತ್ತಿದ್ದರು. ಮತ್ತು ಕೆಲವೊಮ್ಮೆ ರಾತ್ರಿಯನ್ನೂ ಅಲ್ಲೇ ಕಳೆಯುತ್ತಿದ್ದರು. ಶ್ರೀಮಾತೆಯವರು ಅವರಿಗಾಗಿಯೂ ಅಡುಗೆ ಮಾಡಬೇಕಿತ್ತು. ಅಘೋರಮಣಿ, ಅಥವಾ ಶ್ರೀರಾಮಕೃಷ್ಣರು ಮೊದಲು ಕರೆಯುತ್ತಿದ್ದಂತೆ, ಕಾಮಾರಹಾಟಿಯ ಬ್ರಾಹ್ಮಣಿಯು ಅವರನ್ನು ನೋಡಲು ಬಂದಾಗ ಅವಳು ನಹಬತ್ತಿನಲ್ಲಿಯೇ ಅಡುಗೆ ಮಾಡುತ್ತಿದ್ದಳು. ಅವಳು ಅಲ್ಲಿಯ ಒಲೆ ಮೇಲೆ ಪಾತ್ರೆ ಇಡಬೇಕಾದರೆ ಶ್ರೀಮಾತೆಯವರು ಒಲೆಯನ್ನು ಮೂರು ಬಾರಿ ಸಗಣಿಯಿಂದ ತೊಳೆಯಬೇಕಿತ್ತು. ಅಷ್ಟೊಂದು ಶುಚಿತ್ವವನ್ನು ಅವಳು ಅನುಸರಿಸುತ್ತಿದ್ದಳು !

6. ಕಾಮಾರಹಾಟಿ ಬ್ರಾಹ್ಮಣಿಯು ಚಿಕ್ಕಂದಿನಿಂದಲೂ ತುಂಬಾ ಅಭಿಮಾನಿ. ಯಾರ ಮಾತನ್ನೂ ಸ್ವಲ್ಪವೂ ಸಹಿಸುತ್ತಿರಲಿಲ್ಲ. ಹಣಕ್ಕಾಗಿ ಯಾರಿಗೂ ಕೈಯೊಡ್ಡುತ್ತಿರಲಿಲ್ಲ. ಯಾರಾದರೂ ಏನಾದರೂ ತಪ್ಪು ಮಾಡುವುದನ್ನು ಕಂಡರೆ ಅವರ ಮುಂದೆಯೇ ನಿಃಸಂಕೋಚವಾಗಿ ಹೇಳಿಬಿಡುತ್ತಿದ್ದಳು. ಆದ್ದರಿಂದ ಅವಳಿಗೆ ಎಲ್ಲರೊಡನೆಯೂ ಸರಿಹೊಂದುತ್ತಿರಲಿಲ್ಲ. ಗೋವಿಂದನ ಪತ್ನಿಯು ಅವಳಿಗೆ ವಾಸಿಸಲು ಕೊಟ್ಟಿದ್ದ ಕೊಠಡಿಯು

ತೋಟದ ದಕ್ಷಿಣ ಭಾಗಕ್ಕಿತ್ತು. ಕೊಠಡಿಯ ದಕ್ಷಿಣ ದಿಕ್ಕಿಗೆ ಮೂರು ಕಿಟಕಿಗಳಿದ್ದವು. ಅವುಗಳ ಮೂಲಕ ಸುಂದರ ಗಂಗಾದರ್ಶನವಾಗುತ್ತಿತ್ತು. ಉತ್ತರ ಮತ್ತು ಪಶ್ಚಿಮಕ್ಕೆ ಎರಡು ಬಾಗಿಲುಗಳಿದ್ದವು. ಬ್ರಾಹ್ಮಣಿಯು ಆ ಕೊಠಡಿಯಲ್ಲಿ ಕುಳಿತು ಗಂಗೆಯನ್ನು ನೋಡುತ್ತಿದ್ದಳು ಮತ್ತು ಹಗಲು ರಾತ್ರಿ ಜಪಮಾಡುತ್ತಿದ್ದಳು. ಈ ರೀತಿ ಆ ಕೊಠಡಿಯಲ್ಲಿ ಮೂವತ್ತು ವರ್ಷಕ್ಕೂ ಹೆಚ್ಚು ಕಾಲ ಸುಖದುಃಖಗಳಲ್ಲಿ ಕಳೆದಳು. ಅನಂತರವೇ ಅವಳಿಗೆ ಶ್ರೀರಾಮಕೃಷ್ಣರ ಪ್ರಥಮ ದರ್ಶನವಾದುದು.

ಬ್ರಾಹ್ಮಣಿಯ ತಂದೆಯ ವಂಶದವರು ಶಾಕ್ತರು. ಆಕೆಯ ಪತಿಯ ವಂಶದವರು ಯಾವ ಮತಾವಲಂಬಿಗಳೆಂಬುದು ನಮಗೆ ತಿಳಿಯದು. ಆದರೆ ಅವಳು ಮಾತ್ರ ವೈಷ್ಣವಳು ಮತ್ತು ಗುರುವಿನಿಂದ ಗೋಪಾಲನ ಮಂತ್ರವನ್ನು ಪಡೆದಿದ್ದಳು. ಗೋವಿಂದನ ಪತ್ನಿಯೊಡನಿದ್ದ ಅವಳ ನಿಕಟ ಸಂಪರ್ಕವು ಇದಕ್ಕೆ ಕಾರಣವಿದ್ದಿರಬಹುದು. ಗೋವಿಂದನ ಗುರುವಂಶದವರು ಕೃಷ್ಣನ ಪೂಜಕರಾದ ಗೋಸ್ವಾಮಿಗಳಾಗಿದ್ದರು. ಕಾಮಾರಹಾಟಿಯಲ್ಲಿ ದೇವಸ್ಥಾನ ಕಟ್ಟಿಸಿದಂದಿನಿಂದ ಅವರಲ್ಲಿ ಒಬ್ಬರೋ ಇಬ್ಬರೋ ಅಲ್ಲಿ ನೆಲಸಿದ್ದಿರಬಹುದು. ಆದರೆ ಅಘೋರಮಣೀದೇವಿಗೆ ಭಗವಂತನ ಮೇಲೆ ಅಂತಹ ಒಂದು ವಾತ್ಸಲ್ಯಭಾವ ಹೇಗೆ ಉಂಟಾಯಿತು ಎಂದು ನಿರ್ಧರಿಸುವುದು ಕಷ್ಟ. ಆಕೆ ಬಾಲವಿಧವೆಯಾದುದರಿಂದ ಪುತ್ರವಾತ್ಸಲ್ಯವನ್ನು ಅನುಭವಿಸಿದವಳೇ ಅಲ್ಲ. ಅನೇಕರ ಪ್ರಕಾರ ಇದು ಪೂರ್ವಜನ್ಮದ ಸಂಸ್ಕಾರ ಎಂದು.

7. ಯೂರೋಪ್ ಮತ್ತು ಅಮೆರಿಕಗಳಲ್ಲಿ ಪ್ರಪಂಚದ ದುಃಖದಿಂದಲೋ ಅಥವಾ ಬೇರಾವ ಕಾರಣದಿಂದಲೋ ಸ್ತ್ರೀಯರಿಗೆ ಧರ್ಮದ ಕಡೆ ಮನವೊಲಿದಾಗ ದಾನ, ದೀನದುಃಖಿಗಳ ಸೇವೆ, ಇವುಗಳ ಮೂಲಕ ಅವರ ಧಾರ್ಮಿಕ ಮನೋಭಾವದ ಹಂಬಲ ವ್ಯಕ್ತವಾಗುವುದು. ಹಗಲಿರುಳೂ ಸತ್ಕರ್ಮ ಮಾಡುವುದೇ ಅವರ ಲಕ್ಷ್ಯವಾಗಿಬಿಡುತ್ತದೆ. ನಮ್ಮ ದೇಶದಲ್ಲಿ ಇದಕ್ಕೆ ವಿರುದ್ಧವಾದುದು. ಕಠೋರ ಬ್ರಹ್ಮಚರ್ಯ, ತಪಶ್ಚರಣೆ, ಜಪ, ಧ್ಯಾನ, ಪ್ರಾರ್ಥನೆ ಇತ್ಯಾದಿಗಳ ಮೂಲಕ ಆ ಧರ್ಮ ನಿಷ್ಠೆಯು ಪ್ರಕಾಶಗೊಳ್ಳುತ್ತದೆ. ಸಂಸಾರವನ್ನು ತ್ಯಜಿಸಿ ಹೆಚ್ಚು ಹೆಚ್ಚು ಅಂತರ್ಮುಖಿಗಳಾಗುವುದೇ ಅವರ ಪ್ರಧಾನ ಲಕ್ಷ್ಯವಾಗಿಬಿಡುತ್ತದೆ. ಭಗವಂತನನ್ನು ಈ ಜೀವನದಲ್ಲಿ ಸಾಕ್ಷಾತ್ಕರಿಸಿಕೊಳ್ಳುವುದು ಸಾಧ್ಯ ಮತ್ತು ಅದರಿಂದಲೇ ನಿಜವಾದ ಶಾಂತಿ–ಇದು ಈ ದೇಶದ ಗಾಳಿ ನೀರಿನಲ್ಲಿಯೂ ಇದೆ, ಸ್ತ್ರೀ ಪುರುಷರ ನರನಾಡಿಗಳಲ್ಲಿಯೂ ಇದು ಪ್ರವೇಶಿಸಿದೆ. ಆದ್ದರಿಂದ ಈ ಬ್ರಾಹ್ಮಣಿಯ ಏಕಾಂತವಾಸ ಮತ್ತು ತಪಶ್ಚರಣೆ ಬೇರೆ ದೇಶದವರಿಗೆ ಆಶ್ಚರ್ಯವೆನಿಸಿದರೂ ಈ ದೇಶದಲ್ಲಿ ತುಂಬ ಸಹಜವಾದುದು.

* * *

ಪ್ರಥಮ ದರ್ಶನದಿಂದಲೇ ಕಾಮಾರಹಾಟಿ ಬ್ರಾಹ್ಮಣಿಯು ಶ್ರೀರಾಮಕೃಷ್ಣರೆಡೆಗೆ ತುಂಬಾ ಆಕರ್ಷಿತಳಾದಳು. ಆದರೆ ಇದು ಏಕೆ ಮತ್ತು ಇದರ ಪರಿಣಾಮವೇನಾಗಬಹುದು. ಇದಾವುದರ ಕಲ್ಪನೆಯೂ ಆಕೆಗಿರಲಿಲ್ಲ. ಏನೋ ಒಂದು ಅವರ್ಣನೀಯವಾದ

ಆಕರ್ಷಣೆಯನ್ನು ಅವಳು ಅನುಭವಿಸಿದಳು. ಆದರೆ ಆಗ ಅವರ ಬಗ್ಗೆ ಅವಳ ಭಾವನೆ ಏನಾಗಿತ್ತೆಂದರೆ, 'ಅವರೊಬ್ಬರು ಒಳ್ಳೆಯ ವ್ಯಕ್ತಿ, ನೈಜ ಸಂನ್ಯಾಸಿ ಮತ್ತು ಭಕ್ತ. ಸಮಯ ಸಿಕ್ಕಿದ ಕೂಡಲೇ ನಾನು ಇನ್ನೊಮ್ಮೆ ಅವರೆಡೆಗೆ ಬರುತ್ತೇನೆ' ಎಂದು, ಗೋವಿಂದನ ಪತ್ನಿಗೂ ಅದೇ ಅನುಭವವಾಯಿತು. ಆದರೆ ಸಮಾಜ ತನ್ನನ್ನು ನಿಂದಿಸ ಬಹುದೆಂದು ಅವಳು ಮತ್ತೆ ಹೋಗಲಿಲ್ಲ. ಅಷ್ಟೇ ಅಲ್ಲದೆ ಅವಳ ಇಬ್ಬರು ಹೆಣ್ಣು ಮಕ್ಕಳು ಮತ್ತು ಅಳಿಯಂದಿರ ದೆಸೆಯಿಂದ ತನ್ನ ಹೆಚ್ಚಿನ ಸಮಯವನ್ನು ಪಟಲ್‌ಡಂಗ್ ದಲ್ಲಿ ಕಳೆಯಬೇಕಿತ್ತು. ಅಲ್ಲಿಂದ ದಕ್ಷಿಣೇಶ್ವರಕ್ಕೆ ತುಂಬಾ ದೂರ. ಅಲ್ಲಿಗೆ ಹೋಗಬೇಕೆಂದರೆ ಅನೇಕ ವ್ಯವಸ್ಥೆಗಳನ್ನು ಮಾಡಬೇಕಿತ್ತು. ಆದ್ದರಿಂದ ಅವಳು ಮತ್ತೆ ದಕ್ಷಿಣೇಶ್ವರಕ್ಕೆ ಬರುವ ಸಾಧ್ಯತೆ ಅಷ್ಟಿರಲಿಲ್ಲ.

8. ಬ್ರಾಹ್ಮಣೆಗೆ ಈ ತೊಂದರೆ ಯಾವುದೂ ಇರಲಿಲ್ಲ. ಮೊದಲನೆಯ ಭೇಟಿ ಯಾದ ಕೆಲವೇ ದಿನಗಳಲ್ಲಿ ಅವಳು ಮತ್ತೆ ದಕ್ಷಿಣೇಶ್ವರಕ್ಕೆ ಹೊರಟಳು. ಅವಳು ಜಪಕ್ಕೆ ಕುಳಿತಿರುವಾಗ ಶ್ರೀರಾಮಕೃಷ್ಣರನ್ನು ನೋಡಬೇಕೆಂಬ ಆಸೆ ಅವಳಲ್ಲಿ ಉಂಟಾಗಿತ್ತು. ಅವಳು ಅಲ್ಲಿಗೆ ಹೋಗುವಾಗ ಸಾಮಾನ್ಯ ಬೆಲೆಯ ಸ್ವಲ್ಪ ಸಂದೇಶ (ಸಿಹಿತಿಂಡಿ) ತೆಗೆದು ಕೊಂಡು ಹೋಗಿದ್ದಳು. ಶ್ರೀರಾಮಕೃಷ್ಣರು ಅವಳನ್ನು ನೋಡಿದಕೂಡಲೆ, "ಬಂದೆಯಾ? ನನಗಾಗಿ ಏನನ್ನು ತಂದಿದ್ದೀಯಾ ಕೊಡು" ಎಂದು ಹೇಳಿದರು. ಗೋಪಾಲನ ತಾಯಿಯು ಹೇಳುತ್ತಾಳೆ : "ನನಗೆ ಅದನ್ನು ಕೇಳಿ ಗಾಬರಿಯಾಯಿತು. ಈ ಸಾಮಾನ್ಯ ಸಂದೇಶವನ್ನು ಹೇಗೆ ಅವರಿಗೆ ಕೊಡಲಿ ? ಅವರಿಗೆ ಅನೇಕರು ಎಷ್ಟೋ ಒಳ್ಳೆಯ ವಸ್ತುಗಳನ್ನು ತಂದು ಕೊಡುತ್ತಾರೆ. ಮತ್ತೆ ನಾನು ಬಂದಕೂಡಲೇ ಆ ಕೆಟ್ಟ ಸಂದೇಶವನ್ನು ಕೇಳಬೇಕೇ !" ಭಯದಿಂದಲೂ ಲಜ್ಜೆಯಿಂದಲೂ ಏನೂ ಮಾತನಾಡದೆ ಅವಳು ಆ ಸಂದೇಶವನ್ನು ಅವರಿಗೆ ಕೊಟ್ಟಳು. ಶ್ರೀರಾಮಕೃಷ್ಣರು ಅದನ್ನು ತಿಂದು ಆನಂದದಿಂದ ಹೇಳಿದರು : "ನೀನು ಏಕೆ ಹಣ ಖರ್ಚು ಮಾಡಿ ಸಂದೇಶವನ್ನು ತರುವುದು. ತೆಂಗಿನಕಾಯಿ ಲಡ್ಡು ಮಾಡಿಟ್ಟಿರು. ಬರುವಾಗ ಅದನ್ನೇ ಒಂದೆರಡು ತೆಗೆದುಕೊಂಡು ಬಾ. ಅಥವಾ ನೀನು ಏನು ಅಡುಗೆ ಮಾಡುತ್ತೀಯೊ, ಸೊಪ್ಪಿನ ತರಕಾರಿ, ಆಲೂಗೆಡ್ಡೆ ಪಲ್ಯ ಯಾವುದಾ ದರೂ ತೆಗೆದುಕೊಂಡು ಬಂದರೆ ಆಯಿತು. ನಿನ್ನ ಕೈಯಿಂದ ತಯಾರಿಸಿದ ತಿಂಡಿಯನ್ನು ತಿನ್ನಬೇಕೆಂಬ ಆಸೆ." ಗೋಪಾಲನ ತಾಯಿ ಹೇಳುತ್ತಾಳೆ : "ಧರ್ಮ ಕರ್ಮದ ವಿಷಯ ದೂರವೇ ಆಯಿತು. ಹೀಗೆ ಯಾವಾಗಲೂ ತಿನ್ನುವ ವಿಚಾರವೇ. ಒಳ್ಳೇ ಸಾಧು ಸಿಕ್ಕಿದ ನಲ್ಲಪ್ಪಾ ನನಗೆ ಎಂದು ಭಾವಿಸತೊಡಗಿದೆ. ಕೇವಲ ತಿನ್ನುವುದು ತಿನ್ನುವುದು ಅಷ್ಟೇ. ನಾನು ಬಡ ಹೆಂಗಸು. ಅಷ್ಟೊಂದು ತಿಂಡಿಯನ್ನು ಎಲ್ಲಿಂದ ತರಲಿ. ಸಾಕಪ್ಪಾ ಇನ್ನು ಬರೋದಿಲ್ಲಾ. ಆದರೆ ನಾನು ದಕ್ಷಿಣೇಶ್ವರದ ತೋಟದ ಬಾಗಿಲನ್ನು ದಾಟುತ್ತಿದ್ದಂತೆಯೆ ಅವರು ನನ್ನನ್ನು ಎಳೆಯುತ್ತಿರುವಂತೆ ಆಗುತ್ತಿತ್ತು. ಮುಂದೆ ಹೋಗುವುದಕ್ಕೇ ಆಗುವು ದಿಲ್ಲ. ಮನಸ್ಸಿಗೆ ಹೇಳಿ ಹೇಳಿ ಸಮಾಧಾನ ಮಾಡಿ ಕೊನೆಗೆ ಹೇಗೋ ಕಾಮಾರಹಾಟಿ ಯನ್ನು ತಲುಪುತ್ತಿದ್ದೆ." ಇದಾದ ಕೆಲವೇ ದಿನಗಳಲ್ಲಿ ಬ್ರಾಹ್ಮಣೆಯು ಸೊಪ್ಪಿನ ಪಲ್ಯ

ವನ್ನು ಹಿಡಿದುಕೊಂಡು ಪರಮಹಂಸರನ್ನು ನೋಡಲು ಬರುತ್ತಿದ್ದಳು. ಶ್ರೀರಾಮ ಕೃಷ್ಣರೂ ಕೂಡ ಮೊದಲಿನಂತೆಯೇ ಆಕೆ ಬಂದ ಕೂಡಲೇ ಆಕೆ ತಂದಿದ್ದನ್ನು ತಿಂದು ಹೇಳುತ್ತಿದ್ದರು : "ಆಹಾ ಎಂಥಾ ಚೆನ್ನಾಗಿದೆ. ಅಮೃತದಂತಿದೆ." ಹೀಗೆಂದು ಹೇಳಿ ಆನಂದವನ್ನು ವ್ಯಕ್ತಪಡಿಸಿದರು. ಗೋಪಾಲನ ತಾಯಿಗೆ ಆ ಆನಂದವನ್ನು ನೋಡಿ ಕಣ್ಣೀರು ತುಂಬಿತು. ತಾನು ಅತ್ಯಂತ ಬಡವಳು. ದೀನಳು. ಈ ಒಂದು ಸಾಮಾನ್ಯ ವಸ್ತು ವನ್ನು ಅವರು ಅಷ್ಟೊಂದು ಪ್ರಶಂಸಿಸುತ್ತಿರುವರಲ್ಲಾ– ಎಂದು ಅವಳು ಆಶ್ಚರ್ಯಪಟ್ಟಳು.

ಹೀಗೆ ಮೂರು ನಾಲ್ಕು ತಿಂಗಳು ಆದ ಮೇಲೆ ಅವಳು ದಕ್ಷಿಣೇಶ್ವರಕ್ಕೆ ಬಂದು ಹೋಗುವುದು ಹೆಚ್ಚಾಯಿತು. ಅವಳು ಯಾವುದೇ ತಿಂಡಿಯನ್ನು ತಯಾರಿಸಲಿ, ಅದು ಚೆನ್ನಾಗಿದ್ದರೆ ಅದನ್ನು ತೆಗೆದುಕೊಂಡು ದಕ್ಷಿಣೇಶ್ವರಕ್ಕೆ ಬಂದುಬಿಡುತ್ತಿದ್ದಳು. ಶ್ರೀರಾಮ ಕೃಷ್ಣರೂ ಅದನ್ನು ಆನಂದದಿಂದ ತಿನ್ನುತ್ತಿದ್ದರು. ಕೆಲವೊಮ್ಮೆ ಅವರು ಅತ್ಯಂತ ಸಾಮಾನ್ಯ ಪದಾರ್ಥಗಳನ್ನು ತರಲು ಹೇಳುತ್ತಿದ್ದರು. 'ಅದನ್ನು ತೆಗೆದುಕೊಂಡು ಬಾ ಇದನ್ನು ತೆಗೆದುಕೊಂಡು ಬಾ', 'ಅದು ತಿನ್ನುತ್ತೇನೆ ಇದು ತಿನ್ನುತ್ತೇನೆ'—ಇದನ್ನೆಲ್ಲ ಕೇಳಿ ಬೇಸತ್ತು ಗೋಪಾಲನ ತಾಯಿಯು ಕೆಲವೊಮ್ಮೆ ಭಾವಿಸುತ್ತಿದ್ದಳು : "ಗೋಪಾಲ, ನಿನ್ನನ್ನು ಕರೆದುದಕ್ಕೆ ಇದೇ ಫಲವೇ, ಎಂಥಾ ಸಾಧುವಿನ ಹತ್ತಿರ ನನ್ನನ್ನು ಕರೆದು ಕೊಂಡು ಬಂದೆ ನೀನು. ಕೇವಲ ತಿನ್ನುವುದೇ ಆಯಿತು. ಮತ್ತೆ ಬರುವುದಿಲ್ಲಪ್ಪ". ಆದರೆ ಅದೇ ಆಕರ್ಷಣೆ ! ದೂರ ಹೋದ ಕೂಡಲೇ ಮತ್ತೆ ಯಾವಾಗ ಹೋಗುವುದು–ಇದೇ ಯೋಚನೆ.

9. ಈ ಮಧ್ಯೆ ಶ್ರೀರಾಮಕೃಷ್ಣರು ಒಮ್ಮೆ ಕಾಮಾರಹಾಟಿಯ ಗೋವಿಂದ ಬಾಬುವಿನ ತೋಟಕ್ಕೆ ಹೋದರು. ಅಲ್ಲಿ ದೇವತಾದರ್ಶನ, ಸೇವೆ, ಇತ್ಯಾದಿಗಳನ್ನು ಮಾಡಿ ವಿಶೇಷ ಆನಂದವನ್ನು ವ್ಯಕ್ತಪಡಿಸಿದರು. ವಿಗ್ರಹದ ಮುಂದೆ ಭಕ್ತಿಗೀತೆಗಳನ್ನು ಹಾಡಿ ಪ್ರಸಾದವನ್ನು ಪಡೆದು ದಕ್ಷಿಣೇಶ್ವರಕ್ಕೆ ಹಿಂದಿರುಗಿದರು. ಕೀರ್ತನೆಯ ಸಮಯ ದಲ್ಲಿ ಅವರ ಭಾವಾವೇಶವನ್ನು ನೋಡಿ ಗೋವಿಂದನ ಪತ್ನಿ ಮುಂತಾದವರು ಮುಗ್ಧ ರಾದರು. ಗೋಸ್ವಾಮಿಗಳು ಇದನ್ನೆಲ್ಲ ನೋಡಿ ತಮ್ಮ ಪ್ರಭಾವ ಎಲ್ಲಿ ಕಡಮೆಯಾಗು ವುದೋ ಎಂದು ಅಸೂಯೆಪಟ್ಟಿರಬಹುದು. ಅನಂತರ ತಿಳಿದು ಬಂತು ಅದು ನಿಜ ಎಂದು.

* * *

10. ಕಾಮಾರಹಾಟಿಯ ಬ್ರಾಹ್ಮಣಿಗೆ ಬಹುಕಾಲದಿಂದಲೂ ಒಂದು ಅಭ್ಯಾಸ ವಿತ್ತು. ಅದೇನೆಂದರೆ ರಾತ್ರಿ ಎರಡು ಘಂಟೆಗೆ ಶೌಚಾದಿಗಳನ್ನು ಮುಗಿಸಿ ಮೂರುಘಂಟೆಗೆ ಜಪಕ್ಕೆ ಕುಳಿತುಬಿಡುತ್ತಿದ್ದಳು. ಅನಂತರ ಎಂಟು ಅಥವಾ ಒಂಬತ್ತು ಘಂಟೆಯ ಹೊತ್ತಿಗೆ ಜಪವನ್ನು ಮುಗಿಸಿ ಸ್ನಾನಕ್ಕೆ ಹೋಗುತ್ತಿದ್ದಳು. ಅನಂತರ ಶ್ರೀರಾಧಾಕೃಷ್ಣನ ದರ್ಶನ ಮತ್ತು ಸೇವೆಯಲ್ಲಿ ನಿರತಳಾಗುತ್ತಿದ್ದಳು. ದೇವತೆಗೆ ನೈವೇದ್ಯವೆಲ್ಲ ಮುಗಿದ ಮೇಲೆ ಮಧ್ಯಾಹ್ನ ಎರಡು ಘಂಟೆಯ ಹೊತ್ತಿಗೆ ತನಗಾಗಿ ಅಡುಗೆ ಮಾಡಲು ಪ್ರಾರಂಭಿಸು

ತ್ತಿದ್ದಳು. ಅನಂತರ ಊಟವಾದ ಮೇಲೆ ಸ್ವಲ್ಪ ಹೊತ್ತು ವಿಶ್ರಮಿಸಿ ಮತ್ತೆ ಜಪಕ್ಕೆ ಕುಳಿತುಕೊಳ್ಳುತ್ತಿದ್ದಳು. ಮತ್ತೆ ಸಂಜೆಯಲ್ಲಿ ಆರತಿಯೆಲ್ಲ ಮುಗಿದ ಮೇಲೆ ರಾತ್ರಿ ಬಹಳ ಹೊತ್ತು ಜಪ ಮಾಡುತ್ತಿದ್ದಳು. ಅನಂತರ ಸ್ವಲ್ಪ ಹಾಲನ್ನು ಕುಡಿದು ಕೆಲವು ಘಂಟೆ ವಿಶ್ರಮಿಸುತ್ತಿದ್ದಳು. ಸ್ವಾಭಾವಿಕವಾಗಿಯೇ ಅವಳ ದೇಹ ವಾಯುಪ್ರಧಾನವಾದುದ ರಿಂದ ಹೆಚ್ಚು ನಿದ್ರೆ ಬರುತ್ತಿರಲಿಲ್ಲ. ಕೆಲವೊಮ್ಮೆ ಹೃದಯಬಡಿತ ಜಾಸ್ತಿಯಾಗುತ್ತಿತ್ತು. ಏನೋ ಒಂದು ರೀತಿಯ ಸಂವೇದನೆಯಾಗುತ್ತಿತ್ತು. ಶ್ರೀರಾಮಕೃಷ್ಣರು ಅದನ್ನು ಕೇಳಿ ಹೇಳಿದರು : "ಆ ವಾಯು ನಿನ್ನ ಹರಿನಾಮದ ಪರಿಣಾಮ. ಅದು ಹೋದರೆ ನಿನ್ನ ಗತಿ ಯೇನು ? ಆ ರೀತಿಯಾದಾಗ ಏನಾದರೂ ಸ್ವಲ್ಪ ತಿನ್ನು."

೧೮೮೪ನೇ ಇಸವಿ. ಶೀತಲಕಾಲವು ಕಳೆದು ವಸಂತಕಾಲದ ಶುಭಾಗಮನವಾಗುತ್ತಿದೆ. ಪತ್ರ ಪುಷ್ಪ ಸಂಗೀತದಿಂದ ಕೂಡಿದ ಭೂತಾಯಿಯು ಒಂದು ಅಪೂರ್ವ ಜಾಗೃತಿಯನ್ನು ಅನುಭವಿಸುತ್ತಿದ್ದಾಳೆ. ಆ ಜಾಗೃತಿಯು ಇನ್ನಾವುದರ ವಿಶೇಷವೂ ಅಲ್ಲ, ಜೀವಿಗಳ ಪ್ರವೃತ್ತಿಗೆ ಸಂಬಂಧಿಸಿದುದು. ಈ ಋತುವಿನಲ್ಲಿ ಎಲ್ಲಾ ಬಗೆಯ ಪ್ರವೃತ್ತಿಗಳೂ—ಅವು ಕೆಟ್ಟವಿರಲಿ ಅಥವಾ ಒಳ್ಳೆಯವಿರಲಿ—ಜಾಗ್ರತಗೊಳ್ಳುವುವು. ಸಾಧುವು ಸದ್ವಿಷಯದಲ್ಲಿ ನವಜಾಗೃತಿಯನ್ನು ಪಡೆಯುವನು. ಅಸಾಧುವು ದುಷ್ಪ್ರವೃತ್ತಿಯ ಜಾಗೃತಿಯನ್ನು ಪಡೆಯುವನು.

11. ಈ ಸಮಯದಲ್ಲಿ ಕಾಮಾರಹಾಟಿ ಬ್ರಾಹ್ಮಣಿಯು ಒಂದು ದಿನ ರಾತ್ರಿ ಮೂರು ಘಂಟೆಯಲ್ಲಿ ಜಪಕ್ಕೆ ಕುಳಿತಿದ್ದಾಳೆ. ಜಪವು ಮುಗಿದು ತನ್ನ ಇಷ್ಟದೇವತೆಗೆ ಜಪವನ್ನು ಸಮರ್ಪಣೆ ಮಾಡುವ ಸಮಯ. ಆಗ ಅವಳು ಪ್ರಾಣಾಯಾಮವನ್ನು ಪ್ರಾರಂಭಿಸಿದಳು. ಆ ಸಂದರ್ಭದಲ್ಲಿ ಆಕೆಯು ನೋಡುತ್ತಾಳೆ, ಶ್ರೀರಾಮಕೃಷ್ಣರು ತನ್ನ ಹತ್ತಿರದಲ್ಲೇ ಎಡಗಡೆ ಕುಳಿತಿದ್ದಾರೆ. ಅವರ ಬಲ ಅಂಗೈ ಅರ್ಧ ಮುಚ್ಚಿಕೊಂಡಿತ್ತು! ಅವರು ದಕ್ಷಿಣೇಶ್ವರದಲ್ಲಿ ಕಂಡಂತೆಯೇ ಜೀವಂತವಾಗಿಯೂ ಸ್ಪಷ್ಟವಾಗಿಯೂ ಕಾಣಿಸಿ ದರು. ಅವಳು ಆಲೋಚಿಸಿದಳು, "ಏನಿದು, ಅವರು ಹೇಗೆ ಮತ್ತು ಎಲ್ಲಿಂದ ಈ ನಡು ರಾತ್ರಿಯಲ್ಲಿ ಬಂದರು?" ಗೋಪಾಲನ ತಾಯಿ ಹೇಳುತ್ತಾಳೆ : "ನಾನು ಆಶ್ಚರ್ಯದಿಂದ ಅವರನ್ನು ನೋಡುತ್ತಿದ್ದೆ ಮತ್ತು ಯೋಚಿಸುತ್ತಿದ್ದೆ. ಆ ಕಡೆ ಗೋಪಾಲನು (ಶ್ರೀರಾಮ ಕೃಷ್ಣರನ್ನು ಗೋಪಾಲ ಎಂದು ಕರೆಯುತ್ತಿದ್ದಳು) ಕುಳಿತು ಮುಗುಳ್ನಗುತ್ತಿದ್ದಾನೆ. ಅನಂತರ ಸಾಹಸ ಮಾಡಿ ನಾನು ನನ್ನ ಎಡಗೈಯಿಂದ ಗೋಪಾಲನ ಎಡಗೈಯನ್ನು ಹಿಡಿ ಯುವಷ್ಟರಲ್ಲಿಯೇ ಆ ಮೂರ್ತಿಯು ಕಣ್ಮರೆಯಾಯಿತು. ಅದೇ ಜಾಗದಲ್ಲಿ ಹತ್ತು ತಿಂಗಳ ಒಂದು ಮಗು ಕಾಣಿಸಿಕೊಂಡಿತು. (ಕೈ ತೋರಿಸಿ) ಅದು ಇಷ್ಟು ದೊಡ್ಡದಾ ಗಿತ್ತು. ಹಾ ! ಎಂಥಾ ಸೌಂದರ್ಯ ! ಒಂದು ಕೈಯನ್ನು ಮೇಲೆತ್ತಿಕೊಂಡು ತೆವಳುತ್ತಾ ನನ್ನ ಹತ್ತಿರ ಬಂದನು. ನನ್ನ ಮುಖವನ್ನೇ ನೋಡುತ್ತಾ 'ಅಮ್ಮ ನನಗೆ ಬೆಣ್ಣೆ ಕೊಡು ತ್ತೀಯಾ' ಎಂದು ಕೇಳಿದನು. ನನಗೆ ಆ ಅನುಭವದಿಂದ ರೋಮಾಂಚನವಾಯಿತು. ಅದು ವಿಚಿತ್ರ ಅನುಭವ. ನಾನು ಗಟ್ಟಿಯಾಗಿ ಕೂಗಿದೆ. ಅದು ಸಾಮಾನ್ಯ ಕೂಗಾಗಿರಲಿಲ್ಲ.

ಮನೆಯಲ್ಲಿ ಯಾರೂ ಇರಲಿಲ್ಲ. ಇದ್ದಿದ್ದರೆ ಓಡಿ ಬಂದುಬಿಡುತ್ತಿದ್ದರೇನೋ ! ನಾನು ರೋದಿಸುತ್ತಾ ಹೇಳಿದೆ : 'ಮಗು, ನಾನೊಬ್ಬಳು ಬಡಪಾಯಿ, ದರಿದ್ರಳು. ನಿನಗೆ ಏನನ್ನು ಕೊಡಲಿ ? ಬೆಣ್ಣೆಹಾಲು ಇವನ್ನೆಲ್ಲ ಎಲ್ಲಿಂದ ತರಲಪ್ಪಾ?' ಆದರೆ ಆ ಗೋಪಾಲನು ಇದನ್ನೆಲ್ಲ ಕೇಳುವನೇನು ? ನನಗೇನಾದರೂ ಕೊಡು ಎಂದು ಪೀಡಿಸುತ್ತಲೇ ಇದ್ದ. ನಾನು ಅಳುತ್ತಲೇ ಮೇಲೆದ್ದು ತೂಗುಪಾತ್ರೆಯಿಂದ ಒಣಗಿದ ಲಡ್ಡುವನ್ನು ತೆಗೆದು ಅವನ ಕೈಯಲ್ಲಿಟ್ಟು ಹೇಳಿದೆ : 'ಮಗು, ಗೋಪಾಲ, ನಾನು ಈ ಕೆಟ್ಟವಸ್ತುವನ್ನು ತಿನ್ನಲು ಕೊಡುತ್ತಿದ್ದೇನೆ. ಆದರೆ ನೀನು ಮಾತ್ರ ನನಗೆ ಅದೇ ರೀತಿ ಆಹಾರವನ್ನು ಕೊಡಬೇಡಪ್ಪಾ.'

"ಇನ್ನು ಜಪ ಮಾಡುವವರಾರು ? ಗೋಪಾಲನು ಬಂದು ತೊಡೆಯ ಮೇಲೆ ಕುಳಿತು ಜಪಮಾಲೆಯನ್ನು ಎಳೆಯುತ್ತಾನೆ, ಹೆಗಲೇರುತ್ತಾನೆ, ಮನೆಯೊಳಗೆಲ್ಲ ಓಡಾಡುತ್ತಾನೆ. ಬೆಳಗಾದ ಕೂಡಲೇ ನಾನು ಹುಚ್ಚಿಯಂತೆ ದಕ್ಷಿಣೇಶ್ವರಕ್ಕೆ ಓಡುತ್ತಾ ಹೋದೆ. ಗೋಪಾಲನು ಮಡಿಲಿನಲ್ಲಿದ್ದ. ಹೆಗಲ ಮೇಲೆ ತಲೆ ಇಟ್ಟುಕೊಂಡಿದ್ದ. ಗೋಪಾಲನ ನೇರಳೇ ಬಣ್ಣದ ಪಾದಗಳು ನನ್ನ ಎದೆಯ ಮೇಲೆ ಓಲಾಡುತ್ತಿದ್ದುದನ್ನು ನಾನು ಸ್ಪಷ್ಟವಾಗಿ ಕಂಡೆ."

12. ಗೋಪಾಲನ ತಾಯಿಯು ಆ ಅದ್ಭುತ ದಿವ್ಯದರ್ಶನದಿಂದ ಪ್ರೇಮೋನ್ಮತ್ತಳಾಗಿ ಕಾಮಾರಹಾಟಿ ತೋಟದಿಂದ ಹೊರಟಳು. ಅವಳು ಹಾಗೆ ಬೆಳಗಿನ ಜಾವ ದಕ್ಷಿಣೇಶ್ವರಕ್ಕೆ ಬಂದಾಗ ನಮಗೆ ಪರಿಚಿತಳಾದ ಇನ್ನೊಬ್ಬಳು ಸ್ತ್ರೀ ಭಕ್ತಳು ಅಲ್ಲಿದ್ದಳು. ಅವಳಿಂದ ನಾವು ಕೇಳಿರುವುದನ್ನು ನಾವು ನಿಮ್ಮ ಮುಂದೆ ಇಡುತ್ತೇವೆ. ಆಕೆ ಹೇಳುತ್ತಾಳೆ :

"ನಾನು ಆಗ ಶ್ರೀರಾಮಕೃಷ್ಣರ ಕೊಠಡಿಯನ್ನು ಗುಡಿಸಿ ಶುದ್ಧಗೊಳಿಸುತ್ತಿದ್ದೆ. ಆಗ ಬೆಳಗ್ಗೆ ಏಳು ಅಥವಾ ಏಳೂವರೆ ಘಂಟೆಯಾಗಿರಬಹುದು. ಆಗ ನನಗೆ ಕೇಳಿಸಿತು, ಯಾರೋ ಒಬ್ಬರು 'ಗೋಪಾಲ, ಗೋಪಾಲ' ಎಂದು ಕರೆಯುತ್ತಾ ಶ್ರೀರಾಮಕೃಷ್ಣರ ಕೊಠಡಿಯ ಕಡೆಗೆ ಬರುತ್ತಿದ್ದಾರೆ. ನನಗೆ ಪರಿಚಿತವಾದ ಧ್ವನಿ. ಆ ವ್ಯಕ್ತಿ ಹತ್ತಿರ ಬಂದ ಮೇಲೆ ನೋಡುತ್ತೇನೆ, ಅವಳು ಗೋಪಾಲನ ತಾಯಿ ! ಅವಳು ಸರಿಯಾಗಿ ಬಟ್ಟೆ ತೊಟ್ಟಿರಲಿಲ್ಲ. ಹುಚ್ಚಿಯಂತೆ ಕಾಣಿಸುತ್ತಿದ್ದಳು. ಅವಳ ಎರಡು ಕಣ್ಣುಗಳೂ ಹಣೆಯ ಮೇಲೆ ಹೋದಂತಿದ್ದವು. ಬಟ್ಟೆಯ ಒಂದು ಭಾಗ ನೆಲವನ್ನು ಸಾರಿಸುತ್ತಿತ್ತು. ಅವಳಿಗೆ ಯಾವುದರ ಪರಿವೆಯೂ ಇರಲಿಲ್ಲ. ಅವಳು ಪೂರ್ವಭಾಗದ ಬಾಗಿಲಿನ ಮೂಲಕ ಶ್ರೀರಾಮಕೃಷ್ಣರ ಕೊಠಡಿಯನ್ನು ಪ್ರವೇಶಿಸಿದಳು. ಅವರು ಆಗ ಸಣ್ಣ ಮಂಚದ ಮೇಲೆ ಕುಳಿತಿದ್ದರು.

"ಗೋಪಾಲನ ತಾಯಿಯ ಆ ಸ್ಥಿತಿಯನ್ನು ನೋಡಿ ನಾನು ಅವಾಕ್ಕಾದೆ. ಶ್ರೀರಾಮಕೃಷ್ಣರು ಅದೇ ಸಮಯದಲ್ಲಿ ಅವಳನ್ನು ನೋಡಿ ಭಾವವಶರಾದರು. ಈ ಸಮಯದಲ್ಲಿ ಗೋಪಾಲನ ತಾಯಿಯು ಬಂದು ಶ್ರೀರಾಮಕೃಷ್ಣರ ಪಕ್ಕದಲ್ಲಿ ಕುಳಿತಳು. ಶ್ರೀರಾಮಕೃಷ್ಣರೂ ಮಗುವಿನಂತೆ ಅವಳ ತೊಡೆಯ ಮೇಲೆ ಕುಳಿತರು. ಗೋಪಾಲನ

ತಾಯಿಯ ಎರಡೂ ಕಣ್ಣುಗಳಿಂದ ನೀರು ದಳದಳ ಹರಿಯುತ್ತಿದೆ. ಅವಳು ತಂದಿದ್ದ ಕೆನೆ ಹಾಲು ಮತ್ತು ಬೆಣ್ಣೆಯನ್ನು ಶ್ರೀರಾಮಕೃಷ್ಣರ ಬಾಯಿಗೆ ಇಟ್ಟಳು. ನಾನು ಇದನ್ನೆಲ್ಲ ನೋಡಿ ಮೂಕವಿಸ್ಮಿತಳಾದೆ. ಹಿಂದೆ ಎಂದೂ ಶ್ರೀರಾಮಕೃಷ್ಣರು ಭಾವದಲ್ಲಿ ಸ್ತ್ರೀಯರನ್ನು ಸ್ಪರ್ಶಿಸಿದುದನ್ನು ನೋಡಿಯೇ ಇರಲಿಲ್ಲ. ಅವರ ಗುರು ಭೈರವಿ ಬ್ರಾಹ್ಮಣಿ ಕೆಲವೊಮ್ಮೆ ಯಶೋದಾ ಭಾವದಲ್ಲಿದ್ದಾಗ ಶ್ರೀರಾಮಕೃಷ್ಣರು ಗೋಪಾಲ ಭಾವದಲ್ಲಿ ಅವಳ ತೊಡೆಯ ಮೇಲೆ ಕುಳಿತುಕೊಳ್ಳುತ್ತಿದ್ದರೆಂದು ಕೇಳಿದ್ದೆ ಅಷ್ಟೇ. ಗೋಪಾಲನ ತಾಯಿಯ ಆ ಸ್ಥಿತಿಯನ್ನು ಮತ್ತು ಶ್ರೀರಾಮಕೃಷ್ಣರ ಭಾವವನ್ನು ನೋಡಿ ನನಗೆ ಅತ್ಯಾಶ್ಚರ್ಯವಾಯಿತು. ಸ್ವಲ್ಪ ಹೊತ್ತಿನ ನಂತರ ಶ್ರೀರಾಮಕೃಷ್ಣರ ಆ ಭಾವವು ಹೊರಟು ಹೋದ ಮೇಲೆ ಮೊದಲಿನಂತೆ ಮಂಚದ ಮೇಲೆ ಬಂದು ಕುಳಿತರು. ಆದರೆ ಗೋಪಾಲನ ತಾಯಿಯ ಭಾವ ಹ್ರಸ್ವಗೊಳ್ಳಲೇ ಇಲ್ಲ. ಆನಂದಾತಿರೇಕದಲ್ಲಿ ಎದ್ದು ನಿಂತು 'ಬ್ರಹ್ಮ ನರ್ತಿಸುತ್ತಾನೆ ವಿಷ್ಣು ನರ್ತಿಸುತ್ತಾನೆ' ಎಂದು ಹೇಳುತ್ತಾ ಹುಚ್ಚಿಯಂತೆ ಕೊಠಡಿಯಲ್ಲೆಲ್ಲಾ ನರ್ತಿಸತೊಡಗಿದಳು. ಶ್ರೀರಾಮಕೃಷ್ಣರು ಅದನ್ನು ನೋಡಿ ನಕ್ಕು ನನಗೆ ಹೇಳಿದರು : 'ನೋಡು, ನೋಡು ಎಷ್ಟೊಂದು ಆನಂದಪರವಶಳಾಗಿದ್ದಾಳೆ. ಈಗ ಅವಳ ಮನಸ್ಸು ಗೋಪಾಲನ ಲೋಕಕ್ಕೆ ಹೊರಟುಹೋಗಿದೆ.' ವಾಸ್ತವಿಕವಾಗಿಯೂ ಗೋಪಾಲನ ತಾಯಿಗೆ ಭಾವದಲ್ಲಿರುವಾಗ ಅದೇ ರೀತಿಯ ದರ್ಶನವಾಗುತ್ತಿತ್ತು. ಆಗ ಅವಳು ಬೇರೆಯೇ ವ್ಯಕ್ತಿಯಾಗಿ ಬಿಡುತ್ತಿದ್ದಳು. ಇನ್ನೊಂದು ದಿನ ಅವಳು ಭಾವಾವಿಷ್ಟಳಾಗಿ ನಮ್ಮೆಲ್ಲರನ್ನೂ ಗೋಪಾಲ ಎಂದು ತಿಳಿದು ತನ್ನ ಕೈಯಿಂದ ನಮಗೆ ಅನ್ನ ತಿನ್ನಿಸತೊಡಗಿದ್ದಳು. ನಾನು ನನ್ನ ಮಗಳನ್ನು ನಮ್ಮ ಘನತೆಗೆ ಸಮಾನವಾದ ಕುಟುಂಬದ ವರನಿಗೆ ಕೊಟ್ಟು ಮದುವೆ ಮಾಡಿರಲಿಲ್ಲ. ಅದಕ್ಕಾಗಿ ನನ್ನ ಮೇಲೆ ಸ್ವಲ್ಪ ಅಸಮಾಧಾನವಿತ್ತು. ಅದಕ್ಕಾಗಿ ಅಂದು ಎಷ್ಟೊಂದು ಪಶ್ಚಾತ್ತಾಪ ವ್ಯಕ್ತಪಡಿಸಿದಳು ! ಅವಳು ಹೇಳಿದಳು : 'ನಿನ್ನಲ್ಲಿ ಇಷ್ಟೊಂದು ಭಕ್ತಿವಿಶ್ವಾಸಗಳಿವೆಯೆಂದು ನನಗೆ ಮೊದಲೇ ಗೊತ್ತಿದ್ದಿದ್ದರೆ–? ಗೋಪಾಲನಿಗೆ ಭಾವದ ಸಮಯದಲ್ಲಿ ಸಾಮಾನ್ಯವಾಗಿ ಯಾರನ್ನೂ ಮುಟ್ಟಲಾಗುವುದಿಲ್ಲ. ಆದರೆ ಇಂದು ಭಾವದಲ್ಲಿ ನಿನ್ನ ಬೆನ್ನ ಮೇಲೆ ಕುಳಿತುಬಿಟ್ಟನು ! ನೀನೇನು ಸಾಮಾನ್ಯಳೇನು ?' "

ಅಂದು ಶ್ರೀರಾಮಕೃಷ್ಣರು ಗೋಪಾಲನ ತಾಯಿಯನ್ನು ನೋಡಿದಾಕ್ಷಣ ಭಾವಾವಸ್ಥೆಯನ್ನು ಪಡೆದು ಮೊದಲು ಆ ಮಹಿಳೆಯ ಬೆನ್ನ ಮೇಲೆ ಕುಳಿತರು ಮತ್ತು ಅನಂತರ ಗೋಪಾಲನ ತಾಯಿಯ ತೊಡೆಯ ಮೇಲೆ ಕುಳಿತರು.

ಗೋಪಾಲನ ತಾಯಿಯು ಅಂದು ಆ ಸ್ಥಿತಿಯಲ್ಲಿ ದಕ್ಷಿಣೇಶ್ವರಕ್ಕೆ ಬಂದು ಭಾವಾವೇಶದಲ್ಲಿ ಕಣ್ಣೀರು ಸುರಿಸುತ್ತಾ ಶ್ರೀರಾಮಕೃಷ್ಣರಿಗೆ ಅನೇಕ ವಿಷಯಗಳನ್ನು ಹೇಳಿದಳು. ಅವಳು ಹೇಳಿದಳು : "ಗೋಪಾಲನು ನನ್ನ ತೊಡೆಯ ಮೇಲೆ ಇದ್ದಾನೆ, ಅಲ್ಲಿ ನಿಮ್ಮ ದೇಹವನ್ನು ಪ್ರವೇಶಿಸುತ್ತಿದ್ದಾನೆ. ಮತ್ತೆ ಹೊರಗೆ ಬರುತ್ತಿದ್ದಾನೆ. ಬಾ ಮಗು, ನಿನ್ನ ಬಡತಾಯಿಯ ತೊಡೆಯ ಮೇಲೆ ಕುಳಿತುಕೊ." ಹೀಗೆ ಅನೇಕ ವಿಷಯಗಳನ್ನು

ಹೇಳಿದಳು. ಚಂಚಲ ಗೋಪಾಲನು ಕೆಲವೊಮ್ಮೆ ಶ್ರೀರಾಮಕೃಷ್ಣರ ದೇಹದಲ್ಲಿ ಕಣ್ಮರೆಯಾಗುವುದನ್ನು, ಮತ್ತೆ ದಿವ್ಯ ಬಾಲಕನ ರೂಪದಲ್ಲಿ ಹೊರಬರುವುದನ್ನು ಅವಳು ಕಂಡಳು. ಅವನ ಚೇಷ್ಟೆಗೆ ಕೊನೆಯೇ ಇರಲಿಲ್ಲ. ಅವಳು ಆ ಭಾವಪ್ರವಾಹದಲ್ಲಿ ಮುಳುಗಿ ಹೋದಳು. ಅವಳು ತನ್ನ ಎಲ್ಲ ನೀತಿ ನಿಯಮಗಳನ್ನೂ ಮರೆತುಬಿಟ್ಟಳು. ಆ ಪ್ರಬಲವಾದ ಭಾವತರಂಗದಲ್ಲಿ ಸಿಕ್ಕಿಕೊಂಡರೆ ಯಾರು ತಾನೆ ಸಂಯಮದಿಂದಿರಬಲ್ಲರು ?"

ಅಂದಿನಿಂದ ಅಘೋರಮಣಿಯು 'ಗೋಪಾಲನತಾಯಿ' ಆದಳು. ಶ್ರೀರಾಮಕೃಷ್ಣರೂ ಆಕೆಯನ್ನು ಅದೇ ಹೆಸರಿನಿಂದ ಕರೆಯತೊಡಗಿದರು. ಶ್ರೀರಾಮಕೃಷ್ಣರು ಗೋಪಾಲನ ತಾಯಿಯ ಆ ಅಪರೂಪ ಅವಸ್ಥೆಯನ್ನು ನೋಡಿ ತುಂಬಾ ಆನಂದಪಟ್ಟರು. ಅವಳನ್ನು ಶಾಂತಗೊಳಿಸಲು ಅವಳ ಎದೆಯ ಮೇಲೆ ಕೈಯಾಡಿಸಿದರು ಮತ್ತು ಕೊಠಡಿಯಲ್ಲಿ ಇದ್ದ ಒಳ್ಳೆಯ ಖಾದ್ಯ ವಸ್ತುಗಳನ್ನು ತಂದು ಅವಳಿಗೆ ತಿನ್ನಿಸಿದರು. ಅದನ್ನು ತಿನ್ನುತ್ತಲೇ ಭಾವಾವಿಷ್ಟಳಾಗಿ ಅವಳು ಹೇಳತೊಡಗಿದಳು, "ಮಗು ಗೋಪಾಲ, ನಿನ್ನ ಬಡತಾಯಿಯು ಈ ಜನ್ಮದಲ್ಲಿ ಕಷ್ಟದಿಂದ ಕಾಲಕಳೆಯಬೇಕಾಯಿತು. ತನ್ನ ಕೈಯಲ್ಲಿ ತಕ್ಕಲಿಯ ಮೂಲಕ ನೂಲು ತೆಗೆದು ಜನಿವಾರ ಮಾಡಿ ಅದರಿಂದ ಜೀವನೋಪಾಯ ಮಾಡಬೇಕಾಯಿತು. ಇದಕ್ಕಾಗಿಯೇ ನೀನು ಇಂದು ಇಷ್ಟೊಂದು ಶುಶ್ರೂಷೆ ಮಾಡುತ್ತಿದ್ದೀಯೆ."

13. ಅಂದು ಇಡೀ ದಿನ ಅವಳನ್ನು ದಕ್ಷಿಣೇಶ್ವರದಲ್ಲಿಯೇ ಇರಿಸಿಕೊಂಡು ಊಟ ಉಪಚಾರಗಳ ಮೂಲಕ ಅವಳನ್ನು ಶಾಂತಗೊಳಿಸಿ ಸಂಜೆಯ ಹೊತ್ತಿಗೆ ಶ್ರೀರಾಮಕೃಷ್ಣರು ಕಾಮಾರಹಾಟಿಗೆ ಕಳುಹಿಸಿಕೊಟ್ಟರು. ಹಿಂತಿರುಗಿ ಹೋಗುವಾಗ ಭಾವದಲ್ಲಿ ಕಂಡ ಬಾಲಕನು ಅವಳ ಮಡಿಲಿನಲ್ಲಿದ್ದನು. ಮನೆಗೆ ಹಿಂದಿರುಗಿದ ಮೇಲೆ ಗೋಪಾಲನ ತಾಯಿಯು ಹಿಂದಿನಂತೆಯೇ ಜಪಕ್ಕೆ ಕುಳಿತಳು. ಆದರೆ ಇನ್ನೆಲ್ಲಿಯ ಜಪ ? ಯಾರಿಗಾಗಿ ಅಷ್ಟೊಂದು ಜಪ ಮಾಡಿದಳೋ ಯಾರನ್ನು ಕುರಿತು ಇಷ್ಟುಕಾಲ ಚಿಂತಿಸಿದಳೋ ಅವನೇ ನಾನಾ ಭಾವಭಂಗಿಯಲ್ಲಿ ಕಣ್ಮುಂದೆ ನಲಿದಾಡುತ್ತಿದ್ದಾನೆ ! ಬ್ರಾಹ್ಮಣಿಯು ಮೇಲೆದ್ದು ಗೋಪಾಲನನ್ನು ಎತ್ತಿಕೊಂಡು ಹೋಗಿ ಮಂಚದಮೇಲೆ ಮಲಗಿಸಿದಳು. ತಾನೂ ಅವನ ಪಕ್ಕದಲ್ಲಿ ಮಲಗಿದಳು. ಬ್ರಾಹ್ಮಣಿಯು ಏನು ಸಿಕ್ಕಿದರೆ ಅದನ್ನು ಹಾಸಿಕೊಂಡು ಮಲಗುತ್ತಿದ್ದಳು, ಒಂದು ತಲೆದಿಂಬೂ ಕೂಡ ಇರಲಿಲ್ಲ. ಮಲಗಿದ ಮೇಲೂ ಅವಳಿಗೆ ಶಾಂತಿ ಇಲ್ಲ. ಏಕೆಂದರೆ ಗೋಪಾಲನು ಗೊಣಗುತ್ತಿದ್ದಾನೆ. ಗೋಪಾಲನ ತಲೆಯನ್ನು ಎಡ ತೋಳಿನ ಮೇಲೆ ಇರಿಸಿ ಅವನನ್ನು ತಬ್ಬಿಕೊಂಡು ಅವನನ್ನು ಸಮಾಧಾನ ಮಾಡಿದಳು: "ಮಗು, ಇಂದು ಹೀಗೆಯೇ ನಿದ್ದೆ ಮಾಡು. ಬೆಳಗಾದ ಕೂಡಲೇ ನಾನು ಕಲಕತ್ತೆಗೆ ಹೋಗಿ ಒಂದು ಒಳ್ಳೆಯ ತಲೆದಿಂಬು ಮಾಡಿಕೊಡಲು ಭೂತಾ (ಗೋವಿಂದನ ಪತ್ನಿಯ ಹಿರಿಯ ಮಗಳು)ಳಿಗೆ ಹೇಳುತ್ತೇನೆ."

ನಾವು ಮೊದಲೇ ತಿಳಿಸಿರುವಂತೆ ಗೋಪಾಲನ ತಾಯಿಯು ತಾನೇ ಅಡುಗೆ ಮಾಡಿ ಅದನ್ನು ಗೋಪಾಲನಿಗೆ ಮಾನಸಿಕವಾಗಿ ನಿವೇದಿಸಿ ಪ್ರಸಾದವನ್ನು ಸ್ವೀಕರಿಸುತ್ತಿದ್ದಳು.

ಮರುದಿನ ಅವಳು ಅಡುಗೆ ಮಾಡುವುದಕ್ಕಾಗಿ ಕಟ್ಟಿಗೆ ತೆಗೆದುಕೊಂಡು ಬರಲು ತೋಟಕ್ಕೆ ಹೋದಳು. ಗೋಪಾಲನೂ ಅವಳನ್ನು ಹಿಂಬಾಲಿಸಿದ. ಸಣ್ಣ ಸಣ್ಣ ಕಟ್ಟಿಗೆಗಳನ್ನು ಸಂಗ್ರಹಿಸಿ ಅದನ್ನು ಅಡುಗೆ ಮನೆಯಲ್ಲಿ ರಾಶಿ ಹಾಕಿದ. ಈಗ ಇಬ್ಬರೂ ಸೇರಿ ಅಡುಗೆ ಪ್ರಾರಂಭಿಸಿದರು. ಅಡುಗೆಯ ಸಮಯದಲ್ಲೂ ತುಂಟ ಗೋಪಾಲನು ಎಲ್ಲವನ್ನೂ ಮಿಕಿಮಿಕಿ ನೋಡುತ್ತಿದ್ದ. ಕೆಲವೊಮ್ಮೆ ಅವಳ ಹತ್ತಿರ ಕುಳಿತುಕೊಳ್ಳುತ್ತಿದ್ದ ಮತ್ತೆ ಕೆಲವೊಮ್ಮೆ ಅವಳ ಬೆನ್ನಿನ ಮೇಲೆ ಸವಾರಿ ಮಾಡುತ್ತಿದ್ದ. ಏನೇನೋ ಮಾತನಾಡುತ್ತಿದ್ದ ಮತ್ತು ಅದು ಬೇಕು ಇದು ಬೇಕು ಎಂದು ಪೀಡಿಸುತ್ತಿದ್ದ. ಬ್ರಾಹ್ಮಣಿಯು ಕೆಲವೊಮ್ಮೆ ಮೃದು ನುಡಿಗಳಿಂದ ಅವನನ್ನು ಸಮಾಧಾನ ಪಡಿಸುತ್ತಿದ್ದಳು. ಮತ್ತೆ ಕೆಲವೊಮ್ಮೆ ಬಯ್ಯುತ್ತಿದ್ದಳು.

14. ಮೇಲೆ ಹೇಳಿದ ಘಟನೆಯಾದ ಕೆಲವು ದಿನಗಳ ನಂತರ ಗೋಪಾಲನ ತಾಯಿಯು ದಕ್ಷಿಣೇಶ್ವರಕ್ಕೆ ಬಂದಳು. ಶ್ರೀರಾಮಕೃಷ್ಣರನ್ನು ನೋಡಿ ಅನಂತರ ಶ್ರೀಮಾತೆಯವರು ವಾಸಿಸುತ್ತಿದ್ದ ನಹಬತ್ತಿಗೆ ಹೋಗಿ ಅಲ್ಲಿ ಜಪಕ್ಕೆ ಕುಳಿತಳು. ದೈನಂದಿನ ಜಪಸಂಖ್ಯೆ ಮುಗಿದಮೇಲೆ ಅವಳು ನಮಸ್ಕರಿಸಿ ಮೇಲೇಳುವುದರಲ್ಲಿದ್ದಳು. ಅಷ್ಟು ಹೊತ್ತಿನಲ್ಲಿ ಶ್ರೀರಾಮಕೃಷ್ಣರು ಪಂಚವಟಿಯಿಂದ ಅಲ್ಲಿಗೆ ಬಂದರು. ಅವರು ಗೋಪಾಲನ ತಾಯಿಯನ್ನು ನೋಡಿ ಹೇಳಿದರು: "ನೀನೇಕೆ ಅಷ್ಟೊಂದು ಜಪ ಮಾಡುತ್ತೀಯೆ ಈಗ ? ನಿನಗೆ ತುಂಬಾ ದೊರೆತುಬಿಟ್ಟಿದೆ."

ಗೋಪಾಲನ ತಾಯಿ : "ಜಪಮಾಡುವುದು ಬೇಡವೆ ? ನಾನು ಎಲ್ಲ ಸಾಧಿಸಿದ್ದಾಗಿದೆಯೇನು ?"

ಶ್ರೀರಾಮಕೃಷ್ಣರು : "ಹೌದು, ಎಲ್ಲ ಆಗಿದೆ."

ಗೋಪಾಲನ ತಾಯಿ : "ಎಲ್ಲ ಆಗಿದೆಯೇನು ?"

ಶ್ರೀರಾಮಕೃಷ್ಣರು : "ಹ್ಞೂ, ಖಂಡಿತ, ಎಲ್ಲ ಆಗಿದೆ."

ಗೋಪಾಲನ ತಾಯಿ : "ಏನು ಹೇಳುತ್ತೀಯೆ ನೀನು ? ಎಲ್ಲ ಆಗಿಬಿಟ್ಟಿದೆಯೆ?"

ಶ್ರೀರಾಮಕೃಷ್ಣರು : "ಹೌದು, ನೀನು ನಿನಗಾಗಿ ಮಾಡಬೇಕಾದ ಜಪತಪ ಎಲ್ಲಾ ಆಗಿಹೋಗಿದೆ. ಆದರೆ (ತಮ್ಮ ಶರೀರವನ್ನು ತೋರಿಸಿ) ಈ ಶರೀರವು ಸರಿಯಾಗಿರಲಿ ಎಂದು ಇಚ್ಛೆಯಾದರೆ ಅದಕ್ಕಾಗಿ ನೀನು ಮಾಡಬಹುದು."

ಗೋಪಾಲನ ತಾಯಿ : "ಹಾಗಾದರೆ ಇನ್ನು ಮುಂದೆ ನಾನು ಏನು ಮಾಡುತ್ತೇನೋ ಅದು ನಿನಗಾಗಿ, ನಿನಗಾಗಿ, ನಿನಗಾಗಿ."

ಈ ಘಟನೆಯನ್ನು ಪ್ರಸ್ತಾಪಿಸಿ ಗೋಪಾಲನ ತಾಯಿಯು ನಮಗೆ ಹೇಳುತ್ತಿದ್ದಳು: "ಗೋಪಾಲನ ಬಾಯಿಂದ ಅಂದು ಆ ಮಾತನ್ನು ಕೇಳಿ ಜಪದ ಮಾಲೆ, ಅದರ ಚೀಲ ಎಲ್ಲವನ್ನೂ ಗಂಗೆಗೆ ಎಸೆದು ಬಿಟ್ಟೆ. ಆ ನಂತರ ಗೋಪಾಲನ ಒಳಿತಿಗಾಗಿ ನಾನು ಬೆರಳಿನ ಮೂಲಕವೇ ಜಪ ಮಾಡುತ್ತಿದ್ದೆ. ಬಹಳಕಾಲದ ನಂತರ ಮತ್ತೆ ಮಾಲೆಯನ್ನು ಉಪಯೋಗಿಸತೊಡಗಿದೆ. ನನಗನಿಸಿತು ನಾನೇನಾದರೂ ಮಾಡಬೇಡವೆ ? ಇಪ್ಪತ್ತನಾಲ್ಕು

ಘಂಟೆಯೂ ಕುಳಿತು ಏನು ಮಾಡುವುದು ಎಂದು. ಆದ್ದರಿಂದ ನಾನು ಗೋಪಾಲನ ಒಳಿತಿಗಾಗಿ ಜಪ ಮಾಡುತ್ತೇನೆ.

**15.** ಅಂದಿನಿಂದ ಗೋಪಾಲನ ತಾಯಿಯ ಜಪತಪಾದಿಗಳು ಕೊನೆಗೊಂಡವು. ದಕ್ಷಿಣೇಶ್ವರಕ್ಕೆ ಶ್ರೀರಾಮಕೃಷ್ಣರನ್ನು ನೋಡಲು ಬಂದು ಹೋಗುವುದು ಅಧಿಕವಾಯಿತು. ಈ ಹಿಂದೆ ಆಹಾರಾದಿ ವಿಷಯಗಳಲ್ಲಿ ಇದ್ದ ಆಚಾರನಿಷ್ಠೆಯು ಈ ಭಾವದ ಪ್ರವಾಹದಲ್ಲಿ ಎಲ್ಲಿಯೋ ಕೊಚ್ಚಿಕೊಂಡು ಹೋಯಿತು. ಗೋಪಾಲನು ಅವಳ ಮನ ಹೃದಯಗಳನ್ನು ಆಕ್ರಮಿಸಿಕೊಂಡು ಅವಳಿಗೆ ಎಷ್ಟೊಂದು ಬಗೆಯಲ್ಲಿ ಶಿಕ್ಷಣ ನೀಡುತ್ತಿದ್ದನು ಎಂಬುದಕ್ಕೆ ಮಿತಿಯೇ ಇಲ್ಲ. ಈ ಆಚಾರನಿಷ್ಠೆಯನ್ನು ಉಳಿಸಿಕೊಳ್ಳುವುದಾದರೂ ಹೇಗೆ ? ಗೋಪಾಲನು ಯಾವಾಗೆಂದರೆ ಆವಾಗ ತಿನ್ನಲು ಕೇಳುತ್ತಿದ್ದ. ಮತ್ತೆ ತಾನು ತಿನ್ನುತ್ತ ತಾಯಿಯ ಬಾಯಿಗೂ ಹಾಕಿ ಬಿಡುತ್ತಿದ್ದ. ಅದನ್ನು ತುಪ್ಪುವುದಕ್ಕಾಗುತ್ತದೆಯೆ ? ಅದನ್ನು ತುಪ್ಪಿದರೆ ಅವನು ಅಳುತ್ತಾನೆ. ಈ ಅಪೂರ್ವ ಭಾವಾವಸ್ಥೆಯು ಶ್ರೀರಾಮಕೃಷ್ಣರ ಆಟವೆಂದು ಅವಳಿಗೆ ತಿಳಿದಿತ್ತು. ಶ್ರೀರಾಮಕೃಷ್ಣರೇ ತನ್ನ 'ನವೀನ ನೀರದ ಶ್ಯಾಮ ನೀಲೇಂದೀವರಲೋಚನ'ನಾದ ಗೋಪಾಲರೂಪಿ ಶ್ರೀಕೃಷ್ಣ ಎಂದು ಅವಳಿಗೆ ಗೊತ್ತಿತ್ತು. ಆದ್ದರಿಂದ ಅವರಿಗೆ ಅಡುಗೆ ಮಾಡಿ ಉಣಿಸಿ ಆ ಪ್ರಸಾದವನ್ನು ತಿನ್ನುವುದರಲ್ಲಿ ಅವಳಿಗೆ ಯಾವ ಸಂಕೋಚವೂ ಇರಲಿಲ್ಲ.

**16.** ಈ ರೀತಿ ಕಾಮಾರಹಾಟಿ ಬ್ರಾಹ್ಮಣಿಯು ನಿರಂತರವಾಗಿ ಎರಡು ತಿಂಗಳು ಗೋಪಾಲರೂಪಿ ಶ್ರೀಕೃಷ್ಣನನ್ನು ಎತ್ತಿ ಆಡಿಸಿದಳು. ಅವನೊಡನೆ ವಾಸಿಸಿದಳು. ಈ ರೀತಿ ದೀರ್ಘಕಾಲ ಭಾವರಾಜ್ಯದಲ್ಲಿರುವುದು ಅತ್ಯಂತ ಭಾಗ್ಯಶಾಲಿಗಳಿಗೆ ಮಾತ್ರ ಸಾಧ್ಯ. ಈ ವಾತ್ಸಲ್ಯ ಭಾವವೇ ಜಗತ್ತಿನಲ್ಲಿ ಅತ್ಯಂತ ಅಪರೂಪ. ಎಲ್ಲಿಯವರೆಗೆ ಭಗವಂತನ ಐಶ್ವರ್ಯ ಜ್ಞಾನ ಇರುತ್ತದೆಯೋ ಅಲ್ಲಿಯವರೆಗೆ ಈ ಪ್ರೀತಿಯು ಉದಯಿಸುವುದಿಲ್ಲ. ಹಾಗಿರುವಾಗ ಆ ಪ್ರೀತಿಯ ಸಹಾಯದಿಂದ ಭಗವದ್ದರ್ಶನವನ್ನು ಪಡೆಯುವುದಂತೂ ಮತ್ತಷ್ಟು ದುರ್ಲಭ. ಆ ಪ್ರೀತಿಯು ಅಪಾರ ನಿಷ್ಠೆಯ ಸಹಾಯದಿಂದ ಘನೀಭೂತವಾಗಿ ಭಗವದ್ದರ್ಶನವನ್ನು ಉಂಟುಮಾಡಿಕೊಡುತ್ತದೆ. ಒಂದು ಮಾತಿದೆ, 'ಕಲಿಯುಗದಲ್ಲಿ ಗೋಪಾಲನು ಜಾಗ್ರತನು. ಕಲಿಯುಗದಲ್ಲಿ ಕಾಳಿಯು ಜಾಗ್ರತಳು' ಎಂದು. ಆದ್ದರಿಂದಲೇ ಭಗವಂತನ ಈ ಎರಡು ರೂಪಗಳ ಅಪೂರ್ವ ದರ್ಶನವನ್ನು ಈಗಲೂ ಆಗಾಗ ಕಾಣಬಹುದು.

ಶ್ರೀರಾಮಕೃಷ್ಣರು ಗೋಪಾಲನ ತಾಯಿಗೆ ಹೇಳಿದ್ದರು : "ನೀನು ಬಹಳ ಪಡೆದಿದ್ದೀಯೆ. ಕಲಿಯುಗದಲ್ಲಿ ಇಂಥ ಸ್ಥಿತಿಯು ಬಹಳ ಕಾಲ ಉಳಿದರೆ ದೇಹವು ಉಳಿಯುವುದಿಲ್ಲ." ಭಾವ ಪರಿಶುದ್ಧವಾದ ಅವಳ ದೇಹವು ಜಗತ್ತಿನ ಒಳಿತಿಗಾಗಿ ಉಳಿಯಬೇಕೆಂದು ಶ್ರೀರಾಮಕೃಷ್ಣರ ಇಚ್ಛೆಯಾಗಿದ್ದಿರಬಹುದು. ಎರಡು ತಿಂಗಳ ನಂತರ ಗೋಪಾಲನ ತಾಯಿಯ ಅನುಭವಗಳು ಅಪರೂಪವಾಗತೊಡಗಿದುವು. ಆದರೆ ಅವಳು ಶಾಂತವಾಗಿ ಕುಳಿತು ಗೋಪಾಲನನ್ನು ಧ್ಯಾನಿಸಿದಾಗಲೆಲ್ಲಾ ಅವಳಿಗೆ ಆ ದರ್ಶನವಾಗುತ್ತಿತ್ತು.

## ಏಳನೆಯ ಅಧ್ಯಾಯ

# ಭಕ್ತಸಂಗದಲ್ಲಿ ಶ್ರೀರಾಮಕೃಷ್ಣರು

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥

(ಭಗವದ್ಗೀತೆ ೯,೨೨.)

ಅನನ್ಯರಾಗಿ ನನ್ನನ್ನು ಧ್ಯಾನಿಸುತ್ತಿರುವ ಯಾವ ಜನರು ಉಪಾಸನೆ ಮಾಡುತ್ತಾರೆಯೊ ಅಂತಹ ನಿತ್ಯಯುಕ್ತರಾದ ಭಕ್ತರ ಯೋಗಕ್ಷೇಮವನ್ನು ನಾನು ವಹಿಸಿಕೊಳ್ಳುತ್ತೇನೆ.

1. ಬಲರಾಮನ ಮನೆಯಲ್ಲಿ ರಥದ ಪುನರ್ಯಾತ್ರೆಯ ಉತ್ಸವ 2. ಶ್ರೀರಾಮಕೃಷ್ಣರಿಗೆ ಚೈತನ್ಯನ ಸಂಕೀರ್ತನೆಯ ದರ್ಶನ 3. ವಿವಿಧೆಡೆಗಳಲ್ಲಿ ಬಲರಾಮನ ಭಗವತ್ಸೇವೆ. ಅವನ ಮನೆಯ ಆಹಾರ ಶುದ್ಧ 4. ಶ್ರೀರಾಮಕೃಷ್ಣರ ನಾಲ್ವರು ರಸದ್ದಾರರು. ಬಲರಾಮನಿಗೆ ಶ್ರೀರಾಮಕೃಷ್ಣರ ಸೇವಾಲಾಭ 5. ಶ್ರೀರಾಮಕೃಷ್ಣರು 'ನಾನು' 'ನನ್ನದು' ಎನ್ನದೆ 'ಇಲ್ಲಿ' 'ಇಲ್ಲಿಯ' ಎನ್ನುತ್ತಿದ್ದರು 6. ಯಾರು ಎಷ್ಟು ಕಾಲ ಶ್ರೀರಾಮಕೃಷ್ಣರ ಸೇವೆ ಮಾಡಿದರು ? 7· ಬಲರಾಮನ ಕುಟುಂಬದವರೆಲ್ಲ ಒಂದೇ ಮನೋಭಾವದವರಾಗಿದ್ದರು 8. ಬಲರಾಮನ ಮನೆಯ ರಥೋತ್ಸವವು ಆಡಂಬರವಿಲ್ಲದ ಭಕ್ತಿಭಾವದಿಂದ ಕೂಡಿತ್ತು 9. ಸ್ತ್ರೀ ಭಕ್ತರೊಡನೆ ಶ್ರೀರಾಮಕೃಷ್ಣರ ಅದ್ಭುತ ಸಂಬಂಧ 10. ಸ್ತ್ರೀ ಭಕ್ತರಿಗೆ ಗೋಪಾಲನ ತಾಯಿಯು ದರ್ಶನವನ್ನು ವಿವರಿಸುತ್ತಾರೆ 11. ಮಧ್ಯಾಹ್ನ ಶ್ರೀರಾಮಕೃಷ್ಣರಿಗೆ ಗೋಪಾಲಭಾವ ವುಂಟಾಗುತ್ತದೆ. ಗೋಪಾಲನ ತಾಯಿಯು ಆಗಮನ 12. ಭಾವಾವಸ್ಥೆಯಲ್ಲಿ ಅವರು ಮಾಡಿದುದೆಲ್ಲ ಸುಂದರವಾಗಿತ್ತು 13. ಉತ್ಸವದ ನಂತರ ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹಿಂತಿರುಗಿದರು 14. ಗೋಪಾಲನ ತಾಯಿಯು ಗಂಟನ್ನು ನೋಡಿ ಶ್ರೀರಾಮಕೃಷ್ಣರು ಕುಪಿತರಾದುದು. ಭಕ್ತರ ಮೇಲೆ ಎಷ್ಟು ಪ್ರೀತಿಯೋ ಅಷ್ಟೇ ಶಿಸ್ತನ್ನು ವಿಧಿಸುತ್ತಿದ್ದರು 15. ಶ್ರೀರಾಮಕೃಷ್ಣರ ಕೋಪದಿಂದ ಗೋಪಾಲನ ತಾಯಿಗಾದ ದುಃಖ 16. ಶ್ರೀರಾಮಕೃಷ್ಣರೇ ತನ್ನ ಇಷ್ಟದೇವತೆ ಎಂಬ ದೃಢ ವಿಶ್ವಾಸದ ನಂತರ ಅವಳ ದರ್ಶನದ ಸ್ವರೂಪ 17. ಉದ್ದೇಶ ಪೂರಿತ ಕಾಣಿಕೆಗಳನ್ನು ಶ್ರೀರಾಮಕೃಷ್ಣರು ಸ್ವೀಕರಿಸುತ್ತಿರಲಿಲ್ಲ , ಭಕ್ತರಿಗೂ ಕೊಡುತ್ತಿರಲಿಲ್ಲ 18. ಮಾರ್ವಾಡಿಗಳು ಕೊಟ್ಟ ಸಿಹಿ ತಿಂಡಿಯನ್ನು ಗೋಪಾಲನ ತಾಯಿಗೆ ಕೊಡುತ್ತಿದ್ದರು 19. ತನ್ನ ದರ್ಶನಗಳ ಬಗ್ಗೆ ಇತರರಿಗೆ ಹೇಳಬಾರದು 20. ಶ್ರೀರಾಮಕೃಷ್ಣರು ಗೋಪಾಲನ ತಾಯಿಯನ್ನು ಸ್ವಾಮಿ ವಿವೇಕಾನಂದರಿಗೆ ಪರಿಚಯಿಸಿದರು 21. ಶ್ರೀರಾಮಕೃಷ್ಣರು ಕಾಮಾರಹಾಟಿಗೆ ಹೋದುದು ಮತ್ತು ಅಲ್ಲಿ ಭೂತದರ್ಶನ 22. ಕಾಶೀಪುರದಲ್ಲಿ ಶ್ರೀರಾಮಕೃಷ್ಣರು 23. ಕಾಶೀಪುರದಲ್ಲಿ ಗೋಪಾಲನ ತಾಯಿಗೆ ಕ್ಷೀರ

ವನ್ನು ಉಣಿಸಿದುದು 24. ಗೋಪಾಲನ ತಾಯಿ ದೇವರನ್ನು ಜಗದ್ರೂಪದಲ್ಲಿ ಕಂಡುದು 25. ಬಾರಾನಗರ ಮಠದಲ್ಲಿ ಗೋಪಾಲನ ತಾಯಿ 26. ಪಾಶ್ಚಾತ್ಯ ಮಹಿಳೆಯರೊಡನೆ ಗೋಪಾಲನ ತಾಯಿ 27. ಸೋದರಿ ನಿವೇದಿತಾಳ ಮನೆಯಲ್ಲಿ ಗೋಪಾಲನ ತಾಯಿ 28. ಗೋಪಾಲನ ತಾಯಿಯ ಕಥೆಯ ಸಮಾಪ್ತಿ

1. ಕಾಮಾರಹಾಟಿ ಬ್ರಾಹ್ಮಣಿಯು ಭಗವಂತನನ್ನು ಗೋಪಾಲನ ರೂಪದಲ್ಲಿ ದರ್ಶನ ಪಡೆದ ಮೇಲೆ ಕೆಲಕಾಲದ ನಂತರ ಶ್ರೀರಾಮಕೃಷ್ಣರು ರಥಯಾತ್ರೆಯ ಪ್ರಯುಕ್ತ ಕಲಕತ್ತೆಗೆ ಹೋದರು. ಬಲರಾಮ ಬೋಸನ ಮನೆಯಲ್ಲಿ ಭಕ್ತರ ತಂಡ ನೆರೆದಿದೆ. ಬಲರಾಮನು ಆನಂದದಿಂದ ಎಲ್ಲರನ್ನೂ ಉಪಚಾರ ಮಾಡುತ್ತಿದ್ದಾನೆ. ಅವನು ಪುರಾತನ ಭಕ್ತವಂಶಕ್ಕೆ ಸೇರಿದವನು. ಅವನ ವಂಶದವರು ಅನೇಕ ತಲೆಮಾರುಗಳಿಂದಲೂ ಭಗವದ್ಭಕ್ತರಾಗಿದ್ದರು. ಅವನ ಕುಟುಂಬದ ಮೇಲೆ ಶ್ರೀರಾಮಕೃಷ್ಣರ ಅನುಗ್ರಹವು ಅಪಾರವಾದುದು.

2. ಒಮ್ಮೆ ಶ್ರೀರಾಮಕೃಷ್ಣರಿಗೆ ಶ್ರೀಚೈತನ್ಯನು ಬೀದಿಯಲ್ಲಿ ಸಂಕೀರ್ತನೆ ಮಾಡಿಕೊಂಡು ಹೋಗುವುದನ್ನು ನೋಡಬೇಕೆಂದು ಆಸೆಯಾಗಿತ್ತು. ಅವರಿಗೆ ಆ ಅದ್ಭುತ ದರ್ಶನವೂ ಆಗಿತ್ತು. ಅದೊಂದು ದೊಡ್ಡ ಭಕ್ತರ ತಂಡ. ಎಲ್ಲರೂ ಭಕ್ತಿಯಿಂದ ಉನ್ಮತ್ತರಾಗಿದ್ದರು. ಮಧ್ಯದಲ್ಲಿ ಚೈತನ್ಯನು ಭಗವದಾವೇಶದಲ್ಲಿ ಮೈ ಮರೆತಿದ್ದನು. ಎಲ್ಲರೂ ಅವನಿಂದ ಆಕರ್ಷಿತರಾಗಿ ಅವನ ಸುತ್ತ ನರ್ತಿಸುತ್ತಿದ್ದರು. ಒಂದು ದೊಡ್ಡ ಭಕ್ತಿಯ ತರಂಗವೇ ಎದ್ದಿತ್ತು. ಆ ಅಪಾರ ಜನಜಂಗುಳಿಯ ಮೆರವಣಿಗೆ ಶ್ರೀರಾಮಕೃಷ್ಣರ ಕೊಠಡಿಯ ಮುಂದೆಯೇ ಹಾದು ಹೋಯಿತು. ಶ್ರೀರಾಮಕೃಷ್ಣರು ಹೇಳುತ್ತಾರೆ, ಆ ಮೆರವಣಿಗೆಯಲ್ಲಿ ಬಲರಾಮನ ಮುಖವನ್ನು ಕಂಡೆ ಎಂದು. ಅವನ ಮುಖ ಪ್ರಶಾಂತತೆಯಿಂದ ಬೆಳಗುತ್ತಿತ್ತು. ಅವರು ಕಂಡ ಅನೇಕ ಮುಖಗಳಲ್ಲಿ ಅದೊಂದು ಅವರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿತ್ತು. ಬಲರಾಮನು ಮೊದಲ ಬಾರಿಗೆ ದಕ್ಷಿಣೇಶ್ವರಕ್ಕೆ ಬಂದು ಶ್ರೀರಾಮಕೃಷ್ಣರನ್ನು ನೋಡಿದಾಗ ಶ್ರೀರಾಮಕೃಷ್ಣರು ಕೂಡಲೇ ಇವನನ್ನೇ ನಾನು ಆ ಮೆರವಣಿಗೆಯಲ್ಲಿ ಕಂಡದ್ದು ಎಂದು ಗುರುತಿಸಿದರು.

3. ಬಲರಾಮನಿಗೆ ಒರಿಸ್ಸಾದ ಕೊಠಾರ್ ಎಂಬ ಪ್ರದೇಶದಲ್ಲಿ ಒಂದು ಜಮೀನಿತ್ತು. ಅಲ್ಲಿ ಶ್ಯಾಮ್‌ಚಾಂದ್ (ಕೃಷ್ಣ) ಮೂರ್ತಿಯ ಸೇವೆ ನಡೆಯುತ್ತಿತ್ತು, ಬೃಂದಾವನದಲ್ಲಿಯೂ ಒಂದು ದೇವಸ್ಥಾನ ಕಟ್ಟಿಸಿ ಅಲ್ಲಿ ಶ್ಯಾಮಸುಂದರನ ಪೂಜೆಯನ್ನು ನಡೆಸುತ್ತಿದ್ದನು. ಕಲಕತ್ತೆಯ ತನ್ನ ಮನೆಯಲ್ಲಿಯೂ ಶ್ರೀಜಗನ್ನಾಥನ ವಿಗ್ರಹವನ್ನು ಪ್ರತಿಷ್ಠಾಪಿಸಿ ನಿತ್ಯ ಭಗವತ್ಸೇವೆ ನಡೆಸುತ್ತಿದ್ದನು. ಶ್ರೀರಾಮಕೃಷ್ಣರು ಹೇಳುತ್ತಿದ್ದರು: "ಬಲರಾಮನ ಮನೆಯ ಆಹಾರ ತುಂಬಾ ಪರಿಶುದ್ಧವಾದುದು. ಅನೇಕ ತಲೆಮಾರುಗಳಿಂದಲೂ ಅವರು ಭಗವಂತನನ್ನೂ, ಅತಿಥಿಗಳನ್ನೂ, ಮತ್ತು ಸಾಧುಗಳನ್ನೂ ಸೇವಿಸುತ್ತಿರುವರು. ಅವನ ತಂದೆಯೂ ಎಲ್ಲವನ್ನು ತ್ಯಜಿಸಿ ಈಗ ಬೃಂದಾವನದಲ್ಲಿ ಹರಿನಾಮವನ್ನು ಉಚ್ಚರಿಸುತ್ತಾ ವಾಸಿಸುತ್ತಿರುವನು. ಬಲರಾಮನು ಕೊಟ್ಟ ಆಹಾರವನ್ನು ನಾನು

ಸಂತೋಷದಿಂದ ಸ್ವೀಕರಿಸಬಲ್ಲೆ. ಅದು ಬಾಯೊಳಗೆ ಇಟ್ಟ ಕೂಡಲೇ ತಾನೇ ತಾನಾಗಿ ಒಳಗೆ ಹೋಗಿಬಿಡುತ್ತದೆ." ಎಲ್ಲ ಭಕ್ತರು ಕೊಡುತ್ತಿದ್ದ ಆಹಾರದ ಪೈಕಿ ಶ್ರೀರಾಮ ಕೃಷ್ಣರು ಬಲರಾಮನದನ್ನು ಅತ್ಯಂತ ಸಂತೋಷದಿಂದ ಸ್ವೀಕರಿಸುತ್ತಿದ್ದರು. ಅವರು ಬೆಳಗ್ಗೆ ಕಲ್ಕತ್ತೆಗೆ ಬಂದಾಗಲೆಲ್ಲ ಮಧ್ಯಾಹ್ನದ ಊಟವನ್ನು ಬಲರಾಮನ ಮನೆಯಲ್ಲೇ ಮಾಡುತ್ತಿದ್ದರು. ಬ್ರಾಹ್ಮಣ ಭಕ್ತರನ್ನು ಬಿಟ್ಟು ಉಳಿದ ಯಾರ ಮನೆಯಲ್ಲಾದರೂ ಆಹಾರ ಸ್ವೀಕರಿಸಿದರೋ ಇಲ್ಲವೋ ಎಂಬುದು ಸಂದೇಹ. ಆದರೆ ದೇವರ ಪ್ರಸಾದ ವಾದರೆ ಅದು ಬೇರೆ ವಿಷಯ.

4. ಅಲೌಕಿಕ ಮಹಾಪುರುಷರ ಅತಿ ಸಾಮಾನ್ಯ ಚಟುವಟಿಕೆಯ ಹಿಂದೆಯೂ ಒಂದು ಅಸಾಮಾನ್ಯ ಅರ್ಥವಿರುತ್ತದೆ. ಯಾರು ಶ್ರೀರಾಮಕೃಷ್ಣರೊಡನೆ ಒಂದು ದಿನ ವಾದರೂ ವಾಸಿಸಿರುವರೋ ಅವರಿಗೆ ಮಾತ್ರ ಈ ಮಾತಿನ ಮರ್ಮ ತಿಳಿಯುವಂಥದು. ಬಲರಾಮನ ಮನೆಯಲ್ಲಿ ಅವರು ಆಹಾರ ಸ್ವೀಕರಿಸುತ್ತಿದ್ದುದರ ಹಿಂದೆಯೂ ಒಂದು ಗೂಢಾರ್ಥವಿತ್ತು. ಸಾಧನೆಯ ಸಮಯದಲ್ಲಿ ಶ್ರೀರಾಮಕೃಷ್ಣರು ಒಮ್ಮೆ ಜಗನ್ಮಾತೆ ಯನ್ನು ಪ್ರಾರ್ಥಿಸಿದ್ದರು, "ತಾಯಿ, ನನ್ನನ್ನು ಶುಷ್ಕ ಸಾಧುವನ್ನಾಗಿ ಮಾಡಬೇಡ. ನನಗೆ ಯಾವ ಕೊರತೆಯೂ ಇಲ್ಲದಿರಲಿ" ಎಂದು. ಅವರ ಆವಶ್ಯಕತೆಗಳನ್ನು ಪೂರೈಸುವ ನಾಲ್ಕು ಜನರನ್ನು (ರಸದ್ದಾರ) ಅವರಿಗೆ ಜಗನ್ಮಾತೆಯು ತೋರಿಸಿದ್ದಳು. ಶ್ರೀರಾಮಕೃಷ್ಣರು ಹೇಳುತ್ತಿದ್ದರು: "ಈ ನಾಲ್ಕು ಜನರಲ್ಲಿ ರಾಸಮಣಿಯ ಅಳಿಯ ಮಥುರನು ಮೊದಲನೆ ಯವನು. ಶಂಭುಮಲ್ಲಿಕ ಎರಡನೆಯವನು. ಸಿಮ್ಲಾದ ಸುರೇಂದ್ರನಾಥ ಮಿತ್ರನು ಅರ್ಧ ರಸದ್ದಾರ-ಅಂದರೆ ಅವನು ಅವರ ಪೂರ್ಣಜವಾಬ್ದಾರಿಯನ್ನು ವಹಿಸಿಕೊಂಡಿರಲಿಲ್ಲ. ಮಥುರನಾಥ ಮತ್ತು ಶಂಭುಮಲ್ಲಿಕ ಇವರ ಸೇವೆಯನ್ನು ಕಣ್ಣಿನಿಂದ ನೋಡುವ ಭಾಗ್ಯ ನಮಗಿರಲಿಲ್ಲ. ಕಾರಣ ಅವರು ಕಾಲವಾಗಿ ಅನೇಕ ವರ್ಷಗಳ ನಂತರ ನಾವು ಶ್ರೀರಾಮ ಕೃಷ್ಣರೆಡೆಗೆ ಹೋದುದು. ಆದರೆ ಶ್ರೀರಾಮಕೃಷ್ಣರ ಮೂಲಕ ಆ ಅದ್ಭುತ ವಿಷಯ ವನ್ನು ತಿಳಿದಿರುವೆವು. ಬಲರಾಮನನ್ನು ಒಬ್ಬ ರಸದ್ದಾರನೆಂದು ಶ್ರೀರಾಮಕೃಷ್ಣರು ನಿರ್ದೇಶಿಸಿದುದು ನಮಗೆ ನೆನಪಿಲ್ಲ. ಆದರೆ ಅವನ ಸೇವೆಯನ್ನು ನೋಡಿ ನಮಗೆ ಅದ್ಭುತವೆನಿಸಿತ್ತು. ಅದು ಮಥುರನಾಥನನ್ನು ಬಿಟ್ಟರೆ ಉಳಿದ ರಸದ್ದಾರರ ಸೇವೆಗಿಂತ ಯಾವ ರೀತಿಯಲ್ಲೂ ಕಡಿಮೆ ಇರಲಿಲ್ಲ. ಈ ವಿಷಯವನ್ನು ಇನ್ನೊಂದು ಕಡೆ ಹೇಳಲು ಪ್ರಯತ್ನಿಸುತ್ತೇವೆ. ಇಲ್ಲಿ ಇಷ್ಟು ಹೇಳುತ್ತೇವೆ, ಬಲರಾಮನು ಎಂದಿನಿಂದ ದಕ್ಷಿಣೇಶ್ವರಕ್ಕೆ ಹೋಗಲು ಪ್ರಾರಂಭಿಸಿದನೋ ಅಂದಿನಿಂದ ಶ್ರೀರಾಮಕೃಷ್ಣರ ಅಂತರ್ಧಾನದವರೆಗೂ ಅವರ ಆಹಾರದ ಎಲ್ಲ ವ್ಯವಸ್ಥೆಯನ್ನು ಮಾಡಿದನು. ಅಕ್ಕಿ, ಕಲ್ಲುಸಕ್ಕರೆ, ರವೆ, ಸಾಗು, ಬಾರ್ಲಿ, ಶೇವಿಗೆ, ಫುರಗೆಣಸು, ಇತ್ಯಾದಿಗಳನ್ನು ಅವನು ಒದಗಿಸುತ್ತಿದ್ದ. ಸುರೇಂದ್ರನು ಶ್ರೀರಾಮಕೃಷ್ಣರ ಸೇವೆಗಾಗಿ ಯಾರು ಯಾರು ದಕ್ಷಿಣೇಶ್ವರದಲ್ಲಿ ತಂಗುತ್ತಿದ್ದರೋ ಅವರಿಗೆ ಹಾಸಿಗೆ, ದಿಂಬು, ಹೊದ್ದಿಕೆ, ಮತ್ತು ಆಹಾರ ಪದಾರ್ಥಗಳು ಇವುಗಳ ವ್ಯವಸ್ಥೆ ಮಾಡುತ್ತಿದ್ದ.

ಈ ಎಲ್ಲ ವ್ಯಕ್ತಿಗಳ ಮತ್ತು ಶ್ರೀರಾಮಕೃಷ್ಣರ ನಡುವೆ ಯಾವ ರೀತಿಯ ಗೂಢ ಸಂಬಂಧವಿತ್ತು ಎಂಬುದನ್ನು ಯಾರು ಹೇಳಬಲ್ಲರು ? ಯಾವ ಕಾರಣದಿಂದ ಇವರು ಈ ಉಚ್ಚ ಅಧಿಕಾರವನ್ನು ಪಡೆದರು ಎಂಬುದನ್ನು ಯಾರು ಹೇಳುತ್ತಾರೆ ? ಇವರೆಲ್ಲ ಮಹಾಭಾಗ್ಯವಂತರು–ಜಗನ್ಮಾತೆಯಿಂದ ಆಯ್ಕೆಯಾದವರು ಎಂದಷ್ಟು ಹೇಳಬಹುದು. ಅದಿಲ್ಲದಿದ್ದರೆ ಈ ಲೋಕೋತ್ತರ ಪುರುಷ ಶ್ರೀರಾಮಕೃಷ್ಣರ ದಿವ್ಯ ಲೀಲೆಯಲ್ಲಿ ಅವರು ಈ ರೀತಿ ಸಹಾಯಕರಾಗುವ ಅವಕಾಶವನ್ನು ಪಡೆಯುತ್ತಿರಲಿಲ್ಲ. ಇಲ್ಲದ್ದಿದ್ದರೆ ಅವರನ್ನು ನೋಡಿದಕೂಡಲೇ ಶ್ರೀರಾಮಕೃಷ್ಣರು ಅವರನ್ನು ಗುರುತಿಸುವಷ್ಟರ ಮಟ್ಟಿಗೆ ಅವರ ಮುಖಗಳು ಶ್ರೀರಾಮಕೃಷ್ಣರ ಶುದ್ಧ ಮುಕ್ತಮನಸ್ಸಿನಲ್ಲಿ ಆಳವಾಗಿ ಅಂಕಿತ ವಾಗುತ್ತಿರಲಿಲ್ಲ. ಅವರು ಹೇಳುತ್ತಾರೆ: "ಅವರು ಇಲ್ಲಿಗೆ ಸೇರಿದವರು. ಅವರು ವಿಶೇಷ ವಾಗಿ ಅಧಿಕಾರವನ್ನು ಪಡೆದು ಬಂದಿದ್ದಾರೆ."

5. ಶ್ರೀರಾಮಕೃಷ್ಣರು ಅವರು ನನ್ನವರು ಎಂದು ಹೇಳುವುದರ ಬದಲು ಅವರು 'ಇಲ್ಲಿಗೆ' ಸೇರಿದವರು ಎನ್ನುತ್ತಿದ್ದರು. ಶ್ರೀರಾಮಕೃಷ್ಣರ ಶುದ್ಧಮನಸ್ಸಿನಲ್ಲಿ ಅಹಂ ಪ್ರಜ್ಞೆಗೆ ಜಾಗವೇ ಇರಲಿಲ್ಲ. ಆದ್ದರಿಂದ ನಾನು, ನನ್ನದು ಎಂದು ಹೇಳುವುದು ಅತ್ಯಂತ ಕಷ್ಟವಾಗುತ್ತಿತ್ತು. ಅಥವಾ ಕಷ್ಟವಾಗುವುದೇನು ಬಂತು, ಅವರು ಆ ಶಬ್ದಗಳನ್ನು ಉಪ ಯೋಗಿಸುತ್ತಲೇ ಇರಲಿಲ್ಲ. ಅದನ್ನು ಉಪಯೋಗಿಸಲೇ ಬೇಕಾದ ಸಂದರ್ಭ ಬಂದಾಗ ನಾನು ಜಗನ್ಮಾತೆಯ ಸೇವಕ ಅಥವಾ ಮಗು ಎಂಬರ್ಥದಲ್ಲಿ ಉಪಯೋಗಿಸುತ್ತಿದ್ದರು. ಇದು ಸಾಧ್ಯವಾಗುತ್ತಿದ್ದುದು ಮನಸ್ಸು ಸಂಪೂರ್ಣ ಆ ಭಾವದಲ್ಲಿದ್ದಾಗ. ಆದ್ದರಿಂದ ಅವರು ನನ್ನದು ಎಂದು ಹೇಳಬೇಕಾದ ಸಂದರ್ಭಗಳಲ್ಲೆಲ್ಲಾ ತಮ್ಮ ದೇಹದ ಕಡೆಗೆ ಬೊಟ್ಟು ಮಾಡಿ 'ಇಲ್ಲಿಯ' ಎಂದು ಹೇಳುತ್ತಿದ್ದರು. ಭಕ್ತರಿಗೂ ಕೂಡ ಅವರು ಏನು ಹೇಳುತ್ತಿರುವರು ಎಂಬುದು ಅರ್ಥವಾಗುತ್ತಿತ್ತು. ಉದಾಹರಣೆಗೆ ಯಾವನೋ ಒಬ್ಬ ವ್ಯಕ್ತಿಯು 'ಇಲ್ಲಿಗೆ ಸೇರಿದವನಲ್ಲ', ಅದು 'ಇಲ್ಲಿಯ ಭಾವನೆಯಲ್ಲ' ಎಂದು ಮುಂತಾಗಿ ಅವರು ಹೇಳಿದಾಗ ಅವನು ಅಥವಾ ಅವಳು ತಮಗೆ ಸೇರಿದವರಲ್ಲ, ತಮ್ಮ ಭಾವನೆ ಯಲ್ಲ ಎಂದು ನಾವು ಅರ್ಥ ಮಾಡಿಕೊಳ್ಳುತ್ತಿದ್ದೆವು.

6. ಆ ವಿಷಯ ಸಾಕು. ಈಗ ರಸದ್ದಾರರ ವಿಷಯಕ್ಕೆ ಬರೋಣ. ಶ್ರೀರಾಮ ಕೃಷ್ಣರು ಕಲ್ಕತ್ತೆಗೆ ಬಂದಂದಿನಿಂದ ಸಾಧನಾವಸ್ಥೆಯು ಮುಗಿದು ಸ್ವಲ್ಪಕಾಲದವರೆಗೆ ಅಂದರೆ ಹದಿನಾಲ್ಕು ವರ್ಷ ಮಥುರನು ಅವರ ಸೇವೆ ಮಾಡಿದನು. ಎರಡನೆಯ ರಸದ್ದಾರ ಶಂಭುಮಲ್ಲಿಕನು ಮಥುರನು ತೀರಿಕೊಂಡ ನಂತರ ಕೇಶವ ಮತ್ತು ಇತರ ಭಕ್ತರು ಶ್ರೀರಾಮಕೃಷ್ಣರೆಡೆಗೆ ಬರುವವರೆಗೆ ಅವರ ಸೇವೆಮಾಡಿದನು. ಅರ್ಧ ರಸದ್ದಾರ ನಾದ ಸುರೇಶನು ಅವರ ಮತ್ತು ಸಂನ್ಯಾಸಿ ಭಕ್ತರ ಸೇವೆಯನ್ನು ಮಾಡಿದನು. ಈ ಸೇವೆಯು ಶ್ರೀರಾಮಕೃಷ್ಣರ ಮಹಾಸಮಾಧಿಗೆ ಏಳು ವರ್ಷ ಮುಂಚಿನಿಂದ ಪ್ರಾರಂಭ ವಾಗಿ ಅವರ ಮಹಾಸಮಾಧಿಯ ನಂತರ ನಾಲ್ಕೈದು ವರ್ಷಗಳವರೆಗೂ ಮುಂದುವರಿ ಯಿತು. ಬಾರಾನಗರ್ ಮಠವು ೧೮೮೬ ರಲ್ಲಿ ಒಂದು ಹಳೆಯ ಮುರುಕಲು ಮನೆಯಲ್ಲಿ

ಪ್ರಾರಂಭವಾಯಿತು. ಸುರೇಶನೇ ಇದಕ್ಕೆ ಪ್ರೋತ್ಸಾಹ ಮತ್ತು ಧನಸಹಾಯ ಮಾಡಿದನು. ಈಗ ಒಂದೂವರೆ ರಸ್ತೆದಾರರಾರು ಎಂಬುದನ್ನು ನಿರ್ಣಯಿಸಬೇಕಾಗಿದೆ. ಸ್ವಾಮಿ ವಿವೇಕಾನಂದರ ಭಕ್ತಳಾದ ಅಮೆರಿಕದ ಮಹಿಳೆ ಮಿಸೆಸ್. ಸಾರಾಬುಲ್ ಬೇಲೂರು ಮಠದ ಸ್ಥಾಪನೆಯಲ್ಲಿ ಸ್ವಾಮಿ ವಿವೇಕಾನಂದರಿಗೆ ತುಂಬಾ ಸಹಾಯ ಮಾಡಿರುವಳು. ಬಲರಾಮನ ಬಗ್ಗೆ ನಾವು ಆಗಲೇ ಹೇಳಿಯಾಗಿದೆ. ಇವರಿಬ್ಬರೂ ಸೇರಿ ಒಂದೂವರೆ ಆಗುವರೆ ? ಈ ಪ್ರಶ್ನೆಗೆ ಉತ್ತರಿಸಲು ಶ್ರೀರಾಮಕೃಷ್ಣರು ಮತ್ತು ಸ್ವಾಮಿ ವಿವೇಕಾನಂದರು ನಮ್ಮ ಮುಂದೆ ಸ್ಥೂಲರೂಪದಲ್ಲಿ ಇಲ್ಲ.

* * *

7. ಬಲರಾಮನು ದಕ್ಷಿಣೇಶ್ವರಕ್ಕೆ ಭೇಟಿ ಇತ್ತಂದಿನಿಂದ ಪ್ರತಿವರ್ಷವೂ ಶ್ರೀರಾಮಕೃಷ್ಣರನ್ನು ರಥೋತ್ಸವದ ಸಮಯದಲ್ಲಿ ತನ್ನ ಮನೆಗೆ ಕರೆದುಕೊಂಡು ಹೋಗುತ್ತಿದ್ದನು. ಅವನ ಮನೆ ಅಥವಾ ಅವನ ಅಣ್ಣ ರಾಯ್ ಹರಿವಲ್ಲಭ ಬಸುವಿನ ಮನೆ ಬಾಗ್ ಬಜಾರಿನ ರಮಾಕಾಂತ್ ಬಸು ಬೀದಿಯಲ್ಲಿ ಇತ್ತು. ಬಲರಾಮನು ತನ್ನ ಸಹೋದರನ ಮನೆಯಲ್ಲಿ ವಾಸಿಸುತ್ತಿದ್ದನು. ಹರಿವಲ್ಲಭನು ಕಟಕ್‌ನಲ್ಲಿ ಒಂದು ದೊಡ್ಡ ವಕೀಲನಾಗಿದ್ದನು. ಮನೆಯು ನಂ ೫೭. ಎಷ್ಟು ಬಾರಿ ಶ್ರೀರಾಮಕೃಷ್ಣರು ಆ ಮನೆಗೆ ಹೋಗಿ ಅದನ್ನು ಪವಿತ್ರಗೊಳಿಸಿದ್ದರು ಎಂಬುದನ್ನು ಈಗ ನಿರ್ಧರಿಸಲಾಗುವುದಿಲ್ಲ. ಅಲ್ಲಿ ಅವರನ್ನು ನೋಡುವ ಭಾಗ್ಯವನ್ನು ಎಷ್ಟು ಜನ ಪಡೆದಿದ್ದರು ಎಂಬುದನ್ನು ನಿರ್ಧರಿಸಲು ಯಾರಿಗೆ ಸಾಧ್ಯ ? ಶ್ರೀರಾಮಕೃಷ್ಣರು ದಕ್ಷಿಣೇಶ್ವರ ದೇವಸ್ಥಾನವನ್ನು ತಮಾಷೆಗೆ ಕಾಳೀಮಾತೆಯ ಕೋಟೆ ಎನ್ನುತ್ತಿದ್ದರು. ಈ ಮನೆಯನ್ನು ಅವಳ ಎರಡನೆಯ ಕೋಟೆ ಎಂದು ಕರೆದರೆ ಅತಿಶಯೋಕ್ತಿ ಆಗಲಾರದು. ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಬಲರಾಮನ ಕುಟುಂಬದವರೆಲ್ಲರೂ ಒಂದೇ ಶ್ರುತಿಯವರು ಎಂದು. ಮನೆಯ ಯಜಮಾನ, ಯಜಮಾಂತಿಯರಿಂದ ಹಿಡಿದು ಚಿಕ್ಕ ಮಕ್ಕಳವರೆಗೆ ಎಲ್ಲರೂ ಶ್ರೀರಾಮಕೃಷ್ಣರ ಭಕ್ತರಾಗಿದ್ದರು. ಭಗವಂತನ ನಾಮಜಪ ಮಾಡದೆ ಅವರು ಏನನ್ನೂ, ನೀರನ್ನೂ ಕೂಡ, ಸ್ವೀಕರಿಸುತ್ತಿರಲಿಲ್ಲ. ಪೂಜೆ, ಶಾಸ್ತ್ರಪಠಣ, ಸಾಧುಸೇವೆ, ದಾನ ಧರ್ಮ ಇತ್ಯಾದಿಗಳೆಲ್ಲದರಲ್ಲಿಯೂ ಅವರಿಗೆ ಸಮಾನವಾದ ಆದರವಿತ್ತು. ಸಾಮಾನ್ಯವಾಗಿ ಮನೆಯಲ್ಲಿ ಒಬ್ಬರೋ ಇಬ್ಬರೋ ಧಾರ್ಮಿಕರಾಗಿರುತ್ತಾರೆ, ಉಳಿದವರ ಮನೋಭಾವವೇ ಸಂಪೂರ್ಣ ಬೇರೆಯಾಗಿರುತ್ತದೆ. ಆದರೆ ಈ ಕುಟುಂಬದಲ್ಲಿ ಹಾಗಿರಲಿಲ್ಲ. ಎಲ್ಲರೂ ಒಂದೇ ಸ್ವಭಾವದವರಾಗಿದ್ದರು. ನಿಃಸ್ವಾರ್ಥವಾಗಿ ಧಾರ್ಮಿಕರಾಗಿರುವ ಕುಟುಂಬಗಳು ಈ ಪ್ರಪಂಚದಲ್ಲಿ ವಿರಳ. ಅದರಲ್ಲೂ ಕುಟುಂಬದ ಎಲ್ಲರೂ ಒಂದೇ ಆದರ್ಶವನ್ನು ಇಟ್ಟುಕೊಂಡು ಅದನ್ನು ಮುಟ್ಟಲು ಪರಸ್ಪರ ಸಹಾಯ ಮಾಡುವುದು ಇನ್ನೂ ವಿರಳ. ಈ ಕುಟುಂಬವು ಶ್ರೀರಾಮಕೃಷ್ಣರ ಎರಡನೆಯ ಕೋಟೆಯಾಗಿರುವುದು ಮತ್ತು ಅಲ್ಲಿರಲು ಸಂತೋಷಪಡುವುದು ಆಶ್ಚರ್ಯವೇನಿಲ್ಲ.

8. ಮೊದಲೇ ಹೇಳಿರುವಂತೆ ಈ ಮನೆಯಲ್ಲಿ ಶ್ರೀ ಜಗನ್ನಾಥನ ಪೂಜೆ ನಡೆಯು

ತ್ತಿತ್ತು ಮತ್ತು ರಥಯಾತ್ರೆಯ ಸಮಯದಲ್ಲಿ ರಥವನ್ನು ಎಳೆಯುತ್ತಿದ್ದರು. ಆದರೆ ಎಲ್ಲವೂ ಭಕ್ತಿಯಿಂದಲೇ, ಬಾಹ್ಯ ಆಡಂಬರ ಸ್ವಲ್ಪವೂ ಇರಲಿಲ್ಲ. ಮನೆಯನ್ನು ಅಲಂಕರಿಸುವುದು, ವಾದ್ಯ, ಜನಜಂಗುಳಿ, ಸಂಭ್ರಮದ ಓಡಾಟ ಇತ್ಯಾದಿಗಳಾವುವೂ ಇರಲಿಲ್ಲ. ಒಂದು ಸಣ್ಣ ರಥವಿತ್ತು. ಅದನ್ನು ಹೊರಮನೆಯ ಒಂದನೇ ಮಹಡಿಯ ವರಾಂಡದಲ್ಲಿ ಸುತ್ತ ಎಳೆಯುತ್ತಿದ್ದರು. ಒಂದು ಭಜನಾ ಮಂಡಲಿಯವರು ಬಂದು ಅದರೊಡನೆ ಭಕ್ತಿಗೀತೆಗಳನ್ನು ಹಾಡುತ್ತಿದ್ದರು. ಶ್ರೀರಾಮಕೃಷ್ಣರು ಮತ್ತು ಅವರ ಭಕ್ತರು ಈ ಸಂಕೀರ್ತನೆಯಲ್ಲಿ ಭಾಗವಹಿಸುತ್ತಿದ್ದರು. ಆದರೆ ಆ ಆನಂದ, ಆ ಭಗವದ್ಭಕ್ತಿಯ ಪ್ರಭೆ, ಆ ಭಾವೋನ್ಮತ್ತತೆ, ಶ್ರೀರಾಮಕೃಷ್ಣರ ಆ ಮಧುರ ನೃತ್ಯ ಇವನ್ನು ಬೇರೆಲ್ಲೂ ಕಾಣುವಂತಿರಲಿಲ್ಲ. ಈ ಸಾತ್ತ್ವಿಕ ವ್ಯಕ್ತಿಗಳ ಶುದ್ಧಭಕ್ತಿಗೆ ಮೆಚ್ಚಿ ಸಾಕ್ಷಾತ್ ಜಗನ್ನಾಥನು ರಥದ ವಿಗ್ರಹದಲ್ಲಿಯೂ ಮತ್ತು ಶ್ರೀರಾಮಕೃಷ್ಣರ ಶರೀರದಲ್ಲಿಯೂ ಆವಿರ್ಭೂತನಾಗಿದ್ದನು. ಆ ಅಪೂರ್ವ ದರ್ಶನವನ್ನು ಇನ್ನೆಲ್ಲಿ ಕಾಣಲು ಸಾಧ್ಯ ? ಆ ಪರಿಶುದ್ಧ ಪ್ರೇಮ ಪ್ರವಾಹದಲ್ಲಿ ಬಿದ್ದ ಪಾಷಂಡಿಯ ಹೃದಯವೂ ಕರಗಿ ಹೋಗುವಂತಿತ್ತು. ಇನ್ನು ಭಕ್ತರ ಬಗ್ಗೆ ಹೇಳಬೇಕಾಗಿಯೇ ಇಲ್ಲ. ಹೀಗೆ ಕೆಲವು ಘಂಟೆಗಳ ಭಜನೆಯ ನಂತರ ಜಗನ್ನಾಥನಿಗೆ ನೈವೇದ್ಯ ನಡೆಯುತ್ತಿತ್ತು. ಶ್ರೀರಾಮಕೃಷ್ಣರು ಪ್ರಸಾದ ಸ್ವೀಕರಿಸಿದ ಮೇಲೆ ಇತರ ಭಕ್ತರು ಅದನ್ನು ಸ್ವೀಕರಿಸುತ್ತಿದ್ದರು. ಅನಂತರ ರಾತ್ರಿ ಬಹಳ ಹೊತ್ತಾದ ಮೇಲೆ ಆ ಆನಂದೋತ್ಸವ ಕೊನೆಗೊಳ್ಳುತ್ತಿತ್ತು. ಮೂರು ನಾಲ್ಕು ಜನ ಭಕ್ತರನ್ನು ಬಿಟ್ಟು ಉಳಿದವರು ತಮ್ಮ ತಮ್ಮ ಮನೆಗೆ ಹೋಗುತ್ತಿದ್ದರು. ಲೇಖಕನಿಗೆ ಈ ಆನಂದವನ್ನು ಅನುಭವಿಸುವ ಅವಕಾಶ ಜೀವನದಲ್ಲಿ ಒಮ್ಮೆ ಮಾತ್ರ ಲಭಿಸಿತ್ತು. ಆ ಸಂದರ್ಭದಲ್ಲಿ ಶ್ರೀರಾಮಕೃಷ್ಣರ ಮಾತಿನ ಮೇರೆಗೆ ಗೋಪಾಲನ ತಾಯಿಯನ್ನು ಆ ಮನೆಗೆ ಕರೆಸಿದ್ದರು. ಕ್ರಿ.ಶ. ೧೮೮೫ರ ರಥದ ಪುನರಾಗಮನ ಸಂದರ್ಭವನ್ನು ನಾವಿಲ್ಲಿ ಪ್ರಸ್ತಾಪಿಸುತ್ತಿದ್ದೇವೆ. ಶ್ರೀರಾಮಕೃಷ್ಣರು ಅಂದು ಬಲರಾಮನ ಮನೆಗೆ ಬಂದು ಅಲ್ಲಿ ಎರಡು ದಿನ ಮತ್ತು ಎರಡು ರಾತ್ರಿಗಳನ್ನು ಕಳೆದಿದ್ದರು. ಮೂರನೆಯ ದಿನ ಬೆಳಗ್ಗೆ ಎಂಟು ಗಂಟೆಗೆ ಅವರು ದೋಣಿಯ ಮೂಲಕ ದಕ್ಷಿಣೇಶ್ವರಕ್ಕೆ ಹಿಂದಿರುಗಿದರು.

* * *

9. ಇಂದು ಶ್ರೀರಾಮಕೃಷ್ಣರು ಬೆಳಗ್ಗೆಯೇ ಆ ಮನೆಗೆ ಬಂದರು. ಹೊರಗೆ ಸ್ವಲ್ಪ ಹೊತ್ತು ಕುಳಿತಿದ್ದು ಅನಂತರ ಅವರನ್ನು ಉಪಾಹಾರಕ್ಕಾಗಿ ಒಳಕ್ಕೆ ಕರೆದುಕೊಂಡು ಹೋದರು. ಹೊರಗಡೆ ಅನೇಕ ಪುರುಷ ಭಕ್ತರು ನೆರೆದಿದ್ದರು. ಒಳಗಡೆಯೂ ನೆರೆ ಹೊರೆಯ ಸ್ತ್ರೀ ಭಕ್ತರು ಅನೇಕರು ನೆರೆದಿದ್ದರು. ಇವರಲ್ಲಿ ಅನೇಕರು ಬಲರಾಮನ ಆತ್ಮೀಯರು ಅಥವಾ ಪರಿಚಿತರು. ಶ್ರೀರಾಮಕೃಷ್ಣರು ಅವನ ಮನೆಗೆ ಬಂದಾಗಲೆಲ್ಲ ಇವರಿಗೆಲ್ಲ ಹೇಳಿಕಳುಹಿಸಿ ಕರೆಸುತ್ತಿದ್ದನು. ಮತ್ತೆ ದಕ್ಷಿಣೇಶ್ವರಕ್ಕೆ ಶ್ರೀರಾಮಕೃಷ್ಣರನ್ನು ನೋಡಲು ಹೋಗುವಾಗಲೂ ಇವರನ್ನು ತನ್ನವರೊಡನೆ ಕರೆದುಕೊಂಡು ಹೋಗುತ್ತಿದ್ದನು. ಭಾವಿನಿ, ಅಸೀಮಳ ತಾಯಿ, ಗಣು ತಾಯಿ ಮತ್ತು ಅಜ್ಜಿ, ಇವನ ತಾಯಿ,

ಅವನ ಚಿಕ್ಕಮ್ಮ, ಅವನ ತಾಯಿ, ಇನ್ನೊಬ್ಬನ ಸಹೋದರಿ, ಮಗದೊಬ್ಬನ ನೆರೆ ಹೊರೆಯವಳು—ಹೀಗೆ ಅನೇಕ ಸ್ತ್ರೀ ಭಕ್ತರು ಅಲ್ಲಿ ಬಂದು ನೆರೆದಿದ್ದರು.

ಈ ಎಲ್ಲ ಪವಿತ್ರ ಸಾಧ್ವೀ ಸ್ತ್ರೀ ಭಕ್ತರೊಡನೆ ಕಾಮಲೇಶವೂ ಇಲ್ಲದ ಶ್ರೀರಾಮ ಕೃಷ್ಣರ ಮಧುರ ಸಂಬಂಧವನ್ನು ಅರ್ಥ ಮಾಡಿಕೊಳ್ಳುವುದು ಕಠಿಣ. ಇವರಲ್ಲನೇಕರಿಗೆ ಶ್ರೀರಾಮಕೃಷ್ಣರು ಇಷ್ಟದೇವತೆಯಾಗಿದ್ದರು. ಮತ್ತೆ ಕೆಲವರು ಗೋಪಾಲನ ತಾಯಿ ಯಂತೆ ಅವರ ಪ್ರತ್ಯಕ್ಷ ದರ್ಶನವನ್ನು ಪಡೆದಿದ್ದರು. ಇವರಿಗೆಲ್ಲ ಶ್ರೀರಾಮಕೃಷ್ಣರು ಅತ್ಯಂತ ಆತ್ಮೀಯರು. ಅವರ ಮುಂದೆ ಯಾವ ಭಯ ಸಂಕೋಚವೂ ಇರಲಿಲ್ಲ. ಮನೆ ಯಲ್ಲಿ ಏನಾದರೂ ಒಳ್ಳೆಯ ತಿಂಡಿ ಮಾಡಿದರೆ ಅದನ್ನು ಪತಿಪುತ್ರರಿಗೆ ಕೊಡುವುದಕ್ಕಿಂತ ಮುಂಚೆ, ಮೊದಲು ಶ್ರೀರಾಮಕೃಷ್ಣರಿಗೆ ಕಳಿಸುತ್ತಿದ್ದರು ಅಥವಾ ತಾವೇ ಅದನ್ನು ತೆಗೆದುಕೊಂಡು ಹೋಗುತ್ತಿದ್ದರು. ಶ್ರೀರಾಮಕೃಷ್ಣರು ಇರುವಾಗ ಈ ಸಭ್ಯ ಮಹಿಳೆ ಯರು ದಕ್ಷಿಣೇಶ್ವರಕ್ಕೆ ಎಷ್ಟುಬಾರಿ ನಡೆದುಕೊಂಡು ಹೋಗಿರುವರು ಎಂಬುದನ್ನು ಹೇಳಲಾಗುವುದಿಲ್ಲ. ಕೆಲವು ದಿನ ಸಂಜೆಯ ನಂತರವೂ, ಕೆಲವು ದಿನ ರಾತ್ರಿ ಹತ್ತುಘಂಟೆಯ ಮೇಲೂ, ಮತ್ತು ಕೆಲವುದಿನ ಉತ್ಸವ ಸಂಕೀರ್ತನೆಗಳಿದ್ದರೆ ರಾತ್ರಿ ಎರಡು ಘಂಟೆಯ ಮೇಲೂ ದಕ್ಷಿಣೇಶ್ವರದಿಂದ ಹೊರಟು ಹಿಂದಿರುಗುತ್ತಿದ್ದರು. ಇವರಲ್ಲಿ ಕೆಲವರಿಗೆ ಶ್ರೀರಾಮಕೃಷ್ಣರು ಚಿಕ್ಕ ಮಕ್ಕಳಂತೆ ತಮ್ಮ ಖಾಯಿಲೆಯ ಬಗ್ಗೆ ಹೇಳಿ ಆಗ್ರಹದಿಂದ ಔಷಧಿಯನ್ನು ವಿಚಾರಿಸುತ್ತಿದ್ದರು. ಅವರು ಆ ರೀತಿ ಕೇಳುವುದನ್ನು ನೋಡಿ ಯಾರಾ ದರೂ ನಕ್ಕರೆ ಅವರು ಹೇಳುತ್ತಿದ್ದರು : "ನಿನಗೇನು ಗೊತ್ತು, ಅವಳು ದೊಡ್ಡ ಡಾಕ್ಟ ರರ ಪತ್ನಿ. ಅವಳಿಗೆ ಏನಾದರೂ ಔಷಧಿ ಗೊತ್ತಿರಲೇಬೇಕು." ಅವರಲ್ಲಿ ಯಾರಾದರೂ ಒಬ್ಬರು ತಮ್ಮನ್ನು ಅತ್ಯಂತ ಪ್ರೀತಿಸುವುದನ್ನು ನೋಡಿ ಅವರು ಹೇಳುತ್ತಿದ್ದರು : "ಅವಳು ದೈವಾನುಗ್ರಹದಿಂದ ಸಿದ್ಧಿಯನ್ನು ಪಡೆದ ಗೋಪಿ" ಎಂದು. ಯಾರಾದರೂ ತಯಾರಿಸಿದ ಪದಾರ್ಥದ ರುಚಿ ನೋಡಿ ಅವರು ಹೇಳುತ್ತಿದ್ದರು : 'ಅವಳು ವೈಕುಂಠದ ಅಡುಗೆಯವಳು. 'ಸೂಕ್ತ' ಮಾಡುವುದರಲ್ಲಿ ನಿಸ್ಸೀಮಳು."

10. ಶ್ರೀರಾಮಕೃಷ್ಣರು ತಿಂಡಿಯನ್ನು ತಿನ್ನುತ್ತಾ ಇಂದು ಈ ಎಲ್ಲಾ ಸ್ತ್ರೀಭಕ್ತ ರಿಗೆ ಗೋಪಾಲನ ತಾಯಿಯು ಎಷ್ಟು ಭಾಗ್ಯವಂತಳು ಎಂಬುದನ್ನು ವಿವರಿಸಿ ಹೇಳಿದರು. ಅವರು ಹೇಳಿದರು : "ನೋಡಿ, ಕಾಮಾರಹಾಟಿಯಿಂದ ಬರುತ್ತಾಳಲ್ಲ ಆ ಬ್ರಾಹ್ಮಣಿ ಅವಳದು ಗೋಪಾಲಭಾವ. ಅವಳಿಗೆ ಏನೇನೆಲ್ಲ ದರ್ಶನಗಳಾಗಿವೆ ! ಗೋಪಾಲನು ಅವಳ ಕೈಯಿಂದಲೇ ಉಣ್ಣಲು ಬಯಸುತ್ತಿದ್ದನಂತೆ ! ಎಷ್ಟೋ ದರ್ಶನಗಳನ್ನು ಪಡೆದು ಅವಳು ಭಾವ ಪರವಶಳಾಗಿ ಒಂದು ದಿನ ಇಲ್ಲಿಗೆ ಬಂದಿದ್ದಳು. ಅವಳಿಗೆ ತಿಂಡಿ ಕೊಟ್ಟ ಮೇಲೆ ಸ್ವಲ್ಪ ಶಾಂತಳಾದಳು. ರಾತ್ರಿ ಇಲ್ಲಿಯೇ ಇರಲು ಹೇಳಿದೆ ಅವಳಿಗೆ. ಆದರೆ ಇರಲಿಲ್ಲ. ಅವಳು ಹಿಂದಿರುಗಿ ಹೋಗುವಾಗಲೂ ಅಷ್ಟೇ ಭಾವ ಪರವಶಳಾಗಿದ್ದಳು. ಅವಳು ಉಟ್ಟ ಬಟ್ಟೆ ಸಡಿಲವಾಗಿ ಅದು ನೆಲದ ಮೇಲೆ ಜಾರಿಕೊಂಡು ಹೋಗುತ್ತಿತ್ತು. ಅವಳಿಗೆ ಅದರ ಪರಿವೆಯೇ ಇರಲಿಲ್ಲ. ನಾನು ಅವಳ ತಲೆಯ ಮೇಲೆ ಕೈಯಾಡಿಸಿ ಸ್ವಲ್ಪ ಶಾಂತ

ಗೊಳಿಸಿದೆ. ಅವಳಿಗೆ ತುಂಬಾ ಭಕ್ತಿ ಮತ್ತು ತುಂಬಾ ಒಳ್ಳೆಯವಳು. ಅವಳನ್ನು ಏಕೆ ಇಲ್ಲಿಗೆ ಬರಹೇಳಬಾರದು ?"

ಬಲರಾಮನು ಈ ಮಾತನ್ನು ಕೇಳಿದ ಕೂಡಲೇ ಗೋಪಾಲನ ತಾಯಿಯನ್ನು ಕರೆದುಕೊಂಡು ಬರಲು ಒಂದು ವ್ಯಕ್ತಿಯನ್ನು ಕಳಿಸಿದನು. ಶ್ರೀರಾಮಕೃಷ್ಣರು ಅಂದು ಮತ್ತು ಮರುದಿನವೂ ಅಲ್ಲಿಯೇ ತಂಗುವವರಿದ್ದರು.

* * *

11. ಶ್ರೀರಾಮಕೃಷ್ಣರು ಉಪಾಹಾರದ ನಂತರ ಹೊರಗೆ ಬಂದು ಕುಳಿತು ಭಕ್ತರೊಡನೆ ಮಾತನಾಡತೊಡಗಿದರು. ಹೀಗೆ ಕ್ರಮೇಣ ಶ್ರೀರಾಮಕೃಷ್ಣರ ಮಧ್ಯಾಹ್ನದ ಊಟವೂ ಆಯಿತು. ಭಕ್ತರೆಲ್ಲರೂ ಊಟ ಮುಗಿಸಿದರು. ಸ್ವಲ್ಪ ವಿಶ್ರಾಂತಿಯ ನಂತರ ಶ್ರೀರಾಮಕೃಷ್ಣರು ಹೊರಗೆ ಹಾಲಿನಲ್ಲಿ ಕುಳಿತು ಭಕ್ತರೊಡನೆ ಮಾತನಾಡತೊಡಗಿದರು. ಸುಮಾರು ಸಂಜೆಯ ಹೊತ್ತಿಗೆ ಅವರಿಗೆ ಭಾವಾವೇಶ ಉಂಟಾಯಿತು. ನಾವೆಲ್ಲರೂ ಬಾಲಗೋಪಾಲನ ಲೋಹದ ಮೂರ್ತಿಯನ್ನು ನೋಡಿರುವೆವು. ಅದು ನೆಲದ ಮೇಲೆ ತೆವಳುತ್ತಿರುತ್ತದೆ. ಬಲಗೈಯನ್ನು ಮೇಲೆತ್ತಿ ಆಹಾರವನ್ನು ಕೇಳುತ್ತಿರುವಂತಿರುತ್ತದೆ. ಮುಖವನ್ನು ಮೇಲೆತ್ತಿಕೊಂಡು ಯಾರನ್ನೊ ಆನಂದದಿಂದ ನೋಡುತ್ತಾ ಏನನ್ನೊ ನಿರೀಕ್ಷಿಸುತ್ತಿರುತ್ತದೆ. ಶ್ರೀರಾಮಕೃಷ್ಣರ ದೇಹ ಮತ್ತು ಅಂಗಗಳೂ ಭಾವದ ಪ್ರಭಾವದಿಂದ ಅದೇ ಸ್ಥಿತಿಯನ್ನು ಪಡೆದಿದ್ದವು. ಕೇವಲ ಅವರ ಕಣ್ಣುಗಳು ಮಾತ್ರ ಅರ್ಧ ಮುಚ್ಚಿದ್ದವು. ಅವು ಒಳಮುಖ, ಹೊರಗಡೆ ಏನನ್ನೂ ನೋಡುತ್ತಿರಲಿಲ್ಲ. ಅವರು ಈ ಭಾವಾವಸ್ಥೆಯನ್ನು ಪಡೆಯುವುದಕ್ಕೂ ಹೊರಗಡೆ ಗಾಡಿಯಲ್ಲಿ ಗೋಪಾಲನ ತಾಯಿ ಬರುವುದಕ್ಕೂ ಸರಿಹೋಯಿತು. ಅವಳು ಮಹಡಿಯ ಮೇಲೆ ಬಂದು ಶ್ರೀರಾಮಕೃಷ್ಣರನ್ನು ತನ್ನ ಇಷ್ಟ ದೇವತೆಯ ರೂಪದಲ್ಲಿ ಕಂಡಳು. ಗೋಪಾಲನ ತಾಯಿಯ ಭಕ್ತಿಯ ಪರಿಣಾಮವಾಗಿಯೆ ಶ್ರೀರಾಮಕೃಷ್ಣರಲ್ಲಿ ಗೋಪಾಲಭಾವ ಉಂಟಾಯಿತೆಂಬುದನ್ನು ಭಕ್ತರು ಅರ್ಥ ಮಾಡಿಕೊಂಡರು. ಭಕ್ತರೆಲ್ಲರಿಗೂ ಆಕೆಯ ಮೇಲೆ ಅತ್ಯಂತ ಗೌರವವಿತ್ತು. ಎಲ್ಲರೂ ಭಾವಿಸಿದರು: "ಹಾ ಎಂಥಾ ಭಾಗ್ಯವಂತೆ ಅವಳು, ಎಂಥಾ ಅದ್ಭುತ ಭಕ್ತಿ ! ಅವಳ ಭಕ್ತಿಯ ಪರಿಣಾಮವಾಗಿ ಶ್ರೀರಾಮಕೃಷ್ಣರೇ ಗೋಪಾಲನ ರೂಪವನ್ನು ಪಡೆದರಲ್ಲ !" ಗೋಪಾಲನ ತಾಯಿಯು ಹೇಳಿದಳು: "ಆದರೆ ನಾನು ಭಾವದಲ್ಲಿ ಈ ರೀತಿ ಮರದಂತೆ ಆಗುವುದನ್ನು ಇಷ್ಟ ಪಡುವುದಿಲ್ಲ. ನನ್ನ ಗೋಪಾಲನು ನಗಬೇಕು, ಆಡಬೇಕು, ಓಡಬೇಕು. ಅಯ್ಯೋ, ಇದೇನಿದು ! ಒಳ್ಳೇ ಮರದಂತೆ ಕುಳಿತುಬಿಟ್ಟಿದ್ದಾನಲ್ಲ. ನನಗೆ ಇಂಥ ಗೋಪಾಲನಿಂದ ಏನೂ ಪ್ರಯೋಜನವಿಲ್ಲ." ಆಕೆಯು ಮೊದಲನೆ ದಿನ ಶ್ರೀರಾಮಕೃಷ್ಣರು ಭಾವಸಮಾಧಿಯಲ್ಲಿ ಇರುವುದನ್ನು ಕಂಡಾಗ ಅವಳಿಗೆ ನಿಜವಾಗಿಯೂ ಭಯ ಉಂಟಾಗಿತ್ತು. ಅವಳು ಶ್ರೀರಾಮಕೃಷ್ಣರ ದೇಹವನ್ನು ಅಲುಗಾಡಿಸಿ "ಮಗೂ, ನೀನೇಕೆ ಈ ಸ್ಥಿತಿಯಲ್ಲಿರುವೆ ?" ಎಂದು ಕೇಳಿದಳು. ಅದು ನಡೆದದ್ದು ಶ್ರೀರಾಮಕೃಷ್ಣರು ಕಾಮಾರಹಾಟಿಗೆ ಹೋಗಿದ್ದಾಗ.

12. ನಾವು ಮೊದಲ ಬಾರಿಗೆ ಶ್ರೀರಾಮಕೃಷ್ಣರೆಡೆಗೆ ಹೋದಾಗ ಅವರಿಗೆ ಸುಮಾರು ನಲವತ್ತೊಂಬತ್ತು ವರ್ಷ–ನಲವತ್ತೊಂಬತ್ತು ತುಂಬುವುದಕ್ಕೆ ಇನ್ನೂ ಐದು ಆರು ತಿಂಗಳಿರಬಹುದು. ಗೋಪಾಲನತಾಯಿಯೂ ಅದೇ ಸಂದರ್ಭದಲ್ಲಿ ಅವರೆಡೆಗೆ ಹೋದದ್ದು. ಶ್ರೀರಾಮಕೃಷ್ಣರನ್ನು ನೋಡುವುದಕ್ಕೆ ಮುಂಚೆ ನಮ್ಮ ಭಾವನೆ ಏನಾಗಿತ್ತೆಂದರೆ, ಮಕ್ಕಳ ಅಕೃತ್ರಿಮವಾದ ನೃತ್ಯ ಭಂಗಿಗಳನ್ನು ನೋಡಿ ಜನರು ಸಂತೋಷ ಪಡುತ್ತಾರೆ, ಆದರೆ ದೊಡ್ಡವರು ಹಾಗೆ ಮಾಡಿದರೆ ಅದು ತುಂಬಾ ಹಾಸ್ಯಾಸ್ಪದವೂ, ಅಸಹ್ಯವೂ ಆಗಿ ಕಾಣುತ್ತದೆ ಎಂದು. ಸ್ವಾಮಿ ವಿವೇಕಾನಂದರು ಹೇಳುತ್ತಿದ್ದರು: "ಒಂದು ಘೇಂಡಾ ಮೃಗವು ನರ್ತಕಿಯಂತೆ ನರ್ತಿಸಿದರೆ ಅದನ್ನು ಯಾರಾದರೂ ಮೆಚ್ಚುವರೇನು ?" ಆದರೆ ಶ್ರೀರಾಮಕೃಷ್ಣರನ್ನು ನೋಡಿದ ಮೇಲೆ ನಮ್ಮ ಅಭಿಪ್ರಾಯವನ್ನು ಬದಲಾಯಿಸಬೇಕಾಯಿತು. ಅವರು ಅಷ್ಟೊಂದು ಹಿರಿಯ ವಯಸ್ಸಿನವರಾದರೂ ನರ್ತಿಸುತ್ತಿದ್ದರು, ಹಾಡುತ್ತಿದ್ದರು, ಏನೇನೋ ಹಾವಭಾವಗಳನ್ನು ಮಾಡುತ್ತಿದ್ದರು. ಆದರೆ ಅವೆಲ್ಲವೂ ಎಷ್ಟೊಂದು ಮಧುರ. ಗಿರೀಶ್ ಘೋಷ್ ಹೇಳುತ್ತಾನೆ : "ಒಬ್ಬ ವಯಸ್ಸಾದವನು ನರ್ತಿಸಿದರೆ ಅಷ್ಟು ಸುಂದರವಾಗಿರಬಹುದು ಎಂದು ನಾವು ಕನಸಿನಲ್ಲೂ ಭಾವಿಸಿರಲಿಲ್ಲ." ಇಂದು ಬಲರಾಮನ ಮನೆಯಲ್ಲಿ ಅವರಿಗೆ ಗೋಪಾಲನ ಭಾವ ಉಂಟಾಗಿ ಅವರ ಪ್ರತಿಯೊಂದು ಅಂಗಾಂಗಗಳೂ ಬಾಲಗೋಪಾಲನಂತೆಯೇ ಆದವು. ಹಾ ! ಅದೆಷ್ಟು ಸುಂದರ ! ಅದು ಏಕೆ ಅಷ್ಟು ಸುಂದರ ಎಂದು ನಮಗೆ ಆಗ ಅರ್ಥವಾಗುತ್ತಿರಲಿಲ್ಲ. ಕೇವಲ ಆ ಸೌಂದರ್ಯವನ್ನು ಅನುಭವಿಸುತ್ತಿದ್ದೆವಷ್ಟೆ. ಈಗ ನಮಗೆ ಅರ್ಥವಾಗುತ್ತಿದೆ, ಅವರಲ್ಲಿ ಯಾವುದೇ ಭಾವ ಉಂಟಾಗಲಿ ಅದು ಸಂಪೂರ್ಣ ಅವರನ್ನು ಆವರಿಸುತ್ತಿತ್ತು, ಅವರಲ್ಲಿ ಆಗ ಬೇರೆ ಭಾವಕ್ಕೆ ಅವಕಾಶವಿರುತ್ತಿರಲಿಲ್ಲ. 'ಭಾವದ ಮನೆಯಲ್ಲಿ ಕಳ್ಳತನ' ಅಥವಾ ಜನರ ಮುಂದೆ ಪ್ರದರ್ಶಿಸುವ ಭಾವ ಅವರಲ್ಲಿ ಸ್ವಲ್ಪವೂ ಇರುತ್ತಿರಲಿಲ್ಲ. ಆ ಭಾವದಲ್ಲಿ ಅವರು ಸಂಪೂರ್ಣ ತನ್ಮಯರಾಗಿಬಿಡುತ್ತಿದ್ದರು. ಆಗ ಅವರು ವೃದ್ಧರಾಗಿ ಬಾಲಕರಂತೆ ಅಭಿನಯಿಸುತ್ತಿದ್ದಾರೆ ಅಥವಾ ಪುರುಷರಾಗಿ ಸ್ತ್ರೀಯರಂತೆ ಅಭಿನಯಿಸುತ್ತಿದ್ದಾರೆ ಎಂದು ಯಾರಿಗೂ ಅನಿಸುತ್ತಲೇ ಇರಲಿಲ್ಲ. ಪ್ರಬಲವಾದ ಆಂತರಿಕ ಭಾವ ತರಂಗವು ಶರೀರದ ಮೂಲಕ ಹೊರ ಬಂದು ಶರೀರವನ್ನೇ ಪರಿವರ್ತಿಸಿದಂತಾಗುತ್ತಿತ್ತು. ಅಥವಾ ಅದು ಬೇರೆ ರೂಪವನ್ನು ಪಡೆಯುವಂತೆ ಮಾಡುತ್ತಿತ್ತು.

* * *

13. ಶ್ರೀರಾಮಕೃಷ್ಣರು ಬಲರಾಮನ ಮನೆಯಲ್ಲಿ ಭಕ್ತರೊಡನೆ ಆನಂದದಲ್ಲಿ ಎರಡು ಹಗಲು ಎರಡು ರಾತ್ರಿ ಕಳೆದರು. ಇಂದು ಮೂರನೆಯ ದಿನ. ಅವರು ದಕ್ಷಿಣೇಶ್ವರಕ್ಕೆ ಹೊರಟರು. ಎಂಟು ಅಥವಾ ಒಂಬತ್ತು ಘಂಟೆಯ ಹೊತ್ತಿಗೆ ದೋಣಿಯು ಬಂದಿತು. ಗೋಪಾಲನ ತಾಯಿ ಮತ್ತು ಇನ್ನೊಬ್ಬಳು ಮಹಿಳೆಭಕ್ತೆ, ಶ್ರೀರಾಮಕೃಷ್ಣರೊಡನೆ ದೋಣಿಯಲ್ಲಿ ಹೋಗುವುದೆಂದು ನಿಶ್ಚಯವಾಯಿತು. ಅವರಲ್ಲದೆ ಶ್ರೀರಾಮಕೃಷ್ಣರ ಸೇವೆಗಾಗಿ ಬಂದಿದ್ದ ಇಬ್ಬರು ಮೂವರು ಬಾಲಕ ಭಕ್ತರು ಅವರೊಡನೆ

ರೂಪದ ಮೂಲಕವೇ ಅವಳಿಗೆ ಆವಶ್ಯಕವಾದುದನ್ನೆಲ್ಲ ಬೋಧಿಸತೊಡಗಿದರು. ಆಗಾಗ ಗೋಪಾಲನ ದರ್ಶನವಾಗುವುದು ನಿಂತುಹೋದ ಮೇಲೆ ಅವಳಿಗೆ ತುಂಬಾ ವ್ಯಥೆಯಾಯಿತು. ಒಂದು ದಿನ ಅವಳು ಅಳುತ್ತಾ ಶ್ರೀರಾಮಕೃಷ್ಣರಿಗೆ ಹೇಳಿದಳು : "ನೀನೇನು ಮಾಡಿದೆ ಗೋಪಾಲ ? ನನ್ನ ತಪ್ಪಾದರೂ ಏನು ? ನೀನೇಕೆ ಮೊದಲಿನಂತೆ ಗೋಪಾಲನ ರೂಪದಲ್ಲಿ ಕಾಣಿಸಿಕೊಳ್ಳುತ್ತಿಲ್ಲ." ಶ್ರೀರಾಮಕೃಷ್ಣರು ಉತ್ತರಿಸಿದರು : "ಕಲಿಯುಗದಲ್ಲಿ ಯಾರಿಗಾದರೂ ನಿರಂತರ ಅಂತಹ ದರ್ಶನವಾದರೆ ಅವನ ದೇಹ ಬಹಳ ಕಾಲ ಉಳಿಯುವುದಿಲ್ಲ. ಅದು ಕೇವಲ ಇಪ್ಪತ್ತೊಂದು ದಿನಗಳು ಮಾತ್ರ ಇದ್ದು ಅನಂತರ ಒಣಗಿದ ಎಲೆಯಂತೆ ಬಿದ್ದು ಹೋಗುತ್ತದೆ." ಗೋಪಾಲನ ತಾಯಿಯು ಎರಡು ತಿಂಗಳು ಯಾವಾಗಲೂ ದಿವ್ಯಭಾವದಲ್ಲಿಯೇ ಮಗ್ನಳಾಗಿರುತ್ತಿದ್ದಳು. ಅವಳು ಎಲ್ಲಾ ಕೆಲಸವನ್ನೂ ಅಡುಗೆ, ಸ್ನಾನ, ಊಟ, ಜಪ, ಧ್ಯಾನ ಎಲ್ಲವನ್ನೂ ಹಿಂದಿನ ಅಭ್ಯಾಸ ಬಲದಿಂದ ಮಾಡುತ್ತಿದ್ದಳು. ಹಿಂದಿನ ಅಭ್ಯಾಸ ಬಲದಿಂದ ದೇಹವು ಹೇಗೋ ಈ ಎಲ್ಲ ಕಾರ್ಯಗಳನ್ನೂ ನಡೆಸಿಕೊಂಡು ಹೋಗುತ್ತಿತ್ತು. ಅವಳು ಮಾತ್ರ ಯಾವಾಗಲೂ ಭಾವದಲ್ಲಿಯೇ ಮಗ್ನಳಾಗಿರುತ್ತಿದ್ದಳು. ಆದ್ದರಿಂದ ಇದೇ ರೀತಿ ದೇಹ ಎಷ್ಟು ಕಾಲ ಉಳಿದೀತು ? ಎರಡು ತಿಂಗಳು ಉಳಿದದ್ದೇ ಆಶ್ಚರ್ಯದ ಸಂಗತಿ. ಎರಡು ತಿಂಗಳ ನಂತರ ಆ ಭಾವದ ಪ್ರಭಾವ ಕಡಮೆಯಾಗತೊಡಗಿತು. ಆದರೆ ಅವಳು ಗೋಪಾಲನನ್ನು ಮೊದಲಿನಂತೆ ನೋಡುತ್ತಿರಲಿಲ್ಲವಾದ್ದರಿಂದ ಮತ್ತೆ ಮತ್ತೆ ಅವನನ್ನು ಕಾಣುವ ಆಸೆ ಅವಳಲ್ಲಿ ತೀವ್ರವಾಯಿತು. ಇದರಿಂದಾಗಿ ಅವಳಲ್ಲಿ ವಾಯುರೋಗ (humar of wind) ಉಂಟಾಗಿ ಎದೆಯಲ್ಲಿ ನೋವು ಕಾಣಿಸಿಕೊಳ್ಳತೊಡಗಿತು. ಆದ್ದರಿಂದ ಶ್ರೀರಾಮಕೃಷ್ಣರಿಗೆ ಹೇಳಿದಳು : "ಅತಿ ವಾಯುವಿನಿಂದ ಎದೆಯನ್ನು ಕತ್ತರಿಸುವಂತೆ ವೇದನೆಯಾಗುತ್ತಿದೆ." ಶ್ರೀರಾಮಕೃಷ್ಣರು ಅವಳನ್ನು ಪ್ರೀತಿಯಿಂದ ಸಮಾಧಾನ ಪಡಿಸಿದರು: "ಅದು ವಾಯುವಿನ ಕಾಟವಲ್ಲ, ಹರಿಯ ಆಟ. ಅದು ಹೋದರೆ ಏನನ್ನು ಆಶ್ರಯಿಸಿಕೊಂಡಿರುತ್ತೀಯೆ? ಅದು ಇದ್ದರೆ ಒಳ್ಳೆಯದು. ತುಂಬಾ ಕಷ್ಟವಾದಾಗ ಏನನ್ನಾದರೂ ತಿನ್ನು," ಎಂದು ಹೇಳಿ ಶ್ರೀರಾಮಕೃಷ್ಣರು ಅಂದು ಅವಳಿಗೆ ನಾನಾ ಬಗೆಯ ತಿಂಡಿಗಳನ್ನು ತಿನಿಸಿದ್ದರು.

* * *

17. ಕಲ್ಕತ್ತದಿಂದ ನಾವು ಸ್ತ್ರೀ ಪುರುಷರೆಲ್ಲ ಹೇಗೆ ಶ್ರೀರಾಮಕೃಷ್ಣರನ್ನು ನೋಡಲು ಹೋಗುತ್ತಿದ್ದೆವೊ ಹಾಗೆಯೇ ಅನೇಕ ಮಾರ್ವಾಡಿ ಭಕ್ತರೂ ಆಗಾಗ ಅವರನ್ನು ನೋಡಲು ಹೋಗುತ್ತಿದ್ದರು. ಅವರೆಲ್ಲರೂ ಗಾಡಿಯಲ್ಲಿ ದಕ್ಷಿಣೇಶ್ವರದ ತೋಟಕ್ಕೆ ಹೋಗುತ್ತಿದ್ದರು. ಗಂಗಾಸ್ನಾನವನ್ನು ಮುಗಿಸಿ, ಹೂವನ್ನು ಕೊಯ್ದು ಶಿವಪೂಜೆಯಾದ ಮೇಲೆ ಪಂಚವಟಿಯಲ್ಲಿ ಹರಟೆ ಹೊಡೆಯುತ್ತಿದ್ದರು. ಅಲ್ಲಿ ಮರದ ಕೆಳಗೆ ಅವರು ಒಲೆ ಮಾಡಿಕೊಂಡು ಅನೇಕ ಬಗೆಯ ಪದಾರ್ಥಗಳನ್ನು ತಯಾರಿಸಿ ದೇವರಿಗೆ ನಿವೇದಿಸುತ್ತಿದ್ದರು. ಅನಂತರ ಅದನ್ನು ಶ್ರೀರಾಮಕೃಷ್ಣರಿಗೆ ಕೊಟ್ಟು ಆಮೇಲೆ ಪ್ರಸಾದವನ್ನು ಸ್ವೀಕರಿಸುತ್ತಿದ್ದರು. ಅವರಲ್ಲನೇಕರು ಶ್ರೀರಾಮಕೃಷ್ಣರಿಗಾಗಿ ಕಲ್ಲುಸಕ್ಕರೆ,

ದ್ರಾಕ್ಷಿ, ಬಾದಾಮಿ, ಖರ್ಜೂರ, ದಾಳಿಂಬೆ, ಪೇರ್ಲೆ, ಅಂಜೂರ, ವಿಳ್ಳೇದೆಲೆ ಇತ್ಯಾದಿಗಳನ್ನು ತರುತ್ತಿದ್ದರು. ಅವನ್ನೆಲ್ಲ ಶ್ರೀರಾಮಕೃಷ್ಣರಿಗೆ ಅರ್ಪಿಸಿ ವಂದಿಸುತ್ತಿದ್ದರು. ಅವರು ನಮ್ಮಲ್ಲಿ ಅನೇಕರಂತೆ ಇರಲಿಲ್ಲ, ಸಾಧುಗಳೆಡೆಗೆ ಮತ್ತು ದೇವಸ್ಥಾನಕ್ಕೆ ಹೋಗುವಾಗ ಬರಿಗೈಯಲ್ಲಿ ಹೋಗಬಾರದು ಎಂದು ಅವರಿಗೆ ಗೊತ್ತಿತ್ತು. ಆದ್ದರಿಂದ ಬರುವಾಗ ಅವರು ಏನಾದರೂ ತಂದೇ ತರುತ್ತಿದ್ದರು. ಆದರೆ ಶ್ರೀರಾಮಕೃಷ್ಣರು ಇವುಗಳಾವುವನ್ನೂ ಸ್ವೀಕರಿಸುತ್ತಿರಲಿಲ್ಲ. ಒಂದಿಬ್ಬರು ಮಾರ್ವಾಡಿಗಳು ಇದಕ್ಕೆ ಅಪವಾದವಾಗಿದ್ದರು. ಶ್ರೀರಾಮಕೃಷ್ಣರು ಹೇಳುತ್ತಿದ್ದರು : "ಅವರು ಒಂದು ತಾಂಬೂಲವನ್ನು ಕೊಟ್ಟರೆ ಅದರ ಹಿಂದೆ ಹದಿನಾರು ಆಸೆಗಳಿರುತ್ತವೆ, 'ನಾನು ಮೊಕದ್ದಮೆಯಲ್ಲಿ ಗೆಲ್ಲುವಂತಾಗಲಿ', 'ನನ್ನ ಖಾಯಿಲೆ ಗುಣವಾಗಲಿ', 'ನನ್ನ ವ್ಯಾಪಾರದಲ್ಲಿ ಒಳ್ಳೇ ಲಾಭವಾಗಲಿ' ಇತ್ಯಾದಿ ಏನೇನೋ ಆಸೆಗಳಿರುತ್ತವೆ." ಇವನ್ನು ಶ್ರೀರಾಮಕೃಷ್ಣರು ತಾವು ಮಾತ್ರ ತಿನ್ನದಿರುವುದಲ್ಲದೆ ಭಕ್ತರಿಗೂ ಕೊಡುತ್ತಿರಲಿಲ್ಲ. ಆದರೆ ಕೆಲವೊಮ್ಮೆ ಅವರು ದೇವರಿಗೆ ನಿವೇದಿಸಿ ತಂದ ನೈವೇದ್ಯವನ್ನು ಪ್ರಸಾದವಾಗಿ ಸ್ವಲ್ಪ ಸ್ವೀಕರಿಸಿ ಭಕ್ತರಿಗೂ ಕೊಡುತ್ತಿದ್ದರು. ಅವರು ಕೊಟ್ಟ ಸಿಹಿತಿಂಡಿ ಇತ್ಯಾದಿಗಳನ್ನು ತಿನ್ನಲು ಅರ್ಹನಾದ ಒಬ್ಬನೇ ವ್ಯಕ್ತಿಯೆಂದರೆ ನರೇಂದ್ರನಾಥ. ಶ್ರೀರಾಮಕೃಷ್ಣರು ಹೇಳುತ್ತಿದ್ದರು : "ಅವನು ಜ್ಞಾನದ ಖಡ್ಗವನ್ನು ಯಾವಾಗಲೂ ಝಳಪಿಸುತ್ತಿರುತ್ತಾನೆ. ಇವುಗಳನ್ನು ತಿಂದರೆ ಅವನಿಗೆ ಯಾವ ತೊಂದರೆಯೂ ಆಗುವುದಿಲ್ಲ. ಅವನ ಆಧ್ಯಾತ್ಮಿಕತೆ ಸ್ವಲ್ಪವೂ ಕುಂದುವುದಿಲ್ಲ". ಆದ್ದರಿಂದ ಶ್ರೀರಾಮಕೃಷ್ಣರು ಈ ತಿಂಡಿಗಳನ್ನು ಯಾರ ಮೂಲಕವಾದರೂ ನರೇಂದ್ರನಾಥನ ಮನೆಗೆ ಕಳಿಸುತ್ತಿದ್ದರು. ಯಾರೂ ಸಿಕ್ಕದಿದ್ದರೆ ತಮ್ಮ ಅಳಿಯ ರಾಮಲಾಲನ ಮೂಲಕ ಕಳಿಸುತ್ತಿದ್ದರು, ಒಂದು ದಿನ ಮಧ್ಯಾಹ್ನದ ಊಟದ ನಂತರ ರಾಮಲಾಲನನ್ನು ವಿಚಾರಿಸಿದರು, "ಏನಪ್ಪಾ ನಿನಗೆ ಕಲ್ಕತ್ತೆಯಲ್ಲಿ ಏನೂ ಕೆಲಸವಿಲ್ಲವೇ ?" ಎಂದು. ಪ್ರತಿನಿತ್ಯ ಅವನನ್ನು ಆ ರೀತಿ ಕಳಿಸುವುದರಿಂದ ಅವನಿಗೆ ಬೇಸರವಾಗಿರಬಹುದೆಂದು ಅವರು ಆ ರೀತಿ ವಿಚಾರಿಸುತ್ತಿದ್ದರು.

ರಾಮಲಾಲ : "ಈಗ ಯಾವ ಕೆಲಸವೂ ಇಲ್ಲ. ಆದರೆ ನೀವು ಹೇಳಿದರೆ ಹೋಗುತ್ತೇನೆ". ಶ್ರೀರಾಮಕೃಷ್ಣರು : "ಇಲ್ಲ, ನಾನು ಸುಮ್ಮನೆ ಕೇಳಿದೆ, ನೀನು ಬಹಳ ದಿನದಿಂದ ಕಲ್ಕತ್ತೆಯ ಕಡೆಗೆ ಓಡಾಡಲು ಹೋಗಿಲ್ಲ. ನಿನಗೆ ಹೋಗಬೇಕೆಂಬ ಆಸೆಯಿರಬಹುದು. ಒಮ್ಮೆ ಯಾಕೆ ಹೋಗಿ ಬರಬಾರದು ? ನೀನು ಹೋಗುವುದಾದರೆ ಅಲ್ಲಿ ಆ ಡಬ್ಬದಲ್ಲಿ ಹಣವಿದೆ, ತೆಗೆದುಕೊ. ಒಂದು ಗಾಡಿ ಮಾಡಿಕೊಂಡು ಹೋಗು. ಇಲ್ಲದಿದ್ದರೆ ಬಿಸಲಿನಿಂದಾಗಿ ಖಾಯಿಲೆ ಬೀಳುತ್ತೀಯೆ. ಈ ಕಲ್ಲುಸಕ್ಕರೆ, ಬಾದಾಮಿ, ಇತ್ಯಾದಿಗಳನ್ನು ನರೇಂದ್ರನಿಗೆ ಕೊಟ್ಟು ಅವನ ಸಮಾಚಾರ ವಿಚಾರಿಸಿಕೊಂಡು ಬಾ. ಅವನು ಬಹಳಕಾಲದಿಂದ ಈ ಕಡೆ ಬಂದಿಲ್ಲ. ನನಗೆ ಅವನ ಬಗ್ಗೆ ತಿಳಿಯಬೇಕೆಂದು ತುಂಬಾ ಆಸೆಯಾಗಿದೆ."

ರಾಮಲಾಲನು ನಮಗೆ ಹೇಳುತ್ತಿದ್ದ : "ಆಹ್ ! ಎಂಥಾ ಸಂಕೋಚ ! ಎಲ್ಲಿ ನನಗೆ ಬೇಸರವಾಗುತ್ತೋ ಎಂಬ ಅಳುಕು !" ರಾಮಲಾಲನು ಕಲ್ಕತ್ತೆಗೆ ಬರುವ ಆ ಅವ

ಕಾಶವನ್ನು ಕಳೆದುಕೊಳ್ಳುತ್ತಿರಲಿಲ್ಲ ಎಂಬುದನ್ನು ಮತ್ತೆ ಹೇಳಬೇಕಾಗಿಯೇ ಇಲ್ಲ.

* * *

18. ಇಂದು ಅನೇಕ ಜನ ಮಾರ್ವಾಡಿ ಭಕ್ತರು ದಕ್ಷಿಣೇಶ್ವರಕ್ಕೆ ಬಂದಿದ್ದಾರೆ. ಯಾವಾಗಲಿನಂತೆಯೇ ಹಣ್ಣು, ಸಿಹಿತಿಂಡಿ ಇತ್ಯಾದಿಗಳನ್ನು ಬಹಳವಾಗಿ ತಂದಿದ್ದಾರೆ. ಆ ಸಮಯದಲ್ಲಿ ಗೋಪಾಲನ ತಾಯಿ ಮತ್ತು ಕೆಲವು ಸ್ತ್ರೀಭಕ್ತರು ಶ್ರೀರಾಮಕೃಷ್ಣರನ್ನು ನೋಡಲು ಬಂದರು. ಗೋಪಾಲನ ತಾಯಿಯನ್ನು ನೋಡಿ ಶ್ರೀರಾಮಕೃಷ್ಣರು ಅವಳ ಹತ್ತಿರ ಬಂದು ನಿಂತರು, ತಲೆಯಿಂದ ಪಾದದವರೆಗೂ ಅವಳ ಮೈ ತಡವುತ್ತಾ ಹೇಗೆ ಮಗು ತಾಯಿಯನ್ನು ಆದರಿಸುವುದೋ ಹಾಗೆ ಮಾಡತೊಡಗಿದರು. ಗೋಪಾಲನ ತಾಯಿಯ ಶರೀರವನ್ನು ಎಲ್ಲರಿಗೂ ತೋರಿಸಿ ಹೇಳಿದರು : "ಈ ಚೀಲ ಹರಿಯಿಂದ ತುಂಬಿ ಹೋಗಿದೆ. ಇದು ಹರಿಮಯ ಶರೀರ !" ಗೋಪಾಲನ ತಾಯಿಯು ಸುಮ್ಮನೆ ನಿಂತುಕೊಂಡಿದ್ದಳು. ಶ್ರೀರಾಮಕೃಷ್ಣರು ಅವಳ ಪಾದವನ್ನು ಮುಟ್ಟಿದಾಗಲೂ ಅವಳು ಸ್ವಲ್ಪವೂ ಸಂಕೋಚಗೊಳ್ಳಲಿಲ್ಲ. ಅನಂತರ ಕೊಠಡಿಯಲ್ಲಿದ್ದ ಎಲ್ಲಾ ಒಳ್ಳೆಯ ಪದಾರ್ಥ ಗಳನ್ನು ತಂದು ಶ್ರೀರಾಮಕೃಷ್ಣರು ಆ ವೃದ್ಧೆಗೆ ತಿನ್ನಿಸತೊಡಗಿದರು. ಗೋಪಾಲನ ತಾಯಿಯು ದಕ್ಷಿಣೇಶ್ವರಕ್ಕೆ ಹೋದರೆ ಶ್ರೀರಾಮಕೃಷ್ಣರು ಇದೇ ರೀತಿ ಮಾಡುತ್ತಿದ್ದರು. ಒಂದು ದಿನ ಗೋಪಾಲನ ತಾಯಿಯು ಹೇಳಿದಳು : "ಗೋಪಾಲ, ನನಗೆ ತಿನ್ನಿಸುವುದ ರಲ್ಲಿ ನಿನಗೇಕೆ ಅಷ್ಟೊಂದು ಪ್ರೀತಿ ?"

ಶ್ರೀರಾಮಕೃಷ್ಣರು : "ನೀನು ಮೊದಲು ನನಗೆ ಎಷ್ಟೊಂದು ತಿನ್ನಿಸಿದ್ದೀಯೆ."

ಗೋಪಾಲನ ತಾಯಿ : "ಮೊದಲು ! ಯಾವಾಗ ತಿನ್ನಿಸಿದ್ದೆ ?"

ಶ್ರೀರಾಮಕೃಷ್ಣರು : "ಜನ್ಮಾಂತರದಲ್ಲಿ."

ಇಡೀ ದಿನ ಕಳೆದು ಗೋಪಾಲನ ತಾಯಿಯು ಕಾಮಾರಹಾಟಿಗೆ ಹೊರಟಳು. ಆಗ ಶ್ರೀರಾಮಕೃಷ್ಣರು ಮಾರ್ವಾಡಿ ಭಕ್ತರು ತಂದಿದ್ದ ಎಲ್ಲ ಕಲ್ಲುಸಕ್ಕರೆಯನ್ನೂ ಅವಳಿಗೆ ಕೊಟ್ಟು ಅದನ್ನು ತೆಗೆದುಕೊಂಡು ಹೋಗಲು ಹೇಳಿದರು. ಗೋಪಾಲನ ತಾಯಿಯು ಕೇಳಿದಳು : "ಏಕೆ ಇಷ್ಟೊಂದು ಕಲ್ಲುಸಕ್ಕರೆ ಕೊಡುತ್ತಿದ್ದೀಯೆ."

ಶ್ರೀರಾಮಕೃಷ್ಣರು (ಪ್ರೀತಿಯಿಂದ ಅವಳ ಗಲ್ಲವನ್ನು ಸ್ಪರ್ಶಿಸಿ) : "ನೀನು ಮೊದಲು ಜೋನಿ ಬೆಲ್ಲವಾಗಿದ್ದೆ. ಅನಂತರ ಸಕ್ಕರೆಯಾದೆ ಮತ್ತು ಈಗ ಕಲ್ಲುಸಕ್ಕರೆ ಯಾಗಿರುವೆ. ಆದ್ದರಿಂದ ಕಲ್ಲುಸಕ್ಕರೆ ತಿಂದು ಸುಖವಾಗಿರು."

ಮಾರ್ವಾಡಿಗಳು ಕೊಟ್ಟಿದ್ದ ಕಲ್ಲುಸಕ್ಕರೆಯನ್ನು ಈ ರೀತಿ ಶ್ರೀರಾಮಕೃಷ್ಣರು ಗೋಪಾಲನ ತಾಯಿಗೆ ಕೊಟ್ಟುದನ್ನು ನೋಡಿ ಎಲ್ಲರೂ ಅವಾಕ್ಕಾದರು. ಶ್ರೀರಾಮ ಕೃಷ್ಣರ ಕೃಪೆಯಿಂದ ಗೋಪಾಲನ ತಾಯಿಯ ಮನಸ್ಸು ಈಗ ಯಾವ ರೀತಿ ಯಿಂದಲೂ ಮಲಿನವಾಗಲಾರದು ಎಂದು ಅವರು ಅರ್ಥ ಮಾಡಿಕೊಂಡರು. ಗೋಪಾ ಲನ ತಾಯಿಯು ಇನ್ನೇನು ಮಾಡಿಯಾಳು ? ಆ ಕಲ್ಲುಸಕ್ಕರೆಯನ್ನು ತೆಗೆದುಕೊಂಡು ಹೋದಳು, ಇಲ್ಲದಿದ್ದರೆ ಗೋಪಾಲನು ಬಿಡುವನೆ. ಮತ್ತೆ ಶರೀರ ಇರುವುದರಿಂದಲೇ

ಎಲ್ಲ ವಸ್ತುಗಳ ಪ್ರಯೋಜನ. ಗೋಪಾಲನ ತಾಯಿಯು ಆಗಾಗ ನಮಗೆ ಹೇಳು ತ್ತಿದ್ದಳು: "ದೇಹವಿರುವವರೆಗೂ ಎಲ್ಲ ಬೇಕಾಗುತ್ತದೆ. ಜೀರಿಗೆ, ಮೆಂಥ್ಯ ಕೂಡ ಬೇಕಾಗು ತ್ತದೆ. ತುಂಬಾ ವಿಚಿತ್ರ ಅಲ್ಲವೆ ?"

* * *

19. ಹಿಂದೆ ಗೋಪಾಲನ ತಾಯಿಯು ಧ್ಯಾನ ಜಪ ಮಾಡುವಾಗ ಏನೇನು ನೋಡುತ್ತಿದ್ದಳೋ ಅವೆಲ್ಲವನ್ನು ಬಂದು ಶ್ರೀರಾಮಕೃಷ್ಣರಿಗೆ ಹೇಳುತ್ತಿದ್ದಳು. ಅದನ್ನು ಕೇಳಿ ಶ್ರೀರಾಮಕೃಷ್ಣರು ಹೇಳುತ್ತಿದ್ದರು : "ದಿವ್ಯ ದರ್ಶನಗಳ ವಿಷಯುವನ್ನು ಯಾರಿಗೂ ಹೇಳಬಾರದು, ಹಾಗೆ ಮಾಡಿದರೆ ಮತ್ತೆ ಆಗುವುದಿಲ್ಲ." ಇದನ್ನು ಕೇಳಿ ಗೋಪಾಲನ ತಾಯಿಯು ಒಂದು ದಿವಸ ಹೇಳಿದಳು: "ಏಕೆ, ಅವೆಲ್ಲ ನಿನ್ನ ದರ್ಶನದ ವಿಚಾರವೇ. ನಿನಗೂ ಹೇಳಬಾರದೇನು ?" ಶ್ರೀರಾಮಕೃಷ್ಣರು : "ಇಲ್ಲಿಯ ದರ್ಶನ ವಾದರೂ ನನಗೆ ಹೇಳಬಾರದು." ಗೋಪಾಲನ ತಾಯಿ "ಹೌದೇ" ಎಂದಳು. ಅಂದಿ ನಿಂದ ಅವಳು ದರ್ಶನಗಳ ವಿಷಯುವನ್ನು ಯಾರಿಗೂ ಹೆಚ್ಚಾಗಿ ಹೇಳುತ್ತಿರಲಿಲ್ಲ. ಸರಳ ಸ್ವಭಾವದ ಗೋಪಾಲನ ತಾಯಿಯು ಶ್ರೀರಾಮಕೃಷ್ಣರು ಏನು ಹೇಳಿದರೂ ಅದರಲ್ಲಿ ವಿಶ್ವಾಸವಿರಿಸುತ್ತಿದ್ದಳು. ನಾವುಗಳಾದರೋ ಸಂಶಯಾತ್ಮರು. ನಮ್ಮ ಇಡೀ ಜೀವನವೇ ಅವರ ಮಾತುಗಳನ್ನು ಪರೀಕ್ಷಿಸುವುದರಲ್ಲಿ ಕಳೆದು ಹೋಯಿತು. ಅವನ್ನು ಜೀವನದಲ್ಲಿ ಅಳವಡಿಸಿ ಅದರ ಫಲವನ್ನು ಅನುಭವಿಸುವ ಭಾಗ್ಯ ನಮಗಿಲ್ಲವಾಯಿತು.

20. ಒಂದು ದಿನ ಗೋಪಾಲನ ತಾಯಿಯು ಮತ್ತು ನರೇಂದ್ರನಾಥ ಇಬ್ಬರೂ ದಕ್ಷಿಣೇಶ್ವರದಲ್ಲಿದ್ದರು. ನರೇಂದ್ರನಾಥನಿಗೆ ಆಗಲೂ ಬ್ರಹ್ಮಸಮಾಜದ ನಿರಾಕಾರ ಸತ್ಯ ದಲ್ಲಿಯೇ ಹೆಚ್ಚು ವಿಶ್ವಾಸ, ಮೂರ್ತಿ ಪೂಜೆ ಎಂದರೆ ಆಗುತ್ತಿರಲಿಲ್ಲ ಅವನಿಗೆ. ಆದರೆ ಮೂರ್ತಿಪೂಜೆಯು ಮೂಲಕವೂ ಮುಂದೆ ಎಲ್ಲಾ ಭೂತಗಳಲ್ಲಿರುವ ನಿರಾಕಾರ ಸತ್ಯವನ್ನು ಪಡೆಯಬಹುದು ಎಂಬ ನಂಬಿಕೆ ಆಗ ಅವನಲ್ಲಿ ಉಂಟಾಗುತ್ತಿತ್ತು. ಶ್ರೀರಾಮಕೃಷ್ಣರು ಹಾಸ್ಯಪ್ರಿಯರು. ಒಂದು ಕಡೆ ಸರ್ವಗುಣಗಳಿಂದ ಕೂಡಿದ ಪಂಡಿತನೂ, ಮೇಧಾ ವಿಯೂ, ವಿಚಾರ ಪ್ರಿಯನೂ, ಭಗವದ್ಭಕ್ತನೂ ಆದ ನರೇಂದ್ರನಾಥ. ಮತ್ತೊಂದು ಕಡೆ ದೀನ ದರಿದ್ರಳಾದ ನಾಮಜಪವನ್ನಾಶ್ರಯಿಸಿಯೇ ಭಗವಂತನನ್ನು ಪಡೆದ ಸರಳ ವಿಶ್ವಾಸಿ ಯಾದ ಗೋಪಾಲನ ತಾಯಿ, ಅವಳು ವಿದ್ಯಾಭ್ಯಾಸವಿಲ್ಲದವಳು. ಜ್ಞಾನ ವಿಚಾರವನ್ನೇ ಅರಿಯದವಳು. ಇವರಿಬ್ಬರನ್ನು ಒಟ್ಟಿಗೆ ಸೇರಿಸಿ ಶ್ರೀರಾಮಕೃಷ್ಣರು ತಮಾಷೆ ನೋಡ ಬೇಕೆಂದಿದ್ದರು. ಗೋಪಾಲನ ತಾಯಿಯು ಹೇಗೆ ಬಾಲಗೋಪಾಲನ ದರ್ಶನ ಪಡೆದಳು, ಅದುವರೆಗೆ ತನಗಾದ ದರ್ಶನಗಳು, ಅವನ ಲೀಲಾವಿಲಾಸ, ಎಲ್ಲವನ್ನೂ ನರೇಂದ್ರನಿಗೆ ವಿವರಿಸಬೇಕೆಂದು ಶ್ರೀರಾಮಕೃಷ್ಣರು ಅವಳಿಗೆ ಹೇಳಿದರು. ಗೋಪಾಲನ ತಾಯಿಯು ಕೇಳಿದಳು: "ಅದರಿಂದೇನೂ ದೋಷವಾಗುವುದಿಲ್ಲವೇ, ಗೋಪಾಲ?" ಶ್ರೀರಾಮಕೃಷ್ಣರು ಆಶ್ವಾಸನೆ ನೀಡಿದ ಮೇಲೆ ಗೋಪಾಲನ ತಾಯಿಯು ಕಂಬನಿ ಸುರಿಸುತ್ತಾ ಗದ್ಗದಕಂಠ ದಿಂದ ಮೊದಲಿನಿಂದ ಎರಡು ತಿಂಗಳವರೆಗೆ ತಾನು ಪಡೆದ ದರ್ಶನಗಳನ್ನೆಲ್ಲ ಆದ್ಯಂತ

ಕಾಶವನ್ನು ಕಳೆದುಕೊಳ್ಳುತ್ತಿರಲಿಲ್ಲ ಎಂಬುದನ್ನು ಮತ್ತೆ ಹೇಳಬೇಕಾಗಿಯೇ ಇಲ್ಲ.

* * *

18. ಇಂದು ಅನೇಕ ಜನ ಮಾರ್ವಾಡಿ ಭಕ್ತರು ದಕ್ಷಿಣೇಶ್ವರಕ್ಕೆ ಬಂದಿದ್ದಾರೆ. ಯಾವಾಗಲಿನಂತೆಯೇ ಹಣ್ಣು, ಸಿಹಿತಿಂಡಿ ಇತ್ಯಾದಿಗಳನ್ನು ಬಹಳವಾಗಿ ತಂದಿದ್ದಾರೆ. ಆ ಸಮಯದಲ್ಲಿ ಗೋಪಾಲನ ತಾಯಿ ಮತ್ತು ಕೆಲವು ಸ್ತ್ರೀಭಕ್ತರು ಶ್ರೀರಾಮಕೃಷ್ಣರನ್ನು ನೋಡಲು ಬಂದರು. ಗೋಪಾಲನ ತಾಯಿಯನ್ನು ನೋಡಿ ಶ್ರೀರಾಮಕೃಷ್ಣರು ಅವಳ ಹತ್ತಿರ ಬಂದು ನಿಂತರು, ತಲೆಯಿಂದ ಪಾದದವರೆಗೂ ಅವಳ ಮೈ ತಡವುತ್ತಾ ಹೇಗೆ ಮಗು ತಾಯಿಯನ್ನು ಆದರಿಸುವುದೋ ಹಾಗೆ ಮಾಡತೊಡಗಿದರು. ಗೋಪಾಲನ ತಾಯಿಯ ಶರೀರವನ್ನು ಎಲ್ಲರಿಗೂ ತೋರಿಸಿ ಹೇಳಿದರು : "ಈ ಜೀವ ಹರಿಯಿಂದ ತುಂಬಿ ಹೋಗಿದೆ. ಇದು ಹರಿಮಯ ಶರೀರ !" ಗೋಪಾಲನ ತಾಯಿಯು ಸುಮ್ಮನೆ ನಿಂತುಕೊಂಡಿದ್ದಳು. ಶ್ರೀರಾಮಕೃಷ್ಣರು ಅವಳ ಪಾದವನ್ನು ಮುಟ್ಟಿದಾಗಲೂ ಅವಳು ಸ್ವಲ್ಪವೂ ಸಂಕೋಚಗೊಳ್ಳಲಿಲ್ಲ. ಅನಂತರ ಕೊಠಡಿಯಲ್ಲಿದ್ದ ಎಲ್ಲಾ ಒಳ್ಳೆಯ ಪದಾರ್ಥ ಗಳನ್ನು ತಂದು ಶ್ರೀರಾಮಕೃಷ್ಣರು ಆ ವೃದ್ಧೆಗೆ ತಿನ್ನಿಸತೊಡಗಿದರು. ಗೋಪಾಲನ ತಾಯಿಯು ದಕ್ಷಿಣೇಶ್ವರಕ್ಕೆ ಹೋದರೆ ಶ್ರೀರಾಮಕೃಷ್ಣರು ಇದೇ ರೀತಿ ಮಾಡುತ್ತಿದ್ದರು. ಒಂದು ದಿನ ಗೋಪಾಲನ ತಾಯಿಯು ಹೇಳಿದಳು : "ಗೋಪಾಲ, ನನಗೆ ತಿನ್ನಿಸುವುದ ರಲ್ಲಿ ನಿನಗೇಕೆ ಅಷ್ಟೊಂದು ಪ್ರೀತಿ ?"

ಶ್ರೀರಾಮಕೃಷ್ಣರು : "ನೀನು ಮೊದಲು ನನಗೆ ಎಷ್ಟೊಂದು ತಿನ್ನಿಸಿದ್ದೀಯೆ."

ಗೋಪಾಲನ ತಾಯಿ : "ಮೊದಲು ! ಯಾವಾಗ ತಿನ್ನಿಸಿದ್ದೆ ?"

ಶ್ರೀರಾಮಕೃಷ್ಣರು : "ಜನ್ಮಾಂತರದಲ್ಲಿ."

ಇಡೀ ದಿನ ಕಳೆದು ಗೋಪಾಲನ ತಾಯಿಯು ಕಾಮಾರಹಾಟಿಗೆ ಹೊರಟಳು. ಆಗ ಶ್ರೀರಾಮಕೃಷ್ಣರು ಮಾರ್ವಾಡಿ ಭಕ್ತರು ತಂದಿದ್ದ ಎಲ್ಲ ಕಲ್ಲುಸಕ್ಕರೆಯನ್ನೂ ಅವಳಿಗೆ ಕೊಟ್ಟು ಅದನ್ನು ತೆಗೆದುಕೊಂಡು ಹೋಗಲು ಹೇಳಿದರು. ಗೋಪಾಲನ ತಾಯಿಯು ಕೇಳಿದಳು : "ಏಕೆ ಇಷ್ಟೊಂದು ಕಲ್ಲುಸಕ್ಕರೆ ಕೊಡುತ್ತಿದ್ದೀಯೆ."

ಶ್ರೀರಾಮಕೃಷ್ಣರು (ಪ್ರೀತಿಯಿಂದ ಅವಳ ಗಲ್ಲವನ್ನು ಸ್ಪರ್ಶಿಸಿ) : "ನೀನು ಮೊದಲು ಜೋನಿ ಬೆಲ್ಲವಾಗಿದ್ದೆ. ಅನಂತರ ಸಕ್ಕರೆಯಾದೆ ಮತ್ತು ಈಗ ಕಲ್ಲುಸಕ್ಕರೆ ಯಾಗಿರುವೆ. ಆದ್ದರಿಂದ ಕಲ್ಲುಸಕ್ಕರೆ ತಿಂದು ಸುಖವಾಗಿರು."

ಮಾರ್ವಾಡಿಗಳು ಕೊಟ್ಟಿದ್ದ ಕಲ್ಲುಸಕ್ಕರೆಯನ್ನು ಈ ರೀತಿ ಶ್ರೀರಾಮಕೃಷ್ಣರು ಗೋಪಾಲನ ತಾಯಿಗೆ ಕೊಟ್ಟುದನ್ನು ನೋಡಿ ಎಲ್ಲರೂ ಅವಾಕ್ಕಾದರು. ಶ್ರೀರಾಮ ಕೃಷ್ಣರ ಕೃಪೆಯಿಂದ ಗೋಪಾಲನ ತಾಯಿಯ ಮನಸ್ಸು ಈಗ ಯಾವ ರೀತಿ ಯಿಂದಲೂ ಮಲಿನವಾಗಲಾರದು ಎಂದು ಅವರು ಅರ್ಥ ಮಾಡಿಕೊಂಡರು. ಗೋಪಾ ಲನ ತಾಯಿಯು ಇನ್ನೇನು ಮಾಡಿಯಾಳು ? ಆ ಕಲ್ಲುಸಕ್ಕರೆಯನ್ನು ತೆಗೆದುಕೊಂಡು ಹೋದಳು, ಇಲ್ಲದಿದ್ದರೆ ಗೋಪಾಲನು ಬಿಡುವನೆ. ಮತ್ತೆ ಶರೀರ ಇರುವುದರಿಂದಲೇ

ಎಲ್ಲ ವಸ್ತುಗಳ ಪ್ರಯೋಜನ. ಗೋಪಾಲನ ತಾಯಿಯು ಆಗಾಗ ನಮಗೆ ಹೇಳು ತ್ತಿದ್ದಳು: "ದೇಹವಿರುವವರೆಗೂ ಎಲ್ಲ ಬೇಕಾಗುತ್ತದೆ. ಜೀರಿಗೆ, ಮೆಂಥ್ಯಕೂಡ ಬೇಕಾಗು ತ್ತದೆ. ತುಂಬಾ ವಿಚಿತ್ರ ಅಲ್ಲವೆ ?"

* * *

19. ಹಿಂದೆ ಗೋಪಾಲನ ತಾಯಿಯು ಧ್ಯಾನ ಜಪ ಮಾಡುವಾಗ ಏನೇನು ನೋಡುತ್ತಿದ್ದಳೋ ಅವೆಲ್ಲವನ್ನು ಬಂದು ಶ್ರೀರಾಮಕೃಷ್ಣರಿಗೆ ಹೇಳುತ್ತಿದ್ದಳು. ಅದನ್ನು ಕೇಳಿ ಶ್ರೀರಾಮಕೃಷ್ಣರು ಹೇಳುತ್ತಿದ್ದರು : "ದಿವ್ಯ ದರ್ಶನಗಳ ವಿಷಯವನ್ನು ಯಾರಿಗೂ ಹೇಳಬಾರದು, ಹಾಗೆ ಮಾಡಿದರೆ ಮತ್ತೆ ಆಗುವುದಿಲ್ಲ." ಇದನ್ನು ಕೇಳಿ ಗೋಪಾಲನ ತಾಯಿಯು ಒಂದು ದಿವಸ ಹೇಳಿದಳು: "ಏಕೆ, ಅವೆಲ್ಲ ನಿನ್ನ ದರ್ಶನದ ವಿಚಾರವೇ. ನಿನಗೂ ಹೇಳಬಾರದೇನು ?" ಶ್ರೀರಾಮಕೃಷ್ಣರು : "ಇಲ್ಲಿಯ ದರ್ಶನ ವಾದರೂ ನನಗೆ ಹೇಳಬಾರದು." ಗೋಪಾಲನ ತಾಯಿ "ಹೌದೇ" ಎಂದಳು. ಅಂದಿ ನಿಂದ ಅವಳು ದರ್ಶನಗಳ ವಿಷಯವನ್ನು ಯಾರಿಗೂ ಹೆಚ್ಚಾಗಿ ಹೇಳುತ್ತಿರಲಿಲ್ಲ. ಸರಳ ಸ್ವಭಾವದ ಗೋಪಾಲನ ತಾಯಿಯು ಶ್ರೀರಾಮಕೃಷ್ಣರು ಏನು ಹೇಳಿದರೂ ಅದರಲ್ಲಿ ವಿಶ್ವಾಸವಿರಿಸುತ್ತಿದ್ದಳು. ನಾವುಗಳಾದರೋ ಸಂಶಯಾತ್ಮರು. ನಮ್ಮ ಇಡೀ ಜೀವನವೇ ಅವರ ಮಾತುಗಳನ್ನು ಪರೀಕ್ಷಿಸುವುದರಲ್ಲಿ ಕಳೆದು ಹೋಯಿತು. ಅವನ್ನು ಜೀವನದಲ್ಲಿ ಅಳವಡಿಸಿ ಅದರ ಫಲವನ್ನು ಅನುಭವಿಸುವ ಭಾಗ್ಯ ನಮಗಿಲ್ಲವಾಯಿತು.

20. ಒಂದು ದಿನ ಗೋಪಾಲನ ತಾಯಿಯು ಮತ್ತು ನರೇಂದ್ರನಾಥ ಇಬ್ಬರೂ ದಕ್ಷಿಣೇಶ್ವರದಲ್ಲಿದ್ದರು. ನರೇಂದ್ರನಾಥನಿಗೆ ಆಗಲೂ ಬ್ರಹ್ಮಸಮಾಜದ ನಿರಾಕಾರ ಸತ್ಯ ದಲ್ಲಿಯೇ ಹೆಚ್ಚು ವಿಶ್ವಾಸ, ಮೂರ್ತಿ ಪೂಜೆ ಎಂದರೆ ಆಗುತ್ತಿರಲಿಲ್ಲ ಅವನಿಗೆ. ಆದರೆ ಮೂರ್ತಿಪೂಜೆಯ ಮೂಲಕವೂ ಮುಂದೆ ಎಲ್ಲಾ ಭೂತಗಳಲ್ಲಿರುವ ನಿರಾಕಾರ ಸತ್ಯವನ್ನು ಪಡೆಯಬಹುದು ಎಂಬ ನಂಬಿಕೆ ಆಗ ಅವನಲ್ಲಿ ಉಂಟಾಗುತ್ತಿತ್ತು. ಶ್ರೀರಾಮಕೃಷ್ಣರು ಹಾಸ್ಯಪ್ರಿಯರು. ಒಂದು ಕಡೆ ಸರ್ವಗುಣಗಳಿಂದ ಕೂಡಿದ ಪಂಡಿತನೂ, ಮೇಧಾ ವಿಯೂ, ವಿಚಾರ ಪ್ರಿಯನೂ, ಭಗವದ್ಭಕ್ತನೂ ಆದ ನರೇಂದ್ರನಾಥ. ಮತ್ತೊಂದು ಕಡೆ ದೀನ ದರಿದ್ರಳಾದ ನಾಮಜಪವನ್ನಾಶ್ರಯಿಸಿಯೇ ಭಗವಂತನನ್ನು ಪಡೆದ ಸರಳ ವಿಶ್ವಾಸಿ ಯಾದ ಗೋಪಾಲನ ತಾಯಿ, ಅವಳು ವಿದ್ಯಾಭ್ಯಾಸವಿಲ್ಲದವಳು. ಜ್ಞಾನ ವಿಚಾರವನ್ನೇ ಅರಿಯದವಳು. ಇವರಿಬ್ಬರನ್ನು ಒಟ್ಟಿಗೆ ಸೇರಿಸಿ ಶ್ರೀರಾಮಕೃಷ್ಣರು ತಮಾಷೆ ನೋಡ ಬೇಕೆಂದಿದ್ದರು. ಗೋಪಾಲನ ತಾಯಿಯು ಹೇಗೆ ಬಾಲಗೋಪಾಲನ ದರ್ಶನ ಪಡೆದಳು, ಅದುವರೆಗೆ ತನಗಾದ ದರ್ಶನಗಳು, ಅವನ ಲೀಲಾವಿಲಾಸ, ಎಲ್ಲವನ್ನೂ ನರೇಂದ್ರನಿಗೆ ವಿವರಿಸಬೇಕೆಂದು ಶ್ರೀರಾಮಕೃಷ್ಣರು ಅವಳಿಗೆ ಹೇಳಿದರು. ಗೋಪಾಲನ ತಾಯಿಯು ಕೇಳಿದಳು: "ಅದರಿಂದೇನೂ ದೋಷವಾಗುವುದಿಲ್ಲವೇ, ಗೋಪಾಲ?" ಶ್ರೀರಾಮಕೃಷ್ಣರು ಆಶ್ವಾಸನೆ ನೀಡಿದ ಮೇಲೆ ಗೋಪಾಲನ ತಾಯಿಯು ಕಂಬನಿ ಸುರಿಸುತ್ತಾ ಗದ್ಗದಕಂಠ ದಿಂದ ಮೊದಲಿನಿಂದ ಎರಡು ತಿಂಗಳವರೆಗೆ ತಾನು ಪಡೆದ ದರ್ಶನಗಳನ್ನೆಲ್ಲ ಆದ್ಯಂತ

ವಾಗಿ ಹೇಳತೊಡಗಿದಳು. ಗೋಪಾಲನು ಅವಳ ಮಡಿಲಿನಲ್ಲಿ ಕುಳಿತು ಹೆಗಲ ಮೇಲೆ ತಲೆಯಿಟ್ಟು ಕಾಮಾರಹಾಟಿಯಿಂದ ದಕ್ಷಿಣೇಶ್ವರಕ್ಕೆ ಅವಳ ಜೊತೆ ಬಂದದ್ದು, ಅವನ ನೇರಳೇ ಬಣ್ಣದ ಎರಡು ಪಾದಗಳು ಅವಳ ಎದೆಯ ಮೇಲೆ ನೇತಾಡುತ್ತಿದ್ದುದು ಸ್ಪಷ್ಟ ವಾಗಿ ಕಂಡದ್ದು, ಆಗಾಗ ಶ್ರೀರಾಮಕೃಷ್ಣರ ದೇಹವನ್ನು ಪ್ರವೇಶಿಸಿ ಮತ್ತೆ ಹೊರ ಬಂದು ಅವಳ ಹತ್ತಿರ ಹೋಗುತ್ತಿದ್ದುದು, ಮಲಗುವ ಸಮಯದಲ್ಲಿ ದಿಂಬಿಲ್ಲದೆ ಅವನು ಗೋಣಗುಟ್ಟುತ್ತಿದ್ದುದು, ಅಡುಗೆಗೆ ಅವನು ಸೌದೆಯನ್ನು ಸಂಗ್ರಹಿಸುತ್ತಿದ್ದುದು, ತಿಂಡಿ ಗಾಗಿ ಅವನು ಪೀಡಿಸುತ್ತಿದ್ದುದು—ಇವೆಲ್ಲವನ್ನೂ ಸವಿಸ್ತಾರವಾಗಿ ವಿವರಿಸಿದಳು. ಹೇಳುತ್ತಾ ಹೇಳುತ್ತಾ ಭಾವವಿಹ್ವಲಳಾಗಿ ಅವಳು ಗೋಪಾಲರೂಪಿ ಭಗವಂತನ ದರ್ಶನ ವನ್ನು ಮತ್ತೆ ಪಡೆಯತೊಡಗಿದಳು. ನರೇಂದ್ರನು ಹೊರನೋಟಕ್ಕೆ ವಿಚಾರಪರನಾದರೂ ಒಳಗಡೆ ಭಕ್ತಿಪ್ರೇಮದಿಂದ ತುಂಬಿಹೋಗಿದ್ದನು. ಆ ವೃದ್ಧೆಯ ಭಾವಾವಸ್ಥೆ, ದರ್ಶನ ಗಳ ವಿಷಯವನ್ನು ಕೇಳಿ ಅವನಿಗೆ ಕಣ್ಣೀರು ಸುರಿಸದೆ ಇರಲಾಗಲಿಲ್ಲ. ಆ ವೃದ್ಧೆಯು ಇವನ್ನೆಲ್ಲ ಹೇಳುತ್ತ ಮಧ್ಯೆ ಮಧ್ಯೆ ನರೇಂದ್ರನನ್ನು ವಿಚಾರಿಸುತ್ತಿದ್ದಳು : "ಮಗೂ ನೀವೆಲ್ಲ ಪಂಡಿತರು, ಬುದ್ಧಿವಂತರು. ನಾನು ದೀನದರಿದ್ರಳು. ನನಗೇನೂ ತಿಳಿಯದು. ಏನೂ ಅರ್ಥವಾಗದು. ನೀವು ಹೇಳಿ, ಇವೆಲ್ಲ ಸತ್ಯವೇ ಮಿಥ್ಯವೇ ?" ನರೇಂದ್ರನಾಥನು ಮತ್ತೆ ಮತ್ತೆ "ಇಲ್ಲ ತಾಯಿ, ನೀನು ಏನೇನು ನೋಡಿದ್ದೀಯೋ ಅವೆಲ್ಲ ಸತ್ಯ" ಎಂದು ಆಶ್ವಾಸನೆ ನೀಡುತ್ತಿದ್ದನು. ಗೋಪಾಲನ ತಾಯಿಯು ನರೇಂದ್ರನಾಥನನ್ನು ಆ ರೀತಿ ಪ್ರಶ್ನಿಸುವುದಕ್ಕೆ ಕಾರಣ ಆಗ ಅವಳು ಹಿಂದಿನಂತೆ ಯಾವಾಗಲೂ ಗೋಪಾಲನ ದರ್ಶನ ವನ್ನು ಪಡೆಯುತ್ತಿರಲಿಲ್ಲವಾದ್ದರಿಂದ ಇರಬಹುದು.

21. ಈ ಸಮಯದಲ್ಲಿ ಶ್ರೀರಾಮಕೃಷ್ಣರು ಒಂದು ದಿನ ರಾಖಾಲನನ್ನು ಕರೆದು ಕೊಂಡು ಕಾಮಾರಹಾಟಿಗೆ ಹೋದರು. ವೇಳೆ ಹತ್ತು ಘಂಟೆ ಇರಬಹುದು. ತನ್ನ ಕೈಯಿಂದ ಅಡಿಗೆ ಮಾಡಿ ಶ್ರೀರಾಮಕೃಷ್ಣರಿಗೆ ಉಣಿಸಬೇಕೆಂದು ಗೋಪಾಲನ ತಾಯಿಯ ವಿಶೇಷ ಇಚ್ಛೆಯಾಗಿತ್ತು. ಶ್ರೀರಾಮಕೃಷ್ಣರು ಬಂದದ್ದರಿಂದ ಅವಳ ಆನಂದಕ್ಕೆ ಪಾರವೇ ಇರಲಿಲ್ಲ. ಇದ್ದ ತಿಂಡಿಯನ್ನೆಲ್ಲ ಸಂಗ್ರಹಿಸಿ ಶ್ರೀರಾಮಕೃಷ್ಣರಿಗೆ ಕೊಟ್ಟಳು. ಅನಂತರ ಬಾಬುಗಳ ಬೈಠಕ್‌ಖಾನೆಯ ಕೋಣೆಯಲ್ಲಿ ಒಂದು ಒಳ್ಳೆಯ ಜಮಖಾನ ಹಾಸಿ ಅವ ರನ್ನು ಕೂರಿಸಿದಳು. ಈಗ ಸೊಂಟಕಟ್ಟಿ ಅಡುಗೆ ಶುರು ಮಾಡಿದಳು. ಭಿಕ್ಷೆ ಗಿಕ್ಷೆ ಮಾಡಿ ನಾನಾ ಬಗೆಯ ವಸ್ತುಗಳನ್ನು ಸಂಗ್ರಹಿಸಿದ್ದಳು. ಅವಳು ನಾನಾ ಬಗೆಯ ಪದಾರ್ಥ ಗಳನ್ನು ತಯಾರಿಸಿ ಶ್ರೀರಾಮಕೃಷ್ಣರಿಗೆ ಮನಸ್ತೃಪ್ತಿಯಾಗುವಂತೆ ಉಣಿಸಿದಳು. ಅನಂತರ ತನ್ನ ಹಾಸಿಗೆಯ ಮೇಲೆ ಒಂದು ಶುದ್ಧಗೊಳಿಸಿದ ಬಟ್ಟೆಯನ್ನು ಹಾಸಿ ಅವರಿಗೆ ವಿಶ್ರ ಮಿಸಲು ಹೇಳಿದಳು. ರಾಖಾಲನು ಅವರ ಪಕ್ಕದಲ್ಲಿಯೇ ಮಲಗಿದನು. ಏಕೆಂದರೆ ಶ್ರೀರಾಮಕೃಷ್ಣರು ಅವನನ್ನು ತಮ್ಮ ಮಗುವೆಂದೇ ತಿಳಿದು ಅದರಂತೆಯೇ ನೋಡಿ ಕೊಳ್ಳುತ್ತಿದ್ದರು. ಆ ಸಂದರ್ಭದಲ್ಲಿ ಶ್ರೀರಾಮಕೃಷ್ಣರಿಗೆ ಒಂದು ವಿಚಿತ್ರ ದೃಶ್ಯ ಕಣ್ಣಿಗೆ ಬಿತ್ತು. ಇದನ್ನು ನಾವು ಶ್ರೀರಾಮಕೃಷ್ಣರ ಬಾಯಿಂದಲೇ ಕೇಳಿರುವುದರಿಂದ ಇಲ್ಲಿ

ಪ್ರಸ್ತುತಪಡಿಸಲು ನಾವು ಹಿಂಜರಿಯುವುದಿಲ್ಲ. ಶ್ರೀರಾಮಕೃಷ್ಣರಿಗೆ ಇಡೀ ಹಗಲು ಮತ್ತು ರಾತ್ರಿ ಸ್ವಲ್ಪವೇ ನಿದ್ರೆ ಬರುತ್ತಿತ್ತು. ಅವರು ಹಾಗೆಯೇ ಮಲಗಿಕೊಂಡಿದ್ದರು. ರಾಖಾಲನು ಪಕ್ಕದಲ್ಲಿ ನಿದ್ರೆ ಮಾಡುತ್ತಿದ್ದನು. ಶ್ರೀರಾಮಕೃಷ್ಣರು ಹೇಳುತ್ತಾರೆ : "ಆಗ ಒಂದು ಕೆಟ್ಟ ವಾಸನೆ ಬಂತು. ಕೊಠಡಿಯ ಮೂಲೆಯಲ್ಲಿ ಎರಡು ಮೂರ್ತಿಗಳನ್ನು ಕಂಡೆ, ಅವರು ನೋಡುವುದಕ್ಕೆ ಭೀಭತ್ಸವಾಗಿದ್ದರು. ಅವರ ಹೊಟ್ಟೆಗಳಿಂದ ಕರುಳುಗಳು ನೇತಾಡುತ್ತಿದ್ದವು. ಅವರ ಮುಖಗಳು, ಕೈಕಾಲುಗಳು ವೈದ್ಯಕೀಯ ಕಾಲೇಜಿನಲ್ಲಿಟ್ಟಿರುವ ಅಸ್ಥಿಪಂಜರಗಳಂತೆಯೇ ಕಾಣುತ್ತಿದ್ದವು. ಅವರು ನಮ್ರತೆಯಿಂದ ನನಗೆ ಹೇಳಿದರು: 'ನೀನೇಕೆ ಇಲ್ಲಿದ್ದೀಯೆ ? ಈ ಜಾಗದಿಂದ ಹೊರಟುಹೋಗು. ನಿನ್ನನ್ನು ನೋಡಿ ನಮಗೆ ತುಂಬಾ ವೇದನೆಯಾಗುತ್ತದೆ (ತಮ್ಮ ಅವಸ್ಥೆಯನ್ನು ನೆನಸಿಕೊಂಡು ಇರ ಬಹುದು.)" ಈ ರೀತಿ ಅವರು ಒಂದು ಕಡೆ ಬೇಡಿಕೊಳ್ಳುತ್ತಿದ್ದಾರೆ, ಮತ್ತೊಂದು ಕಡೆ ರಾಖಾಲನು ನಿದ್ರಿಸುತ್ತಿದ್ದಾನೆ. ಅವರಿಗೆ ಕಷ್ಟವಾಗುವುದನ್ನು ಕಂಡು ಸಣ್ಣ ಚೀಲ ಮತ್ತು ಟವಲನ್ನು ಮೇಲೆತ್ತಿಕೊಂಡು ಎದ್ದೆ. ಅಷ್ಟರಲ್ಲಿ ರಾಖಾಲನು ಎಚ್ಚರಗೊಂಡು ಎಲ್ಲಿಗೆ ಹೋಗುತ್ತಿರುವಿರಿ ಎಂದು ಕೇಳಿದ. ಆಮೇಲೆ ಹೇಳುತ್ತೇನೆ ಎಂದು ಹೇಳಿ ಅವನ ಕೈ ಯನ್ನು ಹಿಡಿದು ಹೊರಗೆ ಕರೆದುಕೊಂಡು ಬಂದೆ. ಬ್ರಾಹ್ಮಣಿಯು ಆಗತಾನೇ ಊಟ ಮುಗಿಸಿದ್ದಳು. ಅವಳಿಗೆ ತಿಳಿಸಿ ನೇರವಾಗಿ ಹೋಗಿ ದೋಣಿಯಲ್ಲಿ ಕುಳಿತು ಅನಂತರ ರಾಖಾಲನಿಗೆ ಹೇಳಿದೆ. ಅಲ್ಲಿ ಎರಡು ಭೂತಗಳಿವೆ. ಕಾಮಾರಹಾಟಿಯ ಗಿರಣಿಯು ಅಲ್ಲಿಯೇ ತೋಟದ ಹತ್ತಿರವಿದೆ. ಆ ಎರಡು ಭೂತಗಳು ಯುರೋಪಿಯನ್ನರು ಉಂಡು ಬಿಸಾಕಿದ ಮೂಳೆಗಳನ್ನು ಆಘ್ರಾಣಿಸುತ್ತಾ (ಆಘ್ರಾಣವೇ ಅವರ ಊಟ) ಆ ಕೊಠಡಿ ಯಲ್ಲಿ ವಾಸಿಸುತ್ತವೆ. ಈ ವಿಷಯವನ್ನು ನಾನು ಬ್ರಾಹ್ಮಣಿಗೆ, ಅವಳಿಗೆ ಭಯವಾಗುವು ದೆಂದು, ತಿಳಿಸಲಿಲ್ಲ. ಏಕೆಂದರೆ ಅವಳು ಆ ಮನೆಯಲ್ಲಿ ಯಾವಾಗಲೂ ವಾಸಿಸಬೇಕಲ್ಲ?"

* * *

22. ಕಲಕತ್ತೆಯ ಪ್ರಸಿದ್ಧ ಶ್ರೀಮಂತನಾಗಿದ್ದ ಮತಿಲಾಲ್ ಸೀಲನ ತೋಟದ ಮುಂದೆಯೆ ಮತಿಝಿಲ್ ಎಂಬ ಕೊಳವಿದೆ. ಅದು ಗಂಗೆಗೆ ಸಮಾನಾಂತರವಾಗಿ ಹೋಗುವ ಬಾರಾನಗರ್ ಬಜಾರ್ ರಸ್ತೆಯ ಪಕ್ಕದಲ್ಲಿರುವುದು. ಈ ಜಾಗದ ಪೂರ್ವ ದಿಕ್ಕಿಗೆ ಕೃಷ್ಣ ಗೋಪಾಲ್ ಘೋಷನ ಮನೆಯಿದೆ. ಅಲ್ಲಿಯೇ ಕೊಳದ ಉತ್ತರ ಭಾಗವು ರಸ್ತೆಯನ್ನು ಸ್ಪರ್ಶಿಸುವುದು. ಇದೇ ತೋಟದಲ್ಲಿಯೇ ಶ್ರೀರಾಮಕೃಷ್ಣರು ೧೮೮೫ ಡಿಸೆಂಬರ್‌ನಿಂದ ೧೮೮೬ ಆಗಸ್ಟ್‌ರವರೆಗೆ ಎಂಟು ತಿಂಗಳು ವಾಸಿಸಿದ್ದರು. ಇದನ್ನೇ ಕಾಶೀ ಪುರ್ ಉದ್ಯಾನ ಎಂದು ಕರೆಯುವುದು. ಇದೇ ಸ್ಥಳವೇ ಭಕ್ತರಿಗೆ ತೀವ್ರ ದುಃಖದಾಯ ಕವೂ ಹೌದು, ಆನಂದದಾಯಕವೂ ಹೌದು. ಶ್ರೀರಾಮಕೃಷ್ಣರು ಆಗ ರೋಗ ಶಯ್ಯೆ ಯಲ್ಲಿದ್ದರು, ಆನಂದದಾಯಕ ಎಂದು ಹೇಗೆ ಹೇಳುತ್ತೀರಿ ಎಂದು ನೀವು ಕೇಳಬಹುದು. ಆಪಾತತಃ ಅವರು ರೋಗಶಯ್ಯೆಯಲ್ಲಿದ್ದರು ಎನ್ನಬಹುದು. ಆದರೆ ಶ್ರೀರಾಮಕೃಷ್ಣರ ದಿವ್ಯಶರೀರದ ಆ ಕಾಯಿಲೆಯು ಹೇಗೆ ಭಕ್ತರೆಲ್ಲರನ್ನೂ ಪ್ರೀತಿಯ ಬಂಧನದಿಂದ ಒಂದು

ಗೂಡಿಸಿತು ಎಂಬುದನ್ನು ಮಾತಿನ ಮೂಲಕ ವ್ಯಕ್ತಪಡಿಸಲಾಗುವುದಿಲ್ಲ. ಅದು ಭಕ್ತರನ್ನು ಬೇರೆಬೇರೆ ವರ್ಗಗಳನ್ನಾಗಿ ವಿಂಗಡಿಸಿತು. ಕೆಲವರು ಅಂತರಂಗ ಭಕ್ತರು, ಕೆಲವರು ಬಹಿರಂಗ ಭಕ್ತರು, ಸಂನ್ಯಾಸೀ ಭಕ್ತರದೇ ಒಂದು ಗುಂಪು, ಗೃಹಸ್ಥರದೇ ಇನ್ನೊಂದು ಪಂಗಡ—ಹೀಗೆ ಭೇದವು ಸ್ಪಷ್ಟವಾಗತೊಡಗಿತು. ಮತ್ತೆ ಇಲ್ಲಿಯೆ ಎಲ್ಲರೂ ಒಂದೇ ಕುಟುಂಬಕ್ಕೆ ಸೇರಿದವರು ಎಂಬ ದೃಢ ವಿಶ್ವಾಸ ಬೇರೂರಿತು. ಇದಲ್ಲದೆ ಎಷ್ಟು ಜನರು ಒಂದು ಶ್ರೀರಾಮಕೃಷ್ಣರ ಅನುಗ್ರಹವನ್ನು ಪಡೆದು ಆಧ್ಯಾತ್ಮಿಕ ಬೆಳಕನ್ನು ಕಂಡರು ಎಂಬುದು ಎಣಿಕೆಗೆ ಮೀರಿದುದು. ಇಲ್ಲಿಯೇ ನರೇಂದ್ರನಾಥನು ತನ್ನ ಸಾಧನೆಯ ಫಲವಾಗಿ ನಿರ್ವಿಕಲ್ಪ ಸಮಾಧಿಯನ್ನು ಅನುಭವಿಸಿದನು. ಇಲ್ಲಿಯೇ ನರೇಂದ್ರನಿಂದ ಒಡಗೂಡಿದ ಹನ್ನೆರಡು ಜನ ಬಾಲಕ ಭಕ್ತರು ಶ್ರೀರಾಮಕೃಷ್ಣರ ಅಮೃತ ಹಸ್ತದಿಂದ ಕಾವಿಬಟ್ಟೆಯನ್ನು ಸ್ವೀಕರಿಸಿದುದು. ಇಲ್ಲಿಯೇ ೧೮೮೬ ಜನವರಿ ಒಂದನೇ ದಿನಾಂಕ ಮಧ್ಯಾಹ್ನ ತೋಟದಲ್ಲಿ ಭಕ್ತರೆಲ್ಲರ ಹೃದಯವನ್ನು ಸ್ಪರ್ಶಿಸಿ ಅವರಿಗೆ ನೇರ ಆಧ್ಯಾತ್ಮಿಕ ಜ್ಞಾನವನ್ನು ನೀಡಿದುದು. ದಕ್ಷಿಣೇಶ್ವರದಂತೆಯೇ ಇಲ್ಲಿಗೂ ಸ್ತ್ರೀ ಪುರುಷರಿಂದಾದಿಯಾಗಿ ಜನರ ಗುಂಪು ಬಂದು ಸೇರುತ್ತಿತ್ತು. ಇಲ್ಲಿಯೇ ಶ್ರೀಮಾತೆಯವರು ಅವರ ಆಹಾರ ತಯಾರಿಸುವುದೇ ಮುಂತಾದ ಗೃಹಕೃತ್ಯಗಳನ್ನು ಮಾಡುತ್ತಾ ಶ್ರೀರಾಮಕೃಷ್ಣರ ಸೇವೆಯಲ್ಲಿ ನಿರತರಾಗಿದ್ದರು. ಗೋಪಾಲನ ತಾಯಿ ಮತ್ತು ಇತರ ಸ್ತ್ರೀ ಭಕ್ತರೂ ಕೂಡ ಬಂದು ಶ್ರೀರಾಮಕೃಷ್ಣರ ಮತ್ತು ಅವರ ಭಕ್ತರ ಸೇವೆಯಲ್ಲಿ ಭಾಗಿಗಳಾದರು. ಅವರಲ್ಲಿ ಕೆಲವರು ಒಂದೆರಡು ರಾತ್ರಿಯೂ ತಂಗುತ್ತಿದ್ದರು. ಆದ್ದರಿಂದ ಕಾಶೀಪುರದಲ್ಲಿ ಈ ಎಲ್ಲ ಭಕ್ತರೂ ಬಂದು ಕೂಡುವುದನ್ನು ನೋಡಿದಾಗ ಜಗನ್ಮಾತೆಯೇ ಯಾವುದೋ ಒಂದು ಮಹೋದ್ದೇಶದ ಪೂರ್ತಿಗಾಗಿ ಶ್ರೀರಾಮಕೃಷ್ಣರ ಪುಣ್ಯದೇಹದಲ್ಲಿ ಕಾಯಿಲೆಯನ್ನು ಉಂಟುಮಾಡಿದಳು ಎನ್ನಿಸುತ್ತದೆ. ಇಲ್ಲಿ ಶ್ರೀರಾಮಕೃಷ್ಣರ ದಿವ್ಯಲೀಲೆಯನ್ನೂ, ಅವರ ಆನಂದಮಯ ಮೂರ್ತಿಯನ್ನೂ, ಅವರ ಅದ್ಭುತ ಶಕ್ತಿಯ ಆವಿರ್ಭಾವವನ್ನೂ, ಹೊಸ ಹೊಸ ಭಕ್ತರು ಅವರೆಡೆಗೆ ಬರುವುದನ್ನೂ ನೋಡಿ ಅನೇಕ ಭಕ್ತರು ಶ್ರೀರಾಮಕೃಷ್ಣರ ಕಾಯಿಲೆ ಕೇವಲ ತೋರಿಕೆಗೆ ಮಾತ್ರ, ಜನರ ಒಳ್ಳೆಯದಕ್ಕಾಗಿಯೇ ಈ ಕಾಯಿಲೆಯನ್ನು ಉಂಟುಮಾಡಿಕೊಂಡಿರುವರು, ತಮಗೆ ಇಷ್ಟ ಬಂದಾಗ ಆ ಕಾಯಿಲೆಯನ್ನು ದೂರಗೊಳಿಸುವರು ಎಂದು ಭಾವಿಸಿದ್ದರು.

23. ಶ್ರೀರಾಮಕೃಷ್ಣರು ಕಾಶೀಪುರದಲ್ಲಿ ಇದ್ದಾರೆ. ಬಾರ್ಲಿ, ಸಜ್ಜಿಗೆ, ಶ್ಯಾವಿಗೆ ಮುಂತಾದುವುಗಳಿಂದ ತಯಾರಿಸಿದ ದ್ರವಾಹಾರವೇ ಅವರ ದೈನಂದಿನ ಊಟ, ಅವರು ಒಂದು ದಿನ ಜೆಡೋರಿ ಪುಡಿ ಬೆರೆಸಿದ ದಪ್ಪಹಾಲನ್ನು ಕುಡಿಯಬೇಕೆಂದು ಬಯಸಿದರು. ಕಲ್ಕತ್ತೆಯಲ್ಲಿ ಸಾಮಾನ್ಯವಾಗಿ ಶ್ರೀಮಂತರ ಮನೆಯಲ್ಲಿ ಅತಿಥಿಗಳಿಗೆ ಇದನ್ನು ಕೊಡುತ್ತಾರೆ. ಯಾರೂ ಅದಕ್ಕೆ ಆಕ್ಷೇಪಣೆ ಮಾಡಲಿಲ್ಲ. ಏಕೆಂದರೆ ಸಜ್ಜಿಗೆ ಅಥವಾ ಬಾರ್ಲಿಯನ್ನು ಹಾಲಿನಲ್ಲಿ ಬೇಯಿಸಿ ಕೊಡುತ್ತಿರುವಾಗ ಜೆಡೋರಿ ಪುಡಿಯನ್ನು ಬೆರಸಿಕೊಟ್ಟರೆ ಏನೂ ಆಗಲಿಕ್ಕಿಲ್ಲ ಎಂದು ಭಾವಿಸಿದರು. ವೈದ್ಯರೂ ಇದಕ್ಕೆ ಒಪ್ಪಿದರು. ಆದ್ದರಿಂದ

ಸ್ವಾಮಿ ಯೋಗಾನಂದರು ಮುಂದಿನ ದಿನ ಬೆಳಗ್ಗೆ ಬರುವಾಗ ಆ ರೀತಿಯ ದಪ್ಪ ಹಾಲನ್ನು ಕೊಂಡುಕೊಂಡು ಬರಬೇಕೆಂದು ಸ್ಥಿರವಾಯಿತು.

ಯೋಗಾನಂದರು ಸರಿಯಾದ ಸಮಯಕ್ಕೆ ಹೊರಟರು. ಅವರು ದಾರಿಯಲ್ಲಿ ಭಾವಿಸಿದರು ಮಾರುಕಟ್ಟೆಯಲ್ಲಿ ಸಿಗುವ ದಪ್ಪ ಹಾಲಿಗೆ ಏನೇನೋ ಬೆರಸಿರುತ್ತಾರೆ, ಅದನ್ನು ತೆಗೆದುಕೊಂಡರೆ ಕಾಯಿಲೆ ವೃದ್ಧಿಯಾಗುವುದಿಲ್ಲವೇ ಎಂದು. ಭಕ್ತರೆಲ್ಲರಿಗೂ ಶ್ರೀರಾಮಕೃಷ್ಣರು ಪ್ರಾಣದ ಪ್ರಾಣವಾಗಿದ್ದರು. ಅವರು ಕಾಯಿಲೆ ಮಲಗಿದಂದಿನಿಂದ ಎಲ್ಲರ ಭಾವನೆಯೂ ಒಂದೇ ಆಗಿತ್ತು. ಯೋಗಾನಂದರು ಈ ರೀತಿ ಭಾವಿಸುವುದಕ್ಕೆ ಅದೇ ಕಾರಣವಾಗಿತ್ತು. ಅವರು ಮತ್ತೆ ಭಾವಿಸಿದರು : "ನಾನು ಶ್ರೀರಾಮಕೃಷ್ಣರನ್ನು ಕೇಳಲಿಲ್ಲ. ಯಾರಾದರೂ ಭಕ್ತರ ಮನೆಯಿಂದ ಅದನ್ನು ತಯಾರಿಸಿ ತೆಗೆದುಕೊಂಡು ಹೋದರೆ ಅವರು ಕೋಪಗೊಳ್ಳುವುದಿಲ್ಲವೇ ?" ಹೀಗೆಲ್ಲಾ ಭಾವಿಸುತ್ತಾ ಯೋಗಾನಂದರು ಬಲರಾಮನ ಮನೆಗೆ ಬಂದರು. ಅಲ್ಲಿ ಭಕ್ತರು ಅವರು ಬಂದ ಕಾರಣವನ್ನು ವಿಚಾರಿಸಿದಾಗ ಅವರಿಗೆ ಎಲ್ಲವನ್ನೂ ತಿಳಿಸಿದರು. ಆಗ ಭಕ್ತರು ಹೇಳಿದರು : "ಅಂಗಡಿಯ ಹಾಲನ್ನು ಏಕೆ ಕೊಂಡುಕೊಳ್ಳಬೇಕು ? ನಾವೇ ಅದನ್ನು ತಯಾರಿಸಿ ನಿಮಗೆ ಕೊಡುತ್ತೇವೆ. ಆದರೆ ಆಗಲೇ ಅದನ್ನು ತೆಗೆದುಕೊಂಡು ಹೋಗಲು ಆಗುವುದಿಲ್ಲ. ಏಕೆಂದರೆ ಅದನ್ನು ತಯಾರಿಸುವುದಕ್ಕೆ ಸಮಯ ಹಿಡಿಯುತ್ತದೆ. ನೀನು ಈಗ ಇಲ್ಲಿಯೇ ಊಟ ಮಾಡು. ಅಷ್ಟು ಹೊತ್ತಿಗೆ ತಯಾರಿಸಿಬಿಡುತ್ತೇವೆ. ಮೂರು ಘಂಟೆಯ ಹೊತ್ತಿಗೆ ತೆಗೆದುಕೊಂಡು ಹೋಗು." ಯೋಗಾನಂದರು ಅದಕ್ಕೆ ಒಪ್ಪಿದರು. ಸುಮಾರು ನಾಲ್ಕು ಘಂಟೆಯ ಹೊತ್ತಿಗೆ ಆ ಹಾಲನ್ನು ತೆಗೆದುಕೊಂಡು ಕಾಶೀಪುರಕ್ಕೆ ಬಂದರು.

ಈ ಕಡೆ ಶ್ರೀರಾಮಕೃಷ್ಣರು ಮಧ್ಯಾಹ್ನವೇ ಅದನ್ನು ಸ್ವೀಕರಿಸಬೇಕೆಂದು ಭಾವಿಸಿ ಬಹಳ ಹೊತ್ತು ನಿರೀಕ್ಷಿಸುತ್ತಿದ್ದರು. ಕೊನೆಗೆ ದೈನಂದಿನ ಆಹಾರವನ್ನೇ ಸ್ವೀಕರಿಸಿದರು. ಅನಂತರ ಯೋಗಾನಂದರು ಬಂದ ಮೇಲೆ ಎಲ್ಲವನ್ನೂ ಕೇಳಿ ಕೋಪದಿಂದ ಅವರಿಗೆ ಹೇಳಿದರು : "ನಾನು ಅಂಗಡಿಯಿಂದ ದಪ್ಪಹಾಲನ್ನು ತರಲು ಹೇಳಿದ್ದು. ನನಗೆ ಅಂಗಡಿಯ ಹಾಲನ್ನು ಕುಡಿಯಬೇಕೆಂಬ ಇಚ್ಛೆ. ನೀನೇಕೆ ಭಕ್ತರ ಮನೆಗೆ ಹೋಗಿ ಅವರಿಗೆ ಕಷ್ಟಕೊಟ್ಟು ಇದನ್ನು ತೆಗೆದುಕೊಂಡು ಬಂದೆ ? ಮತ್ತೆ ಅದು ತುಂಬಾ ದಪ್ಪ. ಅದನ್ನು ತಿಂದರೆ ಆಗುವುದೇ ನನಗೆ ? ನಾನದನ್ನು ಸ್ವೀಕರಿಸುವುದಿಲ್ಲ." ನಿಜವಾಗಿ ಅವರು ಅದನ್ನು ಮುಟ್ಟಲೇ ಇಲ್ಲ. ಅದನ್ನು ಗೋಪಾಲನ ತಾಯಿಗೆ ಕೊಡಬೇಕೆಂದು ಶ್ರೀಮಾತೆಯವರಿಗೆ ತಿಳಿಸಿ ಹೀಗೆ ಹೇಳಿದರು : "ಇದು ಭಕ್ತರು ಕೊಟ್ಟ ವಸ್ತು. ಅವಳ ಒಳಗೆ ಗೋಪಾಲನಿದ್ದಾನೆ. ಅವಳು ತಿಂದರೆ ನಾನು ತಿಂದಂತೆಯೆ ಆಗುವುದು."

* * *

24. ಶ್ರೀರಾಮಕೃಷ್ಣರು ಕಣ್ಮರೆಯಾದ ಮೇಲೆ ಗೋಪಾಲನ ತಾಯಿಯ ಅಶಾಂತಿಗೆ ಮಿತಿಯೇ ಇರಲಿಲ್ಲ. ಅನೇಕ ದಿನಗಳು ಅವಳು ಕಾಮಾರಹಾಟಿಯನ್ನು ಬಿಟ್ಟು ಕದಲಲೇ ಇಲ್ಲ. ಒಬ್ಬಳೇ ಏಕಾಂಗಿಯಾಗಿ ಇರುತ್ತಿದ್ದಳು. ಮುಂದೆ ಅವಳಿಗೆ ಶ್ರೀರಾಮ

ಕೃಷ್ಣರ ದರ್ಶನಾದಿಗಳು ಆದಮೇಲೆ ಮನಃಶಾಂತಿ ಉಂಟಾಯಿತು. ಶ್ರೀರಾಮಕೃಷ್ಣರ ದೇಹತ್ಯಾಗದ ನಂತರವೂ ಗೋಪಾಲನ ತಾಯಿಯು ಅವರ ದರ್ಶನಾದಿಗಳನ್ನು ಪಡೆಯುವ ಅನೇಕ ವಿಷಯಗಳನ್ನು ನಾವು ಕೇಳಿರುವೆವು. ಒಮ್ಮೆ ಗಂಗಾನದಿಯ ಆಚೆಯ ದಡದಲ್ಲಿ ಮಾಹೇಶನ ರಥಯಾತ್ರೆಯನ್ನು ನೋಡಲು ಹೋಗಿದ್ದಾಗ ಸರ್ವ ಭೂತಗಳಲ್ಲೂ ಗೋಪಾಲನ ದರ್ಶನ ಅವಳಿಗೆ ಆಗಿ ಅತ್ಯಾನಂದವನ್ನು ಅನುಭವಿಸಿದ್ದಳು. ಅವಳು ಹೇಳುತ್ತಿದ್ದಳು, "ಆಗ ರಥ, ರಥದ ಮೇಲಿದ್ದ ಜಗನ್ನಾಥ, ರಥವನ್ನು ಎಳೆಯುತ್ತಿದ್ದವರು, ಅಲ್ಲಿ ನೆರೆದಿದ್ದ ಜನ ಎಲ್ಲರೂ ಗೋಪಾಲನಾಗಿ ಕಾಣಿಸಿಕೊಂಡರು. ಬೇರೆ ಬೇರೆ ರೂಪಗಳಲ್ಲಿದ್ದರು ಅಷ್ಟೇ." ಹೀಗೆ ಭಗವಂತನ ವಿಶ್ವರೂಪ ದರ್ಶನದ ಆಭಾಸವನ್ನು ಪಡೆದು ಭಾವಾವೇಶದಲ್ಲಿ ಮೈ ಮರೆತಿದ್ದಳು. ಇದನ್ನು ತನ್ನ ಸ್ನೇಹಿತಳೊಬ್ಬಳಿಗೆ ವಿವರಿಸುತ್ತಾ ಹೇಳಿದಳು: "ಆಗ ನಾನು ನಾನಾಗಿರಲಿಲ್ಲ. ನಾನು ನರ್ತಿಸಿ ನಕ್ಕು ಒಂದು ಕುರುಕ್ಷೇತ್ರವನ್ನೇ ಸೃಷ್ಟಿಸಿದ್ದೆ."

25. ಅಂದಿನಿಂದ ಮನಸ್ಸಿನಲ್ಲಿ ಸ್ವಲ್ಪ ಅಶಾಂತಿ ಉಂಟಾದರೂ ಬರಾಹನಗರ ಮಠದ ಸಂನ್ಯಾಸೀ ಭಕ್ತರೆಡೆಗೆ ಬರುತ್ತಿದ್ದಳು. ಅಲ್ಲಿಗೆ ಬಂದ ಕೂಡಲೇ ಅವಳಿಗೆ ಶಾಂತಿ ದೊರಕುತ್ತಿತ್ತು. ಅವಳು ಮಠಕ್ಕೆ ಬಂದಾಗ ಶ್ರೀರಾಮಕೃಷ್ಣರಿಗೆ ನೈವೇದ್ಯಮಾಡಿ ಅವರಿಗೆ ಉಣಿಸಲು ಸಂನ್ಯಾಸಿಗಳು ಆಕೆಗೇ ಹೇಳುತ್ತಿದ್ದರು. ಗೋಪಾಲನ ತಾಯಿಯೂ ಕೂಡ ಸಂತೋಷದಿಂದ ಒಂದೆರಡು ಬಗೆಯ ಪದಾರ್ಥಗಳನ್ನು ತಾನೇ ತಯಾರಿಸಿ ಶ್ರೀರಾಮಕೃಷ್ಣರಿಗೆ ಅರ್ಪಿಸುತ್ತಿದ್ದಳು. ಮುಂದೆ ಮಠವು ಆಲಂಬಜಾರಿಗೆ ಸ್ಥಳಾಂತರಗೊಳ್ಳಲು, ಅನಂತರ ನೀಲಾಂಬರ್ ಮನೆಗೆ ಸ್ಥಳಾಂತರಗೊಂಡ ಮೇಲೂ ಗೋಪಾಲನ ತಾಯಿಯು ಅಲ್ಲಿಗೆ ಹೋಗುತ್ತಿದ್ದಳು. ಇಡೀ ದಿನ ಇಲ್ಲಿ ಇದ್ದು ಆನಂದಿಸುತ್ತಿದ್ದಳು. ಅಪರೂಪಕ್ಕೆ ಒಮ್ಮೆ ರಾತ್ರಿಯೂ ತಂಗುತ್ತಿದ್ದಳು.

26. ಸಾರಾಬುಲ್, ಮ್ಯಾಕ್ಲಿಯೊಡ್ ಮತ್ತು ನಿವೇದಿತಾ ಇವರು ಗೋಪಾಲನ ತಾಯಿಯನ್ನು ನೋಡಲು ಕಾಮಾರಹಾಟಿಗೆ ಹೋಗಿದ್ದಾಗ ಅವಳ ಮಾತು, ಉಪಚಾರಗಳಿಂದ ಅತ್ಯಂತ ಸಂತೃಪ್ತರಾದರು. ಗೋಪಾಲನ ತಾಯಿಯು ಅವರಲ್ಲಿಯೂ ಗೋಪಾಲನಿರುವುದನ್ನು ಕಂಡಳು. ಪ್ರೀತಿಯಿಂದ ಅವರ ಗಲ್ಲವನ್ನು ಸ್ಪರ್ಶಿಸಿ ಚುಂಬಿಸಿದಳು. ಆದರದಿಂದ ಅವರನ್ನು ತನ್ನ ಹಾಸಿಗೆಯ ಮೇಲೆ ಕೂರಿಸಿ ಮಂಡಕ್ಕಿ, ತೆಂಗಿನ ಕಾಯಿ ಲಡ್ಡು ಇತ್ಯಾದಿಗಳನ್ನು ಕೊಟ್ಟಳು. ತನ್ನ ದರ್ಶನಗಳ ಬಗ್ಗೆಯೂ ಸ್ವಲ್ಪ ಅವರಿಗೆ ಹೇಳಿದಳು. ಪಾಶ್ಚಾತ್ಯ ಮಹಿಳೆಯರು ಆನಂದದಿಂದ ಅವಳು ಕೊಟ್ಟದ್ದನ್ನು ತಿಂದು ಅವಳ ಮಾತಿನ ಸವಿಯನ್ನು ಅನುಭವಿಸಿದರು. ಅಮೆರಿಕಕ್ಕೆ ತೆಗೆದುಕೊಂಡು ಹೋಗಲು ಸ್ವಲ್ಪ ಮಂಡಕ್ಕಿಯನ್ನು ಕೇಳಿ ಪಡೆದುಕೊಂಡರು.

* * *

27. ಗೋಪಾಲನ ತಾಯಿಯ ಅದ್ಭುತ ಜೀವನ ಕಥೆಯನ್ನು ಕೇಳಿ ನಿವೇದಿತಾ ಅತ್ಯಂತ ಪ್ರಭಾವಿತಳಾದಳು. ೧೯೦೪ರಲ್ಲಿ ಗೋಪಾಲನ ತಾಯಿಯು ಖಾಯಿಲೆ ಬಿದ್ದು

ನಿಷ್ಕ್ರಿಯಳಾದಾಗ ಅವಳನ್ನು ಬಲರಾಮ ಬಾಬುವಿನ ಮನೆಗೆ ಕರೆದುಕೊಂಡು ಬರಲಾಯಿತು. ಆಗ ಅವಳನ್ನು ತನ್ನ ಮನೆಯಲ್ಲಿ ಇರಿಸಿಕೊಳ್ಳುತೇನೆ ಎಂದು ನಿವೇದಿತಾ ಆಗ್ರಹಪಡಿಸಿದಳು. ಗೋಪಾಲನ ತಾಯಿಯು ಕೂಡ ನಿಸ್ಸಂಕೋಚವಾಗಿ ಒಪ್ಪಿಕೊಂಡು ನಿವೇದಿತಾಳ ಮನೆಗೆ ಹೋದಳು. ಏಕೆಂದರೆ ನಾವು ಮೊದಲೇ ಹೇಳಿರುವಂತೆ ಗೋಪಾಲನು ಎಲ್ಲಾ ಬಗೆಯ ಭೇದಗಳನ್ನೂ ಅವಳಿಂದ ತೆಗೆದು ಹಾಕಿದ್ದನು. ಇದಕ್ಕೆ ಸಂಬಂಧಿಸಿದ ಇನ್ನೊಂದು ಉದಾಹರಣೆ ನಮ್ಮ ನೆನಪಿಗೆ ಬರುತ್ತದೆ. ಒಮ್ಮೆ ದಕ್ಷಿಣೇಶ್ವರದಲ್ಲಿ ನರೇಂದ್ರನಾಥನು ಕಾಳಿಗೆ ನಿವೇದಿಸಿದ ಆಡಿನ ಮಾಂಸವನ್ನು ತಿಂದನು. ಅನಂತರ ಅವನು ಕೈತೊಳೆಯಲು ಹೋದಾಗ ಒಬ್ಬಳು ಸ್ತ್ರೀ ಭಕ್ತಳನ್ನು ಕರೆದು ಶ್ರೀರಾಮಕೃಷ್ಣರು ಆ ಜಾಗವನ್ನು ಶುದ್ಧಗೊಳಿಸಲು ಹೇಳಿದರು. ಗೋಪಾಲನ ತಾಯಿಯು ಅಲ್ಲೇ ನಿಂತಿದ್ದಳು. ಶ್ರೀರಾಮಕೃಷ್ಣರು ಹಾಗೆ ಹೇಳಿದ ಕೂಡಲೇ ಆ ಮಾಂಸದ ಮೂಳೆಗಳನ್ನೆಲ್ಲಾ ತೆಗೆದು ಹಾಕಿ ಆ ಜಾಗವನ್ನು ಚೆನ್ನಾಗಿ ಶುದ್ಧಗೊಳಿಸಿದಳು. ಶ್ರೀರಾಮಕೃಷ್ಣರು ಅದನ್ನು ನೋಡಿ ಆನಂದದಿಂದ ಹೇಳಿದರು : "ನೋಡು ನೋಡು, ದಿನಕಳೆದಂತೆಲ್ಲಾ ಎಷ್ಟು ಉದಾರಳಾಗುತ್ತಿದ್ದಾಳೆ." ಅಂದಿನಿಂದ ಗೋಪಾಲನ ತಾಯಿಯು ಸೋದರಿ ನಿವೇದಿತಾಳ ಮನೆಯಲ್ಲಿ ವಾಸಿಸತೊಡಗಿದಳು. ಸ್ವಾಮೀಜಿಯ ಆಧ್ಯಾತ್ಮಿಕ ಪುತ್ರಿಯಾದ ನಿವೇದಿತಾ ತನ್ನ ತಾಯಿಯೆಂಬಂತೆ ಅವಳ ಸೇವೆ ಮಾಡಿದಳು. ಅವಳ ಊಟಕ್ಕೆ ಹತ್ತಿರದ ಬ್ರಾಹ್ಮಣರ ಮನೆಯಲ್ಲಿ ವ್ಯವಸ್ಥೆ ಮಾಡಿದಳು. ಗೋಪಾಲನ ತಾಯಿಯು ಊಟದ ಸಮಯದಲ್ಲಿ ಪ್ರತಿದಿನ ಅಲ್ಲಿಗೆ ಹೋಗಿ ಸ್ವಲ್ಪ ಅನ್ನ ಸ್ವೀಕರಿಸುತ್ತಿದ್ದಳು. ರಾತ್ರಿಯ ಹೊತ್ತು ಆ ಮನೆಯವರೇ ಸ್ವಲ್ಪ ಲೂಚಿ ಮತ್ತು ಪಲ್ಯವನ್ನು ತಂದು ಕೊಡುತ್ತಿದ್ದರು. ಹೀಗೆ ಅವಳು ಅಲ್ಲಿ ಎರಡು ವರ್ಷ ಕಳೆದು ಗಂಗಾತೀರದಲ್ಲಿ ಪ್ರಾಣ ಬಿಟ್ಟಳು.

28. ಅವಳ ಕೊನೆಯ ದಿನಗಳಲ್ಲಿ ಹಿಂದೂ ಪದ್ಧತಿಯ ಪ್ರಕಾರ ಅವಳನ್ನು ಗಂಗಾತೀರಕ್ಕೆ ಕರೆದುಕೊಂಡು ಹೋದಾಗ ನಿವೇದಿತಾ ಅವಳ ಹಾಸಿಗೆಯನ್ನು ತನ್ನ ಕೈಯಿಂದಲೇ ಹೂವು, ಮಾಲೆ, ಗಂಧ ಇತ್ಯಾದಿಗಳಿಂದ ಅಲಂಕರಿಸಿದಳು. ಒಂದು ಭಜನೆಯ ವೃಂದವನ್ನು ಕರೆಸಿದಳು. ಕಣ್ಣೀರು ಸುರಿಸುತ್ತಾ ಬರಿಗಾಲಿನಲ್ಲಿ ಅವಳ ಜೊತೆ ಗಂಗಾತೀರಕ್ಕೆ ಹೋದಳು. ನಿವೇದಿತಾ ಗೋಪಾಲನ ತಾಯಿಯ ಜೊತೆ ಎರಡು ರಾತ್ರಿ ಕಳೆದಳು. ೧೯೦೬ ಜುಲೈ ೮ನೇ ದಿನಾಂಕ ಬೆಳಗ್ಗೆ ಮೂಡಣದಿಕ್ಕು ಅರುಣಕಾಂತಿಯಿಂದ ಶೋಭಿಸುತ್ತಿತ್ತು. ಕೆಲವು ನಕ್ಷತ್ರಗಳು ನೀಲಾಂಬರದಲ್ಲಿ ಮಂದ ಪ್ರಕಾಶದಿಂದ ಮಿನುಗುತ್ತಿದ್ದವು. ಪರ್ವತ ಪುತ್ರಿಯಾದ ಭಾಗೀರಥಿಯು ಶ್ವೇತ ಅಲೆಗಳೊಡನೆ ಜುಳುಜುಳು ಮಧುರ ನಾಟ್ಯ ಮಾಡುತ್ತಾ ತುಂಬಿ ಹರಿಯುತ್ತಿದ್ದಳು. ಗೋಪಾಲನ ತಾಯಿಯ ದೇಹವನ್ನು ನಿಧಾನವಾಗಿ ಗೌರವ ಪೂರ್ಣವಾಗಿ ಆ ಅಲೆಗಳ ಮೇಲೆ ಇರಿಸಲಾಯಿತು. ಅವಳ ಪಂಚಪ್ರಾಣಗಳು ಭಗವಂತನ ಪಾದವನ್ನು ಸೇರಿದುವು. ಅವಳು ಅಭಯ ಧಾಮವನ್ನು ಪಡೆದಳು.

ಅವಳ ಸಂಬಂಧಿಕರಾರೂ ಇರದಿದ್ದುದರಿಂದ ಬೇಲೂರು ಮಠದ ಬ್ರಾಹ್ಮಣ

ಬ್ರಹ್ಮಚಾರಿಯೊಬ್ಬರು. ಅವಳ ಅಂತಿಮ ಸಂಸ್ಕಾರಗಳನ್ನು ನೆರವೇರಿಸಿ ಹನ್ನೆರಡು ದಿನದ ಶಾಸ್ತ್ರವಿಧಿಗಳನ್ನು ನೆರವೇರಿಸಿದರು.

ಈ ಹನ್ನೆರಡು ದಿನಗಳು ಕಳೆದ ಮೇಲೆ ದುಃಖತಪ್ತಳಾದ ನಿವೇದಿತಾ ಗೋಪಾಲನ ತಾಯಿಗೆ ತಿಳಿದಿದ್ದ ಸ್ಥಳೀಯ ಮಹಿಳೆಯರನ್ನು ತನ್ನ ಶಾಲೆಗೆ ಕರೆಸಿ ಭಜನೆ, ಭೋಜನಾದಿಗಳನ್ನು ಏರ್ಪಡಿಸಿದಳು.

ದೇಹ ಬಿಡುವುದಕ್ಕಿಂತ ಮುಂಚೆ ಗೋಪಾಲನ ತಾಯಿಯು ತಾನು ಪೂಜಿಸುತ್ತಿದ್ದ ಶ್ರೀರಾಮಕೃಷ್ಣರ ಚಿತ್ರವನ್ನು ಬೇಲೂರು ಮಠಕ್ಕೆ ಒಪ್ಪಿಸಿದಳು. ಅಷ್ಟೇ ಅಲ್ಲದೆ ತನ್ನಲ್ಲಿದ್ದ ಇನ್ನೂರು ರೂಪಾಯಿಗಳನ್ನು ಶ್ರೀರಾಮಕೃಷ್ಣರ ಸೇವೆಗಾಗಿ ಮಠಕ್ಕೆ ನೀಡಿದಳು. ಕೊನೆಯಲ್ಲಿ ಹತ್ತು ಹನ್ನೆರಡು ವರ್ಷಗಳಿಂದ ಅವಳು ತನ್ನನ್ನು ಸಂನ್ಯಾಸಿನಿಯೆಂದು ಪರಿಗಣಿಸಿ ಯಾವಾಗಲೂ ಕಾವಿಬಟ್ಟೆಯನ್ನೇ ಧರಿಸುತ್ತಿದ್ದಳು.

## ಪರಿಶಿಷ್ಟ

# ಶ್ರೀರಾಮಕೃಷ್ಣರ ಮಾನುಷಭಾವ

**1. ಜನಸಾಧಾರಣರು ಶ್ರೀರಾಮಕೃಷ್ಣರನ್ನು ಗೌರವಿಸುತ್ತಿದ್ದುದು ಅವರಲ್ಲಿ ಯೌಗಿಕ ಶಕ್ತಿಯಿದೆ ಎಂಬ ನಂಬಿಕೆಯಿಂದ 2. ಇದು ಸತ್ಯವಿದ್ದರೂ ನಮ್ಮ ಚರ್ಚೆಯ ವಿಷಯವಲ್ಲ. ಸ್ವಾರ್ಥ ಭಕ್ತಿ ಪ್ರಗತಿಗೆ ಹಾನಿ 3. ನೈಜ ಭಕ್ತಿ ಭಕ್ತನನ್ನು ಉಪಾಸ್ಯದ ಅನುರೂಪಗೊಳಿಸುತ್ತದೆ 4. ಅವತಾರ ಪುರುಷರ. ವೈಶಿಷ್ಟ್ಯ 5. ಶ್ರೀರಾಮ ಕೃಷ್ಣರ ಸಂಗದಿಂದ ನಮಗೆ ಅವತಾರ ಪುರುಷರ ಆಚರಣೆಗಳು ಅರ್ಥವಾದುವು 6. ಶ್ರೀರಾಮಕೃಷ್ಣರ ಹುಟ್ಟೂರಾದ ಕಾಮಾರಪುಕುರ 7. ಬಾಲಕ ರಾಮಕೃಷ್ಣರ ಅದ್ಭುತ ಆಚರಣೆ 8. ಅವರ ಸತ್ಯಾನ್ವೇಷಣೆ 9. ಸತ್ಯಾನ್ವೇಷಣೆಯ ಪರಿಣಾಮ 10. ಶ್ರೀರಾಮಕೃಷ್ಣರ ಸರಳ ಮಾತಿನ ಆಳ ಅರ್ಥ 11. ಅವರ ದೈನಂದಿನ ಚಟು ವಟಿಕೆಗಳಲ್ಲಿ ಅವರ ಸ್ವಭಾವ ತಿಳಿಯುತ್ತಿತ್ತು 12. ಶಿಷ್ಯರ ಮೇಲೆ ಅವರಿಗಿದ್ದ ಸಹಾನುಭೂತಿ ಮತ್ತು ಅವರಿಗೆ ಮಾರ್ಗದರ್ಶನ ನೀಡುತ್ತಿದ್ದ ರೀತಿ 13. ಶ್ರೀರಾಮ ಕೃಷ್ಣರ ಧರ್ಮಸಂಸ್ಥಾಪನಾ ಕಾರ್ಯ ಮತ್ತು ಜೀವನದ ಪುನಶ್ಚೇತನ**

1. ಭಗವಾನ್ ಶ್ರೀರಾಮಕೃಷ್ಣರ ದೇವಭಾವದ ಸಂಬಂಧವಾಗಿ ಅನೇಕರು ಅನೇಕ ರೀತಿಯಲ್ಲಿ ಹೇಳುತ್ತಾರೆ. ಅಷ್ಟೇ ಏಕೆ ನಾವು ವಿಚಾರ ಮಾಡಿದಾಗ ತಿಳಿದು ಬರುವುದು ಜನರ ಶ್ರದ್ಧಾಭಕ್ತಿಯ ಹಿಂದೆ ಅತಿಮಾನುಷ ಯೋಗಶಕ್ತಿಯ ಪ್ರಶಂಸೆಯೇ ಇತ್ತೆಂದು ಕಂಡುಬರುತ್ತದೆ. ಯಾರನ್ನಾದರೂ ನೀನೇಕೆ ಅವರನ್ನು ಗೌರವಿಸುತ್ತೀಯೆ ಎಂದು ಕೇಳಿದರೆ ಸಾಮಾನ್ಯವಾಗಿ ನಮಗೆ ದೊರೆಯುವ ಉತ್ತರ : "ಶ್ರೀರಾಮಕೃಷ್ಣರು ಬಹುದೂರದಲ್ಲಾಗುವುದನ್ನೂ ಕಾಣುತ್ತಾರೆ, ಅವರು ತೀವ್ರವಾದ ಕಾಯಿಲೆಯನ್ನೂ ಸ್ಪರ್ಶದಿಂದಲೇ ಗುಣಪಡಿಸಿ ಬಿಡುತ್ತಾರೆ, ಅವರು ಯಾವಾಗಲೂ ದೇವದೇವತೆ ಗಳೊಂದಿಗೆ ಸಂಪರ್ಕವನ್ನು ಇಟ್ಟುಕೊಂಡಿರುತ್ತಾರೆ ಮತ್ತು ಅವರ ಮಾತುಗಳು ಎಂದೂ ಸುಳ್ಳಾಗುವುದಿಲ್ಲ, ಅವರ ಬಾಯಿಂದ ಏನು ಬರುತ್ತದೆಯೊ ಅದರಂತೆಯೆ ಆಗಿಬಿಡು ತ್ತದೆ." ಯಾವನಾದರೂ ವ್ಯಕ್ತಿಗೆ ನ್ಯಾಯಾಲಯವು ಮರಣದಂಡನೆಯನ್ನು ವಿಧಿಸಿದ್ದರೆ ಶ್ರೀರಾಮಕೃಷ್ಣರ ಅನುಗ್ರಹವಾದರೆ ಅವನು ಸಾವಿನಿಂದ ಪಾರಾಗುವುದು ಮಾತ್ರವಲ್ಲದೆ ವಿಶೇಷ ಗೌರವಕ್ಕೂ ಪಾತ್ರನಾಗುತ್ತಾನೆ. ಅಥವಾ ಯಾವಾಗಲೂ ಕೆಂಪು ಹೂವನ್ನು ಬಿಡುವ ಗಿಡ ಅವರ ಇಚ್ಛೆಯಿಂದ ಬಿಳಿಯ ಹೂವನ್ನು ಬಿಡಬಹುದು. ಇತ್ಯಾದಿ ಇತ್ಯಾದಿ.

ಅಥವಾ ಶ್ರೀರಾಮಕೃಷ್ಣರು ಇತರರ ಆಲೋಚನೆಗಳನ್ನು ತಿಳಿಯುತ್ತಾರೆ ಎಂದ ವನು ಹೇಳಬಹುದು : ಅವರ ತೀಕ್ಷ್ಣದೃಷ್ಟಿಯು ಭೌತಿಕ ಆವರಣವನ್ನು ತೂರಿಕೊಂಡು ಹೋಗಿ ಪ್ರತಿಯೊಬ್ಬನ ಮನೋಭಾವವನ್ನೂ, ಭಾವನೆಗಳನ್ನೂ ಅರ್ಥಮಾಡಿಕೊಳ್ಳು ತ್ತದೆ ಎಂದು. ಅವರ ಸೂಕ್ಷ್ಮ ಹಸ್ತದ ಸ್ಪರ್ಶದಿಂದ ಭಕ್ತನ ಚಂಚಲ ಮನಸ್ಸಿನ

ಮಳಿಂದೆಯೂ ಅವನ ಇಷ್ಟದೇವತೆಯ ರೂಪ ಕಾಣಿಸಿಕೊಳ್ಳಬಹುದು ಅಥವಾ ಅವನು ಆಳ ಧ್ಯಾನವನ್ನು ಅನುಭವಿಸಬಹುದು ; ವಿಶೇಷ ಅರ್ಹತೆಯುಳ್ಳ ಕೆಲವರಿಗೆ ನಿರ್ವಿಕಲ್ಪ ಸಮಾಧಿಯೂ ಉಂಟಾಗಬಹುದು ಎಂದೂ ಹೇಳುತ್ತಾನೆ.

ಇನ್ನು ಕೆಲವರು ಹೇಳಬಹುದು : "ನಾವೇಕೆ ಅವರನ್ನು ಗೌರವಿಸುತ್ತೇವೆಯೋ ಅದು ನಮಗೆ ತಿಳಿಯದು. ಹಾ ! ಎಂಥಾ ಅದ್ಭುತವಾದ ಜ್ಞಾನ ಭಕ್ತಿಗಳ ಮಿಶ್ರವನ್ನು ಅವರಲ್ಲಿ ಕಾಣುತ್ತೇವೆ ! ವೇದ ಪುರಾಣಗಳಲ್ಲಿ ಹೇಳಿರುವ ಆದರ್ಶ ವ್ಯಕ್ತಿಗಳಲ್ಲೂ ಇದನ್ನು ನಾವು ಕಾಣಲಾರೆವು. ಇನ್ನು ನಮಗೆ ತಿಳಿದ ಮತ್ತು ಬದುಕಿರುವ ವ್ಯಕ್ತಿಗಳ ವಿಷಯವಾಗಿ ಹೇಳಬೇಕಾಗಿಯೇ ಇಲ್ಲ, ಅವರ ಮುಂದೆ ಇವರೆಲ್ಲ ಕಳೆಗುಂದಿದವರಾಗಿ ಕಾಣುವರು. ಇದು ನಮ್ಮ ಮನಸ್ಸಿನ ಭ್ರಮೆಯೋ ಏನೋ ನಮಗೆ ಗೊತ್ತಿಲ್ಲ. ಆದರೆ ಅವರ ಅದ್ಭುತ ಪ್ರಭೆಯಿಂದ ನಮ್ಮ ಕಣ್ಣು ಕುಕ್ಕಿದಂತಾಗುವುದು. ಅವರ ಪ್ರೀತಿಯಲ್ಲಿ ನಮ್ಮ ಮನಸ್ಸು ಕರಗಿ ಹೋಗುವುದು. ಎಷ್ಟೇ ನಾವು ಪ್ರಯತ್ನಿಸಿದರೂ ನಮ್ಮ ಮನಸ್ಸನ್ನು ಇತ್ತಕಡೆ ಸೆಳೆಯಲಾಗುವುದಿಲ್ಲ. ಜ್ಞಾನ, ಅನುಮಾನ, ವೈಚಾರಿಕತೆ ಎಲ್ಲ ಹಾರಿ ಹೋಗುವುವು. ಇಷ್ಟು ಮಾತ್ರ ಹೇಳಬಹುದು :

ಜನ್ಮಜನ್ಮದಲ್ಲಿ ನಾನು ನಿನ್ನ ದಾಸನಾಗಿಹೆ.
ನಿನ್ನ ರೀತಿನೀತಿಯೊಂದೂ ಎನಗೆ ತಿಳಿಯದಾಗಿದೆ
ನನ್ನ ಗತಿಯು ಕೂಡ ಮತ್ತೆ ನನಗೆ ಅರಿಯದಾಗಿದೆ.
ಅರಿತರೇನು, ಬಿಟ್ಟರೇನು—ಹೇ ಕರುಣವಾರಿಧೆ !
ನಿನ್ನ ಆಜ್ಞೆಯಂತೆ ನಾನು ಭುಕ್ತಿಮುಕ್ತಿ ಎರಡನು,
ಜಪತಪಾದಿ ಎಲ್ಲವನ್ನು ಬಿಟ್ಟು ಸುಮ್ಮನಿರುವೆನು.
ನಿನ್ನ ತಿಳಿವ ಒಂದೇ ಬಯಕೆ ಈಗ ನನ್ನ ಪಾಲಿಗೆ,
ಪಾರುಗಾಣಿಸೆನ್ನ ಪ್ರಭುವೆ, ಅದರಿಂದಲೂ ಬೇಗನೆ.

ಆದ್ದರಿಂದ ಮೇಲೆ ಪ್ರಸ್ತಾಪಿಸಿದ ಕೆಲವರನ್ನು ಬಿಟ್ಟರೆ ಉಳಿದ ಜನರೆಲ್ಲರ ಭಕ್ತಿ ಶ್ರದ್ಧೆಯ ಮೂಲ ಬಾಹ್ಯ ಸ್ಥೂಲ ಶಕ್ತಿಗಳು ಅಥವಾ ಸೂಕ್ಷ್ಮ ಮಾನಸಿಕ ಶಕ್ತಿಗಳು. ಸ್ಥೂಲಬುದ್ಧಿಯುಳ್ಳವರು ತಾವು ಅವರನ್ನು ಗೌರವಿಸಿದರೆ ತಮ್ಮ ಕಾಯಿಲೆ ವಾಸಿಯಾಗುವುದು ಅಥವಾ ಕಷ್ಟ ವಿಪತ್ತುಗಳಿಂದ ಪಾರಾಗಬಹುದು ಎಂದೆಲ್ಲಾ ಭಾವಿಸುತ್ತಾರೆ. ಅವರು ವಾಸ್ತವಿಕವಾಗಿ ಇದನ್ನು ಒಪ್ಪದಿದ್ದರೂ ಸ್ವಾರ್ಥತೆಯ ಒಂದು ಎಳೆ ಯಾವಾಗಲೂ ಅವರ ಮನಸ್ಸಿನಲ್ಲಿ ಹರಿಯುತ್ತಿರುತ್ತದೆ.

ಸ್ವಲ್ಪ ಬುದ್ಧಿಶಾಲಿಗಳಾದ ಎರಡನೆಯ ವರ್ಗಕ್ಕೆ ಸೇರಿದ ವ್ಯಕ್ತಿಗಳು ಅವರನ್ನು ಗೌರವಿಸುವುದಕ್ಕೆ ಕಾರಣ ಅವರ ಕೃಪೆಯಿಂದ ದೂರದರ್ಶನಾದಿ ಶಕ್ತಿಗಳನ್ನು ಪಡೆಯಬಹುದು, ಅವರ ಸಂಗದಿಂದ ಗೋಲೋಕ ಮುಂತಾದ ಸ್ಥಾನಗಳನ್ನು ಪಡೆಯಬಹುದು, ಎಂದು. ಇನ್ನು ಸ್ವಲ್ಪ ಉನ್ನತ ದೃಷ್ಟಿಯುಳ್ಳವರು, ಅವರ ಕೃಪೆಯಿಂದ ಸಮಾಧಿಯನ್ನು ಪಡೆದು ಜನನ ಮರಣ ಬಂಧನದಿಂದ ಮುಕ್ತರಾಗಬಹುದು ಎಂಬ ದೃಷ್ಟಿ

ಯಿಂದ ಅವರನ್ನು ಗೌರವಿಸುತ್ತಾರೆ. ತಮ್ಮ ಸ್ವಂತ ಪ್ರಯೋಜನವು ಈ ವಿಶ್ವಾಸದ ಹಿಂದೆ ಇದೆ ಎಂಬುದನ್ನು ಇಲ್ಲಿ ನಾವು ಗಮನಿಸಬೇಕು.

2. ಶ್ರೀರಾಮಕೃಷ್ಣರಲ್ಲಿ ದಿವ್ಯ ಶಕ್ತಿಗಳಿದ್ದುವು ಎಂಬುದಕ್ಕೆ ಅನೇಕ ನಿದರ್ಶನಗಳಿವೆ ನಿಜ ಮತ್ತು ಸ್ವಂತ ಪ್ರಯೋಜನ ದೃಷ್ಟಿಯಿಂದ ಅವರ ಮೇಲೆ ಭಕ್ತಿಯನ್ನು ತೋರಿಸಿದರೂ ಅಶೇಷ ಮಂಗಳ ಉಂಟಾಗುತ್ತದೆ ಎಂಬುದೂ ನಿಜ. ಆದರೆ ನಾವಿಲ್ಲಿ ಅವುಗಳ ವಿಷಯವಾಗಿ ಬರೆಯಲು ಹೊರಟಿಲ್ಲ. ಅವರ ಮನುಷ್ಯ ಭಾವವನ್ನು ಚಿತ್ರಿಸುವ ಪ್ರಯತ್ನವೇ ನಮ್ಮ ಈ ಬರಹದ ಉದ್ದೇಶ.

ಸಕಾಮ ಭಕ್ತಿ—ಸ್ವಂತ ಆಸೆಯ ಪೂರ್ಣತೆಗಾಗಿ ಇರುವ ಭಕ್ತಿ—ಭಕ್ತನನ್ನು ಸತ್ಯದ ಉನ್ನತ ಮಟ್ಟಕ್ಕೆ ಏರಲು ಬಿಡುವುದಿಲ್ಲ. ಸ್ವಾರ್ಥ ಪರತೆಯು ಯಾವಾಗಲೂ ಭಯವನ್ನೇ ಉಂಟುಮಾಡುತ್ತದೆ ಮತ್ತು ಈ ಭಯ ಮನುಷ್ಯನನ್ನು ಹೆಚ್ಚು ಹೆಚ್ಚು ದುರ್ಬಲನನ್ನಾಗಿಸುತ್ತದೆ. ಮತ್ತೆ ಸ್ವಾರ್ಥ ಸಿದ್ಧಿಯು ಮಾನವನಲ್ಲಿ ಅಹಂಕಾರವನ್ನು ಹೆಚ್ಚಿಸುತ್ತದೆ ಮತ್ತು ಕೆಲವೊಮ್ಮೆ ಆಲಸ್ಯ ವೃದ್ಧಿಯಾಗಿ ಅವನ ದೃಷ್ಟಿಯನ್ನು ಮಂಕುಗೊಳಿಸುತ್ತದೆ. ಆಗ ಅವನು ಯಥಾರ್ಥ ಸತ್ಯವನ್ನು ತಿಳಿಯಲು ಅಸಮರ್ಥನಾಗುತ್ತಾನೆ. ಆದ್ದರಿಂದ ಶ್ರೀರಾಮಕೃಷ್ಣರು ತಮ್ಮ ಭಕ್ತರಲ್ಲಿ ಈ ದೋಷ ಪ್ರವೇಶಿಸದಿರಲೆಂದು ಎಚ್ಚರಿಕೆ ವಹಿಸುತ್ತಿದ್ದರು. ಧ್ಯಾನ ಮುಂತಾದ ಸಾಧನೆಗಳನ್ನು ಮಾಡುವಾಗ ಯಾರಾದರೂ ಭಕ್ತರಿಗೆ ದೂರದರ್ಶನಾದಿ ವಿಶೇಷ ಶಕ್ತಿಗಳು ಉಂಟಾದರೆ ಅದರಿಂದ ಅವರಿಗೆ ಅಹಂಕಾರ ಉಂಟಾಗಬಹುದೆಂದು ಕೆಲವು ದಿನ ಧ್ಯಾನ ಮಾಡಬೇಡವೆಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಇಂತಹ ಅನೇಕ ಪ್ರಸಂಗಗಳು ಇವೆ. ಈ ರೀತಿಯ ವಿಭೂತಿ ಶಕ್ತಿಗಳನ್ನು ಪಡೆಯುವುದು ಮಾನವ ಜೀವನದ ಉದ್ದೇಶವಲ್ಲ ಎಂದು ಮತ್ತೆ ಮತ್ತೆ ಹೇಳುತ್ತಿದ್ದರು. ಆದರೆ ದುರ್ಬಲ ಮನುಷ್ಯನು ತನ್ನ ಲಾಭನಷ್ಟಗಳನ್ನು ಪರಿಗಣಿಸದೆ ಏನನ್ನಾದರೂ ಮಾಡಲು ಅಥವಾ ಯಾರನ್ನಾದರೂ ಗೌರವಿಸಲು ಮುಂದೆ ಬರುವುದಿಲ್ಲ. ತ್ಯಾಗಮೂರ್ತಿಯಾದ ಶ್ರೀರಾಮಕೃಷ್ಣರ ಜೀವನದಿಂದ ತ್ಯಾಗವನ್ನು ಕಲಿಯದೆ ಅವನು ತನ್ನ ಆಸೆಗಳ ಸಿದ್ಧಿಗಾಗಿಯೇ ಆ ಮಹತ್ ಜೀವನವನ್ನು ಆಶ್ರಯಿಸುವನು. ಅವರ ತ್ಯಾಗ, ಅವರ ಅಲೌಕಿಕ ತಪಸ್ಸು, ಅವರ ಅಪೂರ್ವ ಸತ್ಯನಿಷ್ಠೆ, ಅವರ ಬಾಲಕ ಸಹಜ ಸರಳತೆ ಇವೆಲ್ಲವೂ ತನ್ನ ಸುಖಕ್ಕಾಗಿಯೇ ಎಂಬಂತೆ ಅವನು ಭಾವಿಸುತ್ತಾನೆ. ನಮ್ಮಲ್ಲಿ ಮನುಷ್ಯತ್ವದ ಅಭಾವವಿರುವುದೇ ಇದಕ್ಕೆ ಕಾರಣ. ಆದ್ದರಿಂದ ಶ್ರೀರಾಮಕೃಷ್ಣರ ಮನುಷ್ಯಭಾವವನ್ನು ಕುರಿತು ಆಲೋಚಿಸುವುದರಿಂದ ನಮಗೆ ಹೆಚ್ಚು ಪ್ರಯೋಜನವಾದೀತು.

3. ಭಕ್ತಿಯನ್ನು ಸರಿಯಾಗಿ ಅನುಸರಿಸಿದರೆ ಅದು ಭಕ್ತನನ್ನು ಅವನ ಉಪಾಸ್ಯದೊಡನೆ ಅನುರೂಪವಾಗಿ ಪರಿವರ್ತಿಸುವುದು. ಎಲ್ಲಾ ದೇಶದ ಎಲ್ಲಾ ಧರ್ಮಗ್ರಂಥಗಳಲ್ಲಿಯೂ ಈ ಮಾತು ಪ್ರಸಿದ್ಧವಾಗಿದೆ. ಶಿಲುಬೆಗೇರಿದ ಕ್ರಿಸ್ತನ ಮೂರ್ತಿಯ ಧ್ಯಾನ ಮಾಡುತ್ತಾ ಭಕ್ತನ ಕೈಕಾಲುಗಳಲ್ಲಿ ರಕ್ತ ಸುರಿಯುವುದು, ಶ್ರೀರಾಧೆಯ ವಿರಹದುಃಖ

ವನ್ನು ಅನುಭವಿಸುತ್ತಾ ಶ್ರೀಚೈತನ್ಯನಲ್ಲಿ ದೈಹಿಕ ಉರಿ ಕಾಣಿಸಿಕೊಳ್ಳುವುದು, ಧ್ಯಾನದಲ್ಲಿ ಮಗ್ನನಾದ ಬುದ್ಧನನ್ನು ಧ್ಯಾನಮಾಡುತ್ತಾ ಬೌದ್ಧ ಭಕ್ತನು ಬಹುಕಾಲ ನಿಶ್ಚೇಷ್ಟಿತನಾಗಿಬಿಡುವುದು ಇತ್ಯಾದಿ ಘಟನೆಗಳು ಇದಕ್ಕೆ ನಿದರ್ಶನ. ಸಾಮಾನ್ಯ ಮನುಷ್ಯ ಪ್ರೇಮದಲ್ಲಿಯೂ ಇದನ್ನು ನೋಡುತ್ತೇವೆ. ನಾವು ಯಾವ ವ್ಯಕ್ತಿಯನ್ನು ಪ್ರೀತಿಸುತ್ತೇವೆಯೊ ಆ ವ್ಯಕ್ತಿಯ ಸ್ವಭಾವ ನಮಗರಿವಿಲ್ಲದಂತೆಯೆ ಕ್ರಮೇಣ ನಮಗೆ ಬಂದುಬಿಡುತ್ತದೆ. ಅವನ ಬಾಹ್ಯ ಹಾವಭಾವಗಳು, ಚಲನವಲನಗಳು ಮತ್ತು ಅವನ ಮಾನಸಿಕ ಚಿಂತಾ ಪ್ರಣಾಲಿಯು ಕ್ರಮೇಣ ನಮ್ಮದಾಗಿಬಿಡುತ್ತವೆ. ಶ್ರೀರಾಮಕೃಷ್ಣರ ಮೇಲಿನ ಭಕ್ತಿಯು ನಮ್ಮ ಜೀವನವನ್ನು ಕ್ರಮೇಣ ಸ್ವಲ್ಪ ಮಟ್ಟಿಗಾದರೂ ಅವರ ಜೀವನಕ್ಕೆ ಅನುರೂಪವಾಗಿ ಪರಿವರ್ತಿಸದಿದ್ದರೆ ಆಗ ಆ ಭಕ್ತಿ ಹೆಸರಿಗೆ ಯೋಗ್ಯವಾದುದಲ್ಲ ಎಂದು ತಿಳಿಯಬೇಕು.

ಈಗ ಪ್ರಶ್ನೆಯನ್ನು ಕೇಳಬಹುದು, ಹಾಗಾದರೆ ನಾವೆಲ್ಲ ರಾಮಕೃಷ್ಣರಂತೆ ಆಗಲು ಸಾಧ್ಯವೇ ? ಒಬ್ಬನು ಸಂಪೂರ್ಣವಾಗಿ ಮತ್ತೊಬ್ಬನಂತೆ ಆಗುವುದು ಎಲ್ಲಾದರೂ ಇದೆಯೆ ? ಇದಕ್ಕೆ ಉತ್ತರವಾಗಿ ನಾವು ಹೇಳುತ್ತೇವೆ ಸಂಪೂರ್ಣ ಒಂದೇ ರೂಪವನ್ನು ಪಡೆಯಲು ಆಗದಿರಬಹುದು. ಆದರೆ ಒಂದೇ ಅಚ್ಚಿನಲ್ಲಿ ಮಾಡಲ್ಪಟ್ಟ ವಸ್ತುಗಳಂತೆ ಆಗಬಹುದು. ಪ್ರತಿಯೊಬ್ಬ ಶ್ರೇಷ್ಠ ವ್ಯಕ್ತಿಯ ಜೀವನ ಆಧ್ಯಾತ್ಮಿಕ ಜಗತ್ತಿನಲ್ಲಿ ಒಂದೊಂದು ವಿಶೇಷ ಅಚ್ಚುಗಳಿದ್ದಂತೆ. ಶಿಷ್ಯ ಪರಂಪರಾನುಗತವಾಗಿ ತಮ್ಮ ಜೀವನವನ್ನು ಆ ಅಚ್ಚಿಗೆ ಅನುರೂಪವಾಗಿ ರೂಪಿಸಿಕೊಳ್ಳುವುದರ ಮೂಲಕ ಆ ಅಚ್ಚುಗಳನ್ನು ಇಂದಿಗೂ ಉಳಿಸಿಕೊಂಡು ಬಂದಿರುವರು. ಮನುಷ್ಯನ ಶಕ್ತಿ ಸೀಮಿತವಾದುದು. ಈ ಯಾವುದಾದರೊಂದು ಅಚ್ಚಿನಂತೆಯೇ ಸಂಪೂರ್ಣವಾಗಿ ತನ್ನ ಜೀವನವನ್ನು ರೂಪಿಸಿಕೊಳ್ಳುವುದು ಅವನು ಇಡೀ ಜೀವನ ಪ್ರಯತ್ನಿಸಿದರೂ ಆಗುವುದಿಲ್ಲ. ಯಾವನಾದರೂ ಒಬ್ಬ ವ್ಯಕ್ತಿಯು ತನ್ನ ಅದೃಷ್ಟದಿಂದ ತನ್ನ ಜೀವನವನ್ನು ಆ ಅಚ್ಚಿಗೆ ಸಮಾನವಾಗಿ ರೂಪಿಸಿಕೊಂಡರೆ ಅವನನ್ನು ಸಿದ್ಧಪುರುಷ ಎಂದು ಗೌರವಿಸುತ್ತೇವೆ. ಆಗ ಅವನ ಮಾತು, ಆಲೋಚನೆ, ಚಲನವಲನಗಳೆಲ್ಲ ಆ ಮೂಲ ಪುರುಷನಿಗೆ ಸಮಾನವಾಗಿರುತ್ತದೆ. ಅವನ ದೇಹ ಮನಸ್ಸುಗಳು ಆ ಮೂಲ ಪುರುಷನ ಶಕ್ತಿಯನ್ನು ಪಡೆಯಲು ಮತ್ತು ಇತರರಿಗೆ ಹಂಚಲು ಸಮರ್ಥವಾದ ಒಂದು ಉಪಕರಣವಾಗುತ್ತದೆ. ಹೀಗೆ ಅತಿ ಪುರಾತನ ಕಾಲದಿಂದಲೂ ವಿವಿಧ ವ್ಯಕ್ತಿಗಳು ವಿವಿಧ ಕಾಲದಲ್ಲಿ ಈ ಆಧ್ಯಾತ್ಮಿಕ ಶಕ್ತಿಯನ್ನು ಉಳಿಸಿಕೊಂಡು ಬಂದಿರುವರು.

4. ಧರ್ಮ ಜಗತ್ತಿನಲ್ಲಿ ಯಾವ ಮಹಾಪುರುಷರು ಅಪೂರ್ವವಾದ ಒಂದು ಹೊಸ ಜೀವನದ ಅಚ್ಚನ್ನು ಮುದ್ರಿಸಿ ಹೋಗಿರುವರೋ ಅವರನ್ನೇ ಅವತಾರ ಪುರುಷರೆಂದು ಜನರು ಪೂಜಿಸುವುದು. ಅವತಾರ ಪುರುಷರು ಧರ್ಮ ಜಗತ್ತಿನಲ್ಲಿ ಒಂದು ಹೊಸ ಮತವನ್ನು, ಒಂದು ಹೊಸ ಪಥವನ್ನು ಕಂಡುಹಿಡಿಯುವರು. ಸ್ಪರ್ಶಮಾತ್ರದಿಂದಲೇ ಇತರರಲ್ಲಿ ಆಧ್ಯಾತ್ಮಿಕ ಶಕ್ತಿಯ ಸಂಚಾರ ಆಗುವಂತೆ ಮಾಡುವರು. ಅವರ ದೃಷ್ಟಿಯು

ಯಾವಾಗಲೂ ಅನಿತ್ಯ ಸಂಸಾರದಲ್ಲಿ ಕಾಮಕಾಂಚನಗಳ ಕೋಲಾಹಲದ ಕಡೆ ಆಕರ್ಷಿತ ಗೊಳ್ಳುವುದಿಲ್ಲ. ಅವರ ಜೀವನ ವಿಧಾನವನ್ನು ನೋಡಿದಾಗ ಅವರು ಇತರರಿಗೆ ಮಾರ್ಗ ವನ್ನು ತೋರಿಸಲಿಕ್ಕಾಗಿಯೇ ಜನ್ಮವೆತ್ತಿರುವರೆಂದು ತಿಳಿದು ಬರುತ್ತದೆ. ತಮ್ಮ ಸ್ವಂತ ಸುಖ ಅಥವಾ ಮುಕ್ತಿ ಅವರ ಜೀವನದ ಉದ್ದೇಶವಾಗಿರುವುದಿಲ್ಲ. ಆದರೆ ಇತರರ ದುಃಖಕ್ಕಾಗಿ ಸಹಾನುಭೂತಿ, ಇತರರ ಮೇಲಿರುವ ಗಾಢವಾದ ಪ್ರೇಮ ಇವೇ ಅವರ ಕಾರ್ಯಗಳ ಪ್ರೇರಣೆಯಾಗಿರುತ್ತವೆ ಮತ್ತು ಇತರರ ದುಃಖನಿವಾರಣೆ ಮಾರ್ಗವನ್ನು ಕಂಡುಹಿಡಿಯುವುದಕ್ಕೆ ಕಾರಣವಾಗಿರುತ್ತವೆ.

5. ಶ್ರೀರಾಮಕೃಷ್ಣರ ದಿವ್ಯರೂಪವನ್ನು ಕಾಣುವವರೆಗೂ ಕೃಷ್ಣ, ಬುದ್ಧ, ಕ್ರಿಸ್ತ ಮುಂತಾದ ಖ್ಯಾತ ಅವತಾರ ಪುರುಷರ ರಹಸ್ಯವನ್ನು ನಮಗೆ ತಿಳಿಯಲಾಗಿರಲಿಲ್ಲ. ಅವರ ಜೀವನಗಳ ಅಸಾಮಾನ್ಯ ಘಟನೆಗಳೆಲ್ಲ ಅವರ ಅನುಯಾಯಿಗಳ ಸಂಖ್ಯೆಯನ್ನು ಹೆಚ್ಚಿಸಲು ಅವರ ಶಿಷ್ಯರಿಂದ ಸೇರಿಸಲ್ಪಟ್ಟವುಗಳೆಂಬ ತಪ್ಪುಕಲ್ಪನೆ ನಮ್ಮಲ್ಲಿತ್ತು. ಅವ ತಾರ ಪುರುಷರು ನಾಗರಿಕ ಜಗತ್ತಿನಿಂದ ದೂರವಾದ ವಿಚಿತ್ರ ಕಾಲ್ಪನಿಕ ವ್ಯಕ್ತಿಗಳೆಂದು ನಾವು ಭಾವಿಸಿದ್ದೆವು. ಅಥವಾ ಭಗವಂತನು ಅವತಾರ ಎತ್ತಲು ಸಾಧ್ಯ ಎಂಬ ವಿಶ್ವಾಸ ವಿದ್ದರೂ ಅವರಲ್ಲಿ ನಮ್ಮಂತೆ ಮನುಷ್ಯ ಭಾವವಿರಲಾರದು ಎಂದು ನಾವು ಕಲ್ಪಿಸಿದ್ದೆವು. ಅವರ ಶರೀರದಲ್ಲಿ ನಮ್ಮಂತೆ ರೋಗಾದಿಗಳು ಉಂಟಾಗುತ್ತವೆ, ಅವರ ಮನಸ್ಸಿನಲ್ಲಿ ನಮ್ಮಲ್ಲಿಯಂತೆಯೆ ಹರ್ಷಶೋಕಾದಿಗಳು ಇರುತ್ತವೆ, ನಮ್ಮಂತೆ ಅವರಲ್ಲಿಯೂ ಪ್ರವೃತ್ತಿ ಗಳ ಸಂಗ್ರಾಮ ನಡೆಯುತ್ತದೆ ಎಂಬ ಅರಿವು ನಮಗಿರಲಿಲ್ಲ. ಶ್ರೀರಾಮಕೃಷ್ಣರ ಪವಿತ್ರ ಸ್ಪರ್ಶದಿಂದಲೇ ಈ ವಿಷಯವನ್ನು ನಾವು ತಿಳಿದುಕೊಂಡದ್ದು. ಅವತಾರ ಶರೀರದಲ್ಲಿ ದೇವ ಮತ್ತು ಮಾನುಷಭಾವಗಳ ಅದ್ಭುತ ಸಮ್ಮಿಲನದ ವಿಷಯವನ್ನು ನಾವೆಲ್ಲ ಓದಿ ದ್ದೆವು ಅಥವಾ ಕೇಳಿದ್ದೆವು, ಆದರೆ ಶ್ರೀರಾಮಕೃಷ್ಣರನ್ನು ನೋಡುವುದಕ್ಕೆ ಮುಂಚೆ ಯಾವನೋ ಒಬ್ಬ ವ್ಯಕ್ತಿಯಲ್ಲಿ ಬಾಲಕತ್ವ ಮತ್ತು ಪ್ರೌಢ ಮನುಷ್ಯತ್ವ ಇವೆರಡೂ ಒಟ್ಟಿಗೆ ಹೊಂದಾಣಿಕೆಯಿಂದ ಇರಬಲ್ಲವು ಎಂಬುದನ್ನು ನಾವು ಯೋಚಿಸಿರಲಿಲ್ಲ. ಅನೇ ಕರು ಹೇಳುತ್ತಾರೆ ಅವರ ಐದು ವರ್ಷದ ಶಿಶುಸಹಜ ಸ್ವಭಾವವೇ ತಮ್ಮನ್ನು ಅವರೆಡೆಗೆ ಆಕರ್ಷಿಸಿದುದು ಎಂದು. ಮುಗ್ಧ ಬಾಲಕನನ್ನು ಎಲ್ಲರೂ ಪ್ರೀತಿಸುತ್ತಾರೆ ಮತ್ತು ಎಲ್ಲರೂ ರಕ್ಷಿಸಲು ಸ್ವಾಭಾವಿಕವಾಗಿಯೇ ಪ್ರಯತ್ನಿಸುತ್ತಾರೆ. ಪೂರ್ಣ ವಯಸ್ಕರಾದ ಶ್ರೀರಾಮ ಕೃಷ್ಣರನ್ನು ನೋಡಿದಾಗಲೂ ಜನರ ಮನಸ್ಸಿನಲ್ಲಿ ಈ ರೀತಿಯ ಭಾವನೆ ಉದಯವಾಗಿ ಅವರನ್ನು ಮುಗ್ಧಗೊಳಿಸುತ್ತಿತ್ತು. ಇದು ಬಹುಮಟ್ಟಿಗೆ ನಿಜವಿರಬಹುದು. ಆದರೆ ಜನ ರನ್ನು ಅವರೆಡೆಗೆ ಆಕರ್ಷಿಸಿದುದು ಇದೊಂದೇ ಸ್ವಭಾವವಲ್ಲ ಎಂಬುದು ನಮ್ಮ ವಿಶ್ವಾಸ. ಶ್ರೀರಾಮಕೃಷ್ಣರ ಒಳಗೆ ಅದ್ಭುತ ಶಕ್ತಿ ಇತ್ತು. ಅದು ಕೋಮಲವಾದ ಹೂವಿನಂತಹ ಬಾಲ್ಯಸರಳತೆಯಿಂದ ಆವರಿಸಲ್ಪಟ್ಟಿತ್ತು. ನಿಜವಾಗಿಯೂ ಈ ಶಕ್ತಿಯೇ ಆಕರ್ಷಣೆಯ ಕಾರಣವಾಗಿತ್ತು. ಆದ್ದರಿಂದಲೇ ಜನರಿಗೆ ಅವರನ್ನು ನೋಡಿದಾಗ ಶ್ರದ್ಧಾಭಕ್ತಿಯ ಜೊತೆಗೆ ಪ್ರೀತಿ ಆನಂದಗಳು ಉಂಟಾಗುತ್ತಿದ್ದುವು ಶ್ರೀರಾಮಚಂದ್ರನ ಲೋಕೋತ್ತರ

ಚಾರಿತ್ರವನ್ನು ವರ್ಣಿಸುತ್ತಾ ಕವಿಯು ಹೇಳುತ್ತಾನೆ: 'ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ। ಲೋಕೋತ್ತರಾಣಾಂ ಚೇತಾಂಸಿ ಕೋನು ವಿಜ್ಞಾತು ಮರ್ಹಸಿ॥'* ಇದೇ ಮಾತು ಶ್ರೀರಾಮಕೃಷ್ಣರಿಗೂ ಸಂಪೂರ್ಣ ಅನ್ವಯಿಸುತ್ತದೆ.

ಶ್ರೀರಾಮಕೃಷ್ಣರ ಬಾಲಕಭಾವದಲ್ಲಿ ಒಂದು ಹೊಸತನವಿದೆ. ಅಗಾಧ ಶ್ರದ್ಧೆ, ಅಪಾರ ಸರಳತೆ, ಅನಂತ ಸತ್ಯಪ್ರೇಮ ಇವು ಯಾವಾಗಲೂ ಅವರ ಮನಸ್ಸಿನಲ್ಲಿದ್ದುವು. ಪ್ರಾಪಂಚಿಕ ವ್ಯಕ್ತಿಗಳು ಅದನ್ನು ಮೂರ್ಖತನ ಮತ್ತು ವ್ಯಾವಹಾರಿಕ ಜ್ಞಾನದ ಅಭಾವ ಎಂದು ಪರಿಣಿಸುತ್ತಿದ್ದರು. ಅವರಿಗೆ ಜನರ ಮಾತಿನಲ್ಲಿ ಅಪಾರ ಶ್ರದ್ಧೆಯಿತ್ತು, ವಿಶೇಷವಾಗಿ ಧಾರ್ಮಿಕರೆಂದು ಕಾಣಿಸಿಕೊಳ್ಳುವವರಲ್ಲಿ. ದೇಶದಲ್ಲಿ ಮತ್ತು ತಮ್ಮ ಹಳ್ಳಿಯಲ್ಲಿ ಪ್ರಚಲಿತವಿದ್ದ ಭಾವನೆಗಳೆಲ್ಲ ಅವರ ಈ ಅದ್ಭುತ ಸ್ವಭಾವಕ್ಕೆ ಪೂರಕವಾಗಿದ್ದುವು.

6. ಅನೇಕ ಚದರ ಮೈಲಿಗಳ ವಿಸ್ತಾರವಾದ ಬತ್ತದ ಗದ್ದೆಯು ಹಸಿರು ಸಮುದ್ರದಂತೆ ಕಂಗೊಳಿಸುತ್ತಿತ್ತು. ಬತ್ತದ ಸಸಿ ಇಲ್ಲದಾಗ ಬೂದು ಬಣ್ಣದ ಸಮುದ್ರದಂತೆ ಅದು ಶೋಭಿಸುತ್ತಿತ್ತು. ಅಲ್ಲಲ್ಲಿ ಚಿಕ್ಕ ಚಿಕ್ಕ ದ್ವೀಪಗಳಂತೆ ರೈತರ ಗುಡಿಸಲುಗಳಿದ್ದುವು. ಅವು ಚೊಕ್ಕವೂ, ಶುದ್ಧವೂ ಆಗಿದ್ದುವು. ಅವುಗಳ ಪಕ್ಕದಲ್ಲಿಯೇ ಇದ್ದ ಬಿದಿರು, ಆಲದ ಮರ, ಅಶ್ವತ್ಥ ಮಾವು ಇತ್ಯಾದಿ ಮರಗಳು ಅವಕ್ಕೆ ನೆರಳನ್ನು ನೀಡುತ್ತಿದ್ದುವು. ಅಲ್ಲಲ್ಲಿ ನೀಲಿಬಣ್ಣದ ನೀರಿನಿಂದ ಕೂಡಿದ ವಿಶಾಲ ಕೊಳಗಳು ಇದ್ದುವು. ಅವುಗಳನ್ನು ಸುತ್ತುವರಿದು ಎತ್ತರದ ತಾಳೆಮರದ ಸಾಲುಗಳು ಹಚ್ಚ ಹಸುರು ಎಲೆಗಳಿಂದ ರಾಜಿಸುತ್ತಿದ್ದುವು. ಆ ಕೊಳಗಳಲ್ಲಿ ತಾವರೆಯ ಹೂವುಗಳು ದುಂಬಿಗಳ ನಾದಕ್ಕೆ ತಲೆದೂಗುತ್ತಿದ್ದುವು. ಕೆಲವು ಚಿಕ್ಕ ಆದರೆ ಪ್ರಸಿದ್ಧ ದೇವಾಲಯಗಳೂ ಇದ್ದವು. ಅವು ಸಾಮಾನ್ಯವಾಗಿ ಕಲ್ಲು ಅಥವಾ ಇಟ್ಟಿಗೆಯಿಂದ ಕಟ್ಟಲ್ಪಟ್ಟವುಗಳು. ಸ್ವಲ್ಪ ದೂರದಲ್ಲಿಯೇ ಮಾಂದಾರಣ ಕೋಟೆಯ ಭಗ್ನಾವಶೇಷವಿತ್ತು. ಸ್ವಲ್ಪ ಹತ್ತಿರದಲ್ಲಿಯೇ ಪುರಾತನ ಸ್ಮಶಾನವು ಅಲ್ಲಲ್ಲಿ ಹರಡಿದ ಮೂಳೆಗಳಿಂದ ಮೃತ್ಯುವಿನ ಕರಾಳತೆಯನ್ನು ನೆನಪಿಸುತ್ತಿತ್ತು. ಅದರ ಪಕ್ಕದಲ್ಲಿಯೇ ಹಸಿರು ಹುಲ್ಲಿನಿಂದ ಕೂಡಿದ ಮೈದಾನವಿತ್ತು. ಅದಕ್ಕೂ ಮುಂದೆ ಹೋದರೆ ದಟ್ಟವಾದ ಮಾವಿನ ತೋಪು ಮತ್ತು ವಕ್ರಗತಿಯಲ್ಲಿ ಹರಿಯುವ ಒಂದು ತೊರೆ. ಅದರ ಪಕ್ಕದಲ್ಲಿಯೇ ಜನನಿಬಿಡವಾದ ಬರ್ದ್ವಾನಿನಿಂದ ಪೂರಿಗೆ ಹೋಗುವ ಸಾರ್ವಜನಿಕ ರಸ್ತೆಯಿದೆ. ಅದು ಹಳ್ಳಿಯನ್ನು ಅರ್ಧಕ್ಕಿಂತ ಜಾಸ್ತಿ ಸುತ್ತುವರಿಯುತ್ತದೆ. ಇದು ಶ್ರೀರಾಮಕೃಷ್ಣರ ಹುಟ್ಟೂರಾದ ಕಾಮಾರಪುಕುರ್.

7. ಶ್ರೀ ಚೈತನ್ಯನು ಸ್ಥಾಪಿಸಿದ ವೈಷ್ಣವ ಧರ್ಮವು ಅಲ್ಲಿ ಪ್ರಚಲಿತವಿತ್ತು. ರೈತರು ಕೆಲಸ ಮಾಡುವಾಗ ವೈಷ್ಣವ ಕವಿಗಳು ರಚಿಸಿದ ಹಾಡುಗಳನ್ನು ಹಾಡುತ್ತಿದ್ದರು. ದಿನದ ಕೆಲಸವೆಲ್ಲ ಆದಮೇಲೆ ಸಂಜೆಯ ಹೊತ್ತು ಈ ಹಾಡುಗಳ ಆನಂದದಲ್ಲಿ ತಮ್ಮ

---

* ಲೋಕೋತ್ತರ ವ್ಯಕ್ತಿಗಳು ವಜ್ರದಂತೆ ಕಠೋರವೂ, ಕುಸುಮದಂತೆ ಮೃದುವೂ ಆಗಿರುತ್ತಾರೆ. ಅವರ ಮನಸ್ಸನ್ನು ಯಾರು ತಾನೆ ಅರಿಯಬಲ್ಲರು ?

ದಣಿವನ್ನು ಮರೆಯುತ್ತಿದ್ದರು. ಒಂದು ಸರಳ ಕಾವ್ಯಮಯ ಶ್ರದ್ಧೆ ಈ ಧರ್ಮದ ಮೂಲದಲ್ಲಿದೆ. ಅಸ್ತಿತ್ವದ ಹೋರಾಟದ ಸ್ಪರ್ಧಾತ್ಮಕ ತುಮುಲಗಳಿಂದ ದೂರವಿರುವ ಈ ಹಳ್ಳಿಯ ಹುಡುಗನ ಹೃದಯವು ಇಂಥ ಒಂದು ಶ್ರದ್ಧೆ ಮತ್ತು ಧರ್ಮಕ್ಕೆ ಅನುಕೂಲವಾದ ಕ್ಷೇತ್ರವಾಗಿರುವುದು ಆದರೆ ಬಾಲಕ ರಾಮಕೃಷ್ಣರ ಬಾಲಕತ್ವವು ಅಲ್ಲಿಯೂ ಕೂಡ ಅದ್ಭುತವೆಂದು ಪರಿಗಣಿಸಲ್ಪಟ್ಟಿತ್ತು. ಅವರು ವಿಚಿತ್ರ ಕೆಲಸಗಳನ್ನೇನೂ ಮಾಡದಿದ್ದರೂ ಅವರ ಉದ್ದೇಶದ ಗಭೀರತೆ ಮತ್ತು ಏಕನಿಷ್ಠೆ ಇವನ್ನು ನೋಡಿ ಎಲ್ಲರೂ ಆಶ್ಚರ್ಯ ಪಡುತ್ತಿದ್ದರು. 'ರಾಮನಾಮದಿಂದ ಮಾನವನು ನಿರ್ಮಲನಾಗುವನು' ಎಂಬ ಮಾತನ್ನು ಗಾಯಕನ ಬಾಯಿಂದ ಕೇಳಿ, ಹಾಗಾದರೆ ಗಾಯಕನು ಇನ್ನೂ ಶುದ್ಧಿಮಾಡಿಕೊಳ್ಳುವುದರ ಆವಶ್ಯಕತೆಯೇನು ? ಎಂದು ಅವರು ಚಿಂತಿಸುತ್ತಿದ್ದರು. ಯಾವಾಗಲಾದರೂ ಒಮ್ಮೆ ಜಾತ್ರೆಯನ್ನು ನೋಡಿದರೆ ಅದರಲ್ಲಿ ಬರುವ ವಿವಿಧ ಪಾತ್ರಗಳನ್ನು ಸ್ನೇಹಿತರ ಮುಂದೆ ಅಭಿನಯಿಸಿ ತೋರಿಸುತ್ತಿದ್ದರು. ಬೇರೆ ಹಳ್ಳಿಗೆ ಹೋಗಬೇಕೆಂದಿದ್ದ ಪಥಿಕರು ಇವರ ಅದ್ಭುತ ಅಭಿನಯ, ಸಂಗೀತದಿಂದ ಮುಗ್ಧರಾಗಿ ತಮ್ಮ ಪ್ರಯಾಣವನ್ನು ಮರತೇ ಬಿಡುತ್ತಿದ್ದರು. ಪ್ರತಿಮೆಗಳನ್ನು ತಯಾರಿಸುವುದು, ದೇವತೆಗಳ ಚಿತ್ರ ಬಿಡಿಸುವುದು, ಇತರರ ಹಾವಭಾವಗಳನ್ನು ಅನುಕರಿಸುವುದು, ಸಂಗೀತ, ಸಂಕೀರ್ತನೆ, ರಾಮಾಯಣ ಮಹಾಭಾರತ ಭಾಗವತ ಮುಂತಾದ ಶಾಸ್ತ್ರಗಳನ್ನು ಕೇಳಿ ನೆನಪಿಟ್ಟುಕೊಳ್ಳುವುದು ಮತ್ತು ಪ್ರಕೃತಿ ಸೌಂದರ್ಯವನ್ನು ಆಳವಾಗಿ ಅನುಭವಿಸುವುದು—ಇವುಗಳಲ್ಲಿ ಬಾಲಕ ರಾಮಕೃಷ್ಣರು ವಿಶೇಷ ನೈಪುಣ್ಯವನ್ನು ಪ್ರಕಾಶಪಡಿಸುತ್ತಿದ್ದರು. ಕಪ್ಪು ಮೋಡದ ಹಿನ್ನೆಲೆಯಲ್ಲಿ ಬೆಳ್ಳನೆಯ ಬಕಪಕ್ಷಿಗಳ ಸಾಲೊಂದು ಹೋಗುತ್ತಿರುವುದನ್ನು ಕಂಡು ಅವರು ಪ್ರಥಮ ಬಾರಿಗೆ ಸಮಾಧಿಯನ್ನು ಹೊಂದಿದ್ದರು. ಆಗ ಅವರ ವಯಸ್ಸು ಆರು ಅಥವಾ ಏಳು ವರ್ಷ ಅಷ್ಟೇ.

ಹೃದಯದಲ್ಲಿ ಯಾವಾಗ ಯಾವ ಭಾವ ಬರುತ್ತದೋ ಆ ಭಾವದೊಡನೆ ತನ್ಮಯವಾಗುವುದು ಈ ಬಾಲಕ ಮನಸ್ಸಿನ ವಿಶೇಷ ಲಕ್ಷಣವಾಗಿತ್ತು. ಒಮ್ಮೆ ಶಿವರಾತ್ರಿಯ ದಿನ ಶಿವನ ಪಾತ್ರವನ್ನು ಅಭಿನಯಿಸಬೇಕಾದಾಗ ಅವರು ಶಿವಭಾವದಲ್ಲಿ ತನ್ಮಯರಾಗಿ ಬಾಹ್ಯಜ್ಞಾನವನ್ನು ಕಳೆದುಕೊಂಡಿದ್ದರು. ಈ ಎಲ್ಲ ಘಟನೆಗಳಿಂದ ನಮಗೆ ತಿಳಿದು ಬರುವುದೇನೆಂದರೆ ಅವರು ಬಾಲಕರಾಗಿರುವಾಗಲೂ ಬಾಲ್ಯ ಸಹಜ ಚಂಚಲತೆ ಅವರಲ್ಲಿರಲಿಲ್ಲ. ದರ್ಶನ ಅಥವಾ ಶ್ರವಣದ ಮೂಲಕ ಯಾವುದೇ ವಿಷಯದ ಕಡೆ ಅವರ ಮನಸ್ಸು ಆಕರ್ಷಿತವಾದರೂ ಅದರ ಚಿತ್ರ ಅತ್ಯಂತ ದೃಢವಾಗಿ ಅವರ ಮನಸ್ಸಿನಲ್ಲಿ ಬೇರೂರುತ್ತಿತ್ತು. ಅದರಲ್ಲಿ ಸಂಪೂರ್ಣ ಪ್ರಭುತ್ವವನ್ನು ಪಡೆಯದೆ ಇರುವುದು ಮತ್ತು ಅವನ್ನು ಹೊಸ ರೂಪದಲ್ಲಿ ಪ್ರಕಾಶಪಡಿಸದೆ ಇರುವುದು ಬಾಲಕ ರಾಮಕೃಷ್ಣರಿಗೆ ಸಾಧ್ಯವೇ ಇರಲಿಲ್ಲ.

8. ಗ್ರಂಥಾದಿಗಳನ್ನು ಓದದಿದ್ದರೂ ಬಾಹ್ಯ ಜಗತ್ತಿನ ಸಂಪರ್ಕದಿಂದ ಅವರ ಇಂದ್ರಿಯಗಳು ಬಹು ಬೇಗನೆ ಪರಿಣತಿಯನ್ನು ಪಡೆದಿದ್ದುವು. ಅವರ ಮೂಲ ಮಂತ್ರ

ವೇನಾಗಿತ್ತೆಂದರೆ, "ನಾನು ಯಾವುದನ್ನೇ ಆದರೂ ಸರಿಯಾಗಿ ವಿಮರ್ಶಿಸಿ ಸತ್ಯವೆಂದು ಸ್ವೀಕರಿಸುತ್ತೇನೆ. ಅದು ಪ್ರಮಾಣಿತವಾದರೆ ಅದನ್ನು ಕಾರ್ಯರೂಪಕ್ಕೆ ತರುತ್ತೇನೆ. ಈ ಪ್ರಪಂಚದಲ್ಲಿ ಅಸತ್ಯವಲ್ಲದ ಯಾವುದನ್ನೂ ನಾನು ಕಡೆಗಣಿಸುವುದಿಲ್ಲ." ಯೌವನದ ಪ್ರಾರಂಭದಲ್ಲಿ ಅವರನ್ನು ಶಿಕ್ಷಣಕ್ಕಾಗಿ ಶಾಲೆಗೆ ಕಳಿಸಲಾಯಿತು. ಆದರೆ ಅವರ ಶಿಶು ಸ್ವಭಾವ ಅವರನ್ನು ಬಿಡಲೇ ಇಲ್ಲ. ಅವರು ಭಾವಿಸಿದರು : "ಇದರಿಂದ ಏನು ಪ್ರಯೋಜನ ? ರಾತ್ರಿಯೆಲ್ಲಾ ಕುಳಿತು ಓದಿ ಟೀಕೆ ಟಿಪ್ಪಣಿಗಳನ್ನೆಲ್ಲಾ ಕಂಠಸ್ಥ ಮಾಡಿಕೊಳ್ಳುವುದರಿಂದ ಏನು ದೊರಕೀತು ? ಇದರಿಂದ ನನಗೆ ಸತ್ಯ ದೊರಕುವುದೇ ?" ಇಂಥ ಶಿಕ್ಷಣದಿಂದ ರೂಪಿತನಾದ ಉಪಾಧ್ಯಾಯನನ್ನು ತೋರಿಸಿ ಮನಸ್ಸಿಗೆ ಈ ರೀತಿ ಹೇಳುತ್ತಿದ್ದರು: "ನೀನು ಅವನಂತೆಯೇ ಆಗುವೆ. ಸರಳವಾದ ಶಬ್ದಗಳಿಗೆ ಏನೇನೋ ಅರ್ಥ ಕಲ್ಪಿಸುವ ಜಾಣ್ಮೆ ಪಡೆಯುವೆ. ಅವನಂತೆಯೇ ಶ್ರೀಮಂತನನ್ನು ಹೊಗಳಿ ಹಣಸಂಪಾದನೆ ಮಾಡಿ ಜೀವನ ಹೊರೆಯುವೆ. ನೀನು ಶಾಸ್ತ್ರದಲ್ಲಿ ಹೇಳಿರುವ ಸತ್ಯಗಳನ್ನು ಇತರರಿಗೆ ಬೋಧಿಸುತ್ತೀಯೆ. ಆದರೆ ಗಂಧದ ಮರವನ್ನು ಹೊರುವ ಕತ್ತೆಯಂತೆ ಆ ಸತ್ಯಗಳನ್ನು ಎಂದೂ ಜೀವನದಲ್ಲಿ ಸಾಕ್ಷಾತ್ಕರಿಸಿಕೊಳ್ಳುವುದಿಲ್ಲ." ಅವರ ವೈಚಾರಿಕ ಬುದ್ಧಿ ಅವರಿಗೆ ಹೇಳಿತು : "ಇಂಥ ಹೊಟ್ಟೆ ಹೊರೆಯುವ ಶಿಕ್ಷಣದಿಂದ ಏನೂ ಪ್ರಯೋಜನವಿಲ್ಲ. ಇದರ ಬದಲು ಯಾವ ಶಿಕ್ಷಣದಿಂದ ಸಂಪೂರ್ಣ ಸತ್ಯವನ್ನು ಅರಿಯಬಹುದೋ ಮತ್ತು ಮಾನವ ಜೀವನದ ರಹಸ್ಯವನ್ನು ತಿಳಿಯಬಹುದೋ ಅದನ್ನು ಪಡೆಯಲು ಪ್ರಯತ್ನಿಸು." ರಾಮಕೃಷ್ಣರು ಶಾಲೆಗೆ ಹೋಗುವುದನ್ನು ನಿಲ್ಲಿಸಿ ದೇವಿಯ ಪೂಜೆಯ ಕಡೆ ತಮ್ಮ ಮನಸ್ಸನ್ನು ಹರಿಸಿದರು. ಆದರೂ ಅವರ ಮನಸ್ಸಿಗೆ ಶಾಂತಿಯೆಲ್ಲಿ ? ಅದು ಹೇಳಿತು: "ಅವಳು ನಿಜವಾಗಿಯೂ ಜಗಜ್ಜನನಿಯೆ? ಆನಂದಮಯಿಯೆ? ಅಥವಾ ಕೇವಲ ಕಲ್ಲಿನ ವಿಗ್ರಹವೇ? ಭಕ್ತಿಯಿಂದ ಅರ್ಪಿಸಿದ ಹೂವು ಪತ್ರೆ ಇತ್ಯಾದಿಗಳನ್ನು ಅವಳು ಸ್ವೀಕರಿಸುವುದು ನಿಜವೇ? ಅವಳ ಕೃಪಾದೃಷ್ಟಿ ಮನುಷ್ಯನನ್ನು ಎಲ್ಲಾ ಬಂಧನಗಳಿಂದಲೂ ಬಿಡುಗಡೆ ಮಾಡಿ ಅವನಿಗೆ ದಿವ್ಯಜ್ಞಾನವನ್ನು ನೀಡುವುದು ನಿಜವೇ? ಅಥವಾ ಕಲ್ಪನೆ ಸಂಪ್ರದಾಯಗಳಿಂದ ನಿರ್ಮಿತವಾದ ಕೇವಲ ಮೂಢನಂಬಿಕೆಯೆ ? ಹೀಗೆ ಮನುಷ್ಯನು ತನ್ನನ್ನು ತಾನು ಮೋಸಪಡಿಸಿಕೊಳ್ಳುತ್ತಿರುವನೆ ?" ಅವರ ಮನಸ್ಸು ಈ ಸಮಸ್ಯೆಯನ್ನು ಬಗೆಹರಿಸುವುದರಲ್ಲಿ ಅತ್ಯಂತ ಉತ್ಸುಕವಾಯಿತು. ಇದರ ಒಟ್ಟಿಗೆ ತೀವ್ರ ವೈರಾಗ್ಯದ ಕುಡಿಯು ನಿಧಾನವಾಗಿ ಅಜ್ಞಾತವಾಗಿ ಅವರ ಸರಳ ಮನಸ್ಸಿನಲ್ಲಿ ಬೆಳೆಯುತ್ತಿತ್ತು. ಅವರಿಗೆ ಮದುವೆಯಾಯಿತು. ಆದರೆ ಆ ಸಮಸ್ಯೆಯನ್ನು ಬಗೆಹರಿಸದೆ ಪ್ರಾಪಂಚಿಕ ಸುಖವನ್ನು ಅನುಭವಿಸುವುದೆಂತು? ಈ ಸಮಸ್ಯೆಯನ್ನು ಬೇರೆ ಬೇರೆ ರೀತಿಯಲ್ಲಿ ಬಗೆಹರಿಸುವುದರಲ್ಲಿ ಅವರ ಮನಸ್ಸು ನಿಮಗ್ನವಾಯಿತು. ಮದುವೆ ಪ್ರಾಪಂಚಿಕ ಆಗುಹೋಗುಗಳು ಪ್ರಾಪಂಚಿಕ ಚಿಂತನೆಗಳು ಹಣಸಂಗ್ರಹ ಸುಖ ಮತ್ತು ಅಷ್ಟೇ ಅಲ್ಲದೆ ಮೂಲಭೂತ ಆವಶ್ಯಕಗಳಾದ ಆಹಾರ ವಿಹಾರ ನಿದ್ರೆ, ಇವುಗಳೂ ಕೂಡ ವ್ಯರ್ಥ ನೆನಪುಗಳಾಗಿ ಉಳಿದವು. ಶ್ರೀರಾಮಕೃಷ್ಣರ ಶಿಶು ಸ್ವಭಾವವು ಕಾಮಾರಪುಕುರದ ವ್ಯವಹಾರ ಕುಶಲರಿಗೆ ಪರಿಹಾಸ್ಯಕ್ಕೆ ಕಾರಣವಾಗಿ

ದ್ದುವು. ದಕ್ಷಿಣೇಶ್ವರದಲ್ಲಿ ಅದೇ ಬಾಲಕ ಸ್ವಭಾವವು ಇನ್ನೂ ಪರಿಣತಿಗೊಂಡು ಎಲ್ಲರೂ ಅವರನ್ನು ಹುಚ್ಚರೆಂದು ಕರೆಯುವಂತೆ ಆಗಿತ್ತು. ಆದರೆ ಆ ಹುಚ್ಚುತನದಲ್ಲಿ ಉದ್ದೇಶ ಹೀನತೆಯಾಗಲಿ ಅಥವಾ ಅಸಂಬದ್ಧತೆಯಾಗಲಿ ಇತ್ತೇ? "ನಾನು ಇಂದ್ರಿಯಾತೀತವಾದ ಸತ್ಯಸಾಕ್ಷಾತ್ಕಾರವನ್ನು ಪಡೆಯುತ್ತೇನೆ. ಅದನ್ನು ಸ್ಪರ್ಶಿಸುತ್ತೇನೆ. ಅದರ ಸಂಪೂರ್ಣ ರುಚಿ ನೋಡುತ್ತೇನೆ."—ಇದು ಆ ಹುಚ್ಚುತನದ ವಿಶೇಷ ಲಕ್ಷಣವಾಗಿತ್ತು. ಮನಸ್ಸಿನ ಈ ಕಠಿಣ ನಿರ್ಧಾರ, ಸೋಲೊಪ್ಪದ ಹೋರಾಟ ಮತ್ತು ಏಕನಿಷ್ಠೆ ಇವು ಕಾಮಾರ ಪುಕುರದಲ್ಲಿದ್ದಾಗ ಬಾಲಕ ರಾಮಕೃಷ್ಣರ ಬಾಲಕತ್ವಕ್ಕೆ ಒಂದು ಹೊಸ ಶೋಭೆಯನ್ನು ನೀಡಿತ್ತು. ಈಗ ಅದನ್ನೇ ಸ್ಥೂಲಬುದ್ಧಿಯವರು ಹುಚ್ಚುತನವೆಂದು ಪರಿಗಣಿಸುತ್ತಿದ್ದಾರೆ. ಎಂಥಾ ವಿಪರ್ಯಾಸ !

9. ಹನ್ನೆರಡು ವರ್ಷಗಳವರೆಗೆ ಅವರ ಅಂತರಂಗದಲ್ಲಿ ಪ್ರಬಲವಾದ ಬಿರುಗಾಳಿ ಬೀಸತೊಡಗಿತು. ಅಂತರಂಗದ ಭೀಷಣ ಸಂಗ್ರಾಮದಲ್ಲಿ ಸಂದೇಹಗಳ ತರಂಗಾಘಾತ ದಿಂದ ಅವರ ಜೀವನ ನೌಕೆಯು ಮುಳುಗಿಯೇ ಹೋಗುವಂತಿತ್ತು. ಆದರೆ ಆ ವೀರ ಹೃದಯವು ಮೃತ್ಯುವಿನ ಸಮ್ಮುಖದಲ್ಲಿಯೂ ಕಂಪಿಸಲಿಲ್ಲ. ಹೋಗಬೇಕಾದ ದಾರಿ ಯನ್ನು ಬಿಡಲಿಲ್ಲ. ಭಗವದ್ಭಕ್ತಿ ಮತ್ತು ವಿಶ್ವಾಸ ಇವುಗಳ ಸಹಾಯದಿಂದ ಧೈರ್ಯ ವಾಗಿ, ಸ್ಥಿರವಾಗಿ ತಮ್ಮ ಮಾರ್ಗದಲ್ಲಿ ಮುಂದುವರಿದರು. ಸಂಸಾರದ ಕಾಮಕಾಂಚನ ಮಯ ಕೋಲಾಹಲ ಮತ್ತು ಒಳಿತು ಕೆಡುಕು, ಧರ್ಮ ಅಧರ್ಮ, ಪಾಪ ಪುಣ್ಯ ಇವೇ ಮುಂತಾದುವುಗಳು ಎಲ್ಲಿಯೋ ಬಿದ್ದುಹೋದುವು. ಅವನ್ನೆಲ್ಲ ಹಿಂದೆ ಬಿಟ್ಟು ಭಕ್ತಿ ಪ್ರವಾಹದಲ್ಲಿ ಕೊಚ್ಚಿಕೊಂಡು ಮುಂದೆ ಸಾಗಿದರು. ಆ ಪ್ರಬಲ ತಪಸ್ಸಿನ, ಆ ಅನಂತ ಭಾವಸಮೂಹದ ಪ್ರಭಾವದಿಂದ ಶ್ರೀರಾಮಕೃಷ್ಣರ ಬಲಿಷ್ಠವಾದ ದೇಹ ಮತ್ತು ಮನಸ್ಸು ನುಚ್ಚುನೂರಾಯಿತು ಮತ್ತು ಅದು ಹೊಸ ಆಕಾರವನ್ನು, ಹೊಸ ಶೋಭೆ ಯನ್ನು ಪಡೆಯಿತು. ಹೀಗೆ ಮಹಾಸತ್ಯ, ಮಹಾಭಾವ, ಮಹಾಶಕ್ತಿ ಇವುಗಳನ್ನು ಧರಿ ಸಲು ಮತ್ತು ಇತರರಿಗೆ ನೀಡಲು ಒಂದು ಯೋಗ್ಯವಾದ ಯಂತ್ರವಾಗಿ ಅವರ ದೇಹವು ಪರಿಣಮಿಸಿತು.

ಶ್ರೀರಾಮಕೃಷ್ಣರ ಈ ಅದ್ಭುತ ಜೀವನ ಕಥೆಯನ್ನು ಗ್ರಹಿಸುವುದು ಎಲ್ಲರಿಗೂ ಸಾಧ್ಯವಿಲ್ಲ. ಅಳತೆ ಸಂಖ್ಯೆಗಳ ಮೂಲಕ ಸ್ಥೂಲದೃಷ್ಟಿಯಿಂದ ವಸ್ತುಗಳನ್ನು ಅಳೆಯು ವುದು ಎಲ್ಲರಿಗೂ ಸಾಧ್ಯ. ಲೇಶಮಾತ್ರವೂ ಸ್ವಾರ್ಥತೆಯಿಲ್ಲದ ಅಹಂಕಾರವನ್ನು ಸಮೂಲವಾಗಿ ಕಿತ್ತೆಸೆದ ಆ ಸೂಕ್ಷ್ಮಶಕ್ತಿಯನ್ನು ಜನಸಾಮಾನ್ಯರು ಹೇಗೆ ಅರ್ಥಮಾಡಿ ಕೊಳ್ಳಬಲ್ಲರು ? ತಿಳಿದೊ ತಿಳಿಯದೆಯೊ ಲೋಹವು ಸ್ವಲ್ಪ ಸ್ಪರ್ಶಿಸಿದರೂ ಕೂಡ ಶ್ರೀರಾಮಕೃಷ್ಣರಿಗೆ ಚೇಳು ಕಡಿದಂತಾಗುತ್ತಿತ್ತು. ಅದಕ್ಕಾಗಿ ಆಸೆ ಪಡುವುದಂತೂ ದೂರದ ಮಾತು ! ಎಲೆ, ಹೂವು ಮುಂತಾದ ಸಾಮಾನ್ಯವಸ್ತುಗಳನ್ನೂ ಕೂಡ ಅವು ಗಳ ಒಡೆಯನ ಅನುಮತಿ ಇಲ್ಲದೆ ತಿಳಿದೋ ತಿಳಿಯದೆಯೋ ತೆಗೆದುಕೊಂಡು ಬರು ವಾಗ ಅವರಿಗೆ ಅತ್ಯಂತ ಚಿರಪರಿಚಿತವಿದ್ದ ಹಾದಿಯೂ ಮರೆತು ಹೋಗಿ ಬಿಡುತ್ತಿತ್ತು.

ಅದನ್ನು ಅವರು ಹಿಂತಿರುಗಿಸಿ ಕೊಡಲೆ ಬೇಕಾಗಿತ್ತು. ಅವರು ಏನಾದರೂ ಗಂಟನ್ನು ಕಟ್ಟಿದರೆ ಅದನ್ನು ಬಿಚ್ಚುವವರೆಗೂ ಉಸಿರು ಕಟ್ಟುತ್ತಿತ್ತು. ಈ ಎಲ್ಲ ಭೌತಿಕ ಬದಲಾವಣೆಗಳೂ ಅತ್ಯಂತ ಪರಿಶುದ್ಧ ಮಾನಸಿಕ ಸ್ಥಿತಿಯ ಅಭಿವ್ಯಕ್ತಿ. ಸ್ವಹಿತ ಪ್ರಧಾನ ಮಾನವದೃಷ್ಟಿಗೆ ಇದನ್ನು ಅರ್ಥಮಾಡಿಕೊಳ್ಳುವ ಸಾಧ್ಯತೆ ಎಲ್ಲಿ ? ನಮ್ಮ ಅದ್ಭುತ ಕಲ್ಪನಾಶಕ್ತಿಯಾದರೂ ಈ ಭಾವನೆಗಳ ಪರಿಶುದ್ಧ ಸ್ತರವನ್ನು ಮುಟ್ಟಬಲ್ಲವೇ ? ನಾವು ಹುಟ್ಟಿದಂದಿನಿಂದಲೂ ನಮ್ಮ ಅಶುದ್ಧ ಭಾವನೆಗಳನ್ನು ಗೋಪ್ಯವಾಗಿರಿಸಿ ನಮ್ಮನ್ನು ಪರಿಶುದ್ಧರೆಂದು ತೋರಿಸುಕೊಳ್ಳುವುದನ್ನು ಕಲಿತಿದ್ದೇವೆ. ಮೋಸದಿಂದ ಧನಿಕರೋ ಅಥವಾ ಪ್ರಸಿದ್ಧರೋ ಆಗಿರುವ ಎಷ್ಟು ಜನ ವ್ಯಕ್ತಿಗಳು ತಮ್ಮ ಸತ್ಯವನ್ನು ಹೊರಗೆಡಹಲು ಸಿದ್ಧರಿರುವರು ? ಮತ್ತೆ ಧೈರ್ಯದ ವಿಷಯವನ್ನು ನೋಡಿ. ನಮಗೆ ಒಬ್ಬನಿಗೆ ಹತ್ತು ಏಟು ಕೊಡುವ ಸಾಮರ್ಥ್ಯ ಇಲ್ಲದಿರಬಹುದು ಅಥವಾ ಬೆಂಕಿಯನ್ನುಗುಳುವ ತೋಪಿನೆಡೆಗೆ ಧಾವಿಸಿ ಅದನ್ನು ಹಿಡಿಯುವ ಧೈರ್ಯವಿಲ್ಲದೆ ಇರಬಹುದು. ನಮ್ಮ ಧ್ಯೇಯ ಸಾಧನೆಗೆ ಪ್ರಾಣವನ್ನೇ ಧಾರೆ ಎರೆಯುವ ಧೈರ್ಯ ಇಲ್ಲದೆ ಇರಬಹುದು. ಆದರೂ ಅಂಥ ಮಹತ್ಕೃತ್ಯಗಳನ್ನು ಕೇಳಿ ಮೆಚ್ಚುತ್ತೇವೆ ಮತ್ತು ಹೆಮ್ಮೆ ಪಡುತ್ತೇವೆ. ಆದರೆ ಶ್ರೀರಾಮಕೃಷ್ಣರು ಇಂದ್ರಿಯಾತೀತವಾದ ಅಜ್ಞಾತವಾದ ಅಪರಿಚಿತವಾದ ಸತ್ಯಕ್ಕಾಗಿ ಇಹಪರ ಸುಖಗಳೆರಡನ್ನೂ ತ್ಯಜಿಸಿ ತಮ್ಮ ಜೀವನವನ್ನೇ ಗಂಡಾಂತರಕ್ಕೆ ಒಡ್ಡಿದುದನ್ನು ಎಷ್ಟು ಜನ ಮೆಚ್ಚಿ ಪ್ರಶಂಸಿಸಬಲ್ಲರು ? ಯಾರು ಇದನ್ನು ಮೆಚ್ಚಿ ಗೌರವಿಸಲು ಸಮರ್ಥರೋ ಅವರು ಖಂಡಿತ ಮೃತ್ಯುಂಜಯರಾಗುವರು.

10. ಶ್ರೀರಾಮಕೃಷ್ಣರ ಅತ್ಯಂತ ಸಾಮಾನ್ಯ ಮಾತು ಮತ್ತು ಕೃತಿಗಳ ಹಿಂದೆಯೂ ಎಂಥ ಆಳವಾದ ಅರ್ಥವಿತ್ತೆಂಬುದನ್ನು ತಾವೇ ಅದನ್ನು ತಿಳಿಸಿ ಕೊಡದಿದ್ದರೆ ಯಾರಿಗೂ ತಿಳಿಯಲಾಗುತ್ತಿರಲಿಲ್ಲ. ಒಂದು ದಿನ ಅವರು ಪರಿಚಿತ ವಸ್ತುಗಳ ಮತ್ತು ವ್ಯಕ್ತಿಗಳ ಹೆಸರುಗಳನ್ನು ತಾವು ಏಕೆ ಪ್ರಸ್ತಾಪಿಸಿದುದು ಅಥವಾ ಸಮಾಧಿಯಿಂದ ಕೆಳಗಿಳಿದು ಬರುವಾಗ ಯಾವುದಾದರೂ ಆಹಾರ ವಸ್ತುಗಳ ಹೆಸರು ತಿಳಿಸಿ ಅವನ್ನು ಸ್ವೀಕರಿಸುತ್ತೇನೆ ಎಂದು ಹೇಳುವುದಕ್ಕೆ ಕಾರಣವನ್ನು ವಿವರಿಸಿ ಹೇಳಿದರು. ಅವರು ಹೇಳಿದರು: "ಸಾಧಾರಣ ಮಾನವರ ಮನಸ್ಸು ನಾಭಿಯ ಕೆಳಗಿನ ಸೂಕ್ಷ್ಮ ನರಮಂಡಲಗಳಲ್ಲಿಯೇ ಚಲಿಸುತ್ತಿರುತ್ತದೆ ಸ್ವಲ್ಪ ಶುದ್ಧವಾದಾಗ ಆ ಮನಸ್ಸು ಆಗಾಗ ಹೃದಯ ಚಕ್ರಕ್ಕೆ ಏರುತ್ತದೆ. ಆಗ ಜ್ಯೋತಿ ಅಥವಾ ಜ್ಯೋತಿರ್ಮಯ ರೂಪಾದಿಗಳನ್ನು ಕಂಡು ಸ್ವಲ್ಪ ಆನಂದವನ್ನು ಅನುಭವಿಸುತ್ತದೆ. ಏಕಾಗ್ರತೆಯು ಇನ್ನೂ ಆಳವಾದಂತೆಲ್ಲ ಮನಸ್ಸು ಕಂಠದಲ್ಲಿರುವ ಚಕ್ರಕ್ಕೆ ಏರುತ್ತದೆ. ಆಗ ತನ್ನ ಆರಾಧ್ಯ ವಸ್ತುವನ್ನು ಬಿಟ್ಟು ಬೇರೆ ನನ್ನೂ ಆಲೋಚಿಸಲು ಮನಸ್ಸು ಇಷ್ಟಪಡುವುದಿಲ್ಲ. ಇಲ್ಲಿಂದಲೂ ಮನಸ್ಸು ಕೆಳಗಿಳಿದು ಒಂದು ತನ್ನ ನಿಷ್ಠೆಯನ್ನು ಕಳೆದುಕೊಳ್ಳುವ ಸಂಭವವುಂಟು. ಆದರೆ ಹೇಗಾದರೂ ಮಾಡಿ ಮನಸ್ಸು ಕಂಠದಿಂದಲೂ ಮೇಲೇರಿ ಭ್ರೂಮಧ್ಯದಲ್ಲಿರುವ ಚಕ್ರವನ್ನು ತಲುಪಿತೆಂದರೆ ಆಗ ಉಂಟಾಗುವ ಸಮಾಧಿಯ ಆನಂದದ ಮುಂದೆ ನಿಮ್ನ ಚಕ್ರಗಳ ಆನಂದ

ಗಳು ಅತ್ಯಂತ ತುಚ್ಛವಾಗಿ ಪರಿಣಮಿಸುವುವು. ಅಲ್ಲಿಂದ ಕೆಳಗಿಳಿದು ಬೀಳುವ ಸಂಭವ ವಿಲ್ಲ. ಅಲ್ಲಿ ಸ್ವಲ್ಪ ಮಾತ್ರ ಆವರಣ ಇರುವ ಪರಮಾತ್ಮ ಜ್ಯೋತಿಯು ಅವನ ಮುಂದೆ ಪ್ರಕಾಶಿಸುತ್ತದೆ. ಅಲ್ಲಿ ಪರಮಾತ್ಮನೊಡನೆ ಸ್ವಲ್ಪ ಮಾತ್ರ ಭೇದ ಉಳಿದರೂ ಅದ್ವೈತ ಜ್ಞಾನವು ಅವನಿಗೆ ಪ್ರಾಪ್ತವಾಗುವುದು. ಈ ಚಕ್ರವನ್ನೂ ಭೇದಿಸಲು ಅವನಿಗೆ ಸಾಧ್ಯ ವಾದರೆ ಭೇದಾಭೇದ ಜ್ಞಾನವು ಸಂಪೂರ್ಣ ಕರಗಿ ಹೋಗಿ ಪೂರ್ಣ ಅದ್ವೈತ ಸ್ಥಿತಿ ಯನ್ನು ಪಡೆಯುತ್ತಾನೆ. ನನ್ನ ಮನಸ್ಸು ನಿಮಗೆಲ್ಲ ಉಪದೇಶ ನೀಡುವುದಕ್ಕಾಗಿ ಕಂಠ ದಲ್ಲಿರುವ ಚಕ್ರದವರೆಗೆ ಇಳಿದು ಬಂದಿರುತ್ತದೆ. ಅಲ್ಲಿಯೂ ಅದನ್ನು ಒತ್ತಾಯಪೂರ್ವಕ ವಾಗಿ ಹಿಡಿದು ನಿಲ್ಲಿಸಬೇಕು. ಪೂರ್ಣ ಆರುತಿಂಗಳು ಅದ್ವೈತ ಜ್ಞಾನಾವಸ್ಥೆಯಲ್ಲಿ ಇದ್ದ ದ್ದರಿಂದ ಮನಸ್ಸಿನ ಸ್ವಾಭಾವಿಕಗತಿಯು ಅದರಕಡೆಗೆ ಹರಿಯುವುದಾಗಿದೆ. ಅದನ್ನು ಮಾಡುತ್ತೇನೆ, ಇದನ್ನು ತಿನ್ನುತ್ತೇನೆ, ಇವನನ್ನು ನೋಡುತ್ತೇನೆ, ಅಲ್ಲಿಗೆ ಹೋಗುತ್ತೇನೆ, ಇತ್ಯಾದಿ ಸಾಮಾನ್ಯ ಆಸೆಗಳನ್ನು ಇಟ್ಟುಕೊಳ್ಳದೆ ಅದನ್ನು ಕೆಳಗಿಳಿಸುವುದು ತುಂಬಾ ಕಷ್ಟವಾಗುತ್ತದೆ. ಅದು ಕೆಳಗಿಳಿಯದೆ ಮಾತನಾಡುವುದು, ಓಡಾಡುವುದು, ಉಣ್ಣುವುದು, ಇತ್ಯಾದಿಗಳು ಅಸಾಧ್ಯವಾಗುತ್ತವೆ. ಆದ್ದರಿಂದಲೇ ಸಮಾಧಿಸ್ಥಿತಿಗೇರುವ ಸಮಯದ ಲ್ಲಿಯೇ ಏನಾದರೂ ಒಂದು ಸಾಮಾನ್ಯ ಆಸೆಯನ್ನು ಇಟ್ಟುಕೊಂಡಿರುತ್ತೇನೆ. ಆದರೂ ಅನೇಕ ಸಮಯದಲ್ಲಿ ಆ ಆಸೆಯನ್ನು ಮತ್ತೆ ಮತ್ತೆ ಉಲ್ಲೇಖಿಸಿದಾಗಲೇ ಮನಸ್ಸು ಸ್ವಲ್ಪ ಕೆಳಗಿಳಿದು ಬರುತ್ತದೆ."

11. ಪಂಚದಶಿಕಾರರು ಹೇಳುತ್ತಾರೆ : "ಸಮಾಧಿಯನ್ನು ಪಡೆದ ವ್ಯಕ್ತಿಯು ಹಿಂದೆ ಇದ್ದ ಪರಿಸ್ಥಿತಿಯನ್ನು ತಾನು ಸಮರ್ಥನಾದರೂ ಬದಲಾಯಿಸಲು ಇಷ್ಟಪಡುವು ದಿಲ್ಲ. ಏಕೆಂದರೆ ಬ್ರಹ್ಮನ ಹೊರತಾಗಿ ಎಲ್ಲಾ ವಸ್ತುಗಳು ಅಥವಾ ಅವಸ್ಥೆಗಳು ಅವನಿಗೆ ಅತ್ಯಂತ ತುಚ್ಛವಾಗಿ ಕಾಣಿಸುವುವು." ಹಿಂದೆ ಹೇಳಿದ ಆಧ್ಯಾತ್ಮಿಕ ಭಾವ ಪ್ರವಾಹದಲ್ಲಿ ಶ್ರೀರಾಮಕೃಷ್ಣರು ಮುಳುಗುವುದಕ್ಕೆ ಮುಂಚೆ ಅವರ ಜೀವನ ಯಾವ ರೀತಿ ಇತ್ತು ಎಂಬುದನ್ನು ದಕ್ಷಿಣೇಶ್ವರದಲ್ಲಿ ಅವರ ದೈನಂದಿನ ಸಾಮಾನ್ಯ ಚಟುವಟಿಕೆಗಳನ್ನು ನೋಡಿ ನಿರ್ಧರಿಸಬಹುದು. ಅವುಗಳಲ್ಲಿ ಒಂದೆರಡನ್ನು ಇಲ್ಲಿ ಉಲ್ಲೇಖಿಸಿದರೆ ಅಪ್ರಸ್ತುತವಾಗ ಲಾರದು.

ದೇಹ, ಬಟ್ಟೆ, ಹಾಸಿಗೆ ಇವುಗಳೆಲ್ಲವನ್ನೂ ಅತ್ಯಂತ ಸ್ವಚ್ಛವಾಗಿ ಇಡುವುದು ಅವರ ಅಭ್ಯಾಸವಾಗಿತ್ತು. ಯಾವ ವಸ್ತುವನ್ನು ಎಲ್ಲಿ ಇಡಬೇಕೋ ಅದನ್ನು ಅಲ್ಲಿಯೇ ಇಡುತ್ತಿದ್ದರು ಮತ್ತು ಇತರರಿಗೂ ಹಾಗೆಯೇ ಮಾಡಲು ಹೇಳುತ್ತಿದ್ದರು. ಯಾರಾ ದರೂ ಹಾಗೆ ಮಾಡದಿದ್ದರೆ ಕೋಪಗೊಳ್ಳುತ್ತಿದ್ದರು. ಯಾವುದೇ ಸ್ಥಳಕ್ಕೆ ಹೋಗುವಾಗ ಟವಲ್ಲು, ಚಿಕ್ಕ ಚೀಲ ಇತ್ಯಾದಿಗಳು ಇವೆಯೋ ಇಲ್ಲವೇ ಎಂಬುದನ್ನು ನೋಡು ತ್ತಿದ್ದರು. ಮತ್ತೆ ಅಲ್ಲಿಂದ ಹಿಂದಿರುಗಿ ಬರುವಾಗ ಶಿಷ್ಯರಿಗೆ ಹೇಳುತ್ತಿದ್ದರು, ಅವುಗಳನ್ನು ಮರೆಯಬಾರದೆಂದು. ಸಮಯಕ್ಕೆ ಸರಿಯಾಗಿ ಎಲ್ಲವನ್ನೂ ಮಾಡಬೇಕಾಗಿತ್ತು. ಏನಾ ದರೂ ಒಂದನ್ನು ಮಾಡುತ್ತೇನೆ ಎಂದರೆ ಅದನ್ನು ಮಾಡಿಯೇ ಬಿಡುತ್ತಿದ್ದರು. ಯಾವುದೇ

ವಸ್ತುವನ್ನಾಗಲಿ ತಾವು ಯಾರಿಂದ ಅದನ್ನು ಪಡೆಯುತ್ತೇವೆ ಎಂದು ಹೇಳಿದ್ದರೋ ಅವನಿಂದಲೇ ಅದನ್ನು ಸ್ವೀಕರಿಸಬೇಕಿತ್ತು. ಇಲ್ಲದಿದ್ದರೆ ಸುಳ್ಳು ಹೇಳಿದಂತಾಗಿಬಿಡುತ್ತಿತ್ತು. ಅದರಿಂದ ಎಷ್ಟೇ ತೊಂದರೆಯಾದರೂ ಅವರು ಅದನ್ನು ಸಹಿಸುತ್ತಿದ್ದರು. ಹರಿದ ಬಟ್ಟೆಯನ್ನೋ ಛತ್ರಿಯನ್ನೋ ಅಥವಾ ಚಪ್ಪಲಿಯನ್ನೋ ಯಾರಾದರೂ ಉಪಯೋಗಿಸುವುದನ್ನು ನೋಡಿದರೆ ಶ್ರೀರಾಮಕೃಷ್ಣರು ಅವನಿಗೆ ಹೊಸದನ್ನು ಕೊಂಡುಕೊಳ್ಳಲು ಹೇಳುತ್ತಿದ್ದರು. ಅವನು ಕೊಂಡುಕೊಳ್ಳಲು ಅಸಮರ್ಥನಾದರೆ ತಾವೇ ಕೊಡಿಸುತ್ತಿದ್ದರು. ಅವರು ಹೇಳುತ್ತಿದ್ದರು : "ಆ ರೀತಿಯ ವಸ್ತುಗಳನ್ನು ಉಪಯೋಗಿಸಿದರೆ ಲಕ್ಷ್ಮಿ ದೂರವಾಗುವಳು. ತೇಜಸ್ಸು ನಷ್ಟವಾಗುವುದು" ಎಂದು. ಅಭಿಮಾನ ಅಹಂಕಾರ ಸೂಚಕವಾದ ವಾಕ್ಯಗಳು ಅವರ ಬಾಯಿಂದ ಬರುವುದು ಸಾಧ್ಯವೇ ಇರಲಿಲ್ಲ. ತಮ್ಮ ಅಭಿಪ್ರಾಯವನ್ನು ಹೇಳಬೇಕಾದಾಗ ತಮ್ಮ ಶರೀರದ ಕಡೆ ನಿರ್ದೇಶಿಸಿ 'ಇಲ್ಲಿಯ ಮತ, ಇಲ್ಲಿಯ ಭಾವ' ಇತ್ಯಾದಿ ಶಬ್ದಗಳನ್ನು ಪ್ರಯೋಗಿಸುತ್ತಿದ್ದರು. ಶಿಷ್ಯರ ಕೈ, ಕಾಲು, ಮುಖ, ಕಣ್ಣು ಇತ್ಯಾದಿ ಅಂಗಗಳ ಲಕ್ಷಣಗಳನ್ನು ನೋಡಿ ಮತ್ತು ಅವರ ಚಲನವಲನೆ, ಆಹಾರ, ವಿಹಾರ, ನಿದ್ರೆ ಇತ್ಯಾದಿಗಳನ್ನು ಗಮನಿಸಿ ಅವರ ಮಾನಸಿಕ ಸ್ಥಿತಿಯನ್ನು ಅರ್ಥ ಮಾಡಿಕೊಂಡುಬಿಡುತ್ತಿದ್ದರು. ಅವರ ಮಾನಸಿಕ ಪ್ರವೃತ್ತಿಗಳ ಗತಿಯೇನು, ಆ ಪ್ರವೃತ್ತಿಗಳು ಎಷ್ಟು ಪ್ರಬಲವಾಗಿವೆ ಇತ್ಯಾದಿಗಳನ್ನು ಅವರು ಎಷ್ಟು ಕರಾರುವಾಕ್ಕಾಗಿ ನಿರ್ಧರಿಸುತ್ತಿದ್ದರೆಂದರೆ ಈ ವಿಷಯದಲ್ಲಿ ಅವರು ತಪ್ಪಿದ್ದನ್ನು ಎಂದೂ ನಾವು ಕಂಡಿದ್ದಿಲ್ಲ.

12. ಶ್ರೀರಾಮಕೃಷ್ಣರೆಡೆಗೆ ಹೋದವರೆಲ್ಲರೂ ಹೇಳುತ್ತಾರೆ, ತಮ್ಮನ್ನೇ ಅವರು ಇತರರೆಲ್ಲರಿಗಿಂತ ಹೆಚ್ಚು ಪ್ರೀತಿಸಿದರು ಎಂದು. ಪ್ರತಿಯೊಬ್ಬ ವ್ಯಕ್ತಿಯ ಸುಖದುಃಖಾದಿ ಅನುಭವಗಳ ವಿಷಯದಲ್ಲಿ ಶ್ರೀರಾಮಕೃಷ್ಣರಿಗಿದ್ದ ಪ್ರಗಾಢವಾದ ಸಹಾನುಭೂತಿಯೇ ಇದಕ್ಕೆ ಕಾರಣ ಎಂದು ನಮಗನ್ನಿಸುತ್ತದೆ. ಸಹಾನುಭೂತಿ ಮತ್ತು ಪ್ರೇಮ ಇವೆರಡೂ ಬೇರಬೇರೆಯಾದರೂ ಪ್ರೇಮದ ಬಾಹ್ಯಲಕ್ಷಣವು ಸಹಾನುಭೂತಿಗಿಂತ ಹೆಚ್ಚು ಬೇರೆಯಲ್ಲ. ಆದ್ದರಿಂದ ಸಹಾನುಭೂತಿಯನ್ನು ಪ್ರೇಮವೆಂದು ಹೇಳಿದರೆ ತಪ್ಪಾಗಲಾರದು. ಯಾವುದೇ ವಸ್ತುವನ್ನು ಭಾವಿಸುವಾಗಲೂ ಅದರೊಡನೆ ತನ್ಮಯವಾಗುವುದು ಶ್ರೀರಾಮಕೃಷ್ಣರ ಸ್ವಾಭಾವಿಕ ಲಕ್ಷಣವಾಗಿತ್ತು. ಇದರಿಂದಾಗಿಯೇ ಅವರಿಗೆ ಪ್ರತಿಯೊಬ್ಬ ಶಿಷ್ಯನ ಮಾನಸಿಕ ಸ್ಥಿತಿಯನ್ನೂ ಸರಿಯಾಗಿ ಗ್ರಹಿಸಲು ಸಾಧ್ಯವಾಯಿತು ಮತ್ತು ಅವರವರ ಉನ್ನತಿಗೆ ಯಾವುದು ಆವಶ್ಯಕವೊ ಅದರಂತೆ ಮಾರ್ಗದರ್ಶನ ನೀಡಲು ಸಾಧ್ಯವಾಯಿತು. ಶ್ರೀರಾಮಕೃಷ್ಣರ ಬಾಲಕತ್ವವನ್ನು ವರ್ಣಿಸುವಾಗ ಅವರು ತಮ್ಮ ಎಲ್ಲಾ ಇಂದ್ರಿಯಗಳನ್ನೂ ಸಂಪೂರ್ಣವಾಗಿ ಹೇಗೆ ಬಳಸಿಕೊಳ್ಳಬೇಕೆಂಬುದನ್ನು ತೋರಿಸಿಕೊಟ್ಟಿರುವರು, ಎಂಬುದನ್ನು ನಾವು ವಿವರಿಸಿರುವೆವು. ಈ ಶಿಕ್ಷಣವೆ ಮುಂದೆ ಮನುಷ್ಯನನ್ನು ಹೇಗೆ ರೂಪಿಸಬೇಕು ಎಂಬುದರಲ್ಲಿ ಹೆಚ್ಚು ಸಹಾಯಕವಾಯಿತು. ಶಿಷ್ಯರೂ ಕೂಡ ಎಲ್ಲಾ ಸ್ಥಳಗಳಲ್ಲೂ ಎಲ್ಲಾ ವಿಷಯಗಳಲ್ಲೂ ತಮ್ಮ ಇಂದ್ರಿಯಗಳನ್ನು ಹೇಗೆ ಉಪಯೋಗಿಸಿ

ಕೊಳ್ಳುತ್ತಾರೆ ಎಂಬುದರ ಕಡೆ ಅವರ ವಿಶೇಷ ಲಕ್ಷ್ಯವಿತ್ತು. ಪ್ರತಿಯೊಂದು ಕಾರ್ಯ ವನ್ನೂ ವಿಚಾರಬುದ್ಧಿಯನ್ನವಲಂಬಿಸಿ ನೆರವೇರಿಸಬೇಕೆಂದು ಅವರು ಯಾವಾಗಲೂ ಉಪದೇಶಿಸುತ್ತಿದ್ದರು. ವಿಚಾರಬುದ್ಧಿಯೇ ವಸ್ತುಗಳ ಗುಣಾವಗುಣಗಳನ್ನು ತೋರಿಸಿ ಕೊಟ್ಟು ಮನಸ್ಸನ್ನು ತ್ಯಾಗದ ಕಡೆ ತಿರುಗಿಸುತ್ತದೆ ಎಂದು ಅವರು ಮತ್ತೆ ಮತ್ತೆ ಹೇಳು ತ್ತಿದ್ದುದನ್ನು ನಾವು ಕೇಳಿರುವೆವು. ಬುದ್ಧಿಹೀನತೆಯಾಗಲಿ ಸಂಕುಚಿತ ಬುದ್ಧಿಯಾಗಲಿ ಇವು ಅವರ ಆದರಕ್ಕೆ ಎಂದೂ ಪಾತ್ರವಾಗುತ್ತಿರಲಿಲ್ಲ. "ಭಗವದ್ಭಕ್ತನೆಂದು ಮೂರ್ಖ ನಾಗಿರಬಾರದು" ಅಥವಾ "ಮತಾಂಧನಾಗಬೇಡ. ಮತಾಂಧನಾಗುವುದು ಇಲ್ಲಿಯ ಭಾವವಲ್ಲ. ಒಂದೇ ಬೇಳೆಯನ್ನು ತೊವ್ವೆ, ಸಾಂಬಾರ್, ರಸಂ ಇತ್ಯಾದಿ ಬೇರೆ ಬೇರೆ ರೀತಿಯಲ್ಲಿ ತಿನ್ನುವುದು ಇಲ್ಲಿಯ ಭಾವ" ಎಂದು ಅವರು ಹೇಳುತ್ತಿದ್ದರು. ಅವರು ಸಂಕುಚಿತ ಮನೋಭಾವದವರನ್ನು ನೀನು ತುಂಬಾ ಏಕಮುಖದ ವ್ಯಕ್ತಿ ಎಂದು ಹೇಳು ತ್ತಿದ್ದರು. ಯಾವನಾದರೂ ಒಬ್ಬ ಶಿಷ್ಯನು ಯಾವುದೋ ಒಂದು ವಿಶೇಷ ಭಗವದ್ಭಾವ ದಲ್ಲಿ ಆನಂದವನ್ನು ಪಡೆಯಲು ಅಸಮರ್ಥನಾದರೆ ಅವನನ್ನು ಈ ಮೇಲಿನಂತೆ ತಿರಸ್ಕಾರ ದಿಂದ ಜರಿಯುತ್ತಿದ್ದರು. ಈ ತಿರಸ್ಕಾರ ವಾಕ್ಯವನ್ನು ಅವರು ಯಾವ ರೀತಿ ಉಪ ಯೋಗಿಸುತ್ತಿದ್ದರೆಂದರೆ ಅದನ್ನು ಕೇಳಿದ ಶಿಷ್ಯನು ಲಜ್ಜೆಯಿಂದ ತಲೆ ತಗ್ಗಿಸಬೇಕಾಗು ತ್ತಿತ್ತು. ಈ ರೀತಿಯ ಉದಾರ ಸಾರ್ವತ್ರಿಕ ಮನೋಭಾವದಿಂದಾಗಿಯೇ ಅವರು ಎಲ್ಲಾ ಧರ್ಮಗಳ ಸಾಧನೆಯನ್ನು ಮಾಡಿ 'ಎಷ್ಟು ಮತಗಳೋ ಅಷ್ಟು ಪಥಗಳು' ಎಂದು ಸಾರಲು ಸಾಧ್ಯವಾಯಿತು.

13. ಹೂವು ಅರಳಿತು. ದೇಶ ದೇಶಾಂತರಗಳಿಂದ ದುಂಬಿಗಳು ಉನ್ಮತ್ತವಾಗಿ ನಾಲ್ಕು ಕಡೆಗಳಿಂದ ಓಡಿಓಡಿ ಬರತೊಡಗಿದುವು. ರವಿಕರ ಸ್ಪರ್ಶದಿಂದ ತನ್ನ ಹೃದಯ ವನ್ನು ಸಂಪೂರ್ಣ ಅರಳಿಸಿಕೊಂಡಿದ್ದ ಫುಲ್ಲಕಮಲವು ಅವುಗಳನ್ನೆಲ್ಲಾ ಸಂಪೂರ್ಣ ತೃಪ್ತಿ ಪಡಿಸಲು ಸ್ವಲ್ಪವೂ ಹಿಂಜರಿಯಲಿಲ್ಲ. ಪಾಶ್ಚಾತ್ಯ ಶಿಕ್ಷಣ ಸ್ವಲ್ಪವೂ ಇಲ್ಲದೆ ಪ್ರಾಚೀನ ಧರ್ಮದ ಮೂಲಕ ತಮ್ಮ ಜೀವನವನ್ನು ರೂಪಿಸಿಕೊಂಡಿದ್ದ ಶ್ರೀರಾಮಕೃಷ್ಣರು ತಮ್ಮ ಆಧ್ಯಾತ್ಮಿಕ ಮಧುವನ್ನು ಉದಾರ ಭಾವದಿಂದ ಎಲ್ಲರಿಗೂ ಹಂಚತೊಡಗಿದರು. ಇಂಥ ಅಮೃತ ಆಸ್ವಾದವನ್ನು ಹಿಂದೆ ಎಂದಾದರೂ ಈ ಜಗತ್ತು ಪಡೆದಿರುವುದೆ ? ಶ್ರೀರಾಮಕೃಷ್ಣರು ಅದ್ಭುತ ಆಧ್ಯಾತ್ಮಿಕ ಶಕ್ತಿಯನ್ನು ಪಡೆದು ಅದನ್ನು ತಮ್ಮ ಶಿಷ್ಯರಿಗೆ ನೀಡಿದರು. ಆದರ ಶಕ್ತಿಯ ಪ್ರಭಾವದಿಂದಾಗಿ ಆಧುನಿಕ ವಿಜ್ಞಾನದ ಬೆಳಕನ್ನು ಕಂಡ ಜನರೂಕೂಡ ಧರ್ಮವೊಂದು ಪ್ರತ್ಯಕ್ಷಜ್ಞಾನದ ವಸ್ತು, ಅದು ಜೀವಂತವಾದ ಸತ್ಯ ಮತ್ತು ಅದನ್ನು ಅನುಭವಿಸಬಹುದು ಎಂಬುದನ್ನು ಕಂಡುಕೊಳ್ಳುವಂತಾಯಿತು. ಎಲ್ಲಾ ಧರ್ಮಗಳ ಅಂತರಾಳದಲ್ಲಿಯೂ ಒಂದೇ ಸಾರ್ವತ್ರಿಕವಾದ ಶಾಶ್ವತವಾದ ಮತ್ತು ಬದಲಾಗದ ಸತ್ಯವೊಂದು ಅಂತಃಸ್ರೋತದಂತೆ ಹರಿಯುತ್ತಾ ಅವೆಲ್ಲವನ್ನೂ ಜೀವಂತ ಗೊಳಿಸುತ್ತಿರುವುದು ಎಂಬುದನ್ನು ಜನರು ಕಂಡುಕೊಳ್ಳುವಂತಾಯಿತು. ಒಂದು ಪುಷ್ಪ ದಿಂದ ಮತ್ತೊಂದು ಪುಷ್ಪಕ್ಕೆ ವಾಯು ಸಂಚರಿಸುವಂತೆ ಸತ್ಯದಿಂದ ಸತ್ಯದೆಡೆಗೆ ಸಂಚ

ರಿಸುತ್ತಾ, ಮನುಷ್ಯ ಜೀವನವು ಕ್ರಮವಾಗಿ ಮುಂದುವರಿಯುತ್ತಾ, ಪರಿವರ್ತನೆಗೊಳ್ಳದ ಒಂದು ಅದ್ವೈತದ ಸತ್ಯದೆಡೆಗೆ ಸಾಗುತ್ತಿದೆ ಮತ್ತು ಒಂದಲ್ಲ ಒಂದು ದಿನ ಆ ಅವಾಙ್ಮಾನಸಗೋಚರ ಸತ್ಯವನ್ನು ನಿಶ್ಚಯವಾಗಿ ಪಡೆದು ಧನ್ಯವಾಗುವುದು. ಈ ಅಭಯವಾಣಿಯನ್ನು ಮನುಷ್ಯಲೋಕದಲ್ಲಿ ಹಿಂದೆ ಯಾರಾದರೂ ಉಚ್ಚರಿಸಿರುವರೆ ? ಭಗವಾನ್ ಶ್ರೀಕೃಷ್ಣ, ಬುದ್ಧ, ಶಂಕರ, ರಾಮಾನುಜ, ಶ್ರೀಚೈತನ್ಯ, ಕ್ರಿಸ್ತ, ಮಹಮದ್ ಮುಂತಾದ ಧರ್ಮಾಚಾರ್ಯರು ಧರ್ಮಜಗತ್ತಿನಲ್ಲಿರುವ ಮತಾಂಧತೆಯನ್ನು ಹೋಗಲಾಡಿಸಲು ಸಮರ್ಥರಾಗಲಿಲ್ಲ. ನಿರಕ್ಷರನಾದ ಬ್ರಾಹ್ಮಣ ಬಾಲಕನೊಬ್ಬನು ತನ್ನ ಜೀವನದಲ್ಲಿ ಆ ಮತಾಂಧತೆಯನ್ನು ಸಂಪೂರ್ಣ ನಾಶಗೊಳಿಸಿ ವಿರುದ್ಧ ಧರ್ಮಗಳೆಲ್ಲವನ್ನೂ ಸಮನ್ವಯಗೊಳಿಸಿ ಅಸಾಧ್ಯವಾದುದನ್ನು ಸಾಧಿಸುವುದರಲ್ಲಿ ಸಮರ್ಥನಾದನು. ಇಂಥ ಒಂದು ಅದ್ಭುತವನ್ನು ಹಿಂದೆ ಯಾರಾದರೂ ನೋಡಿರುವರೇನು ? ಧರ್ಮ ಜಗತ್ತಿನಲ್ಲಿ ಈ ದೇವ ಮಾನವನ ಸ್ಥಾನವನ್ನು ನಿರ್ಣಯಿಸುವುದು ಸಾಧ್ಯವೆ ? ನಾವು ಆ ಸಾಹಸಕ್ಕೆ ಹೋಗುವುದಿಲ್ಲ. ನಿರ್ಜೀವ ಭಾರತವು ಅವರ ಪದಸ್ಪರ್ಶದಿಂದ ಪವಿತ್ರವಾಯಿತು ಮತ್ತು ಜಾಗ್ರತಗೊಂಡಿತು, ಎಂದಿಷ್ಟು ಮಾತ್ರ ನಾವು ಹೇಳಬಹುದು. ಅದು ಪ್ರಪಂಚದಲ್ಲಿ ಒಂದು ಪ್ರತಿಷ್ಠಿತ ರಾಷ್ಟ್ರವಾಗಿ ಮೆರೆಯುವುದು, ಪ್ರಪಂಚಕ್ಕೆ ಅದು ಒಂದು ಹೊಸ ಭರವಸೆಯನ್ನೇ ನೀಡುವುದು. ಶ್ರೀರಾಮಕೃಷ್ಣರು ಮನುಷ್ಯದೇಹವನ್ನು ಧರಿಸಿದುದರಿಂದ ದೇವತೆಗಳೂ ಮನುಷ್ಯನನ್ನು ಪೂಜಿಸುವಂತಾಯಿತು. ಶ್ರೀರಾಮಕೃಷ್ಣರು ಜಾಗ್ರತಗೊಳಿಸಿದ ಅದ್ಭುತಶಕ್ತಿಯ ಲೀಲಾ ನಾಟಕದ ಪ್ರಾರಂಭವನ್ನು ಸ್ವಾಮಿ ವಿವೇಕಾನಂದರಲ್ಲಿ ಜಗತ್ತು ಕಂಡಿತು.

# ಮುನ್ನುಡಿ

ಶ್ರೀರಾಮಕೃಷ್ಣ ಲೀಲಾಪ್ರಸಂಗದ ಐದನೆಯ ಭಾಗವು ಪ್ರಕಾಶಿತವಾಗುತ್ತಿದೆ. ಬ್ರಾಹ್ಮ ಭಕ್ತರೊಡನೆ ಅವರು ಮೊದಲ ಬಾರಿಗೆ ಪರಿಚಿತವಾದಂದಿನಿಂದ ಅವರಿಗೆ ಗಂಟಲು ಬೇನೆ ಶುರುವಾಗಿ ಶ್ಯಾಮ್‌ಪುಕುರಕ್ಕೆ ಬಂದು ವಾಸಿಸತೊಡಗುವ ಪರ್ಯಂತ ನಡೆದ ಘಟನೆಗಳು ಈ ಭಾಗದಲ್ಲಿ ಹೇಳಲ್ಪಟ್ಟಿವೆ. ಈ ಸಮಯದಲ್ಲಿ ಶ್ರೀರಾಮಕೃಷ್ಣರು ಸಂಪೂರ್ಣ ದಿವ್ಯಭಾವದಲ್ಲಿ ನೆಲಸಿದ್ದರು ಮತ್ತು ಅವರ ಎಲ್ಲ ಕಾರ್ಯಗಳು ಮತ್ತು ವರ್ತನೆಗಳು ಈ ಭಾವದಿಂದಲೇ ಪ್ರೇರಿಸಲ್ಪಟ್ಟವುಗಳು. ಅವರ ಜೀವನದ ಈ ಭಾಗವು ನರೇಂದ್ರನಾಥನೊಡನೆ ಅತ್ಯಂತ ಮಧುರ ಸಂಬಂಧದೊಡನೆ ಒಂದಾಗಿ ಬಿಟ್ಟಿದೆ. ಆದ್ದರಿಂದ ಅವರ ಬಗ್ಗೆ ಹೇಳುವಾಗ ಅದರ ಜೊತೆಗೆ ನರೇಂದ್ರನ ಜೀವನ ವಿಚಾರವೂ ಬಂದೇ ಬಿಡುತ್ತದೆ. ಆದ್ದರಿಂದ ಈ ಭಾಗದ ಶೀರ್ಷಿಕೆಯನ್ನು 'ಶ್ರೀರಾಮಕೃಷ್ಣರ ದಿವ್ಯ ಭಾವ ಮತ್ತು ನರೇಂದ್ರನಾಥ್' ಎಂದು ಕೊಟ್ಟಿರುವುದು ಯುಕ್ತಿಯುಕ್ತವಾಗಿಯೇ ಇದೆ.

ಶ್ರೀರಾಮಕೃಷ್ಣರ ಲೀಲಾಪ್ರಸಂಗವನ್ನು ಮೊದಲಿಗೆ ಬರೆಯಲು ಪ್ರಾರಂಭಿಸಿದಾಗ ನಾವು ಇಷ್ಟುದೂರ ಮುಂದುವರಿಯುತ್ತೇವೆಂದು ಕಲ್ಪಿಸಿಯೂ ಇರಲಿಲ್ಲ. ಆದರೆ ಅವರ ಅಚಿಂತ್ಯ ಕೃಪೆಯಿಂದ ಅದು ಸಾಧ್ಯವಾಗಿಬಿಟ್ಟಿತು. ಆದ್ದರಿಂದ ಅವರ ಶ್ರೀಪಾದಪದ್ಮಕ್ಕೆ ಮತ್ತೆ ಮತ್ತೆ ನಮಸ್ಕರಿಸುತ್ತಾ ನಾವು ಈ ಗ್ರಂಥವನ್ನು ಓದುಗರ ಮುಂದಿಡುತ್ತೇವೆ.

ಇತಿ ವಿನೀತ
ಗ್ರಂಥಕರ್ತೃ

# ಪೂರ್ವವಿಚಾರ

**1. ಶ್ರೀರಾಮಕೃಷ್ಣರ ಜೀವನದಲ್ಲಿ ದಿವ್ಯಭಾವ 2. ಕೊನೆಯ ಹನ್ನೆರಡು ವರ್ಷಗಳ ಅವರ ಜೀವನದಲ್ಲಿ ದಿವ್ಯಭಾವದ ವಿಶೇಷ ಪ್ರಕಾಶ 3. ಶ್ರೀರಾಮಕೃಷ್ಣರು ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಭಾರತವನ್ನು ಉಳಿಸಿದರು 4. ಮಾನವ ಜೀವನದಲ್ಲಿ ದಿವ್ಯಭಾವವು ಯಾವಾಗ ಪ್ರಕಟಗೊಳ್ಳುತ್ತದೆ 5. ಅವತಾರ ಪುರುಷರಲ್ಲಿ ಈ ಭಾವದ ವಿಶೇಷ ಪ್ರಕಾಶವಿರುವುದರಿಂದ ಅವರ ಆಚರಣೆಗಳು ದುರ್ಬೋಧ್ಯ ಮತ್ತು ರಹಸ್ಯಮಯ 6. ಈ ಭಾವದಲ್ಲಿ ಶ್ರೀರಾಮಕೃಷ್ಣರ ಕ್ರಿಯೆಗಳ ವರ್ಗೀಕರಣ**

1. ಷೋಡಶೀ ಪೂಜೆಯನ್ನು ನೆರವೇರಿಸಿ ಶ್ರೀರಾಮಕೃಷ್ಣರು ತಮ್ಮ ಸಾಧನ ಯಜ್ಞವನ್ನು ಪೂರ್ಣಗೊಳಿಸಿದರು ಎಂಬ ವಿಚಾರವನ್ನು ನಾವು ಮೊದಲೇ ಪ್ರಸ್ತಾಪಿಸಿರುವೆವು. ಈ ಘಟನೆ ನಡೆದದ್ದು ಕ್ರಿ.ಶ. ೧೮೭೪ರಲ್ಲಿ. ಆದ್ದರಿಂದ ಇಲ್ಲಿಂದ ಮುಂದೆ ಅವರು ದಿವ್ಯಭಾವದ ಪ್ರೇರಣೆಯಂತೆ ಜೀವನದ ಎಲ್ಲಾ ಕೆಲಸಗಳನ್ನು ನೆರವೇರಿಸಿದರು ಎಂದು ಹೇಳಬಹುದು. ಆಗ ಶ್ರೀರಾಮಕೃಷ್ಣರಿಗೆ ೩೮ ವರ್ಷ ಸುಮಾರು ಹನ್ನೆರಡು ವರ್ಷಗಳಿಗಿಂತಲೂ ಹೆಚ್ಚುಕಾಲ ಅವರಲ್ಲಿ ಈ ಭಾವವು ಪ್ರಕಾಶಿತವಾಗಿತ್ತು ಎಂದು ಹೇಳಬಹುದು. ಶ್ರೀ ಜಗನ್ಮಾತೆಯ ಇಚ್ಛೆಯಂತೆ ಈ ಸಮಯದಲ್ಲಿ ಅವರ ಚಟುವಟಿಕೆಗಳೆಲ್ಲವೂ ಒಂದು ಹೊಸ ಆಕಾರವನ್ನು ಪಡೆದಿದ್ದವು. ಅದರ ಪ್ರೇರಣೆಯಿಂದ ಅವರು ವರ್ತಮಾನಯುಗದ ಪಾಶ್ಚಾತ್ಯ ಶಿಕ್ಷಣವನ್ನು ಪಡೆದ ವ್ಯಕ್ತಿಗಳ ಮಧ್ಯೆ ಧರ್ಮ ಸಂಸ್ಥಾಪನೆಯನ್ನು ಮಾಡಲು ಉದ್ಯುಕ್ತರಾದರು. ಪೂರ್ಣ ಹನ್ನೆರಡು ವರ್ಷಗಳ ತಪಸ್ಸಿನ ನಂತರ ಶ್ರೀರಾಮಕೃಷ್ಣರಿಗೆ ತಮ್ಮ ಶಕ್ತಿಯ ಮತ್ತು ಜನಸಾಧಾರಣರ ಆಧ್ಯಾತ್ಮಿಕ ಸ್ಥಿತಿಯ ಪರಿಚಯವಾಗಲು ಮತ್ತೆ ಆರು ವರ್ಷಗಳು ಬೇಕಾದುವು ಎಂದು ತಿಳಿದು ಬರುತ್ತದೆ. ಅನಂತರ ಪಾಶ್ಚಾತ್ಯ ಚಿಂತನೆಯ ಪ್ರಭಾವದಿಂದ ಉಂಟಾದ ಧರ್ಮಗ್ಲಾನಿಯನ್ನು ನಿವಾರಿಸಿ ಸನಾತನ ಧರ್ಮವನ್ನು ಪ್ರತಿಷ್ಠಾಪಿಸುವುದರಲ್ಲಿ ವಿಶೇಷವಾಗಿ ತಮ್ಮ ಗಮನವನ್ನು ಹರಿಸಿದರು. ಈ ಕಾರ್ಯವು ಮುಗಿದ ಮೇಲೆ ಅವರು ಪ್ರಪಂಚದಿಂದ ನಿವೃತ್ತಿಯನ್ನು ಪಡೆದರು. ಹೇಗೆ ಅವರು ಈ ದಿವ್ಯಕಾರ್ಯವನ್ನು ನೆರವೇರಿಸಿದರು ಎಂಬುದನ್ನು ನಾವಿಲ್ಲಿ ವಿವರಿಸಿ ಹೇಳಲು ಪ್ರಯತ್ನಿಸಿದ್ದೇವೆ.

2. ಶ್ರೀರಾಮಕೃಷ್ಣರು ಮೂವತ್ತೊಂಬತ್ತನೇ ವರ್ಷದವರೆಗೂ ಸಾಧಕ ಭಾವದಲ್ಲಿಯೇ ಇದ್ದರೆಂದು ಓದುಗರು ಭಾವಿಸಬಹುದು. ಹಾಗೇನೂ ಅಲ್ಲ. ಯಾರು ಸ್ವಾಭಾವಿಕವಾಗಿಯೇ ಗುರು, ಪ್ರವಾದಿ, ಧರ್ಮಸಂಸ್ಥಾಪಕ ಎಂದು ಜನರಿಂದ ಗೌರವಿಸಲ್ಪಟ್ಟಿರುವರೋ ಅವರ ಜೀವನದಲ್ಲಿ ಬಾಲ್ಯಕಾಲದಿಂದಲೂ ಈ ಗುಣಗಳನ್ನು ನಾವು ಕಾಣುತ್ತೇವೆ.

ಈ ವಿಷಯುವನ್ನು ನಾವು 'ಗುರು ಭಾವ'ದಲ್ಲಿ ತೋರಿಸಿಕೊಟ್ಟಿರುವೆವು. ಆದ್ದರಿಂದ ಶ್ರೀರಾಮಕೃಷ್ಣರ ಜೀವನದಲ್ಲಿ ಬಾಲ್ಯಕಾಲದಿಂದಲೂ ಆ ಭಾವವನ್ನು ನಾವು ನೋಡುತ್ತೇವೆ. ಯೌವನದಲ್ಲಿ ಮತ್ತು ಸಾಧನ ಕಾಲದಲ್ಲಿ ಅದರ ಪ್ರೇರಣೆಯಿಂದ ಅನೇಕ ಕಾರ್ಯಗಳನ್ನು ಎಸಗಿದರು. ಸಾಧನೆಯು ಅಂತ್ಯಕಾಲದಲ್ಲಿ, ಅವರು ಮಥುರನಾಥನೊಡನೆ ತೀರ್ಥಯಾತ್ರೆಗೆ ಹೋದ ಸಂದರ್ಭದಲ್ಲಿ ಮತ್ತು ಅನಂತರವೂ ಅವರ ಎಲ್ಲಾ ಕಾರ್ಯಗಳೂ ಈ ಭಾವದಿಂದ ಪ್ರೇರಿತವಾಗಿದ್ದುವು ಎಂಬುದನ್ನು ನಾವು ನೋಡುತ್ತೇವೆ. ಆದ್ದರಿಂದ ೧೮೭೫ ರಿಂದ ಅವರ ದಿವ್ಯಭಾವವು ಪ್ರಕಾಶಗೊಂಡು ಅವರು ಧರ್ಮಸಂಸ್ಥಾಪನಾ ಕಾರ್ಯದಲ್ಲಿ ಮನಸ್ಸನ್ನಿರಿಸಿದರು ಎಂದು ಹೇಳುವುದಕ್ಕೆ ಕಾರಣ : ಈ ಅವಧಿಯಿಂದ ಅವರು ನಿರಂತರ ದಿವ್ಯಭಾವ ಪ್ರೇರಣೆಗೆ ಒಳಪಟ್ಟು ಭಾರತದಲ್ಲಿ ಸನಾತನ ಧರ್ಮವನ್ನು ಪುನಃ ಪ್ರತಿಷ್ಠಾಪಿಸಲು ಸತತ ಹೋರಾಡಿದರು. ಭಾರತದ ಸನಾತನ ಧರ್ಮವು ಪಾಶ್ಚಾತ್ಯ ನಾಗರಿಕತೆಯ ಪ್ರಭಾವದಿಂದ ನಶಿಸಿ ಹೋಗುವುದರಲ್ಲಿತ್ತು. ಭಾರತದ ಪಾಶ್ಚಾತ್ಯ ಶಿಕ್ಷಣತಜ್ಞರಿಗೆ ಅವರು ಸನಾತನ ಧರ್ಮವನ್ನು ಪರಿಚಯಿಸಲು ಪ್ರಯತ್ನಿಸಿದರು.

3. ಈ ರೀತಿ ಮಾಡುವುದರಲ್ಲಿ ವಿಶೇಷ ಪ್ರಯೋಜನವಿತ್ತು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಶ್ರೀರಾಮಕೃಷ್ಣರು ತಮ್ಮ ಆಧ್ಯಾತ್ಮಿಕ ಶಕ್ತಿಯ ಸಹಾಯದಿಂದ ಈ ಪಾಶ್ಚಾತ್ಯ ಜಡವಾದದ ವಿರುದ್ಧ ಹೋರಾಡದೆ ಇದ್ದಿದ್ದರೆ ಭಾರತದ ರಾಷ್ಟ್ರೀಯತೆಯು ಮತ್ತು ಸನಾತನ ಧರ್ಮವು ನಶಿಸಿ ಹೋಗುತ್ತಿದ್ದುವು ಶ್ರೀರಾಮಕೃಷ್ಣರ ಸರ್ವಧರ್ಮ ಸಮನ್ವಯ ಭಾವವು ಎಲ್ಲಾ ದೇಶದವರಿಗೂ ಹಿತವನ್ನುಂಟುಮಾಡಿದೆ ಎಂಬುದು ಸ್ವಲ್ಪ ವಿಚಾರ ಮಾಡಿದರೆ ತಿಳಿದು ಬರುವಂತಹುದು. ಹಾಗೆಯೇ ಪಾಶ್ಚಾತ್ಯ ಆದರ್ಶದ ಪ್ರವಾಹದಲ್ಲಿ ತೇಲಿ ಹೋಗುತ್ತಿದ್ದ ಜನರ ಮುಂದೆ ಶ್ರೀರಾಮಕೃಷ್ಣರು ನಡೆಸಿದ ಹನ್ನೆರಡು ವರ್ಷಗಳ ಸುದೀರ್ಘ ದಿವ್ಯ ಆದರ್ಶ ಜೀವನವು ಅವರ ಗಮನವನ್ನು ಸನಾತನ ಧರ್ಮದೆಡೆಗೆ ತಿರುಗಿಸಿ ಅದನ್ನು ಪುನಃ ಸ್ಥಾಪಿಸುವುದರಲ್ಲಿ ಸಹಾಯಕವಾಯಿತು. ಪಾಶ್ಚಾತ್ಯ ಸಂಸ್ಕೃತಿಯ ಪ್ರವಾಹವು ತಡೆಹಿಡಿಯಲ್ಪಟ್ಟು ಭಾರತವು ರಕ್ಷಿಸಲ್ಪಟ್ಟಿತು. ಹೀಗೆ ಜೀವನದ ಎರಡು ಮುಖ್ಯ ಉದ್ದೇಶಗಳು ನಮ್ಮ ಮುಂದೆ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತವೆ. ಮೊದಲನೆಯದಾಗಿ ಶ್ರೀರಾಮಕೃಷ್ಣರು ಎಲ್ಲಾ ಧರ್ಮಗಳನ್ನು ಒಂದೇ ಸನಾತನ ಧರ್ಮದಡಿಯಲ್ಲಿ ತಂದು ಅವೆಲ್ಲವೂ ಸತ್ಯ; ರುಚಿ ಮತ್ತು ಮನೋಭಾವಗಳಿಗನುಗುಣವಾಗಿ ಬೇರೆ ಬೇರೆಯಾಗಿ ಕಾಣಿಸಿಕೊಳ್ಳುತ್ತವೆ ಎಂಬುದನ್ನು ತೋರಿಸಿದರು. ಎರಡನೆಯದಾಗಿ ಪಾಶ್ಚಾತ್ಯ ಜಡವಾದದ ಸುಳಿಯಲ್ಲಿ ಸಿಕ್ಕಿದ್ದ ಭಾರತದ ಆತ್ಮವನ್ನು ಸಂರಕ್ಷಿಸಿದರು. ೧೮೩೬ರಲ್ಲಿ ಪಾಶ್ಚಾತ್ಯ ಶಿಕ್ಷಣವನ್ನು ಭಾರತದಲ್ಲಿ ಜಾರಿಗೆ ತರಲಾಯಿತು ಮತ್ತು ಶ್ರೀರಾಮಕೃಷ್ಣರು ಅದೇ ವರ್ಷ ಜನ್ಮ ತಾಳಿದುದು. ಈ ಒಂದು ಯೋಗಾಯೋಗವನ್ನು ಗಮನಿಸಿದಾಗ ಇದರ ಹಿಂದೆ ಒಂದು ದೈವೇಚ್ಛೆ ಇದೆ ಎಂದು ನಮಗೆ ಅನಿಸದೆ ಇರದು. ಒಂದು ಕಡೆ ಪಾಶ್ಚಾತ್ಯ ಶಿಕ್ಷಣವು ಭಾರತೀಯ ಸಂಸ್ಕೃತಿಯನ್ನೇ ಅಳಿಸಿ

ಹಾಕಲು ತಲೆಯೆತ್ತಿ ನಿಂತಿತು. ಮತ್ತೊಂದು ಕಡೆ ಅದೇ ಸಂದರ್ಭದಲ್ಲಿ ಅದನ್ನು ವಿರೋಧಿಸಿ ಅದರ ದುಷ್ಪರಿಣಾಮಗಳನ್ನು ಹೋಗಲಾಡಿಸಿ ಹೊಸ ಧರ್ಮ ಸ್ಥಾಪನೆಗೆ ಒಂದು ಅನುಕೂಲವಾದ ವಾತಾವರಣವನ್ನು ಸೃಷ್ಟಿಸುವ ಶಕ್ತಿಯೂ ತಲೆಯೆತ್ತಿತು.

4. ಆಧ್ಯಾತ್ಮಿಕ ರಾಜ್ಯದ ತುಟ್ಟತುದಿಯ ಅವಸ್ಥೆಯಾದ ದಿವ್ಯಭಾವದ ಪೂರ್ಣ ಪ್ರಕಾಶವು ಮಾನವ ಜೀವನದಲ್ಲಿ ಅಪರೂಪಕ್ಕೆ ಕಂಡು ಬರುತ್ತದೆ. ಜೀವನು ಕರ್ಮ ಬಂಧನದಿಂದ ಮುಕ್ತನಾಗಿ ಈ ಭಾವವನ್ನು ಸ್ವಲ್ಪಮಟ್ಟಿಗೆ ಮಾತ್ರ ಆಸ್ವಾದಿಸಲು ಸಮರ್ಥನಾಗುತ್ತಾನೆ. ಏಕೆಂದರೆ ಮಾನವನಲ್ಲಿ ಶಮದಮಾದಿ ಗುಣಗಳು ಉಸಿರಾಟದಂತೆ ಸ್ವಾಭಾವಿಕವಾದಾಗ, ಭಗತ್ಪ್ರೇಮದಲ್ಲಿ ಮತ್ತನಾಗಿ ಕ್ಷುದ್ರ ಅಹಂಕಾರವು ಅಖಂಡ ಸಚ್ಚಿದಾನಂದ ಸಾಗರದಲ್ಲಿ ವಿಲೀನವಾದಾಗ, ನಿರ್ವಿಕಲ್ಪ ಸಮಾಧಿಯಿಂದ ಮನಸ್ಸಿನ ಎಲ್ಲಾ ಮಲಿನತೆಗಳು ಭಸ್ಮೀಭೂತವಾದಾಗ, ಆಂತರಿಕ ಅನಾದಿ ವಾಸನೆಗಳೆಲ್ಲ ಜ್ಞಾನ ಸೂರ್ಯನ ಪ್ರಖರತಾಪದಿಂದ ದಗ್ಧವಾಗಿ ಶುದ್ಧ ಸಾತ್ತ್ವಿಕ ಮೂರ್ತಿಯಾಗಿ ಅವನು ಪರಿಣಮಿಸಿದಾಗ ಅವನಲ್ಲಿ ದಿವ್ಯಭಾವವು ಉದಯವಾಗಿ ಕೃತಾರ್ಥನಾಗುವನು. ಆದ್ದರಿಂದ ದಿವ್ಯಭಾವವು ಪೂರ್ಣ ಪ್ರಕಾಶಗೊಂಡ ವ್ಯಕ್ತಿಯನ್ನು ಕಾಣುವುದು ಅತ್ಯಂತ ವಿರಳ. ಅಷ್ಟೇ ಅಲ್ಲದೆ ಆ ರೀತಿಯ ವ್ಯಕ್ತಿಯ ಕಾರ್ಯಕಲಾಪಗಳನ್ನು ಅರ್ಥಮಾಡಿಕೊಳ್ಳುವುದು ಅತ್ಯಂತ ಕಠಿಣ. ಏಕೆಂದರೆ ಅವನ ಚಟುವಟಿಕೆಗಳು ಯಾವ ಕೊರತೆಯ ಪರಿಣಾಮವೂ ಆಗಿರದೆ ಇರುವುದರಿಂದ ಸಾಮಾನ್ಯ ಜನರಿಗೆ ಅವು ಉದ್ದೇಶಹೀನವಾಗಿ ಕಾಣಿಸುವುವು. ದಿವ್ಯಭಾವದಲ್ಲಿರುವ ವ್ಯಕ್ತಿಯನ್ನು ಅರಿಯಲು ಇನ್ನೊಬ್ಬ ದಿವ್ಯಭಾವದಿಂದ ಕೂಡಿದ ವ್ಯಕ್ತಿಯೇ ಸಮರ್ಥನಾಗಿರುತ್ತಾನೆ. ದಿವ್ಯಭಾವದಿಂದ ಪ್ರೇರಿತವಾದ ಕಾರ್ಯ ಕಲಾಪಗಳನ್ನು ನಾವು ಆಳವಾದ ಶ್ರದ್ಧೆ ಮತ್ತು ವಿಶ್ವಾಸಗಳಿಂದ ಆಲೋಚಿಸಬೇಕಾಗುತ್ತದೆ. ಹಾಗಿಲ್ಲದಿದ್ದರೆ ಅವುಗಳ ರಹಸ್ಯವು ನಮ್ಮಂತಹ ಸಾಮಾನ್ಯರ ಬುದ್ಧಿಗೆ ನಿಲುಕುವಂಥಹುದಲ್ಲ.

5. ದಿವ್ಯಭಾವದ ಪೂರ್ಣಪ್ರಕಾಶವನ್ನು ಅವತಾರ ಪುರುಷರಲ್ಲಿ ಮಾತ್ರ ಕಾಣಬಹುದು. ಜಗತ್ತಿನ ಆಧ್ಯಾತ್ಮಿಕ ಇತಿಹಾಸವು ಈ ವಿಷಯಕ್ಕೆ ಸಾಕ್ಷಿಯಾಗಿದೆ. ಈ ಕಾರಣದಿಂದಾಗಿಯೇ ಅವತಾರ ಪುರುಷರ ಚರಿತ್ರೆಯು ನಮಗೆ ರಹಸ್ಯಮಯವಾಗಿಯೇ ಉಳಿದಿದೆ. ನಮ್ಮ ಕಲ್ಪನೆಯ ಸಹಾಯದಿಂದ ಮಾಯಾವಿಹೀನವಾದ ಬ್ರಹ್ಮಜ್ಞಾನಾವಸ್ಥೆಯ ಆಂಶಿಕ ಚಿತ್ರವನ್ನು ನಮ್ಮ ಮನಸ್ಸಿಗೆ ತಂದುಕೊಳ್ಳಬಹುದು. ಆದರೆ ಆ ಅವಸ್ಥೆಯಲ್ಲಿ ಯಾರು ಸಹಜವಾಗಿಯೂ ಮತ್ತು ಸ್ವಾಭಾವಿಕವಾಗಿಯೂ ನೆಲೆ ನಿಂತಿರುತ್ತಾರೋ ಅವರ ಆಗುಹೋಗುಗಳನ್ನು ನಾವು ಗ್ರಹಿಸಿ ಅರ್ಥ ಮಾಡಿಕೊಳ್ಳಲಾರೆವು. ಅವರು ಕೆಲವೊಮ್ಮೆ ನಮ್ಮಂತೆಯೂ ಮತ್ತೆ ಕೆಲವೊಮ್ಮೆ ಅಪಾರ ಶಕ್ತಿಯಿಂದ ಕೂಡಿದ ದೇವತೆಗಳಂತೆಯೂ ಇರುತ್ತಾರೆ. ನಮ್ಮ ಮನಸ್ಸು ಬುದ್ಧಿಗಳ ವಿಷಯವಿರಲಿ, ಕಲ್ಪನೆಯೂ ಕೂಡ ಈ ಸಾಹಸದಲ್ಲಿ ಪರಾಜಿತವಾಗುವುದು. ಆದ್ದರಿಂದ ಶ್ರೀರಾಮಕೃಷ್ಣರ ಜೀವನದ ಈ ಅವಧಿಯ ಚಟುವಟಿಕೆಗಳನ್ನು ಸರಿಯಾಗಿ ವಿಚಾರ ಮಾಡುವುದು ಅಸಾಧ್ಯವೆಂಬುದನ್ನು

ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈ ಅವಧಿಯ ಅವರ ಚಟುವಟಿಕೆಗಳನ್ನು ಉಲ್ಲೇಖಿಸಿ ಅವುಗಳ ಸಫಲತೆಯ ಆಧಾರದ ಮೇಲೆ ಹಿಂದಿನ ಉದ್ದೇಶವೇನಿರಬಹುದೆಂದು ತಿಳಿಸಿ ಕೊಡಲು ಪ್ರಯತ್ನಿಸುತ್ತೇವೆ. ಕಾರ್ಯದ ಗುರುತ್ವವನ್ನು ನೋಡಿಯೇ ಕಾರಣದ ಮಹತ್ವವನ್ನು ಅಳೆಯಲು ಪ್ರಯತ್ನಿಸುತ್ತೇವೆ. ಶ್ರೀರಾಮಕೃಷ್ಣರ ಈ ಅವಧಿಯ ಚಟುವಟಿಕೆಗಳ ಅಲೌಕಿಕತ್ವವನ್ನು ಗಮನಿಸಿದಾಗ ಅವುಗಳ ಮೂಲಕ ಅವರ ದಿವ್ಯ ಭಾವವು ಎಷ್ಟು ಅಪೂರ್ವ ರೀತಿಯಲ್ಲಿ ಅಭಿವ್ಯಕ್ತಗೊಂಡಿತು ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬಹುದು.

6. ದಿವ್ಯಭಾವದಲ್ಲಿ ಪ್ರತಿಷ್ಠಿತರಾದ ಶ್ರೀರಾಮಕೃಷ್ಣರ ಚಟುವಟಿಕೆಗಳ ಹಿಂದೆ ಧರ್ಮಸಂಸ್ಥಾಪನೆಯೊಂದೇ ಉದ್ದೇಶವಾಗಿದ್ದರೂ ಅವುಗಳನ್ನು ಏಳು ಭಾಗಗಳಾಗಿ ವಿಂಗಡಿಸಬಹುದು :

೧. ಶ್ರೀರಾಮಕೃಷ್ಣರು ತಮ್ಮ ಸಹಧರ್ಮಿಣಿಯಾದ ಶ್ರೀಶಾರದಾದೇವಿಯವರಿಗೆ ತರಬೇತಿಯನ್ನು ನೀಡಿ ಮುಂದೆ ಅವರು ಒಂದು ಪ್ರಬಲಧರ್ಮಶಕ್ತಿಯ ಕೇಂದ್ರವಾಗು ವಂತೆ ಮಾಡಿದರು.

೨. ಉಚ್ಚ ಜೀವನವನ್ನು ನಡೆಸುತ್ತಾ ಕಲಕತ್ತಾ ಮಹಾನಗರದಲ್ಲಿ ಧಾರ್ಮಿಕ ನೇತಾರರೆನಿಸಿಕೊಂಡ ವ್ಯಕ್ತಿಗಳ ಸಮೀಪಕ್ಕೆ ಹೋಗಿ ತಮ್ಮ ಆಧ್ಯಾತ್ಮಿಕ ಶಕ್ತಿಯ ಸಹಾಯದಿಂದ ಅವರು ತಮ್ಮ ಜೀವನದ ಪರಿಪೂರ್ಣತೆಯನ್ನು ಪಡೆಯಲು ಪ್ರಯತ್ನ ಮಾಡಿದರು

೩. ದಕ್ಷಿಣೇಶ್ವರಕ್ಕೆ ಬಂದ ಎಲ್ಲಾ ಸಂಪ್ರದಾಯದ ಆಧ್ಯಾತ್ಮಿಕ ಪಿಪಾಸುಗಳು ಬೆಳಕನ್ನು ಕಂಡು ಸಂತೃಪ್ತಿಯನ್ನು ಪಡೆಯುವಂತೆ ಮಾಡಿದರು.

೪. ಯೋಗದೃಷ್ಟಿಯಿಂದ ಹಿಂದೆ ಕಂಡ ವ್ಯಕ್ತಿಗಳು ಅವರೆಡೆಗೆ ಬಂದಾಗ ಅಧಿ ಕಾರ ಭೇದಕ್ಕೆ ಅನುಸಾರವಾಗಿ ಅವರ ಜೀವನವನ್ನು ರೂಪಿಸಲು ಪ್ರಯತ್ನಿಸಿದರು.

೫. ಇವರಲ್ಲಿ ಭಗವಂತನ ಸಾಕ್ಷಾತ್ಕಾರಕ್ಕಾಗಿ ಸರ್ವಸ್ವವನ್ನೂ ತ್ಯಾಗಮಾಡಲು ಯಾರು ಸಿದ್ಧರಿದ್ದರೋ ಅವರನ್ನು ತಮ್ಮ ಹೊಸ ಮತದ ಪ್ರಚಾರ ಕಾರ್ಯದಲ್ಲಿ ಪ್ರಧಾನಕೇಂದ್ರ ಪಾತ್ರಗಳನ್ನಾಗಿ ಮಾಡಿದರು.

೬. ಕಲ್ಕತ್ತೆಯಲ್ಲಿ ವಾಸಿಸುತ್ತಿದ್ದ ತಮ್ಮ ಭಕ್ತರ ಮನೆಗಳಿಗೆ ಆಗಾಗ ಹೋಗಿ ಬರುತ್ತಾ ಅಲ್ಲಿ ಭಗವದಾಲಾಪ, ಸಂಕೀರ್ತನೆ ಇತ್ಯಾದಿಗಳನ್ನು ನಡೆಸುತ್ತಾ ಅವರ ಮನೆಯ ವರು ಮತ್ತು ಸುತ್ತಮುತ್ತಲಿನವರು ಆಧ್ಯಾತ್ಮಿಕ ಉನ್ನತಿಯನ್ನು ಪಡೆಯಲು ಸಹಾಯ ಮಾಡಿದರು.

೭. ತಮ್ಮ ಭಕ್ತವೃಂದವನ್ನು ಒಂದು ಪ್ರಬಲವಾದ ಪ್ರೇಮ ಬಂಧನದಲ್ಲಿ ಕೂಡಿಸಿ ಅವರೆಲ್ಲರೂ ಒಟ್ಟು ಸೇರಿ ಒಂದು ಉದಾರವಾದ ಧರ್ಮಸಂಸ್ಥೆಯನ್ನು ಸ್ಥಾಪಿ ಸುವಂತೆ ಮಾಡಿದರು.

ಈ ಮೇಲೆ ಹೇಳಿದ ಏಳು ಕಾರ್ಯಗಳಲ್ಲಿ ಮೊದಲನೆಯದನ್ನು ಶ್ರೀರಾಮ

ಕೃಷ್ಣರು ೧೮೭೪ರಲ್ಲಿಯೇ ಪ್ರಾರಂಭಿಸಿದ್ದರು ಎಂಬುದನ್ನು ನಾವು ಆಗಲೇ ತಿಳಿಸಿರುವೆವು. ಎರಡನೆಯ ಕಾರ್ಯವನ್ನು ಬ್ರಹ್ಮಸಮಾಜದ ನೇತಾರನಾದ ಕೇಶವಚಂದ್ರಸೇನನನ್ನು ಸಂಧಿಸುವುದರ ಮೂಲಕ ಪ್ರಾರಂಭಿಸಿದರು ಮತ್ತೆ ಮೂರನೆಯ, ನಾಲ್ಕನೆಯ ಮತ್ತು ಆರನೆಯ ವರ್ಗಗಳ ಕಾರ್ಯದ ವಿಷಯವನ್ನು ಸ್ವಲ್ಪ ಮಟ್ಟಿಗೆ ನಾಲ್ಕನೇ ಭಾಗದ ೫, ೬ ಮತ್ತು ೭ನೇ ಅಧ್ಯಾಯಗಳಲ್ಲಿ ಸೂಚಿಸಿರುವೆವು. ಆದ್ದರಿಂದ ಈಗ ನಾವು ಅವರ ಉಳಿದ ಚಟುವಟಿಕೆಗಳನ್ನು ವಿವರಿಸಲು ಮುಂದುವರಿಯುತ್ತೇವೆ.

## ಮೊದಲನೆಯ ಅಧ್ಯಾಯ

## ಪ್ರಥಮ ಪಾದ

# ಬ್ರಹ್ಮಸಮಾಜದ ಮೇಲೆ ಶ್ರೀರಾಮಕೃಷ್ಣರ ಪ್ರಭಾವ

1. ಕೇಶವನೇ ಮುಂತಾದ ಬ್ರಾಹ್ಮಭಕ್ತರಿಗೆ ಶ್ರೀರಾಮಕೃಷ್ಣರ ಮೇಲಿದ್ದ ಶ್ರದ್ಧಾಭಕ್ತಿ 2. ಶ್ರೀರಾಮಕೃಷ್ಣರಿಗೆ ಬ್ರಾಹ್ಮಭಕ್ತರೊಡನಿದ್ದ ಸಪ್ರೇಮ ಸಂಬಂಧ 3. ಬ್ರಾಹ್ಮಭಕ್ತರು ಅವರನ್ನು ತಮ್ಮ ಅನುಯಾಯಿಗಳೆಂದು ಪರಿಗಣಿಸಲು ಕಾರಣ 4. ಶ್ರೀ ರಾಮಕೃಷ್ಣರು ಬ್ರಾಹ್ಮಭಕ್ತರನ್ನು ತಮ್ಮ ಸಾಧನೆಯಲ್ಲಿ ಮುಂದುವರೆಯುವಂತೆ ಮಾಡಿದರು, ಹಾಗೂ ಬ್ರಾಹ್ಮಭಕ್ತರಲ್ಲಿ ಭಾವ ಪರಿವರ್ತನೆ 5. ತಮ್ಮ ಮಾತನ್ನು ಎಷ್ಟು ಸಾಧ್ಯವೊ ಅಷ್ಟು ಸ್ವೀಕರಿಸಬೇಕೆಂದು ಬ್ರಾಹ್ಮಭಕ್ತರಿಗೆ ಹೇಳಿದುದು 6. ಶ್ರೀ ರಾಮಕೃಷ್ಣರ ಹಾಸ್ಯಪೂರ್ಣಬೋಧನೆ 7. ಐಶ್ವರ್ಯಜ್ಞಾನದಿಂದ ಈಶ್ವರನನ್ನು ನಮ್ಮವನೆಂದು ಪರಿಗಣಿಸಲಾಗುವುದಿಲ್ಲ 8. ಬ್ರಾಹ್ಮಭಕ್ತರು ಸಾಕಾರೋಪಾಸನೆಯನ್ನು ಒಪ್ಪಿಕೊಂಡುದು, ಭಗವಂತನ ಸ್ವರೂಪಕ್ಕೆ ಮಿತಿಯಿಲ್ಲ 9. ಕೇಶವನ ಆಧ್ಯಾತ್ಮಿಕ ಸಾಧನೆ, 'ನವ ವಿಧಾನ' ಸ್ಥಾಪನೆ ಮತ್ತು ಪ್ರಚಾರ 10. ಶ್ರೀ ರಾಮಕೃಷ್ಣರು ಎಷ್ಟರಮಟ್ಟಿಗೆ ಕೇಶವನನ್ನು ತಮ್ಮವನೆಂದು ಪರಿಗಣಿಸಿದರು 11. ಶ್ರೀರಾಮಕೃಷ್ಣರ ಪ್ರಭಾವದಿಂದ ವಿಜಯಕೃಷ್ಣನ ಪರಿವರ್ತನೆ 12. ಸಾಧನಮಾರ್ಗದಲ್ಲಿ ಅವನ ಪ್ರಗತಿ 13. ಶಿವ-ರಾಮರ ಯುದ್ಧದ ಕಥೆ ಕೇಶವ ವಿಜಯರಲ್ಲಿದ್ದ ಮನಸ್ತಾಪವನ್ನು ನಿವಾರಿಸಿತು 14. ಬ್ರಹ್ಮಸಮಾಜವು ಕುಸಿದುಬೀಳುವುದೆಂಬ ಭಯದಿಂದ ಶಿವನಾಥನು ದಕ್ಷಿಣೇಶ್ವರಕ್ಕೆ ಹೋಗುವುದನ್ನು ನಿಲ್ಲಿಸಿದನು 15. ಬ್ರಹ್ಮಸಮಾಜದ ಮೇಲೆ ಶ್ರೀರಾಮಕೃಷ್ಣರ ಪ್ರಭಾವವನ್ನು ಕುರಿತು ಪ್ರತಾಪಚಂದ್ರ 16. ಒಟ್ಟು ಬ್ರಹ್ಮಸಮಾಜದ ಮೇಲೆ ಶ್ರೀರಾಮಕೃಷ್ಣರ ಪ್ರಭಾವ 17. ಬ್ರಾಹ್ಮಧರ್ಮವೂ ಒಂದು ಮಾರ್ಗವೆಂದು ಶ್ರೀರಾಮಕೃಷ್ಣರು ಸಾರಿದುದು. ಶ್ರೀರಾಮಕೃಷ್ಣರ ಭಾವಪ್ರಚಾರದಲ್ಲಿ ಬ್ರಹ್ಮ ಸಮಾಜದ ಕೊಡಿಗೆ.

1. ಬ್ರಹ್ಮ ಸಮಾಜದ ನೇತಾರನಾದ ಕೇಶವಚಂದ್ರನ ಪರಿಚಯವಾದ ಮೇಲೆ ಕಲ್ಕತ್ತೆಯ ಜನಸಾಧಾರಣರು ಶ್ರೀರಾಮಕೃಷ್ಣರ ವಿಷಯವನ್ನು ತಿಳಿದುಕೊಳ್ಳುವಂತಾಯಿತು. ಗುಣಗ್ರಾಹಿಯಾದ ಕೇಶವನು ಪ್ರಥಮ ಸಂದರ್ಶನದಿಂದಲೇ ಶ್ರೀರಾಮಕೃಷ್ಣರೆಡೆಗೆ ಬಹಳವಾಗಿ ಆಕರ್ಷಿಸಲ್ಪಟ್ಟನು. ಅವನು ಪಾಶ್ಚಾತ್ಯ ವಿಚಾರಗಳಿಂದ ಪ್ರಭಾವಿತನಾಗಿದ್ದರೂ ಅವನ ಹೃದಯವು ಭಗವದ್ಭಕ್ತಿಯಿಂದ ತುಂಬಿ ಹೋಗಿತ್ತು ಮತ್ತು ಆ ಭಕ್ತಿಯ ಅಮೃತವನ್ನು ತಾನೊಬ್ಬನೇ ಸವಿಯುವುದು ಅವನಿಗೆ ಸಾಧ್ಯವಿರಲಿಲ್ಲ, ಶ್ರೀರಾಮಕೃಷ್ಣರ ಪುಣ್ಯದರ್ಶನದಿಂದ ಮತ್ತು ಅವರ ಅಮೃತಮಯ ವಾಣಿಯಿಂದ ಅವನು ಜೀವನ ಮಾರ್ಗದಲ್ಲಿ ಒಂದು ಹೊಸ ಬೆಳಕನ್ನು ಕಂಡನು. ಇದನ್ನು

ಅವನು ತಾನೊಬ್ಬನೇ ಅನುಭವಿಸದೆ ಜನಸಾಧಾರಣರಿಗೆಲ್ಲ ಮುಕ್ತಕಂಠದಿಂದ ತಿಳಿಸಿ ಕೊಡತೊಡಗಿದನು. ತನ್ನಂತೆಯೆ ಅವರೂ ಕೂಡ ತೃಪ್ತಿ ಆನಂದಗಳನ್ನು ಪಡೆಯಲಿ ಎಂದು ಉತ್ಸಾಹದಿಂದ ಅವರನ್ನು ಆಹ್ವಾನಿಸತೊಡಗಿದನು. ಬ್ರಹ್ಮಸಮಾಜದ ಇಂಗ್ಲಿಷ್ ಮತ್ತು ಬಂಗಾಳಿ ಪತ್ರಿಕೆಗಳಾದ 'ಸುಲಭ ಸಮಾಚಾರ್' 'ಸಂಡೇ ಮಿರರ್', 'ಥೀಯಿಸ್ಟಿಕ್ ಕ್ವಾರ್ಟರ್ಲಿ ರಿವ್ಯೂ' ಮುಂತಾದವುಗಳಲ್ಲಿ ಶ್ರೀರಾಮಕೃಷ್ಣರ ಪುಣ್ಯ ಚರಿತ್ರೆ, ಅವರ ಉಪದೇಶ ಇತ್ಯಾದಿಗಳು ಪ್ರಕಟವಾಗತೊಡಗಿದವು. ಇಷ್ಟೇ ಅಲ್ಲದೆ ಭಾಷಣಗಳಲ್ಲಿಯೂ ಬ್ರಹ್ಮಸಮಾಜದ ಉಪಾಸನೆಯ ಸಂದರ್ಭಗಳಲ್ಲಿಯೂ ಶ್ರೀರಾಮ ಕೃಷ್ಣರ ಉಪದೇಶಗಳನ್ನು ಕೇಶವನೇ ಮೊದಲಾದ ಬ್ರಾಹ್ಮ ಮುಖಂಡರು ತಿಳಿಸಿಕೊಡ ತೊಡಗಿದರು. ಸಮಯ ಸಿಕ್ಕಿದಾಗಲೆಲ್ಲ ಎರಡು ಮೂರು ಜನ ಸೇರಿಕೊಂಡು ಹಾಗೂ ಕೆಲವೊಮ್ಮೆ ತಮ್ಮ ಅನುಯಾಯಿಗಳ ಗುಂಪಿನೊಡನೆ ಬ್ರಾಹ್ಮ ಮುಖಂಡರು ದಕ್ಷಿಣೇಶ್ವ ರಕ್ಕೆ ಹೋಗಿ ಶ್ರೀರಾಮಕೃಷ್ಣರೊಡನೆ ಧರ್ಮ ವಿಚಾರವಾಗಿ ಮಾತನಾಡಿದರು.

2. ಬ್ರಾಹ್ಮ ಮುಖಂಡರ ಧರ್ಮಾಸಕ್ತಿಯನ್ನೂ, ಭಗವದ್ಭಕ್ತಿಯನ್ನೂ ನೋಡಿ ಶ್ರೀರಾಮಕೃಷ್ಣರಿಗೆ ಸಂತೋಷವುಂಟಾಯಿತು. ಅವರು ಆಧ್ಯಾತ್ಮಿಕ ಮಾರ್ಗದಲ್ಲಿ ಮುಂದುವರಿದು ಭಗವತ್ಸಾಕ್ಷಾತ್ಕಾರದ ದಿವ್ಯ ರತ್ನವನ್ನು ಪಡೆದು ಕೃತಾರ್ಥರಾಗಲೆಂದು ಶ್ರೀರಾಮಕೃಷ್ಣರು ಅವರಿಗೆ ಮಾರ್ಗದರ್ಶನ ಮಾಡುವುದರಲ್ಲಿ ಮಗ್ನರಾದರು. ಅವರು ಗಳ ಜೊತೆ ಭಗವದ್ವಿಷಯವಾಗಿ ಮಾತನಾಡುತ್ತಾ ಮತ್ತು ಭಜನೆ ಮಾಡುತ್ತಾ ಶ್ರೀ ರಾಮಕೃಷ್ಣರು ಅಪಾರ ಆನಂದವನ್ನು ಅನುಭವಿಸುತ್ತಿದ್ದರು. ಸ್ವಪ್ರೇರಣೆಯಿಂದ ಅವರೇ ಆಗಾಗ ಕೇಶವನ ಮನೆಗೆ ಹೋಗಿಬಿಡುತ್ತಿದರು. ಹೀಗೆ ಅನೇಕ ಬ್ರಾಹ್ಮ ಭಕ್ತ ರೊಡನೆ ಅವರಿಗೆ ನಿಕಟ ಸಂಬಂಧ ಬೆಳೆಯಿತು. ಕೇಶವನಲ್ಲದೆ ಇತರ ಬ್ರಾಹ್ಮಭಕ್ತರ ಮನೆಗಳಿಗೂ ಅವರು ಆಗಾಗ ಹೋಗಿ ಅವರಿಗೆ ಆನಂದವನ್ನುಂಟುಮಾಡುತ್ತಿದ್ದರು. ಸಿಂದೂರಿಯ ಪಾಟಿಯಾದ ಮಣಿಮೋಹನ ಮಲ್ಲಿಕ್, ಮಾತಾಘೋಷಾಗಲ್ಲಿಯ ಜಯ ಗೋಪಾಲ್‌ಸೇನ್, ಸಿಂಥಿಯ ವೇಣಿಮಾಧವಪಾಲ್, ನಂದನ್ ಬಾಗಾನದ ಕಾಶೀಶ್ವರ ಮಿತ್ರ ಇವರುಗಳ ಮನೆಗಳಿಗೆ ಅವರು ವಿಶೇಷವಾಗಿ ಉತ್ಸವಗಳ ಸಂದರ್ಭಗಳಲ್ಲಿ ಹೋಗುತ್ತಿದ್ದರು. ಕೆಲವೊಮ್ಮೆ ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆಯೆ ಬ್ರಹ್ಮ ಸಮಾಜದ ಮಂದಿರವನ್ನು ಪ್ರವೇಶಿಸಿಬಿಡುತ್ತಿದರು. ಅಂತಹ ಸಂದರ್ಭದಲ್ಲಿ ಕೇಶವನು ವೇದಿಕೆಯ ಮೇಲೆ ನಿಂತು ಉಪದೇಶ ನೀಡುತ್ತಿದ್ದರೆ ಶ್ರೀರಾಮಕೃಷ್ಣರನ್ನು ನೋಡಿ ದಾಕ್ಷಣ ಕೆಳಗಿಳಿದು ಬಂದು ಅವರನ್ನು ಆದರದಿಂದ ಬರಮಾಡಿಕೊಳ್ಳುತ್ತಿದ್ದನು. ಅಂದಿನ ಉಪದೇಶ ಅಲ್ಲಿಗೆ ಕೊನೆಗೊಳ್ಳುತ್ತಿತ್ತು. ಎಲ್ಲರೂ ಶ್ರೀರಾಮಕೃಷ್ಣರ ಮಾತನ್ನು, ಅವರ ಭಕ್ತಿಗೀತೆಗಳನ್ನು ಕೇಳುತ್ತಾ ಆನಂದಿಸುತ್ತಿದ್ದರು.

3. ಸಾಮಾನ್ಯವಾಗಿ ತಮ್ಮ ತಮ್ಮ ಸಂಪ್ರದಾಯದ ವ್ಯಕ್ತಿಗಳೊಡನೆ ಬೆರೆತು ನಿಃಸಂಕೋಚವಾಗಿ ಆನಂದವನ್ನು ಅನುಭವಿಸಲು ಜನರಿಗೆ ಸಾಧ್ಯವಾಗುತ್ತದೆ. ಶ್ರೀರಾಮ ಕೃಷ್ಣರು ತಮ್ಮೊಡನೆ ಅಷ್ಟು ಮುಕ್ತರೀತಿಯಲ್ಲಿ ಬೆರೆತು ಆನಂದವನ್ನು ಅನುಭವಿಸುವು

ದನ್ನು ನೋಡಿ ಬ್ರಾಹ್ಮ ಮುಖಂಡರು ಅವರನ್ನು ತಮ್ಮವರಲ್ಲೇ ಒಬ್ಬರೆಂದು ಭಾವಿಸಿ ದುದರಲ್ಲಿ ಆಶ್ಚರ್ಯವೇನಿಲ್ಲ. ಹಾಗೆಯೇ ಶಾಕ್ತ ವೈಷ್ಣವ ಸಂಪ್ರದಾಯದವರೂ ಕೂಡ ಶ್ರೀರಾಮಕೃಷ್ಣರು ತಮ್ಮೊಡನೆ ಅಷ್ಟು ಸುಲಭವಾಗಿ ಬೆರೆತು ಆನಂದಪಡುವುದನ್ನು ನೋಡಿ ಅವರನ್ನು ತಮ್ಮವರೆಂದೇ ಭಾವಿಸಿದುದುಂಟು. ಸರ್ವಭಾವಗಳ ಉಗಮ ಮತ್ತು ಸಮನ್ವಯ ಸ್ಥಾನವಾದ ಭಾವಮುಖ ಸ್ಥಿತಿಯಲ್ಲಿ ಶ್ರೀರಾಮಕೃಷ್ಣರು ಇದ್ದುದ ರಿಂದಲೇ ಅವರಿಗೆ ಆ ರೀತಿ ಮಾಡಲು ಸಾಧ್ಯವಾಯಿತು ಎಂಬುದು ಆಗ ಅವರಾರಿಗೂ ತಿಳಿದಿರಲಿಲ್ಲ. ಆದರೆ ಶ್ರೀರಾಮಕೃಷ್ಣರು ತಮ್ಮೊಡನೆ ನಿರಾಕಾರ ಸಗುಣ ಬ್ರಹ್ಮದ ಧ್ಯಾನ ಮಾಡುತ್ತಾ ಮತ್ತು ಸಂಕೀರ್ತನೆಯಲ್ಲಿ ತನ್ಮಯರಾಗುತ್ತಾ ತಮಗೆಲ್ಲರಿಗಿಂತಲೂ ಅಧಿಕ ವಾದ ಆನಂದವನ್ನು ಅನುಭವಿಸುತ್ತಿದ್ದರು ಮತ್ತು ತಮಗೆ ಯಾವುದು ಅಂಧಕಾರವಾಗಿ ತೋರುವುದೋ ಅಲ್ಲಿ ಅವರು ಸತ್ಯದ ಬೆಳಕನ್ನು ಕಾಣುತ್ತಿದ್ದರು ಎಂಬ ವಿಷಯದಲ್ಲಿ ಬ್ರಹ್ಮಸಮಾಜದವರಾರಿಗೂ ಸಂದೇಹವಿರಲಿಲ್ಲ. ಭಗವಂತನಲ್ಲಿ ಸರ್ವಸ್ವವನ್ನೂ ಅರ್ಪಿಸಿ ಅವನಲ್ಲಿ ಸಂಪೂರ್ಣ ತನ್ಮಯತೆಯನ್ನು ಪಡೆಯದೆ ಈ ರೀತಿಯ ದರ್ಶನ ಮತ್ತು ಆನಂದಾನುಭವ ಖಂಡಿತ ಸಾಧ್ಯವಿಲ್ಲ ಎಂಬ ವಿಷಯವು ಅವರಿಗೆ ತಿಳಿದಿತ್ತು.

4. ಬ್ರಹ್ಮ ಸಮಾಜಕ್ಕೆ ಸೇರಿದ ಅನೇಕ ವ್ಯಕ್ತಿಗಳಲ್ಲಿ ಶ್ರೀರಾಮಕೃಷ್ಣರು ಸತ್ಯ ಪ್ರಿಯತೆಯನ್ನು, ತ್ಯಾಗಮನೋಭಾವವನ್ನು, ಆಧ್ಯಾತ್ಮಿಕ ತೃಷೆಯನ್ನು ಮತ್ತು ಇನ್ನೂ ಅನೇಕ ಒಳ್ಳೆಯ ಗುಣಗಳನ್ನು ಕಂಡು ತಮ್ಮ ಧಾರ್ಮಿಕ ಪಥದಲ್ಲಿ ಅವರು ಮುಂದುವರಿ ಯುವಂತೆ ಸಹಾಯ ಮಾಡಿದರು. ಯಾವುದೇ ಸಂಪ್ರದಾಯಕ್ಕೆ ಸೇರಿದವರಾದರೂ ಅವರಲ್ಲಿ ಭಗವದ್ಭಕ್ತಿ ಇದ್ದರೆ ಅವರನ್ನು ತಮ್ಮ ನಿಕಟವರ್ತಿಗಳೆಂದು ಶ್ರೀರಾಮಕೃಷ್ಣರು ಪರಿಗಣಿಸುತ್ತಿದ್ದರು ಮತ್ತು ಸ್ವಲ್ಪವೂ ಹಿಂಜರಿಯದೆ ಅವರಿಗೆ ಅವರ ಮಾರ್ಗದಲ್ಲಿ ಮುಂದುವರಿಯುವಂತೆ ಸಹಾಯ ಮಾಡುತ್ತಿದ್ದರು. ಭಗವದ್ಭಕ್ತರದೇ ಪ್ರತ್ಯೇಕ ಜಾತಿ ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು ಮತ್ತು ಅವರೊಡನೆ ತಿನ್ನಲು ಕುಡಿಯಲು ಅವರು ಹಿಂಜರಿಯುತ್ತಿರಲಿಲ್ಲ. ಆದ್ದರಿಂದ ಕೇಶವಚಂದ್ರಸೇನನನ್ನು ಅವರು ತುಂಬಾ ಪ್ರೀತಿಸುತ್ತಿದ್ದರು. ಬ್ರಹ್ಮಸಮಾಜಕ್ಕೆ ಸೇರಿದ ವಿಜಯಕೃಷ್ಣಗೋಸ್ವಾಮಿ, ಪ್ರತಾಪ ಚಂದ್ರಮಜುಂಮ್‌ದಾರ್, ಚಿರಂಜೀವಿಶರ್ಮ, ಶಿವನಾಥ ಶಾಸ್ತ್ರಿ, ಅಮೃತಲಾಲ್‌ಬೋಸ್ ಮತ್ತು ಇತರ ಪ್ರಸಿದ್ಧ ವ್ಯಕ್ತಿಗಳ ಮೇಲೆಯೂ ಅವರಿಗೆ ಅಪಾರ ಪ್ರೀತಿ ಇತ್ತು. ಅವ ರೆಲ್ಲರಿಗೂ ಆಧ್ಯಾತ್ಮಿಕವಾಗಿ ಸಹಾಯ ಮಾಡಲು ಅವರು ಯಾವಾಗಲೂ ಸಿದ್ಧರಿದ್ದರು. ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದಾಗಿ ಅವರೆಲ್ಲರೂ ಭಾರತೀಯ ಧಾರ್ಮಿಕ ಆದರ್ಶ ಗಳಿಂದ ಬಹುದೂರವಾಗಿದ್ದರು ಮತ್ತು ಸಾಮಾಜಿಕ ಸುಧಾರಣೆಯನ್ನೇ ತಮ್ಮ ಧಾರ್ಮಿಕ ಸಾಧನೆಯ ಪರಮೋಚ್ಚ ಆದರ್ಶವೆಂದು ಭಾವಿಸಿದ್ದರು. ಆದ್ದರಿಂದ ಶ್ರೀರಾಮಕೃಷ್ಣರು ಅವರಲ್ಲಿ ನಿಜವಾದ ಸಾಧನೆಯ ಆಸಕ್ತಿಯನ್ನು ಜಾಗ್ರತಿಗೊಳಿಸಿದ್ದರು. ಸಮಾಜವು ತಮ್ಮ ಜೊತೆ ಮುಂದುವರಿಯಲಿ ಬಿಡಲಿ, ಈಶ್ವರ ಸಾಕ್ಷಾತ್ಕಾರವೇ ತಮ್ಮ ಜೀವನದ ಪ್ರಧಾನ ಉದ್ದೇಶ ಎಂಬುದನ್ನು ಅವರು ಒಪ್ಪಿಕೊಳ್ಳುವಂತೆ ಮಾಡಲು ಶ್ರೀರಾಮ

ಕೃಷ್ಣರು ಪ್ರಯತ್ನಿಸಿದರು. ಇದರ ಫಲವಾಗಿ ಕೇಶವಚಂದ್ರನು ತನ್ನ ಅನುಯಾಯಿಗಳ ಸಮೇತವಾಗಿ ಅವರು ತೋರಿಸಿದ ಮಾರ್ಗದಲ್ಲಿ ಬಹುದೂರ ಮುಂದುವರಿದನು ಭಗವಂತನನ್ನು ತಾಯಿ ಎಂದು ಕರೆಯುವುದು ಮತ್ತು ಶಕ್ತಿಯ ಉಪಾಸನೆ ಇವು ಬ್ರಹ್ಮ ಸಮಾಜದಲ್ಲಿ ಪ್ರಚಲಿತವಾದುವು. ಸಮಾಜದ ಸಾಹಿತ್ಯ, ಸಂಗೀತ ಮುಂತಾದ ಎಲ್ಲಾ ವಿಷಯಗಳನ್ನೂ ಶ್ರೀರಾಮಕೃಷ್ಣರ ಭಾವವು ಪ್ರವೇಶಿಸಿತು ಮತ್ತು ಅವುಗಳೆಲ್ಲವನ್ನೂ ಸರಳಗೊಳಿಸಿತು. ಅಷ್ಟೇ ಅಲ್ಲ ಹಿಂದೂ ಧರ್ಮದಲ್ಲಿ ಯಾವುದನ್ನು ಭ್ರಮೆ ಮತ್ತು ಕೆಟ್ಟ ಸಂಸ್ಕಾರಗಳು ಎಂದು ಪರಿಗಣಿಸಿದ್ದರೋ ಅವುಗಳಲ್ಲಿಯೂ ತಿಳಿಯಬೇಕಾದ ಅನೇಕ ವಿಷಯಗಳಿವೆ ಎಂಬುದನ್ನು ಬ್ರಹ್ಮ ಸಮಾಜದವರು ಕಂಡುಕೊಂಡರು. ಇದೂ ಕೂಡ ಶ್ರೀರಾಮಕೃಷ್ಣರ ಪ್ರಭಾವದ ಪರಿಣಾಮವೆ.

5. ಪಾಶ್ಚಾತ್ಯ ಚಿಂತನೆಗಳಿಂದ ಪ್ರಭಾವಿತರಾದ ಕೇಶವ ಮತ್ತು ಅವನ ಸಂಗಡಿಗರು ಶ್ರೀರಾಮಕೃಷ್ಣರ ಉಪದೇಶಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾರರು ಮತ್ತು ಅರ್ಥ ಮಾಡಿಕೊಂಡಿದ್ದೆಲ್ಲ ಅವರಿಗೆ ರುಚಿಸದೆ ಇರಬಹುದು. ಈ ವಿಷಯ ಶ್ರೀರಾಮಕೃಷ್ಣರಿಗೆ ಮೊದಲಿನಿಂದಲೂ ತಿಳಿದಿತ್ತು. ಆದ್ದರಿಂದ ಅವರಿಗೆ ಉಪದೇಶ ನೀಡಿದ ಮೇಲೆ ಶ್ರೀರಾಮಕೃಷ್ಣರು ಸಾಮಾನ್ಯವಾಗಿ ಹೀಗೆ ಹೇಳುತ್ತಿದ್ದರು : "ನಾನು ನನ್ನ ಮನಸ್ಸಿಗೆ ಬಂದದ್ದನ್ನು ಹೇಳಿರುವೆನು. ನೀವು ಅದರ ತಲೆ ಬಾಲವನ್ನು ಕತ್ತರಿಸಿ ಎಷ್ಟು ಬೇಕೋ ಅಷ್ಟನ್ನು ಸ್ವೀಕರಿಸಬಹುದು." ಮತ್ತೆ ಬ್ರಾಹ್ಮಭಕ್ತರನೇಕರಲ್ಲಿ ಸಮಾಜ ಸುಧಾರಣೆ ಮತ್ತು ಪ್ರಾಪಂಚಿಕ ಸುಖ ಇವು ಜೀವನದ ಉದ್ದೇಶಗಳಾಗಿರುವುದನ್ನು ಶ್ರೀರಾಮಕೃಷ್ಣರು ಕಂಡುಕೊಂಡರು. ಇದನ್ನು ಅವರು ಹಾಸ್ಯರೂಪವಾಗಿ ಅನೇಕ ಬಾರಿ ವ್ಯಕ್ತಪಡಿಸಿದ್ದರು. ಅವರು ಹೇಳುತ್ತಾರೆ :

6. "ನಾನು ಕೇಶವನ ಬ್ರಹ್ಮ ಸಮಾಜಕ್ಕೆ ಹೋಗಿದ್ದೆ. ಅವರ ಉಪಾಸನೆಯನ್ನು ನೋಡಿದೆ. ಬಹಳ ಹೊತ್ತು ಭಗವಂತನ ಐಶ್ವರ್ಯಗಳ ಬಗ್ಗೆ ಮಾತನಾಡಿದ ಮೇಲೆ ಪುರೋಹಿತನು ಹೇಳಿದ, 'ಈಗ ಭಗವಂತನನ್ನು ಧ್ಯಾನಿಸೋಣ' ಎಂದು. ನನಗಾಶ್ಚರ್ಯವಾಯಿತು ಎಷ್ಟು ಹೊತ್ತು ಧ್ಯಾನ ಮಾಡುತ್ತಾರೆ ಎಂದು. ಆದರೆ ಅವರು ಕಣ್ಣುಮುಚ್ಚಿ ಎರಡೇ ನಿಮಿಷ ಆಗಿದ್ದೋ ತಡ ಅವರ ಧ್ಯಾನ ಸಮಾಪ್ತಿಗೊಂಡಿತು ! ಹೀಗೆ ಧ್ಯಾನ ಮಾಡಿದರೆ ಭಗವಂತನ ಸಾಕ್ಷಾತ್ಕಾರವಾಗುವುದೇ ? ಅವರು ಧ್ಯಾನ ಮಾಡುತ್ತಿರುವಾಗ ಅವರ ಮುಖಗಳನ್ನೆಲ್ಲಾ ಪರೀಕ್ಷಿಸಿ ನೋಡಿದೆ. ಅನಂತರ ಕೇಶವನಿಗೆ ಹೇಳಿದೆ : 'ನಿಮ್ಮಲ್ಲನೇಕರು ಧ್ಯಾನ ಮಾಡುತ್ತಿರುವುದನ್ನು ಕಂಡೆ. ಆಗ ನನಗೇನೆನ್ನಿಸಿತು ಗೊತ್ತೇ? ಮಂಗಗಳ ಹಿಂಡು ದಕ್ಷಿಣೇಶ್ವರದಲ್ಲಿ ಕೆಲವೊಮ್ಮೆ ಹುಣಿಸೆಮರಗಳ ಮೇಲೆ ಶಾಂತವಾಗಿ ಕುಳಿತಿರುತ್ತವೆ. ಆಗ ಅವುಗಳು ಬಹಳ ಸಭ್ಯವ್ಯಕ್ತಿಗಳಂತೆ ತುಂಬ ಮುಗ್ಧರಂತೆ ಕಾಣುತ್ತವೆ. ಆದರೆ ಅವು ನಿಜವಾಗಿಯೂ ಹಾಗಿರುವುದಿಲ್ಲ. ಯಾರ ಮನೆಯ ಛಾವಣಿಯ ಮೇಲೆ ಕುಂಬಳಕಾಯಿ, ಚೀನಿಕಾಯಿಗಳು ಬಿಟ್ಟಿವೆ. ಯಾವ ತೋಟಗಳಲ್ಲಿ ಬಾಳೆಹಣ್ಣು, ಬದನೆಕಾಯಿಗಳಿವೆ, ಇದನ್ನೇ ಕುರಿತು ಚಿಂತಿಸುತ್ತಿರುತ್ತವೆ. ಸ್ವಲ್ಪ ಹೊತ್ತಿನಲ್ಲಿಯೇ ಚೀತ್ಕಾರ

ಮಾಡುತ್ತಾ ತೋಟಗಳಿಗೆ ನೆಗೆದು ತಮ್ಮ ಹೊಟ್ಟೆ ಭರ್ತಿಮಾಡಿಕೊಳ್ಳುತ್ತವೆ. ಅನೇಕರು ಈ ರೀತಿ ಧ್ಯಾನ ಮಾಡುತ್ತಿರುವುದನ್ನು ಕಂಡೆ.' ಅವರು ಈ ಮಾತನ್ನು ಕೇಳಿ ನಕ್ಕರು."

ಹೀಗೆ ಶ್ರೀರಾಮಕೃಷ್ಣರು ಹಾಸ್ಯರೂಪದಲ್ಲಿ ನಮಗೂ ಕೆಲವೊಮ್ಮೆ ಉಪದೇಶ ನೀಡುತ್ತಿದ್ದರು. ಒಂದು ದಿನ ಸ್ವಾಮಿ ವಿವೇಕಾನಂದರು ಅವರ ಮುಂದೆ ಭಜನೆ ಹಾಡು ತ್ತಿದ್ದರು. ಸ್ವಾಮೀಜಿಯವರು ಆಗ ಬ್ರಹ್ಮಸಮಾಜಕ್ಕೆ ಹೋಗಿ ಬರುತ್ತಿದ್ದರು. ಬೆಳಗ್ಗೆ ಮತ್ತು ಸಂಜೆ ಎರಡು ಬಾರಿ ಅಲ್ಲಿಗೆ ಹೋಗಿ ಉಪಾಸನೆ ಧ್ಯಾನಾದಿಗಳಲ್ಲಿ ಭಾಗವಹಿಸು ತ್ತಿದ್ದರು. "ಏಕ ಪುರಾತನ ಪುರುಷ ನಿರಂಜನದಲ್ಲಿ ನಿನ್ನೆಯ ಮನವನಿರಿಸು" ಎಂಬ ಬ್ರಹ್ಮ ಸಮಾಜದ ಹಾಡನ್ನು ಬಹಳ ಭಕ್ತಿಯಿಂದ ಹಾಡತೊಡಗಿದರು. ಆ ಹಾಡಿನಲ್ಲಿ ಒಂದು ಸಾಲು ಹೀಗಿದೆ : "ಅವನ ಭಜನೆ ಸಾಧನೆಯನು ನಿರಂತರ ಮಾಡು." ಈ ಮಾತನ್ನು ಸ್ವಾಮೀಜಿಯವರ ಮನಸ್ಸಿನಲ್ಲಿ ದೃಢವಾಗಿ ಬೇರೂರುವಂತೆ ಮಾಡಲು ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆಯೇ ಹೇಳಿದರು: "ಇಲ್ಲ, ಇಲ್ಲ. ಹೀಗೆ ಹೇಳು 'ಅವನ ಭಜನ ಸಾಧನೆಯನ್ನು ದಿನಕ್ಕೆರಡು ಬಾರಿ ಮಾಡು' ಎಂದು. ಯಾವುದನ್ನು ಮಾಡುವು ದಿಲ್ಲವೊ ಅದನ್ನು ಸುಮ್ಮನೆ ಹೇಳುವುದೇತಕ್ಕೆ ?" ಎಲ್ಲರೂ ಗಟ್ಟಿಯಾಗಿ ನಕ್ಕರು. ಸ್ವಾಮೀಜಿಯವರ ಮುಖ ಸಣ್ಣಗಾಯಿತು.

7. ಇನ್ನೊಂದು ಸಂದರ್ಭದಲ್ಲಿ ಶ್ರೀರಾಮಕೃಷ್ಣರು ಉಪಾಸನೆಯ ವಿಷಯವಾಗಿ ಕೇಶವ ಮುಂತಾದವರಿಗೆ ಹೀಗೆ ಹೇಳಿದರು : "ನೀವುಗಳು ಭಗವಂತನ ಐಶ್ವರ್ಯವನ್ನು ಅಷ್ಟೊಂದು ಕೊಂಡಾಡುತ್ತೀರಲ್ಲ ಏಕೆ ? ಮಗನು ತನ್ನ ತಂದೆಯ ಮುಂದೆ ಕುಳಿತು 'ನಮ್ಮ ತಂದೆಗೆ ಎಷ್ಟೊಂದು ಮನೆಗಳಿವೆ, ಎಷ್ಟೊಂದು ಕುದುರೆಗಳಿವೆ, ಎಷ್ಟೊಂದು ದನಗಳಿವೆ, ಎಷ್ಟೊಂದು ತೋಟಗದ್ದೆಗಳಿವೆ' ಎಂಬುದಾಗಿ ಹೊಗಳುತ್ತಾನೇನು ? ಅಥವಾ ತಂದೆಯು ಎಷ್ಟು ಮಟ್ಟಿಗೆ ನಮ್ಮವನು ಮತ್ತು ಅವನು ನಮ್ಮನ್ನು ಎಷ್ಟೊಂದು ಪ್ರೀತಿ ಸುತ್ತಾನೆ ಎಂಬುದನ್ನು ಕುರಿತು ಚಿಂತಿಸುತ್ತಾ ಮುಗ್ಧರಾಗುವುದಿಲ್ಲವೇ ? ತಂದೆ ಮಗನಿಗೆ ಊಟ ಕೊಡುತ್ತಾನೆ, ಬಟ್ಟೆ ಕೊಡುತ್ತಾನೆ, ಸುಖದಲ್ಲಿರಿಸುತ್ತಾನೆ, ಇದರಲ್ಲೆಲ್ಲಾ ವಿಶೇಷ ವೇನಿದೆ ? ನಾವೆಲ್ಲರೂ ಭಗವಂತನ ಮಕ್ಕಳು. ಅವನು ನಮ್ಮನ್ನು ಈ ರೀತಿ ನೋಡಿ ಕೊಳ್ಳುವುದರಲ್ಲಿ ಆಶ್ಚರ್ಯವೇನಿದೆ ? ಯಥಾರ್ಥ ಭಕ್ತನು ಇದಾವುದನ್ನೂ ಚಿಂತಿಸದೆ ಭಗವಂತನನ್ನು ತನ್ನವನೆಂದೇ ಭಾವಿಸುತ್ತಾ ಅವನನ್ನು ಒತ್ತಾಯಪಡಿಸುತ್ತಾನೆ, ಅಭಿ ಮಾನಪಡುತ್ತಾನೆ. ತನ್ನ ಪ್ರಾರ್ಥನೆಗೆ ಓಗೊಡಬೇಕೆಂದು, ತನಗೆ ದರ್ಶನ ನೀಡಬೇಕೆಂದು ಹಠ ಹಿಡಿಯುತ್ತಾನೆ. ಭಗವಂತನ ಐಶ್ವರ್ಯಗಳ ಬಗ್ಗೆ ಚಿಂತಿಸುತ್ತಾ ಹೋದರೆ ಅವ ನನ್ನು ನಮ್ಮವನು ನಮಗೆ ಹತ್ತಿರದವನು ಎಂದು ಭಾವಿಸಲಾಗುವುದಿಲ್ಲ, ಅವನನ್ನು ಒತ್ತಾಯಪಡಿಸಲಾಗುವುದಿಲ್ಲ. ಅವನು ಎಷ್ಟೊಂದು ಶ್ರೇಷ್ಠನು, ಅವನು ನಮ್ಮಿಂದ ಎಷ್ಟೊಂದು ದೂರವಾಗಿದ್ದಾನೆ ಎಂಬ ಭಾವ ಬಂದುಬಿಡುತ್ತದೆ. ಅವನನ್ನು ನೀವು ನಮ್ಮವನೆಂದೇ ಭಾವಿಸಬೇಕು. ಆಗ ಅವನು ದೊರೆಯುತ್ತಾನೆ."

8. ಕೇಶವಸೇನ ಮುಂತಾದವರು ಶ್ರೀರಾಮಕೃಷ್ಣರ ಸಂಪರ್ಕದಿಂದ ಭಗವತ್

ಸಾಕ್ಷಾತ್ಕಾರಕ್ಕಾಗಿ ಸಾಧನೆ ಮತ್ತು ವಿಷಯತ್ಯಾಗ ಇವು ಅತ್ಯಾವಶ್ಯಕ ಎಂಬುದನ್ನು ಮನಗಂಡರು. ಇದಲ್ಲದೆ ಅವರು ಇನ್ನೂ ಒಂದು ವಿಷಯವನ್ನು ತಿಳಿದು ಕೊಂಡರು. ಪಾಶ್ಚಾತ್ಯಧರ್ಮ ಪ್ರಚಾರಕರಿಂದ ಮತ್ತು ಇಂಗ್ಲಿಷ್ ಪುಸ್ತಕಗಳಿಂದ ಅವರು ಭಗವಂತನು ಎಂದೂ ಸಾಕಾರನಾಗಲಾರ ಮತ್ತು ಅವನನ್ನು ಸಾಕಾರಮೂರ್ತಿಯ ಮೂಲಕ ಪೂಜಿಸುವುದು ಮಹಾಪಾಪ ಎಂದು ಮೊದಲು ತಿಳಿದುಕೊಂಡಿದ್ದರು. ಆದರೆ "ನಿರಾಕಾರವಾದ ಜಲವು ಹೆಪ್ಪುಗಟ್ಟಿ ಮಂಜುಗೆಡ್ಡೆ ಆಗುವಂತೆ ನಿರಾಕಾರ ಸಚ್ಚಿದಾ ನಂದವು ಭಕ್ತಿಯ ಶೈತ್ಯದಿಂದ ಹೆಪ್ಪುಗಟ್ಟಿ ಸಾಕಾರವಾಗುತ್ತದೆ," ಮತ್ತೆ "ಕೃತಕವಾದ ಸೀತಾಫಲವನ್ನು ನೋಡಿದಾಗ ನಿಜವಾದ ಸೀತಾಫಲವು ಮನಸ್ಸಿಗೆ ಬರುವಂತೆ, ಸಾಕಾರ ಮೂರ್ತಿಯನ್ನು ಅವಲಂಬಿಸಿ ಭಗವಂತನ ನಿಜವಾದ ಸ್ವರೂಪವನ್ನು ಅರಿಯಬಹುದು," —ಇತ್ಯಾದಿ ಪ್ರತೀಕೋಪಾಸನೆಯ ವಿಷಯದ ಬಗ್ಗೆ ಶ್ರೀರಾಮಕೃಷ್ಣರು ಹೇಳಿದುದನ್ನು ಕೇಳಿ ತಮ್ಮ ಅಭಿಪ್ರಾಯವನ್ನು ಬದಲಾಯಿಸಿಕೊಂಡರು. ಮೂರ್ತಿಪೂಜೆ ಎಂದು ಯಾವು ದನ್ನು ಹೀನದೃಷ್ಟಿಯಿಂದ ಕಾಣುತ್ತಿದ್ದರೋ ಅದರ ಹಿಂದೆ ಬಹಳ ಅರ್ಥವಿದೆ ಎಂಬು ದನ್ನು ಕಂಡುಕೊಂಡರು. 'ಅಗ್ನಿ ಮತ್ತು ಅದರ ದಾಹಕ ಶಕ್ತಿಯಂತೆ ಬ್ರಹ್ಮ ಮತ್ತು ಅದರ ಶಕ್ತಿ ಇವೆರಡೂ ಅಭಿನ್ನ' ಎಂಬ ಶ್ರೀರಾಮಕೃಷ್ಣರ ಉಪದೇಶವನ್ನು ಕೇಳಿ ಕೇಶವ ಮುಂತಾದ ಬ್ರಾಹ್ಮ ಭಕ್ತರು ಸಾಕಾರೋಪಾಸನೆಯಲ್ಲಿ ಒಂದು ಹೊಸ ಬೆಳಕನ್ನು ಕಂಡರು. ಭಗವಂತನನ್ನು ಕೇವಲ ನಿರಾಕಾರ ಸಗುಣ ಎಂದು ಹೇಳುವುದರಿಂದ ಅವನ ಸ್ವರೂಪದ ಒಂದು ಅಂಶವನ್ನು ಮಾತ್ರ ಹೇಳಿದಂತಾಗುತ್ತದೆ ಎಂದು ಅವರು ನಿಃಸಂಶ ಯವಾಗಿ ಅರ್ಥಮಾಡಿಕೊಂಡರು. ಭಗವಂತನನ್ನು ಕೇವಲ ಸಾಕಾರ ಎಂದು ಹೇಳಿದರೆ ಹೇಗೆ ದೋಷವಾಗುವುದೋ ಕೇವಲ ನಿರಾಕಾರ ಸಗುಣ ಎಂದು ಹೇಳಿದರೂ ಅಷ್ಟೇ ದೋಷವಾಗುವುದು ಎಂದು ಅವರ ಮನಸ್ಸಿಗೆ ಹೊಳೆಯಿತು. ಭಗವಂತನು ಸಾಕಾರ ಜಗದ್ರೂಪದಲ್ಲಿ ವ್ಯಕ್ತನಾಗಿರುವನು, ನಿರಾಕಾರ ಸಗುಣ ರೂಪದಲ್ಲಿ ಜಗತ್ತಿನ ನಿಯಾ ಮಕನಾಗಿರುವನು ಮತ್ತು ಎಲ್ಲಾ ಗುಣಗಳಿಗೂ ಅತೀತನಾಗಿ ಅವನು ಜೀವ, ಜಗತ್ತು ಮುಂತಾದ ಎಲ್ಲಾ ನಾಮರೂಪಗಳ ಹಿಂದಿರುವ ಮೂಲವಸ್ತುವಾಗಿರುವನು. "ಭಗವ ತ್ಸ್ವರೂಪವನ್ನು ಮಿತಿಗೊಳಿಸಲಾಗುವುದಿಲ್ಲ. ಅವನು ಸಾಕಾರ, ನಿರಾಕಾರ ಇಷ್ಟೇ ಅಲ್ಲದೆ ಇನ್ನೂ ಏನೇನೋ ಆಗಿರುವನು. ಅದನ್ನೆಲ್ಲ ಯಾರು ತಿಳಿಯಬಲ್ಲರು?" ಶ್ರೀರಾಮಕೃಷ್ಣರ ಈ ಮಾತಿನಲ್ಲಿ ಗಭೀರವಾದ ಅರ್ಥ ಅಡಗಿರುವುದನ್ನು ಕಂಡುಕೊಂಡು ಕೇಶವ ಮುಂತಾ ದವರು ಈ ವಿಷಯದಲ್ಲಿ ಒಂದು ಹೊಸ ಬೆಳಕನ್ನು ಪಡೆದರು. ಕ್ರಿಸ್ತಾಬ್ದ ೧೮೭೫ರಲ್ಲಿ ಕೇಶವನು ಶ್ರೀರಾಮಕೃಷ್ಣರ ಪುಣ್ಯದರ್ಶನವನ್ನು ಮೊದಲಬಾರಿಗೆ ಪಡೆದದ್ದು. ಅಂದಿ ನಿಂದ ಮೂರು ವರ್ಷಗಳಲ್ಲಿ ಅವನು ಸ್ಥಾಪಿಸಿದ ಬ್ರಹ್ಮಸಮಾಜವು ಕ್ರಮೇಣ ಪಾಶ್ಚಾತ್ಯ ಪ್ರಭಾವದಿಂದ ಮುಕ್ತವಾಗಿ ಹೊಸ ರೂಪವನ್ನು ಪಡೆಯತೊಡಗಿತು. ಆಧ್ಯಾತ್ಮಿಕ ಸಾಧ ನೆಯ ಬಗ್ಗೆ ಅವರಿಗಿದ್ದ ಪ್ರೀತಿಯಿಂದಾಗಿ ಜನರ ಗಮನವನ್ನು ಸೆಳೆದರು. ಮುಂದೆ ೧೮೭೮ ಮಾರ್ಚ್ ೬ರಂದು ಕೇಶವನು ತನ್ನ ಮಗಳನ್ನು ಕೂಚ್‌ಬಿಹಾರದ ರಾಜಪುತ್ರ

ನಿಗೆ ಮದುವೆ ಮಾಡಿಕೊಟ್ಟನು. ಬ್ರಹ್ಮಸಮಾಜದಲ್ಲಿ ಮದುವೆಯ ವಯಸ್ಸು ಇಂತಿಷ್ಟೇ ಇರಬೇಕೆಂದು ನಿರ್ಧರಿಸಲಾಗಿತ್ತು. ಆದರೆ ಅವನ ಮಗಳ ವಯಸ್ಸು ಆ ನಿರ್ದಿಷ್ಟ ವಯಸ್ಸಿಗಿಂತ ಕಡಮೆ ಇದ್ದುದರಿಂದ ಈ ಮದುವೆಯು ಸಮಾಜದಲ್ಲಿ ನಿಂದನೆಗೆ ಕಾರಣವಾಯಿತು. ಇದರ ಪರಿಣಾಮವಾಗಿ ಬ್ರಹ್ಮಸಮಾಜವು ಭಾರತೀಯ ಬ್ರಹ್ಮಸಮಾಜ ಮತ್ತು ಸಾಧಾರಣ ಬ್ರಹ್ಮಸಮಾಜ ಎಂದು ಎರಡು ಭಾಗವಾಯಿತು. ಆದರೆ ಈ ಘಟನೆಯಿಂದಾಗಿ ಶ್ರೀರಾಮಕೃಷ್ಣರ ಪ್ರಭಾವವು ಬ್ರಹ್ಮಸಮಾಜದ ಮೇಲೆ ಕಡಮೆಯಾಗಲಿಲ್ಲ. ಅವರು ಎರಡು ಗುಂಪಿನವರನ್ನು ಸಮಾನವಾಗಿ ಪ್ರೀತಿಸುತ್ತಿದ್ದರು ಮತ್ತು ಎರಡೂ ಗುಂಪಿನವರು ಆಧ್ಯಾತ್ಮಿಕ ಸಹಾಯವನ್ನು ಪಡೆಯಲು ಅವರೆಡೆಗೆ ಬರುತ್ತಿದ್ದರು.

9. ಭಾರತೀಯ ಬ್ರಹ್ಮಸಮಾಜದ ನೇತಾರನಾದ ಕೇಶವಚಂದ್ರನು ಈ ಘಟನೆಯ ನಂತರ ಆಧ್ಯಾತ್ಮಿಕ ಸಾಧನಾಮಾರ್ಗದಲ್ಲಿ ಬಹುಬೇಗನೆ ಮುಂದುವರಿಯತೊಡಗಿದನು. ಶ್ರೀರಾಮಕೃಷ್ಣರ ಕೃಪೆಯಿಂದ ಅವನ ಆಧ್ಯಾತ್ಮಿಕ ಜೀವನವು ತುಂಬಾ ಆಳವಾಗ ತೊಡಗಿತು. ಹೋಮ, ಅಭಿಷೇಕ, ಮುಂಡನ, ಕಾಷಾಯ ವಸ್ತ್ರಧಾರಣೆ ಇವೇ ಮುಂತಾದ ಸಾಂಕೇತಿಕ ಕ್ರಿಯೆಗಳು ಆಧ್ಯಾತ್ಮಿಕ ರಾಜ್ಯದ ಸೂಕ್ಷ್ಮಸ್ತರಗಳಿಗೆ ಏರಲು ಮನಸ್ಸಿಗೆ ಸಹಾಯಕವಾಗುತ್ತವೆ ಎಂಬುದನ್ನು ಕಂಡುಕೊಂಡು ಅವುಗಳನ್ನು ಸ್ವಲ್ಪಮಟ್ಟಿಗೆ ಅನುಸರಿಸತೊಡಗಿದನು. ಗೌರಾಂಗ, ಜೀಸಸ್ ಮೊದಲಾದ ದಿವ್ಯ ಪುರುಷರು ಈಗಲೂ ಸೂಕ್ಷ್ಮ ಶರೀರದಲ್ಲಿದ್ದು ಸಾಧಕರಿಗೆ ಸ್ಫೂರ್ತಿಯನ್ನು ನೀಡುತ್ತಿರುವರು ಎಂಬ ದೃಢವಾದ ನಂಬಿಕೆ ಅವನಲ್ಲಿ ಬೇರೂರಿತು. ಅವರ ಆಧ್ಯಾತ್ಮಿಕ ಗುಣಗಳನ್ನು ತನ್ನಲ್ಲಿ ಮೈಗೂಡಿಸಿಕೊಳ್ಳಲು ಅವರ ಮೇಲೆ ಆಳವಾಗಿ ಧ್ಯಾನ ಮಾಡತೊಡಗಿದನು. ಶ್ರೀರಾಮಕೃಷ್ಣರೂ ಕೂಡ ಯಾವುದೇ ವಿಧವಾದ ಸಾಧನೆಯನ್ನು ಮಾಡುವಾಗ ಅದಕ್ಕನುಗುಣವಾದ ಸಾಂಕೇತಿಕ ವಿಧಿಗಳನ್ನು ಅನುಸರಿಸುತ್ತಿದ್ದರು. ಕೇಶವನೂ ಕೂಡ ಇದನ್ನೇ ಅನುಸರಿಸಿ ಮೇಲೆ ಹೇಳಿದ ಸಾಧನೆಗಳಲ್ಲಿ ನಿರತನಾಗಿದ್ದನು. ಅವನು ತನ್ನ ಸಾಧನಗಳ ಮೂಲಕ ಶ್ರೀರಾಮಕೃಷ್ಣರು ಕಂಡುಹಿಡಿದ ಎಷ್ಟು ಮತಗಳೊ ಅಷ್ಟು ಪಥಗಳು ಎಂಬ ಸತ್ಯವನ್ನು ಅರ್ಥಮಾಡಿಕೊಳ್ಳತೊಡಗಿದನು. ಈ ಸತ್ಯವೇ ಅವನು 'ನವವಿಧಾನವೆಂಬ' ಹೊಸ ಪಂಥವನ್ನು ಪ್ರಾರಂಭಿಸಲು ದಾರಿ ಮಾಡಿಕೊಟ್ಟಿತು. ಇದರ ಮೂಲಕ ಅವನು ಆ ಸತ್ಯವನ್ನು ತಾನು ಅರ್ಥಮಾಡಿಕೊಂಡ ರೀತಿಯಲ್ಲಿ ಜನಸಾಧಾರಣರಿಗೆ ಬೋಧಿಸತೊಡಗಿದನು. ಶ್ರೀರಾಮಕೃಷ್ಣರನ್ನು ಅವನು ಈ ನವ ವಿಧಾನದ ಘನೀಭೂತ ಮೂರ್ತಿ ಎಂದು ಪರಿಗಣಿಸುತ್ತಿದ್ದನು. ಅವನಿಗೆ ಅವರ ಮೇಲೆ ಇದ್ದ ಶ್ರದ್ಧಾಭಕ್ತಿಯನ್ನು ಮಾತಿನ ಮೂಲಕ ವ್ಯಕ್ತಪಡಿಸುವುದಕ್ಕೆ ಸಾಧ್ಯವಿಲ್ಲ. ಅವನು ದಕ್ಷಿಣೇಶ್ವರಕ್ಕೆ ಬಂದು ಶ್ರೀರಾಮಕೃಷ್ಣರ ಪದತಲದಲ್ಲಿ ಕುಳಿತು "ವಿಧಾನಕ್ಕೆ ಜಯವಾಗಲಿ, ವಿಧಾನಕ್ಕೆ ಜಯವಾಗಲಿ" ಎಂದು ಮತ್ತೆ ಮತ್ತೆ ಹೇಳುತ್ತಾ ಅವರ ಪಾದಧೂಳಿ ಸ್ವೀಕರಿಸುತ್ತಿದ್ದುದನ್ನು ನಮ್ಮಲ್ಲಿ ಅನೇಕರು ಕಂಡಿರುವರು. ಈ ನವ ವಿಧಾನವು ಸ್ಥಾಪನೆಯಾಗಿ ಕೇವಲ ನಾಲ್ಕೇ ವರ್ಷಗಳಲ್ಲಿ ಅವನು ದೇಹ ಬಿಡದೆ ಇದ್ದಿದ್ದರೆ ಅವನು ಆಧ್ಯಾತ್ಮಿಕ ಜೀವನದಲ್ಲಿ ಎಷ್ಟು ಆಳಕ್ಕೆ

ಹೋಗುತ್ತಿದ್ದನೆಂಬುದನ್ನು ಯಾರು ತಾನೇ ಹೇಳಬಲ್ಲರು ?

10. ಶ್ರೀರಾಮಕೃಷ್ಣರು ಕೇಶವನನ್ನು ತಮ್ಮ ಅತ್ಯಂತ ಆತ್ಮೀಯನೆಂದು ಪರಿಗಣಿಸಿದ್ದರು. ಆ ಆತ್ಮೀಯತೆ ಎಷ್ಟೊಂದು ಗಾಢವಾಗಿತ್ತೆಂದರೆ ಅವನಿಗೆ ಕಾಯಿಲೆಯಾದಾಗ ಒಮ್ಮೆ ಅದು ವಾಸಿಯಾಗಲೆಂದು ಜಗನ್ಮಾತೆಗೆ ಹರಕೆ ಹೊತ್ತಿದ್ದರು. ಅವನು ರೋಗದಿಂದ ನರಳುತ್ತಿರುವಾಗ ಅವನನ್ನು ನೋಡಲು ಹೋಗಿದ್ದರು. ಅವನ ಅತ್ಯಂತ ಕೃಶವಾದ ದೇಹವನ್ನು ಕಂಡು ಅವರಿಗೆ ಕಣ್ಣೀರು ಸುರಿಸದೆ ಇರಲಾಗಲಿಲ್ಲ. ಅವನಿಗೆ ಹೇಳಿದ್ದರು : 'ತೋಟದ ಮಾಲಿಯು ಗುಲಾಬಿ ಗಿಡದ ಶಾಖೆಗಳನ್ನು ಕತ್ತರಿಸುವುದು ಮಾತ್ರವಲ್ಲದೆ ಅದರ ಬುಡವನ್ನು ಬಿಡಿಸಿ ಅದರ ಬೇರುಗಳು ಹೊರಬರುವಂತೆ ಮಾಡುತ್ತಾನೆ. ಬಿಸಿಲು ಮತ್ತು ಮಂಜುಹನಿ ಬೇರಿಗೆ ತಾಗಿದಾಗ ದೊಡ್ಡದೊಡ್ಡ ಹೂವುಗಳು ಆಗುತ್ತವೆ. ಜಗತ್ತಿನ ಮಾಲಿಯಾದ ಭಗವಂತನು ಇದೇ ಕಾರಣಕ್ಕಾಗಿಯೇ ನಿನಗೆ ಈ ಅವಸ್ಥೆಯನ್ನು ಉಂಟುಮಾಡಿರುವನು." ಮುಂದೆ ಕ್ರಿಸ್ತಾಬ್ದ ೧೮೮೪ ಜನವರಿ ತಿಂಗಳಿನಲ್ಲಿ ಕೇಶವಚಂದ್ರನು ತೀರಿಹೋದ ವಾರ್ತೆಯನ್ನು ಕೇಳಿ ಶ್ರೀರಾಮಕೃಷ್ಣರು ಎಷ್ಟೊಂದು ದುಃಖಿತರಾಗಿದ್ದರೆಂದರೆ ಮೂರು ದಿನ ಯಾರೊಡನೆಯೂ ಮಾತನಾಡದೆ ಮಲಗಿಕೊಂಡಿದ್ದರು. ಅನಂತರ ಹೇಳಿದರು : "ಕೇಶವನು ತೀರಿಹೋದನೆಂದು ಕೇಳಿದಾಗ ನನ್ನ ಒಂದು ಅಂಗವೇ ಬಿದ್ದುಹೋದಂತೆನಿಸಿತು." ಕೇಶವನ ಸಂಬಂಧಿಕರಾದ ಸ್ತ್ರೀಪುರುಷರೆಲ್ಲರೂ ಶ್ರೀರಾಮಕೃಷ್ಣರಿಗೆ ವಿಶೇಷ ಭಕ್ತಿಗೌರವ ತೋರಿಸುತ್ತಿದ್ದರು. ಕೆಲವೊಮ್ಮೆ ಅವರನ್ನು 'ಕಮಲ ಕುಟೀರ'ಕ್ಕೆ ಕರೆದುಕೊಂಡು ಹೋಗಿ, ಮತ್ತೆ ಕೆಲವೊಮ್ಮೆ ತಾವೇ ದಕ್ಷಿಣೇಶ್ವರಕ್ಕೆ ಬಂದು ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಉಪದೇಶವನ್ನು ಕೇಳುತ್ತಿದ್ದರು. ಮಾಘಮಾಸದ ಉತ್ಸವಗಳಲ್ಲಿ ಒಂದು ದಿನ ಶ್ರೀರಾಮಕೃಷ್ಣರೊಡನೆ ಭಗವದಾಲಾಪ ಮತ್ತು ಸಂಕೀರ್ತನೆಗಳಲ್ಲಿ ಕಾಲಕಳೆಯುವುದು ನವ ವಿಧಾನದ ಒಂದು ಅಂಗವಾಗಿ ಹೋಗಿತ್ತು. ಈ ಸಮಯದಲ್ಲಿ ಕೇಶವನು ಒಮ್ಮೆ ತನ್ನ ಸಂಗಡಿಗರ ಜೊತೆ ನೌಕೆಯಲ್ಲಿ ದಕ್ಷಿಣೇಶ್ವರಕ್ಕೆ ಬರುತ್ತಿದ್ದನು ಮತ್ತು ಶ್ರೀರಾಮಕೃಷ್ಣರನ್ನು ನೌಕೆಯಲ್ಲಿ ಹತ್ತಿಸಿಕೊಂಡು ನದಿಯಮೇಲೆ ಪರಿಭ್ರಮಣ ಮಾಡುತ್ತಾ ಮಾತು ಹಾಗೂ ಸಂಕೀರ್ತನೆಯಲ್ಲಿ ಆನಂದ ಪಡುತ್ತಿದ್ದನು.

11. ಕೂಚ್‌ಬಿಹಾರ ವಿವಾಹದ ನಿಮಿತ್ತ ಬ್ರಹ್ಮ ಸಮಾಜವು ಎರಡು ಸಂಘಗಳಾಗಿ ಒಡೆದಮೇಲೆ ವಿಜಯಕೃಷ್ಣಗೋಸ್ವಾಮಿ ಮತ್ತು ಶಿವನಾಥಶಾಸ್ತ್ರಿ ಸಾಧಾರಣ ಬ್ರಹ್ಮಸಮಾಜದ ಆಚಾರ್ಯರುಗಳಾದರು. ವಿಜಯನ ಸತ್ಯನಿಷ್ಠೆ ಮತ್ತು ಆಧ್ಯಾತ್ಮಿಕ ಆಸಕ್ತಿಯಿಂದ ಅವನು ಕೇಶವನಿಗೆ ಅತ್ಯಂತ ಪ್ರಿಯನಾಗಿದ್ದನು. ವಿಜಯಕೃಷ್ಣನು ಶ್ರೀರಾಮಕೃಷ್ಣರನ್ನು ಸಂಧಿಸಿದ ಮೇಲೆ ಅವನ ಆಧ್ಯಾತ್ಮಿಕ ಆಸಕ್ತಿ ಇನ್ನೂ ವೃದ್ಧಿಯಾಯಿತು. ಅವನು ಸಾಧನೆಯಲ್ಲಿ ಮುಂದುವರಿದಂತೆಲ್ಲ ವಿವಿಧ ಆಧ್ಯಾತ್ಮಿಕ ದರ್ಶನಗಳಾದವು. ಸ್ವಲ್ಪ ಸಮಯದಲ್ಲಿಯೇ ಅವನು ಭಗವಂತನು ಸಾಕಾರರೂಪದಲ್ಲಿ ವ್ಯಕ್ತವಾಗುವುದನ್ನು ಒಪ್ಪಿಕೊಳ್ಳುವಂತಾಯಿತು. ಅವನು ಬ್ರಹ್ಮಸಮಾಜವನ್ನು ಸೇರುವುದಕ್ಕೆ ಮುಂಚೆ ಸಂಸ್ಕೃತ ಕಾಲೇಜಿನಲ್ಲಿ ಓದಲು ಕಲ್ಕತ್ತೆಗೆ ಬಂದಾಗ ಅವನಿಗೆ ದೀರ್ಘಶಿಖೆ ಮತ್ತು ಸೂತ್ರ

ಗಳಿದ್ದವು ಹಾಗೂ ವಿವಿಧ ಕವಚಗಳನ್ನು ಧರಿಸಿದ್ದನು. ಸತ್ಯದ ಬಲವಂತದಿಂದಾಗಿ ಇವೆಲ್ಲ ವನ್ನೂ ಪರಿತ್ಯಜಿಸಿ ಬ್ರಹ್ಮಸಮಾಜವನ್ನು ಸೇರಿದ್ದನು. ಕೂಚ್‌ಬಿಹಾರ್ ವಿವಾಹದನಂತರ ಅದೇ ಸತ್ಯದ ಬಲವಂತದಿಂದಾಗಿ ತನಗೆ ಗುರುಸಮಾನನಾಗಿದ್ದ ಕೇಶವಚಂದ್ರನನ್ನು ಬಿಟ್ಟುಬಿಟ್ಟನು. ಮತ್ತೆ ಈಗ ಅದೇ ಸತ್ಯದ ಬಲವಂತದಿಂದ ಸಾಕಾರದಲ್ಲಿ ತನಗಿದ್ದ ವಿಶ್ವಾಸವನ್ನು ಬಚ್ಚಿಡಲಾಗದೆ ಬ್ರಹ್ಮಸಮಾಜದಿಂದ ಹೊರಬಂದಂತಾಯಿತು. ಇದ ರಿಂದಾಗಿ ತನ್ನ ಉದ್ಯೋಗ ಕಳೆದುಕೊಂಡು ಅವನು ಹಣದ ಅಭಾವದಿಂದ ಸ್ವಲ್ಪ ಕಾಲ ಬಹಳ ಕಷ್ಟ ಅನುಭವಿಸಬೇಕಾಯಿತು. ಆದರೆ ಅವನು ಇದರಿಂದ ಸ್ವಲ್ಪವೂ ಶೋಕಾಕುಲನಾಗಲಿಲ್ಲ. ಶ್ರೀರಾಮಕೃಷ್ಣರಿಂದ ತಾನು ಪಡೆದ ಆಧ್ಯಾತ್ಮಿಕ ಸಹಾಯವನ್ನು ಮತ್ತು ಕೆಲವೊಮ್ಮೆ ತಾನು ಕಂಡ ಅವರ ಅದ್ಭುತ ದರ್ಶನಗಳನ್ನು ನಮಗೆ ಅನೇಕ ಬಾರಿ ಸ್ಪಷ್ಟ ಮಾತಿನಲ್ಲಿ ತಿಳಿಸಿರುವನು. ಆದರೆ ಅವನು ಶ್ರೀರಾಮಕೃಷ್ಣರನ್ನು ಉಪಗುರು ವೆಂದು ಪರಿಗಣಿಸುತ್ತಿದ್ದನೊ ಅಥವಾ ಇನ್ನಾವುದೋ ರೀತಿಯಲ್ಲಿ ಅವರಿಗೆ ಶ್ರದ್ಧಾ ಭಕ್ತಿಯನ್ನು ಸಲ್ಲಿಸುತ್ತಿದ್ದನೊ ಎಂಬುದನ್ನು ಹೇಳಲಾಗುವುದಿಲ್ಲ. ಏಕೆಂದರೆ ಅವನು ಗಯೆಯ ಆಕಾಶಗಂಗೆ ಬೆಟ್ಟದಲ್ಲಿ ಇದ್ದಾಗ ಸಾಧುವೊಬ್ಬನು ಅವನ ಮೇಲೆ ಕೃಪೆದೋರಿ ತನ್ನ ಯೋಗಶಕ್ತಿಯ ಮೂಲಕ ವಿಜಯನಿಗೆ ಇದ್ದಕ್ಕಿದ್ದಂತೆಯೆ ಸಮಾಧಿ ಉಂಟಾಗು ವಂತೆ ಮಾಡಿದ್ದನಂತೆ. ಈ ವಿಷಯವನ್ನು ಅವನೇ ನಮಗೆ ಹೇಳಿರುವುದು. ಆದರೆ ಶ್ರೀರಾಮಕೃಷ್ಣರ ಮೇಲೆ ಅವನಿಗೆ ಅಪಾರ ಭಕ್ತಿಗೌರವವಿತ್ತು ಎಂಬುದರಲ್ಲಿ ಸಂದೇಹ ವಿಲ್ಲ. ಈ ವಿಷಯದಲ್ಲಿ ಅವನೇ ಸ್ವತಃ ಹೇಳಿರುವ ಮಾತುಗಳನ್ನು ಈ ಗ್ರಂಥದ ಬೇರೆ ಭಾಗದಲ್ಲಿ (ಗುರುಭಾವ, ಉತ್ತರಾರ್ಧ, ೫ನೇ ಅಧ್ಯಾಯ) ತಿಳಿಸಿರುವೆವು.

12. ಬ್ರಹ್ಮಸಮಾಜದಿಂದ ಹೊರಬಂದಮೇಲೆ ವಿಜಯಕೃಷ್ಣನ ಆಧ್ಯಾತ್ಮಿಕ ಗಭೀರತೆಯು ದಿನದಿನವೂ ವೃದ್ಧಿಯಾಗತೊಡಗಿತು. ಕೀರ್ತನೆಯ ಸಂದರ್ಭದಲ್ಲಿ ಅವನು ಭಾವಾವಿಷ್ಟನಾಗಿ ನರ್ತಿಸುವುದನ್ನು, ಸಮಾಧಿಯನ್ನು ಪಡೆಯುವುದನ್ನು ನೋಡಿ ಜನರು ಚಕಿತರಾಗುತ್ತಿದ್ದರು. ಅವನ ಉಚ್ಚ ಅವಸ್ಥೆಯ ವಿಷಯವನ್ನು ನಾವು ಶ್ರೀರಾಮಕೃಷ್ಣರ ಬಾಯಿಂದ ಈ ರೀತಿ ಕೇಳಿರುವೆವು: "ಯಾವ ಕೊಠಡಿಯನ್ನು ಪ್ರವೇಶಿಸಿದರೆ ಆಧ್ಯಾತ್ಮಿಕ ಸಾಧನೆಯು ಪೂರ್ಣತ್ವವನ್ನು ಪಡೆಯಬಹುದೊ ಅದರ ಪಕ್ಕದ ಕೊಠಡಿಯನ್ನು ವಿಜಯನು ಪ್ರವೇಶಿಸಿರುವನು. ಮುಂದಿನ ಕೊಠಡಿಯನ್ನು ಪ್ರವೇಶಿಸಲು ಬಾಗಿಲು ತಟ್ಟುತ್ತಿರುವನು." ವಿಜಯನು ಅನೇಕರಿಗೆ ಮಂತ್ರ ದೀಕ್ಷೆಯನ್ನು ನೀಡಿದ್ದನು. ಶ್ರೀರಾಮಕೃಷ್ಣರು ದೇಹವನ್ನು ತ್ಯಜಿಸಿ ೧೨ ವರ್ಷಗಳ ನಂತರ ಅವನು ಪುರಿಯಲ್ಲಿ ದೇಹತ್ಯಾಗ ಮಾಡಿದನು.

13. ಕೂಚ್‌ಬಿಹಾರ್ ವಿವಾಹದ ನಂತರ ಭಾರತೀಯ ಮತ್ತು ಸಾಧಾರಣ ಬ್ರಹ್ಮಸಮಾಜದವರ ನಡುವೆ ತೀವ್ರ ಮನಸ್ತಾಪ ಉಂಟಾಗಿತ್ತು. ಅವರಿಬ್ಬರ ನಡುವೆ ಮಾತುಕತೆಯೂ ನಿಂತುಹೋಗಿತ್ತು. ಆದರೆ ಎರಡು ಗುಂಪಿನಲ್ಲಿ ಸಾಧನಾಸಕ್ತಿಯುಳ್ಳವರು ಮೊದಲಿನಂತೆಯೆ ದಕ್ಷಿಣೇಶ್ವರಕ್ಕೆ ಒಂದು ಹೋಗುತ್ತಿದ್ದರು. ಒಂದು ದಿನ ಕೇಶವ

ಮತ್ತು ವಿಜಯ ಇಬ್ಬರು ತಮ್ಮ ತಮ್ಮ ಸಂಗಡಿಗರೊಡನೆ ಇದ್ದಕ್ಕಿದ್ದಂತೆಯೇ ಶ್ರೀರಾಮಕೃಷ್ಣರೆಡೆಗೆ ಬಂದುಬಿಟ್ಟರು. ಒಂದು ಗುಂಪಿನವರಿಗೆ ಇನ್ನೊಂದು ಗುಂಪಿನವರು ಬರುವುದು ತಿಳಿಯದೇ ಇದ್ದುದೇ ಹೀಗಾಗುವುದಕ್ಕೆ ಕಾರಣ. ಪರಸ್ಪರ ವಿರೋಧವಿದ್ದುದರಿಂದ ಎರಡೂ ಕಡೆಯವರಿಗೆ ಸ್ವಲ್ಪ ಸಂಕೋಚ ಉಂಟಾಯಿತು. ಕೇಶವ ಮತ್ತು ವಿಜಯ ಇವರಲ್ಲಿಯೂ ಆ ಸಂಕೋಚವಿರುವುದನ್ನು ಕಂಡು ಶ್ರೀರಾಮಕೃಷ್ಣರು ಅಂದು ಅವರಿಬ್ಬರ ನಡುವಿನ ವಿವಾದವನ್ನು ಬಗೆಹರಿಸುವ ಉದ್ದೇಶದಿಂದ ಈ ರೀತಿ ಹೇಳಿದರು:

"ನೋಡು ಶಿವ ಮತ್ತು ರಾಮಚಂದ್ರರ ನಡುವೆ ವಿರೋಧ ಉಂಟಾಗಿ ಅವರಿಬ್ಬರಿಗೂ ಭೀಷಣ ಯುದ್ಧ ನಡೆಯಿತು. ಶಿವನ ಗುರು ರಾಮ ಮತ್ತು ರಾಮನ ಗುರು ಶಿವ ಈ ವಿಷಯ ಪ್ರಸಿದ್ಧವಾದುದಷ್ಟೆ. ಯುದ್ಧ ಆದ ಮೇಲೆ ಅವರಿಬ್ಬರೂ ಪರಸ್ಪರ ಒಂದಾಗಿರಲು ಹೆಚ್ಚು ಕಾಲ ಹಿಡಿಯಲಿಲ್ಲ, ಆದರೆ ಶಿವನ ಗಣಗಳಾದ ಭೂತ ಪ್ರೇತಾದಿಗಳು ಮತ್ತು ರಾಮನ ಸೈನಿಕರಾದ ಕಪಿಗಳು ಇವರು ಒಂದಾಗಲೇ ಇಲ್ಲ. ಭೂತ ಕಪಿಗಳ ಯುದ್ಧ ಯಾವಾಗಲೂ ನಡೆಯುತ್ತಲೇ ಮುಂದುವರಿಯಿತು. (ಕೇಶವ ಮತ್ತು ವಿಜಯರನ್ನು ಸಂಬೋಧಿಸಿ) ಏನು ಆಗಬೇಕೋ ಆಗಿ ಹೋಯಿತು, ನೀವಿನ್ನು ಮನಸ್ತಾಪ ಇಟ್ಟುಕೊಳ್ಳುವುದು ಸರಿಯಲ್ಲ. ಅದು ಭೂತ ಮತ್ತು ಕಪಿಗಳ ನಡುವೆಯೇ ಉಳಿಯಲಿ." ಅಂದಿನಿಂದ ಕೇಶವ ಮತ್ತು ವಿಜಯರ ನಡುವೆ ಮಾತುಕತೆ ಪ್ರಾರಂಭವಾಯಿತು.

14. ವಿಜಯಕೃಷ್ಣನು ತನ್ನ ಹೊಸ ಆಧ್ಯಾತ್ಮಿಕ ಆಸಕ್ತಿಯ ಪ್ರಾಬಲ್ಯದಿಂದ ಸಾಧಾರಣ ಬ್ರಹ್ಮ ಸಮಾಜವನ್ನು ತೊರೆದು ಹೊರಬಂದಮೇಲೆ ಅವನಲ್ಲಿ ವಿಶ್ವಾಸವಿರಿಸಿದ್ದ ಹಲವರು ಆ ಸಮಾಜದಿಂದ ಹೊರಬಂದರು. ಈ ಕಾರಣದಿಂದಾಗಿ ಸಾಧಾರಣ ಬ್ರಹ್ಮಸಮಾಜವು ಕ್ರಮೇಣ ಕ್ಷೀಣವಾಗತೊಡಗಿತು. ಆಗ ಶಿವನಾಥಶಾಸ್ತ್ರಿಯು ಸಮಾಜದ ಮುಂದಾಳತ್ವವನ್ನು ವಹಿಸಿಕೊಂಡು ಅದನ್ನು ರಕ್ಷಿಸಿದನು. ಶಿವನಾಥನು ಆಗಲೇ ಅನೇಕ ಬಾರಿ ಶ್ರೀರಾಮಕೃಷ್ಣರೆಡೆಗೆ ಬಂದಿದ್ದನು ಮತ್ತು ಅವರ ಮೇಲೆ ಅವನಿಗೆ ವಿಶೇಷ ಭಕ್ತಿ ಶ್ರದ್ಧೆಗಳಿದ್ದವು. ಶ್ರೀರಾಮಕೃಷ್ಣರಿಗೂ ಶಿವನಾಥನ ಮೇಲೆ ತುಂಬಾ ಪ್ರೀತಿಯಿತ್ತು. ಆದರೆ ವಿಜಯನು ಸಮಾಜವನ್ನು ಬಿಟ್ಟು ಹೋದ ಮೇಲೆ ಶಿವನಾಥನು ದೊಡ್ಡ ಸಮಸ್ಯೆಗೊಳಗಾದನು. ಶ್ರೀರಾಮಕೃಷ್ಣರ ಪ್ರಭಾವದಿಂದಲೇ ವಿಜಯಕೃಷ್ಣನಲ್ಲಿ ಧಾರ್ಮಿಕ ಪರಿವರ್ತನೆ ಉಂಟಾದದ್ದು ಮತ್ತು ಸಮಾಜವನ್ನು ತ್ಯಜಿಸಿದ್ದೂ ಕೂಡ ಎಂದು ಶಿವನಾಥನು ಭಾವಿಸಿದನು. ಆಗ ಶಿವನಾಥನು ಶ್ರೀರಾಮಕೃಷ್ಣರೆಡೆಗೆ ಮೊದಲಿನಂತೆ ಬಂದು ಹೋಗುವುದನ್ನು ನಿಲ್ಲಿಸಿಬಿಟ್ಟನು. ಸ್ವಾಮಿ ವಿವೇಕಾನಂದರು ಈ ಸಮಯಕ್ಕೆ ಸ್ವಲ್ಪ ಮುಂಚಿನಿಂದ ಸಾಧಾರಣ ಬ್ರಹ್ಮಸಮಾಜದ ಸಂಪರ್ಕವನಿಟ್ಟುಕೊಂಡಿದ್ದರು ಮತ್ತು ಶಿವನಾಥ ಮುಂತಾದ ಬ್ರಾಹ್ಮಭಕ್ತರ ವಿಶೇಷ ಪ್ರೀತಿಗೆ ಒಳಗಾಗಿದ್ದರು. ಹೀಗೆ ಸಾಧಾರಣ ಬ್ರಹ್ಮಸಮಾಜಕ್ಕೆ ಸೇರಿದ್ದರೂ ಸ್ವಾಮೀಜಿಯವರು ಕೇಶವನ ಹತ್ತಿರವೂ ಹಾಗೂ ಶ್ರೀರಾಮಕೃಷ್ಣರ ಹತ್ತಿರವೂ ಹೋಗುತ್ತಿದ್ದರು. ಶಿವ

ನಾಥನು ಶ್ರೀರಾಮಕೃಷ್ಣರ ಹತ್ತಿರ ಬರದೇ ಇರುವುದಕ್ಕೆ ಏನು ಕಾರಣವೆಂದು ಸ್ವಾಮೀಜಿ ಒಮ್ಮೆ ಅವನನ್ನು ವಿಚಾರಿಸಿದರಂತೆ. ಅದಕ್ಕೆ ಅವನ ಉತ್ತರವೇನೆಂದರೆ, ತಾನು ಆಗಾಗ ದಕ್ಷಿಣೇಶ್ವರಕ್ಕೆ ಹೋದರೆ ಉಳಿದವರು ಹಾಗೆಯೆ ಮಾಡುತ್ತಾರೆ ಮತ್ತು ಇದರ ಪರಿಣಾಮವಾಗಿ ಸಂಘವು ಒಡೆದುಹೋಗುತ್ತದೆ. ಶಿವನಾಥನು ಸ್ವಾಮೀಜಿಯವರಿಗೂ ದಕ್ಷಿಣೇಶ್ವರಕ್ಕೆ ಹೋಗಬೇಡವೆಂದು ಸಲಹೆ ನೀಡಿದನಂತೆ. ಅಷ್ಟೇ ಅಲ್ಲದೆ ಶ್ರೀರಾಮ ಕೃಷ್ಣರ ಭಾವ ಸಮಾಧಿ ಮುಂತಾದುವುಗಳು ನರದೌರ್ಬಲ್ಯದ ಪರಿಣಾಮ ಎಂದೂ ಸ್ವಾಮೀಜಿಯವರಿಗೆ ಹೇಳಿದ್ದನಂತೆ. ಅತೀವವಾದ ಶಾರೀರಿಕ ತಪಸ್ಸಿನಿಂದ ಅವರ ಬುದ್ಧಿ ವಿಕೃತಗೊಂಡಿದೆ ಎಂಬುದು ಅವನ ಭಾವನೆಯಾಗಿತ್ತು. ಶ್ರೀರಾಮಕೃಷ್ಣರು ಈ ಮಾತನ್ನು ಕೇಳಿ ಶಿವನಾಥನಿಗೆ ಏನನ್ನು ಹೇಳಿದ್ದರೋ ಅದನ್ನು ನಾವು ಬೇರೆ ಕಡೆ ಉಲ್ಲೇಖಿಸಿದ್ದೇವೆ (ಗುರುಭಾವ, ಉತ್ತರಾರ್ಧ, ದ್ವಿತೀಯ ಅಧ್ಯಾಯ).

15. ಅದು ಏನೇ ಇರಲಿ, ಶ್ರೀರಾಮಕೃಷ್ಣರ ಪ್ರಭಾವದಿಂದ ಬ್ರಹ್ಮಸಮಾಜದಲ್ಲಿ ಸಾಧನೆಯ ಆಸಕ್ತಿ ವೃದ್ಧಿಯಾಯಿತು. ಇದರ ಪರಿಣಾಮವಾಗಿ ನವವಿಧಾನ ಮತ್ತು ಸಾಧಾರಣ ಈ ಎರಡೂ ಸಮಾಜದ ಧಾರ್ಮಿಕ ಆಸಕ್ತಿಯುಳ್ಳ ವ್ಯಕ್ತಿಗಳು ಭಗವತ್ಸಾಕ್ಷಾತ್ಕಾರವನ್ನೇ ಆದರ್ಶವಾಗಿಟ್ಟುಕೊಂಡು ಅದಕ್ಕನುಗುಣವಾಗಿ ತಮ್ಮ ಜೀವನವನ್ನು ರೂಪಿಸಿಕೊಳ್ಳತೊಡಗಿದರು. ಆಚಾರ್ಯ ಪ್ರತಾಪಚಂದ್ರಮಜುಮ್‌ದಾರ್ ಆಗಾಗ ದಕ್ಷಿಣೇಶ್ವರಕ್ಕೆ ಬಂದು ಶ್ರೀರಾಮಕೃಷ್ಣರನ್ನು ಸಂಧಿಸುತ್ತಿದ್ದನು. ಶ್ರೀರಾಮಕೃಷ್ಣರ ಸಂಗದಿಂದ ಸಮಾಜದಲ್ಲಿ ಆಧ್ಯಾತ್ಮಿಕ ಭಾವ ಪರಿವರ್ತನೆ ಹೇಗೆ ಉಂಟಾಯಿತು ಎಂಬುದರ ಬಗ್ಗೆ ಅವನು ಒಮ್ಮೆ ಹೇಳಿದ : "ಇವರನ್ನು ನೋಡುವುದಕ್ಕೆ ಮುಂಚೆ ಧರ್ಮವೆಂದರೇನು ಎಂಬುದು ನಮಗೆ ತಿಳಿದಿತ್ತೇನು ? ಸುಮ್ಮನೆ ಜಗಳಕಾಯುತ್ತಾ ಓಡಾಡುತ್ತಿದ್ದೆವು. ಇವರನ್ನು ನೋಡಿದ ಮೇಲೆ ನಿಜವಾದ ಧರ್ಮಜೀವನವೆಂದರೇನು ಎಂಬುದು ನಮಗೆ ತಿಳಿದು ಬಂತು."

16. ನವ ವಿಧಾನ ಸಮಾಜದ ಮೇಲೆ ಶ್ರೀರಾಮಕೃಷ್ಣರ ಪ್ರಭಾವ ಬಹಳವಾಗಿತ್ತು. ವಿಜಯಕೃಷ್ಣನು ಎಲ್ಲಿಯವರೆಗೆ ಆಚಾರ್ಯಪದವಿಯಲ್ಲಿದ್ದನೊ ಅಲ್ಲಿಯವರೆಗೂ ಸಾಧಾರಣ ಬ್ರಹ್ಮಸಮಾಜದ ಮೇಲೆ ಅವರ ಪ್ರಭಾವ ಕಡಮೆಯೇನಿರಲಿಲ್ಲ. ವಿಜಯನೊಡನೆ ಅನೇಕ ಆಧ್ಯಾತ್ಮಿಕ ಪಿಪಾಸುಗಳು ಸಮಾಜವನ್ನು ತೊರೆದ ಮೇಲೆ ಅದರ ಮೇಲೆ ಅವರ ಪ್ರಭಾವ ಕಡಮೆಯಾಗತೊಡಗಿತು. ಹಾಗೆಯೇ ಸಮಾಜದವರೂ ಕೂಡ ಆಧ್ಯಾತ್ಮಿಕತೆಯನ್ನು ಬದಿಗಿರಿಸಿ ಸಮಾಜಸುಧಾರಣೆ, ದೇಶೋದ್ಧಾರ ಮುಂತಾದ ಚಟುವಟಿಕೆಗಳಲ್ಲಿ ತೊಡಗಿದರು. ಆದರೂ ಕೂಡ ಶ್ರೀರಾಮಕೃಷ್ಣರ ಪ್ರಭಾವ ಸಂಪೂರ್ಣ ಲುಪ್ತವಾಯಿತು ಎಂದು ಹೇಳುವಂತಿಲ್ಲ. ಇದಕ್ಕೆ ನಿದರ್ಶನವಾಗಿ ಸಮಾಜದ ಕೆಲವು ವ್ಯಕ್ತಿಗಳು ಯೋಗಾಭ್ಯಾಸ, ವೇದಾಂತಚರ್ಚೆ, ಪ್ರೇತತತ್ತ್ವ ಮುಂತಾದುವುಗಳಲ್ಲಿ ಆಸಕ್ತರಾಗಿದ್ದುದು ಕಂಡುಬರುತ್ತದೆ. ಉತ್ತಮ ಬಗೆಯ ಕರ್ತಾಭಜ ಸಂಪ್ರದಾಯದ ವೈದಿಕ ಮತವನ್ನು ಆ ಸಮಾಜದ ಕೆಲವರು ಅನುಸರಿಸುತ್ತಿದ್ದರು ಮತ್ತು ಧ್ಯಾನ ಮುಂತಾದುವು

ಗಳ ಸಹಾಯದಿಂದ ಶಾರೀರಿಕ ವ್ಯಾಧಿಯನ್ನು ನಿವಾರಿಸುವ ಪ್ರಯತ್ನವನ್ನೂ ಮಾಡುತ್ತಿದ್ದರು. ನವವಿಧಾನ ಸಮಾಜದ ಆಚಾರ್ಯನಾದ ಚಿರಂಜೀವಶರ್ಮನು ಬ್ರಾಹ್ಮ ಸಂಗೀತದ ಬೆಳವಣಿಗೆಯಲ್ಲಿ ಬಹಳ ಸೇವೆ ಸಲ್ಲಿಸಿರುವನು. ಆದರೆ ಶ್ರೀರಾಮಕೃಷ್ಣರ ವಿವಿಧ ದರ್ಶನಗಳು ಭಾವಸಮಾಧಿಗಳು ಇವುಗಳ ಪರಿಚಯವಾದ ಮೇಲೆಯೆ ಅವನು ಉನ್ನತ ವಿಚಾರಗಳನ್ನು ಭಾವಗಳನ್ನು ಕೆರಳಿಸುವ ಹಾಡುಗಳನ್ನು ರಚಿಸಿದನು—ಎಂಬುದು ವಿಚಾರಿಸಿದಾಗ ತಿಳಿದುಬಂತು. ಅವನು ರಚಿಸಿದ ಕೆಲವು ಹಾಡುಗಳ ಮೊದಲನೆಯ ಸಾಲನ್ನು ಕೆಳಗೆ ಕೊಟ್ಟಿರುವೆವು.

೧. ನಿಬಿಡ ಅಂಧಕಾರದಲ್ಲಿ ಓ ತಾಯೆ, ನಿನ್ನ ಅರೂಪ ಸೌಂದರ್ಯವು ಬೆಳಗುತ್ತಿದೆ.

೨. ಅನಂತವಾದ ಆಳ ಸಮಾಧಿಸಾಗರ.

೩. ಚಿದಾಕಾಶದಲ್ಲಿ ದಿವ್ಯಪ್ರೇಮದ ಚಂದ್ರೋದಯವಾಯಿತು.

೪. ಚಿದಾನಂದ ಸಾಗರದಲ್ಲಿ ದಿವ್ಯಾನಂದದ ಅಲೆಗಳು.

೫. ಓ ತಾಯೆ, ನನಗೆ ದಿವ್ಯೋನ್ಮತ್ತತೆಯನ್ನು ಕೊಡು.

ಈ ಎಲ್ಲ ಪದ್ಯಗಳ ಮೂಲಕ ಆಚಾರ್ಯ ಚಿರಂಜೀವ ಶರ್ಮನು ವಂಗವಾಸಿಗಳ ಮತ್ತು ದೇಶದ ಸಾಧಕರ ಕೃತಜ್ಞತೆಗೆ ಪಾತ್ರನಾಗಿರುವನು. ಶ್ರೀರಾಮಕೃಷ್ಣರ ಭಾವ ಸಮಾಧಿಯನ್ನು ನೋಡಿಯೇ ಅವನು ಇಂಥಾ ಪದ್ಯಗಳನ್ನು ರಚಿಸಲು ಸಮರ್ಥನಾದನು ಎಂಬುದರಲ್ಲಿ ಸಂಶಯವಿಲ್ಲ. ಅವನು ಸುಶ್ರಾವ್ಯವಾಗಿ ಹಾಡಬಲ್ಲವನಾಗಿದ್ದನು. ಅವನು ಹಾಡುವುದನ್ನು ಕೇಳಿ ಶ್ರೀರಾಮಕೃಷ್ಣರು ಸಮಾಧಿಗೆ ಹೋಗುತ್ತಿದ್ದುದನ್ನು ನಾವು ಅನೇಕ ಬಾರಿ ಕಂಡಿರುವೆವು.

17. ಹೀಗೆ ಆ ಕಾಲದಲ್ಲಿ ಬ್ರಹ್ಮಸಮಾಜವು ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಪ್ರಭಾವದಿಂದ ಸಚೇತನಗೊಂಡಿತು. ಬ್ರಹ್ಮಸಮಾಜದಲ್ಲಿ ಪ್ರಚಲಿತವಿದ್ದ ನಿರಾಕಾರ ಉಪಾಸನೆಯನ್ನು ಕುರಿತು ಶ್ರೀರಾಮಕೃಷ್ಣರು ಕೆಲವೊಮ್ಮೆ ಅಪಕ್ವ ನಿರಾಕಾರ ಭಾವ ಎಂದು ಹೇಳುತ್ತಿದ್ದರು. ಆದರೂ ವಿಶ್ವಾಸದಿಂದ ಇಂಥಾ ಉಪಾಸನೆಯನ್ನು ಮಾಡಿದರೂ ಸಾಧಕನು ಭಗವಂತನನ್ನು ಪಡೆಯುತ್ತಾನೆ—ಎಂಬುದಾಗಿಯೂ ಶ್ರೀರಾಮಕೃಷ್ಣರು ಹೇಳುತ್ತಿದ್ದುದನ್ನು ನಾವು ಕೇಳಿರುವೆವು. ಕೀರ್ತನೆಯ ಕೊನೆಯಲ್ಲಿ ಭಗವಂತನಿಗೆ ಮತ್ತು ಎಲ್ಲಾ ಸಂಪ್ರದಾಯದ ಭಕ್ತರಿಗೆ ಪ್ರಣಾಮ ಸಲ್ಲಿಸುವಾಗ ಶ್ರೀರಾಮಕೃಷ್ಣರು 'ಆಧುನಿಕ ಬ್ರಹ್ಮಜ್ಞಾನಿಗಳಿಗೂ ಪ್ರಣಾಮ' ಎಂದು ಹೇಳಿ ಬ್ರಾಹ್ಮ ಭಕ್ತರಿಗೂ ಪ್ರಣಾಮಸಲ್ಲಿಸುವುದನ್ನು ಎಂದೂ ಮರೆಯುತ್ತಿರಲಿಲ್ಲ. ಇದರಿಂದ ನಮಗೆ ತಿಳಿದುಬರುವುದೇನೆಂದರೆ ಭಗವತ್ಸಾಕ್ಷಾತ್ಕಾರಕ್ಕಾಗಿ ಜಗತ್ತಿನಲ್ಲಿ ಇರುವ ಎಲ್ಲಾ ಮತಗಳಂತೆಯೆ ಬ್ರಾಹ್ಮಧರ್ಮವೂ ಒಂದು ಸತ್ಯವಾದ ಮಾರ್ಗ ಎಂಬ ವಿಶ್ವಾಸ ಅವರಿಗಿತ್ತು. ಆದರೆ ಅದು ಪಾಶ್ಚಾತ್ಯ ಪ್ರಭಾವದಿಂದ ಮುಕ್ತವಾಗಿ ಯಥಾರ್ಥ ಆಧ್ಯಾತ್ಮಿಕ ಮಾರ್ಗದಲ್ಲಿ ಪ್ರತಿಷ್ಠಿತಗೊಳ್ಳುವಂತೆ ಮಾಡಲು ಅವರು ಪ್ರಯತ್ನಿಸಿದರು. ಸಮಾಜಸುಧಾರಣಾದಿ ಕಾರ್ಯಗಳು ಪ್ರಶಂಸನೀಯವೂ ಆವಶ್ಯಕವೂ ನಿಜ. ಆದರೆ ಅವುಗಳನ್ನೇ ಜೀವನದ ಮುಖ್ಯ ಉದ್ದೇಶ

ವನ್ನಾಗಿಟ್ಟುಕೊಂಡು ಬ್ರಹ್ಮಸಮಾಜದವರು ಆಧ್ಯಾತ್ಮಿಕ ಸಾಧನೆಗಳನ್ನು ಕಡೆಗಣಿಸದಂತೆ ಮಾಡಲು ಶ್ರೀರಾಮಕೃಷ್ಣರು ಸಾಕಷ್ಟು ಶ್ರಮಿಸಿದರು. ಬ್ರಹ್ಮಸಮಾಜದವರೇ ಮೊದಲು ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಜೀವನವನ್ನು ಅನುಸರಿಸಿ ಕಲಕತ್ತೆಯ ಜನಸಾಧಾರಣ ದೃಷ್ಟಿಯು ದಕ್ಷಿಣೇಶ್ವರದ ಕಡೆ ಹರಿಯುವಂತೆ ಮಾಡಿದರು. ಯಾರು ಯಾರು ಶ್ರೀರಾಮ ಕೃಷ್ಣರ ಪಾದಪದ್ಮದಲ್ಲಿ ಕುಳಿತು ಅವರ ಆಧ್ಯಾತ್ಮಿಕ ಶಕ್ತಿ ಮತ್ತು ಶಾಂತಿಯ ಲಾಭ ಪಡೆದು ಧನ್ಯರಾಗಿರುವರೊ ಅವರೆಲ್ಲರೂ ಇದಕ್ಕಾಗಿ ನವವಿಧಾನ ಮತ್ತು ಸಾಧಾರಣ ಬ್ರಹ್ಮಸಮಾಜಕ್ಕೆ ಚಿರಋಣಿಗಳಾಗಿರುವರು. ಈ ಗ್ರಂಥಕಾರರೂ ಕೂಡ ಈ ಎರಡೂ ಸಮಾಜಗಳಿಗೆ ಹೆಚ್ಚಿನ ಋಣಿ. ಯೌವನದ ಪ್ರಾರಂಭದಲ್ಲಿ ಉಚ್ಚ ಆದರ್ಶವನ್ನು ಇಟ್ಟು ಕೊಂಡು ಜೀವನವನ್ನು ರೂಪಿಸಿಕೊಳ್ಳುವ ದಿಸೆಯಲ್ಲಿ ಈ ಎರಡೂ ಸಮಾಜಗಳು ಅವರಿಗೆ ಸಹಾಯಕವಾದುವು. ಆದ್ದರಿಂದ ಬ್ರಹ್ಮ, ಬ್ರಾಹ್ಮಧರ್ಮ, ಬ್ರಾಹ್ಮಮಂಡಲಿ ಈ ತ್ರಿರತ್ನ ಗಳನ್ನು ಸ್ವರೂಪತಃ ಒಂದೇ ಎಂಬ ಭಾವದಿಂದ ಶ್ರದ್ಧೆ ಮತ್ತು ಕೃತಜ್ಞತಾ ಪೂರ್ವಕ ವಾಗಿ ಅವುಗಳಿಗೆ ಪುನಃ ಪುನಃ ನಮಸ್ಕರಿಸುತ್ತೇವೆ. ಬ್ರಾಹ್ಮಮಂಡಲಿಯಲ್ಲಿ ಶ್ರೀರಾಮ ಕೃಷ್ಣರು ಹೇಗೆ ಆನಂದವನ್ನು ಅನುಭವಿಸುತ್ತಿದ್ದರು ಎಂಬುದರ ನಿದರ್ಶನವಾಗಿ ನಾವು ಕಂಡ ಎರಡು ವಿಶೇಷಘಟನೆಗಳನ್ನು ಈಗ ಓದುಗರ ಮುಂದೆ ಇಡುತ್ತೇವೆ.

## ಮೊದಲನೆಯ ಅಧ್ಯಾಯ

## ದ್ವಿತೀಯ ಪಾದ

# ಮಣಿಮಲ್ಲಿಕನ ಮನೆಯಲ್ಲಿ ಬ್ರಾಹ್ಮೋತ್ಸವ

1. ಘಟನೆಯ ಕಾಲ ನಿರ್ಣಯ 2. ವೈಕುಂಠನಾಥ ಸನ್ಯಾಲನೊಡನೆ ನಮ್ಮ ಸಂಪರ್ಕ 3. ನಮಗೆ ಬಾಬುರಾಮನ ಪರಿಚಯವಾದುದು 4. ನಾವು ಮಣಿಮಲ್ಲಿಕನ ಮನೆಗೆ ಹೋದೆವು 5. ಮಣಿಮಲ್ಲಿಕನ ಮನೆಯಲ್ಲಿ ಅದ್ಭುತ ದೃಶ್ಯ 6. ಶ್ರೀ ರಾಮಕೃಷ್ಣರ ಅಪೂರ್ವ ನೃತ್ಯ ಮತ್ತು ಅದರ ಪ್ರಭಾವ 7. ನರ್ತನಾನಂತರ ಬ್ರಾಹ್ಮ ಭಕ್ತರಿಗೆ ಉಪದೇಶ 8. ವಿಜಯನೊಡನೆ ಅವರ ಹಾಸ್ಯಾಲಾಪ 9. ಶ್ರೀ ರಾಮಕೃಷ್ಣರು ಅಂತರ್ಮುಖಿಗಳಾಗಿದ್ದರೂ ಬಾಹ್ಯ ವಿಷಯದ ಕಡೆ ಅವರ ಗಮನ ವಿರುತ್ತಿತ್ತು 10. ಯಾರ ಮೇಲೆ ಅತ್ಯಧಿಕ ಪ್ರೀತಿಯಿರುತ್ತದೆಯೊ ಅವನಲ್ಲಿಯೇ ಭಗವದ್ಭಾವವನ್ನು ಆರೋಪಿಸುವುದು.

1. ಆಗ ಹೇಮಂತಕಾಲ, ಪ್ರಕೃತಿಯು ಗ್ರೀಷ್ಮ ಋತುವಿನ ಬೇಗೆಯಿಂದ ಬೇಸತ್ತು ವರ್ಷಾಕಾಲದ ಸ್ನಾನ ಸುಖದಿಂದ ಸಂತೃಪ್ತಿಯನ್ನು ಪಡೆದು ಶರತ್ಕಾಲದ ಅಂಗ ಶೋಭೆಯಿಂದ ಬೆಳಗುತ್ತಾ ಶೀತದ ಪ್ರಥಮಾಗಮನವನ್ನು ಅನುಭವಿಸುತ್ತಿದೆ ಮತ್ತು ತನ್ನ ಮೃದು ಶೀತಲದೇಹದ ಮೇಲೆ ಒಟ್ಟೆಯನ್ನು ಹೊದ್ದುಕೊಳ್ಳುತ್ತಿದೆ. ಹೇಮಂತ ಋತುವಿನ ನಾಲ್ಕನೇ ಮೂರು ಭಾಗ ಕಳೆದು ಹೋಗಿತ್ತು. ಈ ಸಮಯದಲ್ಲಿ ನಡೆದ ಒಂದು ಘಟನೆಯನ್ನು ನಾವಿಲ್ಲಿ ವಿವರಿಸಲು ಹೊರಟಿರುವೆವು. ಶ್ರೀರಾಮಕೃಷ್ಣರ ಪರಮ ಭಕ್ತನಾದ ಬಲರಾಮಬೋಸನು ಅಂದು ಈ ಘಟನೆಯ ಸಂದರ್ಭದಲ್ಲಿ ಅಲ್ಲಿದ್ದನು. ಅವನು ಪಂಚಾಂಗದ ಪುಟದ ತುದಿಯಲ್ಲಿ ಈ ದಿನದ ಘಟನೆಯನ್ನು ಬರೆದು ಕೊಂಡಿರುವನು. ಅದರ ಆಧಾರದ ಮೇಲೆ ೧೮೮೪ ನವೆಂಬರ್ ೨೬ರಂದು ಈ ಘಟನೆಯು ಸಂಭವಿಸಿತು ಎಂದು ನಿರ್ಧರಿಸಬಹುದು.

2. ಆಗ ನಾವು ಕಲ್ಕತ್ತೆಯ ಸೇಂಟ್ ಸೇವಿಯರ್ಸ್ ಕಾಲೇಜಿನಲ್ಲಿ ಓದುತ್ತಿದ್ದೆವು. ಇದಕ್ಕೆ ಮುಂಚೆ ಎರಡು ಮೂರು ಬಾರಿ ಮಾತ್ರ ಶ್ರೀರಾಮಕೃಷ್ಣರ ಪುಣ್ಯದರ್ಶನವನ್ನು ಪಡೆದಿದ್ದೆವಷ್ಟೆ. ಯಾವುದೋ ಕಾರಣಕ್ಕಾಗಿ ಕಾಲೇಜು ಮುಚ್ಚಲ್ಪಟ್ಟಿದ್ದರಿಂದ ಅಂದು ಮಧ್ಯಾಹ್ನ ಶ್ರೀರಾಮಕೃಷ್ಣರನ್ನು ಹೋಗಿ ನೋಡುವುದೆಂದು ನಿರ್ಧರಿಸಿದೆವು. ನಾವು ದೋಣಿಯಲ್ಲಿ ಹೋಗುತ್ತಿರುವಾಗ ನಮ್ಮಂತೆಯೆ ಶ್ರೀರಾಮಕೃಷ್ಣರನ್ನು ನೋಡಲು ಹೋಗುತ್ತಿದ್ದ ಇನ್ನೊಬ್ಬ ವ್ಯಕ್ತಿಯ ಪರಿಚಯವಾಯಿತು. ಅವನ ಹೆಸರು ವೈಕುಂಠ ನಾಥ ಸಂನ್ಯಾಲ್. ಅವನು ಇತ್ತೀಚೆಗೆ ಶ್ರೀರಾಮಕೃಷ್ಣರನ್ನು ಭೇಟಿಯಾಗಿದ್ದ. ಸಹ ಪ್ರಯಾಣಿಕನೊಬ್ಬನು ನಮ್ಮ ಬಾಯಿಂದ ಶ್ರೀರಾಮಕೃಷ್ಣರ ಹೆಸರನ್ನು ಕೇಳಿ ಅವರ



ಶ್ರೀರಾಮಕೃಷ್ಣರು –ಕೇಶವಚಂದ್ರ ಸೇನನ ಮನೆಯಲ್ಲಿ

ಬಗ್ಗೆ ನಿಂದನೆಯ ಮಾತುಗಳನ್ನು ಆಡಿದಾಗ ವೈಕುಂಠನಾಥನು ಕೋಪದಿಂದ ಅವನು ಬಾಯಿ ಮುಚ್ಚುವಂತೆ ಮಾಡಿದ್ದನು. ನಾವು ದಕ್ಷಿಣೇಶ್ವರವನ್ನು ತಲುಪಿದಾಗ ಎರಡು ಅಥವಾ ಎರಡೂವರೆ ಘಂಟೆ ಆಗಿತ್ತು.

ನಾವು ಶ್ರೀರಾಮಕೃಷ್ಣರ ಕೊಠಡಿಯನ್ನು ಪ್ರವೇಶಿಸಿ ಅವರ ಪಾದಕ್ಕೆ ವಂದಿಸಿದಾಗ ಅವರು "ಓ ಇಂದು ಬಂದಿರಾ ನೀವು, ನೀವು ಸ್ವಲ್ಪ ತಡವಾಗಿ ಬಂದಿದ್ದರೆ ನಾನು ಸಿಕ್ಕುತ್ತಿರಲಿಲ್ಲ. ನಾನು ಕಲ್ಕತ್ತೆಗೆ ಹೊರಟಿದ್ದೇನೆ. ಗಾಡಿ ಸಿದ್ಧವಾಗಿದೆ. ಅಲ್ಲಿ ಬ್ರಹ್ಮೋತ್ಸವಕ್ಕೆ ಹೋಗುತ್ತಿದ್ದೇನೆ. ನೀವು ಬಂದದ್ದು ಒಳ್ಳೆಯದೇ ಆಯಿತು, ಕುಳಿತುಕೊಳ್ಳಿ, ನೀವು ನನ್ನನ್ನು ನೋಡದೆ ಹೋಗಬೇಕಾಗಿದ್ದಿದ್ದರೆ ಎಂಥಾ ನಿರಾಶೆಯಾಗಿಬಿಡುತ್ತಿತ್ತು".

3. ಕೊಠಡಿಯಲ್ಲಿ ನೆಲದ ಮೇಲೆ ಹಾಸಿದ್ದ ಚಾಪೆಯ ಮೇಲೆ ನಾವು ಕುಳಿತೆವು. "ಮಹಾಶಯರೆ, ನೀವು ಎಲ್ಲಿಗೆ ಹೋಗುತ್ತೀರೋ ಅಲ್ಲಿಗೆ ನಾವೂ ಬಂದರೆ ನಮಗೆ ಪ್ರವೇಶ ದೊರೆಯುತ್ತದೆಯೇ ?" ಎಂದು ಕೇಳಿದೆವು. ಅವರೆಂದರು : "ಹಾಗೇಕೆ ? ನೀವು ಇಷ್ಟಪಟ್ಟರೆ ಅನಾಯಾಸವಾಗಿ ಹೋಗಬಹುದು ಸಿಂದೂರಪಾಟಿಯ ಮಣಿಮಲ್ಲಿಕನ ಮನೆ." ಆ ಸಂದರ್ಭದಲ್ಲಿ ಹೆಚ್ಚು ಕೃಶನಲ್ಲದ, ಕಂದುಬಣ್ಣದ, ಕೆಂಪುಬಣ್ಣದ ವಸ್ತ್ರವನ್ನು ಧರಿಸಿದ ಯುವಕನೊಬ್ಬನು ಕೊಠಡಿಯನ್ನು ಪ್ರವೇಶಿಸಿದನು. ಶ್ರೀರಾಮಕೃಷ್ಣರು ಅವನಿಗೆ ಹೇಳಿದರು : "ನೋಡು, ಇವರಿಗೆ ಮಣಿಮಲ್ಲಿಕನ ಮನೆಯ ನಂಬರನ್ನು ತಿಳಿಸು" ಎಂದು. ಯುವಕನು ನಮ್ರತೆಯಿಂದ ಉತ್ತರಿಸಿದನು, "ನಂ. ೮೧, ಚಿತ್‌ಪುರ್ ರಸ್ತೆ, ಸಿಂದೂರಿಯಾಪಾಟಿ" ಎಂದು. ಆ ಯುವಕನ ವಿನೀತಭಾವವನ್ನೂ ಸಾತ್ತ್ವಿಕ ಸ್ವಭಾವವನ್ನೂ ಕಂಡು ಅವನು ಮಂದಿರದ ಯಾರೋ ಭಟ್ಟಾಚಾರ್ಯನ ಮಗನಿರಬೇಕೆಂದು ಭಾವಿಸಿದೆವು; ಆದರೆ ಒಂದೆರಡು ತಿಂಗಳ ನಂತರ ಅವನು ವಿಶ್ವವಿದ್ಯಾಲಯದಿಂದ ಪರೀಕ್ಷೆಯನ್ನು ಮುಗಿಸಿ ಹೊರಬರುತ್ತಿದ್ದುದನ್ನು ಕಂಡೆವು. ಅವನನ್ನು ಸಂಧಿಸಿ ಮಾತನಾಡಿಸಿದಾಗ ನಮ್ಮ ಹಿಂದಿನ ಭಾವನೆ ತಪ್ಪೆಂದು ತಿಳಿದು ಬಂತು. ಅವನ ಹೆಸರು ಬಾಬುರಾಮ್, ಮನೆ ತಾರಕೇಶ್ವರ ಸಮೀಪದ ಅಂಟ್‌ಪುರದಲ್ಲಿ. ಕಲ್ಕತ್ತೆಯ ಕಂಬೂಲಿಯ ಟೋಲದಲ್ಲಿ ಒಂದು ಬಾಡಿಗೆ ಮನೆಯಲ್ಲಿದ್ದನು. ಆಗಾಗ ಶ್ರೀರಾಮಕೃಷ್ಣರೆಡೆಗೆ ಹೋಗುತ್ತಿದ್ದನು. ಮುಂದೆ ಇವರು ರಾಮಕೃಷ್ಣ ಸಂಘದಲ್ಲಿ ಪ್ರೇಮಾನಂದರೆಂದು ಪ್ರಸಿದ್ಧರಾದರು. ಸ್ವಲ್ಪ ಹೊತ್ತಿನಲ್ಲಿಯೆ ಗಾಡಿ ಬಂದಿತು. ಶ್ರೀರಾಮಕೃಷ್ಣರು ಬಾಬುರಾಮನಿಗೆ ತಮ್ಮ ಟವಲು ಮಸಾಲೆ ಡಬ್ಬಿ, ಬಟ್ಟೆ ಇತ್ಯಾದಿಗಳನ್ನು ತೆಗೆದುಕೊಳ್ಳಲು ಹೇಳಿ ಜಗನ್ಮಾತೆಗೆ ವಂದಿಸಿ ಗಾಡಿಯನ್ನು ಹತ್ತಿದರು. ಬಾಬುರಾಮನು ಮೇಲೆ ಹೇಳಿದ ವಸ್ತುಗಳನ್ನೆಲ್ಲಾ ತೆಗೆದುಕೊಂಡು ಇನ್ನೊಂದು ಕಡೆಯಿಂದ ಗಾಡಿಯನ್ನು ಪ್ರವೇಶಿಸಿದನು. ಇನ್ನೊಬ್ಬ ವ್ಯಕ್ತಿಯೂ ಕೂಡ ಅಂದು ಶ್ರೀರಾಮಕೃಷ್ಣರೊಡನೆ ಕಲ್ಕತ್ತೆಗೆ ಹೋಗಿದ್ದನು. ಅನಂತರ ವಿಚಾರಿಸಿದಾಗ ತಿಳಿದುಬಂತು ಅವನ ಹೆಸರು ಪ್ರತಾಪಚಂದ್ರ ಹಾಜರಾ ಎಂದು.

4. ಶ್ರೀರಾಮಕೃಷ್ಣರು ಹೊರಟು ಹೋದಮೇಲೆ ನಮ್ಮ ಅದೃಷ್ಟಕ್ಕೆ ಒಂದು

ದೋಣಿ ಕೂಡಲೇ ಸಿಕ್ಕಿತು. ಅದರಲ್ಲಿ ಕುಳಿತು ಕಲ್ಕತ್ತೆಯ ಬಡೋಬಜಾರ್ ಘಟ್ಟದಲ್ಲಿ ಇಳಿದೆವು. ಉತ್ಸವವು ಸಂಧ್ಯಾಕಾಲದಲ್ಲಿ ನಡೆಯುವುದಿದ್ದುದರಿಂದ ಒಬ್ಬ ಸ್ನೇಹಿತನ ಮನೆಗೆ ಹೋಗಿ ಸ್ವಲ್ಪ ಕಾಲ ಕಳೆದೆವು. ವೈಕುಂಠನಾಥ ಸಂನ್ಯಾಲನು ಉತ್ಸವದ ವೇಳೆಗೆ ಬರುವುದಾಗಿ ಹೇಳಿ ತನ್ನ ಕೆಲಸಕ್ಕೆ ಬೇರೆಕಡೆ ಹೊರಟುಹೋದನು.

ನಾಲ್ಕು ಘಂಟೆಯ ಹೊತ್ತಿಗೆ ಮಣಿಬಾಬುವಿನ ಮನೆಯನ್ನು ಹುಡುಕಿಕೊಂಡು ಅಲ್ಲಿಗೆ ಹೋದೆವು. ಶ್ರೀರಾಮಕೃಷ್ಣರ ಬಗ್ಗೆ ವಿಚಾರಿಸಿದಾಗ ಒಬ್ಬ ವ್ಯಕ್ತಿಯು ಮೇಲಿನ ಬೈಠಕ್‌ಖಾನೆಗೆ ಹೋಗಲು ಮಾರ್ಗದರ್ಶನ ಮಾಡಿದನು. ನಾವು ಅಲ್ಲಿಗೆ ಹೋದೆವು. ಕೊಠಡಿಯಲ್ಲಿ ಉತ್ಸವಕ್ಕಾಗಿ ಪತ್ರ ಪುಷ್ಪ ಇತ್ಯಾದಿಗಳನ್ನು ಸಜ್ಜುಗೊಳಿಸಿದ್ದರು ಮತ್ತು ಕೆಲವು ಭಕ್ತರು ಮಾತನಾಡಿಕೊಳ್ಳುತ್ತಿದ್ದರು. ವಿಚಾರಿಸಿದಾಗ ತಿಳಿದು ಬಂತು ಮಧ್ಯಾಹ್ನವೇ ಉಪಾಸನೆ, ಸಂಗೀತ ಮುಂತಾದವುಗಳು ಆಗಿಹೋದವು, ಮತ್ತೆ ಪುನಃ ಸಂಜೆಯ ವೇಳೆಯಲ್ಲಿ ಉಪಾಸನೆ ಕೀರ್ತನೆಗಳು ನಡೆಯುವುವು ಎಂದು. ಸ್ತ್ರೀ ಭಕ್ತರ ಪ್ರಾರ್ಥನೆಯ ಮೇರೆಗೆ ಶ್ರೀರಾಮಕೃಷ್ಣರು ಮನೆಯ ಒಳಗೆ ಹೋಗಿದ್ದರು.

5. ಉಪಾಸನೆ ಪ್ರಾರಂಭವಾಗುವುದಕ್ಕೆ ಇನ್ನೂ ಸಮಯವಿದೆ ಎಂದು ತಿಳಿದು ನಾವು ಹೊರಗೆ ಹೊರಟೆವು. ಮತ್ತೆ ಸಂಧ್ಯಾ ಸಮಯಕ್ಕೆ ಸರಿಯಾಗಿ ಹಿಂದಿರುಗಿ ಬಂದೆವು. ನಾವು ಮನೆಯನ್ನು ಸಮೀಪಿಸುತ್ತಿದ್ದಂತೆಯೆ ಮಧುರಗಾನ, ಮೃದಂಗದ ಉಚ್ಚನಾದ ನಮ್ಮ ಕಿವಿಗಳನ್ನು ಆಕರ್ಷಿಸಿದವು. ಕೀರ್ತನೆ ಆಗಲೇ ಪ್ರಾರಂಭವಾಗಿದೆಯೆಂದು ತಿಳಿದು ನಾವು ಬೇಗನೆ ಬೈಠಕ್‌ಖಾನೆಯನ್ನು ಪ್ರವೇಶಿಸಿದೆವು. ಅಲ್ಲಿ ನಾವು ಕಂಡ ದೃಶ್ಯ ಮಾತಿಗೆ ನಿಲುಕದುದು. ಕೊಠಡಿಯ ಒಳಗೆ ಹೊರಗೆ ಎಲ್ಲಾ ಕಡೆ-ಜನ ತುಂಬಿಬಿಟ್ಟಿದ್ದಾರೆ. ಪ್ರತಿಯೊಂದು ಬಾಗಿಲಿನ ಮುಂದೆ ಮತ್ತು ಪಶ್ಚಿಮದ ಛಾವಣಿಯ ಮೇಲೆ ಎಷ್ಟೊಂದು ಜನ ನಿಂತುಕೊಂಡಿದ್ದರೆಂದರೆ ಆ ಜನಜಂಗುಳಿಯ ನಡುವೆ ನುಗ್ಗಿಕೊಂಡು ಕೊಠಡಿಯನ್ನು ಪ್ರವೇಶಿಸುವುದು ಅಸಾಧ್ಯವಾಗಿತ್ತು. ಪ್ರತಿಯೊಬ್ಬರೂ ಕತ್ತು ಚಾಚಿಕೊಂಡು ಭಕ್ತಿಪೂರ್ವಕವಾಗಿ ಕೊಠಡಿಯ ಕಡೆ ಎವೆಯಿಕ್ಕದೆ ನೋಡುತ್ತಿದ್ದಾರೆ. ಪಕ್ಕದಲ್ಲಿ ಯಾರಿದ್ದಾರೆ ಯಾರಿಲ್ಲ ಎಂಬುದರ ಪರಿವೆಯೇ ಯಾರಿಗೂ ಇರಲಿಲ್ಲ. ಮುಂದಿನ ಬಾಗಿಲಿನಿಂದ ಕೊಠಡಿಯನ್ನು ಪ್ರವೇಶಿಸುವುದು ಅಸಾಧ್ಯವೆಂದು ತಿಳಿದು ನಾವು ಪಶ್ಚಿಮದ ಛಾವಣಿಯ ಮೂಲಕ ಸುತ್ತಿಕೊಂಡು ಉತ್ತರದ ಬಾಗಿಲಿನಲ್ಲಿ ಹೋಗಿ ಒಂದುಕಡೆ ನಿಂತುಕೊಂಡೆವು. ಅಲ್ಲಿ ಸ್ವಲ್ಪ ಜನಜಂಗುಳಿ ಕಡಿಮೆಯಿತ್ತು. ನಾವು ತಲೆಯೆತ್ತಿ ಕೊಠಡಿಯ ಮಧ್ಯಭಾಗವನ್ನು ನೋಡಿದೆವು. ಅದ್ಭುತ ದೃಶ್ಯ ! ದಿವ್ಯ ಆನಂದದ ಮಹಾ ಅಲೆಗಳು ಉಕ್ಕಿ ಹರಿಯುತ್ತಿದ್ದವು. ಎಲ್ಲರೂ ಒಮ್ಮೆಯೆ ಮೈಮರೆತು ಕೀರ್ತನೆ ಮಾಡುತ್ತಾ ಕೆಲವೊಮ್ಮೆ ನಗುತ್ತಿದ್ದಾರೆ, ಕೆಲವೊಮ್ಮೆ ಅಳುತ್ತಿದ್ದಾರೆ, ಕೆಲವೊಮ್ಮೆ ನರ್ತಿಸುತ್ತ ಪ್ರಜ್ಞೆ ತಪ್ಪಿ ಭೂಮಿಯ ಮೇಲೆ ಬೀಳುತ್ತಿದ್ದಾರೆ. ಎಲ್ಲರೂ ಹುಚ್ಚರಂತೆ ವರ್ತಿಸುತ್ತಿದ್ದಾರೆ.

6. ಶ್ರೀರಾಮಕೃಷ್ಣರು ಈ ಉನ್ಮತ್ತರ ಮಧ್ಯ ಭಾಗದಲ್ಲಿ ನರ್ತಿಸುತ್ತಾ ಕೆಲ

ವೊಮ್ಮೆ ತ್ವರಿತವಾಗಿ, ಲಯಬದ್ಧವಾಗಿ ಮುಂದೆ ಹೋಗುತ್ತಾರೆ. ಮತ್ತೆ ಹಾಗೆಯೇ ಹಿಂದೆ ಬರುತ್ತಾರೆ. ಅವರು ಮುಂದೆ ಹೋದಂತೆಲ್ಲ ಜನರು ಮಂತ್ರಮುಗ್ಧರಂತೆ ಅವರ ಚಲನೆಗೆ ದಾರಿ ಮಾಡಿಕೊಡುತ್ತಿದ್ದಾರೆ, ಅವರ ಹಸನ್ಮುಖದಲ್ಲಿ ಅಪೂರ್ವ ಜ್ಯೋತಿಯು ಕ್ರೀಡಿಸುತ್ತಿತ್ತು. ಅವರ ಪ್ರತಿಯೊಂದು ಅಂಗದಲ್ಲಿಯೂ ವಿಶೇಷ ಕೋಮಲತೆ ಮತ್ತು ಮಾಧುರ್ಯಗಳಿಂದ ಕೂಡಿದ ಸಿಂಹಬಲ ವ್ಯಕ್ತವಾಗುತ್ತಿತ್ತು. ಎಂಥಾ ನೃತ್ಯವದು ! ಅದರಲ್ಲಿ ಆಡಂಬರವಾಗಲಿ, ಕುಣಿತ ನೆಗೆತಗಳಾಗಲಿ, ಅಸ್ವಾಭಾವಿಕ ಅಂಗಚಲನೆಗಳಾಗಲಿ, ದೊಂಬರಾಟವಾಗಲಿ ಇರಲಿಲ್ಲ. ಪ್ರತಿಯೊಂದು ಚಲನೆಯಲ್ಲಿಯೂ ಅಪೂರ್ವ ಸಂಯಮ ಕಂಡುಬರುತ್ತಿತ್ತು. ಪ್ರತಿ ಅಂಗಾಂಗಗಳ ಸ್ಥಿತಿ ಮತ್ತು ಗತಿ ವಿಧಾನಗಳು ಅತ್ಯಂತ ಸ್ವಾಭಾವಿಕದಾಗಿದ್ದು, ಅವುಗಳಲ್ಲಿ ಮಾಧುರ್ಯ ಮತ್ತು ಉದ್ಯಮ ಸಮ್ಮಿಲಿತಗೊಂಡಿದ್ದುವು. ಪ್ರತಿಯೊಂದು ಚಲನೆಯೂ ಒಂದು ಆನಂದದ ಅಲೆಯಂತಿತ್ತು. ಒಂದು ಮೀನು ಅತ್ಯಂತ ಸ್ವಚ್ಛವಾದ ನೀರಿನಲ್ಲಿ ಕೆಲವೊಮ್ಮೆ ನಿಧಾನ ವಾಗಿಯೂ ಕೆಲವೊಮ್ಮೆ ವೇಗವಾಗಿಯೂ ನಾಲ್ಕೂ ದಿಕ್ಕಿನಲ್ಲಿ ಆನಂದದಿಂದ ಸುತ್ತಾಡುವಂತೆ ಶ್ರೀರಾಮಕೃಷ್ಣರ ನೃತ್ಯವು ಅಪೂರ್ವ ಆನಂದದ ಅಭಿವ್ಯಕ್ತಿಯಾಗಿತ್ತು. ಅವರು ಆನಂದ ಸಾಗರದಲ್ಲಿ ಮುಳುಗಿ ತಮ್ಮ ಆಂತರಿಕ ಭಾವವನ್ನು ತಮ್ಮ ಅಂಗಾಂಗಗಳ ಸ್ಥಿತಿಗತಿಗಳ ಮೂಲಕ ಪ್ರಕಾಶಪಡಿಸುವಂತಿತ್ತು. ಹೀಗೆ ನೃತ್ಯ ಮಾಡುತ್ತಾ ಕೆಲವೊಮ್ಮೆ ಪ್ರಜ್ಞೆ ತಪ್ಪಿ ಬಿದ್ದುಬಿಡುತ್ತಿದ್ದರು. ಕೆಲವೊಮ್ಮೆ ಅವರ ಉಟ್ಟಬಟ್ಟೆ ಜಾರಿಹೋಗುತ್ತಿತ್ತು. ಇತರರು ಅದನ್ನು ಮತೆ ಸೊಂಟಕ್ಕೆ ಕಟ್ಟುತ್ತಿದ್ದರು. ಮತ್ತೆ ಕೆಲವೊಮ್ಮೆ ಇತರರೂ ಭಾವಾವೇಶ ದಿಂದ ಪ್ರಜ್ಞೆ ಕಳೆದುಕೊಳ್ಳುವುದನ್ನು ನೋಡಿ ಶ್ರೀರಾಮಕೃಷ್ಣರು ಅವರ ಎದೆಯನ್ನು ಸ್ಪರ್ಶಿಸಿ ಮತ್ತೆ ಅವರನ್ನು ಸಚೇತನರನ್ನಾಗಿ ಮಾಡುತ್ತಿದ್ದರು. ಅವರನ್ನು ಆಲಂಬನವ ನ್ನಾಗಿಟ್ಟುಕೊಂಡು ಒಂದು ದಿವ್ಯ ಉಜ್ವಲ ಆನಂದ ಪ್ರವಾಹ ಅಲ್ಲಿ ಹರಿಯುತ್ತಿತ್ತು. ನಿಜವಾದ ಭಕ್ತರಿಗೆ ಅದು ಭಗವಂತನೇ ದರ್ಶನ ನೀಡುವಂತಿತ್ತು. ಮಂದ ವೈರಾಗ್ಯ ವುಳ್ಳವರಿಗೆ ತೀವ್ರ ವೈರಾಗ್ಯವನ್ನು ನೀಡುವಂತಿತ್ತು. ಆಲಸ್ಯಯುಕ್ತ ಮನಸ್ಸುಳ್ಳವರನ್ನು ಆಧ್ಯಾತ್ಮಿಕ ರಾಜ್ಯದಲ್ಲಿ ಮುಂದುವರಿಯುವಂತೆ ಮಾಡಲು ಪ್ರಚೋದಿಸುವಂತಿತ್ತು. ತೀವ್ರ ವಿಷಯಾಸಕ್ತಿ ಉಳ್ಳವರ ಮನಸ್ಸಿನಲ್ಲಿಯೂ ಆ ಕ್ಷಣದ ಮಟ್ಟಿಗೆ ವೈರಾಗ್ಯವನ್ನು ಕೆರಳಿಸುವಂತಿತ್ತು. ಅವರ ಭಾವಾವೇಶವು ಇತರರಲ್ಲಿಯೂ ಹರಡಿ ಅವರನ್ನು ಭಾವವಿಹ್ವಲರನ್ನಾಗಿಸುತ್ತಿತ್ತು. ಅವರ ಪವಿತ್ರತೆಯ ಬೆಳಕನ್ನು ಆಶ್ರಯಿಸಿ ಇತರರು ಆಧ್ಯಾತ್ಮಿಕತೆಯ ಉನ್ನತ ಸ್ತರವನ್ನು ಏರುತ್ತಿದ್ದರು. ಸಾಧಾರಣ ಬ್ರಹ್ಮಸಮಾಜದ ಆಚಾರ್ಯನಾದ ವಿಜಯಕೃಷ್ಣಗೋಸ್ವಾಮಿಯ ಬಗ್ಗೆ ಹೇಳಬೇಕಾಗಿಯೇ ಇಲ್ಲ, ಉಳಿದ ಅನೇಕ ಬ್ರಾಹ್ಮ ಭಕ್ತರೂ ಕೂಡ ಅಂದು ಮಧ್ಯೆಮಧ್ಯೆ ಭಾವಾವಿಷ್ಟರಾಗಿ ಪ್ರಜ್ಞೆಯನ್ನು ಕಳೆದುಕೊಂಡು ಕೆಳಗೆ ಬೀಳುತ್ತಿದ್ದರು. ಸುಶ್ರಾವ್ಯ ಕಂಠವುಳ್ಳ ಆಚಾರ್ಯ ಚಿರಂಜೀವ ಶರ್ಮನು ಅತ್ಯಂತ ಭಾವಮಯನಾಗಿ ಏಕತಂತಿಯ ವಾದ್ಯದೊಡನೆ "ಓ ಆನಂದಮಯಿ ತಾಯಿಯ ಮಕ್ಕಳೆ, ಸುತ್ತುತ್ತಾ ಸುತ್ತುತ್ತಾ ನರ್ತಿಸಿ" ಎಂಬ ಹಾಡನ್ನು ಹಾಡುತ್ತಿದ್ದನು.

ಹೀಗೆ ಕೀರ್ತನಾನಂದದಲ್ಲಿ ಎರಡು ಘಂಟೆಗಳು ಕಳೆದವು. ಕೊನೆಯಲ್ಲಿ "ಇಂಥಾ ಮಧುರವಾದ ಹರಿಯನಾಮವನ್ನು ಯಾರು ಪ್ರಪಂಚಕ್ಕೆ ತಂದವರು ?" ಎಂಬ ಹಾಡಿನೊಂದಿಗೆ ಈ ದಿವ್ಯಭಾವದ ಅಲೆಗಳು ಶಾಂತಗೊಂಡವು. ಅನಂತರ ಎಲ್ಲಾ ಮತಗಳ ಆಚಾರ್ಯರುಗಳಿಗೂ ಮತ್ತು ಭಕ್ತರಿಗೂ ಪ್ರಣಾಮವನ್ನು ಸಲ್ಲಿಸಲಾಯಿತು.

7. ಸಂಕೀರ್ತನೆ ಆದನಂತರ ಎಲ್ಲರೂ ಕುಳಿತುಕೊಂಡರು. ಶ್ರೀರಾಮಕೃಷ್ಣರು ನಗೇಂದ್ರನಾಥ ಭಟ್ಟಾಚಾರ್ಯನಿಗೆ "ಓ ನನ್ನ ಮನಸ್ಸೆ ಹರಿನಾಮದ ಮದಿರೆಯನ್ನು ಕುಡಿದು ಉನ್ಮತ್ತವಾಗು" ಎಂಬ ಹಾಡನ್ನು ಹಾಡಲು ಹೇಳಿದರು. ಅವನು ಕೂಡಲೇ ಒಪ್ಪಿಕೊಂಡು ಅತ್ಯಂತ ಮಧುರವಾಗಿ ಅದನ್ನು ಎರಡು ಮೂರುಬಾರಿ ಹಾಡಿದನು. ಮತ್ತೆ ಎಲ್ಲರ ಹೃದಯವೂ ಆನಂದದಿಂದ ತುಂಬಿಹೋಯಿತು.

ಅನಂತರ ಶ್ರೀರಾಮಕೃಷ್ಣರು ಅಲ್ಲಿ ನೆರೆದವರಿಗೆ ಆಧ್ಯಾತ್ಮಿಕ ಉಪದೇಶಗಳನ್ನು ನೀಡತೊಡಗಿದರು. ಜೀವನು ತನ್ನ ಮನಸ್ಸನ್ನು ರೂಪರಸಾದಿ ಪ್ರಾಪಂಚಿಕ ವಸ್ತುಗಳಿಂದ ಹಿಂತೆಗೆದುಕೊಂಡದ್ದೇ ಆದರೆ ಅವನು ಪರಮ ಶಾಂತಿಯನ್ನು ಪಡೆಯುವುದು ನಿಶ್ಚಯ ಎಂದು ಅವರು ವಿವರಿಸಿ ಹೇಳಿದರು. ಅಲ್ಲಿಯೇ ಪರದೆಯ ಹಿಂದೆ ಕುಳಿತಿದ್ದ ಸ್ತ್ರೀ ಭಕ್ತರೂ ಕೂಡ ಅನೇಕ ಪ್ರಶ್ನೆಗಳನ್ನು ಹಾಕಿದರು. ಹೀಗೆ ಅವರು ಸಮಸ್ಯೆಗಳಿಗೆ ಉತ್ತರವನ್ನು ನೀಡುತ್ತಿರುವಾಗ ರಾಮಪ್ರಸಾದ ಕಮಲಾಕಾಂತ ಮೊದಲಾದ ಸಾಧಕ ಭಕ್ತರು ರಚಿಸಿದ ಜಗನ್ಮಾತೆಯ ಸ್ತುತಿಪರವಾದ ಹಾಡುಗಳನ್ನು ಹಾಡುತ್ತಿದ್ದರು. ಇದು ಕೇಳುಗರ ಮೇಲೆ ಆಳವಾದ ಪ್ರಭಾವವನ್ನು ಉಂಟು ಮಾಡುತ್ತಿತ್ತು. ಅವರು ಹಾಡಿದ ಹಾಡುಗಳ ಪೈಕಿ ಈ ಕೆಳಗಿನ ಐದು ಹಾಡುಗಳು ನಮಗೆ ಸರಿಯಾಗಿ ನೆನಪಿವೆ :

(1) ನನ್ನ ಮನವೆಂಬ ಕೃಷ್ಣ ದುಂಬಿಯು ಶ್ಯಾಮಾತಾಯಿಯ ನೀಲಕಮಲದ ಮಧುಪಾನದಲ್ಲಿ ಸಂಪೂರ್ಣ ಮಗ್ನವಾಗಿದೆ.

(2) ನನ್ನ ಮನವೆಂಬ ಗಾಳಿಪಟವು ಶ್ಯಾಮಾಪದವೆಂಬ ಆಕಾಶದಲ್ಲಿ ಬಹು ಎತ್ತರ ಹಾರುತ್ತಿದೆ.

(3) ಇದೆಲ್ಲ ಆ ಹುಚ್ಚುತಾಯಿಯ ಆಟ.

(4) ಈ ಒಡಮನಸ್ಸಿನ ತಪ್ಪೇನಿದೆ ? ಅದರ ಮೇಲೆ ಯಾಕೆ ಯಾವಾಗಲೂ ದೂರು ಹೊರಸುತ್ತೀಯೆ ?

(೨) ಎಲೈ ತಾಯಿಯೆ, ನಾನು ಸಂಪೂರ್ಣ ಎಚ್ಚರ ಇದ್ದಾಗ್ಯೂ ಮತ್ತು ನೀನೇ ಕಾಯುತ್ತಿದ್ದಾಗ್ಯೂ ನನ್ನ ಮನೆಯಲ್ಲಿ ಕಳ್ಳತನವಾಯ್ತಲ್ಲ ಎಂದು ನನಗೆ ವ್ಯಥೆ.

8. ಶ್ರೀರಾಮಕೃಷ್ಣರು ಹೀಗೆ ಜಗನ್ಮಾತೆಯ ನಾಮೋಚ್ಚಾರಣೆ ಮಾಡುತ್ತಿರುವಾಗ ವಿಜಯಕೃಷ್ಣನು ಮನೆಯ ಒಳಗೆ ಹೋಗಿ ತುಲಸೀದಾಸ ರಾಮಾಯಣದ ಪಾಠ ಮತ್ತು ವ್ಯಾಖ್ಯಾನದಲ್ಲಿ ನಿರತನಾದನು. ಸಂಜೆಯ ಉಪಾಸನೆಯ ಸಮಯ ಸಮೀಪಿಸಿತು. ಆ ಉಪಾಸನೆಯ ಕಾರ್ಯ ವಿಜಯಕೃಷ್ಣನದಾಗಿತ್ತು. ಅದನ್ನು ಪ್ರಾರಂಭಿಸುವುದಕ್ಕೆ ಮುಂಚೆ ಶ್ರೀರಾಮಕೃಷ್ಣರನ್ನು ವಂದಿಸಲು ಬೈಠಕ್‌ಖಾನೆಗೆ ಬಂದನು. ಅವನನ್ನು

ನೋಡಿದ ಕೂಡಲೇ ಶ್ರೀರಾಮಕೃಷ್ಣರು ಬಾಲಕರಂತೆ ನಗುತ್ತಾ ಹೇಳಿದರು: "ಇತ್ತೀಚೆಗೆ ವಿಜಯನು ಸಂಕೀರ್ತನೆಯಲ್ಲಿ ಬಹಳ ಆನಂದ ಪಡುತ್ತಾನೆ. ಆದರೆ ಅವನು ನೃತ್ಯ ಮಾಡುವಾಗ ಛಾವಣಿ ಎಲ್ಲಿ ಬಿದ್ದು ಹೋಗುತ್ತದೋ ಎಂಬ ಭಯ ನನಗೆ. (ಎಲ್ಲರೂ ನಗುತ್ತಾರೆ.) ನೋಡಿ, ಇಂಥದೇ ಒಂದು ಘಟನೆ ನಮ್ಮ ಹಳ್ಳಿಯಲ್ಲಿ ನಿಜವಾಗಿಯೂ ಸಂಭವಿಸಿತು. ಅಲ್ಲಿ ಮರ ಮಣ್ಣಿನಿಂದಲೇ ಮಹಡಿ ಮಾಡುತ್ತಾರೆ. ಒಬ್ಬ ಗೋಸ್ವಾಮಿಯು ಶಿಷ್ಯನ ಮನೆಗೆ ಹೋಗಿ ಮಹಡಿಯ ಮೇಲೆ ಕೀರ್ತನೆಯನ್ನು ಪ್ರಾರಂಭಿಸಿದ. ಕೀರ್ತನೆಯ ಬಿಸಿ ಏರಿದಂತೆ ನೃತ್ಯ ಪ್ರಾರಂಭವಾಯಿತು. ಆ ಗೋಸ್ವಾಮಿಯು (ವಿಜಯನನ್ನು ನಿರ್ದೇಶಿಸಿ) ನಿನ್ನಂತೆಯೆ ಧಡೂತಿಯ ವ್ಯಕ್ತಿಯಾಗಿದ್ದ. ಸ್ವಲ್ಪ ಹೊತ್ತು ನರ್ತಿಸುತ್ತಿದ್ದಂತೆಯೆ ಮಹಡಿಯು ಒಡೆದು ಅವನು ಕೆಳಗೆ ಬಂದುಬಿಟ್ಟ. ಅದಕ್ಕೇ ನನಗೆ ಭಯ. ನೀನು ನೃತ್ಯ ಮಾಡುವಾಗಲೂ ಹಾಗೆಯೇ ಆಗುವುದೊ ಏನೋ" (ಎಲ್ಲರೂ ನಗುತ್ತಾರೆ.) ವಿಜಯಕೃಷ್ಣನ ಉಡಿಗೆಯನ್ನು ಗಮನಿಸಿ ಶ್ರೀರಾಮಕೃಷ್ಣರು ಹೇಳತೊಡಗಿದರು : "ಈಗ ಇವನಿಗೆ ಕಾವಿಯ ಮೇಲೆ ತುಂಬಾ ಪ್ರೀತಿ. ಜನರು ಸಾಮಾನ್ಯವಾಗಿ ಪಂಚೆ, ವಲ್ಲಿಗಳಿಗೆ ಮಾತ್ರ ಕಾವಿ ಹಾಕುತ್ತಾರೆ. ಆದರೆ ವಿಜಯನು ಪಂಚೆ, ವಲ್ಲಿ, ಜುಬ್ಬ, ಬೂಟ್ಸಿಗೂ ಕೂಡ ಕಾವಿ ಹಾಕಿದ್ದಾನೆ. ಅದೂ ಒಳ್ಳೆಯದೇ, ಒಂದು ಸ್ಥಿತಿ ಬರುತ್ತದೆ ಆಗ ಹೀಗೆಯೆ ಮಾಡಬೇಕೆನಿಸುತ್ತದೆ. ಕಾವಿಯನ್ನು ಬಿಟ್ಟು ಬೇರೇನನ್ನೂ ಧರಿಸಲು ಆಗುವುದಿಲ್ಲ. ಕಾವಿಯು ತ್ಯಾಗದ ಚಿಹ್ನೆಯಷ್ಟೆ, ಆದ್ದರಿಂದ ಕಾವಿಯು ಭಗವಂತನಿಗಾಗಿ ತೆಗೆದುಕೊಂಡ ತ್ಯಾಗವ್ರತವನ್ನು ಸಾಧಕನಿಗೆ ನೆನಪು ಮಾಡಿಕೊಡುತ್ತದೆ."

ಈಗ ವಿಜಯಕೃಷ್ಣನು ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿದನು ಮತ್ತು ಶ್ರೀರಾಮಕೃಷ್ಣರು ಪ್ರಸನ್ನ ಮನಸ್ಸಿನಿಂದ ಅವನನ್ನು "ಓಂ ಶಾಂತಿ ಶಾಂತಿ, ನಿನಗೆ ಪ್ರಶಾಂತಿಯುಂಟಾಗಲಿ" ಎಂದು ಆಶೀರ್ವದಿಸಿದರು.

9. ಶ್ರೀರಾಮಕೃಷ್ಣರು ತಾಯಿಯ ನಾಮೋಚ್ಚಾರಣೆ ಮಾಡುತ್ತಿರುವಾಗ ಇನ್ನೊಂದು ಘಟನೆ ಸಂಭವಿಸಿತು. ಅವರು ಸದಾ ಅಂತರ್ಮುಖರಾಗಿದ್ದರೂ ಹೊರಗಿನ ವಿಷಯದ ಕಡೆ ಅವರ ಗಮನ ಎಷ್ಟಿರುತ್ತದೆ ಎಂಬುದನ್ನು ಈ ಘಟನೆ ಸೂಚಿಸುತ್ತದೆ. ಭಜನೆ ಹಾಡುತ್ತಿರುವಾಗ ಅವರು ಬಾಬುರಾಮನ ಮುಖವನ್ನು ನೋಡಿದರು. ಅವನು ತೀವ್ರ ಹಸಿವು ಬಾಯಾರಿಕೆಯಿಂದ ಬಳಲಿರುವುದಾಗಿ ಅವರಿಗೆ ಕಂಡುಬಂತು. ತಮಗಿಂತ ಮೊದಲು ಅವನು ಖಂಡಿತಾ ಊಟ ಮಾಡುವುದಿಲ್ಲ ಎಂದು ಅವರಿಗೆ ತಿಳಿದಿತ್ತು. ಆದ್ದರಿಂದ ತಾವು ಸ್ವಲ್ಪ ಆಹಾರ ಸ್ವೀಕರಿಸುವುದಾಗಿ ಹೇಳಿ ಕೆಲವು ಸಂದೇಶ ಮತ್ತು ಒಂದು ಲೋಟ ನೀರು ತರಲು ಹೇಳಿದರು. ಅದರಲ್ಲಿ ಸ್ವಲ್ಪಾಂಶವನ್ನು ತಾವು ತಿಂದು ಉಳಿದುದನ್ನು ಬಾಬುರಾಮನಿಗೆ ಕೊಟ್ಟರು. ಉಳಿದ ಭಕ್ತರೂ ಕೂಡ ಅದನ್ನು ಪ್ರಸಾದ ರೂಪದಲ್ಲಿ ಸ್ವೀಕರಿಸಿದರು.

ವಿಜಯನು ಉಪಾಸನೆಗಾಗಿ ಕೆಳಗಿಳಿದು ಬಂದನು. ಅನಂತರ ಶ್ರೀರಾಮಕೃಷ್ಣರನ್ನು ಆಹಾರಕ್ಕಾಗಿ ಒಳಗೆ ಕರೆದುಕೊಂಡು ಹೋಗಲಾಯಿತು. ಆಗ ರಾತ್ರಿ ಒಂಬತ್ತು

ಘಂಟೆಯಾಗಿತ್ತು. ನಾವು ಆ ಸಮಯದಲ್ಲಿ ವಿಜಯನ ಉಪಾಸನೆಯಲ್ಲಿ ಭಾಗಿಗಳಾಗಲು ಕೆಳಗಿಳಿದು ಬಂದೆವು. ಅಂಗಳದಲ್ಲಿ ಬ್ರಾಹ್ಮಭಕ್ತರು ಉಪಾಸನೆಗಾಗಿ ಸೇರಿದ್ದಾರೆ. ವಿಜಯನು ವರಾಂಡದ ವೇದಿಕೆಯ ಮೇಲೆ ಕುಳಿತು 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಇತ್ಯಾದಿ ವಾಕ್ಯಗಳ ಮೂಲಕ ಉಪಾಸನೆಯನ್ನು ಪ್ರಾರಂಭಿಸಿದನು. ಭಕ್ತರೂ ಅದನ್ನು ಉಚ್ಚರಿಸಿದರು. ಹೀಗೆ ಉಪಾಸನೆ ಮುಂದುವರಿಯುತ್ತಿದ್ದಂತೆಯೆ ಶ್ರೀರಾಮಕೃಷ್ಣರು ಸಭೆಯ ಮಧ್ಯೆ ಬಂದುಬಿಟ್ಟರು. ಎಲ್ಲರ ಜೊತೆ ಅವರೂ ಕುಳಿತು ಉಪಾಸನೆಯಲ್ಲಿ ಭಾಗ ವಹಿಸಿದರು. ಸುಮಾರು ಹತ್ತು ಹದಿನೈದು ನಿಮಿಷ ಅವರು ಸ್ಥಿರವಾಗಿ ಕುಳಿತಿದ್ದರು. ಅನಂತರ ಅವರು ನೆಲವನ್ನು ಮುಟ್ಟಿ ಪ್ರಣಾಮವನ್ನು ಮಾಡಿದರು. ಈಗ ರಾತ್ರಿ ಹತ್ತು ಘಂಟೆಯಾಗಿದೆ. ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹಿಂದಿರುಗಲು ಗಾಡಿಯನ್ನು ತರ ಬೇಕೆಂದು ಹೇಳಿದರು. ಅನಂತರ ಶೀತವಾಗುವುದೆಂದು ಜುಬ್ಬಾ, ಕಾಲುಚೀಲ, ಕಿವಿ ಮುಚ್ಚುವ ಟೋಪಿ ಇತ್ಯಾದಿಗಳನ್ನು ಧರಿಸಿಕೊಂಡು ಬಾಬುರಾಮನೊಡನೆ ನಿಧಾನವಾಗಿ ಸಭೆಯಿಂದ ಹೊರಟುಹೋಗಿ ಗಾಡಿಯನ್ನು ಹತ್ತಿದರು. ವಿಜಯನು ವೇದಿಕೆಯ ಮೇಲೆ ಕುಳಿತು ಇದೇ ಸಂದರ್ಭದಲ್ಲಿ ಬ್ರಾಹ್ಮ ಭಕ್ತರಿಗೆ ಎಂದಿನಂತೆ ಉಪದೇಶ ನೀಡಿದನು. ನಾವು ಸಭೆಯಿಂದ ಹೊರಟು ಮನೆಗೆ ಹೋದೆವು.

**10.** ಆ ಸಂದರ್ಭದಲ್ಲಿ ನಾವು ಬ್ರಾಹ್ಮ ಭಕ್ತರ ಸಂಗದಲ್ಲಿ ಶ್ರೀರಾಮಕೃಷ್ಣರು ಎಂಥಾ ಆನಂದವನ್ನು ಅನುಭವಿಸುತ್ತಿದ್ದರು ಎಂಬುದನ್ನು ಅರ್ಥಮಾಡಿಕೊಂಡೆವು. ಮಣಿಬಾಬು ಬ್ರಹ್ಮಸಮಾಜದ ದೀಕ್ಷಾಬದ್ಧ ಸದಸ್ಯನಾಗಿದ್ದನೊ ಇಲ್ಲವೊ ಎಂಬುದು ಸರಿ ಯಾಗಿ ತಿಳಿಯದು. ಆದರೆ ಅವನ ಪರಿವಾರದ ಸ್ತ್ರೀ ಪುರುಷರೆಲ್ಲರೂ ಆ ಕಾಲದಲ್ಲಿ ಬ್ರಾಹ್ಮ ಮತವನ್ನು ಅನುಸರಿಸುತ್ತಿದ್ದರು. ಅವರು ಸಮಾಜದ ಸಂಪ್ರದಾಯಕ್ಕನುಗುಣ ವಾಗಿ ದೈನಂದಿನ ಉಪಾಸನೆಗಳನ್ನು ಆಚರಿಸುತ್ತಿದ್ದರು. ಇದೇ ಪರಿವಾರಕ್ಕೆ ಸೇರಿದ ರಮಣಿ ಎಂಬ ಭಕ್ತಳಿದ್ದಳು. ಆಕೆಗೆ ಉಪಾಸನೆಯ ಸಂದರ್ಭದಲ್ಲಿ ಮನಸ್ಸನ್ನು ಸ್ಥಿರಗೊಳಿ ಸಲು ಆಗುತ್ತಿರಲಿಲ್ಲ. ಈ ವಿಷಯವನ್ನು ಶ್ರೀರಾಮಕೃಷ್ಣರಿಗೆ ತಿಳಿಸಿದಾಗ "ಆ ಸಮಯ ದಲ್ಲಿ ನಿನಗೆ ಯಾರ ವಿಷಯ ಮನಸ್ಸಿಗೆ ಬರುತ್ತದೆ ?" ಎಂದು ಆಕೆಯನ್ನು ಪ್ರಶ್ನಿಸಿ ದರು. ರಮಣಿಯು ತನ್ನ ತಮ್ಮನ ಮಗನಾದ ಚಿಕ್ಕ ಬಾಲಕನನ್ನು ಸಾಕಿ ಸಲಹುತ್ತಿದ್ದಳು. ಯಾವಾಗಲೂ ಅವನ ವಿಷಯವೇ ಮನಸ್ಸಿಗೆ ಬರುತ್ತಿತ್ತು. ಇದನ್ನು ತಿಳಿದ ಶ್ರೀರಾಮ ಕೃಷ್ಣರು ಆ ಬಾಲಕನನ್ನೇ ಶ್ರೀಕೃಷ್ಣನ ಮೂರ್ತಿಯೆಂದು ಭಾವಿಸಿ ಅವನ ಸೇವೆ ಮಾಡ ಬೇಕೆಂದು ಸಲಹೆ ಇತ್ತರು. ರಮಣಿಯು ಶ್ರೀರಾಮಕೃಷ್ಣರ ಈ ಉಪದೇಶವನ್ನು ಅನು ಸರಿಸುತ್ತಾ ಸ್ವಲ್ಪ ಸಮಯದಲ್ಲಿಯೇ ಭಾವ ಸಮಾಧಿಯನ್ನು ಪಡೆದಳು. ಶ್ರೀರಾಮ ಕೃಷ್ಣರು ಇನ್ನೊಂದು ದಿವಸ ಬೇರೆ ಪ್ರದೇಶದಲ್ಲಿ ಬ್ರಾಹ್ಮ ಭಕ್ತರೊಡನೆ ಆನಂದ ಅನು ಭವಿಸಿದುದನ್ನು ನಾವು ಕಂಡಿರುವೆವು. ಆ ಚಿತ್ರವನ್ನು ನಾವು ಓದುಗರ ಮುಂದಿಡುತ್ತೇವೆ.

## ಮೊದಲನೆಯ ಅಧ್ಯಾಯ

## ತೃತೀಯ ಪಾದ

# ಜಯಗೋಪಾಲನ ಮನೆಯಲ್ಲಿ ಶ್ರೀರಾಮಕೃಷ್ಣರು

1. ಜಯಗೋಪಾಲ ಸೇನನ ಮನೆಯಲ್ಲಿ ಶ್ರೀರಾಮಕೃಷ್ಣರ ದರ್ಶನ 2. ಶ್ರೀರಾಮಕೃಷ್ಣರ ಉಪದೇಶ ಕ್ರಮ 3. ಪ್ರಪಂಚದಲ್ಲಿ ಹೇಗಿರಬೇಕು ?— 4. ಅವರ ಉಪದೇಶಕ್ರಮದಲ್ಲಿದ್ದ ಒಂದು ವೈಶಿಷ್ಟ್ಯ 5. ಅನುಭವರಹಿತ ತತ್ತ್ವ ವಿಚಾರ ಶ್ರೀರಾಮಕೃಷ್ಣರಿಗೆ ಒಗ್ಗದು 6. ಸಂಸಾರದಲ್ಲಿದ್ದು ಸಾಧನೆ ಮಾಡುವುದರ ಬಗ್ಗೆ ಶ್ರೀರಾಮಕೃಷ್ಣರು 7. ಕೀರ್ತನಾನಂದ 8. ಜಯಗೋಪಾಲಸೇನನನ್ನು ಕುರಿತು

1. ಸಿಂದೂರಿಯಾಪಾಟಿಯ ಮಣಿಮೋಹನನ ಮನೆಯಲ್ಲಿ ಶ್ರೀರಾಮಕೃಷ್ಣರ ಕೀರ್ತನಾನಂದವನ್ನು ಮತ್ತು ಭಾವಾವೇಶವನ್ನು ನಾವು ನೋಡಿದೆವಷ್ಟೆ. ಆಗ ನಾವು ಆಧ್ಯಾತ್ಮಿಕ ರಾಜ್ಯದ ಒಂದು ಹೊಸ ಬೆಳಕನ್ನು ಕಂಡು ಮುಗ್ಧರಾದೆವು. ನಾವು ಮಾತ್ರವಲ್ಲದೆ ನಮ್ಮ ಸ್ನೇಹಿತನಾದ ವರದಾಸುಂದರನು ಇದೇ ಅನುಭವವನ್ನು ಪಡೆದನು. ಇನ್ನು ಎಂದು ಎಲ್ಲಿ ಶ್ರೀರಾಮಕೃಷ್ಣರು ಈ ರೀತಿ ಆನಂದವನ್ನು ಅನುಭವಿಸುತ್ತಾರೆ ಎಂಬುದನ್ನು ವಿಚಾರಿಸುತ್ತಿದ್ದನು. ಅವನ ಈ ಪ್ರಯತ್ನ ಸಫಲವಾಗಲು ಬಹಳ ಕಾಲ ಹಿಡಿಯಲಿಲ್ಲ. ಇದಾಗಿ ಎರಡು ದಿನಗಳಲ್ಲಿಯೇ ನವೆಂಬರ್ ೨೮ ಬುಧವಾರ ಬೆಳಗ್ಗೆ ಅವನನ್ನು ನೋಡಿದಾಗ, ಅವನು ತಿಳಿಸಿದ, "ಇಂದು ಮಧ್ಯಾಹ್ನ ಶ್ರೀರಾಮಕೃಷ್ಣರು ಕೇಶವನನ್ನು ನೋಡಲು ಕಮಲಕುಟೀರಕ್ಕೆ ಬರುತ್ತಾರೆ. ಅನಂತರ ಸಂಜೆ ಮಾಥಾಘೋಷಾ ಪಲ್ಲಿಯ ಜಯಗೋಪಾಲ ಸೇನನ ಮನೆಗೆ ಹೋಗುತ್ತಾರೆ. ನೀನು ಬರುತ್ತೀಯ?" ಕೇಶವಸೇನನು ಖಾಯಿಲೆಯಿಂದ ನರಳುತ್ತಿದ್ದ. ಅಪರಿಚಿತರಾದ ನಾವು ನೇರವಾಗಿ ಕಮಲಕುಟೀರಕ್ಕೆ ಹೋದರೆ ಅವರು ಏನೆಂದುಕೊಳ್ಳುವರೊ ಎಂದು ಭಾವಿಸಿ ಸಂಜೆ ಜಯಗೋಪಾಲ ಸೇನನ ಮನೆಗೆ ಹೋಗಿ ಶ್ರೀರಾಮಕೃಷ್ಣರನ್ನು ನೋಡುವುದೆಂದು ನಿರ್ಧರಿಸಿದೆವು.

ಮಾಥಾಘೋಷಾಪಲ್ಲಿಯು ಬಡೋ ಬಜಾರಿನ ಒಂದು ಭಾಗವೆಂದು ಭಾವಿಸಿ ನಾವು ಮೊದಲು ಅಲ್ಲಿಗೆ ಹೋದೆವು. ಅವರು ಇವರನ್ನು ವಿಚಾರಿಸುತ್ತಾ ಕೊನೆಗೆ ಜಯಗೋಪಾಲನ ಮನೆಯನ್ನು ತಲುಪಿದೆವು. ಈಗ ಸಂಜೆಯಾಗಿತ್ತು. ಹಿಂದೆ ಮಣಿಮೋಹನನ ಮನೆಯಲ್ಲಿ ಉತ್ಸವ ನಡೆದಾಗ ಆದಂತೆಯೆ ಇಂದೂ ಕೂಡ ಮಧ್ಯಾಹ್ನ ಮಳೆಯಾಗಿತ್ತು. ಏಕೆಂದರೆ ನಾವು ಕೆಸರಿನ ಮೇಲೆ ನಡೆದುಕೊಂಡು ಹೋದ ನೆನಪು ಸ್ಪಷ್ಟವಾಗಿದೆ. ಮಣಿಮೋಹನನ ಮನೆಯಂತೆಯೆ ಜಯಗೋಪಾಲನ ಮನೆಯು

ಪಶ್ಚಿಮಶಾಭಿಮುಖವಾಗಿತ್ತು. ನಾವು ಪೂರ್ವಾಭಿಮುಖವಾಗಿ ಮನೆಯನ್ನು ಪ್ರವೇಶಿಸಿದೆವು. ಮನೆಯನ್ನು ಪ್ರವೇಶಿಸಿದ ಕೂಡಲೆ ಒಬ್ಬ ವ್ಯಕ್ತಿಯನ್ನು ಕಂಡೆವು. ಶ್ರೀರಾಮಕೃಷ್ಣರು ಬಂದಿರುವರೆ ಎಂದು ಅವನನ್ನು ವಿಚಾರಿಸಿದೆವು. ಅವನು ನಮ್ಮನ್ನು ಆದರದಿಂದ ಬರಮಾಡಿಕೊಂಡು ದಕ್ಷಿಣ ದಿಕ್ಕಿನಲ್ಲಿದ್ದ ಏಣಿಯ ಮೂಲಕ ಮೇಲೆ ಹೋಗಿ ಪೂರ್ವ ದಿಕ್ಕಿನಲ್ಲಿದ್ದ ವಿಸ್ತಾರವಾದ ಮತ್ತು ಪ್ರಶಸ್ತವಾದ ಬೈಠಕ್ ಖಾನೆಗೆ ಹೋಗಬೇಕೆಂದು ಸೂಚಿಸಿದನು. ನಾವು ಮಹಡಿಯ ಮೇಲೆ ಹೋಗಿ ಬೈಠಕ್ ಖಾನೆಯನ್ನು ಪ್ರವೇಶಿಸಿದೆವು. ಅದು ಅತ್ಯಂತ ಸ್ವಚ್ಛವಾಗಿತ್ತು, ಎಲ್ಲವನ್ನೂ ಕ್ರಮಬದ್ಧವಾಗಿ, ಅಚ್ಚುಕಟ್ಟಾಗಿ ಜೋಡಿಸಲಾಗಿತ್ತು. ನೆಲದ ಮೇಲೆ ವಿಸ್ತಾರವಾದ ಮೆತ್ತೆಯನ್ನು ಹಾಸಿದ್ದರು ಮತ್ತು ಅದರ ಮೇಲೆ ಬಿಳೀಬಟ್ಟೆ ಹಾಸಿದ್ದರು. ಅದರ ಒಂದು ಭಾಗದಲ್ಲಿ ಶ್ರೀರಾಮಕೃಷ್ಣರು ಬ್ರಾಹ್ಮಭಕ್ತರೊಡನೆ ಸುತ್ತುವರಿದು ಕುಳಿತಿದ್ದರು. ಅವರ ಮಧ್ಯೆ ನವ ವಿಧಾನದ ಚಿರಂಜೀವ ಶರ್ಮ ಮತ್ತು ಅಮೃತಲಾಲ್ ಬಸು ಇದ್ದರೆಂದು ನಮಗೆ ನೆನಪು. ಅವರಲ್ಲದೆ ಮನೆಯ ಯಜಮಾನನಾದ ಜಯಗೋಪಾಲ್, ಅವನ ಸಹೋದರ, ನೆರೆಹೊರೆಯ ಅವನ ಇಬ್ಬರು ಮೂವರು ಸ್ನೇಹಿತರು ಮತ್ತು ಶ್ರೀರಾಮಕೃಷ್ಣರೊಡನೆ ಬಂದಿದ್ದ ಇಬ್ಬರು ಮೂವರು ಭಕ್ತರು ಅಲ್ಲಿದ್ದರು. ಶ್ರೀರಾಮಕೃಷ್ಣರು ಯಾರನ್ನು 'ಹುಟ್ಕೋ' ಎಂದು ಕರೆಯುತ್ತಿದ್ದರೊ ಆ ಚಿಕ್ಕಗೋಪಾಲನು ಅಲ್ಲಿದ್ದನು. ಹೀಗೆ ಆಗ ಶ್ರೀರಾಮಕೃಷ್ಣರೊಡನೆ ಕೇವಲ ಹತ್ತು ಹನ್ನೆರಡು ಜನ ಭಕ್ತರು ಇದ್ದರು. ಇದರಿಂದ ನಾವು ಭಾವಿಸಿದೆವು. ಇಂದಿನ ಸಮ್ಮೇಳನ ಎಲ್ಲರಿಗಾಗಿಯೂ ಅಲ್ಲ, ನಾವು ಆ ರೀತಿ ಹೋಗುವುದು ಅಸಂಗತವಾಗಬಹುದು ಎಂದು. ಆದ್ದರಿಂದ ಎಲ್ಲರನ್ನೂ ಊಟಕ್ಕೆ ಕರೆಯುವುದಕ್ಕೆ ಸ್ವಲ್ಪ ಮುಂಚೆಯೆ ಅಲ್ಲಿಂದ ನುಸುಳಿಕೊಂಡುಬಿಡಬೇಕೆಂದು ನಾವು ನಿರ್ಧರಿಸಿದೆವು. ನಾವು ಕೊಠಡಿಯನ್ನು ಪ್ರವೇಶಿಸಿ ಶ್ರೀರಾಮಕೃಷ್ಣರ ಪಾದಪದ್ಮಕ್ಕೆ ವಂದಿಸಿದೆವು. "ನೀವು ಇಲ್ಲಿಗೆ ಹೇಗೆ ಬಂದಿರಿ ?" ಎಂಬ ಶ್ರೀರಾಮಕೃಷ್ಣರ ಪ್ರಶ್ನೆಗೆ ನಾವು ಉತ್ತರಿಸಿದೆವು : "ನೀವು ಇಲ್ಲಿಗೆ ಬರುತ್ತೀರೆಂದು ನಮಗೆ ಸುದ್ದಿ ಸಿಕ್ಕಿತು. ಆದ್ದರಿಂದ ನಿಮ್ಮನ್ನು ನೋಡಲು ಬಂದವು." ಈ ಉತ್ತರದಿಂದ ಶ್ರೀರಾಮಕೃಷ್ಣರು ಪ್ರಸನ್ನರಾಗಿ ನಮಗೆ ಕುಳಿತುಕೊಳ್ಳಲು ಹೇಳಿದರು. ಆಗ ನಿಶ್ಚಿಂತೆಯಿಂದ ನಾವು ಕುಳಿತು ಶ್ರೀರಾಮಕೃಷ್ಣರ ಉಪದೇಶವನ್ನು ಕೇಳತೊಡಗಿದೆವು.

2. ಶ್ರೀರಾಮಕೃಷ್ಣರ ಪುಣ್ಯದರ್ಶನವಾದುದು ಇತ್ತೀಚೆಗೆ ಮಾತ್ರ. ಆದರೂ ಪ್ರಥಮ ದಿನದಿಂದಲೇ ಅವರ ಅಮೃತಮಯವಾದ ವಾಣಿಗೆ ನಾವು ಆಕರ್ಷಿತರಾದೆವು. ನಮಗೆ ಆಗ ಇದರ ಕಾರಣ ತಿಳಿದುಬಂದಿರಲಿಲ್ಲ. ಅವರ ಉಪದೇಶದ ವಿಧಾನದಲ್ಲಿ ಒಂದು ಹೊಸತನವಿತ್ತು ಎಂಬುದು ನಮಗೀಗ ಅರ್ಥವಾಗುತ್ತಿದೆ. ಅದರಲ್ಲಿ ಪಾಂಡಿತ್ಯದ ಪ್ರದರ್ಶನವಿರಲಿಲ್ಲ, ತರ್ಕದ ಕಸರತ್ತು ಇರಲಿಲ್ಲ, ಒಳ್ಳೆಯ ಪದಾವಳಿಗಳ ಅಲಂಕಾರವಿರಲಿಲ್ಲ, ಸಾಮಾನ್ಯ ಭಾವನೆಯನ್ನು ಸಂಕೀರ್ಣಗೊಳಿಸುವ ಕ್ಲಿಷ್ಟ ಶಬ್ದಗಳಿರಲಿಲ್ಲ. ಹಿಂದಿನ ಸೂತ್ರಕಾರರಂತೆ ಆಳವಾದ ವಿಚಾರಗಳನ್ನು ಅತ್ಯಂತ ಕಡಿಮೆ ಶಬ್ದಗಳಲ್ಲಿ ವ್ಯಕ್ತಪಡಿಸಿ ಅವು

ಅರ್ಥವಾಗದಂತೆ ಮಾಡುವ ಪ್ರಯತ್ನವಿರಲಿಲ್ಲ. ತಾವು ವ್ಯಕ್ತಪಡಿಸಿದ ಭಾವನೆಗಳ ಜೀವಂತ ಪ್ರತೀಕವಾಗಿದ್ದರು. ತಮ್ಮ ಭಾವನೆಗಳನ್ನು ವ್ಯಕ್ತಪಡಿಸುವಾಗ ಅವರು ಎಂದೂ ಭಾಷೆಯ ಕಡೆ ಗಮನಕೊಟ್ಟಿದ್ದರೆಂದು ನಮಗನಿಸುವುದಿಲ್ಲ. ಶ್ರೀರಾಮಕೃಷ್ಣರು ಪ್ರತಿಯೊಬ್ಬರಿಗೂ ಚಿರಪರಿಚಿತವಾದ ವಸ್ತುಗಳನ್ನು ಮತ್ತು ಘಟನೆಗಳನ್ನು ಉಪಮಾನ ವಾಗಿಟ್ಟುಕೊಂಡು ತಾವು ಹೇಳುವ ಭಾವನೆಗಳನ್ನು ಚಿತ್ರರೂಪದಲ್ಲಿ ಕೇಳುಗರ ಮುಂದಿ ರಿಸುತ್ತಿದ್ದರು. ಒಮ್ಮೆ ಅವರ ಮಾತನ್ನು ಕೇಳಿದವರೂ ಕೂಡ ಅವರ ಆಂತರಿಕ ಭಾವನೆ ಗಳು ಹೇಗೆ ಶ್ರೋತೃಗಳ ಹೃದಯವನ್ನು ಪ್ರವೇಶಿಸುತ್ತಿದ್ದವು ಎಂಬುದನ್ನು ಅನುಭವಿಸಿ ರುವರು. ಅವರು ಹೇಳುತ್ತಿದ್ದ ಮಾತುಗಳ ಸತ್ಯ ತಮ್ಮ ಕಣ್ಮುಂದೆಯೆ ಪ್ರತ್ಯಕ್ಷವಾಗಿ ಅಭಿನಯಿಸಲ್ಪಟ್ಟಂತೆ ಶ್ರೋತೃಗಳಿಗೆ ಅನಿಸುತ್ತಿತ್ತು ಮತ್ತು ಆ ವಿಚಾರದಲ್ಲಿ ಅವರಿಗೆ ಸ್ವಲ್ಪವೂ ಸಂದೇಹ ಉಳಿಯುತ್ತಿರಲಿಲ್ಲ. ಈ ಎಲ್ಲ ಚಿತ್ರಗಳು ಶ್ರೀರಾಮಕೃಷ್ಣರ ಮನ ಸ್ಸಿನಲ್ಲಿ ಸಂದರ್ಭಕ್ಕೆ ಉಚಿತವಾಗಿ ತಕ್ಷಣ ಮೂಡಿ ಬರುತ್ತಿದ್ದವು. ಇದಕ್ಕೆ ಕಾರಣ ಅವ ರಿಗಿದ್ದ ಅಪೂರ್ವ ಸ್ಮೃತಿಶಕ್ತಿ, ಅದ್ಭುತ ಮೇಧಾಶಕ್ತಿ, ತೀಕ್ಷ್ಣ ಪರಿಶೀಲನಾಶಕ್ತಿ, ಅಪೂರ್ವ ವಾದ ಪ್ರಸ್ತುತ ಪ್ರಜ್ಞೆ. ಆದರೆ ಶ್ರೀರಾಮಕೃಷ್ಣರು ಮಾತ್ರ ಇದೆಲ್ಲಾ ಜಗನ್ಮಾತೆಯ ಕೃಪೆಯ ಫಲ ಎಂದು ಹೇಳುತ್ತಿದ್ದರು. "ಯಾರು ತಾಯಿಯನ್ನು ಸಂಪೂರ್ಣ ಆಶ್ರಯಿಸು ತ್ತಾರೋ ಅವರ ಒಳಗಡೆ ಅವಳೇ ಕುಳಿತು ಏನು ಹೇಳಬೇಕೊ ಅದನ್ನು ನಿಃಸಂದೇಹ ಪೂರ್ವಕವಾಗಿ ತೋರಿಸಿಕೊಡುವಳು. ಸ್ವಯಂ ಜಗನ್ಮಾತೆಯೆ ಈ ರೀತಿ ಮಾಡುತ್ತಿರುವು ದರಿಂದ ಅವರ ಜ್ಞಾನಭಂಡಾರ ಎಂದೂ ಖಾಲಿಯಾಗುವುದೇ ಇಲ್ಲ. ತಾಯಿಯು ಅವರ ಒಳಗಡೆ ಜ್ಞಾನರಾಶಿಯನ್ನು ತಳ್ಳಿಕೊಡುತ್ತಾ, ಅದು ಯಾವಾಗಲೂ ಪೂರ್ಣವಾಗಿರು ವಂತೆ ಮಾಡುವಳು. ಅವರು ಎಷ್ಟೇ ಖರ್ಚು ಮಾಡಿದರೂ, ಹೇಗೇ ಖರ್ಚು ಮಾಡಿದರೂ ಅದು ಎಂದೂ ಖಾಲಿಯಾಗುವುದಿಲ್ಲ". ಈ ವಿಷಯವನ್ನು ಸ್ಪಷ್ಟೀಕರಿಸುತ್ತಾ ಒಂದು ದಿನ ಅವರು ಈ ಕೆಳಗಿನ ಘಟನೆಯನ್ನು ನಮಗೆ ಹೇಳಿದರು.

3. ದಕ್ಷಿಣೇಶ್ವರದ ಕಾಳೀ ಮಂದಿರದ ಉತ್ತರ ಭಾಗಕ್ಕೆ ಸರ್ಕಾರದ ಬಂದೂಕ ಕಾರ್ಖಾನೆಯೊಂದಿತ್ತು. ಸಿಖ್ ಸೈನಿಕರು ಅಲ್ಲಿ ಪಹರೆ ನೀಡುವುದಕ್ಕೆ ಇದ್ದರು. ಅವರೆಲ್ಲ ರಿಗೂ ಶ್ರೀರಾಮಕೃಷ್ಣರ ಮೇಲೆ ಭಕ್ತಿ, ಕೆಲವೊಮ್ಮೆ ಅವರನ್ನು ತಮ್ಮ ವಾಸಸ್ಥಾನಕ್ಕೆ ಕರೆದುಕೊಂಡು ಹೋಗಿ ತಮ್ಮ ಧಾರ್ಮಿಕ ಸಂದೇಹಗಳನ್ನು ನಿವಾರಿಸಿಕೊಳ್ಳುತ್ತಿದ್ದರು. ಶ್ರೀರಾಮಕೃಷ್ಣರು ಹೇಳುತ್ತಾರೆ : "ಒಂದು ದಿನ ಅವರು ಪ್ರಶ್ನೆಯೊಂದನ್ನು ಹಾಕಿದರು, 'ಭಗವತ್ಸಾಕ್ಷಾತ್ಕಾರವಾಗುವ ಹಾಗೆ ಈ ಪ್ರಪಂಚದಲ್ಲಿ ವಾಸಿಸುವುದು ಹೇಗೆ ?' ಎಂದು. ನನ್ನ ಮನಸ್ಸಿಗೆ ಕೂಡಲೇ ಅಕ್ಕಿ ಮಾಡುವ ಯಂತ್ರದ ಚಿತ್ರ ಬಂದುಬಿಟ್ಟಿತು. ಬತ್ತವನ್ನು ಒಬ್ಬ ವ್ಯಕ್ತಿಯು ನಿರಂತರವಾಗಿ ಒರಳಿಗೆ ತಳ್ಳುತ್ತಿರುತ್ತಾನೆ ಮತ್ತು ಒನಕೆಯು ಅದರ ಮೇಲೆ ಬೀಳುತ್ತಿರುತ್ತದೆ. ಆ ಚಿತ್ರ ಮನಸ್ಸಿಗೆ ಬಂದಕೂಡಲೆ ಮನುಷ್ಯನು ಅಷ್ಟೇ ಎಚ್ಚ ರಿಕೆಯಿಂದ ಪ್ರಪಂಚದಲ್ಲಿ ಬಾಳಬೇಕು ಎಂದು ಜಗನ್ಮಾತೆಯು ವಿವರಿಸುತ್ತಿರುವಳು ಎಂದು ಗೊತ್ತಾಯಿತು. ಒರಳಿನ ಪಕ್ಕದಲ್ಲಿ ಕುಳಿತು ಬತ್ತವನ್ನು ತಳ್ಳುತ್ತಿರುವವನು ಒನಕೆಯು

ತನ್ನ ಕೈಯ ಮೇಲೆ ಬೀಳದಂತೆ ಎಚ್ಚರಿಕೆಯಿಂದಿರುತ್ತಾನೆ. ಹಾಗೆಯೆ ಪ್ರಾಪಂಚಿಕ ಕಾರ್ಯದಲ್ಲಿ ತೊಡಗಿರುವವನು ಅವುಗಳಿಗೆ ತಾನು ಅಂಟಿಕೊಳ್ಳದಂತೆ ಎಚ್ಚರಿಕೆಯಿಂದಿರಬೇಕು. ಪ್ರಾಪಂಚಿಕ ಕಾರ್ಯಗಳು ತನ್ನದಲ್ಲ ಎಂಬ ಪ್ರಜ್ಞೆ ಅವನಿಗಿರಬೇಕು. ಆಗಲೇ ಹೊಡೆತಕ್ಕೊಳಗಾಗದೆ ಬಂಧನದಿಂದ ಪಾರಾಗಬಹುದು. ಈ ಚಿತ್ರ ಮನಸ್ಸಿಗೆ ಬಂದ ಕೂಡಲೇ ಜಗನ್ಮಾತೆಯು ಈ ವಿಷಯವನ್ನು ವಿವರಿಸಿದಳು ಮತ್ತು ನಾನದನ್ನು ಅವರಿಗೆ ಹೇಳಿದೆ. ಅವರಿಗೂ ಅದನ್ನು ಕೇಳಿ ತುಂಬಾ ಸಂತೋಷವಾಯಿತು. ನಾನು ಜನರೊಡನೆ ಮಾತನಾಡುವಾಗ ಇಂಥಾ ಚಿತ್ರಗಳು ಮನಸ್ಸಿಗೆ ಬರುತ್ತವೆ."

4. ಶ್ರೀರಾಮಕೃಷ್ಣರ ಉಪದೇಶದ ವಿಧಾನದಲ್ಲಿ ಕಂಡು ಬರುವ ಇನ್ನೊಂದು ಲಕ್ಷಣವೇನೆಂದರೆ ಅನಾವಶ್ಯಕ ಶಬ್ದಗಳನ್ನು ಉಪಯೋಗಿಸಿ ಕೇಳುಗರ ಮನಸ್ಸನ್ನು ಗೊಂದಲಕ್ಕೀಡು ಮಾಡುತ್ತಿರಲಿಲ್ಲ. ಕೇಳುಗರ ಪ್ರಶ್ನೆಯ ವಿಷಯವನ್ನೂ ಉದ್ದೇಶವನ್ನೂ ಸರಿಯಾಗಿ ಗ್ರಹಿಸಿಕೊಂಡು ಕೆಲವೇ ಸಿದ್ಧಾಂತ ವಾಕ್ಯಗಳಲ್ಲಿ ಅವರು ಉತ್ತರ ನೀಡುತ್ತಿದ್ದರು. ಅದು ಅವರಿಗೆ ಸರಿಯಾಗಿ ಹೃದ್ಗತವಾಗಲೆಂದು ಹಿಂದೆ ಹೇಳಿದ ರೀತಿಯಲ್ಲಿ ಉಪಮಾನಗಳನ್ನು ನೀಡುತ್ತಿದ್ದರು. ಉಪದೇಶ ವಿಧಾನದ ಈ ವಿಶೇಷತ್ವವನ್ನು ಸಿದ್ಧಾಂತವಾಕ್ಯ ಎಂದು ನಾವು ಕರೆಯುವುದಕ್ಕೆ ಒಂದು ಕಾರಣವಿದೆ. ಪ್ರಶ್ನೆಗೆ ಸಂಬಂಧಿಸಿದ ವಿಷಯದಲ್ಲಿ ಯಾವುದು ತಮಗೆ ಸತ್ಯವೆಂದು ತೋರುತ್ತಿತ್ತೋ ಅದನ್ನೇ ಅವರು ಉತ್ತರ ರೂಪದಲ್ಲಿ ಹೇಳುತ್ತಿದ್ದರು ಮತ್ತು ಆ ವಿಷಯದಲ್ಲಿ ಮತ್ತೆ ಯಾವುದೇ ರೀತಿಯ ಸಂದೇಹಕ್ಕೆ ಅವಕಾಶ ನಿಡುತ್ತಿರಲಿಲ್ಲ. ಈ ವಿಷಯವನ್ನು ಅವರು ಬಾಯಲ್ಲಿ ಹೇಳದೇ ಇದ್ದರೂ ಅವರು ಎಷ್ಟು ದೃಢವಿಶ್ವಾಸದಿಂದ ಹೇಳುತ್ತಿರುವರು ಎಂಬುದು ಕೇಳುಗರ ಮನಸ್ಸಿಗೆ ಸುಸ್ಪಷ್ಟವಾಗುತ್ತಿತ್ತು. ಕೆಲವರಿಗೆ ಹಿಂದಿನ ಶಿಕ್ಷಣ ಸಂಸ್ಕಾರಗಳ ಪರಿಣಾಮವಾಗಿ ಶ್ರೀರಾಮಕೃಷ್ಣರ ಅನುಭವಪೂರ್ಣ ವಿಚಾರಗಳನ್ನು ಗ್ರಹಿಸಲಾಗದೆ ಅದಕ್ಕೆ ವಿರುದ್ಧವಾಗಿ ಪ್ರಶ್ನೆ ಹಾಕುತ್ತಿದ್ದರು. ಆಗ ಶ್ರೀರಾಮಕೃಷ್ಣರು ಹೇಳುತ್ತಿದ್ದರು: "ನಾನು ಹೇಳುವುದನ್ನು ಹೇಳಿದ್ದೇನೆ, ನೀವದರಲ್ಲಿ ತಲೆ ಬಾಲ ಬಿಟ್ಟು ಸ್ವೀಕರಿಸಬಹುದು." ಹೀಗೆ ಹೇಳಿ ಸುಮ್ಮನಾಗಿಬಿಡುತ್ತಿದ್ದರು. ಶ್ರೀರಾಮಕೃಷ್ಣರು ಎಂದೂ ಕೇಳುಗರ ಸ್ವಾತಂತ್ರ್ಯದಲ್ಲಿ ಹಸ್ತಕ್ಷೇಪ ಮಾಡಿ ಅವರ ಭಾವಭಂಗ ಮಾಡುತ್ತಿರಲಿಲ್ಲ. ಭಗವದಿಚ್ಛೆಯಿಂದ ಕೇಳುಗನು ಉನ್ನತ ಸ್ಥಿತಿಯನ್ನು ಮುಟ್ಟದೆ ಪ್ರಶ್ನೋಕ್ತ ವಿಷಯದ ಯಥಾರ್ಥ ಸಮಾಧಾನ ದೊರೆಯುವುದು ಅಸಾಧ್ಯ. ಇದರಿಂದಾಗಿಯೆ ಅವರು ಹಾಗೆ ಸುಮ್ಮನಾಗುತ್ತಿರಬಹುದು.

ಶ್ರೀರಾಮಕೃಷ್ಣರು ತಮ್ಮ ಸಿದ್ಧಾಂತವಾಕ್ಯದ ಸ್ಪಷ್ಟೀಕರಣಕ್ಕಾಗಿ ಕೇವಲ ಉಪಮಾನಗಳನ್ನೇ ನೀಡಿ ಸುಮ್ಮನಾಗುತ್ತಿರಲಿಲ್ಲ. ಪ್ರಶ್ನೆಗೆ ಸಂಬಂಧಿಸಿದ ಉತ್ತರವನ್ನು ಹೇಳುತ್ತಿರುವಾಗ ಇತರ ಪ್ರತಿಷ್ಠಿತ ಸಾಧಕರುಗಳು ಆ ವಿಷಯದಲ್ಲಿ ಏನು ಹೇಳುತ್ತಾರೆ ಎಂಬುದನ್ನೂ ಪ್ರಸ್ತಾಪಿಸುತ್ತಿದ್ದರು. ಕೆಲವೊಮ್ಮೆ ಅಂಥಾ ಸಾಧಕರುಗಳು ರಚಿಸಿದ ಹಾಡುಗಳನ್ನು ಉದಾಹರಿಸುತ್ತಿದ್ದರು, ಮತ್ತೆ ಕೆಲವೊಮ್ಮೆ ಶಾಸ್ತ್ರ ವಾಕ್ಯಗಳನ್ನು ಉದಾ

ಹರಿಸುತ್ತಿದ್ದರು. ಇದರಿಂದಾಗಿ ಅವರು ಹೇಳಿದ ವಿಚಾರದಲ್ಲಿ ಯಾವ ಸಂದೇಹಕ್ಕೂ ಎಡೆ ಇರುತ್ತಿರಲಿಲ್ಲ ಮತ್ತು ಅದನ್ನು ಕೇಳಿದವನು ದೃಢವಿಶ್ವಾಸದಿಂದ ಸ್ವೀಕರಿಸಿ ತನ್ನ ಜೀವನವನ್ನು ಅದಕ್ಕನುಗುಣವಾಗಿ ರೂಪಿಸಿಕೊಳ್ಳುವುದರಲ್ಲಿ ಪ್ರವೃತ್ತನಾಗುತ್ತಿದ್ದನು.

5. ಇಲ್ಲಿ ಇನ್ನೊಂದು ವಿಷಯವನ್ನೂ ಹೇಳುವುದು ಆವಶ್ಯಕ. ಭಕ್ತಿ ಮತ್ತು ಜ್ಞಾನ ಈ ಎರಡು ಮಾರ್ಗಗಳ ಚರಮಾವಸ್ಥೆಯಲ್ಲಿಯೇ ಸಾಧಕನು ಉಪಾಸ್ಯದೊಡನೆ ತನ್ನ ಅಭಿನ್ನತೆಯನ್ನು ಪಡೆಯುವುದು–ಎಂಬ ಈ ವಿಷಯವನ್ನು ಶ್ರೀರಾಮಕೃಷ್ಣರು ನಮಗೆ ಮತ್ತೆ ಮತ್ತೆ ಹೇಳುತ್ತಿದ್ದರು. "ಶುದ್ಧಾ ಭಕ್ತಿ ಮತ್ತು ಶುದ್ಧ ಜ್ಞಾನ ಒಂದೇ," "ಅಲ್ಲಿ ಎಲ್ಲಾ ನರಿಗಳು ಒಂದೇ ರೀತಿ ಕೂಗುತ್ತವೆ"–ಇತ್ಯಾದಿ ಉಕ್ತಿಗಳನ್ನು ಇದಕ್ಕೆ ಪ್ರಮಾಣವಾಗಿ ಉದಾಹರಿಸಬಹುದು. ಅದ್ವೈತಜ್ಞಾನವೇ ಚರಮವೆಂಬುದು ಅವರ ಅಭಿಪ್ರಾಯವಾದರೂ ಸಂಸಾರದಲ್ಲಿರುವ ಮಾನವ ಸಾಧಾರಣರಿಗಾಗಿ ವಿಶಿಷ್ಟಾದ್ವೈತ ತತ್ತ್ವದ ವಿಷಯಗಳನ್ನೇ ಯಾವಾಗಲೂ ಉಪದೇಶಿಸುತ್ತಿದ್ದರು. ಕೆಲವೊಮ್ಮೆ ದ್ವೈತ ಭಾವದಲ್ಲಿ ಭಗವಂತನನ್ನು ಸ್ಮರಿಸುವ ವಿಷಯವನ್ನು ಹೇಳುತ್ತಿದ್ದರು. ಭಗವಂತನಲ್ಲಿ ಪ್ರೀತಿಯಿಲ್ಲದೆ ಉಚ್ಚ ಆಧ್ಯಾತ್ಮಿಕ ಅನುಭವವನ್ನೂ ಪಡೆಯದೆ ಬಾಯಲ್ಲಿ ಮಾತ್ರ ಅದ್ವೈತ ಅಥವಾ ವಿಶಿಷ್ಟಾದ್ವೈತ ತತ್ತ್ವಗಳನ್ನು ಹೇಳುತ್ತಾ ತರ್ಕ ವಿತರ್ಕದಲ್ಲಿ ತೊಡಗಿರುವವರನ್ನು ಕಂಡರೆ ಆವರಿಗಾಗುತ್ತಿರಲಿಲ್ಲ. ಕೆಲವೊಮ್ಮೆ ಕಠೋರವಾಕ್ಯಗಳಿಂದ ಅವರನ್ನು ನಿಂದಿಸಲೂ ಹಿಂಜರಿಯುತ್ತಿರಲಿಲ್ಲ. ನಮ್ಮ ಸ್ನೇಹಿತನಾದ ವೈಕುಂಠನಾಥ ಸಂನ್ಯಾಲನನ್ನು ಒಂದು ದಿನ "ಪಂಚದಶಿ ಗಿಂಚದಶಿ ಓದಿರುವೆಯಾ ?" ಎಂದು ಪ್ರಶ್ನಿಸಿದರು. ವೈಕುಂಠನು ಉತ್ತರವಾಗಿ ಅವುಗಳೇನೂ ನನಗೆ ಗೊತ್ತಿಲ್ಲ ಎಂದನು. ಅದನ್ನು ಕೇಳಿಯೇ ಶ್ರೀರಾಮಕೃಷ್ಣರು ಹೇಳಿದರು : "ಬಚಾವ್, ಕೆಲವು ಹುಡುಗರು ಇಂಥ ಪುಸ್ತಕಗಳನ್ನು ಓದಿ ತಲೆಕೆಡಿಸಿಕೊಂಡು ಇಲ್ಲಿಗೆ ಬರುತ್ತಾರೆ. ಅವರೇನೂ ಸಾಧನೆ ಮಾಡುವುದಿಲ್ಲ. ಕೇವಲ ವಾದ ಮಾಡಲು ಬರುತ್ತಾರೆ. ಅದರಿಂದ ನನಗೆ ಯಾತನೆಯಾಗುತ್ತದೆ."

6. ಮೇಲೆ ಹೇಳಿದ ಮಾತುಗಳನ್ನು ಪ್ರಸ್ತಾಪಿಸಿದುದಕ್ಕೆ ಒಂದು ಪ್ರಯೋಜನವಿದೆ. ಇಂದು ಜಯಗೋಪಾಲ್ ಸೇನನ ಮನೆಯಲ್ಲಿ ಒಬ್ಬ ವ್ಯಕ್ತಿಯು "ಸಂಸಾರದಲ್ಲಿ ನಾವು ಹೇಗೆ ಇದ್ದರೆ ಭಗವಂತನ ಕೃಪೆಗೆ ಪಾತ್ರರಾಗಬಹುದು ?" ಎಂಬ ಪ್ರಶ್ನೆಯನ್ನು ಶ್ರೀರಾಮಕೃಷ್ಣರಿಗೆ ಕೇಳಿದನು. ಅದಕ್ಕೆ ಶ್ರೀರಾಮಕೃಷ್ಣರು ವಿಶಿಷ್ಟಾದ್ವೈತಿಯಂತೆ ಉಪದೇಶ ನೀಡಿದರು. ಮಧ್ಯೆ ಮಧ್ಯೆ ಮೂರು ನಾಲ್ಕು ಜಗನ್ಮಾತೆಗೆ ಸಂಬಂಧಿಸಿದ ಹಾಡುಗಳನ್ನು ಹಾಡಿ, ಆ ಪ್ರಶ್ನೆಗೆ ಉತ್ತರವನ್ನು ನೀಡಿದರು. ಅವರ ಮಾತಿನ ಸಾರಾಂಶವನ್ನು ಈ ಕೆಳಗೆ ಕೊಡುತ್ತೇವೆ :

"ಮಾನವನು ಎಲ್ಲಿಯವರೆಗೆ ಸಂಸಾರವು ನನ್ನದು ಎಂದು ಭಾವಿಸಿ ಕರ್ಮವನ್ನು ಮಾಡುತ್ತಾನೊ ಅಲ್ಲಿಯವರೆಗೆ ಅದಕ್ಕೆ ಬದ್ಧನಾಗಿ ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಇಷ್ಟಪಟ್ಟರೂ ಅದರಿಂದ ಪಾರಾಗುವ ಹಾದಿಯನ್ನು ಕಾಣಲಾರ." ಹೀಗೆ ಹೇಳಿ ಶ್ರೀರಾಮಕೃಷ್ಣರು ಹಾಡತೊಡಗಿದರು : "ಮಹಾಮಾಯೆಯ ಮಾಯೆ ಎಂಥಾ

ಅದ್ಭುತವಾದುದು. ಅದು ಇಡೀ ಜಗತ್ತನ್ನೇ ಮೋಹಗೊಳಿಸಿದೆ. ಬ್ರಹ್ಮ ವಿಷ್ಣುಗಳೇ ಅಚೈತನ್ಯರಾಗಿಬಿಟ್ಟಿದ್ದಾರೆ. ಇನ್ನು ಏನೂ ತಿಳಿಯದ ಜೀವಿಗಳ ಪಾಡೇನು? ಆದ್ದರಿಂದ ಈ ಕ್ಷಣಿಕ ಜಗತ್ತನ್ನು ಭಗವಂತನದೆಂದು ತಿಳಿದು ಅದಕ್ಕನುಗುಣವಾಗಿ ಪ್ರತಿಯೊಂದು ಕಾರ್ಯವನ್ನು ನೆರವೇರಿಸಬೇಕು. ಒಂದು ಕೈಯಿಂದ ಅವನ ಪಾದಪದ್ಮವನ್ನು ಘಟ್ಟಿಯಾಗಿ ಹಿಡಿದುಕೊಂಡು ಮತ್ತೊಂದು ಕೈಯಿಂದ ಕೆಲಸ ಮಾಡುತ್ತಾ ಹೋಗಬೇಕು. ಈ ಪ್ರಪಂಚದ ವಸ್ತುಗಳು, ವ್ಯಕ್ತಿಗಳು ಎಲ್ಲಾ ಅವನವೆ, ನನ್ನದಲ್ಲ ಎಂದು ತಿಳಿಯಬೇಕು. ವ್ಯಕ್ತಿಗೆ ಇದನ್ನು ಮಾಡಲು ಸಾಧ್ಯವಾದರೆ ಪ್ರಾಪಂಚಿಕ ಆಸಕ್ತಿಯಿಂದ ಕಷ್ಟ ಪಡುವುದಿಲ್ಲ. ಆಗ ತಾನು ಮಾಡುತ್ತಿರುವುದೆಲ್ಲ ಭಗವಂತನದೆಂಬ ಭಾವನೆ ಬರುತ್ತದೆ ಮತ್ತು ಮನಸ್ಸು ಅವನ ಕಡೆಯೆ ಹೋಗುತ್ತದೆ." ಈ ಭಾವನೆಯು ಸರಿಯಾಗಿ ಮನಸ್ಸಿನಲ್ಲಿ ನಾಟುವಂತೆ ಮಾಡಲು ಶ್ರೀರಾಮಕೃಷ್ಣರು ಹಾಡಿದರು: "ಓ ನನ್ನ ಮನಸ್ಸೆ, ನಿನಗೆ ಕೃಷಿ ಮಾಡುವುದು ತಿಳಿಯದು" ಇತ್ಯಾದಿ. ಹಾಗೂ ಹಾಡು ಮುಗಿದ ಮೇಲೆ ಅವರು ಮುಂದುವರಿಸಿದರು : "ಹೀಗೆ ಭಗವಂತನನ್ನು ಆಶ್ರಯಿಸಿಕೊಂಡು ಸಂಸಾರವನ್ನು ನಡೆಸಿದರೆ ಸಂಸಾರದ ಪ್ರತಿಯೊಂದು ವಸ್ತು ಮತ್ತು ವ್ಯಕ್ತಿಗಳು ಭಗವಂತನ ಅಂಶ ಎಂಬ ವಿಶ್ವಾಸ ಉಂಟಾಗುತ್ತದೆ. ಆಗ ಸಾಧಕನು ತಂದೆ ತಾಯಿಯರನ್ನು ದೇವದೇವಿ ಎಂಬ ಭಾವನೆಯಿಂದ ಸೇವೆ ಮಾಡುತ್ತಾನೆ. ಪುತ್ರ ಮತ್ತು ಪುತ್ರಿಯರಲ್ಲಿ ಬಾಲಗೋಪಾಲ ಮತ್ತು ಜಗದಂಬೆಯರ ಆವಿರ್ಭಾವವನ್ನು ಕಾಣುತ್ತಾನೆ. ಇತರ ಎಲ್ಲರನ್ನೂ ನಾರಾಯಣ ಅಂಶವೆಂದು ತಿಳಿದು ಶ್ರದ್ಧಾಭಕ್ತಿಯಿಂದ ಅವರೊಡನೆ ವ್ಯವಹರಿಸುತ್ತಾನೆ. ಈ ರೀತಿಯ ಭಾವವನ್ನು ಇಟ್ಟುಕೊಂಡು ಯಾರು ಸಂಸಾರವನ್ನು ನಡೆಸುತ್ತಾರೊ ಅವರೆ ಆದರ್ಶ ಸಂಸಾರಿಗಳು. ಮೃತ್ಯುಭಯ ಅವರ ಮನಸ್ಸಿನಿಂದ ತೊಲಗಿ ಹೋಗುವುದು. ಅಂಥ ವ್ಯಕ್ತಿಗಳು ಬಹಳ ವಿರಳವಾದರೂ ಅಂಥವರು ಇಲ್ಲವೇ ಇಲ್ಲ ಎಂದು ಹೇಳುವಂತಿಲ್ಲ". ಈ ರೀತಿಯ ಆದರ್ಶವನ್ನು ಪಾಲಿಸುವ ಉಪಾಯ ಹೇಗೆ ಎಂಬುದನ್ನು ಶ್ರೀರಾಮಕೃಷ್ಣರು ಮುಂದೆ ತಿಳಿಸಿದರು : "ವಿವೇಕ ಬುದ್ಧಿಯನ್ನು ಆಶ್ರಯಿಸಿ ಪ್ರತಿಯೊಂದು ಕರ್ಮವನ್ನೂ ಆಚರಿಸಬೇಕು, ಮಧ್ಯೆ ಮಧ್ಯೆ ಸಂಸಾರದ ಕೋಲಾಹಲದಿಂದ ದೂರ ಹೋಗಿ ಏಕಾಗ್ರ ಮನಸ್ಸಿನಿಂದ ಸಾಧನೆ ಭಜನೆ ಮಾಡುತ್ತಾ ಭಗವಂತನನ್ನು ಪಡೆಯಲು ಪ್ರಯತ್ನಿಸಬೇಕು. ಹಾಗೆ ಮಾಡಿದಾಗಲೇ ಮೇಲೆ ಹೇಳಿದ ಆದರ್ಶವನ್ನು ಜೀವನದಲ್ಲಿ ಸಫಲಗೊಳಿಸಲು ಸಾಧ್ಯವಾಗುತ್ತದೆ." ಈ ರೀತಿ ಹೇಳಿ ಶ್ರೀರಾಮಕೃಷ್ಣರು ರಾಮಪ್ರಸಾದನ ಈ ಕೆಳಗಿನ ಹಾಡನ್ನು ಹಾಡಿದರು: "ಓ ಮನಸ್ಸೆ, ತಿರುಗಾಡಲು ಹೋಗೋಣ ಬಾ. ಕಾಳೀಕಲ್ಪತರುವಿನ ಕೆಳಗೆ ನಾಲ್ಕು ಫಲಗಳು (ಕಾಮ, ಅರ್ಥ, ಧರ್ಮ, ಮೋಕ್ಷ) ದೊರೆಯುವುವು." ಅವರು ವಿವೇಕ ಬುದ್ಧಿ ಎಂಬ ಶಬ್ದವನ್ನು ಉಪಯೋಗಿಸಿದಾಗ ಅದರ ಅರ್ಥವನ್ನು ವಿವರಿಸಿದರು : "ಇಂಥಾ ಬುದ್ಧಿಯ ಸಹಾಯದಿಂದ ಸಾಧಕನು ಈಶ್ವರನೊಬ್ಬನೇ ನಿತ್ಯ ಮತ್ತು ಸಾರ ವಸ್ತು ಮತ್ತು ರೂಪರಸಾದಿ ಸಮಷ್ಟಿ ಭೂತ ಜಗತ್ತು ಅನಿತ್ಯ ಮತ್ತು ಅಸಾರ ಎಂದು ತಿಳಿಯುತ್ತಾನೆ. ಈ ರೀತಿ ನಿತ್ಯವಸ್ತುವಾದ

ಈಶ್ವರನನ್ನು ತಿಳಿದ ಮೇಲೆ ಆ ಬುದ್ಧಿಯೆ ಮತ್ತೆ ಅವನಿಗೆ ತಿಳಿಸಿಕೊಡುತ್ತದೆ, ಯಾವನು ನಿತ್ಯನೊ ಅವನೆ ಲೀಲೆಗಾಗಿ ಜೀವ ಮತ್ತು ಜಗದ್ರೂಪದಲ್ಲಿ ಮೂರ್ತೀಭವಿಸುವನು ಎಂದು. ಈ ರೀತಿ ತಿಳಿದ ಮೇಲೆ ಸಾಧಕನು ಭಗವಂತನನ್ನು ನಿತ್ಯ ಮತ್ತು ಲೀಲಾಮಯ ಎಂಬ ಎರಡೂ ದೃಷ್ಟಿಯಿಂದ ನೋಡುತ್ತಾನೆ.

7. ಅನಂತರ ಆಚಾರ್ಯ ಚಿರಂಜೀವ ಶರ್ಮನು ಏಕತಂತಿ ವಾದ್ಯದೊಡನೆ "ಓ ತಾಯೆ, ನನ್ನನ್ನು ಹುಚ್ಚನನ್ನಾಗಿ ಮಾಡು" ಎಂಬ ಹಾಡನ್ನು ಹಾಡತೊಡಗಿದನು. ಎಲ್ಲರೂ ಅವನೊಡನೆ ಧ್ವನಿಗೂಡಿಸಿದರು. ಹೀಗೆ ಕೀರ್ತನೆಯು ಆರಂಭವಾಗಲು ಶ್ರೀರಾಮಕೃಷ್ಣರು ಭಾವಾವಿಷ್ಟರಾಗಿ ಮೇಲೆದ್ದು ನಿಂತರು. ಆಗ ಉಳಿದವರೂ ಕೂಡ ಮೇಲೆದ್ದು ಶ್ರೀರಾಮಕೃಷ್ಣರೊಡನೆ ಕೀರ್ತನೆ ಮತ್ತು ನೃತ್ಯಗಳಲ್ಲಿ ತೊಡಗಿದರು. ಆ ಹಾಡು ಮುಗಿದ ಮೇಲೆ ಚಿರಂಜೀವನು "ಚಿದಾಕಾಶದಲ್ಲಿ ಪೂರ್ಣ ಪ್ರೇಮಚಂದ್ರೋದಯವಾಗಿದೆ" ಎಂಬ ಹಾಡನ್ನು ಪ್ರಾರಂಭಿಸಿದನು. ಬಹಳ ಹೊತ್ತು ಈ ಗಾನ ಮತ್ತು ನೃತ್ಯ ಮುಂದುವರಿಯಿತು. ಕೊನೆಯಲ್ಲಿ ಭಗವಂತ ಮತ್ತು ಅವನ ಭಕ್ತರಿಗೆ ವಂದಿಸುವುದರೊಂದಿಗೆ ಅಂದಿನ ಕೀರ್ತನೆಯು ಸಮಾಪ್ತಿಗೊಂಡಿತು. ಎಲ್ಲರೂ ಶ್ರೀರಾಮಕೃಷ್ಣರ ಪಾದಧೂಳಿಯನ್ನು ಸ್ವೀಕರಿಸಿ ಕುಳಿತುಕೊಂಡರು. ಇಂದೂ ಕೂಡ ಶ್ರೀರಾಮಕೃಷ್ಣರು ಮಧುರ ಭಾವದಲ್ಲಿ ನರ್ತಿಸಿದರು. ಆದರೆ ಮಣಿಮೋಹನನ ಮನೆಯಲ್ಲಿ ಕಂಡಂತಹ ದೀರ್ಘಾವಧಿಯ ಗಭೀರ ಭಾವಾವೇಶವನ್ನು ಇಲ್ಲಿ ಕಾಣಲಿಲ್ಲ. ಕೀರ್ತನೆಯ ನಂತರ ಕುಳಿತುಕೊಂಡ ಮೇಲೆ ಶ್ರೀರಾಮಕೃಷ್ಣರು ಚಿರಂಜೀವನಿಗೆ ಹೇಳಿದರು, "ನಿನ್ನ ಆ ಗಾನ (ಚಿದಾಕಾಶದಲ್ಲಿ ಇತ್ಯಾದಿ) ವನ್ನು ಮೊದಲು ಕೇಳಿದಾಗ ದೊಡ್ಡ ಜೀವಂತಪೂರ್ಣಚಂದ್ರನು ಉದಯಿಸುತ್ತಿರುವುದನ್ನು ಕಂಡಿದ್ದೆ."

8. ಅನಂತರ ಕೇಶವಸೇನನ ಖಾಯಿಲೆಯ ಸಂಬಂಧವಾಗಿ ಜಯಗೋಪಾಲ ಮತ್ತು ಚಿರಂಜೀವರ ನಡುವೆ ಮಾತುಕತೆ ನಡೆಯಿತು. ಆಗ ರಾಖಾಲನಿಗೂ ಆರೋಗ್ಯ ಸರಿ ಇರಲಿಲ್ಲ. ಶ್ರೀರಾಮಕೃಷ್ಣರು ಅದರ ವಿಚಾರವಾಗಿ ಒಬ್ಬ ವ್ಯಕ್ತಿಗೆ ಹೇಳುತ್ತಿದ್ದರು. ಜಯಗೋಪಾಲನು ದೀಕ್ಷಾಬದ್ಧನಾದ ಬ್ರಹ್ಮಸಮಾಜದ ಸದಸ್ಯನಾಗಿದ್ದನೊ ಇಲ್ಲವೊ ತಿಳಿಯದು. ಆದರೆ ಕೇಶವಚಂದ್ರನ ಮೇಲೆ ಅವನಿಗೆ ತುಂಬಾ ಶ್ರದ್ಧಾಭಕ್ತಿ ಇತ್ತು ಮತ್ತು ಅವನು ಬ್ರಹ್ಮಸಮಾಜದ ಎಲ್ಲರ ಪ್ರೀತಿಗೂ ಪಾತ್ರನಾಗಿದ್ದ. ಕಲಕತ್ತೆಯ ಹತ್ತಿರವಿದ್ದ ಬೇಲ್‌ಘರಿಯಾ ಎಂಬ ಸ್ಥಳದ ಅವನ ತೋಟದಲ್ಲಿ ಕೇಶವಚಂದ್ರನು ತನ್ನ ಸಂಗಡಿಗರೊಡನೆ ಆಗಾಗ ಸಾಧನ ಭಜನಗಳಲ್ಲಿ ಕಾಲಕಳೆಯುತ್ತಿದ್ದನು. ಈ ಉದ್ಯಾನ ದಲ್ಲಿದ್ದಾಗಲೇ ಒಮ್ಮೆ ಅವನಿಗೆ ಶ್ರೀರಾಮಕೃಷ್ಣರ ಪ್ರಥಮ ದರ್ಶನವಾದುದು. ಇದೇ ಮುಂದೆ ನವವಿಧಾನ ಸ್ಥಾಪನೆಗೆ ನಾಂದಿಯಾಯಿತು. ಜಯಗೋಪಾಲನಿಗೆ ಅಂದಿನಿಂದ ಶ್ರೀರಾಮಕೃಷ್ಣರ ಮೇಲೆ ವಿಶೇಷ ಶ್ರದ್ಧಾಭಕ್ತಿ ಉಂಟಾಯಿತು. ಕೆಲವೊಮ್ಮೆ ದಕ್ಷಿಣೇಶ್ವರಕ್ಕೆ ಹೋಗಿ ಮತ್ತೆ ಕೆಲವೊಮ್ಮೆ ಶ್ರೀರಾಮಕೃಷ್ಣರನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಆಧ್ಯಾತ್ಮಿಕ ವಿಚಾರಗಳನ್ನು ಮಾತನಾಡುತ್ತಾ ಪರಮಾನಂದವನ್ನು ಅನುಭವಿಸು

ತ್ತಿದ್ದನು. ಶ್ರೀರಾಮಕೃಷ್ಣರು ಕಲ್ಕತ್ತೆಗೆ ಬಂದು ಹೋಗುವ ಗಾಡಿ ಬಾಡಿಗೆಯ ಹೆಚ್ಚಿನ ಭಾಗವನ್ನು ಅವನು ಕೊಡುತ್ತಿದ್ದನೆಂದು ನಾವು ಕೇಳಿರುವೆವು. ಅವನ ಪರಿವಾರದವರೆಲ್ಲರಿಗೂ ಶ್ರೀರಾಮಕೃಷ್ಣರ ಮೇಲೆ ವಿಶೇಷ ಭಕ್ತಿ ಇತ್ತು.

ಅನಂತರ ರಾತ್ರಿ ಬಹಳವಾಗುತ್ತಿದೆ ಎಂಬುದನ್ನು ಗಮನಿಸಿ ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ಅಂದು ಮನೆಯ ಕಡೆ ಹೊರಟೆವು.

## ಎರಡನೆಯ ಅಧ್ಯಾಯ

# ಭಕ್ತರ ಆಗಮನ

1. ಬ್ರಹ್ಮಸಮಾಜದಿಂದ ಶ್ರೀರಾಮಕೃಷ್ಣರು ಏನನ್ನು ಕಲಿತರು 2. ಪಾಶ್ಚಾತ್ಯ ಭಾವನೆಗಳು ಭಾರತೀಯರ ಜೀವನದ ಮೇಲೆ ಎಷ್ಟೊಂದು ಪ್ರಭಾವ ಬೀರಿತ್ತು ಎಂಬುದನ್ನು ಕಲಿತರು 3. ಇದು ಜಗನ್ಮಾತೆಯ ಇಚ್ಛೆಯೆಂದು ತಿಳಿದು ಶ್ರೀರಾಮಕೃಷ್ಣರು ವಿಚಲಿತರಾಗಲಿಲ್ಲ 4. ಅವರ ಎಲ್ಲ ಆಧ್ಯಾತ್ಮಿಕ ಉಪದೇಶಗಳನ್ನು ಸ್ವೀಕರಿಸಲು ಬ್ರಾಹ್ಮಭಕ್ತರ ಅಸಮರ್ಥತೆ. ತ್ಯಾಗೀ ಭಕ್ತರಿಗಾಗಿ ಅವರ ಪ್ರಾರ್ಥನೆ 5. ಬ್ರಾಹ್ಮ ಭಕ್ತರ ಮೂಲಕ ಕಲಕತ್ತೆಯ ಜನರು ಶ್ರೀರಾಮಕೃಷ್ಣರೆಡೆಗೆ ಆಕರ್ಷಿತರಾದರು 6. ರಾಮಚಂದ್ರದತ್ತ ಮನಮೋಹನ ಮಿತ್ರರ ಆಗಮನ. ರಾಮಚಂದ್ರನನ್ನು ಕುರಿತು 7. ರಾಖಾಲನ ಆಗಮನ. ಅವನ ಸಂಬಂಧವಾಗಿ ಶ್ರೀರಾಮಕೃಷ್ಣರ ಅದ್ಭುತ ದರ್ಶನ 8. ರಾಖಾಲನ ಬಾಲಕ ಸ್ವಭಾವ 9. ರಾಖಾಲನ ಪತ್ನಿ 10. ರಾಖಾಲನ ಬಾಲ ಭಾವದ ಹಾನಿ 11. ಶ್ರೀರಾಮಕೃಷ್ಣರು ರಾಖಾಲನನ್ನು ಬೈದುದು 12. ರಾಖಾಲನ ಮನಸ್ಸಿನಲ್ಲಿ ಅಸೂಯೆ ಮತ್ತು ಶ್ರೀರಾಮಕೃಷ್ಣರ ಭಯ 13. ರಾಖಾಲನು ಬೃಂದಾವನಕ್ಕೆ ಹೋದುದು 14. ರಾಖಾಲನ ಕಾಯಿಲೆಯ ಬಗ್ಗೆ ಕೇಳಿ ಶ್ರೀರಾಮ ಕೃಷ್ಣರ ಕಾತರತೆ 15. ರಾಖಾಲನ ಮುಂದಿನ ಜೀವನ

1. ಬ್ರಹ್ಮಸಮಾಜದ ನೇತಾರರಾದ ಕೇಶವಚಂದ್ರ, ವಿಜಯಕೃಷ್ಣ, ಪ್ರತಾಪ ಚಂದ್ರ, ಇವರೇ ಮುಂತಾದವರು ಶ್ರೀರಾಮಕೃಷ್ಣರ ಸಂಗ ಲಾಭದಿಂದ ತ್ಯಾಗದ ಮಹತ್ವ ವನ್ನು ಎಷ್ಟರ ಮಟ್ಟಿಗೆ ಕಂಡುಕೊಂಡರು ಎಂಬುದನ್ನು ಈಗಾಗಲೇ ತಿಳಿಸಿಯಾಗಿದೆ. ಕೇಶವ ಮುಂತಾದ ಬ್ರಾಹ್ಮಭಕ್ತರ ಸಂಗದಿಂದ ಶ್ರೀರಾಮಕೃಷ್ಣರು ಏನಾದರೂ ಕಲಿತರೆ ? ಎಂಬ ಪ್ರಶ್ನೆ ಈಗ ಉದ್ಭವಿಸುತ್ತದೆ. ಶ್ರೀರಾಮಕೃಷ್ಣರ ಅನೇಕ ಭಕ್ತರು ಈ ಪ್ರಶ್ನೆಗೆ ಇಲ್ಲ ಎಂದು ಉತ್ತರಿಸಲು ಸ್ವಲ್ಪವೂ ಹಿಂಜರಿಯುವುದಿಲ್ಲ. ಆದರೆ ಈ ಪ್ರಪಂಚದಲ್ಲಿ ಕೊಡು–ಪಡೆಗಳ ನಿಯಮ ಎಲ್ಲಾ ಕಡೆಗೂ ಅನ್ವಯಿಸುತ್ತದೆ. ನಾವು ಅತ್ಯಂತ ಮೂರ್ಖ ಮತ್ತು ಚಂಚಲ ಹುಡುಗನಿಗೆ ಕಲಿಸುವಾಗಲೂ ಎಷ್ಟೋ ವಿಷಯಗಳನ್ನು ತಿಳಿಯು ತ್ತೇವೆ. ಅಂಥ ಬುದ್ಧಿಹೀನರಿಗೆ ಹೇಗೆ ಕಲಿಸುವುದು, ಅವನ ಪೂರ್ವ ಸಂಸ್ಕಾರಗಳು ಕಲಿ ಸಿದ ವಿಷಯಗಳನ್ನು ಗ್ರಹಿಸಲು ಎಷ್ಟರಮಟ್ಟಿಗೆ ಸಹಾಯಕವಾಗುತ್ತವೆ ಅಥವಾ ತಡೆ ಯಾಗುತ್ತವೆ ಮತ್ತು ಅಂಥ ಸಂಸ್ಕಾರಗಳನ್ನು ತೊಡೆದು ಹಾಕುವುದು ಹೇಗೆ—ಇವೇ ಮುಂತಾದ ಎಷ್ಟೋ ವಿಷಯಗಳನ್ನು ಕಲಿಯುತ್ತೇವೆ. ಆದ್ದರಿಂದ ಪಾಶ್ಚಾತ್ಯ ಚಿಂತನೆ ಮತ್ತು ಶಿಕ್ಷಣದ ಆಧಾರದ ಮೇಲೆ ಕಟ್ಟಿದ ಬ್ರಹ್ಮಸಮಾಜದ ಸಂಸರ್ಗದಿಂದ ಶ್ರೀರಾಮ ಕೃಷ್ಣರು ಏನೂ ಕಲಿಯಲೇ ಇಲ್ಲ ಎನ್ನುವುದು ಯುಕ್ತಿಯುಕ್ತವಾದುದಲ್ಲ. ಆದ್ದರಿಂದ ಈ ವಿಷಯದಲ್ಲಿ ನಮ್ಮ ಅಭಿಪ್ರಾಯವೇ ಬೇರೆ. ಶ್ರೀರಾಮಕೃಷ್ಣರು ತಮ್ಮ ಸಾಧನೆಯ

ಮೂಲಕ ಪಡೆದ ಆಧ್ಯಾತ್ಮಿಕತೆಯನ್ನು ಬ್ರಹ್ಮಸಮಾಜದವರಿಗೆ ಕೊಡಲು ಹೋಗಿ ಅವರೂ ಅನೇಕ ಅಂಶಗಳನ್ನು ಕಲಿತರು. ಅವರು ಏನೇನು ಪಡೆದರು ಎಂಬುದನ್ನು ವಿಚಾರ ಮಾಡೋಣ.

2. ಶ್ರೀರಾಮಕೃಷ್ಣರು ಕೇಶವನೇ ಮುಂತಾದ ಬ್ರಾಹ್ಮಭಕ್ತರ ಸಂಸರ್ಗವನ್ನು ಪಡೆಯುವುದಕ್ಕೆ ಮುಂಚೆ ಪಾಶ್ಚಾತ್ಯ ಚಿಂತನೆ ಮತ್ತು ಶಿಕ್ಷಣದ ಪ್ರಭಾವದಿಂದ ಬಹು ದೂರವಿದ್ದರು. ಅದುವರೆಗೂ ಶ್ರೀರಾಮಕೃಷ್ಣರು ಮಥುರಾನಾಥನೊಬ್ಬನನ್ನು ಬಿಟ್ಟರೆ ಸಂಧಿಸಿದ ವ್ಯಕ್ತಿಗಳೆಲ್ಲರೂ ಪುರಾತನ ಭಾರತೀಯ ಆದರ್ಶಗಳಾದ ಪ್ರವೃತ್ತಿ ಮತ್ತು ನಿವೃತ್ತಿ ಮಾರ್ಗಗಳನ್ನೇ ಅನುಸರಿಸುತ್ತಿದ್ದವರಾಗಿದ್ದರು. ಪಾಶ್ಚಾತ್ಯ ಶಿಕ್ಷಣವನ್ನು ಪಡೆದ ಮತ್ತು ಇತರರಿಗಿಂತ ಬೇರೆಯೇ ಸ್ವಭಾವದವನಾದ ಮಥುರಾನಾಥನನ್ನು ಅವರು ನೋಡಿದ್ದರು ನಿಜ. ಆದರೂ ಪಾಶ್ಚಾತ್ಯ ಶಿಕ್ಷಣವನ್ನು ಪಡೆದ ಪ್ರತಿಯೊಬ್ಬನ ಜೀವನವೂ ಸನಾತನ ಆದರ್ಶಗಳಿಗೆ ವಿರುದ್ಧವಾದ ಭಾವದಿಂದ ಕೂಡಿತ್ತು ಎಂಬುದನ್ನು ಅರ್ಥಮಾಡಿಕೊಳ್ಳುವ ಅವಕಾಶ ಅವರಿಗಿರಲಿಲ್ಲ. ಏಕೆಂದರೆ ಮಥುರಾನಾಥನ ಸ್ವಭಾವವು ಇವರ ಸಂಪರ್ಕದಿಂದ ಬಹುಬೇಗನೆ ಬದಲಾಗಿಬಿಟ್ಟಿತು. ಆದ್ದರಿಂದ ಹೊಸ ಪರಿಸ್ಥಿತಿಯನ್ನು ತಿಳಿದುಕೊಳ್ಳುವ ಅವಕಾಶ ಅವರಿಗಿಲ್ಲವಾಗಿತ್ತು. ಬ್ರಾಹ್ಮಭಕ್ತರ ಸಂಪರ್ಕವನ್ನು ಪಡೆದ ಮೇಲೆ, ಅವರು ಭಗವಂತನನ್ನು ಪಡೆಯಲು ಪ್ರಯತ್ನಿಸುತ್ತಿದ್ದರೂ ಸನಾತನ ತ್ಯಾಗದ ಆದರ್ಶಕ್ಕೆ ಅವರು ವಿಮುಖರಾಗಿದ್ದರು ಎಂಬುದನ್ನು ಶ್ರೀರಾಮಕೃಷ್ಣರು ಕಂಡುಕೊಂಡರು. ಇದಕ್ಕೆ ಕಾರಣವೇನು ಎಂಬುದನ್ನು ಕಂಡುಹಿಡಿಯಲು ಅವರ ಮನಸ್ಸು ಉದ್ಯಮಶೀಲವಾಯಿತು. ಹೀಗೆ ಪಾಶ್ಚಾತ್ಯಶಿಕ್ಷಣದ ಪರಿಣಾಮವಾಗಿ ಪರಕೀಯ ಭಾವನೆಗಳು ಹೇಗೆ ದೇಶದ ಜನಜೀವನವನ್ನು ಪ್ರವೇಶಿಸುತ್ತಿದೆ ಎಂಬುದರ ಪರಿಚಯವನ್ನು ಅವರು ಪಡೆದರು.

ತಾವು ಸಾಧನೆಯ ಮೂಲಕ ಪಡೆದ ಧರ್ಮಭಾವಗಳನ್ನೆಲ್ಲ ಕೇಶವ ಮುಂತಾದ ಬ್ರಾಹ್ಮಭಕ್ತರು ಸ್ವಲ್ಪಕಾಲದಲ್ಲಿಯೇ ಸಂಪೂರ್ಣ ಸ್ವೀಕರಿಸಿಬಿಡುತ್ತಾರೆ ಎಂದು ಶ್ರೀರಾಮಕೃಷ್ಣರು ಭಾವಿಸಿದ್ದರು. ಆದರೆ ಅವರು ಅಷ್ಟು ಸುಲಭವಾಗಿ ಸ್ವೀಕರಿಸಲಿಲ್ಲ. ತಮ್ಮ ಪಾಶ್ಚಾತ್ಯ ದೃಷ್ಟಿಕೋನಗಳನ್ನು ಅಷ್ಟು ಸುಲಭವಾಗಿ ಬಿಟ್ಟುಕೊಡಲು ಸಿದ್ಧರಿರಲಿಲ್ಲ. ಈ ಪಾಶ್ಚಾತ್ಯ ಭಾವನೆಗಳ ಪ್ರಭಾವ ಅವರ ಮನಸ್ಸಿನ ಮೇಲೆ ಎಷ್ಟೊಂದು ಆಳವಾಗಿ ಬೇರುಬಿಟ್ಟಿದೆ ಎಂಬುದನ್ನು ಶ್ರೀರಾಮಕೃಷ್ಣರು ಕಂಡುಕೊಂಡರು. ಪಾಶ್ಚಾತ್ಯ ಚಿಂತಕರು ಅವರಿಗೆ ಗುರುಸ್ಥಾನದಲ್ಲಿ ಇದ್ದುದನ್ನು ಶ್ರೀರಾಮಕೃಷ್ಣರು ನೋಡಿದ್ದರು. ಆದ್ದರಿಂದ ಭಾರತೀಯ ಸನಾತನ ಋಷಿಗಳ ಆಧ್ಯಾತ್ಮಿಕ ಅನುಭವಗಳನ್ನು ಈ ಪಾಶ್ಚಾತ್ಯ ಚಿಂತಕರ ಭಾವನೆಗಳೊಡನೆ ಹೋಲಿಸದಿದ್ದರೆ ಈ ಬ್ರಾಹ್ಮಭಕ್ತರು ಅವುಗಳನ್ನು ಖಂಡಿತಾ ಸ್ವೀಕರಿಸುವುದಿಲ್ಲ ಎಂದು ನಿಶ್ಚಿತ ಮಾಡಿಕೊಂಡರು. ಆದ್ದರಿಂದಲೇ ಶ್ರೀರಾಮಕೃಷ್ಣರು ಅವರುಗಳಿಗೆ ಉಪದೇಶ ಮಾಡಿಯಾದ ಮೇಲೆ ಹೇಳುತ್ತಿದ್ದರು. "ನಾನು ಏನೇನು ಹೇಳಬೇಕೋ ಅದನ್ನು ಹೇಳಿದ್ದೇನೆ. ನೀವು ತಲೆಬಾಲವನ್ನು ಕತ್ತರಿಸಿ ಎಷ್ಟು ಬೇಕೊ ಅಷ್ಟು

ಸ್ವೀಕರಿಸಿ" ಎಂದು. ಅವರ ಸ್ವಾತಂತ್ರ್ಯಕ್ಕೆ ಅಡ್ಡಿ ಬರದೆ ಇದ್ದುದರಿಂದಲೇ ಅವರು ಶ್ರೀರಾಮಕೃಷ್ಣರ ಭಾವನೆಗಳನ್ನು ತಮಗೆಟುಕುವಷ್ಟು ಸ್ವೀಕರಿಸಲು ಸಾಧ್ಯವಾಯಿತು.

3. ಭಾರತೀಯ ಋಷಿಗಳ ಸಮಗ್ರ ಅನುಭವಗಳ ಒಂದು ಮೂರ್ತರೂಪ ವಾಗಿದ್ದ ಶ್ರೀರಾಮಕೃಷ್ಣರು ಮೇಲೆ ಹೇಳಿದ ಘಟನೆಯಿಂದ ನಿರಾಶರಾಗಲಿಲ್ಲ. ಏಕೆಂದರೆ ಎಲ್ಲಾ ಘಟನೆಗಳು ಶ್ರೀ ಜಗನ್ಮಾತೆಯ ಇಚ್ಛೆಯಿಂದಲೇ ನಡೆಯುವುದು ಎಂಬುದು ಅವರಿಗೆ ತಿಳಿದಿತ್ತು. ಎಲ್ಲಾ ವಿಷಯದಲ್ಲಿಯೂ ಅವರು ಆಕೆಯ ಆದೇಶದಂತೆಯೇ ನಡೆಯುತ್ತಿದ್ದರು, ಸಂಸಾರದ ಯಾವುದೇ ಘಟನೆಯು ಅವರನ್ನು ಸ್ವಲ್ಪವೂ ವಿಚಲಿತ ಗೊಳಿಸುತ್ತಿರಲಿಲ್ಲ. ಅಸಾಧ್ಯವನ್ನೂ ಸಾಧ್ಯವಾಗಿಸಬಲ್ಲ ಮಾಯಾಶಕ್ತಿಯಿಂದ ಕೂಡಿದ ಜಗನ್ಮಾತೆಯು ತನ್ನ ಸ್ವರೂಪವನ್ನು ಅವರಿಗೆ ತೋರಿಸಿಕೊಟ್ಟು ಎಂದೆಂದೂ ಅವರು ಅಚಲ ಶಾಂತಿಯಲ್ಲಿ ನೆಲಸಿರುವಂತೆ ಮಾಡಿದಳು. ಆದ್ದರಿಂದ ಜಗನ್ಮಾತೆಯ ಇಚ್ಛೆ ಯಂತೆಯೆ ಭಾರತವನ್ನು ಪಾಶ್ಚಾತ್ಯ ಭಾವನೆಯು ಪ್ರವೇಶಿಸಿದುದು ಮತ್ತು ಆಕೆಯ ಇಚ್ಛೆಯಂತೆಯೆ ಬ್ರಾಹ್ಮಭಕ್ತರೇ ಮುಂತಾದ ಶಿಕ್ಷಿತ ಜನರು ಪಾಶ್ಚಾತ್ಯ ಭಾವನೆಗಳ ಕೈ ಗೊಂಬೆಗಳಾಗಿರುವುದು. ಇದನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದ ಶ್ರೀರಾಮ ಕೃಷ್ಣರು ಅವರ ದುರ್ಬಲತೆಯನ್ನು ಕಂಡು ಬೇಸರಗೊಳ್ಳಲೂ ಇಲ್ಲ ಮತ್ತು ಪ್ರೀತಿ ವಿಶ್ವಾಸಗಳನ್ನು ಹಿಂತೆಗೆದುಕೊಳ್ಳಲೂ ಇಲ್ಲ. ಋಷಿಗಳ ಅನುಭವಗಳನ್ನು ಅವರು ಎಷ್ಟು ಸಾಧ್ಯವೊ ಅಷ್ಟು ಗ್ರಹಿಸಲಿ. ಜಗನ್ಮಾತೆಯ ಇಚ್ಛೆಯಿಂದ ಮುಂದೆ ಬರುವವರು ಅದನ್ನು ಸಂಪೂರ್ಣ ಗ್ರಹಿಸಬಹುದು ಎಂದು ಭಾವಿಸಿ ಶ್ರೀರಾಮಕೃಷ್ಣರು ನಿಶ್ಚಿಂತೆ ಯಿಂದಿದ್ದರು.

4. ಮತ್ತೆ ಬ್ರಾಹ್ಮಭಕ್ತರು ತಮ್ಮ ಎಲ್ಲಾ ಮಾತುಗಳನ್ನು ಗ್ರಹಿಸಲಾರದೆ ಇರು ವುದನ್ನು ನೋಡಿ ಶ್ರೀರಾಮಕೃಷ್ಣರು ತಮ್ಮ ಆಧ್ಯಾತ್ಮಿಕ ಅನುಭವಗಳಲ್ಲಿ ಸ್ವಲ್ಪ ಮಾತ್ರ ಹೇಳಿ ಸುಮ್ಮನಾಗಲಿಲ್ಲ. ಭಗವಂತನಿಗಾಗಿ ಸರ್ವಸ್ವವನ್ನೂ ತ್ಯಜಿಸದೆ ಅವನ ಪುಣ್ಯ ದರ್ಶನವನ್ನು ಪಡೆಯಲಾಗುವುದೇ ಇಲ್ಲ, ಎಷ್ಟು ಮತಗಳೋ ಅಷ್ಟು ಪಥಗಳು, ಯಾವುದೇ ಪಥದ ಮೂಲಕ ಮುಂದುವರಿದರೂ ಚರಮಗುರಿ ಉಪಾಸ್ಯವಸ್ತುವಿ ನೊಡನೆ ಒಂದಾಗುವುದು, ಮಾತು ಮತ್ತು ಮನಸ್ಸನ್ನು ಒಂದಾಗಿಸುವುದೇ ಸಾಧನೆ, ಸದಸದ್ ವಿಚಾರ ಮಾಡುತ್ತಾ ಫಲಾಸಕ್ತಿಯನ್ನು ತೊರೆದು ಭಗವಂತನನ್ನು ಸಂಪೂರ್ಣ ಆಶ್ರಯಿಸಿ ಸಂಸಾರದಲ್ಲಿ ಕರ್ತವ್ಯ ಕರ್ಮಗಳೆಲ್ಲವನ್ನೂ ನೆರವೇರಿಸುವುದೊಂದೇ ಭಗವ ತ್ಪ್ರಾಪ್ತಿಯ ಮಾರ್ಗ—ಇವೇ ಮುಂತಾದ ಆಧ್ಯಾತ್ಮಿಕ ಸತ್ಯಗಳನ್ನು ನಿಃಸಂಕೋಚವಾಗಿ ಅವರ ಮುಂದೆ ವಿವರಿಸಿದರು. ಮಾತು ಕೃತಿ ಮನಸ್ಸಿನ ಮೂಲಕ ಬ್ರಹ್ಮಚರ್ಯವನ್ನು ಪಾಲಿಸದಿದ್ದರೆ ದೇಹದ ಮೇಲಿರುವ ಆಸಕ್ತಿ ಹೋಗುವುದಿಲ್ಲ ಮತ್ತು ಆಧ್ಯಾತ್ಮಿಕ ರಾಜ್ಯದ ಉಚ್ಚ ಅನುಭವಗಳನ್ನೂ ಪಡೆಯಲು ಸಾಧ್ಯವಿಲ್ಲ ಎಂಬುದನ್ನು ಕೇಶವ ಮುಂತಾದವರಿಗೆ ತಿಳಿಸಿದರು. ಅವರೂ ಕೂಡ ಈ ದಿಸೆಯಲ್ಲಿ ಪ್ರಯತ್ನ ಮಾಡಿದರು. ಆದರೆ ತಾವು ಎಷ್ಟು ಬಾರಿ ವಿವರಿಸಿದರೂ ತಮ್ಮ ಮಾತುಗಳನ್ನು ಸರಿಯಾಗಿ ಅರ್ಥ

ಮಾಡಿಕೊಳ್ಳಲು ಅಸಮರ್ಥರಾಗಿರುವುದನ್ನು ಕಂಡು ಹಳೆಯ ಸಂಸ್ಕಾರಗಳನ್ನು ತೊಡೆದು ಹಾಕಿ ಹೊಸ ಭಾವನೆಗಳನ್ನು ಸ್ವೀಕರಿಸುವುದು ಅಷ್ಟು ಸುಲಭವಲ್ಲ ಎಂಬುದನ್ನು ಶ್ರೀರಾಮಕೃಷ್ಣರು ಕಂಡುಕೊಂಡರು. ಗಿಳಿಯ ಕಂಠಿಗೆಯಲ್ಲಿ ಬಣ್ಣದ ಉಂಗುರ ಕಾಣಿಸಿಕೊಂಡ ಮೇಲೆ ಅದು "ರಾಧಾಕೃಷ್ಣ" ಎಂದು ಉಚ್ಚರಿಸುವುದಕ್ಕೆ ಕಲಿಸಿಕೊಡಲು ಸಾಧ್ಯವಿಲ್ಲ. ಪ್ರಾಪಂಚಿಕ ಸುಖವನ್ನು ಅನುಭವಿಸುವ ಆಸೆ ಆಳವಾಗಿ ಬೇರು ಬಿಟ್ಟಿರುವ ಅವರಿಗೆ ಅದು ಪಾಶ್ಚಾತ್ಯ ಜಡವಾದದ ಪ್ರಭಾವದಿಂದ ಆಗಿರಬಹುದು ಅಥವಾ ಬೇರೆ ಕಾರಣದಿಂದಿರಬಹುದು—ಈ ದೇಶವು ಬೋಧಿಸುವ ತ್ಯಾಗದ ಆದರ್ಶವನ್ನು ಸ್ವೀಕರಿಸುವುದು ಸಾಧ್ಯವಿಲ್ಲ, ಇನ್ನು ಅದನ್ನು ಅನುಸರಿಸುವುದಂತೂ ದೂರದ ಮಾತು. ಆದ್ದರಿಂದಲೇ ಅವರು ಅತ್ಯಂತ ಕಳಕಳಿಯಿಂದ ಪ್ರಾರ್ಥಿಸಿದರು : "ತಾಯಿ, ನಿನ್ನ ಸರ್ವಸಂಗ ಪರಿತ್ಯಾಗಿಗಳಾದ ಭಕ್ತರನ್ನು ಕರೆದುಕೊಂಡು ಬಾ, ಅವರೊಡನೆ ಮುಕ್ತವಾಗಿ ನಿನ್ನ ವಿಚಾರವಾಗಿ ಮಾತನಾಡುತ್ತಾ ಆನಂದಿಸುತ್ತೇನೆ." ಆದ್ದರಿಂದ ತಮ್ಮ ಭಾವನೆಗಳನ್ನು ಸಂಪೂರ್ಣ ಸ್ವೀಕರಿಸಿ ಅನುಷ್ಠಾನ ಮಾಡುವುದು ದೃಢ ಸಂಸ್ಕಾರಗಳಿಂದ ಕೂಡಿರದ ಬಾಲಕರುಗಳಿಗೆ ಮಾತ್ರ ಸಾಧ್ಯ ಎಂದು ಶ್ರೀರಾಮಕೃಷ್ಣರು ಭಾವಿಸಿದುದರಲ್ಲಿ ಆಶ್ಚರ್ಯವೇನಿಲ್ಲ.

5. ಕೇಶವ ಮುಂತಾದ ಬ್ರಾಹ್ಮಭಕ್ತರು ಶ್ರೀರಾಮಕೃಷ್ಣರ ಹೊಸ ಆಧ್ಯಾತ್ಮಿಕ ಭಾವಗಳನ್ನು ಎಷ್ಟರ ಮಟ್ಟಿಗೆ ಗ್ರಹಿಸಿದ್ದರು ಮತ್ತು ಅದರ ಪರಿಣಾಮವಾಗಿ ಅವರಲ್ಲಿ ಎಷ್ಟರ ಮಟ್ಟಿಗೆ ಪರಿವರ್ತನೆಯಾಗಿತ್ತು ಎಂಬುದನ್ನು ತಿಳಿದುಕೊಳ್ಳಲು ಕಲ್ಕತ್ತೆಯ ಜನರಿಗೆ ಬಹಳಕಾಲ ಹಿಡಿಯಲಿಲ್ಲ. ಕೇಶವನೇ ಮುಂತಾದವರು ಬ್ರಹ್ಮ ಸಮಾಜದಿಂದ ಪ್ರಕಟವಾಗುತ್ತಿದ್ದ ಪತ್ರಿಕೆಗಳಲ್ಲಿ ಶ್ರೀರಾಮಕೃಷ್ಣರ ಆಧ್ಯಾತ್ಮಿಕ ತತ್ತ್ವಗಳನ್ನು, ಅವರ ಅಮೃತಮಯ ನುಡಿಗಳನ್ನು ಆಗಾಗ ಪ್ರಕಟಿಸುತ್ತಿದ್ದರು. ಇದರ ಮೂಲಕ ಜನಸಾಧಾರಣರು ಶ್ರೀರಾಮಕೃಷ್ಣರೆಡೆ ಆಕರ್ಷಿತರಾಗಿ ಅವರ ಪುಣ್ಯದರ್ಶನವನ್ನು ಪಡೆಯಲು ದಕ್ಷಿಣೇಶ್ವರಕ್ಕೆ ಬರತೊಡಗಿದರು. ಶ್ರೀರಾಮಕೃಷ್ಣರು ಗುರುತಿಸಿದ ಭಕ್ತರೆಲ್ಲರೂ ಹೀಗೆ ಕ್ರಮೇಣ ಶ್ರೀರಾಮಕೃಷ್ಣರೆಡೆಗೆ ಬರತೊಡಗಿದರು.

6. ಕೇಶವಚಂದ್ರಸೇನನು ಶ್ರೀರಾಮಕೃಷ್ಣರನ್ನು ಪ್ರಥಮ ಬಾರಿಗೆ ಸಂಧಿಸಿ ಸುಮಾರು ನಾಲ್ಕು ವರ್ಷಗಳ ನಂತರ, ಕ್ರಿಸ್ತಾಬ್ದ ೧೮೭೯ರ ಕೊನೆಯ ಭಾಗದಲ್ಲಿ ರಾಮಚಂದ್ರದತ್ತ ಮತ್ತು ಮನಮೋಹನಮಿತ್ರರು ದಕ್ಷಿಣೇಶ್ವರಕ್ಕೆ ಬಂದರು. ಇವರು ಕೇಶವಚಂದ್ರಸೇನನು ಪ್ರಕಟಿಸುತ್ತಿದ್ದ ಪತ್ರಿಕೆಯಲ್ಲಿ ಅವರ ವಿಚಾರವಾಗಿ ಓದಿಯೇ ಅವರ ಸಮೀಪಕ್ಕೆ ಬಂದಿದ್ದರು. ಶ್ರೀರಾಮಕೃಷ್ಣರ ಪುಣ್ಯದರ್ಶನದಿಂದ ಇವರ ಜೀವನದಲ್ಲಿ ಎಂಥಾ ಪರಿವರ್ತನೆಯಾಯಿತು ಎಂಬುದನ್ನು ರಾಮಚಂದ್ರದತ್ತನು ತನ್ನ 'ಶ್ರೀ ಶ್ರೀರಾಮಕೃಷ್ಣ ಪರಮಹಂಸ ದೇವರ ಜೀವನ ವೃತ್ತಾಂತ' ಎಂಬ ಕೃತಿಯಲ್ಲಿ ತಾನೇ ಸ್ವತಃ ವಿವರಿಸಿರುವನು. ಆದ್ದರಿಂದ ಅದನ್ನು ಇಲ್ಲಿ ಹೇಳಬೇಕಾದ ಆವಶ್ಯಕತೆ ಇಲ್ಲ. ಭಗವಂತನಿಗಾಗಿ ಕಾಮಕಾಂಚನಗಳನ್ನು ಸಂಪೂರ್ಣ ತ್ಯಜಿಸಿ ಶ್ರೀರಾಮಕೃಷ್ಣರ

ಜೀವನಾದರ್ಶವನ್ನು ಪೂರ್ಣವಾಗಿ ಸ್ವೀಕರಿಸುವುದು ಅವರಿಗೆ ಸಾಧ್ಯವಾಗದಿದ್ದರೂ ಭಕ್ತಿ, ಶ್ರದ್ಧೆ ತ್ಯಾಗದ ಪಥದಲ್ಲಿ ಅವರು ಬಹುದೂರ ಮುಂದುವರಿದು ಕೃತಾರ್ಥತೆಯನ್ನು ಪಡೆದಿದ್ದರು. ಕಷ್ಟಪಟ್ಟು ಸಂಪಾದಿಸಿದ ಹಣವನ್ನು ಗೃಹಸ್ಥನು ಸ್ವಲ್ಪವೂ ಹಿಂಜರಿಯದೆ ಸತ್ಕರ್ಮದಲ್ಲಿ ವಿನಿಯೋಗಿಸಿದರೆ ಅದೇ ಅವನ ಶ್ರದ್ಧಾಭಕ್ತಿಯ ಸೂಚಕವಾಗುತ್ತದೆ. ಶ್ರೀರಾಮಕೃಷ್ಣರನ್ನು ಮೊದಲು ತನ್ನ ಗುರುವೆಂದು ಪರಿಗಣಿಸಿ ಅನಂತರ ಅವರನ್ನು ಇಷ್ಟ ದೇವತೆಯ ಸ್ಥಾನಕ್ಕೆ ರಾಮಚಂದ್ರನು ಏರಿಸಿದನು. ಅವರನ್ನು ಅನೇಕ ಬಾರಿ ತನ್ನ ಕಲ್ಕತ್ತೆಯ ಮನೆಗೆ ಕರೆದುಕೊಂಡು ಹೋಗಿದ್ದನು. ಉತ್ಸವದ ಸಂದರ್ಭದಲ್ಲಿ ಎಷ್ಟೊಂದು ಧಾರಾಳವಾಗಿ ಹಣ ಖರ್ಚು ಮಾಡುತ್ತಿದ್ದನೆಂದರೆ ಅದರಿಂದ ಅವನ ಶ್ರದ್ಧಾಭಕ್ತಿ ಎಷ್ಟೊಂದು ಆಳವಾದುದು ಎಂಬುದನ್ನು ಸುಲಭವಾಗಿ ಅಳೆಯಬಹುದಾಗಿತ್ತು. ಶ್ರೀರಾಮಕೃಷ್ಣರು ಅವನ ಬಗ್ಗೆ ಆಗಾಗ ಹೇಳುತ್ತಿದ್ದರು: "ಈಗ ರಾಮನನ್ನು ನೋಡಿ ಎಷ್ಟೊಂದು ಧಾರಾಳ ಮನಸ್ಸು. ಆದರೆ ಅವನು ಮೊದಲು ಇಲ್ಲಿಗೆ ಬಂದಾಗ ಎಂಥಾ ಜಿಪುಣನಾಗಿದ್ದ ಎಂಬುದನ್ನು ಹೇಳಲಾಗುವುದಿಲ್ಲ. ನಾನು ಒಮ್ಮೆ ಸ್ವಲ್ಪ ಏಲಕ್ಕಿಯನ್ನು ತರಲು ಹೇಳಿದೆ. ಅವನು ಒಂದು ಪೈಸೆ ಬೆಲೆಯ ಏಲಕ್ಕಿಯನ್ನು ತಂದು ನನ್ನ ಮುಂದೆ ಇಟ್ಟು ತಲೆ ಬಾಗಿದ. ಇದರಿಂದಲೇ ರಾಮನ ಸ್ವಭಾವ ಈಗ ಎಷ್ಟೊಂದು ಬದಲಾಗಿದೆ ಎಂಬುದನ್ನು ನೀವು ಊಹಿಸಬಹುದು".

7. ಶ್ರೀರಾಮಕೃಷ್ಣರು ರಾಮ ಮತ್ತು ಮನಮೋಹನನನ್ನು ತಮ್ಮವರೆಂದೇ ಭಾವಿಸಿ ಅವರಿಗೆ ತಮ್ಮ ಅಭಯ ಆಶ್ರಯವನ್ನು ನೀಡಿದ್ದರು. ಅವರ ಅಹೇತುಕ ಕೃಪೆಗೆ ಪಾತ್ರರಾಗಿ ಇವರಿಬ್ಬರೂ ತಮ್ಮನ್ನು ಎಷ್ಟರ ಮಟ್ಟಿಗೆ ಕೃತಾರ್ಥರು ಎಂದು ಭಾವಿಸಿದ್ದರೆಂಬುದನ್ನು ಹೇಳಿ ಮುಗಿಸಲಾಗುವುದಿಲ್ಲ. ಸಂಸಾರದಲ್ಲಿ ಇಂಥಾ ಒಂದು ಆಶ್ರಯ ದೊರೆಯುವುದು ಸಾಧ್ಯ ಎಂಬುದನ್ನು ಇವರಿಬ್ಬರೂ ಕನಸಿನಲ್ಲಿಯೂ ಚಿಂತಿಸಿರಲಿಲ್ಲ. ಈಗ ಇವರು ತಮ್ಮ ಆತ್ಮೀಯರು, ಬಂಧು ಬಾಂಧವರು, ಸ್ನೇಹಿತರು ಇವರನ್ನೆಲ್ಲ ಇದೇ ಆಶ್ರಯವನ್ನು ಪಡೆಯುವಂತೆ ಮಾಡಲು ಪ್ರಯತ್ನಿಸಿದರು ಎಂಬುದರಲ್ಲಿ ಆಶ್ಚರ್ಯವೇನಿದೆ ? ತಾವು ಶ್ರೀರಾಮಕೃಷ್ಣರನ್ನು ಸಂಧಿಸಿ ಒಂದೇ ವರ್ಷದ ಅವಧಿಯಲ್ಲಿಯೇ ತಮ್ಮ ತಮ್ಮ ಆತ್ಮೀಯರನ್ನೆಲ್ಲ ಕ್ರಮೇಣ ದಕ್ಷಿಣೇಶ್ವರಕ್ಕೆ ಕರೆದುಕೊಂಡು ಬಂದು ಶ್ರೀರಾಮಕೃಷ್ಣರ ಆಶ್ರಯವನ್ನು ಪಡೆಯುವಂತೆ ಮಾಡಿದರು. ಹೀಗೆ ಕ್ರಿಸ್ತಾಬ್ದ ೧೮೮೧ರಿಂದ ಶ್ರೀರಾಮಕೃಷ್ಣರ ಲೀಲಾ ಸಹಚರರಾದ ತ್ಯಾಗೀ ಭಕ್ತರು ಒಬ್ಬೊಬ್ಬರಾಗಿ ಅವರೆಡೆಗೆ ಬರತೊಡಗಿದರು. ಇವರಲ್ಲಿ ಸ್ವಾಮಿ ಬ್ರಹ್ಮಾನಂದರೇ ಮೊದಲು ಬಂದವರು. ಇವರ ಮೊದಲ ಹೆಸರು ರಾಖಾಲಚಂದ್ರ ಎಂದು. ಮನಮೋಹನನ ತಂಗಿಯೊಡನೆ ಇವರ ಮದುವೆಯಾಗಿತ್ತು. ಮದುವೆಯಾಗಿ ಸ್ವಲ್ಪಕಾಲದಲ್ಲಿಯೇ ಶ್ರೀರಾಮಕೃಷ್ಣರ ಹೆಸರನ್ನು ಕೇಳಿ ಅವರೆಡೆಗೆ ಬಂದರು. ಶ್ರೀರಾಮಕೃಷ್ಣರು ಹೇಳುತ್ತಿದ್ದರು: "ರಾಖಾಲನು ಬರುವುದಕ್ಕೆ ಕೆಲವು ದಿನಗಳ ಹಿಂದೆ ನನಗೊಂದು ದರ್ಶನವಾಯಿತು ; ಜಗನ್ಮಾತೆಯು ಒಬ್ಬ ಬಾಲಕನನ್ನು ಕರೆದುಕೊಂಡು ಬಂದು ನನ್ನ ತೊಡೆಯ

ಮೇಲೆ ಕೂರಿಸಿ ಹೇಳಿದಳು 'ಇವನು ನಿನ್ನ ಮಗ'ಎಂದು. ನನಗೆ ಕೇಳಿ ಗಾಬರಿಯಾಯಿತು. 'ಏನಿದು, ನನಗೆ ಮತ್ತೆ ಮಗುವೆ ?' ಎಂದು ಕಾತರದಿಂದ ಕೇಳಿದಾಗ ಜಗನ್ಮಾತೆ ತಿಳಿಸಿದಳು: 'ಸಾಧಾರಣ ಸಾಂಸಾರಿಕ ದೃಷ್ಟಿಯಿಂದಲ್ಲ, ಇವನು ನಿನ್ನ ತ್ಯಾಗೀ ಮಾನಸ ಪುತ್ರ'. ಆಗ ನನಗೆ ಸಮಾಧಾನವಾಯಿತು. ಈ ದರ್ಶನವಾದ ಮೇಲೇ ರಾಖಾಲನು ಬಂದಿದ್ದು. ಇವನೇ ಆ ಬಾಲಕ ಎಂದು ತಿಳಿದು ಬಂದಿತು."

8. ರಾಖಾಲನ ಸಂಬಂಧವಾಗಿ ಶ್ರೀರಾಮಕೃಷ್ಣರು ಬೇರೆ ಸಂದರ್ಭದಲ್ಲಿ ನಮಗೆ ಹೀಗೆ ಹೇಳಿದ್ದರು : "ಆಗ ರಾಖಾಲನ ಭಾವವೇ ಬೇರೆಯಾಗಿತ್ತು, ಮೂರು ನಾಲ್ಕು ವರ್ಷದ ಮಗುವಿನಂತೆಯೇ ಇರುತ್ತಿದ್ದ. ನನ್ನನ್ನು ತಾಯಿಯೆಂದೇ ಪರಿಗಣಿಸಿದ್ದ. ಇದ್ದಕ್ಕಿದ್ದಂತೆ ಓಡಿಬಂದು ನನ್ನ ಹೆಗಲ ಮೇಲೆ ಕುಳಿತು ಬಿಡುತ್ತಿದ್ದ. ಮನೆಗೆ ಹೋಗುವುದಿರಲಿ, ಇಲ್ಲಿಂದ ಆ ಕಡೆ ಕದಲುತ್ತಿರಲಿಲ್ಲ. ಅವನ ತಂದೆ ಅವನು ಇಲ್ಲಿಗೆ ಬರುವುದಕ್ಕೆ ಬಿಡದಿರಬಹುದೆಂದು ಅವನನ್ನು ಒತ್ತಾಯ ಮಾಡಿ ಮನೆಗೆ ಕಳಿಸುತ್ತಿದ್ದೆ. ತಂದೆ ದೊಡ್ಡ ಜಮಿನ್ದಾರ. ಬಹಳ ಐಶ್ವರ್ಯವಿತ್ತು, ಆದರೆ ತುಂಬಾ ಜಿಪುಣ. ಮೊದಮೊದಲು ಮಗ ಇಲ್ಲಿಗೆ ಬರಬಾರದೆಂದು ಬಹಳ ಪ್ರಯತ್ನಿಸಿದ. ಅನಂತರ ನೋಡಿದ, ಇಲ್ಲಿಗೆ ಅನೇಕ ಶ್ರೀಮಂತರು, ವಿದ್ಯಾವಂತರು ಬರುವುದನ್ನು. ಅನಂತರ ಮಗ ಇಲ್ಲಿಗೆ ಬರುವುದನ್ನು ಆಕ್ಷೇಪಿಸಲಿಲ್ಲ. ಮಗನಿಗಾಗಿ ಕೆಲವೊಮ್ಮೆ ಇಲ್ಲಿಗೂ ಬಂದಿದ್ದ. ಆಗ ರಾಖಾಲನಿಗೋಸ್ಕರ ಅವನನ್ನು ತುಂಬಾ ಆದರಿಸುತ್ತಿದ್ದೆ.

9. "ಆದರೆ ಅವನ ಮಾವನ ಮನೆಯಿಂದ ಅವನು ಇಲ್ಲಿಗೆ ಬರುವುದಕ್ಕೆ ಯಾವ ಅಭ್ಯಂತರವೂ ಇರಲಿಲ್ಲ. ಏಕೆಂದರೆ ಮನಮೋಹನನ ತಾಯಿ, ಪತ್ನಿ, ತಂಗಿ ಎಲ್ಲರೂ ಇಲ್ಲಿಗೆ ಬಂದುಹೋಗುತ್ತಿದ್ದರು. ರಾಖಾಲನು ಇಲ್ಲಿಗೆ ಬಂದು ಕೆಲವು ಸಮಯದ ನಂತರ ಮನಮೋಹನನ ತಾಯಿಯು ರಾಖಾಲನ ಬಾಲವಧುವನ್ನು ಕರೆದುಕೊಂಡು ಇಲ್ಲಿಗೆ ಬಂದಿದ್ದಳು. ಈ ವಧುವಿನ ಸಂಸರ್ಗದಿಂದ ರಾಖಾಲನ ಭಗವದ್ಭಕ್ತಿಗೆ ಹಾನಿ ಉಂಟಾಗುವುದೇ ? ಎಂದು ನಾನು ಭಾವಿಸಿದೆ. ಆಕೆಯನ್ನು ಹತ್ತಿರ ಕರೆದು ಕಾಲಿನಿಂದ ತಲೆಯವರೆಗೂ ಅವಳನ್ನು ವೀಕ್ಷಿಸಿ ಭಯಕ್ಕೆ ಕಾರಣವಿಲ್ಲವೆಂದು ನಿರ್ಧರಿಸಿದೆ. ಆಕೆ ದೈವೀಶಕ್ತಿ, ಪತಿಯ ಧರ್ಮಮಾರ್ಗದಲ್ಲಿ ಖಂಡಿತಾ ಅಡ್ಡಿಯಾಗುವುದಿಲ್ಲ ಎಂದು ತಿಳಿಯಿತು. ಆಗ ಸಂತುಷ್ಟನಾಗಿ ಅವಳನ್ನು ನಹಬತ್ತಿಗೆ (ಶ್ರೀಮಾತೆಯವರೆಡೆಗೆ) ಕಳಿಸಿಕೊಟ್ಟೆ, ಒಂದು ರೂಪಾಯಿ ನಾಣ್ಯವನ್ನು ಕೊಟ್ಟು ವಧುವಿನ ಮುಖವನ್ನು ನೋಡಲೆಂದು.*

10. "ನನ್ನನ್ನು ನೋಡಿದಾಗ ರಾಖಾಲನಲ್ಲಿ ಹೇಗೆ ಬಾಲಕಭಾವ ಜಾಗ್ರತವಾಗುತ್ತಿತ್ತು, ಎಂಬುದನ್ನು ಹೇಳಿ ತಿಳಿಸಿಕೊಡಲಾಗುವುದಿಲ್ಲ. ಆಗ ಅವನನ್ನು ನೋಡಿದವರೆಲ್ಲ

---

* ಬಂಗಾಳದಲ್ಲಿ ಹೊಸದಾಗಿ ಬಂದ ಸೊಸೆಯ ಮುಚ್ಚಿದ ಮುಖವನ್ನು ಅತ್ತೆಯು ನೋಡುವ ವಿಧಾನವಿದು. ಮೊದಲು ಅವಳು ಏನಾದರೂ ಕಾಣಿಕೆಯನ್ನು, ಸಾಮಾನ್ಯವಾಗಿ ಹಣವನ್ನು ಕೊಟ್ಟು ಅನಂತರ ನಿಧಾನವಾಗಿ ಅವಗುಂಠನವನ್ನು ತೆಗೆದು ಅವಳ ಮುಖವನ್ನು ನೋಡುತ್ತಾಳೆ.

ಆಶ್ಚರ್ಯಚಕಿತರಾಗುತ್ತಿದ್ದರು. ನಾನೂ ಕೂಡಾ ಭಾವಾವಿಷ್ಟನಾಗಿ ಅವನಿಗೆ ಹಾಲು ಬೆಣ್ಣೆ ತಿನ್ನಿಸುತ್ತಿದ್ದೆ, ಅವನೊಡನೆ ಆಟವಾಡುತ್ತಿದೆ. ಎಷ್ಟೋ ಬಾರಿ ಅವನನ್ನು ಹೆಗಲ ಮೇಲೆ ಕೂರಿಸಿಕೊಳ್ಳುತ್ತಿದ್ದೆ. ಆದರಿಂದಲೂ ಅವನಲ್ಲಿ ಸ್ವಲ್ಪವೂ ಸಂಕೋಚ ಉಂಟಾಗು ತ್ತಿರಲಿಲ್ಲ. ಆದರೆ ಆಗ ನನಗನ್ನಿಸುತ್ತಿತ್ತು ಅವನು ದೊಡ್ಡವನಾಗಿ ಪತ್ನಿಯೊಡನೆ ವಾಸಿಸ ತೊಡಗಿದ ಮೇಲೆ ಈ ಬಾಲಕಭಾವವು ಉಳಿಯುವುದಿಲ್ಲ ಎಂದು.

11. "ಏನಾದರೂ ತಪ್ಪು ಮಾಡಿದರೆ ಅವನಿಗೆ ಬಯ್ಯುತ್ತಿದ್ದೆ. ಒಂದು ದಿನ ಕಾಳೀಮಂದಿರದಿಂದ ಬಂದಿದ್ದ ಬೆಣ್ಣೆ ಪ್ರಸಾದವನ್ನು ಹಸಿವಾಗುತ್ತಿದೆ ಎಂದು ತಾನೇ ತೆಗೆದುಕೊಂಡುಬಿಟ್ಟ. ನಾನು ಹೇಳಿದೆ, 'ಎಂಥಾ ಲೋಭ, ನೀನೆ ತೆಗೆದುಕೊಂಡು ತಿಂದು ಬಿಟ್ಟೆಯಲ್ಲ, ಇಲ್ಲಿಗೆ ಬಂದ ಮೇಲೆ ಈ ಲೋಭವನ್ನು ನಿಗ್ರಹಿಸುವುದನ್ನು ಕಲಿಯ ಬೇಡವೆ ?' ಅವನಿಗೆ ತುಂಬಾ ನಾಚಿಕೆಯಾಯಿತು. ಮುಂದೆ ಅವನೆಂದೂ ಹಾಗೆ ಮಾಡಲಿಲ್ಲ.

12. "ಬಾಲಕರಲ್ಲಿರುವಂತೆ ಅಸೂಯೆಯೂ ರಾಖಾಲನಲ್ಲಿತ್ತು. ಅವನನ್ನಲ್ಲದೆ ಬೇರೆಯವರನ್ನು ಪ್ರೀತಿಸಿದರೆ ಅವನಿಗೆ ಸಹಿಸಲಾಗುತ್ತಿರಲಿಲ್ಲ, ಅವನಿಗೆ ತುಂಬಾ ಮನೋವೇದನೆಯಾಗುತ್ತಿತ್ತು. ಈ ಅಸೂಯೆಯಿಂದ ಅವನಿಗೆ ಎಲ್ಲಿ ಹಾನಿ ಉಂಟಾಗು ವುದೋ ಎಂದು ನನಗೆ ತುಂಬಾ ದಿಗಿಲಾಗಿತ್ತು.

13. "ಇಲ್ಲಿಗೆ ಬಂದ ಮೂರು ವರ್ಷಗಳ ನಂತರ ರಾಖಾಲನ ಆರೋಗ್ಯ ಕೆಟ್ಟಿತು. ಅವನು ಬಲರಾಮನೊಡನೆ ಬೃಂದಾವನಕ್ಕೆ ಹೋದ. ಇದಕ್ಕೆ ಸ್ವಲ್ಪ ಮುಂಚೆ ಅವನನ್ನು ಇಲ್ಲಿಂದ ಜಗನ್ಮಾತೆಯು ತೆಗೆದುಬಿಡುವಳು ಎಂದು ದರ್ಶನವಾಯಿತು. ಆಗ ನಾನು ವ್ಯಾಕುಲನಾಗಿ ಪ್ರಾರ್ಥಿಸಿದೆ : 'ತಾಯಿ ಅವನಿನ್ನು ಹುಡುಗ, ಏನೂ ತಿಳಿಯದು. ಆದ್ದ ರಿಂದ ಆಗಾಗ ಅಭಿಮಾನ ಉಂಟಾಗುತ್ತದೆ. ನಿನ್ನ ಕೆಲಸಕ್ಕಾಗಿ ಅವನನ್ನು ಸ್ವಲ್ಪಮಟ್ಟಿಗೆ ದೂರಸರಿಸುವುದಾದರೆ ಪರವಾಗಿಲ್ಲ. ಅವನು ಒಳ್ಳೆಯ ಜಾಗದಲ್ಲಿ ಆನಂದದಿಂದಿರಲಿ'. ಇದಾದ ಸ್ವಲ್ಪಕಾಲದಲ್ಲಿಯೇ ಅವನು ಬೃಂದಾವನಕ್ಕೆ ಹೋದನು.

14. "ಬೃಂದಾವನದಲ್ಲಿರುವಾಗ ರಾಖಾಲನಿಗೆ ಖಾಯಿಲೆಯಾಗಿದೆ ಎಂದು ತಿಳಿದು ನನಗೆ ಎಷ್ಟು ಚಿಂತೆಯಾಯಿತು ಎಂಬುದನ್ನು ಹೇಳಿ ಮುಗಿಸಲಾರೆ. ಏಕೆಂದರೆ ರಾಖಾಲನು ನಿಜವಾಗಿಯೂ ವ್ರಜದ ರಾಖಾಲ ಎಂದು ತಾಯಿಯು ಈ ಹಿಂದೆ ತೋರಿಸಿದ್ದಳು. ಯಾರು ಎಲ್ಲಿಂದ ಬಂದು ಶರೀರವನ್ನು ಧರಿಸುತ್ತಾರೊ ಅವರು ಪುನಃ ಅಲ್ಲಿಗೆ ಹೋದಾಗ ಹಿಂದಿನ ಸ್ಮರಣೆ ಉಂಟಾಗಿ ಶರೀರವನ್ನು ತ್ಯಜಿಸಿಬಿಡುತ್ತಾರೆ. ಆದ್ದರಿಂದ ರಾಖಾಲನು ಬೃಂದಾವನದಲ್ಲಿ ಶರೀರವನ್ನು ತ್ಯಜಿಸಿಬಿಡುತ್ತಾನೊ ಎಂಬ ಭಯ ಉಂಟಾಯಿತು. ಆಗ ತಾಯಿಯನ್ನು ನಾನು ಎಷ್ಟೊಂದು ಪ್ರಾರ್ಥಿಸಿದೆ. ಅವಳು ನನಗೆ ಆಶ್ವಾಸನೆ ಇತ್ತಳು. ಹೀಗೆ ರಾಖಾಲನ ವಿಷಯವಾಗಿ ತಾಯಿಯು ಅನೇಕ ವಿಷಯಗಳನ್ನು ತಿಳಿಸಿಕೊಟ್ಟಳು.

ಅದನ್ನೆಲ್ಲವನ್ನು ಇಲ್ಲಿ ಹೇಳುವಂತಿಲ್ಲ."*

15. ಹೀಗೆ ಶ್ರೀರಾಮಕೃಷ್ಣರು ತಮಗೆ ಮೊದಲಬಾರಿಗೆ ಸಿಕ್ಕಿದ ಬಾಲಕ ಭಕ್ತನ ಸಂಬಂಧವಾಗಿ ಎಷ್ಟೆಲ್ಲ ಹೇಳಿದರೊ ಅದಕ್ಕೆ ಕೊನೆಯೆ ಇಲ್ಲ. ಜಗನ್ಮಾತೆಯು ಅವನ ಸಂಬಂಧವಾಗಿ ಏನೇನು ತೋರಿಸಿದ್ದಳೋ ಅದೆಲ್ಲ ಅಕ್ಷರಶಃ ಸತ್ಯವಾಯಿತು. ವಯಸ್ಸಾದಂತೆಲ್ಲ ಬಾಲಕನು ದೊಡ್ಡ ಸಾಧಕನಾಗಿ ಮುಂದೆ ಭಗವಂತನಿಗಾಗಿ ಸಂಸಾರವನ್ನು ತ್ಯಜಿಸಿ ಶ್ರೀರಾಮಕೃಷ್ಣ ಸಂಘದ ಉನ್ನತ ಸ್ಥಾನದಲ್ಲಿ ಕುಳಿತನು.

ಸ್ವಾಮಿ ಬ್ರಹ್ಮಾನಂದರು ದಕ್ಷಿಣೇಶ್ವರಕ್ಕೆ ಮೊದಲ ಬಾರಿಗೆ ಬಂದು ಮೂರು ನಾಲ್ಕು ತಿಂಗಳುಗಳ ನಂತರ ಸ್ವಾಮಿ ವಿವೇಕಾನಂದರು ಶ್ರೀರಾಮಕೃಷ್ಣರೆಡೆಗೆ ಬಂದರು. ಈಗ ಅವರ ವಿಚಾರವನ್ನು ಹೇಳಲು ಉಪಕ್ರಮಿಸುತ್ತೇವೆ.

---

* ರಾಖಾಲನ ಬಗ್ಗೆ ಶ್ರೀರಾಮಕೃಷ್ಣರು ಈ ಎಲ್ಲ ವಿಷಯಗಳನ್ನು ಒಂದೇ ಸಮಯದಲ್ಲಿ ಹೇಳಲಿಲ್ಲ. ಅವರು ಬೇರೆ ಬೇರೆ ಸಮಯದಲ್ಲಿ ಹೇಳಿದುದನ್ನು ಇಲ್ಲಿ ಒಟ್ಟಿಗೆ ಸಂಗ್ರಹಿಸಿ ಕೊಟ್ಟಿರುವೆವು.

## ಮೂರನೆಯ ಅಧ್ಯಾಯ

# ನರೇಂದ್ರನಾಥನ ಮೊದಲ ಆಗಮನ ಮತ್ತು ಪರಿಚಯ

1. ಶ್ರೀರಾಮಕೃಷ್ಣರ ಸರ್ವಜ್ಞತ್ವದ ಸಂಬಂಧವಾಗಿ 2. ಸುರೇಂದ್ರನ ಮನೆಯಲ್ಲಿ ಶ್ರೀರಾಮಕೃಷ್ಣ ಮತ್ತು ನರೇಂದ್ರರ ಮೊದಲ ಭೇಟಿ 3. ದಕ್ಷಿಣೇಶ್ವರಕ್ಕೆ ಬರಲು ನರೇಂದ್ರನನ್ನು ಆಹ್ವಾನಿಸಿದುದು 4. ನರೇಂದ್ರನು ಮದುವೆಯಾಗಲು ನಿರಾಕರಿಸಿದುದು-ದಕ್ಷಿಣೇಶ್ವರಕ್ಕೆ ಪ್ರಥಮಾಗಮನ 5. ನರೇಂದ್ರನನ್ನು ನೋಡಿ ಶ್ರೀರಾಮಕೃಷ್ಣರಿಗೆ ಏನನಿಸಿತು ? 6. ನರೇಂದ್ರನನ್ನು ನೋಡಲು ಶ್ರೀರಾಮಕೃಷ್ಣರ ವ್ಯಾಕುಲತೆ 7. ಈ ಭೇಟಿಯನ್ನು ಕುರಿತು ನರೇಂದ್ರನ ಹೇಳಿಕೆ 8. ಶ್ರೀ ರಾಮಕೃಷ್ಣರ ಮಾತು ಮತ್ತು ಆಚರಣೆಯ ಬಗ್ಗೆ ನರೇಂದ್ರನು ಏನು ಭಾವಿಸಿದ ? ನರೇಂದ್ರನು ಮತ್ತೆ ಬರುವುದಾಗಿ ಮಾತುಕೊಡುತ್ತಾನೆ 9. ಶ್ರೀರಾಮಕೃಷ್ಣರ ಬಗ್ಗೆ ಅವನ ನಿಲವು–ತೀವ್ರ ತ್ಯಾಗ ಮತ್ತು ಸ್ವಲ್ಪ ಹುಚ್ಚುತನ ಎರಡೂ ಇದೆ 10. ಆ ಸಂದರ್ಭದಲ್ಲಿ ನರೇಂದ್ರನ ಆಧ್ಯಾತ್ಮಿಕ ಸಾಧನೆ 11. ಬ್ರಹ್ಮಸಮಾಜಕ್ಕೆ ಅವನು ಹೋಗುತ್ತಿದ್ದನು 12. ನರೇಂದ್ರನ ಎರಡು ಆದರ್ಶಗಳು 13. ನರೇಂದ್ರನ ಧ್ಯಾನ ಪ್ರವೃತ್ತಿ 14. ಮಹರ್ಷಿ ದೇವೇಂದ್ರನಾಥನ ಉಪದೇಶದಿಂದ ಆ ಪ್ರವೃತ್ತಿಯ ವೃದ್ಧಿ 15. ನರೇಂದ್ರನ ಬಹುಮುಖ ಪ್ರತಿಭೆ 16. ಜ್ಞಾನಾರ್ಜನೆಯಲ್ಲಿ ಅವನಿಗಿದ್ದ ಆಸಕ್ತಿ 17. ಶೀಘ್ರವಾಗಿ ಓದುವ ಅವನ ಸಾಮರ್ಥ್ಯ 18. ನರೇಂದ್ರನ ತರ್ಕಶಕ್ತಿ 19. ಅವನಿಗೆ ವ್ಯಾಯಾಮದಲ್ಲಿ ಆಸಕ್ತಿ 20. ಅವನ ಸಾಹಸ ಪ್ರವೃತ್ತಿ–ಸ್ನೇಹಿತರನ್ನು ಗಂಡಾಂತರದಿಂದ ರಕ್ಷಿಸಿದುದು 21. ಹಡಗನ್ನು ನೋಡುವುದಕ್ಕೆ ಅವನು ಪರವಾನಗಿ ಪಡೆದುದು 22. ಟ್ರಾಪೀಜ್ ನಿಲ್ಲಿಸುವಾಗ ನಡೆದ ಅಪಘಾತ 23. ನರೇಂದ್ರನ ಸತ್ಯನಿಷ್ಠೆ 24. ದೋಷಮುಕ್ತ ಸುಖಾನುಭವ 25. ಬಡವರ ಮೇಲೆ ಅವನಿಗಿದ್ದ ಅನುಕಂಪೆ 26. ನರೇಂದ್ರನ ಕೋಪ 27. ರಾಯಪುರಕ್ಕೆ ಹೋಗುವಾಗ ಧ್ಯಾನದಲ್ಲಿ ತನ್ಮಯತೆ 28. ನರೇಂದ್ರನ ಪೂರ್ವಿಕರು. ಅವನ ಅಜ್ಜ ಸಂನ್ಯಾಸಿಯಾಗಿದ್ದನು 29. ನರೇಂದ್ರನ ತಂದೆಯಾದ ವಿಶ್ವನಾಥದತ್ತ 30. ವಿಶ್ವನಾಥನ ಸಂಗೀತ ಪ್ರಿಯತೆ ಮತ್ತು ಅವನ ಮುಸ್ಲಿಂ ಶಿಷ್ಟಾಚಾರಗಳು 31. ಅವನು ಮಕ್ಕಳನ್ನು ತಿದ್ದುವ ರೀತಿ 32. ಅವನ ಉದಾರ ಸ್ವಭಾವ 33. ವಿಶ್ವನಾಥನ ಮೃತ್ಯು 34. ನರೇಂದ್ರನ ತಾಯಿ.

1. ವೇದವೇ ಮುಂತಾದ ಶಾಸ್ತ್ರಗಳು ಬ್ರಹ್ಮಜ್ಞಾನಿಯು ಸರ್ವಜ್ಞನಾಗುತ್ತಾನೆ ಎಂದು ಸಾರುತ್ತವೆ. ಬ್ರಹ್ಮಜ್ಞಾನದಲ್ಲಿ ಪ್ರತಿಷ್ಠಿತರಾಗಿದ್ದ ಶ್ರೀರಾಮಕೃಷ್ಣರ ನಡೆ ನುಡಿಗಳನ್ನು ನೋಡಿದಾಗ ಈ ಮಾತು ಸಂಪೂರ್ಣ ಸತ್ಯ ಎಂದು ತಿಳಿದುಬರುತ್ತದೆ. ಅವರು ಬ್ರಹ್ಮದ ಸಗುಣ ಮತ್ತು ನಿರ್ಗುಣ ಭಾವಗಳೆರಡನ್ನೂ ಅರಿತು ಎಲ್ಲಾ ಸಂದೇಹ ಅಪವಿತ್ರತೆಗಳನ್ನೂ ಮೀರಿ ಹೋಗಿ ಶಾಶ್ವತ ಆನಂದಾವಸ್ಥೆಯಲ್ಲಿ ನೆಲೆನಿಂತಿದ್ದರು.

ಅಷ್ಟೇ ಅಲ್ಲದೆ ಭಾವಮುಖದಲ್ಲಿ ಜಗನ್ಮಾತೆಯೊಡನೆ ತಮ್ಮನ್ನು ಒಂದಾಗಿಸಿಕೊಂಡು ತಾವು ಇಷ್ಟ ಪಟ್ಟಾಗಲೆಲ್ಲ ಯಾವುದೇ ಮಾಯಾರಾಜ್ಯದ ಗೂಢಾರ್ಥವನ್ನು ತಿಳಿಯಬಲ್ಲ ವರಾಗಿದ್ದರು. ಸೂಕ್ಷ್ಮದೃಷ್ಟಿಯುಳ್ಳ ಅವರ ಮುಂದೆ ಮಾಯೆಯು ಯಾವುದನ್ನೂ ಬಚ್ಚಿಡಲು ಅಸಮರ್ಥಳಾಗಿದ್ದಳು. ಇದು ಸ್ವಾಭಾವಿಕವೆ. ಏಕೆಂದರೆ ಭಾವಮುಖಾ ವಸ್ಥೆ, ಮಾಯಾಧೀಶನಾದ ಈಶ್ವರನ ವಿಶ್ವಮನಸ್ಸು ಇವೆರಡೂ ಒಂದೇ. ಈಶ್ವರನ ಈ ವಿಶ್ವಮನಸ್ಸಿನಲ್ಲಿಯೆ ವಿಶ್ವದ ಎಲ್ಲಾ ಭಾವಗಳು ಆವಿರ್ಭಾವ ತಿರೋಭಾವಗೊಳ್ಳುತ್ತಿ ರುವುವು. ಯಾರು ತಮ್ಮ ಕ್ಷುದ್ರ 'ಅಹಂ' ಅನ್ನು ಮೀರಿಹೋಗಿ, ವಿಶ್ವ ಅಹಂ ದೊಡನೆ ಒಂದಾಗಿರುವರೊ ಅವರಿಗೆ ವಿಶ್ವಮನಸ್ಸಿನಲ್ಲಿ ಏಳುವ ಎಲ್ಲಾ ಭಾವನೆಗಳು ಸ್ಪಷ್ಟವಾಗಿ ಕಂಡುಬರುವುವು. ಶ್ರೀರಾಮಕೃಷ್ಣರು ಆ ಸ್ಥಿತಿಯನ್ನು ಮುಟ್ಟಿದ್ದ ರಿಂದಲೇ ಭಕ್ತರ ಹಿಂದಿನ ಜನ್ಮಗಳ ಘಟನೆಗಳೆಲ್ಲವನ್ನೂ ಅರಿಯಲು ಸಾಧ್ಯವಾಯಿತು. ವಿಶ್ವಮನಸ್ಸಿನ ಯಾವುದೋ ವಿಶೇಷಲೀಲೆಗಾಗಿಯೆ ತಾವು ಈಗಿನ ಶರೀರವನ್ನು ಧರಿಸಿ ರುವುದು ಎಂಬುದನ್ನು ಅವರು ಅರಿತಿದ್ದರು. ಈ ಲೀಲೆಯ ಪೂರ್ತಿಗಾಗಿ ಎಷ್ಟೊಂದು ಜನ ಉಚ್ಚವರ್ಗದ ಸಾಧಕರು ಭಗವದಿಚ್ಛೆಯಿಂದ ಜನ್ಮವೆತ್ತಿದ್ದಾರೆ ಎಂಬುದು ಅವರಿಗೆ ತಿಳಿದಿತ್ತು, ಅವರುಗಳಲ್ಲಿ ಯಾವ ಯಾವ ವ್ಯಕ್ತಿಗಳು ಈ ಲೀಲೆಯಲ್ಲಿ ಹೆಚ್ಚು ಸಹಾಯ ಮಾಡುತ್ತಾರೆ, ಯಾರು ಕಡಮೆ ಸಹಾಯ ಮಾಡುತ್ತಾರೆ ಮತ್ತು ಯಾರು ಕೇವಲ ಅದರ ಸುಖವನ್ನು ಅನುಭವಿಸುತ್ತಾರೆ ಎಂಬುದನ್ನೂ ಕೂಡ ಅವರು ಅರಿತಿದ್ದರು. ಅವರುಗಳು ಬರುವ ಸಮಯವು ಸಮೀಪಿಸುತ್ತಿದೆ ಎಂದು ತಿಳಿದು ಅವರಿಗಾಗಿ ಆಸಕ್ತಿ ಯಿಂದ ಕಾಯುತ್ತಿದ್ದರು. ಮಾಯಾರಾಜ್ಯದ ಒಳಗೆ ಇದ್ದು ಈ ಮೇಲಿನ ಎಲ್ಲಾ ರಹಸ್ಯ ಗಳನ್ನು ಅರಿಯಬಲ್ಲವರನ್ನು ಸರ್ವಜ್ಞ ಎಂದು ಕರೆಯದೆ ಮತ್ತೆ ಏನೆಂದು ಕರೆಯ ಲಾದೀತು ?

2. ತಾವು ಗುರುತಿಸಿದ ಭಕ್ತರ ಬರುವಿಕೆಗಾಗಿ ಅವರು ಆ ಸಂದರ್ಭದಲ್ಲಿ ಎಷ್ಟೊಂದು ವ್ಯಾಕುಲತೆಯಿಂದ ನಿರೀಕ್ಷಿಸುತ್ತಿದ್ದರು ಎಂಬುದನ್ನು ಅವರ ಮತ್ತು ಸ್ವಾಮಿ ವಿವೇಕಾನಂದರ ಪ್ರಥಮ ಭೇಟಿಯಿಂದ ತಿಳಿದುಕೊಳ್ಳಬಹುದು. ಸ್ವಾಮಿ ಬ್ರಹ್ಮಾನಂದರು ಹೇಳುತ್ತಾರೆ : ತಾವು ಶ್ರೀರಾಮಕೃಷ್ಣರೆಡೆಗೆ ಬಂದ ಸಮಯದಲ್ಲಿಯೆ ಕಲ್ಕತ್ತೆಯ ಸಿಮ್ಲಾ ವಿಭಾಗದಲ್ಲಿ ವಾಸಿಸುತ್ತಿದ್ದ ಸುರೇಂದ್ರನಾಥಮಿತ್ರನು ದಕ್ಷಿಣೇಶ್ವರಕ್ಕೆ ಬಂದು ಶ್ರೀರಾಮಕೃಷ್ಣರ ಪುಣ್ಯದರ್ಶನವನ್ನು ಪಡೆದನು ಎಂದು. ಪ್ರಥಮ ಭೇಟಿಯಿಂದಲೆ ಸುರೇಂದ್ರನು ಶ್ರೀರಾಮಕೃಷ್ಣರೆಡೆಗೆ ಬಹಳ ಆಕರ್ಷಿಸಲ್ಪಟ್ಟನು. ಸ್ವಲ್ಪ ಕಾಲದಲ್ಲಿಯೆ ಅವರೊಡನೆ ಒಂದು ಗಾಢಸಂಬಂಧ ಉಂಟಾಗಿ ಅವರನ್ನು ಒಂದು ದಿನ ತಮ್ಮ ಮನೆಗೆ ಕರೆದುಕೊಂಡು ಹೋಗಿ ಆನಂದೋತ್ಸವವನ್ನು ಏರ್ಪಡಿಸಿದನು. ಸುಶ್ರಾವ್ಯವಾಗಿ ಹಾಡು ವವರು ಯಾರೂ ಇಲ್ಲದುದರಿಂದ ಸುರೇಂದ್ರನು ಅಂದು ತನ್ನ ನೆರೆಯವನಾದ ವಿಶ್ವ ನಾಥದತ್ತನ ಮಗ ನರೇಂದ್ರನಾಥನನ್ನು ಶ್ರೀರಾಮಕೃಷ್ಣರ ಮುಂದೆ ಭಜನೆ ಹಾಡಲು ಆಹ್ವಾನಿಸಿದನು. ಶ್ರೀರಾಮಕೃಷ್ಣರ ಮತ್ತು ಅವರ ಪ್ರಧಾನ ಲೀಲಾಸಹಾಯಕರಾದ

ಸ್ವಾಮಿ ವಿವೇಕಾನಂದರ ಪರಸ್ಪರ ಪ್ರಥಮ ದರ್ಶನ ಈ ರೀತಿ ಸಂಭವಿಸಿತು. ಆಗ ಕ್ರಿ.ಶ. ೧೮೮೧ ನವೆಂಬರ್ ತಿಂಗಳು. ಆಗ ನರೇಂದ್ರನಿಗೆ ಹದಿನೆಂಟು ವರ್ಷ. ಅವನು ಕಲ್ಕತ್ತಾ ವಿಶ್ವವಿದ್ಯಾನಿಲಯದ ಎಫ್.ಎ. ಪರೀಕ್ಷೆಗಾಗಿ ಓದುತ್ತಿದ್ದನು.

3. ಶ್ರೀರಾಮಕೃಷ್ಣರು ಅಂದು ನರೇಂದ್ರನಾಥನನ್ನು ನೋಡಿದಕೂಡಲೇ ಅವನೆಡೆಗೆ ಆಕರ್ಷಿತರಾದರು, ಎಂದು ಸ್ವಾಮಿ ಬ್ರಹ್ಮಾನಂದರು ಹೇಳುತ್ತಾರೆ. ಏಕೆಂದರೆ ಮೊದಲು ಸುರೇಂದ್ರನನ್ನು ಅನಂತರ ರಾಮಚಂದ್ರನನ್ನು ಶ್ರೀರಾಮಕೃಷ್ಣರು ತಮ್ಮೆಡೆಗೆ ಕರೆದು ಮಧುರವಾಗಿ ಹಾಡಿದ ಆ ಯುವಕನ ಬಗ್ಗೆ ಎಲ್ಲಾ ಮಾಹಿತಿಗಳನ್ನು ಸಂಗ್ರಹಿಸಿದರು ಮತ್ತು ಅವನನ್ನು ದಕ್ಷಿಣೇಶ್ವರಕ್ಕೆ ಕರೆದುಕೊಂಡು ಬರಬೇಕೆಂದೂ ಹೇಳಿದರು. ಮತ್ತೆ ಹಾಡುವುದು ಮುಗಿದ ಮೇಲೆ ಅವರೇ ಆ ಯುವಕನ ಹತ್ತಿರ ಹೋಗಿ ಅವನ ದೈಹಿಕ ಲಕ್ಷಣಗಳನ್ನೆಲ್ಲ ಪರೀಕ್ಷಿಸಿದರು. ಕೂಡಲೇ ಒಂದು ದಿನ ದಕ್ಷಿಣೇಶ್ವರಕ್ಕೆ ಬರಬೇಕೆಂದೂ ಅವನನ್ನು ಆಹ್ವಾನಿಸಿದರು.

4. ಮೇಲೆ ಹೇಳಿದ ಘಟನೆಯಾಗಿ ಕೆಲವು ವಾರದನಂತರ ವಿಶ್ವವಿದ್ಯಾಲಯದ ಎಫ್.ಎ. ಪರೀಕ್ಷೆ ಮುಗಿಯಿತು. ನರೇಂದ್ರನಾಥನ ತಂದೆಯು ತನ್ನ ಮಗನನ್ನು ನಗರದ ಒಬ್ಬ ಪ್ರಸಿದ್ಧ ವ್ಯಕ್ತಿಯ ಮಗಳೊಡನೆ ವಿವಾಹ ಮಾಡಬೇಕೆಂದು ಪ್ರಯತ್ನಿಸುತ್ತಿದ್ದನು. ವಧುವು ಕಪ್ಪುಬಣ್ಣದವಳಾದ್ದರಿಂದ ಅವಳ ತಂದೆಯು ಹತ್ತು ಸಾವಿರ ರೂಪಾಯಿ ವರದಕ್ಷಿಣೆಯನ್ನು ಕೊಡಲು ಒಪ್ಪಿದ್ದನು. ಆದರೆ ನರೇಂದ್ರನು ಇದನ್ನು ತುಂಬಾ ವಿರೋಧಿಸಿದ್ದರಿಂದ ವಿವಾಹ ನಡೆಯಲಿಲ್ಲ. ರಾಮಚಂದ್ರದತ್ತನು ನರೇಂದ್ರನ ತಂದೆಯ ಸಂಬಂಧಿಕ ಮತ್ತು ಅದೇ ಮನೆಯಲ್ಲಿ ಬೆಳೆದವನು. ಅವನು ಕಲ್ಕತ್ತೆಯಲ್ಲಿ ವೈದ್ಯವೃತ್ತಿ ಮಾಡುತ್ತಿದ್ದನು. ನರೇಂದ್ರನಿಗೆ ಆಧ್ಯಾತ್ಮಿಕದಲ್ಲಿ ಆಸಕ್ತಿಯಿದ್ದುದರಿಂದ ವಿವಾಹ ಮಾಡಿಕೊಳ್ಳಲು ಒಪ್ಪದೇ ಇರುವುದನ್ನು ರಾಮಚಂದ್ರನು ತಿಳಿದು ಒಂದು ದಿನ ಅವನಿಗೆ ಹೇಳಿದನು : "ನಿನಗೆ ನಿಜವಾಗಿಯೂ ಧರ್ಮದಲ್ಲಿ ಆಸಕ್ತಿ ಇರುವುದಾದರೆ ಬ್ರಹ್ಮಸಮಾಜ, ಅಲ್ಲಿ ಇಲ್ಲಿ ತಿರುಗಾಡದೆ ದಕ್ಷಿಣೇಶ್ವರದ ಶ್ರೀರಾಮಕೃಷ್ಣರೆಡೆಗೆ ಹೋಗು." ನೆರೆಯವನಾದ ಸುರೇಂದ್ರನಾಥನು ಕೂಡ ಒಂದು ದಿನ ತನ್ನೊಡನೆ ಗಾಡಿಯಲ್ಲಿ ದಕ್ಷಿಣೇಶ್ವರಕ್ಕೆ ಬರಲು ಆಹ್ವಾನಿಸಿದನು. ನರೇಂದ್ರನಾಥನು ಒಪ್ಪಿ ಇಬ್ಬರು ಮೂವರು ಜನ ಸ್ನೇಹಿತರನ್ನು ಕರೆದುಕೊಂಡು ಸುರೇಂದ್ರನೊಡನೆ ದಕ್ಷಿಣೇಶ್ವರಕ್ಕೆ ಹೋದನು.

5. ಅಂದು ನರೇಂದ್ರನಾಥನನ್ನು ನೋಡಿ ಶ್ರೀರಾಮಕೃಷ್ಣರಿಗೆ ಏನನ್ನಿಸಿತು ಎಂಬುದನ್ನು ಈಗ ಅವರ ಮಾತಿನಲ್ಲಿಯೆ ಕೇಳೋಣ :

"ಪಶ್ಚಿಮದ ಬಾಗಿಲಿನ ಮೂಲಕ ನರೇಂದ್ರನು ಮೊದಲ ದಿನ ಈ ಕೋಣೆಯನ್ನು ಪ್ರವೇಶಿಸಿದನು. ನಾನು ನೋಡಿದೆ. ಅವನಿಗೆ ತನ್ನ ಶರೀರದ ಕಡೆ ಲಕ್ಷ್ಯವೇ ಇರಲಿಲ್ಲ, ಅವನ ತಲೆ ಕೂದಲಾಗಲಿ, ವೇಷಭೂಷಣಗಳಾಗಲಿ ಅಚ್ಚುಕಟ್ಟಾಗಿರಲಿಲ್ಲ. ಬೇರೆಯುವರಂತೆ ಬಾಹ್ಯವಸ್ತುಗಳಲ್ಲಿ ಸ್ವಲ್ಪವೂ ಆಸೆಯಿರಲಿಲ್ಲ. ಎಲ್ಲದರಿಂದಲೂ ಅಸಕ್ತನಾಗಿರುವಂತೆ ಕಂಡುಬಂದ. ಅವನ ಮನಸ್ಸಿನ ಹೆಚ್ಚು ಭಾಗ ಅಂತರ್ಮುಖವಾಗಿತ್ತು ಎಂಬುದನ್ನು

ಅವನ ಕಣ್ಣುಗಳು ಸೂಚಿಸುತ್ತಿದ್ದವು. ಅವನನ್ನು ನೋಡಿದಾಗ ನನಗೆ ಆಶ್ಚರ್ಯವಾಯಿತು, ಪ್ರಾಪಂಚಿಕರ ತಾಣವಾದ ಕಲ್ಕತ್ತೆಯಲ್ಲಿ ಇಷ್ಟೊಂದು ಸತ್ತ್ವ ಪ್ರಧಾನವಾದ ಶ್ರೇಷ್ಠ ಆಧ್ಯಾತ್ಮಿಕ ಸಾಧಕನೊಬ್ಬನು ಇರಲು ಸಾಧ್ಯವೇ ಎಂದು ಭಾವಿಸಿದೆ.

"ನೆಲದ ಮೇಲೆ ಒಂದು ಮೆತ್ತೆಯನ್ನು ಹಾಸಿದ್ದರು. ನಾನು ಅವನಿಗೆ ಕುಳಿತು ಕೊಳ್ಳಲು ಹೇಳಿದೆ. ಅವನು ಗಂಗಾಜಲದ ಬಿಂದಿಗೆಯ ಹತ್ತಿರ ಕುಳಿತುಕೊಂಡ. ಅಂದು ಅವನ ಜೊತೆ ಅವನ ಕೆಲವು ಸ್ನೇಹಿತರೂ ಇದ್ದರು. ಅವರ ಸ್ವಭಾವ ಸಾಮಾನ್ಯ ಪ್ರಾಪಂಚಿಕ ವ್ಯಕ್ತಿಗಳಂತೆಯೆ ಇತ್ತು ಮತ್ತು ನರೇಂದ್ರನ ಸ್ವಭಾವಕ್ಕೆ ವಿರುದ್ಧವಾಗಿತ್ತು. ಅವರ ಗಮನವೆಲ್ಲ ಸುಖದ ಕಡೆಗೇ ಇತ್ತು.

"ವಿಚಾರಿಸಿದಾಗ ತಿಳಿದು ಬಂತು, ಅವನಿಗೆ ಕೇವಲ ಮೂರು ನಾಲ್ಕು ಬಂಗಾಳಿ ಹಾಡುಗಳು ಬರುತ್ತಿದ್ದವು ಎಂದು. ನಾನು ಅದನ್ನೇ ಹಾಡಲು ಹೇಳಿದೆ. ಅವನು ಬ್ರಹ್ಮ ಸಮಾಜದ "ಮನ್ ಚಲೋ ನಿಜ ನಿಕೇತನೇ"* ಎಂಬ ಹಾಡನ್ನು ಅತ್ಯಂತ ಭಾವಪೂರ್ಣ

---

* ಓ ನಡೆಯೋ ಹೋಗೋಣ ನಮ್ಮ ನೆಲೆಗೆ !
ಎಲ್ಲಿಂದ ಬಂದೆವೋ ಅತ್ತಕಡೆಗೆ !

ಸಂಸಾರವೆಂತೆಂಬ ಈ ವಿದೇಶದಿ ನಾವು
ಬರಿ ಬಯಲು ಭ್ರಾಂತಿಯಲಿ ಅಲೆದುದಾಯ್ತು
ಕಡೆಗೆ ಏನೂ ನಮಗೆ ದೊರೆಯದಾಯ್ತು

ಸುತ್ತ ನಡೆಯುವ ಬಾಳು, ಈ ವಿಷಯ ಪಂಚಕವು
ಏನಾದರೂ ನಮಗೆ ಅಪರಿಚಿತವೇ !
ನಮ್ಮವರು ಇಲ್ಲೆಲ್ಲ, ನಿನ್ನ ನೀನೇ ಮರೆತು
ಈ ವಿದೇಶದಲಿಂತು ಅಲೆಯಬಹುದೇ ?
ಸಾಕು, ನಡೆ ಹೋಗೋಣ ನಮ್ಮ ನೆಲೆಗೆ,
ಎಲ್ಲಿಂದ ಬಂದೆವೊ ಅತ್ತಕಡೆಗೆ.

ಸತ್ಯಪಥವನ್ನೇರು, ನಡೆ ಮುಂದೆ ಚಣಚಣವು
ಪ್ರೇಮದಲಿ ಹೃದಯವನು ದೀಪ್ತಗೊಳಿಸು.
ಲೋಭಮೋಹಗಳೆಂಬ ಚೋರರಿಗೆ ಸಿಕ್ಕದೊಲು
ಪುಣ್ಯಧನವನು ಒಳಗೆ ಭದ್ರಪಡಿಸು.
ಶಾಂತಿ–ಶಮೆಯನು ಜೊತೆಗೆ ಕಾವಲಿರಿಸು.

ನಡೆವಾಗ ಒಮ್ಮೊಮ್ಮೆ ಸಂದೇಹ ಬಂದಾಗ
ನಿನ್ನ ಪಯಣದ ಪಥದಿ ಸಾಧುಸಂಗವೆ ನಿನಗೆ
ವಿಶ್ರಾಂತಿ ಭವನ:
ಅಲ್ಲಿ ವಿರಮಿಸಿಕೊಂಡು ಪಥದ ವಿವರವ ತಿಳಿದು
ಮುಂದೆ ಸಾಗಲಿ ಮತ್ತೆ ನಿನ್ನ ಪಯಣ.

ವಾಗಿ ಹಾಡತೊಡಗಿದ. ಅದನ್ನು ಕೇಳಿ ನನಗೆ ತಡೆಯಲಾಗದೆ ಭಾವಾವಿಷ್ಟನಾಗಿಬಿಟ್ಟೆ.

6. "ಅನಂತರ ಅವನು ಹೊರಟು ಹೋದಮೇಲೆ ಅವನನ್ನು ನೋಡಬೇಕೆಂಬ ವ್ಯಾಕುಲತೆ ಎಷ್ಟೊಂದು ತೀವ್ರವಾಯಿತು ಎಂಬುದನ್ನು ಹೇಳಲಾಗುವುದಿಲ್ಲ. ಇಪ್ಪತ್ತ ನಾಲ್ಕು ಘಂಟೆಯೂ ಹೃದಯ ಅವನಿಗಾಗಿ ಚಡಪಡಿಸುತ್ತಿತ್ತು. ಕೆಲವೊಮ್ಮೆ ಎಷ್ಟೊಂದು ಯಾತನೆಯಾಗುತ್ತಿತ್ತೆಂದರೆ ಹೃದಯವನ್ನು ಯಾರೋ ಒದ್ದೆ ಬಟ್ಟೆಯನ್ನು ಹಿಂಡುವಂತೆ ಜೋರಾಗಿ ಹಿಂಡುತ್ತಿರುವಂತೆ ಅನಿಸುತ್ತಿತ್ತು. ನಾನು ತಡೆಯಲಾಗದೆ ಹುಣಿಸೇ ಮರದ ಕಡೆಗೆ ಓಡಿದೆ. ಅಲ್ಲಿಗೆ ಯಾರೂ ಹೆಚ್ಚಾಗಿ ಹೋಗುತ್ತಿರಲಿಲ್ಲ. ಅಲ್ಲಿ ಜೋರಾಗಿ ಅಳುತ್ತಾ 'ಓ ನನ್ನ ಮಗು, ಬಾ. ನೀನಿಲ್ಲದೆ ನಾನಿರಲಾರೆ' ಎಂದು ಕೂಗಿದೆ. ಹಾಗೆ ಸ್ವಲ್ಪ ಹೊತ್ತು ಅತ್ತ ಮೇಲೆ ಮನಸ್ಸಿಗೆ ಸಮಾಧಾನ ಉಂಟಾಯಿತು. ಹೀಗೆ ನಿರಂತರ ಆರು ತಿಂಗಳು ಮುಂದುವರಿಯಿತು. ಇಲ್ಲಿಗೆ ಬಂದ ಬೇರೆ ಕೆಲವು ಹುಡುಗರ ವಿಷಯದಲ್ಲಿಯೂ ನನಗೆ ಹೀಗೇ ಆಯಿತು. ಆದರೆ ನರೇಂದ್ರನ ವಿಷಯದಲ್ಲಿ ಉಂಟಾದ ಭಾವನೆಗೆ ಹೋಲಿಸಿದರೆ ಅದು ಏನೂ ಅಲ್ಲ."

ನರೇಂದ್ರನಾಥನನ್ನು ನೋಡಿದಾಗ ಶ್ರೀರಾಮಕೃಷ್ಣರಲ್ಲಿ ಎಂಥಾ ಭಾವ ಉಂಟಾಗಿತ್ತು ಎಂಬುದನ್ನು ಅವರು ನಮಗೆ ಸಂಪೂರ್ಣ ಹೇಳಿರಲಿಲ್ಲ, ಅದರ ಎಷ್ಟೋ ಅಂಶಗಳನ್ನು ಬಚ್ಚಿಟ್ಟಿದ್ದರು. ಈ ವಿಷಯ ನಮಗೆ ನಿಶ್ಚಿತ ಮೂಲಗಳಿಂದ ತಿಳಿದುಬರುತ್ತದೆ. ನರೇಂದ್ರನಾಥನು ಮೇಲೆ ಹೇಳಿದ ದಿವಸದ ಘಟನೆಯ ಸಂಬಂಧವಾಗಿ ಹೀಗೆ ಹೇಳುತ್ತಾನೆ :

7. "ಹಾಡನ್ನಂತೂ ಹಾಡಿದೆ. ಇದಾದ ಕೂಡಲೇ ಶ್ರೀರಾಮಕೃಷ್ಣರು ಮೇಲೆದ್ದು ನನ್ನ ಕೈಯನ್ನು ಹಿಡಿದುಕೊಂಡು ಅವರ ಕೊಠಡಿಯ ಉತ್ತರ ಭಾಗದ ವರಾಂಡಕ್ಕೆ ಕರೆದುಕೊಂಡು ಹೋದರು. ಆಗ ಶೀತಕಾಲ. ಉತ್ತರ ದಿಕ್ಕಿನ ಗಾಳಿಯನ್ನು ತಡೆಯಲು ಎರಡು ಕಂಬಗಳ ನಡುವೆ ತಡಿಕೆಯನ್ನು ಕಟ್ಟಿದ್ದರು. ಹೀಗಾಗಿ ವರಾಂಡಕ್ಕೆ ಹೋಗಿ ಬಾಗಿಲನ್ನು ಹಾಕಿಕೊಂಡರೆ ಹೊರಗಿನಿಂದಾಗಲಿ, ಒಳಗಿನಿಂದಾಗಲಿ ಯಾರೂ ನೋಡುವಂತಿರಲಿಲ್ಲ. ವರಾಂಡಕ್ಕೆ ಬಂದಕೂಡಲೇ ಶ್ರೀರಾಮಕೃಷ್ಣರು ಬಾಗಿಲನ್ನು ಮುಚ್ಚಿದರು. ಏಕಾಂತದಲ್ಲಿ ಏನೋ ಉಪದೇಶ ನೀಡಬಹುದೆಂದು ನಾನು ಭಾವಿಸಿದೆ. ಆದರೆ ಅವರು ಹೇಳಿದ ಮಾತು ಮತ್ತು ಅವರ ವರ್ತನೆ ಕಲ್ಪನೆಗೂ ಮೀರಿದುದು. ಅವರು ಇದ್ದಕ್ಕಿದ್ದಂತೆ ನನ್ನ ಕೈಗಳನ್ನು ಹಿಡಿದುಕೊಂಡು ಧಾರಾಕಾರವಾಗಿ ಆನಂದಬಾಷ್ಪವನ್ನು ಸುರಿಸಿದರು. ತುಂಬ ಪರಿಚಿತರನ್ನು ಮಾತನಾಡಿಸುವಂತೆ ಪ್ರೀತಿಯಿಂದ ಹೇಳಿದರು : 'ನೀನು ಇಷ್ಟು ತಡವಾಗಿ ಬರುವುದು ಸರಿಯೆ ? ನಾನು ನಿನಗಾಗಿ ಕಾಯುತ್ತಿದ್ದೆ ಎಂಬುದನ್ನು ನೀನು ಯೋಚನೆ ಮಾಡಲೇ ಇಲ್ಲವಲ್ಲ. ಪ್ರಾಪಂಚಿಕರ ವ್ಯರ್ಥಾಲಾಪವನ್ನು ಕೇಳಿ ಕೇಳಿ

---

ದಾರಿಯಲಿ ನಿನಗಾವ ಆಪತ್ತು ಬಂದರೂ<br>
ಆ ದೇವನನು ಕೂಗು, ಅವನೇ ರಾಜ !<br>
ಮೃತ್ಯುವನೆ ಬೆದರಿಸುವುದವನ ತೇಜ ! (ವಚನವೇದದಿಂದ)

ನನ್ನ ಕಿವಿ ಸುಟ್ಟುಹೋಗುತ್ತಿದೆ, ನನ್ನ ಆಂತರಿಕ ಭಾವನೆಗಳನ್ನು ಯಾರಿಗೂ ಹೇಳಲಾಗದೆ ನಾನು ಒಡೆದು ಹೋಗುವುದರಲ್ಲಿದ್ದೆ.' ಹೀಗೆ ಎಷ್ಟೆಲ್ಲ ಮಾತನಾಡಿದರು ಮತ್ತು ರೋದಿಸಿದರು! ಮರುಕ್ಷಣದಲ್ಲಿಯೇ ನನ್ನ ಮುಂದೆ ಕೈಜೋಡಿಸಿ ನಿಂತು ನನ್ನನ್ನು ದೇವತೆಯಂತೆ ಸನ್ಮಾನಿಸುತ್ತಾ ಹೇಳಿದರು: 'ಪ್ರಭು, ನೀನು ಯಾರೆಂಬುದು ನನಗೆ ಗೊತ್ತು, ನೀನು ಅದೇ ಪುರಾತನ ಋಷಿ, ನರರೂಪಿ ನಾರಾಯಣ. ಜೀವಿಗಳ ದುರ್ಗತಿಯನ್ನು ನಿವಾರಿಸುವುದಕ್ಕಾಗಿ ಪುನಃ ಶರೀರವನ್ನು ಧರಿಸಿರುವೆ.'

8. "ಅವರ ಆ ರೀತಿಯ ಆಚರಣೆಯನ್ನು ನೋಡಿ ನಾನು ಸ್ತಂಭಿತನಾದೆ. ನಾನು ಯಾರನ್ನು ನೋಡುವುದಕ್ಕೆ ಬಂದಿರುವೆ, ಇವರಂತೂ ಸಂಪೂರ್ಣ ಹುಚ್ಚು ಎಂದು ಮನಸ್ಸಿನಲ್ಲಿಯೇ ಭಾವಿಸಿದೆ. ನಾನಂತೂ ವಿಶ್ವನಾಥದತ್ತನ ಮಗ. ಅವರು ನನಗೆ ಹಾಗೆಲ್ಲ ಏಕೆ ಹೇಳಬೇಕು? ಏನೇ ಆಗಲಿ, ನಾನಂತು ಸುಮ್ಮನೆ ನಿಂತುಕೊಂಡಿದ್ದೆ, ಈ ಅದ್ಭುತ ಹುಚ್ಚನು ಏನನ್ನು ಹೇಳಬೇಕೋ ಹೇಳಲಿ ಎಂದು. ಸ್ವಲ್ಪ ಹೊತ್ತಿನ ನಂತರ ಅವರು ನನ್ನನ್ನು ಅಲ್ಲಿಯೇ ಇರಲು ಹೇಳಿ ಕೊಠಡಿಯನ್ನು ಪ್ರವೇಶಿಸಿದರು. ಬೆಣ್ಣೆ, ಕಲ್ಲು ಸಕ್ಕರೆ ಮತ್ತು ಸ್ವಲ್ಪ ಸಂದೇಶಗಳನ್ನು ತಂದು ಅವುಗಳನ್ನು ತಮ್ಮ ಕೈಗಳಿಂದಲೇ ತಿನ್ನಿಸತೊಡಗಿದರು. 'ನನಗೆ ತಿಂಡಿಯನ್ನು ಕೊಡಿ. ನನ್ನ ಸಂಗಡಿಗರೊಡನೆ ಹಂಚಿಕೊಂಡು ತಿನ್ನುತ್ತೇನೆ' ಎಂದು ನಾನು ಎಷ್ಟೇ ಹೇಳಿದರೂ ಕೇಳಲಿಲ್ಲ. 'ಅವರು ಆಮೇಲೆ ತಿನ್ನಲಿ, ನೀನು ತಿನ್ನು' ಎಂದು ಹೇಳಿ ಎಲ್ಲವನ್ನೂ ನನಗೆ ತಿನ್ನಿಸಿದರು. ಮತ್ತೆ ಕೈಯನ್ನು ಹಿಡಿದು ಹೇಳಿದರು: 'ಹೇಳು, ನೀನು ಬೇಗನೆ ಒಂದು ದಿನ ಏಕಾಕಿಯಾಗಿ ಒರುತ್ತೀಯಾ?' ಅವರು ಅಷ್ಟೊಂದು ಒತ್ತಾಯ ಮಾಡುವುದನ್ನು ಕೇಳಿ ಆಗುವುದಿಲ್ಲ ಎನ್ನಲಾಗದೆ 'ಬರುತ್ತೇನೆ' ಎಂದು ಹೇಳಿದೆ. ಅನಂತರ ಅವರೊಡನೆ ಕೊಠಡಿಯನ್ನು ಪ್ರವೇಶಿಸಿ ನನ್ನ ಸಂಗಡಿಗರೊಡನೆ ಕುಳಿತುಕೊಂಡೆ.

9. "ಕುಳಿತುಕೊಂಡು ಅವರನ್ನೇ ನೋಡುತ್ತಾ ಯೋಚಿಸುತ್ತಿದ್ದೆ. ಅವರ ಚಲನವಲನಗಳಲ್ಲಾಗಲಿ, ಇತರರೊಡನೆ ಅವರ ಮಾತುಕತೆ ಆಚರಣೆಗಳಲ್ಲಾಗಲಿ ಸ್ವಲ್ಪವೂ ಹುಚ್ಚನ ಲಕ್ಷಣಗಳಿರಲಿಲ್ಲ. ಅವರ ಆಧ್ಯಾತ್ಮಿಕ ಮಾತುಗಳನ್ನು ಭಾವ ಸಮಾಧಿಯನ್ನು ನೋಡಿ ಇವರು ನಿಜವಾಗಿಯೂ ಭಗವಂತನಿಗಾಗಿ ಸರ್ವಸ್ವವನ್ನು ತ್ಯಜಿಸಿರುವರು ಮತ್ತು ಏನು ಹೇಳುತ್ತಿರುವರೊ ಅದನ್ನು ಸ್ವತಃ ಪಾಲಿಸಿರುವರು ಎಂಬುದು ಮನಸ್ಸಿಗೆ ಸ್ಪಷ್ಟವಾಯಿತು. 'ನಿಮ್ಮಗಳನ್ನೆಲ್ಲ ಹೇಗೆ ನೋಡುತ್ತೇನೆಯೊ, ನಿಮ್ಮಗಳೊಡನೆ ಹೇಗೆ ಮಾತನಾಡುತ್ತೇನೆಯೊ, ಹಾಗೆಯೇ ಭಗವಂತನನ್ನು ನೋಡಬಹುದು ಮತ್ತು ಮಾತನಾಡಿಸಬಹುದು. ಆದರೆ ಅದು ಯಾರಿಗೆ ಬೇಕಾಗಿದೆ? ಜನರು ಹೆಂಡತಿ ಮಕ್ಕಳ ಶೋಕದಿಂದ ಕೊಡಗಟ್ಟಳೆ ಕಣ್ಣೀರು ಸುರಿಸುತ್ತಾರೆ. ವಿಷಯವಸ್ತುವಿಗಾಗಿ, ಹಣಕ್ಕಾಗಿ ಕಣ್ಣೀರು ಸುರಿಸುತ್ತಾರೆ. ಆದರೆ ಭಗವಂತನನ್ನು ಕಾಣಲಿಲ್ಲವಲ್ಲ ಎಂದು ಕಣ್ಣೀರು ಸುರಿಸುವವರು ಯಾರು? ಅವನಿಗಾಗಿ ವ್ಯಾಕುಲತೆಯಿಂದ ಕರೆದರೆ ಅವನು ಖಂಡಿತಾ ದರ್ಶನ ನೀಡುವನು.' ಅವರ ಬಾಯಿಂದ ಈ ಮಾತುಗಳನ್ನು ಕೇಳಿ ಇವರು ಇತರ ಧರ್ಮ

ಪ್ರಚಾರಕರಂತೆ ಕಲ್ಪನೆ ಅಥವಾ ರೂಪಕಗಳ ಸಹಾಯದಿಂದ ಈ ರೀತಿ ಮಾತನಾಡುತ್ತಿಲ್ಲ, ನಿಜವಾಗಿಯೂ ಸರ್ವಸ್ವವನ್ನೂ ತ್ಯಜಿಸಿ, ಸಂಪೂರ್ಣ ಮನಸ್ಸಿನಿಂದ ಭಗವಂತನನ್ನು ಕರೆದು ಮತ್ತು ಅವನ ಪ್ರತ್ಯಕ್ಷ ದರ್ಶನವನ್ನು ಪಡೆದು ಹೀಗೆ ಹೇಳುತ್ತಿರುವರು ಎಂದೆನಿಸಿತು. ಆಗ ಅವರ ಹಿಂದಿನ ವರ್ತನೆಗೂ ಮತ್ತು ಈಗಿನ ಮಾತುಕತೆಗಳಿಗೂ ಸಾಮಂಜಸ್ಯವನ್ನು ಕಾಣಲಾಗಲಿಲ್ಲ. ಆಗ ನನಗೆ ಆಂಗ್ಲ ತತ್ತ್ವಜ್ಞಾನಿಗಳು ತಿಳಿಸಿರುವ ಅರ್ಧೋನ್ಮಾದ (monomaniac)ದ ವಿಷಯ ಮನಸ್ಸಿಗೆ ಬಂತು. ಇವರೂ ಅದೇ ವರ್ಗಕ್ಕೆ ಸೇರಿರಬಹುದೆಂದು ನಾನಂದುಕೊಂಡೆ. ಮನಸ್ಸಿನಲ್ಲಿ ಹೀಗೆ ನಿಶ್ಚಯಿಸಿದರೂ ಭಗವಂತನಿಗಾಗಿ ಅವರ ಅದ್ಭುತ ತ್ಯಾಗವನ್ನು ಮಾತ್ರ ಮರೆಯಲಾಗಲಿಲ್ಲ. ಹುಚ್ಚರಾದರೂ ಭಗವಂತನಿಗಾಗಿ ಈ ರೀತಿ ತ್ಯಾಗ ಮಾಡುವ ವ್ಯಕ್ತಿಗಳು ಈ ಜಗತ್ತಿನಲ್ಲಿ ಅತ್ಯಂತ ವಿರಳ, ಹುಚ್ಚರಾದರೂ ಇವರು ಮಹಾಪವಿತ್ರರು, ಮಹಾತ್ಯಾಗೀ ಮತ್ತು ಶ್ರದ್ಧೆ, ಪೂಜೆ ಮತ್ತು ಸನ್ಮಾನಕ್ಕೆ ಸಂಪೂರ್ಣ ಅರ್ಹರು ಎಂದು ನಾನು ಭಾವಿಸಿದೆ. ಹೀಗೆ ಭಾವಿಸುತ್ತಾ ಅವರ ಪಾದಕ್ಕೆ ವಂದಿಸಿ ಅವರಿಂದ ಬೀಳ್ಕೊಂಡು ಕಲ್ಕತ್ತೆಗೆ ಹಿಂದಿರುಗಿದೆ."

ಯಾರನ್ನು ನೋಡಿದಾಗಲೇ ಶ್ರೀರಾಮಕೃಷ್ಣರಲ್ಲಿ ಅಂಥಾ ಅದ್ಭುತ ಭಾವಾವೇಶ ಉಂಟಾಯಿತೊ ಅವರ ಹಿಂದಿನ ವಿಷಯಗಳನ್ನೆಲ್ಲ ತಿಳಿಯಬೇಕೆಂಬ ಕುತೂಹಲ ಯಾರಿಗಾದರೂ ಸ್ವಾಭಾವಿಕವಾಗಿಯೇ ಉಂಟಾಗುವುದು. ಆದ್ದರಿಂದ ಅದನ್ನು ಸಂಕ್ಷೇಪವಾಗಿ ತಿಳಿಸಿಕೊಡಲು ಪ್ರಯತ್ನಿಸುತ್ತೇವೆ.

10. ನರೇಂದ್ರನಾಥನು ಆಗ ವಿದ್ಯಾಭ್ಯಾಸ, ಸಂಗೀತ ಇಷ್ಟರಲ್ಲೇ ನಿರತನಾಗಿರಲಿಲ್ಲ. ತೀವ್ರ ಆಧ್ಯಾತ್ಮಿಕ ಪ್ರೇರಣೆಯಿಂದ ಅಖಂಡ ಬ್ರಹ್ಮಚರ್ಯವನ್ನು ಪಾಲಿಸುತ್ತಿದ್ದನು ಮತ್ತು ಕಠೋರ ತಪಸ್ಸನ್ನು ಆಚರಿಸುತ್ತಿದ್ದನು. ಅವನು ಸಸ್ಯಾಹಾರವನ್ನು ಸ್ವೀಕರಿಸುತ್ತಾ ಭೂಮಿ ಅಥವಾ ಕಂಬಳಿಯ ಮೇಲೆ ರಾತ್ರಿ ಮಲಗಿಕೊಳ್ಳುತ್ತಿದ್ದ. ಅವನ ತಂದೆಯ ಮನೆಯ ಹತ್ತಿರವೇ ಅವನ ಅಜ್ಜಿಯ ಬಾಡಿಗೆ ಮನೆ ಇತ್ತು. ಪ್ರವೇಶ ಪರೀಕ್ಷೆಯ ನಂತರ ಆ ಮನೆಯ ಮಹಡಿಯ ಮೇಲಿನ ಕೊಠಡಿಯೊಂದರಲ್ಲೇ ಹೆಚ್ಚಾಗಿ ವಾಸಿಸುತ್ತಿದ್ದನು. ಯಾವುದಾದರೂ ಕಾರಣದಿಂದ ಅಲ್ಲಿ ಇರುವುದು ಅನಾನುಕೂಲವಾದರೆ ಅದರ ಪಕ್ಕದಲ್ಲಿಯೆ ಒಂದು ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡು ಪ್ರತ್ಯೇಕವಾಗಿರುತ್ತಿದ್ದ. ಕುಟುಂಬದ ಸಂಬಂಧಿಕರೆಲ್ಲರಿಂದ ಬೇರೆಯಾಗಿದ್ದು ತನ್ನ ಉದ್ದೇಶ ಸಾಧನದಲ್ಲಿ ನಿರತನಾಗಿದ್ದ. ವಿಶಾಲ ಹೃದಯಿಯಾದ ಅವನ ತಂದೆ ಮತ್ತು ಮನೆಯ ಇತರರು ಮನೆಯಲ್ಲಿ ಗಲಾಟೆ ಇದ್ದುದರಿಂದ ಓದುವುದಕ್ಕೆ ತೊಂದರೆಯಾಗುವುದೆಂದು ಅವನು ಪ್ರತ್ಯೇಕವಾಗಿ ವಾಸಿಸುತ್ತಿದ್ದಾನೆ ಎಂದು ಭಾವಿಸಿದರು.

11. ನರೇಂದ್ರನಾಥನು ಆಗ ಬ್ರಹ್ಮಸಮಾಜಕ್ಕೆ ಹೋಗಿ ಬರುತ್ತಿದ್ದನು. ನಿರಾಕಾರ ಸಗುಣ ಬ್ರಹ್ಮದ ಅಸ್ತಿತ್ವದಲ್ಲಿ ನಂಬಿಕೆ ಉಳ್ಳವನಾಗಿ ಅದರ ಧ್ಯಾನದಲ್ಲಿ ಬಹಳ ಹೊತ್ತು ಕಳೆಯುತ್ತಿದ್ದ. ತರ್ಕದ ಮೂಲಕ ನಿರಾಕಾರ ಈಶ್ವರನನ್ನು ಪ್ರತಿಪಾದಿಸುವುದರಿಂದಲೇ ಅವನು ತೃಪ್ತನಾಗದೆ ಇತರ ಸಾಧಾರಣರಂತಲ್ಲದೆ ಅವನನ್ನು ಸಾಕ್ಷಾತ್ಕರಿಸಿ

ಕೊಳ್ಳುವುದರಲ್ಲಿಯೂ ಅತ್ಯಾಸಕ್ತನಾಗಿದ್ದನು. ನಿಜವಾಗಿಯೂ ಭಗವಂತನು ಇರುವುದೇ ಆದರೆ ಹೃತ್ಪೂರ್ವಕ ವ್ಯಾಕುಲತೆಯಿಂದ ಕರೆದರೆ ಅವನು ತನ್ನ ನಿಜಸ್ವರೂಪವನ್ನು ಖಂಡಿತಾ ಮರೆಮಾಚಲಾರ, ತನ್ನನ್ನು ಪಡೆಯುವ ಮಾರ್ಗವನ್ನು ತಾನೇ ತೋರಿಸಿ ಕೊಡುವನು ಮತ್ತು ಅವನನ್ನು ಪಡೆಯುವುದಲ್ಲದೆ ಜೀವನದ ಎಲ್ಲ ಉದ್ದೇಶಗಳೂ ವಿಡಂಬನೆ ಮಾತ್ರ—ಎಂದು ಅವನ ಹೃದಯ ಯಾವಾಗಲೂ ಹೇಳುತ್ತಿತ್ತು. ಅವನು ನಮಗೆ ಒಮ್ಮೆ ತಿಳಿಸಿದ್ದ ;

12. "ನನಗೆ ಯೌವನ ಪ್ರಾಪ್ತವಾದಂದಿನಿಂದ ನಾನು ಪ್ರತಿದಿನ ರಾತ್ರೆ ಮಲಗುವಾಗ ಎರಡು ಆದರ್ಶಗಳು ನನ್ನ ಮುಂದೆ ಕಾಣಿಸಿಕೊಳ್ಳುತ್ತಿದ್ದವು. ಒಂದು : ಅಪಾರ ಧನವನ್ನು ಸಂಪಾದಿಸಿ ಜನಬಲದಿಂದ ಕೂಡಿದವನಾಗಿ ಸಂಸಾರದಲ್ಲಿ ಯಾರ್ಯಾರು ದೊಡ್ಡವರಿರುವರೊ ಅವರೆಲ್ಲರಿಗೆ ಶಿಖರಪ್ರಾಯವಾಗಿ ಮೆರೆಯುವುದು. ಈ ರೀತಿಯಾಗುವ ಸಾಮರ್ಥ್ಯ ನನ್ನಲ್ಲಿದೆ ಎಂಬ ಪೂರ್ಣ ಭರವಸೆ ನನ್ನಲ್ಲಿತ್ತು. ಎರಡನೆಯದು : ಸಂಸಾರದ ಎಲ್ಲವನ್ನೂ ತ್ಯಜಿಸಿ ಭಗವಂತನೊಬ್ಬನನ್ನೆ ಆಶ್ರಯಿಸಿ ಕೌಪೀನಧಾರಿಯಾಗಿ ಕರತಲಭಿಕ್ಷೆ, ತರುತಲವಾಸ ಮಾಡುತ್ತ ಕಾಲಕಳೆಯುವುದು. ನಾನು ಇಚ್ಛೆ ಪಟ್ಟರೆ ಋಷಿಮುನಿಗಳಂತೆ ಆ ರೀತಿಯ ಜೀವನವನ್ನು ನಡೆಸಬಲ್ಲೆ ಎಂಬ ವಿಶ್ವಾಸವೂ ನನ್ನಲ್ಲಿತ್ತು. ಹೀಗೆ ಎರಡು ರೀತಿಯ ಆದರ್ಶಗಳು ನನ್ನ ಮುಂದೆ ಸುಳಿಯುತ್ತಿದ್ದವು. ಕೊನೆಯಲ್ಲಿ ಎರಡನೆಯದೆ ನನ್ನ ಹೃದಯದಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿತು. ಈ ರೀತಿಯಿಂದಲೆ ಮನುಷ್ಯನು ಪರಮಾನಂದವನ್ನು ಪಡೆಯಲು ಸಾಧ್ಯ, ನಾನು ಹೀಗೆಯೆ ಮಾಡುತ್ತೇನೆ ಎಂದು ಭಾವಿಸಿದೆ. ಆಗ ಇದೇ ಪ್ರಕಾರವಾಗಿ ಜೀವನದ ಸುಖವನ್ನು ಭಾವಿಸುತ್ತಾ ಭಾವಿಸುತ್ತಾ ಭಗವಚ್ಚಿಂತನೆಯಲ್ಲಿ ಮನಸ್ಸು ಮಗ್ನವಾಗುತ್ತಿತ್ತು, ಮತ್ತು ಹಾಗೆಯೆ ನಿದ್ದೆ ಬಂದುಬಿಡುತ್ತಿತ್ತು. ಆಶ್ಚರ್ಯವೇನೆಂದರೆ ಪ್ರತಿದಿನ ಹೀಗೆಯೆ ಅನೇಕ ದಿನಗಳವರೆಗೆ ನಡೆಯಿತು."

13. ಭಗವಂತನನ್ನು ಪಡೆಯುವುದಕ್ಕೆ ಉತ್ತಮವಾದ ಮಾರ್ಗ ಧ್ಯಾನವೊಂದೇ ಎಂದು ನರೇಂದ್ರನಾಥನು ಆ ವಯಸ್ಸಿನಲ್ಲಿಯೆ ನಿಶ್ಚಯಿಸಿಬಿಟ್ಟಿದ್ದನು. ಅದು ಅವನ ಪೂರ್ವ ಸಂಸ್ಕಾರದಿಂದುಂಟಾದ ಜ್ಞಾನ ಎಂದು ನಾವು ನಿಶ್ಚಯಿಸಬಹುದು. ಅವನಿಗೆ ನಾಲ್ಕು ಐದು ವರ್ಷವಿರುವಾಗಲೇ ಸೀತಾರಾಮ, ಮಹಾದೇವ ಮುಂತಾದ ದೇವದೇವಿಯರ ಚಿಕ್ಕ ಚಿಕ್ಕ ಮಣ್ಣಿನ ಮೂರ್ತಿಯನ್ನು ಅಂಗಡಿಯಿಂದ ಕೊಂಡುಕೊಂಡು ಬರುತ್ತಿದ್ದ. ಅವುಗಳನ್ನು ಪುಷ್ಪಗಳಿಂದ ಅಲಂಕರಿಸಿ ಅವುಗಳ ಮುಂದೆ ಧ್ಯಾನ ಮಾಡುವವನಂತೆ ಕಣ್ಣುಮುಚ್ಚಿಕೊಂಡು ನಿಷ್ಪಂದವಾಗಿ ಕುಳಿತುಕೊಳ್ಳುತ್ತಿದ್ದ. ಮಧ್ಯೆ ಮಧ್ಯೆ ಕಣ್ಣನ್ನು ತೆಗೆದು ನೋಡುತ್ತಿದ್ದ, ಈ ನಡುವೆ ತಲೆಗೂದಲು ಜಟೆಯಂತೆ ಬೆಳೆದು ಮರದ ಬೇರಿನಂತೆ ನೆಲವನ್ನು ಪ್ರವೇಶಿಸಿದೆಯೊ ಅಂತ. ಏಕೆಂದರೆ ಧ್ಯಾನ ಮಾಡುತ್ತ ಮಾಡುತ್ತ ಋಷಿಮುನಿಗಳ ಜಟೆ ಬೆಳೆದು ನೆಲದ ಒಳಗೆ ಹೋಗುತ್ತಿತ್ತು ಎಂದು ಮನೆಯ ವೃದ್ಧ ಮಹಿಳೆಯರು ಹೇಳುತ್ತಿದ್ದುದನ್ನು ಅವನು ಕೇಳಿದ್ದ. ಒಮ್ಮೆ ಅದೇ ಸಮಯದಲ್ಲಿ ಅವನು ಹರಿ ಎಂಬ ಹೆಸರಿನ ನೆರೆಯ ಬಾಲಕನೊಡನೆ ಯಾರಿಗೂ ತಿಳಿಯದಂತೆ ಮನೆಯ ಒಂದು

ಏಕಾಂತ ಸ್ಥಳದಲ್ಲಿ ಧ್ಯಾನಕ್ಕೆ ಕುಳಿತನು. ಎಷ್ಟು ಹೊತ್ತಾದರೂ ಧ್ಯಾನ ಮುಗಿಯಲೇ ಇಲ್ಲ. ಎಲ್ಲರೂ ಬಾಲಕನನ್ನು ಹುಡುಕುತ್ತಾ ನಾಲ್ಕೂ ಕಡೆ ಓಡಾಡಿದರು. ಬಾಲಕನೇ ದಾರಿ ತಪ್ಪಿ ಎಲ್ಲೋ ಹೋಗಿರಬೇಕೆಂದು ಎಲ್ಲರೂ ಭಾವಿಸಿದರು. ಕೊನೆಗೆ ಮನೆಯ ಆ ಭಾಗವು ಅಗುಳಿ ಹಾಕಲ್ಪಟ್ಟಿದ್ದನ್ನು ಕಂಡು ಒಬ್ಬನು ಅದನ್ನು ಒಡೆದು ಒಳಗೆ ಪ್ರವೇಶಿಸಿದನು. ಬಾಲಕನು ಒಳಗಡೆ ನಿಷ್ಪಂದವಾಗಿ ಕುಳಿತಿದ್ದನು. ಈ ಘಟನೆಯನ್ನು ಅವನ ತಾಯಿ ನಮಗೆ ತಿಳಿಸಿದ್ದಳು. ಇದೊಂದು ಬಾಲ್ಯಕಲ್ಪನೆಯಾದರೂ ಕೂಡ ಇದರಿಂದ ನರೇಂದ್ರನು ಎಂಥಾ ಸಂಸ್ಕಾರಗಳನ್ನು ಪಡೆದು ಜನ್ಮವೆತ್ತಿದ್ದನು ಎಂಬುದನ್ನು ತಿಳಿಯಬಹುದು. ಆ ಸಮಯದಲ್ಲಿ ಅವನ ಸಂಗಡಿಗರಾರಿಗೂ ಅವನು ನಿತ್ಯ ಧ್ಯಾನಾಭ್ಯಾಸ ಮಾಡುತ್ತಾನೆ ಎಂದು ತಿಳಿದಿರಲಿಲ್ಲ. ಏಕೆಂದರೆ ರಾತ್ರಿ ಎಲ್ಲರೂ ಮಲಗಿದ ಮೇಲೆ ಒಳಗಿನಿಂದ ಬಾಗಿಲನ್ನು ಹಾಕಿಕೊಂಡು ಅವನು ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದ. ಕೆಲವೊಮ್ಮೆ ಅವನ ಧ್ಯಾನ ಎಷ್ಟೊಂದು ಗಾಢವಾಗಿರುತ್ತಿತ್ತೆಂದರೆ ಇಡೀ ರಾತ್ರಿ ಕಳೆದ ಮೇಲೆ ಅವನಿಗೆ ಸಮಯ ಪ್ರಜ್ಞೆ ಉಂಟಾಗುತ್ತಿತ್ತು.

14. ಈ ಸಮಯಕ್ಕೆ ಸ್ವಲ್ಪ ಮುಂಚೆ ನಡೆದ ಒಂದು ಘಟನೆಯಿಂದ ಅವನ ಧ್ಯಾನ ಪ್ರವೃತ್ತಿಯು ಹೆಚ್ಚು ಜಾಗ್ರತಗೊಂಡಿತು. ಒಂದು ದಿನ ಅವನು ತನ್ನ ಸ್ನೇಹಿತರೊಡನೆ ಆದಿ ಬ್ರಹ್ಮಸಮಾಜದ ಆಚಾರ್ಯ ಮಹರ್ಷಿ ದೇವೇಂದ್ರನಾಥರನ್ನು ನೋಡಲು ಹೋದನು. ಆ ಸಂದರ್ಭದಲ್ಲಿ ಮಹರ್ಷಿಗಳು ಪ್ರೀತಿಯಿಂದ ಆ ಯುವಕನನ್ನು ತಮ್ಮ ಬಳಿ ಕೂರಿಸಿಕೊಂಡು ಅನೇಕ ಒಳ್ಳೆಯ ಉಪದೇಶಗಳನ್ನಿತ್ತರು. ಮತ್ತು ಪ್ರತಿದಿನ ಭಗವಂತನನ್ನು ಧ್ಯಾನ ಮಾಡಲು ಹೇಳಿದರು. ನರೇಂದ್ರನನ್ನು ನಿರ್ದೇಶಿಸಿ ಅವರು ಹೇಳಿದರು : "ನಿನ್ನಲ್ಲಿ ಯೋಗಿಯ ಲಕ್ಷಣಗಳಿವೆ. ನೀನು ಧ್ಯಾನವನ್ನು ಅಭ್ಯಾಸ ಮಾಡಿದರೆ ಯೋಗಶಾಸ್ತ್ರಗಳಲ್ಲಿ ಹೇಳಿರುವ ಅನುಭವಗಳನ್ನು ಬೇಗನೆ ಪಡೆಯುವೆ." ನರೇಂದ್ರನಿಗೆ ಮಹರ್ಷಿಗಳ ಮೇಲೆ ಅವರ ಸಚ್ಚಾರಿತ್ರ್ಯದಿಂದಾಗಿ ಮೊದಲಿನಿಂದಲೂ ತುಂಬಾ ಗೌರವವಿತ್ತು. ಆದ್ದರಿಂದ ಅವರ ಸಲಹೆಯ ಮೇರೆಗೆ ಮೊದಲಿಗಿಂತಲೂ ಹೆಚ್ಚು ಉತ್ಸಾಹದಿಂದ ಧ್ಯಾನಾಭ್ಯಾಸವನ್ನು ಮಾಡಿದನು ಎಂಬುದರಲ್ಲಿ ಸಂದೇಹವಿಲ್ಲ.

15. ಬಹುಮುಖ ಪ್ರತಿಭೆಯ ಲಕ್ಷಣಗಳು ನರೇಂದ್ರನಲ್ಲಿ ಚಿಕ್ಕಂದಿನಿಂದಲೂ ಕಾಣಿಸಿಕೊಂಡವು. ಅವನು ಮುಗ್ಧಬೋಧ ಎಂಬ ಹೆಸರಿನ ಸಂಸ್ಕೃತ ವ್ಯಾಕರಣದ ಎಲ್ಲಾ ಸೂತ್ರಗಳನ್ನು ಕಂಠಪಾಠ ಮಾಡಿಕೊಂಡನು. ಹಿರಿಯ ಸಂಬಂಧಿಕರೊಬ್ಬರು ಅವನನ್ನು ತಮ್ಮ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪ್ರತಿದಿನ ಅವನ ಹಿಂದಿನ ವಂಶಸ್ಥರುಗಳ ಹೆಸರುಗಳನ್ನು ದೇವದೇವಿಯರ ಸ್ತೋತ್ರಗಳನ್ನು ಮತ್ತು ಮೇಲೆ ಹೇಳಿದ ವ್ಯಾಕರಣ ಸೂತ್ರಗಳನ್ನು ಬೋಧಿಸುತ್ತಿದ್ದರು. ಆರನೆಯ ವಯಸ್ಸಿನಲ್ಲಿಯೇ ಅವನು ಸಂಗೀತಕ್ಕೆ ಅಳವಡಿಸಿದ ರಾಮಾಯಣವನ್ನು ಕಂಠಪಾಠ ಮಾಡಿಕೊಂಡನು. ಆ ಪ್ರದೇಶದಲ್ಲಿ ಎಲ್ಲಿಯಾದರೂ ಅದನ್ನು ಹಾಡಿದರೆ ಅಲ್ಲಿ ಅವನು ಉಪಸ್ಥಿತನಿದ್ದೇ ಇರುತ್ತಿದ್ದ. ಒಂದು ದಿನ ಒಂದು ಸ್ಥಳದಲ್ಲಿ ಒಬ್ಬ ಹಾಡುಗಾರನು ಈ ರಾಮಾಯಣ ಗೀತೆಯನ್ನು

ಹಾಡುತ್ತಿದ್ದನು. ಒಂದು ಕಡೆ ಅವನಿಗೆ ನೆನಪಿಗೆ ಬರಲಿಲ್ಲ. ನರೇಂದ್ರನು ಕೂಡಲೇ ಅದನ್ನು ಹೇಳಿಬಿಟ್ಟನು. ಹಾಡುಗಾರನು ಪ್ರೀತಿಯಿಂದ ಅವನನ್ನು ಆದರಿಸಿ ಕೆಲವು ಸಿಹಿ ತಿಂಡಿಗಳನ್ನು ಕೊಟ್ಟನು. ಆ ಸಂದರ್ಭದಲ್ಲಿ ರಾಮಾಯಣ ಪಠನವನ್ನು ಕೇಳುತ್ತಿರುವಾಗ ಹನುಮಂತನು ಏನಾದರೂ ಬಂದಿರುವನೇ ಎಂದು ಸುತ್ತಲೂ ನೋಡುತ್ತಿದ್ದ. ಏಕೆಂದರೆ ಎಲ್ಲಿ ರಾಮಾಯಣ ಕಥೆಯು ನಡೆಯುತ್ತದೊ ಅಲ್ಲಿ ನಾನಿರುತ್ತೇನೆಂದು ಹನುಮಂತನು ಮಾತು ಕೊಟ್ಟಿರುವನು. ಅವನ ಸ್ಮೃತಿಶಕ್ತಿ ಶ್ರುತಿಧರನದಂತಿತ್ತು, ಒಮ್ಮೆ ಕೇಳಿದರೆ ಅವನು ನೆನಪಿಟ್ಟುಕೊಳ್ಳುತ್ತಿದ್ದ, ಒಮ್ಮೆ ನೆನಪಿಟ್ಟುಕೊಂಡರೆ ಅದನ್ನು ಎಂದೂ ಮರೆಯುತ್ತಿರಲಿಲ್ಲ. ಚಿಕ್ಕಂದಿನಿಂದಲೂ ಅವನು ಓದುವ ವಿಧಾನ ಬೇರೆ ಹುಡುಗರದಂತಿರಲಿಲ್ಲ. ಅವನನ್ನು ಶಾಲೆಗೆ ಸೇರಿಸಿದಾಗ ಅವನ ಪ್ರತಿನಿತ್ಯದ ಅಧ್ಯಯನಕ್ಕೆ ಸಹಾಯ ಮಾಡಲು ಒಬ್ಬ ಶಿಕ್ಷಕನನ್ನು ನೇಮಿಸಲಾಗಿತ್ತು. ನರೇಂದ್ರನು ಹೇಳುತ್ತಾನೆ : "ಅವನು ಮನೆಗೆ ಬಂದಾಗ ನನ್ನ ಇಂಗ್ಲಿಷ್ ಮತ್ತು ಬಂಗಾಳಿ ಪುಸ್ತಕಗಳನ್ನು ತಂದು ಅವನಿಗೆ ತೋರಿಸಿ ಯಾವ ಪುಸ್ತಕದ ಯಾವ ಭಾಗವನ್ನು ಇಂದು ಅಧ್ಯಯನ ಮಾಡಬೇಕು ಎಂಬುದನ್ನು ಅವನಿಗೆ ಹೇಳುತ್ತಿದ್ದೆ. ಅನಂತರ ಸುಮ್ಮನೆ ಕುಳಿತುಕೊಂಡು ಬಿಡುತ್ತಿದ್ದೆ ಅಥವಾ ಮಲಗಿ ಬಿಡುತ್ತಿದ್ದೆ. ಉಪಾಧ್ಯಾಯನು ತಾನೇ ಪಾಠವನ್ನು ಅಭ್ಯಾಸ ಮಾಡುವವನಂತೆ ಆ ಪುಸ್ತಕದ ಭಾಗಗಳನ್ನು ಮತ್ತೆ ಮತ್ತೆ ಓದಿ ಎರಡು ಮೂರು ಬಾರಿ ಅರ್ಥಗಳನ್ನು ಉಚ್ಚರಿಸಿ ಹೊರಟು ಹೋಗುತ್ತಿದ್ದ. ಅಷ್ಟರಲ್ಲಿಯೆ ನನ್ನ ಅಧ್ಯಯನ ಮುಗಿಯುತ್ತಿತ್ತು." ದೊಡ್ಡವನಾದ ಮೇಲೆ ಪರೀಕ್ಷೆಗೆ ಎರಡು ತಿಂಗಳುಗಳು ಮುಂಚೆಯಷ್ಟೆ ಆ ಪರೀಕ್ಷೆಗೆ ಸಂಬಂಧಪಟ್ಟ ವಿಷಯವನ್ನು ಅಧ್ಯಯನ ಮಾಡಲು ಪ್ರಾರಂಭಿಸುತ್ತಿದ್ದ. ಉಳಿದ ಸಮಯದಲ್ಲಿ ತನ್ನ ಅಭಿರುಚಿಗನುಗುಣವಾಗಿ ಬೇರೆ ಬೇರೆ ಪುಸ್ತಕಗಳನ್ನು ಓದುತ್ತಿದ್ದ. ಹೀಗೆ ಪ್ರವೇಶ ಪರೀಕ್ಷೆಗೆ ಕೂರುವುದಕ್ಕೆ ಮುಂಚೆಯೆ ಅವನು ಇಂಗ್ಲಿಷ್ ಮತ್ತು ಬಂಗಾಳಿಯ ಎಲ್ಲ ಸಾಹಿತ್ಯಗಳನ್ನು ಮತ್ತು ಅನೇಕ ಐತಿಹಾಸಿಕ ಗ್ರಂಥಗಳನ್ನು ಓದಿ ಮುಗಿಸಿದ್ದನು. ಈ ರೀತಿ ಮಾಡುತ್ತಿದ್ದುದರ ಫಲವಾಗಿ ಪರೀಕ್ಷೆಗೆ ಸ್ವಲ್ಪ ಮುಂಚೆ ಅವನು ತುಂಬ ಪರಿಶ್ರಮ ಪಟ್ಟು ಓದಬೇಕಾಗಿತ್ತು. ಈ ಸಂಬಂಧವಾಗಿ ಒಮ್ಮೆ ಮಾತನಾಡುತ್ತ ಅವನು ಒಮ್ಮೆ ನಮಗೆ ಹೇಳಿದ : "ಪ್ರವೇಶ ಪರೀಕ್ಷೆಗೆ ಇನ್ನು ಎರಡು ಮೂರು ದಿನ ಇರುವಾಗ ನೋಡುತ್ತೇನೆ. ಜ್ಯಾಮಿತಿಯನ್ನು ಏನೂ ಓದಿಯೇ ಇಲ್ಲ ಎಂದು. ಆಗ ಇಡೀ ರಾತ್ರೆ ಕುಳಿತು ಅದನ್ನು ಓದತೊಡಗಿದೆ. ೨೪ ಘಂಟೆಗಳಲ್ಲಿ ಅದಕ್ಕೆ ಸಂಬಂಧಪಟ್ಟ ನಾಲ್ಕು ಪುಸ್ತಕಗಳನ್ನು ಆಳವಾಗಿ ಅಧ್ಯಯನ ಮಾಡಿ ಪರೀಕ್ಷೆಗೆ ಕುಳಿತೆ." ಭಗವಂತನ ಇಚ್ಛೆಯಿಂದ ಅವನು ದೃಢಕಾಯನೂ ಅಗಾಧಮೇಧಾಶಕ್ತಿ ಉಳ್ಳವನೂ ಆಗಿದ್ದನು. ಈ ಕಾರಣದಿಂದಲೇ ಅವನಿಗೆ ಹಾಗೆ ಮಾಡಲು ಸಾಧ್ಯವಾಯಿತು.

16. ನರೇಂದ್ರನು ಬೇರೆ ಬೇರೆ ಪುಸ್ತಕಗಳನ್ನು ಓದಿ ಕಾಲಕಳೆಯುತ್ತಿದ್ದನು ಎಂದು ಕೇಳಿದಾಗ ಅವನು ಕಾದಂಬರಿ ನಾಟಕಗಳನ್ನು ಓದಿ ಸಮಯವನ್ನು ಹಾಳು ಮಾಡುತ್ತಿದ್ದನೆಂದು ತಿಳಿಯಬಾರದು. ಒಂದೊಂದು ಸಮಯದಲ್ಲಿ ಒಂದೊಂದು ವಿಷಯಕ್ಕೆ

ಸಂಬಂಧಪಟ್ಟ ಪುಸ್ತಕಗಳನ್ನು ಓದುವುದರಲ್ಲಿ ಪ್ರಬಲ ಆಸಕ್ತಿ ಉಂಟಾಗುತ್ತಿತ್ತು. ಆ ಸಮಯದಲ್ಲಿ ಆ ವಿಷಯಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಎಷ್ಟು ಸಂಗ್ರಹಿಸಲು ಸಾಧ್ಯವೊ ಅಷ್ಟನ್ನೂ ಓದಿ ಅರಗಿಸಿಕೊಳ್ಳುತ್ತಿದ್ದನು. ಹೀಗೆ ೧೮೭೯ ರಲ್ಲಿ ಪ್ರವೇಶ ಪರೀಕ್ಷೆಯ ವರ್ಷದ ಪ್ರಾರಂಭದಲ್ಲಿ ಭಾರತ ಇತಿಹಾಸಕ್ಕೆ ಸಂಬಂಧಪಟ್ಟ ಎಲ್ಲಾ ಪುಸ್ತಕಗಳನ್ನು ಓದ ಬೇಕೆಂದು ಅವನಿಗೆ ವಿಶೇಷ ಆಸಕ್ತಿ ಉಂಟಾಯಿತು.ಆಗ ಅವನು ಮಾರ್ಷ್‌ಮನ್, ಎಲ್ಫಿನ್ ಸ್ಟನ್ ಮತ್ತು ಇತರ ಇತಿಹಾಸಕಾರರ ಗ್ರಂಥಗಳನ್ನು ಓದಿ ಮುಗಿಸಿದನು. ಎಫ್. ಎ. ಪರೀಕ್ಷೆಗೆ ಓದುತ್ತಿರುವಾಗ ಅವನು ಇಂಗ್ಲಿಷ್‌ನಲ್ಲಿ ತರ್ಕಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನೆಲ್ಲ ಓದಿ ಕರಗತ ಮಾಡಿಕೊಂಡನು. ಅವನು ಬಿ. ಎ. ಪರೀಕ್ಷೆಗೆ ಓದುತ್ತಿರುವಾಗ ಐರೋಪ್ಯ ಇತಿಹಾಸವನ್ನು ಪಾಶ್ಚಾತ್ಯ ತತ್ತ್ವಶಾಸ್ತ್ರವನ್ನು ಅಧ್ಯಯನ ಮಾಡುವ ತೀವ್ರ ಆಸೆ ಉಂಟಾಯಿತು. ಹೀಗೆಯೆ ಬೇರೆ ವಿಷಯಗಳಲ್ಲಿಯೂ ಅವನ ಅಧ್ಯಯನಾಸಕ್ತಿ ತೀವ್ರ ವಾಗಿತ್ತು.

17. ಹೀಗೆ ಅನೇಕ ಗ್ರಂಥಗಳ ಓದುವಿಕೆಯಿಂದಾಗಿ ಪ್ರವೇಶ ಪರೀಕ್ಷೆಯಾದಂದಿ ನಿಂದ ನರೇಂದ್ರನ ಶೀಘ್ರ ಪಠಣ ಶಕ್ತಿ ಅತ್ಯಧಿಕವಾಯ್ತು. ಅವನು ಹೇಳುತ್ತಿದ್ದನು. ಅಂದಿನಿಂದ ಯಾವುದೇ ಪುಸ್ತಕವನ್ನು ಓದುವುದಕ್ಕೆ ತೆಗೆದುಕೊಂಡರೂ ಅದನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಪ್ರತಿಸಾಲನ್ನು ಓದಬೇಕಾಗಿರಲಿಲ್ಲ. ಪ್ರತಿ ಪ್ಯಾರಾದ ಮೊದಲ ಮತ್ತು ಕೊನೆಯ ಸಾಲುಗಳನ್ನು ಓದಿಬಿಟ್ಟರೆ ಅದರ ಅರ್ಥ ತಿಳಿದು ಬಿಡುತ್ತಿತ್ತು. ಕೊನೆಗೆ ಈ ಶಕ್ತಿ ಇನ್ನೂ ವೃದ್ಧಿಯಾಗಿ ಪ್ರತಿಪ್ಯಾರಾವನ್ನು ಓದಬೇಕಾಗಿರಲಿಲ್ಲ. ಪ್ರತಿಪುಟದ ಮೊದಲ ಮತ್ತು ಕೊನೆಯ ಸಾಲುಗಳನ್ನು ಓದಿದರೆ ಸಾಕಾಗುತ್ತಿತ್ತು. ಗ್ರಂಥಕಾರನು ಯಾವುದೋ ವಿಷಯವನ್ನು ತರ್ಕದ ಮೂಲಕ ತಿಳಿಸಿಕೊಡುತ್ತಿರುವಾಗ ನಾಲ್ಕು ಐದು ಪುಟಗಳನ್ನು ಉಪಯೋಗಿಸಿದ್ದರೆ ಆ ತರ್ಕ ಸರಣಿಯ ಪ್ರಾರಂಭವನ್ನು ಓದಿಬಿಟ್ಟರೆ ಆ ಪುಟಗಳಲ್ಲಿ ಹೇಳಿರುವುದೆಲ್ಲ ಅರ್ಥವಾಗಿಬಿಡುತ್ತಿತ್ತು.

18. ಬಹುಗ್ರಂಥಗಳ ಪಠಣ ಮತ್ತು ಆಳವಾದ ಚಿಂತನೆ ಇವುಗಳ ಫಲವಾಗಿ ನರೇಂದ್ರನು ತರ್ಕಪ್ರಿಯನಾಗಿದ್ದನು. ಆದರೆ ಅವನು ಎಂದೂ ಕುತರ್ಕ ಮಾಡುತ್ತಿರಲಿಲ್ಲ. ಮನಸ್ಸಿನಲ್ಲಿ ಅವನು ಯಾವುದನ್ನು ಸತ್ಯವೆಂದು ತಿಳಿದಿರುತ್ತಿದ್ದನೋ ಅದನ್ನೆ ತರ್ಕದ ಮೂಲಕ ಸಮರ್ಥಿಸಲು ಪ್ರಯತ್ನಿಸುತ್ತಿದ್ದನು. ಆದರೆ ತಾನು ಸತ್ಯವೆಂದು ಯಾವುದನ್ನು ತಿಳಿದಿರುತ್ತಿದ್ದನೊ ಅದಕ್ಕೆ ವಿರುದ್ಧವಾದ ಭಾವವನ್ನೋ ಅಥವಾ ಅಭಿಪ್ರಾಯವನ್ನೊ ಅವನ ಮುಂದೆ ಯಾರಾದರೂ ವ್ಯಕ್ತಪಡಿಸಿದರೆ ಅದನ್ನು ಕೇಳಿ ಅವನಿಗೆ ಸುಮ್ಮನೆ ಕುಳಿತಿರ ಲಾಗುತ್ತಿರಲಿಲ್ಲ. ಹರಿತವಾದ ಯುಕ್ತಿ ಪ್ರಮಾಣಗಳ ಮೂಲಕ ವಿರುದ್ಧ ಪಕ್ಷದ ಮತ ವನ್ನು ಖಂಡಿಸಿ ಪ್ರತಿವಾದಿಯನ್ನು ಸೋಲಿಸುತ್ತಿದ್ದನು. ಅವನ ತರ್ಕದ ಮುಂದೆ ತಲೆ ತಗ್ಗಿಸದೆ ಇದ್ದವರು ಬಹಳ ವಿರಳ. ಅವನಿಂದ ಸೋತ ವಿರೋಧಿಗಳು ಅವನನ್ನು ಸ್ನೇಹದೃಷ್ಟಿಯಿಂದ ಕಾಣುತ್ತಿರಲಿಲ್ಲ ಎಂಬುದನ್ನು ಹೇಳಬೇಕಾಗಿಯೇ ಇಲ್ಲ. ವಿರೋ ಧಿಯ ಕೆಲವೇ ಶಬ್ದಗಳನ್ನು ಕೇಳಿ ಅವನ ವಾದದ ಧಾಟಿಯನ್ನು ಅರ್ಥ ಮಾಡಿಕೊಂಡು

ಬಿಡುತ್ತಿದ್ದನು. ಅವನು ಮುಗಿಸುವುದರೊಳಗೆ ಇವನ ಉತ್ತರ ಸಿದ್ಧವಾಗಿರುತ್ತಿತ್ತು. ವಿರೋಧಿಯನ್ನು ಸೋಲಿಸಲು ಅಷ್ಟೊಂದು ಒಳ್ಳೆಯ ವಾದಸರಣಿ ಹೇಗೆ ಅವನಿಗೆ ಕೂಡಲೇ ಸಿಕ್ಕುತ್ತಿತ್ತು ಎಂದು ಅವನನ್ನು ಕೇಳಿದಾಗ ಅವನು ಹೇಳಿದ: "ಈ ಪ್ರಪಂಚದಲ್ಲಿ ಎಷ್ಟು ಮಹಾ ಹೊಸ ವಿಚಾರಗಳಿವೆ ? ಆ ಕೆಲವು ವಿಚಾರಗಳನ್ನು ಅವುಗಳ ಪರ ಮತ್ತು ವಿರುದ್ಧ ವಾದಗಳೊಡನೆ ಅರ್ಥಮಾಡಿಕೊಂಡಿದ್ದೇ ಆದರೆ ಮುಂದೆ ಚಿಂತಿಸಬೇಕಾದ ಆವಶ್ಯಕತೆಯೇ ಇರುವುದಿಲ್ಲ, ಯಾವಾಗಲೂ ಉತ್ತರ ಸಿದ್ಧವಾಗಿಯೇ ಇರುತ್ತದೆ. ವಿರೋಧಿಯು ಯಾವುದೇ ರೀತಿ ತನ್ನ ವಾದವನ್ನು ಮಂಡಿಸಿದರೂ ಅದು ಕೆಲವೇ ವಿಚಾರಗಳ ಪರಧಿಯಲ್ಲಿ ಬರುತ್ತದೆ. ಯಾವುದೇ ವಿಷಯದಲ್ಲಿ ಹೊಸ ಭಾವನೆಗಳನ್ನು ಈ ಜಗತ್ತಿಗೆ ನೀಡುವವರು ಅತ್ಯಂತ ವಿರಳ." ತೀಕ್ಷ್ಣವಾದ ಬುದ್ಧಿ, ಅಸಾಧ್ಯ ಜ್ಞಾಪಕಶಕ್ತಿ ಮತ್ತು ಆಳವಾದ ಚಿಂತನಾ ಶಕ್ತಿ ಇವುಗಳಿಂದ ಕೂಡಿ ನರೇಂದ್ರನು ಅತ್ಯಂತ ಸ್ವಲ್ಪಕಾಲದಲ್ಲಿಯೇ ಯಾವುದೇ ವಿಷಯವನ್ನು ಕರಗತ ಮಾಡಿಕೊಂಡು ಬಿಡುತ್ತಿದ್ದನು. ಆದ್ದರಿಂದ ಆಟ, ವಿಹಾರ, ಸ್ನೇಹಿತರೊಡನೆ ನಲಿಯುವುದು ಇವಕ್ಕೆಲ್ಲ ಬೇಕಾದಷ್ಟು ಸಮಯಾವಕಾಶ ಅವನಿಗೆ ಸಿಗುತ್ತಿತ್ತು. ಅವನು ಬಹಳ ಸಮಯ ನಕ್ಕು ನಲಿದಾಟಗಳಲ್ಲಿ ಕಳೆಯುವುದನ್ನು ನೋಡಿ ಅಧ್ಯಯನದಲ್ಲಿ ಅವನಿಗೆ ಆಸಕ್ತಿಯೇ ಇಲ್ಲವೆಂದು ಜನರು ಭಾವಿಸಿದರು. ಈ ವಿಷಯದಲ್ಲಿ ಅವನನ್ನು ಅನುಕರಣೆ ಮಾಡಲು ಹೋಗಿ ಅನೇಕ ವಿದ್ಯಾರ್ಥಿಗಳು ತಮ್ಮ ವಿದ್ಯಾರ್ಥಿಜೀವನವನ್ನೇ ಹಾಳುಮಾಡಿಕೊಂಡರು.

19. ನರೇಂದ್ರನಿಗೆ ಜ್ಞಾನಾರ್ಜನೆಯಲ್ಲಿ ಎಷ್ಟು ಆಸಕ್ತಿ ಇತ್ತೋ ಎಲ್ಲಾ ಬಗೆಯ ಭೌತಿಕ ವ್ಯಾಯಾಮಗಳಲ್ಲೂ ಇತ್ತು. ಅವನು ಬಾಲಕನಿರುವಾಗ ತಂದೆಯು ಅವನಿಗಾಗಿ ಒಂದು ಸಣ್ಣಕುದುರೆಯನ್ನು ಕೊಂಡುಕೊಂಡಿದ್ದನು. ಇದರ ಫಲವಾಗಿ ಅವನು ಬೆಳೆದಂತೆ ಒಳ್ಳೆಯ ಕುದುರೆ ಸವಾರನಾದ. ಜಿಮ್ನಾಸ್ಟಿಕ್, ಕುಸ್ತಿ, ಮುಷ್ಟಿಯುದ್ಧ, ದೋಣಿವರಸೆ, ಕತ್ತಿವರಸೆ, ಗದಾವರಸೆ, ಈಜುವುದು ಇವುಗಳಲ್ಲೆಲ್ಲ ನಿಷ್ಣಾತನಾದನು. ಇವುಗಳೆಲ್ಲ ಅವನಿಗೆ ಶಾರೀರಿಕ ಶಕ್ತಿಯನ್ನೂ ಶಕ್ತಿಪ್ರಯೋಗದ ಕೌಶಲವನ್ನೂ ನೀಡಿದುವು. ಅಂದಿನ ದಿನಗಳಲ್ಲಿ ಈ ಎಲ್ಲ ವಿದ್ಯೆಗಳಿಗೆ ಸಂಬಂಧಿಸಿದಂತೆ ಒಂದು ಸ್ಪರ್ಧೆ ಏರ್ಪಡಿಸುತ್ತಿದ್ದರು. ಸ್ಪರ್ಧೆಯಲ್ಲಿ ಗೆದ್ದವರಿಗೆ ನವಗೋಪಾಲಮಿತ್ರನು ಏರ್ಪಡಿಸುತ್ತಿದ್ದ ಹಿಂದೂ ಉತ್ಸವದಲ್ಲಿ ಬಹುಮಾನ ವಿತರಣೆ ನಡೆಯುತ್ತಿತ್ತು. ನರೇಂದ್ರನೂ ಕೆಲವೊಮ್ಮೆ ಈ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದನು.

20. ಬಾಲ್ಯಕಾಲದಿಂದಲೂ ನರೇಂದ್ರನಾಥನು ಸ್ನೇಹಪರನು ಮತ್ತು ಸಾಹಸಪ್ರಿಯನೂ ಆಗಿದ್ದನು. ಈ ಎರಡು ಗುಣಗಳು ಅವನಿಗೆ ವಿದ್ಯಾರ್ಥಿಜೀವನದಲ್ಲಿ ಮತ್ತು ಅನಂತರ ಎಲ್ಲಾ ಕ್ಷೇತ್ರದಲ್ಲಿಯೂ ನಾಯಕತ್ವವನ್ನು ಪಡೆಯಲು ಸಹಾಯಕವಾಗಿದ್ದವು. ಅವನು ಏಳು ಎಂಟು ವರ್ಷದವನಿರುವಾಗ ತನ್ನ ಸ್ನೆಹಿತರುಗಳೊಡನೆ ಒಂದು ದಿನ ಪಶುಶಾಲೆಯನ್ನು ನೋಡಲು ಹೋಗಿದ್ದನು. ಅದು ಕಲ್ಕತ್ತೆಯ ದಕ್ಷಿಣಕ್ಕಿರುವ ಮೇಟೆಬುರಜ್ ಎಂಬ ಸ್ಥಳದಲ್ಲಿತ್ತು. ಲಕ್ನೋದ ಹಿಂದಿನ ನವಾಬನಾದ ವಸೀದ್ಆಲಿ ಎಂಬು

ವವನಿಗೆ ಸೇರಿತ್ತು. ಸ್ನೇಹಿತರುಗಳೆಲ್ಲಾ ಚಂದಾ ಎತ್ತಿ ಒಂದು ದೋಣಿಯನ್ನು ಬಾಡಿಗೆಗೆ ತೆಗೆದುಕೊಂಡು ಅಲ್ಲಿಗೆ ಹೊರಟಿದ್ದರು. ಹಿಂತಿರುಗಿ ಬರುವಾಗ ಸ್ನೇಹಿತನೊಬ್ಬನು ದೋಣಿಯಲ್ಲಿ ವಾಂತಿಮಾಡಿದನು. ದೋಣಿ ನಡೆಸುತ್ತಿದ್ದ ಮುಸ್ಲಿಮನು ಕಿಡಿಕಿಡಿಯಾದ. ಅದು ಚಾಂದ್‌ಪಾಲ್ ಘಟ್ಟವನ್ನು ತಲುಪಿದಾಗ ದೋಣಿಯನ್ನು ತೊಳೆದಹೊರತು ಯಾರನ್ನೂ ಕೆಳಗೆ ಬಿಡುವುದಿಲ್ಲ ಎಂದು ಗದರಿಸಿದ. ಬೇರೆಯವರಿಂದ ಅದನ್ನು ಶುದ್ಧ ಗೊಳಿಸು, ನಾವದಕ್ಕೆ ಹಣಕೊಡುತ್ತೇವೆ ಎಂದು ಹುಡುಗರು ಹೇಳಿದರೆ ಅವನು ಕೇಳಲೇ ಇಲ್ಲ. ಆಗ ದೊಡ್ಡ ಗಲಾಟೆ ಶುರುವಾಯಿತು. ಅಲ್ಲಿದ್ದ ದೋಣಿ ನಡೆಸುವವರೆಲ್ಲ ಬಂದು ಸೇರಿ ಹುಡುಗರಿಗೆಲ್ಲ ಹೊಡೆಯುವುದಕ್ಕೆ ಸಿದ್ಧವಾಗಿದ್ದರು. ಹುಡುಗರಿಗೆ ಏನು ಮಾಡಬೇಕೆಂದು ತೋಚಲಿಲ್ಲ. ಆ ಗುಂಪಿನಲ್ಲಿ ನರೇಂದ್ರನೇ ಚಿಕ್ಕವನು. ಈ ಗಲಾಟೆ ಯಲ್ಲಿ ಅವನು ಮಧ್ಯೆ ನುಸುಳಿಕೊಂಡು ದೋಣಿಯಿಂದ ಹೊರಬಂದನು. ಅವನು ತುಂಬ ಚಿಕ್ಕವನಿದ್ದುದರಿಂದ ದೋಣಿಯವನು ತಡೆಯಲಿಲ್ಲ. ಅವನು ದಡಕ್ಕೆ ಬಂದು ನೋಡು ತ್ತಾನೆ ಪರಿಸ್ಥಿತಿ ತುಂಬಾ ಗಂಭೀರವಾಗುತ್ತಿದೆ. ಏನು ಮಾಡುವುದೆಂದು ಯೋಚಿಸು ತ್ತಿರುವಾಗ ಇಬ್ಬರು ಇಂಗ್ಲಿಷ್ ಸೈನಿಕರು ಅಲ್ಲಿ ಓಡಾಡುತ್ತಿರುವುದನ್ನು ಕಂಡನು. ನರೇಂದ್ರನು ಓಡಿಹೋಗಿ ಅವರಿಗೆ ನಮಸ್ಕರಿಸಿ ಅವರ ಕೈಗಳನ್ನು ಹಿಡಿದುಕೊಂಡನು. ಅವನಿಗೆ ಇಂಗ್ಲಿಷ್ ಸರಿಯಾಗಿ ಬರುತ್ತಿರಲಿಲ್ಲ. ಆದರೂ ತನ್ನ ಮುರುಕಲು ಇಂಗ್ಲಿಷಿ ನಿಂದಲೇ ಪರಿಸ್ಥಿತಿಯನ್ನು ವಿವರಿಸಿ ಹೇಳುತ್ತಾ ಘಟನೆಯ ಜಾಗದಕಡೆ ಎಳೆಯತೊಡಗಿ ದನು. ಆ ಇಬ್ಬರು ಸೈನಿಕರು ಆ ಹುಡುಗನ ಮುಗ್ಧ ಮುಖವನ್ನೂ ಮತ್ತು ಧೈರ್ಯ ವನ್ನೂ ನೋಡಿ ಸಂತೋಷಗೊಂಡರು. ಅವರಿಬ್ಬರೂ ದೋಣಿಯ ಹತ್ತಿರ ಬಂದು ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡರು. ಲಾಠಿಯನ್ನು ಎತ್ತಿ ಮಕ್ಕಳನ್ನು ಬಿಟ್ಟು ಬಿಡಬೇಕೆಂದು ದೋಣಿಯವರಿಗೆ ಆಜ್ಞೆ ಮಾಡಿದರು. ಈ ಬಿಳಿಯ ಸೈನಿಕರನ್ನು ನೋಡಿದ್ದೇ ತಡ ದೋಣಿಯವರೆಲ್ಲ ತಮ್ಮ ತಮ್ಮ ದೋಣಿಗೆ ಹೊರಟುಹೋದರು. ನರೇಂದ್ರನ ಸ್ನೇಹಿತರಿಗೆ ದೊಡ್ಡ ವಿಪತ್ತಿನಿಂದ ಪಾರಾದಂತಾಯಿತು. ಸೈನಿಕರು ನರೇಂದ್ರನ ಯುಕ್ತಿ ಮತ್ತು ಧೀರ ವರ್ತನೆಯಿಂದ ಬಹಳ ಸಂತೋಷಗೊಂಡು ಅವನನ್ನು ತಮ್ಮ ಜೊತೆ ಥಿಯೇಟರಿಗೆ ಬರಬೇಕೆಂದು ಆಹ್ವಾನಿಸಿದರು. ಆದರೆ ನರೇಂದ್ರನು ಅವರಿಗೆ ಕೃತಜ್ಞತೆಯನ್ನು ಅರ್ಪಿಸಿ ಥಿಯೇಟರಿಗೆ ಬರುವುದಿಲ್ಲವೆಂದು ಹೇಳಿ ಹೊರಟು ಹೋದನು.

ಬಾಲ್ಯ ಜೀವನದ ಇನ್ನೂ ಅನೇಕ ಘಟನೆಗಳು ಅವನ ಅಪಾರ ಸಾಹಸ ಪ್ರವೃತ್ತಿ ಯನ್ನು ಪ್ರತಿಬಿಂಬಿಸುವುವು. ಇಂಥ ಒಂದೆರಡು ಘಟನೆಗಳನ್ನು ಇಲ್ಲಿ ವಿವರಿಸಿದರೆ ಅಪ್ರಸ್ತುತವಾಗಲಾರದು.

21. ಪ್ರಿನ್ಸ್ ಆಫ್ ವೇಲ್ಸ್ ಆಗಿದ್ದ ಏಳನೇ ಎಡ್ವರ್ಡನು ಭಾರತಕ್ಕೆ ಸಂದರ್ಶನ ವಿತ್ತಾಗ ನರೇಂದ್ರನಿಗೆ ಹತ್ತು ಅಥವಾ ಹನ್ನೆರಡು ವರ್ಷ ವಯಸ್ಸು. ಬ್ರಿಟಿಷ್ ನೌಕಾ ಪಡೆಯ ಬೃಹತ್ ನೌಕೆಯಾದ 'ಸಿರಾಪಿಸ್' ಆಗ ಕಲ್ಕತ್ತೆಗೆ ಬಂದಿತ್ತು. ಕಲ್ಕತ್ತೆಯ

ಅನೇಕ ಜನರು ನೌಕೆಯ ಒಳಗೆ ಹೋಗಿ ನೋಡುವುದಕ್ಕೆ ಅವಕಾಶವಿತ್ತು. ನರೇಂದ್ರನು ತನ್ನ ಸ್ನೇಹಿತರೊಡನೆ ಅದನ್ನು ನೋಡುವ ಆಸೆಯಿಂದ ಹೋದನು. ಪ್ರವೇಶದ ಅರ್ಜಿಯನ್ನು ತೆಗೆದುಕೊಂಡು ನರೇಂದ್ರನು ಚೌರಂಗಿಯ ಕಛೇರಿಗೆ ಹೋದನು. ಆದರೆ ಬಾಗಿಲು ಕಾಯುವವನು ಅವನನ್ನು ಬಿಡಲಿಲ್ಲ. ಹಿರಿಯ ವ್ಯಕ್ತಿಗಳಿಗೆ ಮಾತ್ರ ಪ್ರವೇಶ ಎಂದು ಹೇಳಿ ಬಿಟ್ಟನು. ಅವನು ಅಲ್ಲಿಯೇ ನಿಂತುಕೊಂಡು ಹೇಗೆ ಒಳಗೆ ಹೋಗುವುದೆಂದು ಉಪಾಯ ಹುಡುಕತೊಡಗಿದ. ಕಛೇರಿಯೊಳಗಿಂದ ಅನುಮತಿ ಪತ್ರವನ್ನು ತೆಗೆದುಕೊಂಡು ಹಿಂತಿರುಗಿ ಬರುತ್ತಿರುವವರನ್ನು ನೋಡಿದ. ಅವರೆಲ್ಲರೂ ಕಛೇರಿ ಮಹಡಿಯ ವರಾಂಡದಿಂದ ಬರುತ್ತಿದ್ದರು. ಅಲ್ಲಿಯೇ ಅಧಿಕಾರಿಯು ಕುಳಿತು ಅರ್ಜಿಗಳನ್ನು ಸ್ವೀಕರಿಸಿ ಅನುಮತಿ ಪತ್ರಗಳನ್ನು ನೀಡುತ್ತಿರುವುದಾಗಿ ಅವನು ಯೋಚಿಸಿದ. ಅಲ್ಲಿಗೆ ಹೋಗಲು ಬೇರೆ ಮಾರ್ಗವನ್ನು ಕಂಡುಹಿಡಿಯಬೇಕೆಂದು ನಿರ್ಧರಿಸಿ ಕಛೇರಿಯ ಸುತ್ತ ಓಡಾಡಿದ. ಆ ವರಾಂಡದ ಹಿಂಭಾಗದಲ್ಲಿ ಆಳುಗಳಿಗೆ ಓಡಾಡುವುದಕ್ಕೋಸ್ಕರ ಒಂದು ಸಣ್ಣ ಕಬ್ಬಿಣದ ಏಣಿ ಇತ್ತು. ಯಾರಿಗಾದರೂ ಗೊತ್ತಾದರೆ ತೊಂದರೆಯಾಗುವುದೆಂದು ಅವನಿಗೆ ತಿಳಿದಿದ್ದರೂ ಅವನು ಧೈರ್ಯ ಮಾಡಿ ಆ ಏಣಿಯ ಮೂಲಕ ಮೇಲೆ ಹೋದ. ಅರ್ಜಿದಾರರೆಲ್ಲ ಅಧಿಕಾರಿಯ ಸುತ್ತ ನೆರೆದಿದ್ದಾರೆ. ಅವನು ತಲೆ ತಗ್ಗಿಸಿಕೊಂಡು ಅನುಮತಿ ಪತ್ರಗಳಿಗೆ ರುಜು ಹಾಕುವುದರಲ್ಲಿ ನಿರತನಾಗಿದ್ದಾನೆ. ನರೇಂದ್ರನು ಎಲ್ಲರ ಜೊತೆ ನಿಂತು ಸಮಯಕ್ಕೆ ಸರಿಯಾಗಿ ಅನುಮತಿ ಪತ್ರವನ್ನು ಪಡೆದನು. ಆಫೀಸರ್‌ನಿಗೆ ಸಲಾಮು ಮಾಡಿ ಎಲ್ಲರ ಜೊತೆ ಮುಂಭಾಗದ ಮೆಟ್ಟಿಲುಗಳ ಮೂಲಕ ಕೆಳಗಿಳಿದು ಬಂದನು.

22. ಸಿಮ್ಲಾ ಭಾಗದ ಬಾಲಕರಿಗೆ ವ್ಯಾಯಾಮ ಶಿಕ್ಷಣ ಕೊಡಲು ಕಾರ್ನ್‌ವಾಲಿಸ್ ರಸ್ತೆಯಲ್ಲಿ ಒಂದು ವ್ಯಾಯಾಮ ಶಾಲೆಯಿತ್ತು. ಹಿಂದೂ ಉತ್ಸವದ ಸ್ಥಾಪಕನಾದ ನವಗೋಪಾಲಮಿತ್ರನು ಅದನ್ನು ಪ್ರಾರಂಭಿಸಿದನು. ಅದು ನರೇಂದ್ರನ ಮನೆಯ ಹತ್ತಿರವಿದ್ದುದರಿಂದ ಅವನು ಪ್ರತಿನಿತ್ಯ ತನ್ನ ಮಿತ್ರರೊಡನೆ ಅಲ್ಲಿಗೆ ಹೋಗಿ ವ್ಯಾಯಾಮ ಅಭ್ಯಾಸ ಮಾಡುತ್ತಿದ್ದನು. ಅವರಿಗೆ ನವಗೋಪಾಲಸೇನನ ಪರಿಚಯವಿದ್ದುದರಿಂದ ಅವನು ವ್ಯಾಯಾಮಶಾಲೆಯ ಉಸ್ತುವಾರಿಯನ್ನು ಅವರಿಗೇ ವಹಿಸಿಬಿಟ್ಟನು. ಒಮ್ಮೆ ವ್ಯಾಯಾಮಶಾಲೆಯಲ್ಲಿ ತೂಗುದಂಡ (Trapeze)ವನ್ನು ಕಟ್ಟಬೇಕಾಗಿತ್ತು. ಅದಕ್ಕೆ ಭಾರವಾದ ಮರದ ಚೌಕಟ್ಟನ್ನು ನಿಲ್ಲಿಸಲು ಹುಡುಗರು ಬಹಳ ಕಷ್ಟಪಟ್ಟರು. ಅವರು ಎಷ್ಟೇ ಪ್ರಯತ್ನಪಟ್ಟರೂ ಸಫಲರಾಗಲಿಲ್ಲ. ಹುಡುಗರ ಆ ಪ್ರಯತ್ನವನ್ನು ನೋಡಲು ರಸ್ತೆಯಲ್ಲಿ ದೊಡ್ಡಗುಂಪು ನೆರೆದಿತ್ತು. ಆದರೆ ಒಬ್ಬರೂ ಸಹಾಯ ಮಾಡಲು ಮುಂದೆ ಬರಲಿಲ್ಲ. ಆ ಗುಂಪಿನಲ್ಲಿ ಒಬ್ಬ ದಢೂತಿಯ ಇಂಗ್ಲಿಷ್ ನಾವಿಕನನ್ನು ಕಂಡು ನರೇಂದ್ರನು ಅವನನ್ನು ಸಹಾಯಕ್ಕೆ ಬರಲು ಕೇಳಿಕೊಂಡನು. ಅವನು ಸಂತೋಷದಿಂದ ಮುಂದೆ ಬಂದು ಹುಡುಗರ ಜೊತೆ ಸೇರಿದನು. ಅನಂತರ ಆ ಹುಡುಗರು ಮರದ ಚೌಕಟ್ಟಿನ ತುದಿಯನ್ನು ಹಗ್ಗದಿಂದ ಕಟ್ಟಿ ಮೇಲೆ ಎಳೆಯ ತೊಡಗಿದರು. ನಾವಿಕನು ಚೌಕಟ್ಟಿನ ಎರಡೂ

ಕಾಲುಗಳು ಹೊಂಡದ ಒಳಗೆ ಹೋಗಲು ನಿಧಾನವಾಗಿ ತಳ್ಳಿ ಕೊಡುತ್ತಿದ್ದನು. ಹೀಗೆ ಕಾರ್ಯ ಮುಂದುವರಿಯತೊಡಗಿತು. ಆದರೆ ಮಧ್ಯದಲ್ಲಿ ಹಗ್ಗ ಹರಿದು ತುಂಡಾಗಿ ಮರದ ಚೌಕಟ್ಟು ನೆಲದ ಮೇಲೆ ಬಿತ್ತು. ಆಗ ಅದರ ಒಂದು ಕಾಲು ಮೇಲೆದ್ದು ನಾವಿಕನ ತಲೆಗೆ ಬಲವಾಗಿ ಹೊಡೆಯಿತು. ಅವನು ಪ್ರಜ್ಞೆ ತಪ್ಪಿ ಬಿದ್ದನು. ಅವನ ತಲೆಯಿಂದ ಜೋರಾಗಿ ರಕ್ತ ಸುರಿಯುತ್ತಿರುವುದನ್ನು ನೋಡಿ ಅವನು ಮೃತಪಟ್ಟಿರಬಹುದೆಂದು ಭಯಪಟ್ಟರು. ಈಗ ಪೋಲಿಸರು ಬಂದು ಗಲಾಟೆ ಮಾಡುತ್ತಾರೆ ಎಂದು ಹೆದರಿ ಎಲ್ಲರೂ ತಮ್ಮ ಪಾಡಿಗೆ ತಾವು ಹೊರಟುಹೋದರು. ಈಗ ನರೇಂದ್ರ ಮತ್ತು ಅವನ ಇಬ್ಬರು ನಿಕಟ ಸ್ನೇಹಿತರು ಮಾತ್ರ ಘಟನಾ ಸ್ಥಳದಲ್ಲಿ ಉಳಿದರು. ಈ ವಿಪತ್ತಿನಿಂದ ಹೇಗೆ ಪಾರಾಗುವುದೆಂದು ನರೇಂದ್ರನು ಚಿಂತಿಸತೊಡಗಿದನು. ನರೇಂದ್ರನು ತನ್ನ ಬಟ್ಟೆಯನ್ನು ಹರಿದು ಒದ್ದೆಮಾಡಿ ನಾವಿಕನ ಘಾಯದ ಮೇಲೆ ಕಟ್ಟಿದನು. ಮುಖದ ಮೇಲೆ ನೀರನ್ನು ಸಿಂಪಡಿಸಿ ಗಾಳಿ ಹಾಕತೊಡಗಿದನು. ಅವನಿಗೆ ಚೈತನ್ಯ ಬಂದ ಮೇಲೆ ಅವನನ್ನು ಮೇಲಕ್ಕೆತ್ತಿ ಹತ್ತಿರವಿದ್ದ 'ಟ್ರೈನಿಂಗ್ ಅಕಾಡೆಮಿ' ಎಂಬ ಶಾಲೆಯ ಒಳಗೆ ಕರೆದುಕೊಂಡುಹೋಗಿ ಮಲಗಿಸಿದನು. ಕೂಡಲೇ ಒಬ್ಬ ವೈದ್ಯನನ್ನು ಕರೆದುಕೊಂಡು ಬರಬೇಕೆಂದು ಹೇಳಿಕಳುಹಿಸಿದನು. ವೈದ್ಯರು ಬಂದು ಪರೀಕ್ಷಿಸಿದರು. ಅಪಾಯವೇನೂ ಇಲ್ಲ; ಒಂದು ವಾರದಲ್ಲೇ ಗುಣವಾಗುತ್ತದೆ. ಎಂದು ಹೇಳಿದರು. ನರೇಂದ್ರನ ಶುಶ್ರೂಷೆ ಮತ್ತು ಔಷಧ, ಪಥ್ಯ ಇತ್ಯಾದಿಗಳ ಮೂಲಕ ಅವನು ಒಂದೇ ವಾರದಲ್ಲಿ ಗುಣವಾದನು. ಅನಂತರ ಆ ಪ್ರದೇಶದ ಶ್ರೀಮಂತ ವ್ಯಕ್ತಿಗಳಿಂದ ಸ್ವಲ್ಪ ಹಣ ಸಂಗ್ರಹಿಸಿ ಆ ನಾವಿಕನಿಗೆ ಕೊಟ್ಟು ಅವನನ್ನು ಕಳಿಸಿಕೊಟ್ಟನು. ಇಂಥ ವಿಪತ್ತಿನಲ್ಲಿಯೂ ವಿಚಲಿತನಾಗದೆ ಇರುವ ನರೇಂದ್ರನ ವಿಶಿಷ್ಟ ಸ್ವಭಾವಕ್ಕೆ ದೃಷ್ಟಾಂತವಾಗಿ ನಾವು ಇನ್ನೂ ಅನೇಕ ಘಟನೆಗಳನ್ನು ಕೇಳಿರುವೆವು.

23. ನರೇಂದ್ರನು ಬಾಲ್ಯಕಾಲದಿಂದಲೂ ಸತ್ಯನಿಷ್ಠನಾಗಿದ್ದನು. ಯೌವನಕ್ಕೆ ಕಾಲಿಟ್ಟಮೇಲೆ ಆ ನಿಷ್ಠೆಯು ಇನ್ನೂ ವೃದ್ಧಿಯಾಯಿತು. ಅವನು ಹೇಳುತ್ತಿದ್ದನು, "ಸುಳ್ಳು ಹೇಳಿದಂತಾಗುವುದೆಂದು ನಾನು ಎಂದೂ ಭೂತವಿದೆಯೆಂದು ಮಕ್ಕಳನ್ನು ಹೆದರಿಸುತ್ತಿರಲಿಲ್ಲ. ಮನೆಯಲ್ಲಿ ಯಾರಾದರೂ ಹಾಗೆ ಮಾಡಿದರೆ ನಾನು ಅವರನ್ನು ತರಾಟೆಗೆ ತೆಗೆದುಕೊಳ್ಳುತ್ತಿದ್ದೆ. ಇಂಗ್ಲಿಷ್ ಶಿಕ್ಷಣ ಮತ್ತು ಬ್ರಹ್ಮಸಮಾಜದ ಸಂಪರ್ಕ ಇವುಗಳ ಪರಿಣಾಮವಾಗಿ ವಾಚಿಕ ಸತ್ಯನಿಷ್ಠೆ ಅತ್ಯಂತ ವೃದ್ಧಿಯಾಯಿತು."

24. ದೃಢಕಾಯ, ಅತ್ಯಂತ ತೀಕ್ಷ್ಣಬುದ್ಧಿ, ಅದ್ಭುತ ಮೇಧಾಶಕ್ತಿ ಮತ್ತು ಪವಿತ್ರತೆ ಇವು ಜನ್ಮತಃ ಬಂದ ಲಕ್ಷಣಗಳಾಗಿದ್ದುವು ನರೇಂದ್ರನಿಗೆ. ಅವನು ಯಾವಾಗಲೂ ಆನಂದದಿಂದ ಇರುತ್ತಿದ್ದನು. ವ್ಯಾಯಾಮ, ಸಂಗೀತ, ವಾದ್ಯ, ನೃತ್ಯ, ಸ್ನೇಹಿತರೊಡನೆ ಹಾಸ್ಯ, ಪರಿಹಾಸ್ಯ ಇವುಗಳೆಲ್ಲದರಲ್ಲಿಯೂ ಅವನು ಮುಂದೆ ಇದ್ದನು. ಹೊರಗಿನ ಜನರು ಅವನ ಆನಂದದ ಕಾರಣವನ್ನು ಅರ್ಥಮಾಡಿಕೊಳ್ಳದೆ ಅವನ ನಡತೆಯಲ್ಲಿಯೇ ದೋಷವಿದೆಯೆಂದು ಅನೇಕರು ಕಲ್ಪಿಸಿಕೊಂಡಿದ್ದರು. ತೇಜಸ್ವಿಯಾದ

ನರೇಂದ್ರನಾಥನು ಜನರ ಹೊಗಳಿಕೆ ತೆಗಳಿಕೆಗಳಿಗೆ ಸ್ವಲ್ಪವೂ ಗಮನ ಕೊಡುತ್ತಿರಲಿಲ್ಲ. ಜನರ ಹುರುಳಿಲ್ಲದ ನಿಂದನೆಯನ್ನು ಅಪ್ರಮಾಣಿತಗೊಳಿಸಲು ಅವನ ಹೆಮ್ಮೆಯ ಮನಸ್ಸು ಎಂದಿಗೂ ಒಪ್ಪುತ್ತಿರಲಿಲ್ಲ.

25. ಬಡವರಿಗೆ ದಯೆತೋರಿಸುವುದು ನರೇಂದ್ರನ ಹುಟ್ಟುಗುಣವಾಗಿತ್ತು. ಅವನು ಬಾಲ್ಯಕಾಲದಲ್ಲಿ ಮನೆಗೆ ಭಿಕ್ಷುಕರು ಬಂದು ಬಟ್ಟೆ, ಪಾತ್ರೆ ಏನು ಕೇಳಿದರೂ ಕೊಟ್ಟುಬಿಡುತ್ತಿದ್ದನು. ಮನೆಯವರು ಇದನ್ನು ತಿಳಿದು ಬಾಲಕನನ್ನು ಬಯ್ಯುತ್ತಿದ್ದರು ಮತ್ತು ಭಿಕ್ಷುಕರಿಗೆ ಹಣಕೊಟ್ಟು ಆ ವಸ್ತುಗಳನ್ನು ಹಿಂತೆಗೆದುಕೊಳ್ಳುತ್ತಿದ್ದರು. ಹೀಗೆ ಅನೇಕ ಬಾರಿ ಆಗಲು ತಾಯಿಯು ಬಾಲಕ ನರೇಂದ್ರನನ್ನು ಮಹಡಿಯ ಮೇಲೆ ಒಂದು ಕೋಣೆಯಲ್ಲಿ ಕೂಡಿಹಾಕಿದಳು. ಆ ಸಮಯದಲ್ಲಿ ಒಬ್ಬ ಭಿಕ್ಷುಕನು ಬಂದು ಗಟ್ಟಿಯಾಗಿ ಭಿಕ್ಷೆ ಬೇಡತೊಡಗಿದನು. ಬಾಲಕನು ತಾಯಿಯ ಕೆಲವು ಉತ್ತಮ ವಸ್ತ್ರಗಳನ್ನು ಕಿಟಕಿಯ ಮೂಲಕ ಭಿಕ್ಷುಕನಿಗೆ ಕೊಟ್ಟನು.

26. ತಾಯಿಯು ಹೇಳುತ್ತಿದ್ದಳು : "ಬಾಲ್ಯಕಾಲದಿಂದಲೂ ನರೇಂದ್ರನಲ್ಲಿ ದೊಡ್ಡ ದೋಷವಿತ್ತು. ಯಾವುದೇ ಕಾರಣಕ್ಕಾದರೂ ಅವನಿಗೆ ಕೋಪ ಬಂದರೆ ಮುಗಿಯಿತು, ಅವನಿಗೆ ತನ್ನನ್ನು ಹಿಡಿತದಲ್ಲಿರಿಸಿಕೊಳ್ಳಲು ಆಗುತ್ತಿರಲಿಲ್ಲ. ಕೈಗೆ ಸಿಕ್ಕಿದ ವಸ್ತುಗಳನ್ನೆಲ್ಲ ಮುರಿದು ಪುಡಿಪುಡಿ ಮಾಡಿ ಎಸೆಯುತ್ತಿದ್ದ. ಪುತ್ರಕಾಮನೆಯಿಂದ ಕಾಶೀಧಾಮಕ್ಕೆ ಹೋಗಿ ವೀರೇಶ್ವರನಿಗೆ ವಿಶೇಷ ಹರಕೆ ಹೊತ್ತುಕೊಂಡೆ. ವೀರೇಶ್ವರನು ತನ್ನ ಭೂತವೊಂದನ್ನು ಕಳಿಸಿರಬೇಕೆಂದು ಕಾಣಿಸುತ್ತದೆ. ಹಾಗೆ ಇಲ್ಲದಿದ್ದರೆ ಕೋಪಗೊಂಡಾಗ ಭೂತದಂತೆ ಅಷ್ಟೊಂದು ಅಶಾಂತಿಯಿಂದ ವ್ಯವಹರಿಸುತ್ತಿದ್ದನೇಕೆ ?"

ಬಾಲಕನ ಈ ರೀತಿಯ ಕೋಪಕ್ಕೆ ಆಕೆಯು ಒಂದು ವಿಚಿತ್ರ ಔಷಧಿಯನ್ನು ಕಂಡುಹಿಡಿದಿದ್ದಳು. ಅವನನ್ನು ಎಷ್ಟೇ ಪ್ರಯತ್ನಿಸಿದರೂ ಶಾಂತಗೊಳಿಸಲು ಆಗದಿದ್ದಾಗ ಒಂದೆರಡು ಕೊಡ ನೀರನ್ನು 'ಶಿವ ಶಿವ' ಎಂದು ತಲೆಯ ಮೇಲೆ ಸುರಿಯುತ್ತಿದ್ದಳು. ಬಾಲಕನ ಕ್ರೋಧವು ಒಮ್ಮೆಯೆ ಶಾಂತವಾಗುತ್ತಿತ್ತು. ದಕ್ಷಿಣೇಶ್ವರಕ್ಕೆ ಬಂದು ಶ್ರೀರಾಮಕೃಷ್ಣರನ್ನು ಭೇಟಿಯಾದ ಮೇಲೆ ಒಂದು ದಿನ ನರೇಂದ್ರನಾಥನು ನಮಗೆ ಹೀಗೆ ಹೇಳಿದನು : "ಈ ಧರ್ಮದಿಂದ ನನಗೆ ಏನೂ ಪ್ರಯೋಜನವಾಗದೆ ಇರಬಹುದು. ಆದರೆ ಭಗವಂತನ ಕೃಪೆಯಿಂದ ಭಯಂಕರ ಕೋಪವನ್ನು ನಿಯಂತ್ರಿಸಲು ಸಾಧ್ಯವಾಗಿದೆ. ಮೊದಲು ಕೋಪ ಬಂದರೆ ನನ್ನ ಮೇಲೆ ನನಗೆ ಹಿಡಿತವೇ ಇರುತ್ತಿರಲಿಲ್ಲ ಮತ್ತು ಅನಂತರ ಪಶ್ಚಾತ್ತಾಪದಿಂದ ಕೊರಗುತ್ತಿದ್ದೆ. ಈಗ ನಿಷ್ಕಾರಣವಾಗಿ ಯಾರಾದರೂ ಹೊಡೆದರೆ ಅಥವಾ ಅಪಕಾರ ಮಾಡಿದರೆ ಮೊದಲಿನಂತೆ ಕೋಪಗೊಳ್ಳುವುದಿಲ್ಲ."

27. ಮೆದುಳು ಮತ್ತು ಹೃದಯ ಇವೆರಡೂ ಒಂದೇ ರೀತಿ ಬೆಳೆಯುವುದು ಅತ್ಯಂತ ಕೆಲವೇ ವ್ಯಕ್ತಿಗಳಲ್ಲಿ ಮಾತ್ರ. ಯಾರಲ್ಲಿ ಇದು ಸಾಧ್ಯವಾಗುವುದೊ ಅವರು ಸಮಾಜದಲ್ಲಿ ಮಹತ್ವದ ಸ್ಥಾನವನ್ನು ಪಡೆದೇ ಪಡೆಯುತ್ತಾರೆ. ಮತ್ತೆ ಯಾರು ಆಧ್ಯಾತ್ಮಿಕ ಜಗತ್ತಿನಲ್ಲಿ ಅಸಾಧಾರಣ ವ್ಯಕ್ತಿಗಳಾಗಿ ಮೆರೆದಿರುವರೊ ಅವರು ಮೆದುಳು ಮತ್ತು

ಹೃದಯಗಳ ಜೊತೆ ಅಸಾಮಾನ್ಯ ಕಲ್ಪನಾ ಶಕ್ತಿಯನ್ನೂ ಬಾಲ್ಯಕಾಲದಿಂದಲೇ ಪಡೆದಿರುತ್ತಾರೆ. ನರೇಂದ್ರನಾಥನ ಜೀವನದಲ್ಲಿಯೂ ಇವರ ಸತ್ಯತೆಯನ್ನು ಕಾಣುತ್ತೇವೆ. ಇದಕ್ಕೆ ದೃಷ್ಟಾಂತವಾಗಿ ಒಂದು ಘಟನೆಯನ್ನು ಉಲ್ಲೇಖಿಸಿದರೆ ಓದುಗರಿಗೆ ಈ ವಿಷಯ ಸ್ಪಷ್ಟವಾಗುವುದು. ನರೇಂದ್ರನಾಥನ ತಂದೆಯು ಒಮ್ಮೆ ಕೆಲಸದ ನಿಮಿತ್ತ ಮಧ್ಯಪ್ರದೇಶದ ರಾಯಪುರದಲ್ಲಿ ಕೆಲವುಕಾಲ ವಾಸವಾಗಿದ್ದನು. ಅಲ್ಲಿ ಹೆಚ್ಚು ಕಾಲ ಇರಬೇಕಾಗುತ್ತದೆಂದು ತಿಳಿದು ತನ್ನ ಪರಿವಾರದವರನ್ನು ಅಲ್ಲಿಗೆ ಕರೆಸಿಕೊಂಡನು. ಅವರನ್ನು ಕರೆದುಕೊಂಡು ಹೋಗುವ ಜವಾಬ್ದಾರಿ ಆಗ ನರೇಂದ್ರನಾಥನ ಮೇಲೆ ಇತ್ತು. ಆಗ ಅವನ ವಯಸ್ಸು ಹದಿನಾಲ್ಕು ಅಥವಾ ಹದಿನೈದು. ಆಗ ಅಲ್ಲಿಗೆ ರೈಲು ಇರಲಿಲ್ಲ. ದಟ್ಟವಾದ ಕಾಡಿನ ಮಧ್ಯೆ ಎತ್ತಿನಗಾಡಿಯಲ್ಲಿ ಹದಿನೈದು ದಿನಗಳಿಗೂ ಹೆಚ್ಚು ಪ್ರಯಾಣ ಮಾಡಬೇಕಿತ್ತು. ಇಷ್ಟೊಂದು ಶಾರೀರಿಕ ಕಷ್ಟವನ್ನು ಅನುಭವಿಸಬೇಕಾಗಿ ಬಂದರೂ ಕಾಡಿನ ಸೌಂದರ್ಯವನ್ನು ಸವಿಯುತ್ತಾ ಆ ಕಷ್ಟ, ಕಷ್ಟವೆಂದೇ ನರೇಂದ್ರನಿಗೆ ಅನಿಸಲಿಲ್ಲವಂತೆ. ಯಾರು ಈ ಭೂಮಿಯನ್ನು ಈ ಅನುಪಮವಾದ ವೇಷಭೂಷಣಗಳಿಂದ ಅಲಂಕರಿಸಿರುವರೊ ಆ ಅಸೀಮ ಶಕ್ತಿಯ ಮತ್ತು ಅನಂತಪ್ರೇಮದ ಅನುಭವವನ್ನು ಪಡೆದು ಅವನ ಹೃದಯ ಮುಗ್ಧವಾಯಿತು. ಅವನು ಹೇಳುತ್ತಿದ್ದನು : "ಕಾಡಿನ ಮಧ್ಯೆ ಹೋಗುತ್ತಿರುವಾಗ ನಾನು ಒಮ್ಮೆ ಏನು ನೋಡಿದೆನೊ ಮತ್ತು ಅನುಭವಿಸಿದೆನೊ ಅದು ನನ್ನ ಸ್ಮೃತಿಪಟಲದಲ್ಲಿ ಶಾಶ್ವತವಾಗಿ ಮತ್ತು ದೃಢವಾಗಿ ಅಚ್ಚೊತ್ತಿದೆ—ವಿಶೇಷವಾಗಿ ಒಂದು ದಿನದ ಘಟನೆ. ಉನ್ನತವಾದ ವಿಂಧ್ಯಪರ್ವತದ ಪ್ರದೇಶದಲ್ಲಿ ನಾವು ಅಂದು ಹೋಗುತ್ತಿದ್ದೆವು. ಹಾದಿಯ ಎರಡೂಕಡೆ ಗಿರಿಶಿಖರಗಳು ಗಗನಚುಂಬಿಯಾಗಿ ನಿಂತಿವೆ. ನಾನಾ ಜಾತಿಯ ಮರಬಳ್ಳಿಗಳು, ಫಲಪುಷ್ಪಗಳಿಂದ ಪರ್ವತ ತಪ್ಪಲು ಪ್ರದೇಶವು ಶೋಭಿಸುತ್ತಿದೆ. ನಾನಾವರ್ಣದ ಪಕ್ಷಿಸಂಕುಲಗಳು ಆಹಾರಕ್ಕಾಗಿ ಅತ್ತಿಂದಿತ್ತ ಹಾರಾಡುತ್ತ ತಮ್ಮ ಮಧುರ ನಾದದಿಂದ ಎಲ್ಲಾ ದಿಕ್ಕನ್ನು ತುಂಬಿದ್ದವು. ಇದನ್ನೆಲ್ಲ ನೋಡುತ್ತಿದ್ದಂತೆಯೆ ಮನಸ್ಸಿನಲ್ಲಿ ಒಂದು ಅಪೂರ್ವ ಶಾಂತಿ ಉಂಟಾಯಿತು. ಎತ್ತಿನ ಬಂಡಿಯು ನಿಧಾನವಾಗಿ ಮುಂದುವರಿದು ಒಂದು ಪ್ರದೇಶವನ್ನು ತಲುಪಿತು. ಅಲ್ಲಿ ಎರಡು ಪರ್ವತ ಶಿಖರಗಳು ಒಂದಕ್ಕೊಂದು ಕೂಡಿಕೊಂಡು ಹಾದಿಯು ಕಿರಿದಾಗಿತ್ತು. ಆಗ ಅವುಗಳ ಹಿಂಭಾಗವನ್ನು ದಿಟ್ಟಿಸಿ ನೋಡಿದಾಗ ಅಲ್ಲಿ ಒಂದು ಪರ್ವತದ ತುದಿಯಿಂದ ಕೆಳಗಿನವರೆಗೂ ವಿಸ್ತೃತವಾದ ಒಂದು ದೊಡ್ಡ ಬಿರುಕು ಕಂಡಿತು. ಅದರೊಳಗೆ ಕಲ್ಪನೆಗೂ ಮೀರಿದ ಅತ್ಯಂತ ದೊಡ್ಡದಾದ ಒಂದು ಜೇನುಗೂಡು ಇತ್ತು. ಯುಗ ಯುಗಾಂತರಗಳ ಪರಿಶ್ರಮದಿಂದ ಕಟ್ಟಲ್ಪಟ್ಟು ಆ ಇಡೀ ಬಿರುಕನ್ನೇ ಆವರಿಸಿಕೊಂಡಿದ್ದ ಅದನ್ನು ನೋಡಿ ನನಗೆ ಅತ್ಯಾಶ್ಚರ್ಯವಾಯಿತು. ನಾನು ಜೇನು ರಾಜ್ಯದ ಆದಿ ಅಂತ್ಯವನ್ನೇ ಆಳವಾಗಿ ಚಿಂತಿಸತೊಡಗಿದೆ. ಆಗ ಮೂರು ಜಗತ್ತನ್ನೂ ನಿಯಂತ್ರಿಸುವ ಭಗವಂತನ ಅನಂತ ಶಕ್ತಿಯ ಅನುಭವವಾಯಿತು. ಆ ಅನುಭವದಲ್ಲಿ ತಲ್ಲೀನನಾಗಿ ಸ್ವಲ್ಪ ಹೊತ್ತಿನ ಮಟ್ಟಿಗೆ ನನ್ನ ಬಾಹ್ಯಜ್ಞಾನವೇ ಹೊರಟು ಹೋಯಿತು. ಗಾಡಿಯಲ್ಲಿ ಎಷ್ಟು ಹೊತ್ತು ಆ ಸ್ಥಿತಿಯಲ್ಲಿದ್ದೆನೊ ನನಗೆ ತಿಳಿ

ಯಿಂದು. ನಾನು ಎಚ್ಚೆತ್ತಾಗ ನೋಡುತ್ತೇನೆ. ಮೇಲಿನ ಸ್ಥಾನದಿಂದ ನಾವು ಬಹುದೂರ ಹೋಗಿಯಾಗಿತ್ತು. ಗಾಡಿಯಲ್ಲಿ ನಾನೊಬ್ಬನೇ ಇದ್ದುದರಿಂದ ಯಾರಿಗೂ ಈ ವಿಷಯ ತಿಳಿಯಲಿಲ್ಲ." ಪ್ರಬಲ ಕಲ್ಪನೆಯ ಸಹಾಯದಿಂದ ಧ್ಯಾನಾಸಕ್ತನಾಗಿ ಅದರಲ್ಲಿಯೇ ತನ್ಮಯತೆಯನ್ನು ಪಡೆದ ಅನುಭವ ನರೇಂದ್ರನಾಥನ ಜೀವನದಲ್ಲಿ ಇದೇ ಮೊದಲನೆಯ ದಿರಬೇಕು.

28. ನರೇಂದ್ರನಾಥನ ಪೂರ್ವಿಕರ ಬಗ್ಗೆ ಸಂಕ್ಷೇಪವಾಗಿ ವಿವರಿಸಿ ಈ ಪ್ರಬಂಧ ವನ್ನು ಮುಕ್ತಾಯಗೊಳಿಸುತ್ತೇವೆ. ಅನೇಕ ಶಾಖೆಗಳಾಗಿ ವಿಂಗಡಿಸಲ್ಪಟ್ಟಿದ್ದ ಸಿಮ್ಲಾದ ದತ್ತ ಕುಟುಂಬವು ಕಲ್ಕತ್ತೆಯ ಪುರಾತನ ಕುಟುಂಬಗಳಲ್ಲಿ ಒಂದಾಗಿತ್ತು. ಮಧ್ಯಮ ವರ್ಗದ ಕಾಯಸ್ಥ ಕುಟುಂಬಗಳಲ್ಲಿ ಸಾಮಾಜಿಕ ಸ್ಥಾನ, ವಿದ್ಯೆ, ಧನ, ಈ ವಿಷಯಗಳಲ್ಲಿ ಪ್ರಸಿದ್ಧವಾಗಿತ್ತು. ನರೇಂದ್ರನಾಥನ ಪ್ರಪಿತಾಮಹನಾದ ರಾಮಮೋಹನ ದತ್ತನು ವಕೀಲ ವೃತ್ತಿಯಿಂದ ಸಾಕಷ್ಟು ಹಣ ಸಂಪಾದಿಸಿದ್ದನು. ಅವನ ಕುಟುಂಬ ತುಂಬಾ ದೊಡ್ಡದಾಗಿತ್ತು ಮತ್ತು ಅವನು ಆ ಪ್ರದೇಶದಲ್ಲಿ ಸುಪ್ರಸಿದ್ಧನಾಗಿದ್ದನು. ಅವನ ಮಗ ನಾದ ದುರ್ಗಾಚರಣನು ತಂದೆಯಿಂದ ಅಪಾರ ಸಂಪತ್ತನ್ನು ಪಡೆದಿದ್ದರೂ ಸ್ವಲ್ಪಕಾಲ ದಲ್ಲಿಯೇ ಸಂಸಾರದಲ್ಲಿ ವೈರಾಗ್ಯ ಉಂಟಾಗಿ ಪರಿವ್ರಾಜಕ ಜೀವನವನ್ನು ಅವಲಂಬಿಸಿ ದನು. ಬಾಲ್ಯ ಕಾಲದಿಂದಲೂ ಅವನಿಗೆ ಸಾಧುಸಂನ್ಯಾಸಿಗಳ ಮೇಲೆ ತುಂಬಾ ಭಕ್ತಿ ಇತ್ತಂತೆ. ಅವನು ಯೌವನಕ್ಕೆ ಕಾಲಿಟ್ಟ ಮೇಲೆ ಆ ಭಕ್ತಿಯ ಪ್ರಭಾವದಿಂದ ಅವನು ಶಾಸ್ತ್ರಾಧ್ಯಯನದಲ್ಲಿ ತೊಡಗಿದನು. ಸ್ವಲ್ಪ ಕಾಲದಲ್ಲಿಯೇ ಪ್ರಸಿದ್ಧ ಪಂಡಿತನೂ ಆದನು. ಅವನು ಮದುವೆಯಾಗಿದ್ದರೂ ಸಂಸಾರದಲ್ಲಿ ಆಸಕ್ತಿ ಇರಲಿಲ್ಲ. ತನ್ನ ಉದ್ಯಾನ ದಲ್ಲಿ ಸಾಧು ಸಂಗದಲ್ಲಿಯೇ ಹೆಚ್ಚು ಸಮಯವನ್ನು ಕಳೆಯುತ್ತಿದ್ದನು. ದುರ್ಗಾಚರಣನು ಶಾಸ್ತ್ರಮರ್ಯಾದೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಪುತ್ರಮುಖವನ್ನು ನೋಡಿದ ಸ್ವಲ್ಪ ಕಾಲದಲ್ಲಿಯೆ ಮನೆಯನ್ನು ಬಿಟ್ಟು ಹೊರಟುಹೋದನು ಎಂದು ಸ್ವಾಮಿ ವಿವೇಕಾ ನಂದರು ಹೇಳುತ್ತಾರೆ. ಸಂಸಾರವನ್ನು ಪರಿತ್ಯಜಿಸಿದ್ದರೂ ವಿಧಿಯ ನಿಯಮದಂತೆ ಎರಡು ಸಾರಿ ಬಂದು ಪತ್ನಿ ಮತ್ತು ಕುಟುಂಬದವರನ್ನು ನೋಡಿಕೊಂಡು ಹೋಗಿದ್ದನು. ಮಗ ವಿಶ್ವನಾಥನು ಎರಡು ಮೂರು ವರ್ಷದವನಿರುವಾಗ ಅವನ ಸಹಧರ್ಮಿಣಿ ಮತ್ತು ಸಂಬಂಧಿಕರು ಕಾಶಿಗೆ ಹೋಗಿ ಕೆಲವು ಕಾಲ ತಂಗಿದ್ದರು, ಬಹುಶಃ ದುರ್ಗಾಚರಣನನ್ನು ಹುಡುಕುವ ಉದ್ದೇಶದಿಂದಿರಬಹುದು. ಆಗ ರೈಲು ಇಲ್ಲದೆ ಇದ್ದುದರಿಂದ ಅನುಕೂಲಸ್ಥ ಕುಟುಂಬದವರು ದೋಣಿಯ ಮೂಲಕ ಕಾಶಿಗೆ ಹೋಗುತ್ತಿದ್ದರು. ದುರ್ಗಾಚರಣನ ಸಹಧರ್ಮಿಣಿಯೂ ಹಾಗೆಯೇ ಮಾಡಿದ್ದಳು. ಹಾದಿಯಲ್ಲಿ ಒಂದು ಜಾಗದಲ್ಲಿ ಶಿಶು ವಿಶ್ವನಾಥನು ನೌಕೆಯಿಂದ ನೀರಿಗೆ ಬಿದ್ದುಬಿಟ್ಟನು. ಅವನ ತಾಯಿಯೇ ಮೊದಲು ಅವನನ್ನು ರಕ್ಷಿಸಲು ನೀರಿಗೆ ಹಾರಿದಳು. ಬಹಳ ಕಷ್ಟದಿಂದ ಆಕೆಯನ್ನು ನೀರಿನಿಂದ ಎತ್ತಿ ನೌಕೆಗೆ ತರಲಾಯಿತು. ಆಗ ಅವಳು ಮಗುವನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಳು. ಹೀಗೆ ತಾಯಿಯ ಅಪಾರ ಪ್ರೀತಿಯೇ ವಿಶ್ವನಾಥನನ್ನು ಆಗ ರಕ್ಷಿಸಿದ್ದು.

ಕಾಶಿಗೆ ತಲುಪಿದ ಮೇಲೆ ದುರ್ಗಾಚರಣನ ಪ್ರತ್ನಿಯು ಪ್ರತಿನಿತ್ಯ ವಿಶ್ವನಾಥನ ದರ್ಶನಕ್ಕೆ ಹೋಗುತ್ತಿದ್ದಳು. ಮಳೆ ಬಂದು ದಾರಿ ಒದ್ದೆಯಾಗಿದ್ದುದರಿಂದ ಒಂದು ದಿನ ಆಕೆಯು ಮಂದಿರದ ಮುಂದೆ ಜಾರಿ ಬಿದ್ದು ಬಿಟ್ಟಳು. ಅದನ್ನು ನೋಡಿ ಸಾಧುವೊಬ್ಬನು ಓಡಿ ಬಂದು ಆಕೆಯನ್ನು ಎತ್ತಿ ಮೆಟ್ಟಿಲ ಮೇಲೆ ಕೂರಿಸಿದನು. ಅವಳಿಗೆ ತುಂಬಾ ಪೆಟ್ಟಾಗಿರಬೇಕೆಂದು ನೋಡುವಾಗ ನಾಲ್ಕು ಕಣ್ಣುಗಳೂ ಒಂದಾದವು. ಅವರಿಬ್ಬರಿಗೂ ಪರಸ್ಪರರ ಪರಿಚಯುವಾಯಿತು. ಆ ಸಂನ್ಯಾಸಿಯಾದ ದುರ್ಗಾಚರಣನು ಎರಡನೆಯ ಬಾರಿ ಆಕೆಯನ್ನು ನೋಡದೆ ಅಲ್ಲಿಂದ ಬೇಗ ಹೆಜ್ಜೆ ಹಾಕುತ್ತಾ ಹೊರಟುಹೋದನು.

ಶಾಸ್ತ್ರದ ವಿಧಿಯ ಪ್ರಕಾರ ಸಂನ್ಯಾಸಿಯು ಹನ್ನೆರಡು ವರ್ಷಗಳ ನಂತರ ಸ್ವರ್ಗಕ್ಕಿಂತಲೂ ಶ್ರೇಷ್ಠವಾದ ತನ್ನ ಜನ್ಮಭೂಮಿಯನ್ನು ಸಂದರ್ಶಿಸಬೇಕು. ದುರ್ಗಾಚರಣನೂ ಕೂಡ ಹನ್ನೆರಡು ವರ್ಷಗಳ ನಂತರ ಒಮ್ಮೆ ಕಲ್ಕತ್ತೆಗೆ ಬಂದು ತನ್ನ ಹಿಂದಿನ ಸ್ನೇಹಿತನೊಬ್ಬನ ಮನೆಯಲ್ಲಿ ತಂಗಿದ್ದನು. ತಾನು ಬಂದಿರುವ ಸುದ್ದಿ ತನ್ನ ಸಂಬಂಧಿಕರಿಗೆ ತಿಳಿಯಬಾರದೆಂದು ಆ ಸ್ನೇಹಿತನಿಗೆ ಸೂಚಿಸಿದ್ದನು. ಸಂಸಾರಿಯಾದ ಆ ಸ್ನೇಹಿತನು ದುರ್ಗಾಚರಣನ ಸೂಚನೆಯನ್ನು ಅಲಕ್ಷಿಸಿ ಗುಪ್ತವಾಗಿ ಅವನ ಸಂಬಂಧಿಕರಿಗೆ ಸುದ್ದಿಯನ್ನು ಕಳಿಸಿದನು. ಆಗ ಆ ಕುಟುಂಬದ ಅನೇಕ ಜನರು ಬಂದು ದುರ್ಗಾಚರಣನನ್ನು ಒತ್ತಾಯಪೂರ್ವಕವಾಗಿ ಎಳೆದುಕೊಂಡು ಹೋದರು. ದುರ್ಗಾಚರಣನು ಮನೆಗೆ ಹೋದರೂ ಯಾರೊಡನೆಯೂ ಮಾತನಾಡದೆ ಮನೆಯ ಒಂದು ಮೂಲೆಯಲ್ಲಿ ಕಣ್ಣು ಮುಚ್ಚಿಕೊಂಡು ಕಲ್ಲಿನಂತೆ ಕುಳಿತುಬಿಟ್ಟನು. ಹೀಗೆ ಮೂರು ಹಗಲು ಮೂರು ರಾತ್ರಿ ಅವನು ಕುಳಿತಿದ್ದನಂತೆ. ಹೀಗೆ ಆಹಾರವಿಲ್ಲದೆ ಪ್ರಾಣತ್ಯಾಗ ಮಾಡಿಬಿಡಬಹುದೆಂದು ಅವನ ಸಂಬಂಧಿಕರು ಹೆದರಿ ಮನೆಯ ಬಾಗಿಲನ್ನು ಮೊದಲಿನಂತೆ ತೆರೆದಿಟ್ಟರು. ಮರುದಿನ ಸಂನ್ಯಾಸಿ ದುರ್ಗಾಚರಣನು ಕಣ್ಮರೆಯಾಗಿದ್ದನು.

29. ದುರ್ಗಾಚರಣನ ಪುತ್ರನಾದ ವಿಶ್ವನಾಥನು ವಯಸ್ಸಾದಂತೆಲ್ಲ ಪಾರ್ಸೀ ಮತ್ತು ಆಂಗ್ಲ ಸಾಹಿತ್ಯದಲ್ಲಿ ಪ್ರಾವೀಣ್ಯವನ್ನು ಪಡೆದನು. ಕಲ್ಕತ್ತ ಹೈಕೋರ್ಟ್‌ನಲ್ಲಿ 'ಅಟಾರ್ನಿ'ಯಾಗಿ ಸೇರಿದನು. ಅವನು ದಾನಶೀಲ. ಸ್ನೇಹಿತರನ್ನು ಕಂಡರೆ ಪ್ರೀತಿ ಅವನಿಗೆ. ಎಷ್ಟೇ ಸಂಪಾದಿಸುತ್ತಿದ್ದರೂ ಅದನ್ನು ಇಟ್ಟುಕೊಳ್ಳುವ ಸ್ವಭಾವ ಅವನಿಗಿರಲಿಲ್ಲ. ತಂದೆಯ ಗುಣ ಪುತ್ರನಿಗೂ ಬಂದಿದ್ದರಿಂದಲೋ ಏನೊ ಹಣವನ್ನು ಕೂಡಿಡುವುದಾಗಲಿ, ಮಿತ ವ್ಯಯವಾಗಲಿ ಅವನಿಗೆ ಸಾಧ್ಯವಿರಲಿಲ್ಲ. ನಿಜವಾಗಿಯೂ ಅನೇಕ ವಿಷಯಗಳಲ್ಲಿ ವಿಶ್ವನಾಥನ ಸ್ವಭಾವ ಸಾಧಾರಣ ಗೃಹಸ್ಥರದಂತಿರಲಿಲ್ಲ. ನಾಳೆಯ ಯೋಚನೆ ಅವನು ಮಾಡಿದವನೇ ಅಲ್ಲ. ಅವನು ಪಾತ್ರಾಪಾತ್ರ ವಿವೇಚನೆಯಿಲ್ಲದೆ ಎಲ್ಲರಿಗೂ ಸಹಾಯ ಮಾಡುತ್ತಿದ್ದ. ಅವನಿಗೆ ತನ್ನ ಸಂಬಂಧಿಕರ ಮೇಲೆ ತುಂಬಾ ಪ್ರೇಮವಿತ್ತು. ಆದರೆ ಅವರಿಂದ ದೂರವಿದ್ದಾಗಲೂ ಅವರಿಂದ ಯಾವ ಸುದ್ದಿಯೂ ಇಲ್ಲದೆ ಬಹುಕಾಲ ನಿಶ್ಚಿಂತನಾಗಿರಬಲ್ಲವನಾಗಿದ್ದ.

30. ವಿಶ್ವನಾಥನು ಬುದ್ಧಿವಂತನೂ ಮೇಧಾವಿಯೂ ಆಗಿದ್ದ. ಸಂಗೀತ

ಮುಂತಾದ ಕಲೆಗಳಲ್ಲಿ ಅವನಿಗೆ ವಿಶೇಷ ಆಸಕ್ತಿ ಇತ್ತು. ಅವನಿಗೆ ಒಳ್ಳೆಯ ಶಾರೀರ ವಿತ್ತು ಮತ್ತು ಶಾಸ್ತ್ರೀಯವಾಗಿ ಸಂಗೀತವನ್ನು ಕಲಿಯದಿದ್ದರೂ ನಿಧುಬಾಬುವಿನ ಟಪ್ಪ ಮುಂತಾದುವನ್ನು ಸುಂದರವಾಗಿ ಹಾಡುತ್ತಿದ್ದನಂತೆ. ಸಂಗೀತವಿದ್ಯೆ ಉತ್ತಮ ಕಾಲ ಯಾಪನೆ ಎಂದು ಅವನ ಭಾವನೆಯಾಗಿತ್ತು. ಆದ್ದರಿಂದ ತನ್ನ ಜ್ಯೇಷ್ಠಪುತ್ರನಾದ ನರೇಂದ್ರನು ವಿದ್ಯಾರ್ಜನೆಯ ಜೊತೆ ಸಂಗೀತವನ್ನೂ ಕಲಿಯುವಂತೆ ಮಾಡಿದನು. ಅವನ ಸಹಧರ್ಮಿಣಿಯಾದ ಭುವನೇಶ್ವರೀದೇವಿಯು ಒಳ್ಳೆಯ ಮೇಧಾಶಕ್ತಿಯುಳ್ಳವಳಾಗಿದ್ದಳು. ವೈಷ್ಣವ ಭಿಕ್ಷುಕರು ಹಾಡುತ್ತಿದ್ದ ಭಜನೆಗಳನ್ನು ಒಮ್ಮೆ ಕೇಳಿದರೆ ಅವುಗಳರಾಗ, ತಾಳ ಎಲ್ಲವನ್ನೂ ಸರಿಯಾಗಿ ನೆನಪಿಟ್ಟುಕೊಳ್ಳುತ್ತಿದ್ದಳು. ವಿಶ್ವನಾಥನಿಗೆ ಬೈಬಲ್ ಮತ್ತು ಪಾರ್ಸೀಕವಿ ಹಫೀಜ್‌ನ ಗೀತೆಗಳನ್ನು ಓದುವುದರಲ್ಲಿ ತುಂಬಾ ಆಸಕ್ತಿ. ಕ್ರಿಸ್ತನ ಮಧುರ ಜೀವನಕ್ಕೆ ಸಂಬಂಧಿಸಿದ ಬೈಬಲ್ಲಿನ ಒಂದೆರಡು ಅಧ್ಯಾಯಗಳನ್ನು ಅವನು ಪ್ರತಿನಿತ್ಯ ಓದುತ್ತಿದ್ದನು. ತನ್ನ ಪತ್ನಿ ಪುತ್ರರು ಮತ್ತು ಇತರರಿಗೆ ಇದನ್ನು ಮತ್ತು ಹಫೀಜ್‌ನ ಪ್ರೇಮಗೀತೆಗಳನ್ನು ಓದಿ ಹೇಳುತ್ತಿದ್ದ. ಅವನು ಲಾಹೋರ್, ಲಕ್ನೋ ಮುಂತಾದ ಸ್ಥಳಗಳಲ್ಲಿದ್ದಾಗ ಮುಸ್ಲಿಮರ ಕೆಲವು ರೀತಿನೀತಿಗಳನ್ನು ಮೆಚ್ಚಿ ತನ್ನ ಜೀವನದಲ್ಲಿ ಅಳವಡಿಸಿಕೊಂಡನು. ಅವು ಅವನ ಜೀವನದ ಕೊನೆಗಾಲದವರೆಗೂ ಉಳಿದವು. ಇದರ ಪರಿಣಾಮವಾಗಿಯೆ ಮನೆಯಲ್ಲಿ ಪ್ರತಿನಿತ್ಯ ಪಲಾವ್ ತಿನ್ನುವ ರೂಢಿ ಬಂದಿರಬೇಕು.

31. ವಿಶ್ವನಾಥನು ಎಷ್ಟು ಹಾಸ್ಯಪ್ರಿಯನೊ ಅಷ್ಟೇ ಗಂಭೀರ ಸ್ವಭಾವದವನಾಗಿದ್ದನು. ತನ್ನ ಮಕ್ಕಳು ಏನಾದರೂ ತಪ್ಪು ಮಾಡಿದರೆ ಅವನು ಅತಿಯಾಗಿ ಬಯ್ಯುತ್ತಿರಲಿಲ್ಲ. ಆದರೆ ಅವರ ಸ್ನೇಹಿತರಿಗೆ ಅದು ತಿಳಿಯುವಂತೆ ಮಾಡಿ ಅವರು ನಾಚಿಕೆಯಿಂದ ಇನ್ನೆಂದೂ ಮಾಡದಂತೆ ಮಾಡುತ್ತಿದ್ದ. ಇದಕ್ಕೆ ಉದಾಹರಣೆಯಾಗಿ ಇಲ್ಲಿ ಒಂದು ಘಟನೆಯನ್ನು ಪ್ರಸ್ತಾಪಿಸುತ್ತೇವೆ. ಒಂದು ದಿನ ಅವನ ಜ್ಯೇಷ್ಠಪುತ್ರ ನರೇಂದ್ರನು ತಾಯಿಯೊಡನೆ ಜಗಳವಾಡುತ್ತಾ ಒಂದೆರಡು ಕಟುನುಡಿಗಳನ್ನು ಆಡಿದನು. ವಿಶ್ವನಾಥನು ಇದಕ್ಕಾಗಿ ಅವನನ್ನು ಬಯ್ಯುವುದರ ಬದಲು ನರೇಂದ್ರನು ತನ್ನ ಮಿತ್ರರನ್ನು ಸಂಧಿಸುವ ಕೋಣೆಯ ಮೇಲೆ ಅವನು ತಾಯಿಗೆ ಆಡಿದ ಮಾತನ್ನು ಒಂದು ಇದ್ದಿಲಿನ ತುಂಡಿನಿಂದ ದಪ್ಪ ಅಕ್ಷರಗಳಲ್ಲಿ ಬರೆದನು. ನರೇಂದ್ರ ಮತ್ತು ಅವನ ಸ್ನೇಹಿತರು ಆ ಕೋಣೆಯನ್ನು ಪ್ರವೇಶಿಸುವಾಗಲೆಲ್ಲ ಆ ಮಾತುಗಳು ಅವರ ಕಣ್ಣಿಗೆ ಬೀಳುತ್ತಿದ್ದುವು. ತನ್ನ ಈ ದುರ್ವರ್ತನೆಗೆ ನರೇಂದ್ರನ ಮುಖ ಅನೇಕ ದಿನಗಳವರೆಗೆ ಸಣ್ಣಗಾಯಿತು.

32. ವಿಶ್ವನಾಥನದು ದೊಡ್ಡ ಸಂಸಾರ. ಅನ್ನದಾನದಲ್ಲಿ ಅವನದು ಯಾವಾಗಲೂ ಮುಕ್ತಹಸ್ತ. ದೂರ ಸಂಬಂಧಿಕರನೇಕರು ಅವನ ಅನ್ನವನ್ನೇ ಉಂಡು ಜೀವಿಸುತ್ತ ಆಲಸ್ಯದಿಂದ ಕಾಲಕಳೆಯುತ್ತಿದ್ದರು. ಮತ್ತೆ ಕೆಲವರು ಮದ್ಯ, ಭಂಗಿ ಇತ್ಯಾದಿಯನ್ನು ಸೇವಿಸುತ್ತ ಜೀವನದ ಕಷ್ಟವನ್ನು ಮರೆಯಲು ಪ್ರಯತ್ನಿಸುತ್ತಿದ್ದರು. ನರೇಂದ್ರನಾಥನು ದೊಡ್ಡವನಾದಮೇಲೆ ಇಂಥ ಅಯೋಗ್ಯ ವ್ಯಕ್ತಿಗಳಿಗೆ ದಾನ ಮಾಡುವುದು ಸರಿಯಲ್ಲವೆಂದು ತಂದೆಯನ್ನು ಆಕ್ಷೇಪಿಸುತ್ತಿದ್ದನು. ವಿಶ್ವನಾಥನು ಅವನಿಗೆ

ಹೇಳುತ್ತಿದ್ದ : "ಮನುಷ್ಯ ಜೀವನ ಎಷ್ಟು ದುಃಖಮಯ ನಿನಗೆ ಗೊತ್ತೇನು ? ಇದು ನಿನಗೆ ಗೊತ್ತಾದಾಗ ಈ ದುಃಖದಿಂದ ಸ್ವಲ್ಪವಾದರೂ ಮುಕ್ತಿಯನ್ನು ಪಡೆಯಲು ಯಾರು ಅಮಲು ಪದಾರ್ಥವನ್ನು ಸೇವಿಸುವರೊ ಅವರನ್ನೂ ನೀನು ದಯಾರ್ದ್ರ ದೃಷ್ಟಿಯಿಂದ ನೋಡುವೆ."

33. ವಿಶ್ವನಾಥನಿಗೆ ಅನೇಕ ಗಂಡು ಮತ್ತು ಹೆಣ್ಣುಮಕ್ಕಳಿದ್ದರು. ಅವರೆಲ್ಲರೂ ವಿಶೇಷ ಸದ್ಗುಣಸಂಪನ್ನರಾಗಿದ್ದರು. ಆದರೆ ಹೆಣ್ಣುಮಕ್ಕಳಲ್ಲಿ ಅನೇಕರು ಹೆಚ್ಚು ಕಾಲ ಬದುಕಲಿಲ್ಲ. ಮೂರು ನಾಲ್ಕು ಹೆಣ್ಣುಮಕ್ಕಳ ನಂತರ ನರೇಂದ್ರನಾಥನು ಜನಿಸಿದ್ದರಿಂದ ತಂದೆತಾಯಿಗಳಿಗೆ ಅವನು ಹೆಚ್ಚು ಪ್ರಿಯನಾಗಿದ್ದನು. ೧೮೮೪ರ ಚಳಿಗಾಲದಲ್ಲಿ ವಿಶ್ವನಾಥನು ಹೃದಯರೋಗದಿಂದ ಪ್ರಾಣತ್ಯಾಗ ಮಾಡಿದನು. ಆಗ ನರೇಂದ್ರನಾಥನು ಬಿ.ಎ. ಪರೀಕ್ಷೆಗೆ ಓದುತ್ತಿದ್ದ. ತಂದೆಯ ಮರಣದಿಂದ ಪತ್ನೀ ಪುತ್ರರೆಲ್ಲರೂ ನಿರ್ಗತಿಕರಾದರು.

34. ನರೇಂದ್ರನ ತಾಯಿಯಾದ ಭುವನೇಶ್ವರೀದೇವಿಯ ಶ್ರೇಷ್ಠತೆಯ ಬಗ್ಗೆ ನಾವು ಬಹಳಷ್ಟು ಕೇಳಿರುವೆವು. ಆಕೆಯು ಸುಂದರಳೂ ದೈವಭಕ್ತಳೂ ಆಗಿದ್ದುದಷ್ಟೇ ಅಲ್ಲದೆ ಬುದ್ಧಿವಂತಳೂ ಕಾರ್ಯಕುಶಲಳೂ ಆಗಿದ್ದಳು. ಆಕೆಯ ಪತಿಯ ದೊಡ್ಡ ಸಂಸಾರದ ಕಾರ್ಯಭಾರವೆಲ್ಲವೂ ಅವಳ ಮೇಲೆಯೆ ಇತ್ತು. ಅವಳು ಎಲ್ಲ ಕಾರ್ಯಗಳನ್ನು ಎಷ್ಟು ದಕ್ಷತೆಯಿಂದ ನಡೆಸಿಕೊಂಡು ಹೋಗುತ್ತಿದ್ದಳೆಂದರೆ ಕಸೂತಿ ಮುಂತಾದ ಕಲಾತ್ಮಕ ಕೆಲಸಗಳಿಗೂ ಅವಳಿಗೆ ಸಮಯ ಸಿಕ್ಕುತ್ತಿತ್ತು. ಅವಳ ಶಿಕ್ಷಣ ರಾಮಾಯಣ, ಮಹಾಭಾರತ ಮತ್ತು ಇತರ ಧರ್ಮ ಗ್ರಂಥಗಳನ್ನು ಓದುವುದಕ್ಕೆ ಮಾತ್ರ ಸೀಮಿತವಾಗಿತ್ತು. ಆದರೆ ತನ್ನ ಪತಿ ಮಕ್ಕಳು ಮುಂತಾದವರಿಂದ ಎಷ್ಟೋ ವಿಷಯಗಳನ್ನು ಕೇಳಿ ತಿಳಿದುಕೊಂಡಿದ್ದಳು. ಅವಳ ತಿಳಿವಳಿಕೆ ಎಷ್ಟು ಗಾಢವಾಗಿತ್ತೆಂದರೆ ಅವಳು ಸಂಭಾಷಣೆ ನಡೆಸುವಾಗ ಇತರರಿಗೆ ಅವಳು ತುಂಬಾ ವಿದ್ಯಾವಂತಳೆಂದೇ ಅನಿಸುತ್ತಿತ್ತು. ಅವಳ ಸ್ಮೃತಿ ಶಕ್ತಿ ಅಗಾಧವಾಗಿತ್ತು. ಒಮ್ಮೆ ಕೇಳಿದ್ದನ್ನು ಅವಳು ಮರೆಯುತ್ತಿರಲಿಲ್ಲ. ಹಳೆಯ ಘಟನೆಗಳನ್ನು ಹೇಳಿಕೆಗಳನ್ನು ಅವು ಹಿಂದಿನದಿನದವೊ ಎನ್ನುವಂತೆ ಅಷ್ಟು ಸ್ಪಷ್ಟವಾಗಿ ಹೇಳುತ್ತಿದ್ದಳು. ಪತಿಯ ಮರಣದಿಂದ ವಿಪತ್ತಿಗೊಳಗಾದರೂ ಆಕೆಯು ತನ್ನ ದೃಢತೆಯನ್ನು ತಾಳ್ಮೆಯನ್ನು ಶಾಂತತೆಯನ್ನು ಪರಿಸ್ಥಿತಿಗೆ ಒಗ್ಗಿಕೊಳ್ಳುವ ಸಾಮರ್ಥ್ಯವನ್ನು ಅನುಕರಣೀಯವಾದ ರೀತಿಯಲ್ಲಿ ವ್ಯಕ್ತಪಡಿಸಿದಳು. ತಿಂಗಳಿಗೆ ಒಂದು ಸಾವಿರ ರೂಪಾಯಿ ಖರ್ಚು ಮಾಡುತ್ತಿದ್ದ ಮಹಿಳೆ ಈಗ ಕೇವಲ ಮೂವತ್ತು ರೂಪಾಯಿಯಲ್ಲಿ ಇಡೀ ಸಂಸಾರವನ್ನು ನಡೆಸಬೇಕಾಗಿತ್ತು. ಆದರೆ ಅವಳೆಂದೂ ಖಿನ್ನಳಾಗಲಿಲ್ಲ. ಅಷ್ಟೇ ಅಲ್ಪ ವರಮಾನದಲ್ಲಿ ಕುಟುಂಬದ ಎಲ್ಲ ಆಗುಹೋಗುಗಳನ್ನು ಎಷ್ಟು ದಕ್ಷ ರೀತಿಯಿಂದ ನಿರ್ವಹಿಸುತ್ತಿದ್ದಳೆಂದರೆ ನೋಡಿದವರಿಗೆ ಅದಕ್ಕಿಂತಲೂ ಹೆಚ್ಚು ವರಮಾನ ಇರಬೇಕು ಎಂದೆನಿಸುತ್ತಿತ್ತು. ಪತಿಯ ಅಕಾಲಮೃತ್ಯುವಿನಿಂದ ಭುವನೇಶ್ವರಿಗೆ ಎಂಥ ದುಃಸ್ಥಿತಿ ಉಂಟಾಯಿತು ಎಂಬುದನ್ನು ಯೋಚಿಸಿದರೆ ಮೈ ನಡುಗುವುದು. ಕುಟುಂಬವನ್ನು ನಿರ್ವಹಿಸಲು

ಆವಳಿಗೆ ಯಾವುದೇ ನಿರ್ದಿಷ್ಟ ವರಮಾನವಿರಲಿಲ್ಲ. ಆದರೂ ಶ್ರೀಮಂತ ಪರಿಸ್ಥಿತಿಯಲ್ಲಿ ಬೆಳೆದ ತನ್ನ ವೃದ್ಧ ತಾಯಿಯನ್ನು ಗಂಡು ಮತ್ತು ಹೆಣ್ಣುಮಕ್ಕಳನ್ನು ಸಾಕಬೇಕಿತ್ತು ಮತ್ತು ಮಕ್ಕಳ ಶಿಕ್ಷಣಕ್ಕೆ ಹಣ ಬೇಕಿತ್ತು. ಪತಿಯ ಔದಾರ್ಯದಿಂದ ಮತ್ತು ಪ್ರಭಾವ ದಿಂದ ಉತ್ತಮ ಜೀವನವನ್ನು ನಡೆಸುತ್ತಿದ್ದ ಅನೇಕ ಸಂಬಂಧಿಕರಿದ್ದರು. ಅವರೆಲ್ಲ ಈಗ ಆಕೆಗೆ ಸಹಾಯ ಮಾಡಲು ಮುಂದೆ ಬರುವ ಬದಲು ಆಕೆಗೆ ನ್ಯಾಯವಾಗಿ ಸಿಕ್ಕಬೇಕಾ ಗಿದ್ದುದನ್ನೂ ತಪ್ಪಿಸಲು ಪ್ರಯತ್ನಿಸಿದರು. ಹಿರಿಯ ಪುತ್ರನಾದ ನರೇಂದ್ರನು ಎಷ್ಟೇ ಪ್ರಯತ್ನಿಸಿದರೂ ಒಂದು ಉದ್ಯೋಗವನ್ನು ಪಡೆಯಲಾಗಲಿಲ್ಲ. ಅವನು ಪ್ರಪಂಚದ ಆಕರ್ಷಣೆಗಳನ್ನೆಲ್ಲ ಕಳೆದುಕೊಂಡು ಅದನ್ನು ತ್ಯಜಿಸಲು ಸಿದ್ಧನಾಗುತ್ತಿದ್ದ. ಇಂಥ ಒಂದು ದಾರುಣ ಪರಿಸ್ಥಿತಿಯಲ್ಲಿಯೂ ಭುವನೇಶ್ವರಿಯು ತನ್ನ ಕರ್ತವ್ಯಗಳನ್ನು ಪರಿಪಾಲಿಸಿದಳು ಎಂಬುದನ್ನು ಯೋಚಿಸಿದಾಗ ಸ್ವಾಭಾವಿಕವಾಗಿಯೆ ಅತ್ಯಂತ ಗೌರವವುಂಟಾಗುತ್ತದೆ. ನಾವು ನರೇಂದ್ರನಾಥ ಮತ್ತು ಶ್ರೀರಾಮಕೃಷ್ಣರ ನಿಕಟ ಸಂಬಂಧದ ಬಗ್ಗೆ ಹೇಳುವಾಗ ಈ ಕೌಟುಂಬಿಕ ದುಃಸ್ಥಿತಿಯ ವಿಷಯವನ್ನು ಕುರಿತು ಚರ್ಚಿಸುವ ಅವಕಾಶ ದೊರೆಯು ವುದು. ಆದ್ದರಿಂದ ಇಲ್ಲಿ ಅದನ್ನು ವಿಸ್ತಾರವಾಗಿ ವಿವರಿಸುವ ಬದಲು ದಕ್ಷಿಣೇಶ್ವರಕ್ಕೆ ನರೇಂದ್ರನ ಎರಡನೇ ಭೇಟಿಯ ಸಂಬಂಧವಾಗಿ ಈಗ ಹೇಳುತ್ತೇವೆ.

## ನಾಲ್ಕನೆಯ ಅಧ್ಯಾಯ

# ಶ್ರೀರಾಮಕೃಷ್ಣರೊಡನೆ ನರೇಂದ್ರನ ಎರಡನೆಯ ಮತ್ತು ಮೂರನೆಯ ಭೇಟಿ

1. ದಕ್ಷಿಣೇಶ್ವರಕ್ಕೆ ನರೇಂದ್ರನ ಎರಡನೆಯ ಭೇಟಿ 2. ಶ್ರೀರಾಮಕೃಷ್ಣರ ಸ್ಪರ್ಶದಿಂದ ಅವನಿಗುಂಟಾದ ಅದ್ಭುತ ಅನುಭವ 3. ಇದಕ್ಕೆ ಕಾರಣವನ್ನು ಕಂಡು ಹಿಡಿಯುವ ಅವನ ಪ್ರಯತ್ನ 4. ಶ್ರೀರಾಮಕೃಷ್ಣರ ಬಗ್ಗೆ ಅವನ ವಿವಿಧ ಭಾವನೆಗಳು ಮತ್ತು ಅವರನ್ನು ಸರಿಯಾಗಿ ತಿಳಿದುಕೊಳ್ಳುವ ನಿರ್ಧಾರ 5. ಶ್ರೀರಾಮಕೃಷ್ಣರು ನರೇಂದ್ರನೊಡನೆ ತುಂಬ ಪರಿಚಿತರಂತೆ ವ್ಯವಹರಿಸುತ್ತಿದ್ದರು 6. ನರೇಂದ್ರನ ಮೂರನೆಯ ಭೇಟಿ 7. ಶ್ರೀರಾಮಕೃಷ್ಣರ ಸ್ಪರ್ಶದಿಂದ ನರೇಂದ್ರನು ಬಾಹ್ಯಜ್ಞಾನ ಕಳೆದುಕೊಂಡುದು 8. ಆ ಸಂದರ್ಭದಲ್ಲಿ ಅವರು ಅವನಿಗೆ ಅನೇಕ ಪ್ರಶ್ನೆ ಹಾಕಿ ಅವನ ನೈಜ ಸ್ಥಿತಿಯನ್ನು ಅರಿತರು 9. ನರೇಂದ್ರನ ಸಂಬಂಧವಾಗಿ ಶ್ರೀರಾಮಕೃಷ್ಣರ ಅದ್ಭುತ ದರ್ಶನ 10. ಪ್ರತ್ಯಕ್ಷಾನುಭವದ ಫಲವಾಗಿ ಶ್ರೀರಾಮಕೃಷ್ಣರ ಬಗ್ಗೆ ಅವನ ನಿಲುವು 11. ಇದರ ಫಲವಾಗಿ ಅವರನ್ನು ಗುರುವಾಗಿ ಸ್ವೀಕರಿಸುವ ಆಲೋಚನೆ 12. ಶ್ರೀರಾಮಕೃಷ್ಣರ ಸಂಪರ್ಕದಿಂದ ನರೇಂದ್ರನಲ್ಲಿ ವೈರಾಗ್ಯ ವೃದ್ಧಿ 13. ಪರೀಕ್ಷಿಸದೆ ಶ್ರೀರಾಮಕೃಷ್ಣರ ಯಾವ ಮಾತನ್ನು ಸ್ವೀಕರಿಸಬಾರದೆಂಬ ಅವನ ನಿರ್ಧಾರ 14. ಆಗ ನರೇಂದ್ರನ ಮಾನಸಿಕ ಸ್ಥಿತಿ.

1. ನಿಜವಾದ ಪೌರುಷ ಮತ್ತು ನಿರ್ದಿಷ್ಟ ಗುರಿಯನ್ನು ಹೊಂದಿದ ಮಹಾ ಪುರುಷರೆಲ್ಲರೂ ಇತರರಲ್ಲಿ ಶ್ರೇಷ್ಠತೆಯನ್ನು ಕಂಡಾಗ ಅದನ್ನು ಮುಕ್ತಕಂಠದಿಂದ ಹೊಗಳಿ ಆನಂದ ಪಡುತ್ತಾರೆ. ಮತ್ತೆ ಅಂಥ ಒಂದು ಶ್ರೇಷ್ಠತೆ ಯಾರಲ್ಲಾದರೂ ಕಲ್ಪನಾತೀತ ರೂಪದಲ್ಲಿ ಅಭಿವ್ಯಕ್ತವಾಗಿದ್ದರೆ ಅವರ ಮನಸ್ಸು ಅದರ ಚಿಂತನೆಯಲ್ಲೇ ಮಗ್ನವಾಗಿ ಸ್ವಲ್ಪ ಕಾಲದ ಮಟ್ಟಿಗೆ ಮುಗ್ಧವೂ, ಸ್ತಂಭಿತವೂ ಆಗುವುದು. ಆದರೂ ಕೂಡ ಈ ಘಟನೆಯು ಅವರನ್ನು ತಮ್ಮ ಗುರಿಯಿಂದ ವಿಮುಖಗೊಳಿಸಿ ಆ ಶ್ರೇಷ್ಠ ಪುರುಷನನ್ನು ಅನುಕರಿಸುವಂತೆ ಮಾಡುವುದಿಲ್ಲ. ದೀರ್ಘ ಸಹವಾಸ ಮತ್ತು ನಿಕಟವಾದ ಮಧುರ ಬಾಂಧವ್ಯ ಇಲ್ಲದೆ ಅವರ ಜೀವನ ಮತ್ತು ವಿಚಾರಗಳು ಆ ಪುರುಷನ ಪ್ರಭಾವಕ್ಕೆ ಒಳಗಾಗುವುದಿಲ್ಲ. ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರನ್ನು ಮೊದಲ ಬಾರಿಗೆ ಸಂಧಿಸಿದಾಗ ನರೇಂದ್ರನಾಥನ ಸ್ಥಿತಿಯೂ ಅದೇ ಆಗಿತ್ತು. ಶ್ರೀರಾಮಕೃಷ್ಣರ ಅಸಾಧಾರಣ ತ್ಯಾಗ ಮತ್ತು ಪ್ರಾಮಾಣಿಕತೆ ಅವನನ್ನು ಆಕರ್ಷಿಸಿದವು. ಆದರೂ ಅವರ ಆದರ್ಶಜೀವನವನ್ನು ಸ್ವೀಕರಿಸುವುದಕ್ಕೆ ಅವನ ಹೃದಯ ಇನ್ನೂ ಒಪ್ಪಿರಲಿಲ್ಲ. ಶ್ರೀರಾಮಕೃಷ್ಣರ ಅದ್ಭುತ ಚಾರಿತ್ರ್ಯ ಮತ್ತು ವರ್ತನೆಗಳ ನೆನಪು ಆಗಾಗ ಅವನ ಮನಸ್ಸಿಗೆ ಬರುತ್ತಿತ್ತು. ಆದರೂ ತಾನು ಮತ್ತೊಮ್ಮೆ ಬರುವುದಾಗಿ ಕೊಟ್ಟ ಮಾತನ್ನು ಪೂರ್ತಿಗೊಳಿಸುವುದರಲ್ಲಿ ಅವನು

ಅಷ್ಟೊಂದು ಆತುರನಾಗಿರಲಿಲ್ಲ. ಶ್ರೀರಾಮಕೃಷ್ಣರು ಅರೆಹುಚ್ಚರು ಎಂಬ ಅವನ ಭಾವನೆಯೂ ಅವನು ದಕ್ಷಿಣೇಶ್ವರಕ್ಕೆ ಹೋಗುವುದನ್ನು ಮತ್ತೆ ಮತ್ತೆ ಮುಂದೂಡುವುದಕ್ಕೆ ಕಾರಣವಾಗಿತ್ತು. ಅಷ್ಟೇ ಅಲ್ಲದೆ ಅವನು ಧ್ಯಾನ ಅಧ್ಯಯನಗಳ ಜೊತೆ ಕ್ರಮಬದ್ಧವಾಗಿ ಸಂಗೀತವನ್ನೂ ದೈಹಿಕ ವ್ಯಾಯಾಮಗಳನ್ನೂ ಅಭ್ಯಾಸ ಮಾಡುತ್ತಿದ್ದನು. ಬ್ರಹ್ಮಸಮಾಜದ ರೀತಿಯನ್ನು ಅನುಸರಿಸಿ ತನ್ನ ಸ್ನೇಹಿತರುಗಳ ಮಾನಸಿಕ ಮತ್ತು ಆಧ್ಯಾತ್ಮಿಕ ಉನ್ನತಿಗಾಗಿ ಕಲ್ಕತ್ತೆಯ ಬೇರೆ ಬೇರೆ ಭಾಗಗಳಲ್ಲಿ ಪ್ರಾರ್ಥನಾ ಸಭೆಗಳನ್ನು ಏರ್ಪಡಿಸಿದ್ದ. ಆದ್ದರಿಂದ ಹೀಗೆ ನೂರಾರು ಕೆಲಸಗಳ ಮಧ್ಯದಲ್ಲಿ ದಕ್ಷಿಣೇಶ್ವರಕ್ಕೆ ಹೋಗುವ ವಿಚಾರ ಮರತೇ ಹೋಗಿದ್ದುದರಲ್ಲಿ ಆಶ್ಚರ್ಯವೇನು ! ಆದರೆ ಅವನ ಸತ್ಯನಿಷ್ಠೆ ಅವನು ದಕ್ಷಿಣೇಶ್ವರಕ್ಕೆ ಹೋಗದೇ ಇರುವುದಕ್ಕೆ ಬಿಡಲಿಲ್ಲ ಮತ್ತು ಶ್ರೀರಾಮಕೃಷ್ಣರ ನೆನಪು ಅಲ್ಲಿಗೆ ಹೋಗಲು ಆಗಾಗ ಉತ್ತೇಜನ ನೀಡುತ್ತಿತ್ತು. ಹೀಗಾಗಿ ಮೊದಲನೆ ಭೇಟಿಯ ಒಂದು ತಿಂಗಳ ನಂತರ ನರೇಂದ್ರನಾಥನು ದಕ್ಷಿಣೇಶ್ವರಕ್ಕೆ ನಡೆದುಕೊಂಡು ಹೋದನು. ಆ ದಿನದ ಘಟನೆಯನ್ನು ಅವನು ನಮಗೆ ಹೇಗೆ ವಿವರಿಸಿರುವನೊ ಹಾಗೆಯೆ ನಿಮ್ಮ ಮುಂದೆ ಇಡುತ್ತೇವೆ :

2. "ದಕ್ಷಿಣೇಶ್ವರವು ಕಲ್ಕತ್ತೆಯಿಂದ ಅಷ್ಟು ದೂರವಿದೆಯೆಂದು ನಾನು ಹಿಂದಿನ ಬಾರಿ ಗಾಡಿಯಲ್ಲಿ ಹೋಗಿದ್ದರಿಂದ ಗೊತ್ತಾಗಿರಲಿಲ್ಲ. ವರಾಹನಗರದ ದಾಶರಥಿ ಸಂನ್ಯಾಲ್, ಸಾತ್‌ಕುಡಿ ಲಾಹಿರಿ ಇವರೇ ಮುಂತಾದ ಸ್ನೇಹಿತರೆಡೆಗೆ ನಾನು ಆಗಾಗ ಹೋಗಿ ಬರುತ್ತಿದ್ದೆ. ಅವರ ಮನೆಯ ಹತ್ತಿರವೇ ರಾಸಮಣಿಯ ತೋಟವಿದೆಯೆಂದು ಭಾವಿಸಿದ್ದೆ. ಆದರೆ ಎಷ್ಟು ನಡೆದರೂ ದಾರಿ ಮುಗಿಯುತ್ತಲೇ ಇಲ್ಲ ! ಅಂತೂ ಇಂತೂ ವಿಚಾರಿಸಿಕೊಂಡು ದಕ್ಷಿಣೇಶ್ವರವನ್ನು ತಲುಪಿ ನೇರವಾಗಿ ಶ್ರೀರಾಮಕೃಷ್ಣರ ಕೊಠಡಿಗೆ ಹೋದೆ. ಅವರು ಹಿಂದಿನಂತೆಯೆ ಸಣ್ಣ ಮಂಚದ ಮೇಲೆ ತಮ್ಮ ಪಾಡಿಗೆ ತಾವು ಕುಳಿತುಕೊಂಡಿದ್ದರು. ಹತ್ತಿರ ಯಾರೂ ಇರಲಿಲ್ಲ. ನನ್ನನ್ನು ನೋಡಿದ ಕೂಡಲೇ ಆನಂದದಿಂದ ನನ್ನನ್ನು ಕರೆದು ಪಕ್ಕದಲ್ಲಿ ಕೂರಿಸಿಕೊಂಡರು. ಕುಳಿತುಕೊಂಡನಂತರ ನೋಡಿದೆ, ಅವರು ಯಾವುದೋ ಒಂದು ಭಾವದಲ್ಲಿ ತಲ್ಲೀನರಾಗಿರುವುದನ್ನು. ಅಸ್ಪಷ್ಟ ಸ್ವರದಲ್ಲಿ ಏನೋ ಹೇಳುತ್ತಾ, ಎವೆಯಿಕ್ಕದೆ ನನ್ನನ್ನೇ ನೋಡುತ್ತಾ, ನಿಧಾನವಾಗಿ ನನ್ನ ಹತ್ತಿರ ಬರುತ್ತಿದ್ದರು. ಇವರಿಗೆ ಹುಚ್ಚು, ಹಿಂದಿನ ದಿನದಂತೆಯೇ ಏನೋ ಹುಚ್ಚು ಕೆಲಸ ಮಾಡುತ್ತಾರೆ ಎಂದು ಭಾವಿಸಿದೆ. ಹಾಗೆ ಭಾವಿಸುತ್ತಿದ್ದಂತೆಯೆ ಅವರು ಕೂಡಲೇ ನನ್ನ ಹತ್ತಿರ ಬಂದು ತಮ್ಮ ಬಲಗಾಲನ್ನು ನನ್ನ ಮೈ ಮೇಲಿಟ್ಟರು. ಕೂಡಲೇ ನನಗೊಂದು ಅದ್ಭುತ ದರ್ಶನವಾಯಿತು. ನಾನು ಕಣ್ಣುಬಿಟ್ಟು ನೋಡುತ್ತಿದ್ದಂತೆಯೆ ಕೊಠಡಿಯ ಎಲ್ಲಾ ವಸ್ತುಗಳು ಗೋಡೆ ಮುಂತಾದವುಗಳೆಲ್ಲ ವೇಗವಾಗಿ ಸುತ್ತುತ್ತ ಯಾವುದೋ ಅಜ್ಞಾತ ಪ್ರಪಂಚಕ್ಕೆ ಹೋಗತೊಡಗಿದವು. ನನ್ನ 'ಅಹಂ' ಮತ್ತು ಇಡೀ ಪ್ರಪಂಚವೇ ಎಲ್ಲವನ್ನೂ ಕಬಳಿಸುವ ಆ ಶೂನ್ಯದಲ್ಲಿ ಕಣ್ಮರೆಯಾಗುತ್ತಿರುವಂತೆ ಕಂಡಿತು. ನನಗೆ ಅತ್ಯಂತ ದಿಗಿಲಾಯಿತು. 'ಅಹಂ' ಪ್ರಜ್ಞೆಯ ನಾಶವೇ ಸಾವೆಂದು ನಾನು ತಿಳಿದಿದ್ದೆ ಮತ್ತು ಈಗ ಸಾವು ನನ್ನ

ಮುಂದಿದೆ ಎಂದು ನನಗನ್ನಿಸಿತು. ನಾನು ತಡೆಯಲಾಗದೆ 'ಹಾ ! ನನಗೇನು ಮಾಡುತ್ತಿರುವಿರಿ. ನನಗೆ ತಂದೆ ತಾಯಿಗಳಿರುವರು' ಎಂದು ಜೋರಾಗಿ ಕೂಗಿದೆ. ಆ ಮಾತನ್ನು ಕೇಳಿ ಅವರು ಜೋರಾಗಿ ನಕ್ಕು ತಮ್ಮ ಕೈಯಿಂದ ಎದೆಯನ್ನು ಸ್ಪರ್ಶಿಸಿ 'ಈಗ ಸಾಕು, ಒಮ್ಮೆಯೇ ಎಲ್ಲವೂ ಆಗುವುದು ಬೇಡ. ಮುಂದೆ ತಕ್ಕ ಸಮಯಕ್ಕೆ ಬರುವುದು' ಎಂದು ಹೇಳಿದರು. ಅವರು ಸ್ಪರ್ಶಿಸಿ ಹಾಗೆ ಹೇಳಿದ ಮೇಲೆ ಆ ಅದ್ಭುತ ಅನುಭವ ಹೇಗೆ ಬಂದಿತ್ತೊ, ಹಾಗೆಯೆ ಬಹುಬೇಗನೆ ಹೊರಟು ಹೋಯಿತು. ನನಗೆ ಅತ್ಯಾಶ್ಚರ್ಯ ವಾಯಿತು. ನಾನು ಸಾಮಾನ್ಯ ಸ್ಥಿತಿಗೆ ಬಂದು ಕೊಠಡಿಯ ಒಳಗಿನ ಮತ್ತು ಹೊರಗಿನ ವಸ್ತುಗಳನ್ನು ಮೊದಲಿನಂತೆಯೆ ನೋಡತೊಡಗಿದೆ.

3. "ಹೇಳುವಾಗ ಬಹಳ ಸಮಯ ಹಿಡಿದರೂ ಈ ಘಟನೆ ಅತ್ಯಲ್ಪ ಸಮಯದಲ್ಲಿಯೆ ಆಗಿಹೋಯಿತು. ಈ ಘಟನೆ ನನ್ನ ಮನಸ್ಸಿನಲ್ಲಿ ಒಂದು ಕ್ರಾಂತಿಯನ್ನೇ ಎಬ್ಬಿಸಿತು. ನನಗೆ ಏನಾಯಿತು ಎಂದು ದಿಗ್ಭ್ರಾಂತನಾಗಿ ಚಿಂತಿಸತೊಡಗಿದೆ. ಈ ಅದ್ಭುತ ವ್ಯಕ್ತಿಯ ಶಕ್ತಿಯಿಂದ ಇದ್ದಕ್ಕಿದ್ದ ಹಾಗೆ ಈ ಅನುಭವ ಉಂಟಾಗಿ ಮತ್ತೆ ಹೊರಟು ಹೋಯಿತು. ನಾನು ಪುಸ್ತಕದಲ್ಲಿ ಸಮ್ಮೋಹಿನೀ ವಿದ್ಯೆ ಮತ್ತು ವಶೀಕರಣ ವಿದ್ಯೆ ಇವುಗಳ ಬಗ್ಗೆ ಓದಿದ್ದೆ. ಇದು ಅಂಥದ್ದೆ ಏನು ಎಂದು ಯೋಚಿಸತೊಡಗಿದೆ. ಆದರೆ ಮನಸ್ಸು ಅದನ್ನು ಒಪ್ಪಿಕೊಳ್ಳಲು ಸಿದ್ಧವಿರಲಿಲ್ಲ. ಏಕೆಂದರೆ ದುರ್ಬಲ ಮನಸ್ಸಿನವರ ಮೇಲೆಯೆ ಇವುಗಳ ಪ್ರಭಾವ ಉಂಟಾಗುವಂಥದ್ದು. ನಾನು ಅಂಥವನಲ್ಲ. ಇಷ್ಟು ಕಾಲದ ವರೆಗೂ ವಿಶೇಷ ಬುದ್ಧಿಶಕ್ತಿಯುಳ್ಳವನು ಮತ್ತು ಮನೋಬಲವುಳ್ಳವನು ಎಂದು ಹೆಮ್ಮೆ ಪಟ್ಟುಕೊಳ್ಳುತ್ತಿದ್ದೆ. ವಿಶಿಷ್ಟ ಗುಣಶಾಲಿಗಳಾದ ವ್ಯಕ್ತಿಗಳ ಸಂಪರ್ಕವನ್ನು ಪಡೆದಾಗ ಜನಸಾಧಾರಣರು ಮೋಹಿತರಾಗಿ ಅವರ ಕೈಗೊಂಬೆಯಾಗಿ ಬಿಡುತ್ತಾರೆ. ನನಗಾದರೋ ಇವರನ್ನು ನೋಡಿದಾಗ ಹಾಗಾಗಲೇ ಇಲ್ಲ. ಅದರ ಬದಲು ಮೊದಲಿನಿಂದಲೂ ಇವರನ್ನು ಅರೆಹುಚ್ಚರೆಂದೇ ಪರಿಗಣಿಸಿದ್ದೆ. ಆದರೆ ಇದ್ದಕ್ಕಿದ್ದಂತೆ ನನಗೆ ಹೀಗಾಗಲು ಕಾರಣವೇನು ? ಎಷ್ಟೇ ಚಿಂತಿಸಿದರೂ ಇದರ ಬಗ್ಗೆ ನಿಶ್ಚಯಕ್ಕೆ ಬರಲಾಗಲೇ ಇಲ್ಲ, ಮನಸ್ಸು ಒಂದು ಗೊಂದಲಕ್ಕಿಟ್ಟುಕೊಂಡಿತು. ಮಹಾಕವಿಯ ಮಾತು ಮನಸ್ಸಿಗೆ ಬಂತು —'ಈ ಭೂಮಿ ಮತ್ತು ಸ್ವರ್ಗಗಳಲ್ಲಿ ಮಾನವ ಬುದ್ಧಿಯಿಂದುಂಟಾದ ತತ್ತ್ವಶಾಸ್ತ್ರವೂ ಅರಿಯದಾಗದಂತಹ ಎಷ್ಟೋ ವಿಷಯಗಳು ಇವೆ.' ಇದೂ ಅಂಥದ್ದೇ ಇರಬೇಕೆಂದು ಅನಿಸಿತು ನನ್ನ ಮನಸ್ಸಿಗೆ. ಎಷ್ಟೇ ಆಲೋಚಿಸಿದರೂ ಇದನ್ನು ಅರ್ಥಮಾಡಿಕೊಳ್ಳಲಾಗುವುದಿಲ್ಲ. ಇನ್ನು ಮುಂದೆ ಈ ಅದ್ಭುತ ಹುಚ್ಚನು ನನ್ನ ಮನಸ್ಸಿನ ಮೇಲೆ ತನ್ನ ಪ್ರಭಾವವನ್ನು ಬೀರಿ ಭಾವಾಂತರವನ್ನುಂಟು ಮಾಡಲು ಖಂಡಿತಾ ಬಿಡಬಾರದು ಎಂದು ನಿಶ್ಚಯಿಸಿದೆ.

4. "ನಾನು ಪ್ರಬಲ ಇಚ್ಛಾಶಕ್ತಿಯುಳ್ಳವನು, ದೃಢಸಂಸ್ಕಾರವುಳ್ಳವನು. ಇಂಥ ಮನಸ್ಸನ್ನು ಇಚ್ಛಾಮಾತ್ರದಿಂದಲೇ ವಶೀಕರಿಸಿ ಅದರ ಸಂಸ್ಕಾರಗಳನ್ನೆಲ್ಲ ಪುಡಿ ಪುಡಿ ಮಾಡಿ ತನ್ನ ಭಾವವನ್ನು ಅದರಲ್ಲಿ ಆರೋಪಿಸುವ ಸಾಮರ್ಥ್ಯವುಳ್ಳ ವ್ಯಕ್ತಿಯನ್ನು

ಹುಚ್ಚನೆಂದು ಕರೆಯುವುದಾದರೂ ಹೇಗೆ ? ಆದರೆ ಮೊದಲನೆಯ ದರ್ಶನದ ಸಮಯದಲ್ಲಿ ಅವರು ನನ್ನೊಡನೆ ಮಾತನಾಡಿದ ಮತ್ತು ವ್ಯವಹರಿಸಿದ ರೀತಿಯನ್ನು ನೋಡಿದಾಗ ಅವರನ್ನು ಹುಚ್ಚರೆಂದು ಪರಿಗಣಿಸದಿರುವುದಾದರೂ ಹೇಗೆ ? ಹಿಂದೆ ಆದ ಅನುಭವದ ಕಾರಣವನ್ನು ಹೇಗೆ ನನಗೆ ಕಂಡುಹಿಡಿಯಲಾಗಲಿಲ್ಲವೊ ಹಾಗೆಯೆ ಮಗುವಿನಂತಹ ಪವಿತ್ರ ಮತ್ತು ಸರಳ ಹೃದಯದ ಈ ವ್ಯಕ್ತಿಯ ಬಗ್ಗೆಯೂ ಯಾವ ನಿರ್ಣಯಕ್ಕೂ ಬರದಾಗದೆ ಹೋದೆ. ಚಿಕ್ಕಂದಿನಿಂದಲೂ ನನ್ನ ಸ್ವಭಾವವೇನೆಂದರೆ. ನನ್ನ ಗಮನಕ್ಕೆ ಬರುವ ಯಾವುದೇ ವ್ಯಕ್ತಿ ಅಥವಾ ವಸ್ತುವಿನ ಬಗ್ಗೆಯಾಗಲಿ ಪರಿಶೀಲನೆ, ವಿಚಾರಣೆ, ಯುಕ್ತಿ ಇತ್ಯಾದಿಗಳ ಮೂಲಕ ಯಾವುದೇ ಒಂದು ನಿರ್ಣಯಕ್ಕೆ ಬರದೆ ಮನಸ್ಸು ಸುಮ್ಮನಾಗುತ್ತಿರಲಿಲ್ಲ. ಈಗ ಆ ಸ್ವಭಾವಕ್ಕೆ ಒಂದು ದೊಡ್ಡ ಆಘಾತ ಉಂಟಾಗಿ ನನ್ನ ಮನಸ್ಸಿಗೆ ತುಂಬಾ ವೇದನೆ ಉಂಟಾಯಿತು. ಇದರ ಪರಿಣಾಮವಾಗಿ ಈ ವ್ಯಕ್ತಿಯ ಸ್ವಭಾವ ಮತ್ತು ಶಕ್ತಿಯನ್ನು ಯಥಾರ್ಥವಾಗಿ ಹೇಗಾದರೂ ಮಾಡಿ ಅರಿಯಲೇಬೇಕು ಎಂದು ನಿಶ್ಚಯಿಸಿದೆ.

5. "ಹೀಗೆ ನಾನಾ ರೀತಿ ಚಿಂತಿಸುತ್ತಾ ಸಂಕಲ್ಪಿಸುತ್ತ ಅಂದು ಬಹಳ ಹೊತ್ತು ಕಳೆಯಿತು. ಆದರೆ ಶ್ರೀರಾಮಕೃಷ್ಣರು ಮೇಲೆ ಹೇಳಿದ ಘಟನೆಯ ನಂತರ ಬೇರೆಯೆ ವ್ಯಕ್ತಿಯಾದರು. ಹಿಂದಿನ ದಿವಸದಂತೆಯೆ ನನ್ನನ್ನು ಬಹಳ ಉಪಚರಿಸಿ ತಿಂಡಿಯನ್ನು ತಿನಿಸಿದರು ಮತ್ತು ಎಲ್ಲ ವಿಷಯದಲ್ಲಿಯೂ ಬಹಳ ಪರಿಚಿತರೊ ಎನ್ನುವಂತೆ ವ್ಯವ ಹರಿಸತೊಡಗಿದರು. ಅತ್ಯಂತ ಪ್ರಿಯ ಸಂಬಂಧಿಕರನ್ನೊ ಅಥವಾ ಸ್ನೇಹಿತರನ್ನೊ ಬಹಳ ಕಾಲದನಂತರ ನೋಡಿದಾಗ ಜನರು ಹೇಗೆ ವರ್ತಿಸುವರೊ ಅವರು ಹಾಗೆಯೆ ನನ್ನೊ ಡನೆ ವ್ಯವಹರಿಸಿದರು. ನನಗೆ ತಿಂಡಿ ತಿನ್ನಿಸಿದರು, ಮಾತನಾಡಿಸಿದರು, ಆದರಿಸಿದರು, ನನ್ನೊಡನೆ ಹಾಸ್ಯ ಮಾಡಿದರು. ಎಷ್ಟೇ ಮಾಡಿದರೂ ಅವರಾಸೆ ಇನ್ನೂ ಪೂರ್ಣವಾಗಿರ ಲಿಲ್ಲ. ಅವರ ಆ ಪ್ರೀತಿ ಮತ್ತು ವರ್ತನೆ ನನ್ನನ್ನು ವಿಚಲಿತಗೊಳಿಸಲಿಲ್ಲ. ಸಂಜೆಯಾಗು ತ್ತಿದ್ದುದನ್ನು ಗಮನಿಸಿ ನಾನು ಅವರಿಂದ ಬೀಳ್ಕೊಂಡೆ. ಅತ್ಯಂತ ಹೃದಯ ವೇದನೆ ಯಿಂದ ಮತ್ತೆ ಬೇಗನೆ ಬರುವುದಾಗಿ ಮಾತು ತೆಗೆದುಕೊಂಡು ಅನಂತರವೇ ನನ್ನನ್ನು ಹೊರಡಲು ಬಿಟ್ಟರು. ನನಗೆ ಏನಾಯಿತು ಮತ್ತು ಈ ಸಮಸ್ಯೆಯನ್ನು ಪರಿಹರಿಸುವುದು ಹೇಗೆ ಎಂದು ಚಿಂತಿಸುತ್ತ ನಾನು ದಕ್ಷಿಣೇಶ್ವರವನ್ನು ಬಿಟ್ಟೆ."

6. ಇದಾದ ಎಷ್ಟು ದಿನಗಳ ನಂತರ ನರೇಂದ್ರನಾಥನು ಶ್ರೀರಾಮಕೃಷ್ಣರೆಡೆಗೆ ಬಂದನು ಎಂಬುದು ಸರಿಯಾಗಿ ತಿಳಿಯದು. ಶ್ರೀರಾಮಕೃಷ್ಣರ ಅದ್ಭುತಶಕ್ತಿಯನ್ನು ಕಂಡು ಅವರನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ಹಂಬಲ ನರೇಂದ್ರನಾಥನಲ್ಲಿ ತೀವ್ರ ವಾಗಿಯೇ ಇತ್ತು. ಆದ್ದರಿಂದ ಅವನು ಹೆಚ್ಚು ತಡಮಾಡದೆ ಬಂದಿರಬಹುದೆಂದು ನಾವು ಊಹಿಸಬಹುದು. ಅವನು ಕಾಲೇಜಿಗೆ ಹೋಗುವುದಿದ್ದುದರಿಂದ ವಾರದ ಕೊನೆಯಲ್ಲಿ ದಕ್ಷಿಣೇಶ್ವರಕ್ಕೆ ಬಂದಿರಬಹುದು. ಯಾವುದೇ ವಿಷಯವನ್ನು ಕಂಡುಹಿಡಿಯಬೇಕೆಂಬ ತವಕ ನರೇಂದ್ರನ ಮನಸ್ಸಿನಲ್ಲಿ ಉಂಟಾದರೆ ಆಹಾರ ವಿಹಾರ ವಿಶ್ರಾಮ ಎಲ್ಲವನ್ನೂ

ಬಿಟ್ಟು ಅದರ ಕಡೆಯೇ ಮನಸ್ಸನ್ನು ಹರಿಸುತ್ತಿದ್ದನು. ಅದರ ಬಗ್ಗೆ ಒಂದು ನಿರ್ಣಯಕ್ಕೆ ಬರುವವರೆಗೂ ಅವನ ಮನಸ್ಸಿಗೆ ಶಾಂತಿ ಇರುತ್ತಿರಲಿಲ್ಲ. ಆದ್ದರಿಂದ ಶ್ರೀರಾಮಕೃಷ್ಣ ರನ್ನು ತಿಳಿಯುವ ವಿಷಯದಲ್ಲಿಯೂ ಅವನಿಗೆ ಹಾಗೆಯೆ ಆಯಿತು ಎಂಬುದನ್ನು ನಾವು ಸ್ಪಷ್ಟವಾಗಿ ಅರಿಯಬಹುದು. ಮತ್ತೆ ಹಿಂದಿನಂತೆ ತನ್ನಲ್ಲಿ ಭಾವಾಂತರ ಉಂಟಾಗಬಾರದು ಎಂದು ಮನಸ್ಸನ್ನು ಸರಿಯಾಗಿ ದೃಢಗೊಳಿಸಿ ಮೂರನೆಯ ಬಾರಿ ಶ್ರೀರಾಮಕೃಷ್ಣರೆಡೆಗೆ ಬಂದಿದ್ದನು ಎಂಬುದನ್ನು ನಾವು ಊಹಿಸಬಹುದು. ಆದರೂ ಕೂಡ ಘಟನೆಯು ಅವನ ಕಲ್ಪನೆಯನ್ನು ಮೀರಿತ್ತು. ಶ್ರೀರಾಮಕೃಷ್ಣರಿಂದ ಮತ್ತು ನರೇಂದ್ರನಾಥನಿಂದ ಈ ಘಟ ನೆಯ ಸಂಬಂಧವಾಗಿ ಏನು ಕೇಳಿರುವೆವೊ ಅದನ್ನು ಇಲ್ಲಿ ವಿವರಿಸುತ್ತೇವೆ.

7. ಶ್ರೀರಾಮಕೃಷ್ಣರು ಅಂದು ನರೇಂದ್ರನಾಥನನ್ನು ಹತ್ತಿರವಿದ್ದ ಜದುಮಲ್ಲಿಕನ ತೋಟಕ್ಕೆ ಓಡಾಡಲು ಕರೆದುಕೊಂಡು ಹೋದರು. ಇದಕ್ಕೆ ಅಂದು ದಕ್ಷಿಣೇಶ್ವರದಲ್ಲಿ ಅನೇಕ ಜನರಿದ್ದುದು ಕಾರಣವಾಗಿರಬಹುದು. ಅಥವಾ ಇನ್ನೇನಾದರೂ ಕಾರಣವಿದ್ದಿರ ಬಹುದು. ಜದುಮಲ್ಲಿಕ ಮತ್ತು ಅವನ ತಾಯಿಗೆ ಶ್ರೀರಾಮಕೃಷ್ಣರ ಮೇಲೆ ತುಂಬಾ ಶ್ರದ್ಧಾಭಕ್ತಿ ಇತ್ತು. ತಾವು ಇರಲಿ ಇಲ್ಲದೆ ಇರಲಿ ಶ್ರೀರಾಮಕೃಷ್ಣರು ತೋಟಕ್ಕೆ ಬಂದರೆ ಅಲ್ಲಿಯ ಬೈಠಕ್‌ಖಾನೆಯನ್ನು ತೆರೆದು ಅವರಿಗೆ ಕುಳಿತುಕೊಳ್ಳಲು ಬಿಡಬೇಕೆಂದು ಜದುಮಲ್ಲಿಕನು ಅಲ್ಲಿಯ ಕೆಲಸಗಾರರಿಗೆ ಆದೇಶವಿತ್ತಿದ್ದನು. ಅಂದೂ ಕೂಡ ಶ್ರೀರಾಮ ಕೃಷ್ಣರು ನರೇಂದ್ರನೊಡನೆ ಉದ್ಯಾನದಲ್ಲಿ ಓಡಾಡುತ್ತ ಮಾತನಾಡುತ್ತ ಬಂದು ಆ ಬೈಠಕ್‌ಖಾನೆಯಲ್ಲಿ ಕುಳಿತರು. ಸ್ವಲ್ಪ ಹೊತ್ತಿನಲ್ಲಿಯೆ ಶ್ರೀರಾಮಕೃಷ್ಣರು ಸಮಾಧಿಸ್ಥ ರಾದರು. ನರೇಂದ್ರನಾಥನು ಸ್ವಲ್ಪ ದೂರದಲ್ಲಿ ಕುಳಿತು ಶ್ರೀರಾಮಕೃಷ್ಣರನ್ನು ತದೇಕ ಚಿತ್ತನಾಗಿ ನೋಡುತ್ತಿದ್ದನು. ಆ ಸಮಯದಲ್ಲಿ ಶ್ರೀರಾಮಕೃಷ್ಣರು ಹಿಂದಿನ ದಿನ ದಂತೆಯೆ ಕೂಡಲೇ ಬಂದು ಅವನನ್ನು ಸ್ಪರ್ಶಿಸಿಬಿಟ್ಟರು. ನರೇಂದ್ರನು ಎಷ್ಟೇ ಎಚ್ಚರಿಕೆ ಯಿಂದಿದ್ದರೂ ಆ ಶಕ್ತಿಪೂರ್ಣವಾದ ಸ್ಪರ್ಶದಿಂದ ಒಮ್ಮೆಯೆ ಆತ್ಮ ವಿಸ್ಮೃತನಾದನು. ಹಿಂದಿನ ದಿನದಂತಲ್ಲದೆ ಈ ಬಾರಿ ಬಾಹ್ಯಜ್ಞಾನ ಸಂಪೂರ್ಣ ಹೊರಟು ಹೋಯಿತು. ಸ್ವಲ್ಪ ಹೊತ್ತಿನ ನಂತರ ಅವನು ಬಾಹ್ಯಜ್ಞಾನವನ್ನು ಪಡೆದಾಗ ಶ್ರೀರಾಮಕೃಷ್ಣರು ಅವನ ಎದೆಯ ಮೇಲೆ ಕೈಯಾಡಿಸುತ್ತಿದ್ದರು ಮತ್ತು ಮೃದುವಾಗಿ ನಗುತ್ತಿದ್ದರು.

ಬಾಹ್ಯಜ್ಞಾನವು ಹೊರಟು ಹೋದಮೇಲೆ ನರೇಂದ್ರನಿಗೆ ಅಂದು ಯಾವ ರೀತಿಯ ಅನುಭವವಾಯಿತು ಎಂಬುದರ ಬಗ್ಗೆ ಅವನು ನಮಗೇನೂ ಹೇಳಲಿಲ್ಲ. ಅದು ತುಂಬಾ ರಹಸ್ಯವಾಗಿದ್ದುದರಿಂದ ನಮ್ಮ ಮುಂದೆ ವ್ಯಕ್ತಪಡಿಸಲಿಲ್ಲವೆಂದು ನಾವು ಭಾವಿಸಿ ದೆವು. ಆದರೆ ನರೇಂದ್ರನಿಗೆ ಅದರ ಸ್ಮರಣೆ ಇರಲಿಲ್ಲ ಎಂಬುದು ಶ್ರೀರಾಮಕೃಷ್ಣರು ಈ ಘಟನೆಯ ಬಗ್ಗೆ ಇತ್ತ ವಿವರದಿಂದ ತಿಳಿದುಬರುತ್ತದೆ. ಶ್ರೀರಾಮಕೃಷ್ಣರು ಹೇಳು ತ್ತಾರೆ :

8. "ಬಾಹ್ಯಜ್ಞಾನ ಹೊರಟುಹೋದ ಮೇಲೆ ನಾನು ನರೇಂದ್ರನಿಗೆ ಅನೇಕ ಪ್ರಶ್ನೆಗಳನ್ನು ಕೇಳಿದೆ. ಅವನು ಯಾರು, ಎಲ್ಲಿಂದ ಬಂದಿದ್ದಾನೆ, ಯಾಕೆ ಬಂದಿದ್ದಾನೆ,

19

ಎಷ್ಟು ದಿನ ಇಲ್ಲಿ ಇರುತ್ತಾನೆ. ಇತ್ಯಾದಿ ಪ್ರಶ್ನೆಗಳನ್ನೆಲ್ಲ ಕೇಳಿದೆ. ಅವನೂ ಕೂಡ ತನ್ನೊಳಗೆ ಪ್ರವೇಶಿಸಿ ತಕ್ಕ ಉತ್ತರವನ್ನು ನೀಡಿದನು. ನಾನು ಅವನ ಬಗ್ಗೆ ಏನು ಕಂಡಿದ್ದೆನೊ ಮತ್ತು ಭಾವಿಸಿದ್ದೆನೊ ಅದನ್ನು ಆ ಉತ್ತರಗಳು ದೃಢಪಡಿಸಿದುವು. ಆ ಎಲ್ಲ ವಿಷಯಗಳನ್ನು ಹೇಳುವುದಕ್ಕಾಗುವುದಿಲ್ಲ. ಆದರಿಂದ ಒಂದು ವಿಷಯ ತಿಳಿದು ಬಂತು, ನರೇಂದ್ರನಿಗೆ ಯಾವಾಗ ತಾನು ಯಾರೆಂದು ತಿಳಿಯುವುದೊ ಅಂದಿನಿಂದ ಅವನು ಈ ಪ್ರಪಂಚದಲ್ಲಿ ಇರುವುದಿಲ್ಲ, ದೃಢಸಂಕಲ್ಪದ ಮೂಲಕ ಯೋಗಮಾರ್ಗದಲ್ಲಿ ಕೂಡಲೇ ಶರೀರವನ್ನು ತ್ಯಜಿಸಿಬಿಡುತ್ತಾನೆ. ನರೇಂದ್ರನು ಧ್ಯಾನಸಿದ್ಧ ಮಹಾಪುರುಷ."

ನರೇಂದ್ರನಾಥನ ಸಂಬಂಧವಾಗಿ ಶ್ರೀರಾಮಕೃಷ್ಣರು ಹಿಂದೆ ಏನೇನು ದರ್ಶನಗಳನ್ನು ಪಡೆದಿದ್ದರೊ ಅವುಗಳ ಸ್ವಲ್ಪ ಸ್ವಲ್ಪ ಅಂಶವನ್ನು ಮುಂದೆ ನಮಗೆ ಆಗಾಗ ಹೇಳುತ್ತಿದ್ದರು. ಓದುಗರ ಅನುಕೂಲಕ್ಕಾಗಿ ನಾವು ಅದನ್ನು ಇಲ್ಲಿಯೆ ತಿಳಿಸುತ್ತೇವೆ. ಈ ದರ್ಶನಗಳ ಬಗ್ಗೆ ಶ್ರೀರಾಮಕೃಷ್ಣರು ಏನು ಹೇಳಿರುವರೊ ಅದರಿಂದ ನರೇಂದ್ರನಾಥನು ಅವರಡೆಗೆ ಬರುವುದಕ್ಕೆ ಮುಂಚೆಯೆ ಈ ದರ್ಶನಗಳಾಗಿದ್ದುವು ಎಂಬುದು ತಿಳಿದುಬರುತ್ತದೆ. ಶ್ರೀರಾಮಕೃಷ್ಣರು ಹೇಳುತ್ತಿದ್ದರು.

9. "ಒಂದು ದಿನ ನನ್ನ ಮನಸ್ಸು ಸಮಾಧಿಯಲ್ಲಿ ಜ್ಯೋತಿರ್ಮಯ ಮಾರ್ಗದ ಮೂಲಕ ಮೇಲೆ ಏರತೊಡಗಿತು. ಚಂದ್ರ ಸೂರ್ಯ ತಾರಾಮಂಡಲಗಳಿಂದ ಕೂಡಿದ ಸ್ಥೂಲ ಜಗತ್ತನ್ನು ಸುಲಭವಾಗಿ ಮೀರಿ ಹೋಗಿ ಮೊದಲು ಸೂಕ್ಷ್ಮವಾದ ಭಾವ ಜಗತ್ತನ್ನು ಪ್ರವೇಶಿಸಿತು. ಆ ರಾಜ್ಯದ ಉಚ್ಚ ಉಚ್ಚ ಸ್ತರಗಳನ್ನು ಮೀರಿ ಹೋಗುತ್ತ ಇದ್ದಂತೆಯೆ ಅನೇಕ ಬಗೆಯ ದೇವ ದೇವಿಯರ ಭಾವಮಯ ಮೂರ್ತಿಗಳು ಮಾರ್ಗದ ಎರಡೂ ಪಕ್ಕಗಳಲ್ಲಿ ಕಾಣಿಸಿಕೊಂಡವು. ಕ್ರಮೇಣ ಆ ರಾಜ್ಯದ ಅಂತಿಮ ಸೀಮೆಯನ್ನು ತಲುಪಿತು. ಅಲ್ಲಿ ಒಂದು ಜ್ಯೋತಿರ್ಮಯ ಸೀಮಾ ರೇಖೆಯನ್ನು ಕಂಡೆ. ಅದು ಖಂಡ ಮತ್ತು ಅಖಂಡ ರಾಜ್ಯಗಳೆರಡನ್ನೂ ಬೇರ್ಪಡಿಸಿತ್ತು. ಮನಸ್ಸು ಸೀಮಾ ರೇಖೆಯನ್ನು ದಾಟಿ ಅಖಂಡದ ರಾಜ್ಯವನ್ನು ಪ್ರವೇಶಿಸಿತು. ಅಲ್ಲಿ ಯಾವ ಮೂರ್ತಿಗಳೂ ಕಾಣಿಸಲಿಲ್ಲ. ಏನೂ ಕಾಣಿಸಲಿಲ್ಲ. ದಿವ್ಯ ದೇಹ ಧಾರಿಗಳಾದ ದೇವದೇವಿಯರೂ ಕೂಡ ಅಲ್ಲಿಗೆ ಪ್ರವೇಶಿಸಲಾಗದೆ ಬಹಳ ಕೆಳಗೆಯೆ ತಮ್ಮ ಅಧಿಕಾರವನ್ನು ವಿಸ್ತರಿಸಿಕೊಂಡಿದ್ದರು. ಸ್ವಲ್ಪ ಹೊತ್ತಿನ ನಂತರ ನೋಡಿದೆ. ಅಲ್ಲಿ ದಿವ್ಯ ಜ್ಯೋತಿರ್ಮಯ ಶರೀರದಿಂದ ಕೂಡಿದ ಏಳು ಜನ ಹಿರಿಯ ಋಷಿಗಳು ಸಮಾಧಿಸ್ಥರಾಗಿ ಕುಳಿತುಕೊಂಡಿದ್ದಾರೆ. ಅವರು ಜ್ಞಾನ ಮತ್ತು ಪುಣ್ಯದಲ್ಲಿ ತ್ಯಾಗ ಮತ್ತು ಪ್ರೇಮದಲ್ಲಿ ಮಾನವರನ್ನು ಇರಲಿ ದೇವ ದೇವಿಯರನ್ನೂ ಕೂಡ ಅತಿಕ್ರಮಿಸಿದ್ದರು ಎಂದು ನನಗೆ ತಿಳಿಯಿತು. ಅತ್ಯಾಶ್ಚರ್ಯದಿಂದ ಅವರ ಶ್ರೇಷ್ಠತೆಯನ್ನು ಕುರಿತು ಚಿಂತಿಸುತ್ತಿದ್ದೆ. ಆ ಸಮಯದಲ್ಲಿ ಮುಂದೆ ಇದ್ದ ಅಖಂಡ ರಾಜ್ಯದ ಭೇದ ರಹಿತ ಜ್ಯೋತಿರ್ಮಂಡಲದ ಒಂದು ಅಂಶವು ಘನೀಭೂತವಾಗಿ ದಿವ್ಯಶಿಶುವಿನ ಆಕಾರವನ್ನು ಪಡೆಯಿತು. ಆ ದೇವ ಶಿಶುವು ಅಲ್ಲಿ ಕುಳಿತಿದ್ದ ಋಷಿಗಳಲ್ಲಿ ಒಬ್ಬನ ಹತ್ತಿರ ಹೋಗಿ ತನ್ನ ಕೋಮಲ ಬಾಹುದ್ವಯಗಳಿಂದ ಕಂಠದೇಶದಲ್ಲಿ ಅವರನ್ನು ಅಪ್ಪಿ

ಕೊಂಡಿತು. ಅನಂತರ ತನ್ನ ವೀಣಾನಿಂದಿತ ಮಧುರ ಧ್ವನಿಯಲ್ಲಿ ಅವನನ್ನು ಸಮಾಧಿಯಿಂದ ಎಚ್ಚರಿಸಲು ಪ್ರಯತ್ನಿಸಿತು. ಆ ಸುಕೋಮಲ ಸ್ಪರ್ಶದಿಂದ ಋಷಿಯು ಎಚ್ಚರಗೊಂಡು ಅರ್ಧ ಮುಚ್ಚಿದ ಕಣ್ಣುಗಳಿಂದ ಆ ಅಪೂರ್ವ ಶಿಶುವನ್ನು ನೋಡತೊಡಗಿದನು. ಅವನ ಮುಖದ ಪ್ರಸನ್ನತೆಯನ್ನು ಆನಂದವನ್ನು ನೋಡಿ ಆ ಮಗುವು ಅವನಿಗೆ ಆ ಹಿಂದಿನಿಂದಲೂ ಬಹಳ ಪರಿಚಿತನಿದ್ದ ಹೃದಯ ಧನ ಎಂದೆನಿಸುತ್ತಿತ್ತು. ಆ ಅದ್ಭುತ ದೇವ ಶಿಶುವು ಆಗ ಅಪಾರ ಆನಂದವನ್ನು ಪ್ರಕಾಶಿಸುತ್ತ ಅವನಿಗೆ ಹೇಳಿತು : 'ನಾನು ಹೋಗುತ್ತಿದ್ದೇನೆ ನೀನು ನನ್ನೊಡನೆ ಬರಬೇಕು.' ಋಷಿಯು ಇದಕ್ಕೆ ಏನೂ ಉತ್ತರ ಕೊಡದಿದ್ದರೂ ಅವನ ಪ್ರೇಮಪೂರ್ಣ ಕಣ್ಣುಗಳು ಆಂತರಿಕ ಸಮ್ಮತಿಯನ್ನು ವ್ಯಕ್ತಪಡಿಸುತ್ತಿದ್ದವು. ಅನಂತರ ಪ್ರೇಮದೃಷ್ಟಿಯಿಂದ ಆ ಶಿಶುವನ್ನು ನೋಡುತ್ತಾ ನೋಡುತ್ತಾ ಅವನು ಮತ್ತೆ ಸಮಾಧಿಸ್ಥನಾದನು. ಆಗ ನಾನು ಆಶ್ಚರ್ಯದಿಂದ ನೋಡಿದೆ. ಅವನ ಶರೀರ ಮನಸ್ಸುಗಳ ಅಂಶ ಉಜ್ವಲ ಜ್ಯೋತಿಯ ಆಕಾರವನ್ನು ಪಡೆದು ಭೂಮಿಯ ಕಡೆ ಕೆಳಮುಖವಾಗಿ ಇಳಿಯತೊಡಗಿತು. ನರೇಂದ್ರನನ್ನು ನೋಡಿದ ಕೂಡಲೇ ಇವನು ಅವನೇ ಎಂದು ತಿಳಿದು ಬಂತು."*

10. ಶ್ರೀರಾಮಕೃಷ್ಣರ ಶಕ್ತಿಯ ಪ್ರಭಾವದಿಂದ ನರೇಂದ್ರನಾಥನಲ್ಲಿ ಎರಡನೆಯ ಬಾರಿಯೂ ಈ ರೀತಿಯ ಭಾವಾಂತರ ಉಂಟಾಗಲು ಅವನು ಸ್ತಂಭಿತನಾದನು. ಆ ಅದ್ಭುತ ದಿವ್ಯ ಶಕ್ತಿಯ ಮುಂದೆ ತನ್ನ ಮಾನಸಿಕ ಮತ್ತು ಬೌದ್ಧಿಕ ಶಕ್ತಿ ಎಷ್ಟು ಅಲ್ಪವಾದುದು ಎಂದು ಅವನಿಗೆ ಮನವರಿಕೆಯಾಯಿತು. ಶ್ರೀರಾಮಕೃಷ್ಣರು ಅರೆಹುಚ್ಚರೆಂಬ ಅವನ ಹಿಂದಿನ ಭಾವನೆ ಈಗ ಬದಲಾಯಿತು. ಆದರೆ ಅವನು ಮೊದಲಬಾರಿಗೆ ಶ್ರೀರಾಮಕೃಷ್ಣರನ್ನು ನೋಡಿದಾಗ ಶ್ರೀರಾಮಕೃಷ್ಣರು ತನಗೆ ಹೇಳಿದುದರ ಅರ್ಥ ಮತ್ತು ಉದ್ದೇಶ ಅವನಿಗೆ ತಿಳಿಯಿತೆಂದು ಹೇಳಲಾಗುವುದಿಲ್ಲ. ಶ್ರೀರಾಮಕೃಷ್ಣರು ದಿವ್ಯ ಶಕ್ತಿಯಿಂದ ಕೂಡಿದ ಅಸಾಮಾನ್ಯ ಪುರುಷರು, ತನ್ನಂತಹ ವ್ಯಕ್ತಿಗಳ ಮನಸ್ಸನ್ನೂ ಉನ್ನತ ದಿಕ್ಕಿಗೆ ಹರಿಸಬಲ್ಲರು ಎಂದು ಅವನು ಭಾವಿಸಿದನು. ಶ್ರೀರಾಮಕೃಷ್ಣರ ಇಚ್ಛೆ ಮತ್ತು ಭಗವದಿಚ್ಛೆ ಒಂದಾಗಿದ್ದುದರಿಂದ ಎಲ್ಲರ ವಿಷಯದಲ್ಲಿಯೂ ಅವರಲ್ಲಿ ಆ ರೀತಿಯ ಆಸೆ ಉಂಟಾಗಲಿಲ್ಲ ಎಂದು ಅವನು ತಿಳಿದುಕೊಂಡನು. ಅಯಾಚಿತವಾಗಿ ಇಂತಹ ಮಹಾತ್ಮರ ಅನುಗ್ರಹಕ್ಕೆ ಒಳಗಾಗಿರುವುದು ಸಾಮಾನ್ಯ ಸೌಭಾಗ್ಯದ ವಿಷಯವಲ್ಲ, ಎಂಬುದೂ ಅವನಿಗೆ ಹೃದ್ಗತವಾಯಿತು.

11. ನರೇಂದ್ರನಾಥನು ಮೇಲೆ ಹೇಳಿದ ರೀತಿಯಲ್ಲಿ ಶ್ರೀರಾಮಕೃಷ್ಣರ ಬಗ್ಗೆ

---

*ಶ್ರೀರಾಮಕೃಷ್ಣರು ತಮ್ಮ ಅತ್ಯಂತ ಸರಳವಾದ ಭಾಷೆಯಲ್ಲಿ ಈ ದರ್ಶನದ ವಿಷಯವನ್ನು ನಮಗೆ ಹೇಳಿದ್ದರು. ಸಂಪೂರ್ಣ ಅದೇ ಭಾಷೆಯಲ್ಲಿ ಹೇಳುವುದು ನಮಗೆ ಅಸಾಧ್ಯ, ಸಾಧ್ಯವಾದಷ್ಟೂ ಅದೇ ಭಾಷೆಯಲ್ಲಿಯೇ ಸಂಕ್ಷೇಪವಾಗಿ ಅದನ್ನು ಇಲ್ಲಿ ವ್ಯಕ್ತಪಡಿಸಿರುವೆವು. ದರ್ಶನದಲ್ಲಿ ಹೇಳಿರುವ ದೇವಶಿಶುವಿನ ಬಗ್ಗೆ ಅವರನ್ನು ಕೇಳಿದಾಗ ಅವರು ಒಮ್ಮೆ ಹೇಳಿದರು : ತಾವೇ ಆ ಶಿಶುವಿನ ಆಕಾರವನ್ನು ಧರಿಸಿದ್ದು ಎಂದು.

ಭಾವಿಸುವುದು ಅನಿವಾರ್ಯವಾಯಿತು. ಅವರ ಬಗ್ಗೆ ಅವನ ಹಿಂದಿನ ಅನೇಕ ಭಾವನೆಗಳು ಬದಲಾದುವು. ಅಲ್ಪಶಕ್ತಿಯುಳ್ಳವರನ್ನು ಗುರುವಾಗಿ ಒಪ್ಪಿಕೊಳ್ಳಲು ಅವನ ಮನಸ್ಸು ಎಂದೆಂದೂ ಒಪ್ಪುತ್ತಿರಲಿಲ್ಲ. ತನ್ನಂತೆಯೇ ದುರ್ಬಲರ ಮಾರ್ಗದರ್ಶನವನ್ನು ಪಡೆಯುವುದು ಅವನ ಸ್ವಭಾವಕ್ಕೆ ವಿರುದ್ಧವಾಗಿತ್ತು. ಅವನು ಬ್ರಹ್ಮ ಸಮಾಜವನ್ನು ಸೇರಿದ ಮೇಲಂತೂ ಈ ಒಂದು ಮನೋಭಾವ ಇನ್ನೂ ದೃಢವಾಗಿತ್ತು. ಮೇಲೆ ಹೇಳಿದ ಎರಡು ಘಟನೆಗಳ ನಂತರ ಅವನ ಈ ಮನೋಭಾವಕ್ಕೆ ಒಂದು ದೊಡ್ಡ ಆಘಾತ ಉಂಟಾಯಿತು. ಇಂಥ ಮಹಾಪುರುಷರು ವಿರಳವಾದರೂ ಜಗತ್ತಿನಲ್ಲಿ ಜನ್ಮ ವೆತ್ತುವುದಂತೂ ನಿಜ. ಅವರ ತ್ಯಾಗ, ತಪಸ್ಸು, ಪ್ರೇಮ ಮತ್ತು ಪವಿತ್ರತೆ ಜನ ಸಾಧಾರಣರ ಅಲ್ಪ ಮನಬುದ್ಧಿಗಳು ಭಾವಿಸುವ ಭಗವದ್ ಭಾವನೆಯನ್ನು ಮೀರಿ ಬಹುದೂರ ಹೋಗುವುವು. ಇಂಥವರನ್ನೇ ಗುರುವಾಗಿ ಸ್ವೀಕರಿಸಿದರೆ ಮಂಗಳ ಉಂಟಾಗುವುದೆಂದು ನರೇಂದ್ರನು ಭಾವಿಸಿದನು. ಇದರ ಫಲವಾಗಿ ಶ್ರೀರಾಮಕೃಷ್ಣರನ್ನು ಗುರುವಾಗಿ ಸ್ವೀಕರಿಸಲು ಒಪ್ಪಿದರೂ ಅವರ ಎಲ್ಲಾ ಮಾತುಗಳನ್ನು ವಿಚಾರವಿಲ್ಲದೆ ಸ್ವೀಕರಿಸುವುದಕ್ಕೆ ಸಿದ್ಧನಿರಲಿಲ್ಲ, ನರೇಂದ್ರ.

12. ತ್ಯಾಗವಿಲ್ಲದೇ ಭಗವಂತನನ್ನು ಪಡೆಯಲಾಗುವುದಿಲ್ಲ. ಈ ಒಂದು ವಿಶ್ವಾಸ ಬಾಲ್ಯಕಾಲದಿಂದಲೂ ನರೇಂದ್ರನಲ್ಲಿ ದೃಢವಾಗಿ ಬೇರುಬಿಟ್ಟಿತು. ಇದರಿಂದಾಗಿ ಬ್ರಹ್ಮ ಸಮಾಜವನ್ನು ಸೇರಿದ್ದರೂ ಅದರಲ್ಲಿ ನಡೆಯುತ್ತಿದ್ದ ದಾಂಪತ್ಯ ಜೀವನಕ್ಕೆ ಸಂಬಂಧ ಪಟ್ಟ ಸಭೆ ಸಮಿತಿಗಳಲ್ಲಿ ಅವನು ಭಾಗವಹಿಸುತ್ತಿರಲಿಲ್ಲ. ಶ್ರೀರಾಮಕೃಷ್ಣರ ಪುಣ್ಯ ದರ್ಶನದಿಂದ ಮತ್ತು ಅವರ ಅಪೂರ್ವ ಶಕ್ತಿಯ ಪರಿಚಯದಿಂದ ಅವನ ತ್ಯಾಗ ಭಾವ ಈಗ ಇನ್ನೂ ತೀವ್ರವಾಗ ತೊಡಗಿತು.

13. ಆದರೆ ಒಂದು ವಿಷಯವನ್ನು ಅವನು ಈಗಿನಿಂದ ಹೆಚ್ಚು ತೀವ್ರವಾಗಿ ಚಿಂತಿಸತೊಡಗಿದನು. ಇಂಥ ಶಕ್ತಿಶಾಲಿ ಮಹಾಪುರುಷರ ಸಂಪರ್ಕವನ್ನು ಪಡೆದ ಮಾನವನು ಅವರ ಎಲ್ಲ ಮಾತುಗಳನ್ನು ಪೂರ್ಣ ಪರೀಕ್ಷಿಸದೆ ಅಥವಾ ಪರೀಕ್ಷೆಗೊಳಪಡಿಸದೆಯೆ ಸ್ವೀಕರಿಸಿಬಿಡುತ್ತಾನೆ. ಹೀಗಾಗದಂತೆ ತಾನು ನೋಡಿಕೊಳ್ಳಬೇಕು ಎಂದು ಎಚ್ಚರಿಕೆ ವಹಿಸಿದನು. ಆದ್ದರಿಂದ ಹಿಂದಿನ ಎರಡು ಘಟನೆಗಳಿಂದ ಅವನಿಗೆ ಶ್ರೀರಾಮಕೃಷ್ಣರ ಮೇಲೆ ವಿಶೇಷ ಶ್ರದ್ಧಾಭಕ್ತಿ ಉಂಟಾಗಿದ್ದರೂ ತನ್ನ ಅನುಭವಗಳ ಮೂಲಕ ಪರೀಕ್ಷಿಸದೆ ಅವರ ಯಾವ ಮಾತನ್ನು ಸ್ವೀಕರಿಸಬಾರದೆಂದು ದೃಢಸಂಕಲ್ಪ ಮಾಡಿದನು. ಇದರಿಂದ ತಾನು ಅವರಿಗೆ ಅಪ್ರಿಯನಾದರೂ ಚಿಂತೆಯಿಲ್ಲ ಎಂದು ಅವನು ನಿಶ್ಚಯಿಸಿದನು. ಒಂದು ಕಡೆ ಆಧ್ಯಾತ್ಮಿಕ ಜಗತ್ತಿನ ಹೊಸಹೊಸ ವಿಚಾರಗಳನ್ನು ಸ್ವೀಕರಿಸುವುದಕ್ಕೆ ಅವನ ಮನಸ್ಸು ಯಾವಾಗಲೂ ತೆರೆದಿತ್ತು. ಮತ್ತೊಂದು ಕಡೆ ಶ್ರೀರಾಮಕೃಷ್ಣರ ಪ್ರತಿಯೊಂದು ದರ್ಶನವನ್ನೂ, ವರ್ತನೆಯನ್ನೂ ನಿಷ್ಠುರ ವಿಚಾರದ ಮೂಲಕ ಪರೀಕ್ಷಿಸುವುದಕ್ಕೂ ಅವನ ಮನಸ್ಸು ಈಗ ಸಿದ್ಧವಾಯಿತು.

14. ನರೇಂದ್ರನಾಥನ ತೀಕ್ಷ್ಣಬುದ್ಧಿಶಕ್ತಿಗೆ ಈಗ ಶ್ರೀರಾಮಕೃಷ್ಣರನ್ನು ಅವತಾರ

ವೆಂದು ಒಪ್ಪಿಕೊಳ್ಳುವುದು ಅನಿವಾರ್ಯವಾಯಿತು. ಏಕೆಂದರೆ ಪ್ರಥಮ ಭೇಟಿಯ ದಿನ ಅವರಾಡಿದ ವಿಚಿತ್ರ ಮಾತುಗಳನ್ನು ಬೇರೆ ಯಾವ ರೀತಿಯಲ್ಲಿ ಅರ್ಥೈಸುವಂತಿರಲಿಲ್ಲ. ಆದರೆ ಈಗ ಅವನ ಸತ್ಯಾನ್ವೇಷಕ ವಿಚಾರಪರ ಮನಸ್ಸು ಇದನ್ನು ಕೂಡಲೇ ಒಪ್ಪಿಕೊಂಡು ಬಿಡುವುದೇ ? ಆದ್ದರಿಂದ ದೇವರು ತನಗೆ ಅದನ್ನು ತಿಳಿದುಕೊಳ್ಳುವ ಶಕ್ತಿ ಕೊಟ್ಟರೆ ಅದರ ಬಗ್ಗೆ ವಿಚಾರಮಾಡಿ ನೋಡಬೇಕು ಎಂದು ನಿರ್ಧರಿಸಿ ಅದರ ಬಗ್ಗೆ ಒಂದು ಸ್ಥಿರವಾದ ನಿರ್ಧಾರಕ್ಕೆ ಬರಲು ಈಗ ಪ್ರಯತ್ನಿಸುವುದು ಬೇಡವೆಂದು ಮನಸ್ಸು ಮಾಡಿದನು. ಹೇಗೆ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು ಕೃತಾರ್ಥನಾಗುವುದು ಎಂಬುದನ್ನು ಶ್ರೀರಾಮಕೃಷ್ಣರ ಬಳಿಗೆ ಬಂದು ತಿಳಿದುಕೊಳ್ಳಬೇಕು. ಈ ವಿಷಯದಲ್ಲಿ ಅವರ ಮಾರ್ಗದರ್ಶನ ಪಡೆಯಬೇಕು ಎಂದು ಅವನು ಆಲೋಚಿಸತೊಡಗಿದನು.

ತೇಜಸ್ವಿ ವ್ಯಕ್ತಿಗಳು ಹೊಸತನ್ನು ಸ್ವೀಕರಿಸುವಾಗ ತಮ್ಮ ಹಳೆಯ ಅಭಿಪ್ರಾಯವನ್ನು ಬದಲಾಯಿಸುವುದಕ್ಕೆ ಪ್ರಬಲವಾದ ವಿರೋಧವಿರುತ್ತದೆ. ನರೇಂದ್ರನಾಥನಿಗೂ ಇದೇ ಸ್ಥಿತಿ ಉಂಟಾಯಿತು. ಅವನು ಶ್ರೀರಾಮಕೃಷ್ಣರಲ್ಲಿ ಅದ್ಭುತ ಶಕ್ತಿಯನ್ನು ಕಂಡರೂ ಅವರನ್ನು ಸಂಪೂರ್ಣ ಸ್ವೀಕರಿಸಲು ಸಾಧ್ಯವಾಗಲಿಲ್ಲ. ಅವರೆಡೆಗೆ ಎಷ್ಟೇ ಆಕರ್ಷಣೆ ಇದ್ದರೂ ಅವರಿಂದ ದೂರವಿರಲು ಪ್ರಯತ್ನಿಸುತ್ತಿದ್ದ, ಅವನ ಈ ಪ್ರಯತ್ನದಿಂದಾಗಿ ಎಂಥ ಪರಿಸ್ಥಿತಿ ಉಂಟಾಯಿತು ಎಂಬುದನ್ನು ಮುಂದೆ ನಾವು ನೋಡುತ್ತೇವೆ.

## ಐದನೆಯ ಅಧ್ಯಾಯ

# ಶ್ರೀರಾಮಕೃಷ್ಣರ ಅಹೇತುಕ ಪ್ರೀತಿ ಮತ್ತು ನರೇಂದ್ರನಾಥ

1. ಬಾಲ್ಯಕಾಲದಿಂದಲೂ ನರೇಂದ್ರನಿಗಾಗುತ್ತಿದ್ದ ಅದ್ಭುತ ಅನುಭವಗಳು 2. ಶ್ರೀರಾಮಕೃಷ್ಣರ ಅದ್ಭುತ ಶಕ್ತಿ ನರೇಂದ್ರನನ್ನು ಆಶ್ಚರ್ಯಗೊಳಿಸಿತು. 3. ಆಧ್ಯಾತ್ಮಿಕ ಜೀವನಕ್ಕೆ ನರೇಂದ್ರನು ಎಂಥ ಉಚ್ಚ ಅಧಿಕಾರಿಯಾಗಿದ್ದ ? 4. ಶ್ರೀ ರಾಮಕೃಷ್ಣರು ಎಷ್ಟರ ಮಟ್ಟಿಗೆ ನರೇಂದ್ರನೆಡೆಗೆ ಆಕರ್ಷಿತರಾಗಿದ್ದರು ? 5. ಮೊದ ಲನೆಯ ದಿನವೇ ನರೇಂದ್ರನಿಗೆ ಬ್ರಹ್ಮಜ್ಞಾನವನ್ನು ಕೊಡುವ ಶ್ರೀರಾಮಕೃಷ್ಣರ ಪ್ರಯತ್ನ-ಒಂದು ಭೂತದ ಕಥೆ 6. ಮೊದಲನೆಯ ಮತ್ತು ಎರಡನೆಯ ದಿನಗಳಲ್ಲಿ ಅವನಿಗಾದ ಅನುಭವಗಳಲ್ಲಿದ್ದ ವ್ಯತ್ಯಾಸ 7. ನರೇಂದ್ರನ ಬಗ್ಗೆ ಶ್ರೀರಾಮಕೃಷ್ಣರ ಕಾತರತೆ 8. ನರೇಂದ್ರನೆಡೆಗೆ ಅವರಿಗಿದ್ದ ತೀವ್ರ ಆಕರ್ಷಣೆಗೆ ಕಾರಣ 9. ಈ ಆಕ ರ್ಷಣೆ ಸ್ವಾಭಾವಿಕವೂ ಅನಿವಾರ್ಯವೂ ಆಗಿತ್ತು 10. ನರೇಂದ್ರನ ಮೇಲಿದ್ದ ಅವರ ಪ್ರೀತಿ ಪ್ರಾಪಂಚಿಕವಲ್ಲ 11. ಪ್ರೇಮಾನಂದರು ಪ್ರಥಮ ಬಾರಿ ದಕ್ಷಿಣೇಶ್ವರಕ್ಕೆ ಹೋದಾಗ ನರೇಂದ್ರನ ಬಗ್ಗೆ ಶ್ರೀರಾಮಕೃಷ್ಣರ ತೀವ್ರ ವ್ಯಾಕುಲತೆಯನ್ನು ಕಂಡರು 12. ನರೇಂದ್ರನ ಮೇಲೆ ಶ್ರೀರಾಮಕೃಷ್ಣರ ಪ್ರೀತಿಯ ಬಗ್ಗೆ ವೈಕುಂಠನಾಥನ ಹೇಳಿಕೆ 13. ಶ್ರೀರಾಮಕೃಷ್ಣರ ವಿಶೇಷ ಪ್ರೀತಿಗೆ ಪಾತ್ರನಾಗಿದ್ದರೂ ನರೇಂದ್ರನು ಸಂಪೂರ್ಣ ಅಚಲನಾಗಿದ್ದನು

1. ಅದ್ಭುತ ಸಂಸ್ಕಾರಗಳನ್ನು ಪಡೆದು ನರೇಂದ್ರನು ಜನ್ಮವೆತ್ತಿದ್ದನೆಂಬುದನ್ನು ನಾವು ಆಗಲೇ ಹೇಳಿರುವೆವು. ಇದರ ಕಾರಣದಿಂದಾಗಿ ಸಾಧಾರಣರ ಜೀವನದಲ್ಲಿಯಂತ ಲ್ಲದೆ ಅವನ ಜೀವನದಲ್ಲಿ ಅಸಾಮಾನ್ಯ ಅನುಭವಗಳು ಈಗಾಗಲೇ ಆಗಿದ್ದುವು. ಇದಕ್ಕೆ ದೃಷ್ಟಾಂತವಾಗಿ ಕೆಲವು ಅನುಭವಗಳನ್ನು ಇಲ್ಲಿ ಉಲ್ಲೇಖಿಸುತ್ತೇವೆ. ನರೇಂದ್ರನು ಹೇಳು ತ್ತಿದ್ದನು : "ಮೊದಲಿನಿಂದಲೂ ನಾನು ನಿದ್ರೆ ಮಾಡುವುದಕ್ಕೆ ಕಣ್ಣು ಮುಚ್ಚಿದ ಕೂಡಲೆ ಭ್ರೂಮಧ್ಯದಲ್ಲಿ ಒಂದು ಅಪೂರ್ವ ಜ್ಯೋತಿರ್ಬಿಂದು ಕಾಣಿಸಿಕೊಳ್ಳುತ್ತಿತ್ತು. ನಾನು ಒಂದೇ ಮನಸ್ಸಿನಿಂದ ಅದರ ವಿವಿಧ ರೂಪ ಪರಿವರ್ತನೆಯನ್ನು ಗಮನಿಸುತ್ತಿದ್ದೆ. ಅದನ್ನು ನೋಡುವುದಕ್ಕೆ ಸುಲಭವಾಗಲೆಂದು ಜನರು ಭೂಮಿಗೆ ತಲೆಯನ್ನು ಸ್ಪರ್ಶಿಸಿ ಪ್ರಣಾಮ ಮಾಡುವ ರೀತಿಯಲ್ಲಿ ಹಾಸಿಗೆಯ ಮೇಲೆ ಮಲಗುತ್ತಿದ್ದೆ. ಆ ಜ್ಯೋತಿಯು ಅನೇಕ ಬಣ್ಣಗಳಲ್ಲಿ ಕಾಣಿಸಿಕೊಳ್ಳುತ್ತಿತ್ತು ಮತ್ತು ವೃದ್ಧಿಯಾಗಿ ಕ್ರಮೇಣ ಬಿಂಬಾಕಾರ ವನ್ನು ಪಡೆಯುತ್ತಿತ್ತು. ಕೊನೆಯಲ್ಲಿ ಅದು ಒಡೆದುಹೋಗಿ ನನ್ನ ದೇಹವನ್ನು ಶುಭ್ರ ಜ್ಯೋತಿಯಿಂದ ಆಪಾದಮಸ್ತಕ ಆವರಿಸುತ್ತಿತ್ತು. ಅನಂತರ ನಾನು ಚೈತನ್ಯವನ್ನು ಕಳೆದು ಕೊಂಡು ನಿದ್ರಾಲೋಕವನ್ನು ಪ್ರವೇಶಿಸುತ್ತಿದ್ದೆ. ಎಲ್ಲರೂ ಹೀಗೆಯೆ ನಿದ್ರೆ ಹೋಗುತ್ತಾ ರೆಂದು ನಾನು ಭಾವಿಸಿದ್ದೆ. ಬಹಳ ಕಾಲದವರೆಗೆ ಇದೇ ನನ್ನ ನಂಬಿಕೆಯಾಗಿತ್ತು.

ದೊಡ್ಡವನಾದ ಮೇಲೆ ನಾನು ಧ್ಯಾನಾಭ್ಯಾಸ ಮಾಡಲು ಪ್ರಾರಂಭಿಸಿದಾಗ ಕಣ್ಣು ಮುಚ್ಚಿದ ಕೂಡಲೇ ಆ ಜ್ಯೋತಿರ್ಬಿಂದು ನನ್ನ ಮುಂದೆ ಕಾಣಿಸಿಕೊಳ್ಳುತ್ತಿತ್ತು ಮತ್ತು ಅದರ ಮೇಲೆಯೆ ನಾನು ಮನಸ್ಸನ್ನು ಏಕಾಗ್ರಗೊಳಿಸುತ್ತಿದ್ದೆ. ಮುಂದೆ ಮಹರ್ಷಿ ದೇವೇಂದ್ರನಾಥರ ಉಪದೇಶಾನುಸಾರ ಕೆಲವು ಸ್ನೇಹಿತರೊಡನೆ ಧ್ಯಾನಾಭ್ಯಾಸ ಮಾಡ ತೊಡಗಿದೆ. ಆಗ ಧ್ಯಾನದ ಸಮಯದಲ್ಲಿ ಯಾರಿಗೆ ಯಾವ ರೀತಿಯ ಅನುಭವ ದರ್ಶನ ಗಳಾದುವು ಎಂಬುದನ್ನು ಪರಸ್ಪರ ಚರ್ಚಿಸುತ್ತಿದ್ದೆವು. ಆಗ ತಿಳಿದು ಬಂತು, ಅವರಾ ರಿಗೂ ನನಗಾಗುವಂತೆ ಜ್ಯೋತಿರ್ದರ್ಶನ ಆಗುತ್ತಿಲ್ಲ ಮತ್ತು ಯಾರೂ ನನ್ನಂತೆ ಮೇಲೆ ಹೇಳಿದ ರೀತಿಯಲ್ಲಿ ನಿದ್ರೆ ಮಾಡುತ್ತಿಲ್ಲ ಎಂದು.

"ಬಾಲ್ಯಕಾಲದಿಂದಲೂ ಕೆಲವೊಮ್ಮೆ ನಾನು ಯಾವುದಾದರೂ ವಸ್ತು, ವ್ಯಕ್ತಿ ಅಥವಾ ಪ್ರದೇಶವನ್ನು ನೋಡಿದಾಗ ಆ ಎಲ್ಲವೂ ಅತ್ಯಂತ ಪರಿಚಿತವೆನಿಸುತ್ತಿತ್ತು. ಹಿಂದೆ ಎಲ್ಲೊ ನೋಡಿದಂತೆನಿಸುತ್ತಿತ್ತು. ಎಷ್ಟೇ ಜ್ಞಾಪಿಸಿಕೊಳ್ಳಲು ಪ್ರಯತ್ನಿಸಿದರೂ ಮನಸ್ಸಿಗೆ ಹೊಳೆಯುತ್ತಿರಲಿಲ್ಲ. ಹಿಂದೆ ಇವುಗಳನ್ನು ನೋಡಿಲ್ಲ ಎಂದು ಅನಿಸುತ್ತಲೇ ಇರಲಿಲ್ಲ. ಹೀಗೆ ಆಗಾಗ ಆಗುತ್ತಿತ್ತು. ಸ್ನೇಹಿತರೊಡನೆ ಯಾವುದೊ ಪ್ರದೇಶದಲ್ಲಿ ಅನೇಕ ವಿಷಯಗಳ ಬಗ್ಗೆ ಮಾತನಾಡುತ್ತಿದ್ದೆವು ಎಂದಿಟ್ಟುಕೊಳ್ಳಿ. ಆಗ ಅವರಲ್ಲಿ ಯಾವನೋ ಒಬ್ಬನು ಒಂದು ವಿಷಯವನ್ನು ಹೇಳುತ್ತಾನೆ. ನನಗೆ ಕೂಡಲೇ ಅನಿಸು ತ್ತಿತ್ತು. ನಾನು ಬಹಳ ಹಿಂದೆಯೆ ಈ ಮನೆಯಲ್ಲಿ ಇದೇ ವಿಷಯದ ಬಗ್ಗೆ ಇವರೊಡನೆ ಮಾತನಾಡಿರುವೆ ಮತ್ತು ಇದೇ ವ್ಯಕ್ತಿಯೆ ಹಿಂದೆಯೂ ಕೂಡ ಇದೇ ರೀತಿ ಹೇಳಿದ್ದನು ಎಂದು. ನಾನು ಎಷ್ಟೇ ನೆನಪಿಸಿಕೊಳ್ಳಲು ಪ್ರಯತ್ನಿಸಿದರೂ ಅವರೊಡನೆ ಯಾವಾಗ ಎಲ್ಲಿ ಹಾಗೆ ಮಾತನಾಡಿದೆ ಎಂದು ಹೊಳೆಯುತ್ತಿರಲಿಲ್ಲ. ಮುಂದೆ ಪುನರ್ಜನ್ಮದ ವಿಚಾರ ವನ್ನು ತಿಳಿದಾಗ ನಾನು ಬಹುಶಃ ಹಿಂದಿನ ಜನ್ಮದಲ್ಲಿ ಆ ಸ್ಥಳ ಮತ್ತು ವ್ಯಕ್ತಿಗಳೊಡನೆ ಪರಿಚಿತನಾಗಿದ್ದಿರಬಹುದೆಂದು ಭಾವಿಸಿದೆ. ಇದರಿಂದಾಗಿಯೆ ಅವುಗಳ ಆಂಶಿಕ ನೆನಪು ನನಗಿದ್ದಿರಬಹುದು. ಮುಂದೆ ಈ ರೀತಿಯ ನಿರ್ಣಯ ವಿಚಾರಪೂರ್ಣವಲ್ಲ ಎಂದೆನಿಸಿತು. ಈ ಜನ್ಮದಲ್ಲಿ ನಾನು ಯಾವ ವಿಷಯ ಮತ್ತು ಯಾವ ವ್ಯಕ್ತಿಗಳೊಡನೆ ಪರಿಚಯವನ್ನು ಪಡೆಯಬೇಕೊ ಇದನ್ನು ಹುಟ್ಟುವುದಕ್ಕೆ ಮುಂಚೆಯೆ ಸಿನಿಮಾದಲ್ಲಿ ನೋಡುವಂತೆ ನೋಡಿಯಾಗಿತ್ತು ಮತ್ತು ಅದರ ಸ್ಮೃತಿಯೆ ಈಗ ಜೀವನದುದ್ದಕ್ಕೂ ಆಗಾಗ ಆಗುತ್ತಿದೆ ಎಂದು ನನಗೆ ಅನಿಸುತ್ತಿದೆ."[1]

2. ಶ್ರೀರಾಮಕೃಷ್ಣರ ಪವಿತ್ರ ಜೀವನ ಮತ್ತು ಅವರ ಸಮಾಧಿಗಳ ಬಗ್ಗೆ ಜನರ

---

1. ಮೇಲಿನ ಅದ್ಭುತ ದರ್ಶನಗಳ ವಿಚಾರವನ್ನು ವಿವೇಕಾನಂದರು ನಮ್ಮ ಪರಿಚಯವಾಗಿ ಸ್ವಲ್ಪ ಕಾಲದ ನಂತರ ತಿಳಿಸಿದರು. ಮುಂದೆ ಅವರ ಜೀವನದ ಕೊನೆಯಲ್ಲಿ ಅವುಗಳ ಕಾರಣದ ವಿಷಯ ವನ್ನು ನಮಗೆ ತಿಳಿಸಿದರು.

ಮೂಲಕ ತಿಳಿದು ನರೇಂದ್ರನು ಅವರನ್ನು ನೋಡಲು ಬಂದಿದ್ದನು.[1] ಅವರನ್ನು ನೋಡಿದಾಗ ತನ್ನಲ್ಲಿ ಭಾವಪರಿವರ್ತನೆ ಉಂಟಾಗುತ್ತದೆ. ಅಥವಾ ಅದ್ಭುತ ಅನುಭವಗಳು ಆಗುತ್ತವೆ ಎಂದು ಅವನು ಕನಸಿನಲ್ಲಿಯೂ ನೆನೆಸಿರಲಿಲ್ಲ. ಅವನು ಎರಡನೆಯ ಮತ್ತು ಮೂರನೆಯ ಬಾರಿ ಶ್ರೀರಾಮಕೃಷ್ಣರೆಡೆಗೆ ಬಂದಾಗ ಆದ ಅದ್ಭುತ ಅನುಭವಗಳಿಗೆ ಹೋಲಿಸಿದರೆ ಅವನ ಹಿಂದಿನ ಅನುಭವಗಳೆಲ್ಲ ಬಹಳ ಸಾಮಾನ್ಯವಾಗಿ ಕಂಡವು. ಅವನ ಅಸಾಮಾನ್ಯ ಬುದ್ಧಿಶಕ್ತಿಯು ಶ್ರೀರಾಮಕೃಷ್ಣರ ವ್ಯಕ್ತಿತ್ವದ ಆಳವನ್ನು ಅಳೆಯುವಲ್ಲಿ ಸೋಲನ್ನು ಒಪ್ಪಬೇಕಾಯಿತು. ಈ ಜಟಿಲ ಸಮಸ್ಯೆಯನ್ನು ಅವನು ಪರಿಹರಿಸದಾದ. ಶ್ರೀರಾಮಕೃಷ್ಣರ ದಿವ್ಯಶಕ್ತಿಯ ಪ್ರಭಾವದಿಂದಲೇ ತನಗೆ ಆ ಅದ್ಭುತ ಅನುಭವಗಳಾದುದು ಎಂಬುದರಲ್ಲಿ ಅವನಿಗೆ ಸ್ವಲ್ಪವೂ ಸಂದೇಹವಿರಲಿಲ್ಲ. ಇದರ ಬಗ್ಗೆ ಆಲೋಚಿಸಿದಂತೆಲ್ಲ ಅವನ ಆಶ್ಚರ್ಯವು ವೃದ್ಧಿಯಾಯಿತು.

3. ಶ್ರೀರಾಮಕೃಷ್ಣರೆಡೆಗೆ ಬಂದಮೇಲೆ ನರೇಂದ್ರನಿಗುಂಟಾದ ಅದ್ಭುತ ಅನುಭವವನ್ನು ಚಿಂತಿಸಿದರೆ ನಮ್ಮ ಆಶ್ಚರ್ಯಕ್ಕೆ ಮಿತಿಯೇ ಇರುವುದಿಲ್ಲ. ಶಾಸ್ತ್ರದ ಪ್ರಕಾರ ಸ್ವಲ್ಪ ಶಕ್ತಿಯಿಂದ ಕೂಡಿದ ಸಾಮಾನ್ಯ ಅಧಿಕಾರಿಯು ಇಂಥ ಅನುಭವಗಳನ್ನು ಪಡೆಯಬೇಕಾದರೆ ಬಹುಕಾಲದ ತ್ಯಾಗ ಮತ್ತು ತಪಸ್ಸು ಆವಶ್ಯಕ. ಹೇಗಾದರೂ ಮಾಡಿ ಇಂಥ ಅನುಭವವನ್ನು ಪಡೆದಮೇಲೆ ಅವನು ಗುರುವಿನಲ್ಲಿ ಭಗವತ್ಪ್ರಕಾಶವನ್ನು ಕಂಡು ಮೋಹಿತನಾಗಿ ಅವನಿಗೆ ಸಂಪೂರ್ಣ ಅಧೀನನಾಗಿಬಿಡುತ್ತಾನೆ. ನರೇಂದ್ರನು ಹಾಗೆ ಮಾಡದಿದ್ದುದು

---

1. ನಾವು ಮೊದಲೇ ತಿಳಿಸಿರುವಂತೆ ನರೇಂದ್ರನಾಥನು ದಕ್ಷಿಣೇಶ್ವರಕ್ಕೆ ಬರುವುದಕ್ಕೆ ಮುಂಚೆ ಜನರಲ್ ಅಸೆಂಬ್ಲೀಸ್ ಇನ್ಸ್‌ಟಿಟ್ಯೂಷನ್ ಎಂಬ ವಿದ್ಯಾಲಯದಲ್ಲಿ ಎಫ್. ಎ. ಪರೀಕ್ಷೆಗೆ ಕುಳಿತಿದ್ದನು. ಉದಾರ ಮನೋಭಾವದ ವಿದ್ಯಾವಂತನಾದ ಹೇಸ್ಟಿ ಎಂಬುವರು ಆ ವಿದ್ಯಾಲಯದ ಅಧ್ಯಕ್ಷರಾಗಿದ್ದರು. ಅವರ ಬಹುಮುಖ ಪ್ರತಿಭೆ, ಪವಿತ್ರ ಜೀವನ ಮತ್ತು ವಿದ್ಯಾರ್ಥಿಗಳ ಮೇಲಿದ್ದ ಅವರ ಪ್ರೇಮ ಇವುಗಳಿಂದಾಗಿ ನರೇಂದ್ರನಿಗೆ ಅವರ ಮೇಲೆ ವಿಶೇಷ ಗೌರವವಿತ್ತು. ಒಂದು ದಿನ ಸಾಹಿತ್ಯ ಅಧ್ಯಾಪಕನಿಗೆ ಕಾಯಿಲೆಯಾಗಿದ್ದರಿಂದ ಎಫ್. ಎ. ವಿದ್ಯಾರ್ಥಿಗಳಿಗೆ ಸಾಹಿತ್ಯದ ಮೇಲೆ ಪಾಠ ಹೇಳಲು ಅವರು ಬಂದರು. ಅವರೊಂದು ವರ್ಡ್ಸ್‌ವರ್ತ್‌ನ ಕವಿತೆಯ ಬಗ್ಗೆ ಮಾತನಾಡುತ್ತಿದ್ದರು. ಆ ಸಂದರ್ಭದಲ್ಲಿ ಕವಿಯು ಪ್ರಾಕೃತಿಕ ಸೌಂದರ್ಯವನ್ನು ಅನುಭವಿಸುತ್ತ ಭಾವಸಮಾಧಿಗೆ ಹೋಗುವ ವಿಚಾರ ಬಂತು. ವಿದ್ಯಾರ್ಥಿಗಳಿಗೆ ಸಮಾಧಿಯ ವಿಚಾರ ತಿಳಿಯಲಿಲ್ಲ. ಅವರಿಗೆ ಅದನ್ನು ವಿವರಿಸಿ ಹೇಳಿ ಕೊನೆಯಲ್ಲಿ ಹೇಸ್ಟಿ ಈ ಮಾತನ್ನು ಹೇಳಿದರು : ''ಮನಸ್ಸಿನ ಪವಿತ್ರತೆ ಮತ್ತು ಯಾವುದೋ ಒಂದು ವಿಷಯದ ಮೇಲೆ ಏಕಾಗ್ರತೆಯನ್ನು ಪಡೆದಾಗ ಈ ಅವಸ್ಥೆಯು ಉಂಟಾಗುತ್ತದೆ. ಇಂಥ ಅವಸ್ಥೆಯನ್ನು ಮುಟ್ಟಿದ ವ್ಯಕ್ತಿಗಳು ಬಹಳ ವಿರಳ. ದಕ್ಷಿಣೇಶ್ವರದ ರಾಮಕೃಷ್ಣ ಪರಮಹಂಸರಲ್ಲಿ ಮಾತ್ರ ಈ ಅವಸ್ಥೆಯನ್ನು ಕಂಡಿರುವೆನು. ನೀವು ಒಂದು ದಿನ ಅವರ ಈ ಅವಸ್ಥೆಯನ್ನು ನೋಡಿದರೆ ಆಗ ನಿಮಗೆ ಇದು ಅರ್ಥವಾಗುತ್ತದೆ.'' ಈ ರೀತಿ ಹೇಸ್ಟಿಯವರ ಮೂಲಕ ಪ್ರಥಮ ಬಾರಿಗೆ ಶ್ರೀರಾಮಕೃಷ್ಣರ ವಿಷಯವನ್ನು ಕೇಳಿ ಅನಂತರ ಸುರೇಂದ್ರನಾಥನ ಮನೆಯಲ್ಲಿ ನರೇಂದ್ರನು ಮೊದಲ ಬಾರಿಗೆ ಅವರನ್ನು ಭೇಟಿಯಾದನು. ಮತ್ತೆ ಬ್ರಹ್ಮ ಸಮಾಜದಲ್ಲಿಯೂ ಅವನು ಈ ಹಿಂದೆ ಶ್ರೀರಾಮಕೃಷ್ಣರ ಬಗ್ಗೆ ಕೇಳಿರಬಹುದೆಂದು ನಾವು ಊಹಿಸಬಹುದು.

ತುಂಬಾ ಆಶ್ಚರ್ಯವೇ ಸರಿ. ಇದರಿಂದಲೇ ಅವನು ಆಧ್ಯಾತ್ಮಿಕ ಜಗತ್ತಿನಲ್ಲಿ ಎಂಥ ಉಚ್ಚ ಅಧಿಕಾರಿಯಾಗಿದ್ದನು ಎಂಬುದನ್ನು ನಾವು ತಿಳಿಯಬಹುದು. ಅವನು ಉಚ್ಚ ಅಧಿಕಾರಿಯಾಗಿದ್ದುದರಿಂದಲೇ ಆ ಘಟನೆಯಿಂದ ಆತ್ಮ ಸಂಯಮವನ್ನು ಕಳೆದುಕೊಳ್ಳಲಿಲ್ಲ. ಶ್ರೀರಾಮಕೃಷ್ಣರ ಅಲೌಕಿಕ ಚರಿತ್ರೆ ಮತ್ತು ಆಚರಣೆಗಳನ್ನು ಪರೀಕ್ಷಿಸಿ ಅವುಗಳ ಬಗ್ಗೆ ಒಂದು ನಿರ್ದಿಷ್ಟ ನಿರ್ಣಯಕ್ಕೆ ಬರಲು ಅವನು ಸಮರ್ಥನಾದನು. ಅವನು ಶ್ರೀರಾಮಕೃಷ್ಣರಿಗೆ ವಶನಾಗದಿದ್ದರೂ ಅವನು ಈಗಿನಿಂದ ಅವರ ಕಡೆ ಹೆಚ್ಚು ಆಕರ್ಷಿತನಾದುದರಲ್ಲಿ ಸಂದೇಹವಿಲ್ಲ.

4. ಮೊದಲ ಭೇಟಿಯಾದಂದಿನಿಂದ ಶ್ರೀರಾಮಕೃಷ್ಣರು ನರೇಂದ್ರನಾಥನ ಕಡೆ ಪ್ರಬಲವಾದ ಆಕರ್ಷಣೆಯನ್ನು ಅನುಭವಿಸುತ್ತಿದ್ದರು. ಅಪರೋಕ್ಷಾನುಭೂತಿಯನ್ನು ಪಡೆದ ಮಹಾಗುರುವು ಯೋಗ್ಯ ಶಿಷ್ಯನು ಸಿಕ್ಕಿದ ಕೂಡಲೇ ತನ್ನ ಇಡೀ ಜೀವನ ಸಾಧನೆಯಿಂದ ಸಂಗ್ರಹಿಸಿದ ಆಧ್ಯಾತ್ಮಿಕ ಸಂಪತ್ತನ್ನು ಆತನಿಗೆ ನೀಡಲು ಹಾತೊರೆಯುತ್ತಿರುತ್ತಾನೆ. ಆ ಹಂಬಲವು ಆಳತೆಗೆ ಮೀರಿರುತ್ತದೆ. ಅದು ಸಂಪೂರ್ಣ ಸ್ವಾರ್ಥಹೀನವಾದದ್ದು. ಸಂಪೂರ್ಣ ಆತ್ಮನಿಗ್ರಹವುಳ್ಳ ಗುರುಗಳ ಹೃದಯದಲ್ಲಿ ಮಾತ್ರ ದಿವ್ಯಪ್ರೇರಣೆಯಿಂದ ಅದು ಉಂಟಾಗುತ್ತದೆ. ಈ ಪ್ರೇರಣೆಯ ಬಲದಿಂದಲೇ ಜಗದ್ಗುರುಗಳಾದ ಮಹಾಪುರುಷರುಗಳು ಉತ್ತಮ ಅಧಿಕಾರಿಯಾದ ಶಿಷ್ಯನನ್ನು ಕಂಡಕೂಡಲೇ ಅವನನ್ನು ಬ್ರಹ್ಮಜ್ಞಪದವಿಗೆ ಏರಿಸಿ ಅವನನ್ನು ಆಪ್ತಕಾಮನನ್ನಾಗಿಯೂ ಪೂರ್ಣನನ್ನಾಗಿಯೂ ಮಾಡಲು ಮುಂದಾಗುತ್ತಾರೆ.

5. ನರೇಂದ್ರನಾಥನು ಏಕಾಏಕಿಯಾಗಿ ದಕ್ಷಿಣೇಶ್ವರಕ್ಕೆ ಬಂದದಿನವೇ ಶ್ರೀರಾಮಕೃಷ್ಣರು ಅವನನ್ನು ಸಮಾಧಿಸ್ಥನನ್ನಾಗಿ ಮಾಡಿ ಬ್ರಹ್ಮಪದವಿಗೆ ಏರಿಸಲು ಬಹಳವಾಗಿ ಇಷ್ಟಪಟ್ಟಿದ್ದರು. ಈ ವಿಷಯದಲ್ಲಿ ಸಂಶಯವೇ ಇಲ್ಲ. ಏಕೆಂದರೆ ಇದಾದ ಮೂರು ನಾಲ್ಕು ವರ್ಷಗಳನಂತರ ನರೇಂದ್ರನಾಥನು ಸಂಪೂರ್ಣ ಶ್ರೀರಾಮಕೃಷ್ಣರ ವಶನಾದನು ಮತ್ತು ಆಗಾಗ ನಿರ್ವಿಕಲ್ಪ ಸಮಾಧಿಗಾಗಿ ಶ್ರೀರಾಮಕೃಷ್ಣರನ್ನು ಪ್ರಾರ್ಥಿಸುತ್ತಿದ್ದನು. ಆಗ ರಾಮಕೃಷ್ಣರು ಮೇಲಿನ ಘಟನೆಯನ್ನು ನಿರ್ದೇಶಿಸಿ ನಮ್ಮ ಮುಂದೆ ಅವನಿಗೆ ಹೀಗೆ ಹೇಳಿದ್ದರು: "ಯಾಕೆ, ನೀನೆ ಆಗ ಹೇಳಿರಲಿಲ್ಲವೇ, ನನಗೆ ತಂದೆ ತಾಯಿಗಳಿದ್ದಾರೆ. ಅವರ ಸೇವೆ ಮಾಡಬೇಕು ಎಂದು ?" ಇನ್ನೂ ಕೆಲವೊಮ್ಮೆ ಹೇಳುತ್ತಿದ್ದರು: "ನೋಡು, ಒಬ್ಬ ಸತ್ತು ಭೂತವಾಗಿದ್ದನು. ಅನೇಕ ಕಾಲ ಆ ಭೂತ ಏಕಾಕಿಯಾಗಿಯೇ ಯಾರ ಸಂಗವೂ ಇಲ್ಲದೆ ಇರಬೇಕಾಯಿತು. ಯಾರಾದರೂ ಸಿಕ್ಕುತ್ತಾರೆಯೆ ಎಂದು ಅದು ನಾಲ್ಕು ದಿಕ್ಕನ್ನು ಅರಸತೊಡಗಿತು. ಯಾರಾದರೂ ಸತ್ತರೆಂದು ಕೇಳಿದಕೂಡಲೇ ಅಲ್ಲಿಗೆ ಓಡುತ್ತಿತ್ತು. ಈಗ ಖಂಡಿತ ಒಬ್ಬ ಸಂಗಡಿಗ ಸಿಕ್ಕುತ್ತಾನೆ ಎಂದು ಭಾವಿಸುತ್ತಿತ್ತು. ಆದರೆ ಮೃತ ವ್ಯಕ್ತಿಯು ಗಂಗಾಜಲದ ಸ್ಪರ್ಶದಿಂದಲೋ ಅಥವಾ ಇನ್ನಾವುದೋ ಉಪಾಯದಿಂದಲೋ ಉದ್ಧಾರವಾಗಿ ಬಿಡುತ್ತಿದ್ದನು. ಖಿನ್ನಮನಸ್ಸಿನಿಂದ ಹಿಂದಿರುಗಿ ಮತ್ತೆ ಏಕಾಕಿಯಾಗಿಯೇ ಅಲೆಯುತ್ತಿತ್ತು. ಹೀಗೆ ಆ ಭೂತಕ್ಕೆ ಸಂಗಡಿಗರು ಯಾರೂ ಸಿಕ್ಕಲೇ ಇಲ್ಲ. ನನ್ನ ಪರಿಸ್ಥಿತಿಯೂ

ಅದೇ ಆಗಿದೆ. ನಿನ್ನನ್ನು ನೋಡಿದಾಗ ಅಂತು ನನಗೊಬ್ಬ ಸಂಗಡಿಗ ಸಿಕ್ಕಿದ ಅಂತ ಭಾವಿಸಿದೆ. ಆದರೆ ನೀನು ಹೇಳಿದೆ ನನಗೆ ತಂದೆತಾಯಿಗಳಿದ್ದಾರೆ ಎಂದು. ಹೀಗೆ ನನಗೆ ಸಂಗಡಿಗ ಸಿಗಲೇ ಇಲ್ಲ." ಈ ರೀತಿ ಅಂದಿನ ಘಟನೆಯನ್ನು ನಿರ್ದೇಶಿಸಿ ಶ್ರೀರಾಮಕೃಷ್ಣರು ನರೇಂದ್ರನೊಡನೆ ಹಾಸ್ಯಮಾಡುತ್ತಿದ್ದರು.

6. ಸಮಾಧಿಸ್ಥನಾಗುವ ಮೊದಲು ಅಂದು ನರೇಂದ್ರನಿಗೆ ತೀವ್ರ ಭಯ ಉಂಟಾದುದನ್ನು ನೋಡಿ ಶ್ರೀರಾಮಕೃಷ್ಣರು ತಮ್ಮ ಪ್ರಯತ್ನವನ್ನು ಅಲ್ಲಿಗೆ ನಿಲ್ಲಿಸಿದ್ದರು. ಇದನ್ನು ನಾವು ಮೊದಲೇ ತಿಳಿಸಿರುವೆವು. ಈ ಘಟನೆಯಿಂದ ಶ್ರೀರಾಮಕೃಷ್ಣರ ಮನಸ್ಸಿನಲ್ಲಿ ಸಂದೇಹ ಉಂಟಾಗಿತ್ತು. ನರೇಂದ್ರನ ಬಗ್ಗೆ ತಾವು ಕಂಡ ದರ್ಶನ ಅನುಭವಗಳೆಲ್ಲ ನಿಜವೇ ಎಂದು ಚಿಂತಿಸತೊಡಗಿದರು. ಈ ಕಾರಣದಿಂದಲೇ ಅವರು ನರೇಂದ್ರನು ಮೂರನೆಯ ಬಾರಿ ಬಂದಾಗ ತಮ್ಮ ಶಕ್ತಿಯನ್ನು ಪ್ರಯೋಗಿಸಿ ಅವನನ್ನು ವಶವರ್ತಿಯಾಗಿ ಮಾಡಿಕೊಂಡು ಅವನ ಜೀವನಕ್ಕೆ ಸಂಬಂಧಪಟ್ಟ ಎಲ್ಲ ರಹಸ್ಯಗಳನ್ನೂ ಕೇಳಿ ತಿಳಿದುಕೊಂಡರು. ತಮ್ಮ ದರ್ಶನಗಳಿಗೂ ಅದಕ್ಕೂ ಸಾಮ್ಯವಿದ್ದುದರಿಂದ ಅವರು ಆಗ ನಿಶ್ಚಿಂತರಾದರು. ಈ ನಮ್ಮ ಮೇಲಿನ ಊಹೆ ಸತ್ಯವಾದರೆ ನರೇಂದ್ರನಾಥನು ಎರಡು ಬಾರಿ ದಕ್ಷಿಣೇಶ್ವರಕ್ಕೆ ಬಂದಾಗ ಒಂದೇ ಪ್ರಕಾರದ ಸಮಾಧಿಯ ಸ್ಥಿತಿ ಅವನಿಗುಂಟಾಗಲಿಲ್ಲ ಎಂದು ನಾವು ತಿಳಿಯಬೇಕಾಗುತ್ತದೆ. ಅಷ್ಟೇ ಅಲ್ಲ ಎರಡು ಬಾರಿಯೂ ಬೇರೆ ಬೇರೆ ಬಗೆಯ ಅನುಭವಗಳು ಅವನಿಗಾಗಿದ್ದವು.

7. ನರೇಂದ್ರನಾಥನನ್ನು ಮೇಲೆ ಹೇಳಿದ ರೀತಿಯಲ್ಲಿ ಪರೀಕ್ಷಿಸಿದ ಮೇಲೆ ಒಂದು ರೀತಿಯಲ್ಲಿ ಶ್ರೀರಾಮಕೃಷ್ಣರು ನಿಶ್ಚಿಂತರಾದರೂ ಅವನ ವಿಷಯದಲ್ಲಿ ಅವರು ಸಂಪೂರ್ಣ ನಿಶ್ಚಿಂತರಾಗಿದ್ದರೆಂದು ಹೇಳುವಂತಿಲ್ಲ. ಅನೇಕ ಶಕ್ತಿಗಳ ಮಧ್ಯೆ ಒಂದೊ ಅಥವಾ ಎರಡೊ ಶಕ್ತಿಯನ್ನು ಪಡೆದು ಹುಟ್ಟಿದ ವ್ಯಕ್ತಿಯೂ ಕೂಡ ಜನಸಾಧಾರಣರ ಮಧ್ಯೆ ಸುಪ್ರಸಿದ್ಧ ವ್ಯಕ್ತಿಯಾಗಿ ಮೆರೆಯುವನು. ನರೇಂದ್ರನಾಥನಲ್ಲಿ ಅಂತಹ ಹದಿನೆಂಟು ಶಕ್ತಿಗಳು ಪೂರ್ಣ ರೂಪದಲ್ಲಿ ಪ್ರಕಾಶಿಸುತ್ತಿದ್ದವು. ಈಶ್ವರ, ಜಗತ್ತು ಮತ್ತು ಜೀವ ಇವುಗಳ ಸಂಬಂಧವಾಗಿ ಚರಮ ಸತ್ಯವನ್ನು ಅನುಭವಿಸಿ ನರೇಂದ್ರನು ಆ ಶಕ್ತಿಗಳನ್ನು ಆಧ್ಯಾತ್ಮಿಕ ಮಾರ್ಗದಲ್ಲಿ ಉಪಯೋಗಿಸದಿದ್ದರೆ ಅವುಗಳ ಫಲ ವಿಪರೀತವಾಗುವ ಸಂಭವವಿತ್ತು. ಶ್ರೀರಾಮಕೃಷ್ಣರು ಹೇಳುತ್ತಿದ್ದರು : ಹಾಗೆ ಆದರೆ ನರೇಂದ್ರನು ಬೇರೆ ಎಲ್ಲ ನೇತಾರರಂತೆ ಒಂದು ಹೊಸ ಮತವನ್ನು ಮತ್ತು ಪಕ್ಷವನ್ನು ಸೃಷ್ಟಿಸಿ ಜಗತ್ತಿನಲ್ಲಿ ಖ್ಯಾತಿಯನ್ನು ಪಡೆಯುತ್ತಾನೆ ಅಷ್ಟೆ. ಆದರೆ ಇದರಿಂದ ಯುಗ ಪ್ರಯೋಜನ ಪೂರ್ತಿಯಾಗುವುದಿಲ್ಲ. ಉದಾರ ಆಧ್ಯಾತ್ಮಿಕ ತತ್ತ್ವವನ್ನು ಅನುಭವಿಸಿ ಅದನ್ನು ಜಗತ್ತಿನಲ್ಲಿ ಪ್ರಚಾರ ಮಾಡಿ ಜಗತ್ತಿನ ಹಿತವನ್ನು ಸಾಧಿಸುವುದು ಸಾಧ್ಯವಾಗುವುದಿಲ್ಲ. ಇದಕ್ಕಾಗಿ ನರೇಂದ್ರನು ಸ್ವಪ್ರೇರಣೆಯಿಂದ ಸಂಪೂರ್ಣ ರೀತಿಯಲ್ಲಿ ತಮ್ಮನ್ನು ಅನುಸರಿಸಿ ತಮ್ಮಂತೆಯೆ ಆಧ್ಯಾತ್ಮಿಕ ಅನುಭವಗಳನ್ನು ಪಡೆಯಬೇಕಿತ್ತು. ಈಗಿನಿಂದ ಶ್ರೀರಾಮಕೃಷ್ಣರ ಮನಸ್ಸು ಈ ವಿಷಯದಲ್ಲಿ ಕಾತರಗೊಂಡಿತ್ತು. ಶ್ರೀರಾಮಕೃಷ್ಣರು ಹೇಳುತ್ತಿದ್ದರು : "ನೀರಿನ

ಪ್ರವಾಹವಿಲ್ಲದ ಸಣ್ಣ ಕೊಳಗಳು, ಕೆರೆಗಳಲ್ಲಿ ಪಾಚಿ ಕಟ್ಟಿಕೊಳ್ಳುತ್ತದೆ. ಹಾಗೆಯೆ ಆಧ್ಯಾತ್ಮಿಕ ಜಗತ್ತಿನಲ್ಲಿ ಆಂಶಿಕ ಸತ್ಯಗಳನ್ನೇ ಪೂರ್ಣವೆಂದು ಗ್ರಹಿಸಿ ಅವುಗಳಲ್ಲಿಯೇ ತೃಪ್ತನಾಗಿದ್ದಾಗ ಸಂಕುಚಿತ ಆದರ್ಶಗಳಿಂದ ಕೂಡಿದ ಅನೇಕ ಮತಗಳು ಹುಟ್ಟುವುವು." ಅಸಾಧಾರಣ ಬುದ್ಧಿಶಕ್ತಿಯನ್ನು ಪ್ರತಿಭೆಗಳನ್ನು ಪಡೆದಿದ್ದ ನರೇಂದ್ರನು ತಪ್ಪು ದಾರಿಯನ್ನು ಹಿಡಿದು ತನ್ನದೇ ಆದ ಯಾವುದೋ ಮತವನ್ನು ಸ್ಥಾಪಿಸಬಾರದೆಂದು ಶ್ರೀರಾಮಕೃಷ್ಣರು ಅವನು ಯಥಾರ್ಥ ಸತ್ಯವನ್ನು ಅರಿಯುವಂತೆ ಮಾಡಲು ಎಷ್ಟೆಲ್ಲ ಪ್ರಯತ್ನಿಸಿದರು ಎಂಬುದನ್ನು ಚಿಂತಿಸಿದಾಗ ಆಶ್ಚರ್ಯವಾಗುತ್ತದೆ.

8. ಆದ್ದರಿಂದ ನರೇಂದ್ರನಾಥನನ್ನು ಪ್ರಥಮ ಬಾರಿಗೆ ನೋಡಿದಂದಿನಿಂದಲೂ ಅನೇಕ ಕಾರಣಗಳ ನಿಮಿತ್ತ ಅವರು ಅವನೆಡೆಗೆ ಪ್ರಬಲವಾಗಿ ಆಕರ್ಷಿತರಾದರು. ಅವನು ಅಡ್ಡದಾರಿ ಹಿಡಿಯುವುದಿಲ್ಲವೆಂಬ ಭರವಸೆ ಉಂಟಾಗುವವರೆಗೂ ಅವರ ಈ ಆಕರ್ಷಣೆ ಸ್ವಾಭಾವಿಕ ರೂಪವನ್ನು ಪಡೆಯಲಿಲ್ಲ. ಈ ಒಂದು ಆಕರ್ಷಣೆಗೆ ಅನೇಕ ಕಾರಣಗಳಿದ್ದುವು. ನರೇಂದ್ರನ ಬಗ್ಗೆ ಅವರು ಕಂಡ ಅದ್ಭುತ ದರ್ಶನಗಳು ಈ ಕಾರಣಗಳಲ್ಲಿ ಒಂದಾಗಿತ್ತು. ಇನ್ನೊಂದು ಕಾರಣ ನರೇಂದ್ರನಾಥನು ಎಲ್ಲಿ ಪ್ರಾಪಂಚಿಕ ಜೀವನವನ್ನು ಹಿಡಿದು ಜೀವನದ ಚರಮಗುರಿಯನ್ನು ಸಂಪೂರ್ಣ ಸಾಧಿಸದೆ ಇರಬಹುದು ಎಂಬ ಭಯ.

9. ಬಹಳ ಕಾಲದ ತ್ಯಾಗ ಮತ್ತು ತಪಸ್ಸಿನ ಫಲವಾಗಿ ಶ್ರೀರಾಮಕೃಷ್ಣರಲ್ಲಿ ಅಲ್ಪವಾದ 'ನಾನು, 'ನನ್ನದು' ಎಂಬ ಬುದ್ಧಿ ಸಂಪೂರ್ಣ ಹೊರಟು ಹೋಗಿತ್ತು ಮತ್ತು ಜಗತ್ಕಾರಣದೊಡನೆ ಅವರು ಒಂದಾಗಿದ್ದರು. ಆದ್ದರಿಂದ ಭಗವಂತನ ಲೋಕ ಸಂಗ್ರಹ ಕಾರ್ಯ ತಮ್ಮದೇ ಎಂಬ ಅನುಭವ ಅವರಿಗಾಗುತ್ತಿತ್ತು. ಆಧುನಿಕ ಯುಗದ ಧರ್ಮ ಗ್ಲಾನಿಯನ್ನು ನಾಶಮಾಡುವ ಮಹತ್ಕಾರ್ಯದಲ್ಲಿ ತಮ್ಮ ಶರೀರ ಮನಸ್ಸುಗಳು ಒಂದು ಉಪಕರಣ ಎಂಬುದನ್ನು ಅವರು ಮನಗಂಡಿದ್ದರು. ಸಾಮಾನ್ಯ ಸ್ವಾರ್ಥಸುಖದ ಸಾಧನೆಗಾಗಿ ನರೇಂದ್ರನಾಥನು ಜನ್ಮವೆತ್ತಿಲ್ಲ, ಭಗವತ್ಪ್ರೀತಿಯಿಂದ ಮೇಲೆ ಹೇಳಿದ ಲೋಕ ಸಂಗ್ರಹಕಾರ್ಯದಲ್ಲಿ ಸಹಾಯಕನಾಗಲು ಬಂದಿರುವನು ಎಂಬುದು ಅವರಿಗೆ ಅರ್ಥವಾಗಿತ್ತು. ಆದ್ದರಿಂದ ನರೇಂದ್ರನಾಥನನ್ನು ತಮ್ಮ ಪರಮ ಆತ್ಮೀಯನೆಂದು ಪರಿಗಣಿಸುವುದರಲ್ಲಿ ಮತ್ತು ಅವನೆಡೆಗೆ ಪ್ರಬಲವಾಗಿ ಆಕರ್ಷಿತರಾದುದರಲ್ಲಿ ಆಶ್ಚರ್ಯವೇನಿದೆ ? ಆದ್ದರಿಂದ ಮೇಲು ನೋಟಕ್ಕೆ ನರೇಂದ್ರನ ಮೇಲೆ ಶ್ರೀರಾಮಕೃಷ್ಣರ ಆಕರ್ಷಣೆ ವಿಚಿತ್ರವಾಗಿ ಕಂಡರೂ ಅದು ಸ್ವಾಭಾವಿಕ ಮತ್ತು ಆವಶ್ಯಕ ಎಂಬುದು ಸ್ವಲ್ಪ ಆಲೋಚಿಸಿದಾಗ ತಿಳಿದು ಬರುತ್ತದೆ.

10. ಪ್ರಥಮ ದರ್ಶನದಿಂದಲೇ ಶ್ರೀರಾಮಕೃಷ್ಣರು ನರೇಂದ್ರನಾಥನನ್ನು ಎಷ್ಟರಮಟ್ಟಿಗೆ ತಮ್ಮ ನಿಕಟ ಆತ್ಮೀಯರೆಂದು ಪರಿಗಣಿಸಿದ್ದರು ಮತ್ತು ಎಷ್ಟು ಗಾಢವಾಗಿ ಅವನನ್ನು ಪ್ರೀತಿಸತೊಡಗಿದರು ಎಂಬುದರ ಆಭಾಸವನ್ನು ನೀಡುವುದಕ್ಕೂ ಸಾಧ್ಯವಿಲ್ಲ. ಸಂಸಾರಿಯಾದ ಮಾನವನು ಯಾವ ಕಾರಣಗಳಿಗಾಗಿ ಇತರರನ್ನು ತಮ್ಮವ

ರೆಂದು ಭಾವಿಸಿ ಪ್ರೀತಿಸುವನೊ ಅಂತಹ ಯಾವ ಕಾರಣಗಳೂ ಇಲ್ಲಿರಲಿಲ್ಲ. ಆದರೆ ನರೇಂದ್ರನ ವಿರಹದಿಂದ ಮತ್ತು ಮಿಲನದಿಂದ ಶ್ರೀರಾಮಕೃಷ್ಣರಲ್ಲಿ ಉಂಟಾಗುತ್ತಿದ್ದ ವ್ಯಾಕುಲತೆ ಮತ್ತು ಉಲ್ಲಾಸಗಳ ಒಂದು ಬಿಂದುವನ್ನೂ ಕೂಡ ಬೇರೆ ಕಡೆ ನೋಡುವ ಅವಕಾಶ ನಮಗಿರಲಿಲ್ಲ. ಯಾವ ಕಾರಣವೂ ಇಲ್ಲದೆ ಒಬ್ಬನು ಮತ್ತೊಬ್ಬನನ್ನು ಈ ರೀತಿ ಪ್ರೀತಿಸಬಲ್ಲ ಎಂಬುದು ನಮಗೆ ಇದಕ್ಕೆ ಮುಂಚೆ ತಿಳಿದಿರಲಿಲ್ಲ. ನರೇಂದ್ರನ ಮೇಲೆ ಶ್ರೀರಾಮಕೃಷ್ಣರ ಅದ್ಭುತ ಪ್ರೀತಿಯನ್ನು ನೋಡಿ ಮುಂದೆ ಪ್ರಪಂಚದಲ್ಲಿ ಪ್ರತಿಯೊಬ್ಬ ಮಾನವನೂ ಪರಸ್ಪರರಲ್ಲಿ ಭಗವಂತನನ್ನು ಕಾಣುತ್ತಾ ನಿಷ್ಕಾರಣವಾಗಿ ಈ ರೀತಿ ಪರಸ್ಪರರನ್ನು ಪ್ರೀತಿಸುವ ಸಮಯ ಬರುತ್ತದೆ ಎಂದು ನಾವು ಅರ್ಥಮಾಡಿಕೊಂಡೆವು.

11. ನರೇಂದ್ರನಾಥನು ಶ್ರೀರಾಮಕೃಷ್ಣರೆಡೆಗೆ ಬಂದು ಸ್ವಲ್ಪ ಕಾಲವಾದ ಮೇಲೆ ಸ್ವಾಮಿ ಪ್ರೇಮಾನಂದರು ದಕ್ಷಿಣೇಶ್ವರಕ್ಕೆ ಪ್ರಥಮ ಬಾರಿಗೆ ಬಂದರು. ನರೇಂದ್ರನಾಥನು ಈ ನಡುವೆ ದಕ್ಷಿಣೇಶ್ವರಕ್ಕೆ ಬರದೆ ಒಂದು ವಾರಕ್ಕೂ ಹೆಚ್ಚು ದಿನಗಳು ಕಳೆದಿದ್ದವು. ಶ್ರೀರಾಮಕೃಷ್ಣರು ಇದರಿಂದಾಗಿ ಎಷ್ಟೊಂದು ವ್ಯಾಕುಲರಾಗಿದ್ದರು ಎಂಬುದನ್ನು ನೋಡಿ ಅಂದು ಪ್ರೇಮಾನಂದರಿಗೆ ಅತ್ಯಾಶ್ಚರ್ಯವಾಗಿತ್ತು. ಅವರು ನಮಗೆ ಈ ಘಟನೆಯನ್ನು ಹೀಗೆ ವಿವರಿಸುತ್ತಿದ್ದರು :

"ಸ್ವಾಮಿ ಬ್ರಹ್ಮಾನಂದ ಮತ್ತು ನಾನು ದೋಣಿಗಾಗಿ ಹಟ್‌ಖೋಲಾ ಘಟ್ಟಕ್ಕೆ ಹೋದೆವು. ಅಲ್ಲಿ ರಾಮ್‌ದಯಾಲ್ ಬಾಬು ಇದ್ದನು. ಅವನೂ ದಕ್ಷಿಣೇಶ್ವರಕ್ಕೆ ಹೋಗುವವನಿದ್ದುದರಿಂದ ಒಟ್ಟಿಗೆ ದೋಣಿ ಹತ್ತಿದೆವು. ನಾವು ರಾಸಮಣಿ ಕಾಳೀ ಮಂದಿರವನ್ನು ತಲುಪಿದಾಗ ಸುಮಾರು ಸಂಜೆಯಾಗಿತ್ತು. ನಾವು ಶ್ರೀರಾಮಕೃಷ್ಣರ ಕೊಠಡಿಗೆ ಹೋದೆವು. ಅವರು ಜಗನ್ಮಾತೆಗೆ ನಮಸ್ಕರಿಸಲು ಮಂದಿರಕ್ಕೆ ಹೋಗಿದ್ದರು. ನಮ್ಮನ್ನು ಇಲ್ಲಿಯೇ ಇರಲು ಹೇಳಿ ಸ್ವಾಮಿ ಬ್ರಹ್ಮಾನಂದರು ಶ್ರೀರಾಮಕೃಷ್ಣರನ್ನು ಕರೆದುಕೊಂಡು ಬರಲು ಮಂದಿರಕ್ಕೆ ಹೋದರು. ಅವರು ನಿಧಾನವಾಗಿ ಶ್ರೀರಾಮಕೃಷ್ಣರನ್ನು ಕೈಹಿಡಿದು ನಡೆಸಿಕೊಂಡು ಬರುತ್ತಾ 'ಇಲ್ಲಿ ಮೆಟ್ಟಲಿದೆ, ಇಲ್ಲಿ ಕೆಳಗೆ ಹೋಗಬೇಕು' ಎಂದು ನಿರ್ದೇಶನ ನೀಡುತ್ತಿದ್ದರು. ಶ್ರೀರಾಮಕೃಷ್ಣರ ಭಾವ ಸಮಾಧಿಯ ಬಗ್ಗೆ ಮತ್ತು ಅವರು ಸಾಮಾನ್ಯ ಪ್ರಜ್ಞೆಯನ್ನು ಕಳೆದುಕೊಳ್ಳುವುದರ ಬಗ್ಗೆ ನಾನು ಕೇಳಿದ್ದೆ. ಕುಡಿದವರಂತೆ ತೂರಾಡುತ್ತಾ ಬರುವುದನ್ನು ನೋಡಿ ಅವರು ಭಾವದಲ್ಲಿ ತಲ್ಲೀನರಾಗಿದ್ದಾರೆ ಎಂದು ನನಗೆ ತಿಳಿಯಿತು. ಅವರು ಹಾಗೆಯೆ ಕೊಠಡಿಯನ್ನು ಪ್ರವೇಶಿಸಿ ಚಿಕ್ಕ ಮಂಚದ ಮೇಲೆ ಕುಳಿತರು. ಸಾಮಾನ್ಯ ಸ್ಥಿತಿಗೆ ಬಂದ ಮೇಲೆ ಅವರು ನನಗೆ ಕೆಲವು ಪ್ರಶ್ನೆಗಳನ್ನು ಕೇಳಿದರು. ಮತ್ತೆ ನನ್ನ ಸಂಬಂಧಿಕರ ಬಗ್ಗೆ ವಿಚಾರಿಸಿದರು. ಅನಂತರ ನನ್ನ ಮುಖ, ಕೈ ಕಾಲು ಇತ್ಯಾದಿಗಳ ಚಹರೆಯನ್ನು ಪರೀಕ್ಷಿಸಿದರು. ನನ್ನ ಮುಂಗೈಯನ್ನು ತಮ್ಮ ಕೈಯಲ್ಲಿ ಹಿಡಿದು ತೂಗಿ ನೋಡಿ ಹೇಳಿದರು: 'ಚೆನ್ನಾಗಿದೆ' ಎಂದು. ಅದರಿಂದ ಅವರಿಗೇನು ಅರ್ಥವಾಯಿತೊ ಅವರಿಗೇ ಗೊತ್ತು. ಅನಂತರ ನರೇಂದ್ರನ ಆರೋಗ್ಯದ ಬಗ್ಗೆ ರಾಮದಯಾಲನನ್ನು ವಿಚಾರಿಸಿದರು. ಅವನು ಚೆನ್ನಾಗಿದ್ದಾನೆಂದು

ಕೇಳಿದ ಮೇಲೆ ಶ್ರೀರಾಮಕೃಷ್ಣರು ಹೇಳಿದರು : 'ಅವನು ಇಲ್ಲಿಗೆ ಬರದೆ ಬಹಳ ಕಾಲ ವಾಯಿತು. ಅವನನ್ನು ತುಂಬಾ ನೋಡಬೇಕೆನಿಸುತ್ತಿದೆ. ದಯವಿಟ್ಟು ಒಮ್ಮೆ ಬರುವುದಕ್ಕೆ ಹೇಳು.'

"ಭಗವದ್ವಿಚಾರವಾಗಿ ಮಾತನಾಡುತ್ತ ಕೆಲವು ಗಂಟೆಗಳು ಬಹಳ ಆನಂದದಿಂದ ಕಳೆದುವು. ರಾತ್ರಿ ಹತ್ತು ಗಂಟೆಗೆ ಊಟ ಮುಗಿಸಿ ಶ್ರೀರಾಮಕೃಷ್ಣರ ಕೊಠಡಿಯ ಪೂರ್ವ ವರಾಂಡದಲ್ಲಿ ಮಲಗಿದೆವು. ಶ್ರೀರಾಮಕೃಷ್ಣರಿಗೆ ಮತ್ತು ಸ್ವಾಮಿ ಬ್ರಹ್ಮಾನಂದರಿಗೆ ಕೊಠಡಿಯಲ್ಲಿ ಹಾಸಿಗೆ ಸಿದ್ಧವಾಯಿತು. ಒಂದು ಗಂಟೆ ಆಗುವಷ್ಟರಲ್ಲಿಯೇ ಶ್ರೀರಾಮಕೃಷ್ಣರು ತಮ್ಮ ಬಟ್ಟೆಯನ್ನು ಕಂಕೊಳಲ್ಲಿ ಹಿಡಿದುಕೊಂಡು ನಾವು ಮಲಗಿದ್ದ ಜಾಗಕ್ಕೆ ಬಂದರು. ರಾಮದಯಾಲನನ್ನು ಕುರಿತು ಪ್ರೀತಿಯಿಂದ 'ನಿದ್ರಿಸುತ್ತಿರುವೆಯಾ ?' ಎಂದು ಪ್ರಶ್ನಿಸಿದರು. ನಾವಿಬ್ಬರೂ ಕೂಡಲೇ ಮೇಲೆದ್ದು 'ಇಲ್ಲ' ಎಂದೆವು. ಶ್ರೀರಾಮಕೃಷ್ಣರು ಹೇಳಿದರು : 'ನೋಡಪ್ಪ, ನಾನು ನರೇಂದ್ರನನ್ನು ನೋಡದೆ ಬಹಳ ಸಮಯವಾಯಿತು. ನನ್ನ ಇಡೀ ಜೀವ ಒದ್ದೆಬಟ್ಟೆಯನ್ನು ಹಿಂಡಿದಂತಾಗುತ್ತಿದೆ. ಒಮ್ಮೆ ಬಂದು ನನ್ನನ್ನು ನೋಡಲು ಹೇಳು ಅವನಿಗೆ. ಅವನು ತುಂಬಾ ಸಾತ್ತ್ವಿಕ ವ್ಯಕ್ತಿ, ಅವನು ನಾರಾಯಣನೆ. ಆಗಾಗ ಅವನನ್ನು ನೋಡದೆ ಇದ್ದರೆ ನನಗೆ ಮನಶ್ಶಾಂತಿ ಇರುವುದಿಲ್ಲ.' ರಾಮದಯಾಲನು ಸ್ವಲ್ಪ ಕಾಲದಿಂದ ದಕ್ಷಿಣೇಶ್ವರಕ್ಕೆ ಬರುತ್ತಿದ್ದ. ಶ್ರೀರಾಮಕೃಷ್ಣರ ಬಾಲಕ ಸ್ವಭಾವ ಅವನಿಗೆ ಅಪರಿಚಿತವೇನಲ್ಲ. ಅವರ ಬಾಲಕ ಸ್ವಭಾವದ ವರ್ತನೆಯನ್ನು ನೋಡಿ ಅವರು ಸಮಾಧಿಯಲ್ಲಿರುವರೆಂದು ತಿಳಿದನು. ಬೆಳಗಾದ ಕೂಡಲೇ ನರೇಂದ್ರನನ್ನು ಕಂಡು ಇಲ್ಲಿಗೆ ಬರಲು ಹೇಳುತ್ತೇನೆ ಎಂದು ಮುಂತಾಗಿ ಹೇಳುತ್ತಾ ಅವರನ್ನು ಸಮಾಧಾನ ಪಡಿಸಲು ಪ್ರಯತ್ನಿಸಿದ. ಆದರೆ ಅಂದು ರಾತ್ರಿ ಶ್ರೀರಾಮಕೃಷ್ಣರ ಆ ಭಾವ ಹೊರಟು ಹೋಗಲೇ ಇಲ್ಲ. ನಮ್ಮ ವಿಶ್ರಾಂತಿಗೆ ಭಂಗವಾಗುವುದೆಂದು ಅವರು ಆಗಾಗ ಕೊಠಡಿಗೆ ಹೋಗುತ್ತಿದ್ದರು. ಆದರೆ ಮರುಕ್ಷಣವೇ ಅದನ್ನು ಮರೆತು ಮತ್ತೆ ನಮ್ಮೆಡೆಗೆ ಬಂದು ನರೇಂದ್ರನ ಸದ್ಗುಣಗಳ ಬಗ್ಗೆ ಹೇಳುತ್ತಿದ್ದರು. ನರೇಂದ್ರನಿಲ್ಲದೆ ತಮ್ಮ ದಾರುಣ ವಿರಹವೇದನೆಯನ್ನು ಅವರು ವ್ಯಕ್ತಪಡಿಸುತ್ತಿದ್ದರು. ಅವರ ಆ ತೀವ್ರ ವಿರಹವೇದನೆಯನ್ನು ಕಂಡು ಅತ್ಯಾಶ್ಚರ್ಯದಿಂದ ಭಾವಿಸಿದೆ : 'ಇವರದು ಎಂಥಾ ಪ್ರೀತಿ ! ಆ ವ್ಯಕ್ತಿ ಎಷ್ಟು ಕಠಿಣ ಹೃದಯಿಯಾಗಿರಬೇಕು. ಅವನಿಗಾಗಿ ಇವರು ಇಷ್ಟೊಂದು ಪರಿತಪಿಸುತ್ತಿರುವರಲ್ಲ !' ಇದೇ ರೀತಿ ರಾತ್ರಿ ಕಳೆಯಿತು. ಬೆಳಗ್ಗೆ ನಾವು ದೇವಸ್ಥಾನಕ್ಕೆ ಹೋಗಿ ದೇವಿಗೆ ನಮಸ್ಕರಿಸಿದೆವು. ಅನಂತರ ಶ್ರೀರಾಮಕೃಷ್ಣರ ಪಾದಕ್ಕೆ ವಂದಿಸಿ ಅವರಿಂದ ಬೀಳ್ಕೊಂಡು ಕಲ್ಕತ್ತೆಗೆ ಹೊರಟೆವು."

12. ೧೮೮೩ರಲ್ಲಿ ಒಮ್ಮೆ ನಮ್ಮ ಸ್ನೇಹಿತನಾದ ವೈಕುಂಠನಾಥ ಸನ್ಯಾಲನು ದಕ್ಷಿಣೇಶ್ವರಕ್ಕೆ ಹೋಗಿದ್ದಾಗ ಶ್ರೀರಾಮಕೃಷ್ಣರು ನರೇಂದ್ರನಿಗಾಗಿ ಹಂಬಲಿಸುತ್ತಿದ್ದುದನ್ನು ಅವನು ಕಂಡಿದ್ದನು. ಅವನು ಹೇಳುತ್ತಾನೆ : "ಶ್ರೀರಾಮಕೃಷ್ಣರ ಮನಸ್ಸು ನರೇಂದ್ರನಿಂದಲೇ ತುಂಬಿಹೋಗಿತ್ತು. ನರೇಂದ್ರನ ಸದ್ಗುಣಗಳನ್ನಲ್ಲದೆ ಮತ್ತಾವುದರ ಬಗ್ಗೆಯೂ

ಅವರು ಮಾತನಾಡಲಿಲ್ಲ. ನನ್ನನ್ನು ಉದ್ದೇಶಿಸಿ ಅವರು ಹೇಳಿದರು : "ನೋಡು, ನರೇಂದ್ರನು ಶುದ್ಧ ಸತ್ವದಿಂದ ಕೂಡಿದ ವ್ಯಕ್ತಿ. ಅವನು ಅಖಂಡರಾಜ್ಯದ ನಾಲ್ಕು ಜನರಲ್ಲಿ ಒಬ್ಬನು ಮತ್ತು ಸಪ್ತಋಷಿಗಳಲ್ಲಿ ಒಬ್ಬನು, ಎಂಬುದನ್ನು ನಾನು ನೋಡಿರುವೆ. ಅವನಲ್ಲಿರುವ ಗುಣಗಳಿಗೆ ಕೊನೆಯೇ ಇಲ್ಲ." ಹೀಗೆ ಹೇಳುತ್ತಾ ಹೇಳುತ್ತಾ ಶ್ರೀರಾಮಕೃಷ್ಣರು ನರೇಂದ್ರ ನಾಥನನ್ನು ನೋಡುವುದಕ್ಕಾಗಿ ಅತ್ಯಂತ ಚಂಚಲರಾದರು. ಪುತ್ರ ವಿರಹದಿಂದ ತಾಯಿಯು ಹೇಗೆ ಕಾತರಳಾಗುವಳೋ ಹಾಗೆಯೇ ಅವರು ಧಾರಾಕಾರವಾಗಿ ಕಂಬನಿ ಸುರಿಸತೊಡಗಿದರು. ಅವರಿಗೆ ಆ ದುಃಖವನ್ನು ತಡೆಯಲಾಗಲಿಲ್ಲ. ತಮ್ಮ ವರ್ತನೆಯನ್ನು ನೋಡಿ ನಾವು ಏನು ಭಾವಿಸುವೆವೊ ಎಂದು ತಿಳಿದು ಬೇಗನೆ ಹೆಜ್ಜೆ ಹಾಕುತ್ತಾ ಉತ್ತರ ದಿಕ್ಕಿನ ವರಾಂಡಕ್ಕೆ ಹೋದರು. ತೀವ್ರವಾಗಿ ರೋದಿಸುತ್ತ ಬಿಕ್ಕಳಿಸುತ್ತ ಗದ್ಗದ ಕಂಠದಲ್ಲಿ ಅವರು 'ಹಾ ! ಅವನನ್ನು ನೋಡದೆ ನಾನಿರಲಾರೆ !' ಎಂದು ಹೇಳುತ್ತಿದ್ದುದನ್ನು ನಾವು ಕೇಳಿದೆವು. ಅವರು ಸ್ವಲ್ಪ ಸುಧಾರಿಸಿಕೊಂಡು ಕೊಠಡಿಗೆ ಬಂದು ನಮ್ಮ ಹತ್ತಿರ ಕುಳಿತುಕೊಂಡರು. ಶೋಕತಪ್ತರಾಗಿ ಹೇಳತೊಡಗಿದರು: 'ಎಷ್ಟು ಅತ್ತೆ, ಆದರೂ ನರೇಂದ್ರ ಬರುತ್ತಿಲ್ಲ. ಅವನನ್ನು ಒಮ್ಮೆ ನೋಡಬೇಕೆಂದು ನನ್ನ ಹೃದಯ ಚಡಪಡಿಸುತ್ತಿದೆ. ಹೃದಯ ಹಿಂಡಿದಂತಾಗುತ್ತಿದೆ. ನನ್ನ ಆಕರ್ಷಣೆಯ ತೀವ್ರತೆ ಅವನಿಗೆ ಸ್ವಲ್ಪವೂ ಅರ್ಥವಾಗುತ್ತಿಲ್ಲ.' ಹೀಗೆ ಹೇಳುತ್ತಾ ಮತ್ತೆ ಅವರು ಚಿಂತಿಸುತ್ತಾ ಕೊಠಡಿಯ ಹೊರಗೆ ಹೋದರು. ಸ್ವಲ್ಪ ಹೊತ್ತಿನ ನಂತರ ಮತ್ತೆ ಬಂದು ಹೇಳಿದರು: 'ನನ್ನಂಥ ಪ್ರೌಢವ್ಯಕ್ತಿ ಈ ರೀತಿ ರೋದಿಸುವುದನ್ನು ನೋಡಿದರೆ ಜನ ಏನೆಂದುಕೊಳ್ಳುತ್ತಾರೆ ? ನೀವೆಲ್ಲ ನನ್ನವರೆ. ನಿಮ್ಮ ಮುಂದೆ ನನಗೆ ನಾಚಿಕೆ ಆಗುವುದಿಲ್ಲ. ಆದರೆ ಬೇರೆಯವರು ಇದನ್ನು ನೋಡಿದರೆ ಏನು ಭಾವಿಸುವರೊ. ಆದರೆ ನನಗೆ ಮಾತ್ರ ಇದನ್ನು ತಡೆಯಲಾಗುವುದಿಲ್ಲ.' ಶ್ರೀರಾಮಕೃಷ್ಣರ ನರೇಂದ್ರನ ಮೇಲಿನ ಪ್ರೀತಿಯನ್ನು ನೋಡಿ ನಾವು ಮೂಕ ವಿಸ್ಮಿತರಾದೆವು. ನರೇಂದ್ರನು ಒಬ್ಬ ದೇವತಾಪುರುಷನಂತಿರಬೇಕು ಎಂದೆನಿಸಿತು. ಇಲ್ಲದಿದ್ದರೆ ಶ್ರೀರಾಮಕೃಷ್ಣರು ಅವನೆಡೆಗೆ ಅಷ್ಟೊಂದು ಆಕರ್ಷಿತರಾಗುತ್ತಿದ್ದರೇನು ? ಅವರನ್ನು ಸಮಾಧಾನಪಡಿಸಲು ನಾವು ಹೇಳಿದೆವು : 'ಹೌದು ಮಹಾಶಯರೆ, ಅವನದು ತಪ್ಪು. ನೀವು ಅವನಿಗಾಗಿ ಇಷ್ಟೊಂದು ಶೋಕಿಸುತ್ತಿರುವಿರಿ ಎಂದು ಗೊತ್ತು. ಆದರೂ ಅವನು ಬರುತ್ತಿಲ್ಲವಲ್ಲ.' ಈ ಘಟನೆಯಾದ ಸ್ವಲ್ಪ ಕಾಲದಲ್ಲಿ ಒಂದು ದಿನ ಶ್ರೀರಾಮಕೃಷ್ಣರು ನನ್ನನ್ನು ನರೇಂದ್ರನಿಗೆ ಪರಿಚಯಿಸಿದರು. ನರೇಂದ್ರನಿಲ್ಲದಾಗ ಶ್ರೀರಾಮಕೃಷ್ಣರು ಎಷ್ಟು ದುಃಖಿತರಾಗಿದ್ದರೊ ಈಗ ನರೇಂದ್ರನೊಡನಿರುವಾಗ ಅಷ್ಟೇ ಆನಂದದಿಂದ ಕೂಡಿದ್ದುದನ್ನು ಕಂಡೆ. ನಾವು ಮುಂದೆ ಶ್ರೀರಾಮಕೃಷ್ಣರ ಹುಟ್ಟು ಹಬ್ಬದಂದು ದಕ್ಷಿಣೇಶ್ವರಕ್ಕೆ ಹೋದೆವು. ಭಕ್ತರು ಅಂದು, ಒಂದು ಹೊಸಬಟ್ಟೆ ಹೂಮಾಲೆ ಗಂಧ ಇತ್ಯಾದಿಗಳ ಮೂಲಕ ಅವರನ್ನು ಅಲಂಕರಿಸಿದರು. ಅವರ ಕೊಠಡಿಯ ಪೂರ್ವದ ಹೊಸ ವರಾಂಡದಲ್ಲಿ ಕೀರ್ತನೆ ನಡೆಯಿತು. ಶ್ರೀರಾಮಕೃಷ್ಣರು ಭಕ್ತರಿಂದೊಡಗೂಡಿ ಕೀರ್ತನೆಯನ್ನು ಕೇಳುತ್ತಿದ್ದರು. ಕೆಲವೊಮ್ಮೆ ಸಮಾಧಿಗೆ ಹೋಗುತ್ತಿದ್ದರು. ಮತ್ತೆ ಕೆಲ

ವೊಮ್ಮೆ ತಮ್ಮದೇ ಆದ ಹೊಸ ಸಾಲುಗಳನ್ನು ಸೇರಿಸಿ ಕೀರ್ತನೆಗೆ ಮೆರಗು ನೀಡುತ್ತಿದ್ದರು. ಆದರೆ ನರೇಂದ್ರನಿಲ್ಲದೇ ಇದ್ದುದರಿಂದ ಆನಂದವನ್ನು ಪೂರ್ಣ ರೀತಿಯಲ್ಲಿ ಅವರಿಗೆ ಸವಿಯಲಾಗಲಿಲ್ಲ. ಆಗಾಗ ಸುತ್ತ ಕಣ್ಣು ಹಾಯಿಸಿ ನಮಗೆ ಹೇಳುತ್ತಿದ್ದರು : 'ನರೇಂದ್ರನು ಬರಲೇ ಇಲ್ಲ' ಎಂದು. ಮಧ್ಯಾಹ್ನದ ಹೊತ್ತಿಗೆ ನರೇಂದ್ರನು ಬಂದು ಶ್ರೀರಾಮಕೃಷ್ಣರ ಪಾದಕ್ಕೆ ವಂದಿಸಿದನು. ಅವನನ್ನು ನೋಡಿದ ಕೂಡಲೇ ಶ್ರೀರಾಮಕೃಷ್ಣರು ಥಟ್ಟನೆ ಮೇಲೆದ್ದು ಅವನ ಹೆಗಲ ಮೇಲೆ ಕುಳಿತು ಸಮಾಧಿಸ್ಥರಾದರು. ಸಾಮಾನ್ಯ ಸ್ಥಿತಿಗೆ ಬಂದ ಮೇಲೆ ಅವನನ್ನು ಮಾತನಾಡಿಸುತ್ತ ತಿಂಡಿ ತಿನ್ನಿಸತೊಡಗಿದರು. ಅಂದು ಅವರು ಮತ್ತೆ ಕೀರ್ತನೆಯನ್ನು ಕೇಳಲಿಲ್ಲ."

13. ನರೇಂದ್ರನು ಶ್ರೀರಾಮಕೃಷ್ಣರೆಡೆಗೆ ಬಂದಾಗ ಯಾವ ಪ್ರೀತಿಯನ್ನು ಪಡೆದನೊ ಅದು ದೇವತೆಗಳಲ್ಲಿಯೂ ದುರ್ಲಭ. ಇದರಿಂದಲೂ ಅವನು ವಿಚಲಿತನಾಗದೆ ಯಥಾರ್ಥ ಸತ್ಯವನ್ನು ಅರಿಯಲು ಶ್ರೀರಾಮಕೃಷ್ಣರನ್ನು ಪರೀಕ್ಷೆಗೊಳಪಡಿಸಲೂ ಹಿಂಜರಿಯಲಿಲ್ಲ. ಇದರಿಂದ ಸತ್ಯದ ಮೇಲೆ ಅವನ ಪ್ರೀತಿ ಎಷ್ಟು ಆಳವಾಗಿತ್ತು ಎಂಬುದನ್ನು ನಾವು ಅರಿಯಬಹುದು. ನರೇಂದ್ರನ ಈ ಭಾವದಿಂದ ಶ್ರೀರಾಮಕೃಷ್ಣರು ಸ್ವಲ್ಪವೂ ಖಿನ್ನರಾಗಲಿಲ್ಲ. ಶಿಷ್ಯನ ಹಿತಕ್ಕಾಗಿ ಅವನ ಪರೀಕ್ಷೆಗೆ ತಾವು ಒಳಪಟ್ಟರು ಮತ್ತು ಅವನ ಆಧ್ಯಾತ್ಮಿಕ ಉನ್ನತಿಗಾಗಿ ಏನು ಮಾಡಬೇಕೊ ಎಲ್ಲವನ್ನೂ ಮಾಡಲು ಮುಂದಾದರು. ಇದರಿಂದ ನಿರಭಿಮಾನ ಮತ್ತು ಅತ್ಯುದಾರ ಮನೋಭಾವ ಅವರಲ್ಲೆಷ್ಟಿತ್ತು ಎಂಬುದನ್ನು ನೋಡಿ ನಮಗೆ ಅತ್ಯಾಶ್ಚರ್ಯವಾಗುತ್ತದೆ. ಹೀಗೆ ನರೇಂದ್ರ ಮತ್ತು ಶ್ರೀರಾಮಕೃಷ್ಣರ ಸಂಬಂಧವನ್ನು ಕುರಿತು ಆಲೋಚಿಸಿದಷ್ಟೂ ನಾವು ಮುಗ್ಧರಾಗುತ್ತೇವೆ. ಯಥಾರ್ಥ ಗುರುವು ಉಚ್ಚ ಅಧಿಕಾರಿ ವ್ಯಕ್ತಿಯ ಭಾವವನ್ನು ನಷ್ಟಗೊಳಿಸದೆ ಹೇಗೆ ಅವನಿಗೆ ತರಬೇತಿ ನೀಡುತ್ತಾನೆ ಮತ್ತು ಹೇಗೆ ಕೊನೆಯಲ್ಲಿ ಅವನ ಶ್ರದ್ಧೆಗೆ ಪಾತ್ರನಾಗಿ ಅವನ ಹೃದಯದ ಆರಾಧ್ಯದೇವತೆಯಾಗುತ್ತಾನೆ ಎಂಬುದನ್ನು ನಾವು ಕಂಡೆವು.

# ಆರನೆಯ ಅಧ್ಯಾಯ

## ಪ್ರಥಮ ಪಾದ

## ಶ್ರೀರಾಮಕೃಷ್ಣ ಮತ್ತು ನರೇಂದ್ರನಾಥರ ಅಲೌಕಿಕ ಸಂಬಂಧ

**1. ನರೇಂದ್ರನು ದಕ್ಷಿಣೇಶ್ವರಕ್ಕೆ ಆಗಿಂದಾಗ್ಗೆ ಬಂದು ಹೋಗುತ್ತಿದ್ದನು. 2. ನರೇಂದ್ರನ ಪರಿವರ್ತನೆಯ ಐದು ಹಂತಗಳು 3. ನರೇಂದ್ರನಲ್ಲಿ ಅವರಿಗಿದ್ದ ಪ್ರೀತಿ ಶ್ರದ್ಧೆ ಅವರ ಅದ್ಭುತ ದರ್ಶನಗಳನ್ನು ಅವಲಂಬಿಸಿತ್ತು 4. ಅವರು ನರೇಂದ್ರನನ್ನು ಪರೀಕ್ಷಿಸಿದುದಕ್ಕೆ ಕಾರಣ 5. ಅವರು ನರೇಂದ್ರನನ್ನು ಯಾವ ರೀತಿ ಕಾಣುತ್ತಿದ್ದರು ? ಅವರಿಬ್ಬರ ಅಸಾಧಾರಣ ಪ್ರೀತಿ 6. ನರೇಂದ್ರನ ಬಗ್ಗೆ ಜನಸಾಮಾನ್ಯರ ತಪ್ಪು ಕಲ್ಪನೆ 7. ಶ್ರೀರಾಮಕೃಷ್ಣರಿಂದ ನರೇಂದ್ರನ ಪ್ರಶಂಸೆ 8. ಪ್ರಥಮ ದರ್ಶನದಂದು ನರೇಂದ್ರನ ಬಗ್ಗೆ ಗ್ರಂಥಕಾರನ ತಪ್ಪು ಕಲ್ಪನೆ 9. ಸ್ನೇಹಿತನೊಬ್ಬನ ಮನೆಯಲ್ಲಿ ಅವನ ಮೊದಲ ದರ್ಶನ 10. ಆ ಸಂದರ್ಭದಲ್ಲಿ ನರೇಂದ್ರನ ಬಾಹ್ಯಾಚರಣೆ 11. ಸ್ನೇಹಿತನೊಡನೆ ಸಾಹಿತ್ಯದ ಬಗ್ಗೆ ನರೇಂದ್ರನ ಮಾತು 12. ಶ್ರೀರಾಮಕೃಷ್ಣರು ಮಾತ್ರ ನರೇಂದ್ರನನ್ನು ಸರಿಯಾಗಿ ಅರ್ಥಮಾಡಿಕೊಂಡಿದ್ದರು 13. ಕೇಶವ ಮತ್ತು ವಿಜಯನ ಮುಂದೆ ನರೇಂದ್ರನ ಪ್ರಶಂಸೆ, ಅದಕ್ಕೆ ಅವನ ಪ್ರತಿಕ್ರಿಯೆ 14. ನರೇಂದ್ರನ ತರ್ಕಶಕ್ತಿಗೆ ಮುಗ್ಧರಾಗಿ ಶ್ರೀರಾಮಕೃಷ್ಣರು ಜಗನ್ಮಾತೆಯನ್ನು ಕೇಳುತ್ತಾರೆ 15. ನರೇಂದ್ರನನ್ನು ಕಾಣಲು ಸಾಧಾರಣ ಬ್ರಹ್ಮ ಸಮಾಜಕ್ಕೆ ಅವರು ಹೋದುದು ಮತ್ತು ಅದರ ಪರಿಣಾಮ 16. ನರೇಂದ್ರನು ಹೇಗೋ ಶ್ರೀರಾಮಕೃಷ್ಣರನ್ನು ಹೊರಗೆ ಕರೆದುಕೊಂಡು ಬಂದು ದಕ್ಷಿಣೇಶ್ವರಕ್ಕೆ ಕರೆದುಕೊಂಡು ಹೋದನು 17. ತನ್ನನ್ನು ಅತಿಯಾಗಿ ಪ್ರೀತಿಸಿದುದಕ್ಕೆ ನರೇಂದ್ರನು ಅವರನ್ನು ನಿಂದಿಸುತ್ತಾನೆ–ಜಗನ್ಮಾತೆಯ ಆಶ್ವಾಸನೆ.**

1. ಸುದೀರ್ಘವಾದ ಐದು ವರ್ಷಗಳ ಪರ್ಯಂತ ಶ್ರೀರಾಮಕೃಷ್ಣರ ಸಹವಾಸವನ್ನು ಪಡೆದು ನರೇಂದ್ರನು ಧನ್ಯನಾದನು. ಈ ಕೆಲವು ವರ್ಷಗಳು ಅವನು ನಿರಂತರವಾಗಿ ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಪಾದದಡಿಯಲ್ಲಿ ಕಾಲ ಕಳೆಯುತ್ತಿದ್ದನು ಎಂದು ಓದುಗರು ಇದರಿಂದ ಭಾವಿಸಬಾರದು. ಕಲ್ಕತ್ತೆಯ ಉಳಿದ ಭಕ್ತರಂತೆ ಅವನೂ ಕೂಡ ಮನೆಯಿಂದ ಶ್ರೀರಾಮಕೃಷ್ಣರೆಡೆಗೆ ಆಗಾಗ ಬಂದು ಹೋಗುತ್ತಿದ್ದನು. ಮೊದಲಿನಿಂದಲೂ ಶ್ರೀರಾಮಕೃಷ್ಣರ ವಿಶೇಷ ಪ್ರೀತಿಗೆ ಪಾತ್ರನಾಗಿದ್ದುದರಿಂದ ಈ ಕೆಲವು ವರ್ಷಗಳು ಅವನು ಹೆಚ್ಚು ಹೆಚ್ಚು ದಕ್ಷಿಣೇಶ್ವರಕ್ಕೆ ಬರುತ್ತಿದ್ದನು. ಪ್ರತಿವಾರವೂ ಒಮ್ಮೆ ಅಥವಾ ಎರಡು ದಿವಸ ಬರುತ್ತಿದ್ದನು. ಅವಕಾಶವಾದರೆ ಎರಡು ಮೂರು ದಿನ ಅಲ್ಲಿಯೇ ಇದ್ದುಬಿಡುತ್ತಿದ್ದನು. ಹೀಗೆ ದಕ್ಷಿಣೇಶ್ವರಕ್ಕೆ ಬಂದು ಹೋಗುವುದು ಕ್ರಮೇಣ ಅವನ ಪ್ರಧಾನ ಕಾರ್ಯವಾಗಿಬಿಟ್ಟಿತು. ಕೆಲವೊಮ್ಮೆ ಈ ನಿಯಮವನ್ನು ಉಲ್ಲಂಘಿಸಿದುದೂ

ಉಂಟು. ಆದರೆ ಶ್ರೀರಾಮಕೃಷ್ಣರಿಗೆ ಅವನ ಮೇಲೆ ವಿಶೇಷ ಆಕರ್ಷಣೆ ಇದ್ದುದರಿಂದ ಈ ನಿಯಮವನ್ನು ಹೆಚ್ಚು ಉಲ್ಲಂಘಿಸಲು ಅವರು ಬಿಡುತ್ತಿರಲಿಲ್ಲ. ಯಾವುದೇ ಕಾರಣ ದಿಂದ ನರೇಂದ್ರನಾಥನು ಒಂದು ವಾರ ದಕ್ಷಿಣೇಶ್ವರಕ್ಕೆ ಬರದಿದ್ದರೆ ಶ್ರೀರಾಮಕೃಷ್ಣರು ಅವನನ್ನು ನೋಡುವುದಕ್ಕಾಗಿ ಚಡಪಡಿಸುತ್ತಿದ್ದರು. ಮತ್ತೆ ಮತ್ತೆ ಹೇಳಿ ಕಳುಹಿಸಿ ಅವರು ಅವನನ್ನು ದಕ್ಷಿಣೇಶ್ವರಕ್ಕೆ ಕರೆಸುತ್ತಿದ್ದರು. ಇಲ್ಲದಿದ್ದರೆ ತಾವೆ ಕಲ್ಕತ್ತೆಗೆ ಹೋಗಿ ಕೆಲವು ಗಂಟೆ ಅವನ ಜೊತೆ ಇದ್ದು ಬರುತ್ತಿದ್ದರು. ನಮಗೆ ತಿಳಿದಿರುವಂತೆ ಶ್ರೀರಾಮ ಕೃಷ್ಣರ ಪರಿಚಯವಾಗಿ ಮೊದಲ ಎರಡು ವರ್ಷಗಳಲ್ಲಿ ದಕ್ಷಿಣೇಶ್ವರಕ್ಕೆ ನಿಯಮಿತ ಭಾವದಲ್ಲಿ ಬಂದುಹೋಗುವುದನ್ನು ನರೇಂದ್ರನು ಹೆಚ್ಚು ವ್ಯತಿಕ್ರಮಿಸಲಿಲ್ಲ. ಆದರೆ ಬಿ.ಎ. ಪರೀಕ್ಷೆಯ ನಂತರ ೧೮೮೪ರ ಪ್ರಥಮ ಭಾಗದಲ್ಲಿ ತಂದೆಯು ಇದ್ದಕ್ಕಿದ್ದಂತೆ ತೀರಿಹೋಗಲು ಸಂಸಾರದ ಹೊರೆಯೆಲ್ಲ ಅವನ ಮೇಲೆ ಬಿದ್ದುದರಿಂದ ಆಗ ಅವನು ದಕ್ಷಿಣೇಶ್ವರಕ್ಕೆ ಬರುವುದು ಕಡಿಮೆಯಾಯಿತು.

2. ಅದು ಏನೇ ಇರಲಿ, ಈ ಐದು ವರ್ಷಗಳಲ್ಲಿ ಶ್ರೀರಾಮಕೃಷ್ಣರು ನರೇಂದ್ರ ನಾಥನೊಡನೆ ಹೇಗೆ ಬೆರೆತರು ಎಂಬುದನ್ನು ಆಲೋಚಿಸಿದರೆ ಈ ಅವಧಿಯನ್ನು ಐದು ಭಾಗಗಳಾಗಿ ವಿಂಗಡಿಸಬಹುದು.

(1) ಶ್ರೀರಾಮಕೃಷ್ಣರು ತಮ್ಮ ಅಲೌಕಿಕ ಅಂತರ್ದೃಷ್ಟಿಯ ಸಹಾಯದಿಂದ ಪ್ರಾರಂಭದಿಂದಲೇ ನರೇಂದ್ರನಂಥ ಉಚ್ಚ ಅಧಿಕಾರಿ ಆಧ್ಯಾತ್ಮಿಕ ರಾಜ್ಯದಲ್ಲಿ ಅತ್ಯಂತ ವಿರಳ ಎಂದು ಕಂಡುಕೊಂಡರು. ತಮ್ಮ ಧರ್ಮ ಸಂಸ್ಥಾಪನೆಯ ಕಾರ್ಯದಲ್ಲಿ ಸಹಾಯಕ ನಾಗುವುದಕ್ಕಾಗಿಯೇ ನರೇಂದ್ರನು ಜನ್ಮವೆತ್ತಿರುವನೆಂದು ಅವರು ತಿಳಿದುಕೊಂಡರು.

(2) ತಮ್ಮ ಅಪಾರ ವಿಶ್ವಾಸ ಮತ್ತು ಪ್ರೀತಿಯ ಮೂಲಕ ಅವರು ನರೇಂದ್ರ ನಾಥನನ್ನು ಶಾಶ್ವತವಾಗಿ ಬಂಧಿಸಿಬಿಟ್ಟರು.

(3) ಅನೇಕ ರೀತಿಯ ಪರೀಕ್ಷೆಗಳ ಮೂಲಕ ನರೇಂದ್ರನಾಥನ ಮಹತ್ವ ಮತ್ತು ಜೀವನೋದ್ದೇಶಗಳ ಬಗ್ಗೆ ತಮ್ಮ ಅಂತರ್ದೃಷ್ಟಿಯು ತಮಗೆ ಮೋಸ ಮಾಡಲಿಲ್ಲವೆಂದು ಅವರು ಅರಿತರು.

(4) ಅನೇಕ ರೀತಿಯ ತರಬೇತಿಯ ಮೂಲಕ ನರೇಂದ್ರನನ್ನು ಈ ಮಹ ತ್ಕಾರ್ಯದಲ್ಲಿ ಒಂದು ಉತ್ತಮ ಯಂತ್ರಸ್ವರೂಪವಾಗಿ ರೂಪಿಸಿದರು.

(5) ತರಬೇತಿಯು ಮುಗಿದ ಮೇಲೆ ಅಪರೋಕ್ಷಾನುಭೂತಿಯನ್ನು ಪಡೆದ ನರೇಂದ್ರನಿಗೆ ಹೇಗೆ ಧರ್ಮಸ್ಥಾಪನೆಯ ಕಾರ್ಯದಲ್ಲಿ ಮುಂದುರಿಯಬೇಕು ಎಂಬುದರ ಬಗ್ಗೆಯೂ ಉಪದೇಶವಿತ್ತರು. ಹೀಗೆ ತಮ್ಮ ಕಾರ್ಯದ ಮತ್ತು ಸಂಘದ ಭಾರವನ್ನು ನಿಶ್ಚಿಂತೆಯಿಂದ ನರೇಂದ್ರನಿಗೆ ವಹಿಸಿದರು.

3. ನರೇಂದ್ರನು ದಕ್ಷಿಣೇಶ್ವರಕ್ಕೆ ಬರುವುದಕ್ಕೆ ಸ್ವಲ್ಪ ಮುಂಚೆ ಅವನ ಮಹತ್ವ ವನ್ನು ಸೂಚಿಸುವ ಕೆಲವು ಅದ್ಭುತ ದರ್ಶನಗಳು ಶ್ರೀರಾಮಕೃಷ್ಣರಿಗೆ ಆಗಿದ್ದುವು ಎಂಬು ದನ್ನು ನಾವು ಮೊದಲೇ ತಿಳಿಸಿರುವೆವು. ಇದರ ಪ್ರಭಾವದಿಂದಲೇ ಮೊದಲಿನಿಂದಲೂ

ಅವರಿಗೆ ನರೇಂದ್ರನ ಮೇಲೆ ಅಪಾರ ವಿಶ್ವಾಸ ಮತ್ತು ಪ್ರೀತಿ. ಈ ವಿಶ್ವಾಸ ಮತ್ತು ಪ್ರೀತಿ ಅವರ ಹೃದಯದಲ್ಲಿ ಬದುಕಿರುವವರೆಗೂ ಸಮಾನ ರೀತಿಯಲ್ಲಿ ಉಳಿದವು ಮತ್ತು ಆ ಪ್ರೇಮದಿಂದಲೇ ನರೇಂದ್ರನಾಥನನ್ನು ಬಂಧಿಸಿದರು. ಆದ್ದರಿಂದ ವಿಶ್ವಾಸ ಮತ್ತು ಪ್ರೀತಿಯ ತಳಹದಿಯ ಮೇಲೆ ನಿಂತು ಶ್ರೀರಾಮಕೃಷ್ಣರು ನರೇಂದ್ರನಾಥನಿಗೆ ಶಿಕ್ಷಣವನ್ನಿತ್ತರು ಮತ್ತು ಆಗಾಗ ಅವನನ್ನು ಪರೀಕ್ಷಿಸುತ್ತಿದ್ದರೂ ಕೂಡ.

4. ಈಗ ಒಂದು ಪ್ರಶ್ನೆ ಉದ್ಭವಿಸಬಹುದು : ಯೋಗ ದೃಷ್ಟಿಯಿಂದ ನರೇಂದ್ರನಾಥನ ಮಹತ್ವ ಮತ್ತು ಜೀವನೋದ್ದೇಶಗಳನ್ನು ಅರಿತ ಮೇಲೂ ಅವನನ್ನು ಪರೀಕ್ಷಿಸುವ ಅಗತ್ಯವೇನಿತ್ತು ? ಇದಕ್ಕೆ ಉತ್ತರವಾಗಿ ಹೇಳುತ್ತೇವೆ. ಮಾಯಾರಾಜ್ಯದಲ್ಲಿ ದೇಹಧಾರಣೆ ಮಾಡಿದ ಶ್ರೀರಾಮಕೃಷ್ಣರಂತಹ ದೇವ ಮಾನವರ ದೃಷ್ಟಿಯೂ ಕೂಡ ಸ್ವಲ್ಪ ಸಂಕುಚಿತಗೊಂಡು ಕಂಡ ವಿಷಯವನ್ನು ಸಂದೇಹಿಸುವಂತಾಗುತ್ತದೆ. ಆದ್ದರಿಂದ ಕೆಲವೊಮ್ಮೆ ಈ ರೀತಿಯ ಪರೀಕ್ಷೆ ಅವಶ್ಯಕವಾಗುತ್ತದೆ. ಶ್ರೀರಾಮಕೃಷ್ಣರು ನಮಗೆ ಈ ವಿಷಯವನ್ನು ತಿಳಿಸುತ್ತ ಹೇಳುತ್ತಿದ್ದರು : "ಬೇರೆ ಲೋಹದೊಡನೆ ಮಿಶ್ರಮಾಡದೆ ಚಿನ್ನದಿಂದ ಆಭರಣವನ್ನು ತಯಾರಿಸಲಾಗುವುದಿಲ್ಲ" ಎಂದು. ಹಾಗೆಯೇ ಅವತಾರ ಪುರುಷರ ದೇಹ ಮನಸ್ಸುಗಳನ್ನು ಸ್ವಲ್ಪಮಟ್ಟಿಗಾದರೂ ರಜಸ್ಸು ತಮಸ್ಸುಗಳಿಲ್ಲದೆ ಜ್ಞಾನವನ್ನು ಪ್ರತಿಬಿಂಬಿಸುವ ಶುದ್ಧಸತ್ತ್ವದಿಂದ ತಯಾರಿಸಲಾಗುವುದಿಲ್ಲ. ಶ್ರೀರಾಮಕೃಷ್ಣರು ಸಾಧನೆಯಲ್ಲಿ ತೊಡಗಿರುವಾಗ ಜಗನ್ಮಾತೆಯ ಕೃಪೆಯಿಂದ ಅನೇಕ ಅಲೌಕಿಕ ದರ್ಶನಗಳನ್ನು ಪಡೆದರು. ಅನೇಕ ಸಂದರ್ಭಗಳಲ್ಲಿ ಆ ದರ್ಶನಗಳ ಸತ್ಯತೆಯನ್ನು ಸಂದೇಹಿಸಿದ್ದುದುಂಟು. ಅವುಗಳನ್ನು ಪರೀಕ್ಷಿಸಿದ ಮೇಲೆಯೆ ಅವರು ಅವನ್ನು ಸಂಪೂರ್ಣ ಒಪ್ಪಿಕೊಂಡರು. ಹಾಗೆಯೆ ನರೇಂದ್ರನ ಬಗ್ಗೆ ಆದ ಅದ್ಭುತ ದರ್ಶನಗಳನ್ನು ಅವು ಸತ್ಯವೆಂದು ಒಪ್ಪಿಕೊಳ್ಳುವ ಮುಂಚೆ ಅವರು ಪರೀಕ್ಷಿಸಿದುದರಲ್ಲಿ ಆಶ್ಚರ್ಯವೇನಿದೆ ?

5. ನರೇಂದ್ರನಾಥನಿಗೆ ಸಂಬಂಧಿಸಿದಂತೆ ಶ್ರೀರಾಮಕೃಷ್ಣರ ಆಚರಣೆಯನ್ನು ಐದು ಭಾಗಗಳಾಗಿ ವಿಂಗಡಿಸಿದೆವಷ್ಟೆ. ಇವುಗಳ ಮಧ್ಯೆ ವಿಶ್ವಾಸ, ಪ್ರೀತಿ, ಪರೀಕ್ಷೆ, ಮತ್ತು ತರಬೇತಿ ಇವು ಮೂರೂ ಒಟ್ಟಿಗೆ ಪ್ರಾರಂಭವಾದವು ಎಂದು ನಾವು ಹೇಳಬಹುದು. ಇವುಗಳಲ್ಲಿ ಮೊದಲನೆಯದಾದ ನರೇಂದ್ರನಾಥನ ಬಗ್ಗೆ ಶ್ರೀರಾಮಕೃಷ್ಣರಿಗಿದ್ದ ಪ್ರೀತಿ ವಿಶ್ವಾಸವನ್ನು ನಾವು ಆಗಲೇ ಸಂಕ್ಷೇಪವಾಗಿ ವಿವರಿಸಿದೆವು. ಮುಂದೆ ಇದರ ಸಂಬಂಧವಾಗಿ ಇನ್ನೂ ಹೇಳುವುದಿದೆ. ಏಕೆಂದರೆ ಈಗಿನಿಂದ ಶ್ರೀರಾಮಕೃಷ್ಣರ ಜೀವನ ನರೇಂದ್ರನಾಥನ ಜೀವನದೊಡನೆ ಎಷ್ಟರ ಮಟ್ಟಿಗೆ ಒಂದಾಗಿ ಹೋಗಿತ್ತೆಂದರೆ ಅವರ ಆಶ್ರಯವನ್ನು ಪಡೆದ ಬೇರೆ ಯಾವ ಭಕ್ತರೊಡನೆಯೂ ಯಾವಾಗಲೂ ಆ ರೀತಿ ಆಗಿರಲಿಲ್ಲ. ಏಸುಕ್ರಿಸ್ತನು ತನ್ನ ಒಬ್ಬ ಶಿಷ್ಯಶ್ರೇಷ್ಠನನ್ನು ಪಡೆದಾಗ ಹೀಗೆ ಹೇಳಿದನು : "ಪರ್ವತಸದೃಶ ಅಚಲ ಶ್ರದ್ಧಾ ಸಂಪನ್ನನಾದ ಈ ವ್ಯಕ್ತಿಯ ಜೀವನವನ್ನು ಆಧಾರವಾಗಿಟ್ಟುಕೊಂಡು ನಾನು ನನ್ನ ಆಧ್ಯಾತ್ಮಿಕ ಮಂದಿರವನ್ನು ನಿರ್ಮಾಣ ಮಾಡುತ್ತೇನೆ." ನರೇಂದ್ರನಾಥನನ್ನು ಕಂಡಂದಿನಿಂದ ಶ್ರೀರಾಮಕೃಷ್ಣರ ಮನಸ್ಸಿನಲ್ಲಿಯೂ ದೈವ ಪ್ರೇರಣೆ

ಯಿಂದ ಇದೇ ಆಲೋಚನೆ ಉದ್ಭವಿಸಿತ್ತು. ನರೇಂದ್ರನು ತಮ್ಮ ಪುತ್ರ, ತಮ್ಮ ಸಖ, ತಮ್ಮ ಆದೇಶವನ್ನು ಪಾಲಿಸುವುದಕ್ಕಾಗಿ ಸಂಸಾರದಲ್ಲಿ ಜನಿಸಿರುವನು ಎಂದು ಶ್ರೀರಾಮಕೃಷ್ಣರು ಕಂಡಿದ್ದರು, ಆದ್ದರಿಂದ ಅವರ ಮತ್ತು ನರೇಂದ್ರನಾಥನ ಜೀವನ ಶಾಶ್ವತವಾಗಿ ಕತ್ತರಿಸಲಾಗದ ಪ್ರೇಮಬಂಧನದಲ್ಲಿ ಬದ್ಧವಾಗಿದ್ದವು. ಆದರೆ ಈ ಪ್ರೀತಿಯು ಉನ್ನತ ಆಧ್ಯಾತ್ಮಿಕ ಪ್ರೀತಿ. ಇದರಲ್ಲಿ ಪ್ರಿಯನಿಗೆ ಸಂಪೂರ್ಣ ಸ್ವಾತಂತ್ರ್ಯವಿದೆ. ಆದರೂ ಅವನು ಯುಗಯುಗಾಂತರವೂ ತಮ್ಮವನಾಗಿಯೇ ಉಳಿಯುವನು. ಈ ಪ್ರೀತಿಯಲ್ಲಿ ಇಬ್ಬರೂ ತನ್ನದೆಲ್ಲವನ್ನೂ ಏನೂ ಅಪೇಕ್ಷಿಸದೆ ಇನ್ನೊಬ್ಬನಿಗೆ ಕೊಡಲು ಸಿದ್ಧರಿರುತ್ತಾರೆ. ಶ್ರೀರಾಮಕೃಷ್ಣ ಮತ್ತು ನರೇಂದ್ರನಾಥರ ಜೀವನದಲ್ಲಿ ಕಾಣುವ ಇಂಥ ಪ್ರೇಮ ನಾಟಕವನ್ನು ಪ್ರಪಂಚವು ಹಿಂದೆಂದಾದರೂ ಕಂಡಿತ್ತೇ ಎಂಬುದು ಸಂದೇಹ. ಈ ಅಸಾಧಾರಣ ಪ್ರೀತಿಯ ಎಲ್ಲ ಮುಖಗಳನ್ನೂ ಸ್ಪಷ್ಟವಾಗಿ ಓದುಗರ ಮುಂದೆ ವಿವರಿಸುವುದು ನಮಗೆ ಅಸಾಧ್ಯವೆಂಬುದು ನಮಗೆ ಗೊತ್ತು. ಆದರೂ ಅದರ ಒಂದು ಹೊಳವನ್ನಾದರೂ ಕೊಡಲು ನಾವಿಲ್ಲಿ ಪ್ರಯತ್ನಿಸುತ್ತೇವೆ. ಅನಂತರ ನರೇಂದ್ರನಾಥನೊಡನೆ ಶ್ರೀರಾಮಕೃಷ್ಣರ ಎಲ್ಲ ಬಗೆಯ ಆಚರಣೆಯನ್ನು ವಿವರಿಸುತ್ತೇವೆ.

6. ಶ್ರೀರಾಮಕೃಷ್ಣರ ನಿಷ್ಠೆ ತ್ಯಾಗ ಮತ್ತು ಪವಿತ್ರತೆಗಳನ್ನು ನೋಡಿ ನರೇಂದ್ರನಾಥನು ಮೊದಲಿನಿಂದಲೂ ಹೇಗೆ ಅವರೆಡೆಗೆ ಆಕರ್ಷಿತನಾದನೊ ಶ್ರೀರಾಮಕೃಷ್ಣರೂ ಕೂಡ ನರೇಂದ್ರನಾಥನ ಅಪಾರ ಆತ್ಮವಿಶ್ವಾಸ, ಅದ್ಭುತ ಪ್ರತಿಭೆ ಮತ್ತು ಸತ್ಯನಿಷ್ಠೆ ಇವುಗಳನ್ನು ಕಂಡು ಮುಗ್ಧರಾಗಿ ಮೊದಲಿನಿಂದಲೂ ಅವನನ್ನು ತಮ್ಮವನೆಂದು ಪರಿಗಣಿಸಿಬಿಟ್ಟಿದ್ದರು. ಯೋಗದೃಷ್ಟಿಯಿಂದ ನರೇಂದ್ರನ ಶ್ರೇಷ್ಠತೆ ಮತ್ತು ಉಜ್ವಲ ಭವಿಷ್ಯಗಳ ಸಂಬಂಧವಾಗಿ ಶ್ರೀರಾಮಕೃಷ್ಣರು ಏನು ಕಂಡಿದ್ದರೊ ಅದನ್ನು ನಾವು ಗಣನೆಗೆ ತೆಗೆದುಕೊಳ್ಳದೆ ಇವರಿಬ್ಬರ ನಡುವಿನ ಅದ್ಭುತ ಆಕರ್ಷಣೆಗೆ ಕಾರಣವನ್ನು ಹುಡುಕಲು ಹೊರಟರೆ ಆಗ ನಾವು ಹಿಂದೆ ಹೇಳಿದ ಮಾತು ಸ್ಪಷ್ಟವಾಗುತ್ತದೆ. ಅಂತರ್ದೃಷ್ಟಿ ಇಲ್ಲದ ಜನಸಾಧಾರಣರು ನರೇಂದ್ರನ ಅಧ್ಭುತ ಆತ್ಮವಿಶ್ವಾಸವನ್ನು ಡಂಭವೆಂದೂ ಅವನ ಅಪಾರ ತೇಜಸ್ಸನ್ನು ಔದ್ಧತ್ಯವೆಂದೂ ಮತ್ತು ಅವನ ಕಠೋರ ಸತ್ಯನಿಷ್ಠೆಯನ್ನು ಮಿಥ್ಯೆಯ ಸೋಗು ಎಂದೂ ಪರಿಗಣಿಸುತ್ತಿದ್ದರು. ಜನರ ಪ್ರಶಂಸೆಯ ವಿಷಯದಲ್ಲಿ ಅವನಿಗಿದ್ದ ಉದಾಸೀನತೆ, ಸ್ಪಷ್ಟವಾದಿತ್ವ, ಎಲ್ಲಾ ವಿಷಯದಲ್ಲಿಯೂ ನಿಃಸಂಕೋಚವಾಗಿ ಮುಕ್ತವಾಗಿ ವ್ಯವಹರಿಸುವುದು ಮತ್ತು ಯಾವುದೇ ಕಾರ್ಯವನ್ನಾಗಲಿ ಇತರರ ಭಯದಿಂದ ಮುಚ್ಚಿಡದೆ ಇರುವುದು—ಇವುಗಳಿಂದಾಗಿಯೇ ಅವರು ಅವನ ಬಗ್ಗೆ ಆ ರೀತಿ ಭಾವಿಸಿದ್ದರು ಎಂಬುದರಲ್ಲಿ ಸಂದೇಹವಿಲ್ಲ. ನಮಗೆ ನರೇಂದ್ರನ ಪರಿಚಯವಾಗುವುದಕ್ಕೆ ಮುಂಚೆಯೆ ಅವನ ನೆರೆಯ ವ್ಯಕ್ತಿಯೊಬ್ಬರು ಅವನ ಬಗ್ಗೆ ನಮಗೆ ಈ ರೀತಿ ಹೇಳಿದ ನೆನಪಿದೆ: "ಆ ಮನೆಯಲ್ಲಿ ಒಬ್ಬ ಹುಡುಗನಿದ್ದಾನೆ. ಅವನಂಥ ದುಷ್ಟನನ್ನು ನೋಡಿಯೇ ಇಲ್ಲ. ಬಿ.ಎ. ಪರೀಕ್ಷೆ ಮಾಡಿದ್ದಾನೆಂದು ತನ್ನ ಸಮಾನರು ಪ್ರಪಂಚದಲ್ಲಿಯೇ ಇಲ್ಲವೆಂಬಂತೆ ವರ್ತಿಸುತ್ತಾನೆ. ತಂದೆ ಮತ್ತು ಹಿರಿಯರ ಮುಂದೆಯೆ ದಾರ್ಷ್ಟ್ಯ

ದಿಂದ ತಬಲ ಬಾರಿಸುತ್ತಾ ಹಾಡುತ್ತಾನೆ. ಆ ಗಲ್ಲಿಯ ಹಿರಿಯರ ಮುಂದೆಲ್ಲ ಸಿಗರೇಟು ಸೇದುತ್ತಾ ಓಡಾಡುತ್ತಾನೆ."

7 ಇದಾಗಿ ಸ್ವಲ್ಪಕಾಲದನಂತರ ನಾವು ಶ್ರೀರಾಮಕೃಷ್ಣರೆಡೆಗೆ ಹೋದಾಗ ಅವರು ನರೇಂದ್ರನ ಸದ್ಗುಣಗಳನ್ನು ವಿವರಿಸುವುದನ್ನು ಕೇಳಿದೆವು. ಜದುಮಲ್ಲಿಕನ ತೋಟದ ಮೇಲ್ವಿಚಾರಕನಾದ ರತನ್‌ನೊಡನೆ ಶ್ರೀರಾಮಕೃಷ್ಣರು ಮಾತನಾಡುತ್ತಿದ್ದರು. ನಮ್ಮನ್ನು ನಿರ್ದೇಶಿಸಿ ಅವರು ಅವನಿಗೆ ಹೇಳಿದರು : "ಈ ಹುಡುಗರು ಬಹಳ ಒಳ್ಳೆಯ ವರು. ಇವನು ಒಂದೂವರೆ ಪರೀಕ್ಷೆಯಲ್ಲಿ ಪಾಸಾಗಿದ್ದಾನೆ, ಇವನು ಸಭ್ಯ ಮತ್ತು ಶಾಂತ. ಆದರೆ ನರೇಂದ್ರನಂಥ ಹುಡುಗನನ್ನು ನೋಡಲೇ ಇಲ್ಲ, ಅವನು ಎಲ್ಲದರಲ್ಲೂ ಗಟ್ಟಿಗ. ಹಾಡುವುದರಲ್ಲಿ, ಬಾರಿಸುವುದರಲ್ಲಿ, ಜ್ಞಾನದಲ್ಲಿ, ಮಾತಿನಲ್ಲಿ ಮತ್ತು ಧರ್ಮದಲ್ಲಿಯೂ ಕೂಡ. ಧ್ಯಾನ ಮಾಡುತ್ತಿರುವಾಗ ಇಡೀರಾತ್ರಿ ಪ್ರಜ್ಞಾಶೂನ್ಯನಾಗಿಬಿಡುತ್ತಾನೆ. ಬೇರೆ ಲೋಹ ಬೆರೆಯದ ಶುದ್ಧ ನಾಣ್ಯವಿದ್ದಂತೆ ನನ್ನ ನರೇಂದ್ರ. ಅದನ್ನು ಹೊಡೆದರೆ ಶುದ್ಧವಾದ ಶಬ್ದ ಬರುತ್ತದೆ, ಬೇರೆ ಹುಡುಗರು ಎರಡು ಮೂರು ಪರೀಕ್ಷೆಗಳನ್ನು ಬಹಳ ಕಷ್ಟಪಟ್ಟು ಪಾಸು ಮಾಡುತ್ತಾರೆ. ಅಲ್ಲಿಗೇ ಮುಗಿಯಿತು, ಮತ್ತೆ ಶಕ್ತಿ ಇರುವು ದಿಲ್ಲ. ಆದರೆ ನರೇಂದ್ರ ಹಾಗಲ್ಲ, ಅವನು ಯಾವುದನ್ನೇ ಆದರೂ ಲೀಲಾಜಾಲ ವಾಗಿ ಸಾಧಿಸುತ್ತಾನೆ, ಪರೀಕ್ಷೆಯಲ್ಲಿ ಪಾಸಾಗುವುದಂತೂ ಅವನಿಗೆ ಅತ್ಯಂತ ಕ್ಷುಲ್ಲಕ ವಿಷಯ. ಅವನು ಬ್ರಹ್ಮಸಮಾಜಕ್ಕೂ ಹೋಗುತ್ತಾನೆ ಮತ್ತು ಅಲ್ಲಿ ಭಕ್ತಿಗೀತೆಗಳನ್ನು ಹಾಡುತ್ತಾನೆ. ಆದರೆ ಅವನು ಇತರ ಬ್ರಾಹ್ಮ ಭಕ್ತರಂತಲ್ಲ. ಅವನು ನಿಜವಾದ ಬ್ರಹ್ಮ ಜ್ಞಾನಿ. ಅವನು ಧ್ಯಾನಕ್ಕೆ ಕುಳಿತಾಗ ಬೆಳಕನ್ನು ಕಾಣುತ್ತಾನೆ. ನಾನು ನರೇಂದ್ರನನ್ನು ಅಷ್ಟೊಂದು ಪ್ರೀತಿಸುವುದು ಸುಮ್ಮನೆ ಏನು ?" ಆ ಮಾತುಗಳನ್ನು ಕೇಳಿ ನಾವು ಮುಗ್ಧ ರಾದೆವು. ನರೇಂದ್ರನನ್ನು ನೋಡಬೇಕೆಂಬ ಆಸೆಯಿಂದ ನಾವು, "ಮಹಾಶಯರೇ ನರೇಂದ್ರನು ವಾಸಿಸುವುದೆಲ್ಲಿ ?" ಎಂದು ಕೇಳಿದೆವು. ಶ್ರೀರಾಮಕೃಷ್ಣರು ಉತ್ತರಿಸಿದರು: "ನರೇಂದ್ರನು ಸಿಮ್ಲಾದ ವಿಶ್ವನಾಥದತ್ತನ ಮಗ," ಅನಂತರ ಕಲ್ಕತ್ತೆಗೆ ಹಿಂದಿರುಗಿ ನರೇಂದ್ರನ ಬಗ್ಗೆ ವಿಚಾರಿಸಿದೆವು. ಹಿಂದೆ ಅವನ ನೆರೆಯ ವ್ಯಕ್ತಿ ಯಾರನ್ನು ಅಷ್ಟೊಂದು ಖಂಡಿಸಿದ್ದನೊ ಆ ಯುವಕನೇ ನರೇಂದ್ರನೆಂದು ತಿಳಿದುಬಂತು. ಬಾಹ್ಯ ಕೆಲವು ಕ್ರಿಯೆ ಗಳನ್ನು ಗಮನಿಸಿ ಯಾರಾದರೂ ವ್ಯಕ್ತಿಯ ಬಗ್ಗೆ ನಿರ್ಣಯಕ್ಕೆ ಬರುವುದು ಎಷ್ಟೊಂದು ಅಸಂಗತ ಎಂಬುದನ್ನು ತಿಳಿದು ನಮಗೆ ಆಗ ಆಶ್ಚರ್ಯವಾಯಿತು.

8. ಇದೇ ವಿಷಯಕ್ಕೆ ಸಂಬಂಧಿಸಿದ ಇನ್ನೊಂದು ಮಾತನ್ನು ಇಲ್ಲಿ ಹೇಳಬಹುದು. ಶ್ರೀರಾಮಕೃಷ್ಣರ ಬಾಯಿಂದ ನರೇಂದ್ರನ ಈ ಮೇಲಿನ ಪ್ರಶಂಸೆಯನ್ನು ಕೇಳುವುದಕ್ಕೆ ಕೆಲವು ದಿನಗಳ ಮುಂಚೆ ನಮ್ಮ ಒಬ್ಬ ಸ್ನೇಹಿತನ ಮನೆಯಲ್ಲಿ ನರೇಂದ್ರನನ್ನು ನೋಡುವ ಅವಕಾಶ ನಮಗೆ ದೊರಕಿತ್ತು. ಅಂದು ಅವನನ್ನು ನೋಡಿದ್ದಷ್ಟೆ, ತಪ್ಪುಕಲ್ಪನೆಯ ಪ್ರಭಾವದಿಂದಾಗಿ ಆತನೊಡನೆ ಮಾತನಾಡುವ ಸಾಹಸ ಮಾಡಲಿಲ್ಲ. ಆದರೆ ಅಂದು ಅವನು ಆಡಿದ ಮಾತುಗಳು ನಮ್ಮ ಮನಸ್ಸಿನಲ್ಲಿ ಎಷ್ಟು ಆಳವಾಗಿ ಮುದ್ರಿತವಾದು

ವೆಂದರೆ ಇಷ್ಟು ಕಾಲವನಂತರವೂ ಅವುಗಳು ನೆನ್ನೆಯಷ್ಟೇ ಕೇಳಿದೆವೊ ಎಂದೆನಿಸುತ್ತದೆ. ಆ ಮಾತುಗಳನ್ನು ಉಲ್ಲೇಖಿಸುವುದಕ್ಕೆ ಮೊದಲು ಅವನ್ನು ಕೇಳುವಾಗ ನಾವು ಯಾವ ಸ್ಥಿತಿಯಲ್ಲಿದ್ದೆವು ಎಂಬುದನ್ನು ಸ್ವಲ್ಪಮಟ್ಟಿಗೆ ತಿಳಿಸುವುದು ಉಚಿತ. ಇಲ್ಲದಿದ್ದರೆ ಅಂದು ನರೇಂದ್ರನ ಬಗ್ಗೆ ಏಕೆ ನಮಗೆ ತಪ್ಪು ಕಲ್ಪನೆ ಉಂಟಾಗಿತ್ತು ಎಂಬುದು ತಿಳಿದು ಬರುವು ದಿಲ್ಲ.

9. ನಾವು ನರೇಂದ್ರನನ್ನು ಯಾವ ಸ್ನೇಹಿತನ ಮನೆಯಲ್ಲಿ ನೋಡಿದೆವೊ ಅವನು ಆಗ ಸಿಮ್ಲಾದ ಗೌರಮೋಹನ ಮುಖರ್ಜಿಯ ಲೇನಿನಲ್ಲಿ ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದನು. ಅದು ನರೇಂದ್ರನ ಮನೆಯ ಮುಂಭಾಗದಲ್ಲಿಯೇ ಇತ್ತು. ನಾವು ಶಾಲೆಯಲ್ಲಿ ಓದುತ್ತಿರುವಾಗ ನಾಲ್ಕು ಐದು ವರ್ಷ ಸಹಪಾಠಿಗಳಾಗಿದ್ದೆವು. ಪ್ರವೇಶ ಪರೀಕ್ಷೆ ಮುಗಿಯುವುದಕ್ಕೆ ಎರಡು ವರ್ಷಗಳ ಮುಂಚೆ ಅವನು ವಿದೇಶಕ್ಕೆ ಹೋಗುವುದಾಗಿ ಹೇಳಿ ಬೊಂಬಾಯಿಯವರೆಗೂ ಹೋಗಿದ್ದನು. ಆದರೆ ಅನೇಕ ಕಾರಣ ಗಳಿಂದಾಗಿ ಸಮುದ್ರವನ್ನು ದಾಟಲಾಗದೆ ಒಂದು ವೃತ್ತಪತ್ರಿಕೆಗೆ ಸಂಪಾದಕನಾದನು. ಮಧ್ಯೆಮಧ್ಯೆ ಬಂಗಾಳಿಯಲ್ಲಿ ಪ್ರಬಂಧ ಮತ್ತು ಕವಿತೆಗಳನ್ನು ರಚಿಸಿ ಕೆಲವು ಪುಸ್ತಕಗಳ ಗ್ರಂಥಕರ್ತನಾದನು. ಸ್ವಲ್ಪಕಾಲದನಂತರ ಅವನು ವಿವಾಹವಾದನು. ಇದಾದ ಮೇಲೆ ಅವನು ಅನೈತಿಕ ಜೀವನವನ್ನು ನಡೆಸುತ್ತ ತುಂಬ ಕಪಟಮಾರ್ಗದಿಂದ ಹಣ ಸಂಪಾದಿಸು ತ್ತಿದ್ದನೆಂದು ಅನೇಕ ಮೂಲಗಳಿಂದ ತಿಳಿದು ಬಂತು. ಇದು ನಿಜವೇ ಅಲ್ಲವೇ ಎಂಬು ದನ್ನು ನಿರ್ಧರಿಸಲು ನಾವು ಪೂರ್ವಸೂಚನೆಯಿಲ್ಲದೆ ಅಂದು ಅವನ ಮನೆಗೆ ಹೋಗಿ ದ್ದೆವು.

10. ಒಬ್ಬ ಆಳಿನ ಮೂಲಕ ಅವನಿಗೆ ಸುದ್ದಿಯನ್ನು ಕಳಿಸಿ ನಾವು ಹೊರಗಿನ ಒಂದು ಕೋಣೆಯಲ್ಲಿ ಕುಳಿತಿದ್ದೆವು. ಆಗ ಇದ್ದಕ್ಕಿದ್ದಂತೆಯೆ ಒಬ್ಬ ಯುವಕನು ಆ ಕೋಣೆಯನ್ನು ಪ್ರವೇಶಿಸಿದನು. ಮನೆಯೊಡೆಯನ ಪರಿಚಯವಿರುವಂತೆ ನಿಃಸಂಕೋಚ ವಾಗಿ ಒಂದು ದಿಂಬಿಗೆ ಒರಗಿ ಕಾಲು ಚಾಚಿಕೊಂಡು ಯಾವುದೊ ಹಿಂದಿಯ ಹಾಡನ್ನು ಗುಣಗುಂಟ್ಟ ತೊಡಗಿದನು. ಹಾಡು ಕೃಷ್ಣನಿಗೆ ಸಂಬಂಧಪಟ್ಟಿರಬೇಕು. ಏಕೆಂದರೆ 'ಕನಾಯ್' ಮತ್ತು 'ಬಾಂಶರಿ' ಈ ಎರಡು ಶಬ್ದಗಳು ಸ್ಪಷ್ಟವಾಗಿ ನಮ್ಮ ಕಿವಿಗೆ ಬಿದ್ದಿ ದ್ದವು. ಅವನ ಉಡುಪು ನೂತನ ಮಾದರಿಯದಲ್ಲದಿದ್ದರೂ ಚೊಕ್ಕಟವಾಗಿತ್ತು, ತಲೆ ಯನ್ನು ಬಾಚಿದ್ದನು. ಅವನ ಉದಾಸೀನ ಮನೋಭಾವ, ಹಾಡುತ್ತಿದ್ದ ಭಂಗಿ, ನೀತಿ ಗೆಟ್ಟ ಸ್ನೇಹಿತನೊಡನೆ ಅವನ ಸಹವಾಸ ಇವೆಲ್ಲ ಅವನ ಬಗ್ಗೆ ನಮ್ಮಲ್ಲಿ ಒಳ್ಳೆಯ ಭಾವನೆ ಯನ್ನು ಕೆರಳಿಸಲಿಲ್ಲ. ಕೋಣೆಯ ಮಧ್ಯೆ ಕುಳಿತಿದ್ದ ಆತ ನಮ್ಮ ಕಡೆ ಕಣ್ಣೆತ್ತಿಯೂ ನೋಡಲಿಲ್ಲ. ಅವನ ಆ ರೀತಿಯ ನಿಃಸಂಕೋಚ ವರ್ತನೆ ಮತ್ತು ಅನಂತರ ಅವನು ಸಿಗರೇಟು ಸೇದುವುದು ಇದನ್ನೆಲ್ಲ ನೋಡಿ, ನಮ್ಮ ಸ್ನೇಹಿತನು ಹಾಳಾಗುವುದಕ್ಕೆ ಇವನೇ ಕಾರಣ ಎಂದು ನಾವು ಭಾವಿಸಿದೆವು. ಏನೇ ಆಗಲಿ, ಕೋಣೆಯಲ್ಲಿ ನಮ್ಮ ಅಸ್ತಿತ್ವವನ್ನು ತಿಳಿದೂ ಅವನು ಅಷ್ಟೊಂದು ಉದಾಸೀನನಾಗಿ ತನ್ನ ಪಾಡಿಗೆ ತಾನಿದ್ದುದನ್ನು ನೋಡಿ

ನಾವೂ ಕೂಡ ಅವನ ಪರಿಚಯವನ್ನು ಮಾಡಿಕೊಳ್ಳುವ ಗೋಜಿಗೆ ಹೋಗಲಿಲ್ಲ.

11. ಸ್ವಲ್ಪ ಹೊತ್ತಿನ ನಂತರ ನಮ್ಮ ಬಾಲ್ಯ ಸ್ನೇಹಿತ ಹೊರಗೆ ಬಂದನು. ಬಹಳ ಕಾಲದ ನಂತರ ನಮ್ಮನ್ನು ನೋಡಿದ್ದರೂ ಕೇವಲ ಒಂದೆರಡು ಮಾತುಗಳನ್ನು ಆಡಿಸಿ ಮೇಲೆ ಹೇಳಿದ ಯುವಕನೊಡನೆ ಆನಂದದಿಂದ ಅನೇಕ ವಿಷಯಗಳ ಬಗ್ಗೆ ಮಾತನಾಡತೊಡಗಿದನು. ಅವನ ಈ ರೀತಿಯ ಉದಾಸೀನತೆ ನಮಗೆ ಹಿಡಿಸಲಿಲ್ಲ. ಆದರೂ ಇದ್ದಕ್ಕಿದ್ದಂತೆಯೆ ಎದ್ದು ಹೋಗುವುದು ಸಭ್ಯತೆಯ ಲಕ್ಷಣವಲ್ಲವೆಂದು ಭಾವಿಸಿ ಅಲ್ಲಿಯೇ ಸ್ವಲ್ಪ ಹೊತ್ತು ಅವರ ಮಾತನ್ನು ಕೇಳುತ್ತಾ ಕುಳಿತೆವು. ಅವರಿಬ್ಬರೂ ಬಂಗಾಳಿ ಮತ್ತು ಇಂಗ್ಲಿಷ್ ಸಾಹಿತ್ಯದ ಬಗ್ಗೆ ಮಾತನಾಡುತ್ತಿದ್ದರು. ಶ್ರೇಷ್ಠಸಾಹಿತ್ಯವು ಮಾನವ ಭಾವಗಳನ್ನು ಯಥಾವತ್ತಾಗಿ ಪ್ರತಿಬಿಂಬಿಸಬೇಕು ಎಂಬ ಅಭಿಪ್ರಾಯವನ್ನು ಮೊದಲು ಅವರಿಬ್ಬರೂ ವ್ಯಕ್ತಪಡಿಸಿದರು. ಮನುಷ್ಯ ಜೀವನದ ಎಲ್ಲಾ ಪ್ರಕಾರದ ಭಾವ ಗಳನ್ನು ಯಥಾವತ್ತಾಗಿ ಪ್ರಕಾಶಿಸುವ ಕೃತಿಗಳನ್ನೆಲ್ಲ ಸಾಹಿತ್ಯವೆಂದು ಪರಿಗಣಿಸುವುದು ಉಚಿತವೇ ಅಲ್ಲವೇ ಎಂಬ ವಿಚಾರದಲ್ಲಿ ಅವರಿಬ್ಬರಲ್ಲೂ ಮತಭೇದ ಉಂಟಾಯಿತು. ನಮಗೆ ತಿಳಿದಿರುವಂತೆ ಎಲ್ಲಾ ಪ್ರಕಾರದ ಭಾವಗಳನ್ನು ಪ್ರಕಾಶಿಸುವ ಕೃತಿಗಳನ್ನೆಲ್ಲ ಸಾಹಿತ್ಯದ ವರ್ಗಕ್ಕೆ ಸೇರಿಸಬೇಕು ಎಂಬ ಪಕ್ಷವನ್ನು ನಮ್ಮ ಸ್ನೇಹಿತನು ಅವಲಂಬಿಸಿ ದ್ದನು. ಆಗಂತುಕ ಯುವಕನು ಆ ಅಭಿಪ್ರಾಯವನ್ನು ಖಂಡಿಸಿ ಉಚ್ಚ ಆದರ್ಶವನ್ನು ಪ್ರತಿಷ್ಠಾಪಿಸದ ಕೃತಿಗಳನ್ನು ಉಚ್ಚ ಸಾಹಿತ್ಯದ ವರ್ಗಕ್ಕೆ ಸೇರಿಸುವುದು ಸರಿಯಲ್ಲ ಎಂದು ನಮ್ಮ ಸ್ನೇಹಿತನಿಗೆ ತಿಳಿಸಿಕೊಡಲು ಪ್ರಯತ್ನಿಸುತ್ತಿದ್ದನು. ತನ್ನ ಪಕ್ಷವನ್ನು ಸಮರ್ಥಿಸುತ್ತ ಆ ಯುವಕನು ಅನೇಕ ಇಂಗ್ಲಿಷ್ ಮತ್ತು ಬಂಗಾಳಿಯ ಪ್ರಸಿದ್ಧ ಲೇಖಕ ರನ್ನು ಉಲ್ಲೇಖಿಸಿದನು. ಅವರೆಲ್ಲರೂ ಉಚ್ಚ ಆದರ್ಶವನ್ನು ತಮ್ಮ ಸಾಹಿತ್ಯದ ಮೂಲಕ ಪ್ರತಿಬಿಂಬಿಸಿದುದರಿಂದಲೇ ಸಾಹಿತ್ಯ ಜಗತ್ತಿನಲ್ಲಿ ಅಮರರಾಗಿರುವರು ಎಂಬುದನ್ನು ತೋರಿಸಿಕೊಟ್ಟನು. ಕೊನೆಯಲ್ಲಿ ಅವನು ಈ ಮಾತನ್ನು ಆಡಿದನು : "ಮನುಷ್ಯನಲ್ಲಿ ಉತ್ತಮ ಮತ್ತು ಅಧಮ ಎಲ್ಲಾ ಪ್ರಕಾರದ ಭಾವನೆಗಳಿದ್ದರೂ ಅವನು ತನ್ನ ಆಂತರಿಕ ಆದರ್ಶವನ್ನು ಪ್ರಕಾಶಪಡಿಸಲು ಯಾವಾಗಲೂ ಪ್ರಯತ್ನಿಸುತ್ತಾನೆ. ಈ ಆಂತರಿಕ ಆದರ್ಶದ ಅನುಭವ ಮತ್ತು ಪ್ರಕಾಶ ಇವುಗಳಲ್ಲಿರುವ ತಾರತಮ್ಯವೇ ಮಾನವನಲ್ಲಿರುವ ವ್ಯತ್ಯಾಸಗಳಿಗೆ ಕಾರಣ. ಸಾಧಾರಣ ಮನುಷ್ಯರು ರೂಪರಸ ಭೋಗಗಳನ್ನೇ ನಿತ್ಯ ಸತ್ಯ ವೆಂದು ಭಾವಿಸಿ ಅವನ್ನು ಪಡೆಯುವುದೇ ಜೀವನೋದ್ದೇಶವೆಂದು ನಿಶ್ಚಿಂತರಾಗಿರುತ್ತಾರೆ– They idealize what is apparently real. ಅವರಿಗೂ ಪ್ರಾಣಿಗಳಿಗೂ ಇರುವ ವ್ಯತ್ಯಾಸ ಅತ್ಯಲ್ಪ. ಅಂಥವರಿಂದ ಶ್ರೇಷ್ಠ ಮಟ್ಟದ ಸಾಹಿತ್ಯ ಸಾಧ್ಯವಿಲ್ಲ. ಇನ್ನೊಂದು ವರ್ಗದ ಜನರಿದ್ದಾರೆ. ಅವರು ಭೋಗ ಸುಖದಲ್ಲಿ ಸಂತುಷ್ಟರಾಗದೆ ಉಚ್ಚ ಆದರ್ಶ ಗಳನ್ನು ತಮ್ಮೊಳಗೆ ಅನುಭವಿಸಿ ಹೊರಗಿನ ಎಲ್ಲ ವಿಷಯಗಳನ್ನು ಆ ಆದರ್ಶದ ಪಡಿ ಯಚ್ಚಿನಲ್ಲಿ ರೂಪಿಸಲು ಪ್ರಯತ್ನಿಸುತ್ತಾರೆ–They want to realize the ideal. ಈ ರೀತಿಯ ವ್ಯಕ್ತಿಯೆ ಯಥಾರ್ಥ ಸಾಹಿತ್ಯವನ್ನು ಸೃಷ್ಟಿಸಬಲ್ಲ. ಇವರುಗಳ ಮಧ್ಯೆ ಯಾರು

ಸರ್ವೋಚ್ಚ ಆದರ್ಶವನ್ನು ಅವಲಂಬಿಸಿ ಅದನ್ನು ಜೀವನದಲ್ಲಿ ಸಾಕ್ಷಾತ್ಕಾರಗೊಳಿಸಿ ಕೊಳ್ಳಲು ಪ್ರಯತ್ನಿಸುತ್ತಾರೊ ಅವರು ಸಂಸಾರದಿಂದ ಹೊರಗೆ ಹೋಗಬೇಕು. ಇಂಥ ಆದರ್ಶವನ್ನು ಜೀವನದಲ್ಲಿ ಸಂಪೂರ್ಣವಾಗಿ ಸಾಕ್ಷಾತ್ಕರಿಸಿಕೊಂಡ ಕೇವಲ ಒಬ್ಬನೇ ಒಬ್ಬ ವ್ಯಕ್ತಿಯೆಂದರೆ ದಕ್ಷಿಣೇಶ್ವರದ ಪರಮಹಂಸ ದೇವರು. ಅದಕ್ಕಾಗಿಯೆ ನನಗೆ ಅವರ ಮೇಲೆ ಶ್ರದ್ಧೆ."

ಆ ಯುವಕನ ಈ ಉದಾತ್ತ ಭಾವನೆಗಳನ್ನು ಕೇಳಿ ಮತ್ತು ಅವನ ಪಾಂಡಿತ್ಯಕ್ಕೆ ನಾವು ಬೆರಗಾದೆವು. ನಮ್ಮ ಸ್ನೇಹಿತನೊಡನೆ ಅವನ ನಿಕಟ ಸಂಬಂಧವನ್ನು ಕಂಡು ಅವನ ಮಾತು ಕೃತಿಯಲ್ಲಿ ಸಾಮ್ಯವಿಲ್ಲ ಎಂದು ನಾವು ಭಾವಿಸಿದೆವು. ಇದು ನಮಗೆ ನಿರಾಸೆಯ ನ್ನುಂಟುಮಾಡಿತು. ಅನಂತರ ನಾವು ಸ್ನೇಹಿತನಿಂದ ಬೀಳ್ಕೊಂಡೆವು. ಇದಾದ ಕೆಲವು ತಿಂಗಳ ನಂತರ ಶ್ರೀರಾಮಕೃಷ್ಣರ ಬಾಯಿಂದ ನರೇಂದ್ರನ ಸದ್ಗುಣಗಳನ್ನು ಕೇಳಿ ಮುಗ್ಧರಾಗಿ ಅವನನ್ನು ನೋಡಲು ಹೋದೆವು. ಶ್ರೀರಾಮಕೃಷ್ಣರು ಅಷ್ಟೊಂದು ಪ್ರಶಂಸಿಸಿದ ನರೇಂದ್ರನಾಥನು ಅದೇ ಯುವಕನೆಂದು ತಿಳಿದ ಮೇಲೆ ನಮ್ಮ ಆಶ್ಚರ್ಯಕ್ಕೆ ಕೊನೆಯೆ ಇರಲಿಲ್ಲ.

12. ರೂಢಿಬದ್ಧರಾದ ಸಾಧಾರಣ ಜನರು ನರೇಂದ್ರನ ಬಾಹ್ಯ ಆಚರಣೆಗಳನ್ನು ನೋಡಿ ಅವನನ್ನು ಡಾಂಭಿಕ, ಉದ್ಧತ, ಅನಾಚಾರಿ, ಇತ್ಯಾದಿಯಾಗಿ ನಿಂದಿಸಬಹುದು. ಆದರೆ ಶ್ರೀರಾಮಕೃಷ್ಣರು ಮಾತ್ರ ಅವನ ವಿಷಯದಲ್ಲಿ ಇಂಥ ಭ್ರಮೆಗೆ ಎಂದೂ ಒಳ ಪಟ್ಟಿರಲಿಲ್ಲ. ಮೊದಲ ಭೇಟಿಯಿಂದಲೇ ನರೇಂದ್ರನ ಜಂಭ ಮತ್ತು ಉದ್ಧಟತನ ಅಸಾಧಾರಣ ಅಂತಶ್ಶಕ್ತಿಯಿಂದುಂಟಾದ ಅದಮ್ಯ ಆತ್ಮವಿಶ್ವಾಸದ ಫಲ ಎಂದು ಅವರು ತಿಳಿದಿದ್ದರು. ಅವನ ನಿರಂಕುಶ ಸ್ವತಂತ್ರ ವರ್ತನೆ, ಅವನ ಆತ್ಮ ಸಂಯಮದ ಸೂಚಕವೇ ಹೊರತು ಬೇರೇನೂ ಅಲ್ಲ ಎಂದು ಅವರು ಭಾವಿಸಿದರು. ಲೋಕಮಾನ್ಯತೆ ಕಡೆಗಿರುವ ಅವನ ಉದಾಸೀನತೆಗೆ ತನ್ನ ಪುಣ್ಯ ಸ್ವಭಾವದಿಂದ ಪಡೆಯುತ್ತಿದ್ದ ಆತ್ಮತೃಪ್ತಿಯೇ ಕಾರಣ ಎಂಬುದನ್ನು ಅವರು ತಿಳಿದಿದ್ದರು. ಮುಂದೆ ನರೇಂದ್ರನ ಅಸಾಧಾರಣ ಸ್ವಭಾ ವವು ಸಹಸ್ರದಳ ಕಮಲದಂತೆ ಅರಳಿ ಅವನು ಮಹಾಮಹಿಮನೂ, ಅಪಾರಗೌರವಾ ನ್ವಿತನೂ ಆಗುವನೆಂದು ತಿಳಿದಿದ್ದರು. ಆಗ ದುಃಖತಪ್ತ ಸಂಸಾರದ ಪರಿಚಯವುಂಟಾಗಿ ಅವನ ದಂಭ ಮತ್ತು ಉದ್ಧಟತನ ಅಪಾರ ಕರುಣೆಯಾಗಿ ಪರಿಣಮಿಸುವುದು. ಅವನ ಅಪೂರ್ವ ಆತ್ಮ ವಿಶ್ವಾಸ ಹತಾಶ ಜೀವರಲ್ಲಿ ವಿಶ್ವಾಸವನ್ನು ಪುನಃ ಪ್ರತಿಷ್ಠಾಪಿಸುವುದು, ಅವನ ಸ್ವತಂತ್ರ ಆಚರಣೆ ಯಾವಾಗಲೂ ಆತ್ಮ ಸಂಯಮವನ್ನು ಮೀರಿಹೋಗದೆ ಸ್ವಾತಂತ್ರ್ಯಕ್ಕೆ ಆತ್ಮಸಂಯಮವೇ ಏಕ ಮಾತ್ರ ಮಾರ್ಗ ಎಂಬುದನ್ನು ಇತರರಿಗೆ ತೋರಿಸಿಕೊಡುವುದು—ಎಂಬ ವಿಶ್ವಾಸ ಶ್ರೀರಾಮಕೃಷ್ಣರಿಗಿತ್ತು.

13. ಇದರಿಂದಾಗಿಯೇ ಪ್ರಾರಂಭದಿಂದಲೂ ಶ್ರೀರಾಮಕೃಷ್ಣರು ನರೇಂದ್ರನನ್ನು ಎಲ್ಲರ ಮುಂದೆಯೂ ಮುಕ್ತಕಂಠದಿಂದ ಪ್ರಶಂಸಿಸುತ್ತಿದ್ದರು. ಯಾವಾಗಲೂ ಹೀಗೆ ಪ್ರಶಂಸಿಸುತ್ತಿದ್ದರೆ ದುರ್ಬಲ ಮನಸ್ಸಿನವನಲ್ಲಿ ಅಹಂಕಾರ ವೃದ್ಧಿಯಾಗುತ್ತದೆ ಮತ್ತು

ಅದೂ ಅವನ ವಿನಾಶಕ್ಕೆ ಕಾರಣವಾಗುತ್ತದೆ. ಶ್ರೀರಾಮಕೃಷ್ಣರಿಗೆ ಇದು ತಿಳಿದಿದ್ದರೂ ನರೇಂದ್ರನ ವಿಷಯದಲ್ಲಿ ಅವನನ್ನು ಆ ರೀತಿ ಪ್ರಶಂಸಿಸುವುದಕ್ಕೆ ಸ್ವಲ್ಪವೂ ಹಿಂಜರಿಯ ಲಿಲ್ಲ. ಏಕೆಂದರೆ ಅವರಿಗೆ ಗೊತ್ತಿತ್ತು, ನರೇಂದ್ರನು ಎಂಥ ಉನ್ನತ ಮಟ್ಟದಲ್ಲಿರುವ ನೆಂದರೆ ಈ ಮೇಲೆ ಹೇಳಿದ ದುರ್ಬಲತೆಗೆ ಅವಕಾಶವೇ ಇಲ್ಲ ಎಂದು. ಇದಕ್ಕೆ ಕೆಲವು ದೃಷ್ಟಾಂತಗಳನ್ನು ಇಲ್ಲಿ ಕೊಡಬಹುದು. ಒಂದು ದಿನ ಶ್ರೇಷ್ಠರಾದ ಕೇಶವಚಂದ್ರಸೇನ್ ಮತ್ತು ವಿಜಯಕೃಷ್ಣಗೋಸ್ವಾಮಿ ಶ್ರೀರಾಮಕೃಷ್ಣರೊಡನಿದ್ದರು. ಆಗ ನರೇಂದ್ರನೂ ಕೂಡ ಅಲ್ಲಿಯೇ ಇದ್ದ. ಶ್ರೀರಾಮಕೃಷ್ಣರು ಭಾವಮುಖರಾಗಿ ಪ್ರಸನ್ನತೆಯಿಂದ ಕೇಶವ ಮತ್ತು ವಿಜಯರ ಕಡೆ ದೃಷ್ಟಿ ಹರಿಸಿದರು. ಅನಂತರ ನರೇಂದ್ರನಾಥನ ಕಡೆ ಅವರ ದೃಷ್ಟಿ ಹೊರಳಿದಾಗ ಅವನ ಉಜ್ವಲ ಭವಿಷ್ಯದ ಚಿತ್ರ ಅವರ ಮನಸ್ಸಿಗೆ ಬಂತು. ಆದರೊಡನೆ ಕೇಶವ ಮುಂತಾದ ಗಣ್ಯ ವ್ಯಕ್ತಿಗಳ ಜೀವನವನ್ನು ಹೋಲಿಸಿ ಪ್ರೀತಿಯಿಂದ ನರೇಂದ್ರನಾಥನನ್ನೇ ದಿಟ್ಟಿಸಿ ನೋಡತೊಡಗಿದರು. ಅನಂತರ ಸಭೆಯು ಮುಗಿದ ಮೇಲೆ ಹೇಳಿದರು : "ಕೇಶವನು ಒಂದೇ ಶಕ್ತಿಯ ಉತ್ಕರ್ಷದಿಂದ ಜಗದ್ವಿಖ್ಯಾತನಾಗಿರುವನು. ನರೇಂದ್ರನಾಥನಲ್ಲಿ ಅಂತಹ ಹದಿನೆಂಟು ಶಕ್ತಿಗಳು ಪೂರ್ಣರೂಪದಲ್ಲಿ ಪ್ರಕಾಶಿಸುತ್ತಿವೆ. ಕೇಶವ ಮತ್ತು ವಿಜಯರಲ್ಲಿ ಜ್ಞಾನವು ದೀಪದಂತೆ ಪ್ರಕಾಶಿಸುತ್ತಿದ್ದರೆ ನರೇಂದ್ರನಲ್ಲಿ ಜ್ಞಾನಸೂರ್ಯನೇ ಪ್ರಕಾಶಿಸುತ್ತಿದ್ದು ಮಾಯಾ ಮೋಹವು ಅವನಲ್ಲಿ ಸ್ವಲ್ಪವೂ ಉಳಿಯದಂತೆ ಮಾಡಿರುವುದು." ಒಳದೃಷ್ಟಿ ಇಲ್ಲದ ದುರ್ಬಲ ಮನಸ್ಸಿನವರಾಗಿದ್ದರೆ ಶ್ರೀರಾಮಕೃಷ್ಣರ ಈ ಪ್ರಶಂಸಾ ನುಡಿಗಳನ್ನು ಕೇಳಿ ಅಹಂಕಾರದಿಂದ ಉಬ್ಬಿ ಹೋಗು ತ್ತಿದ್ದರು. ಆದರೆ ನರೇಂದ್ರನ ಪ್ರತಿಕ್ರಿಯೆ ಇದಕ್ಕೆ ಸಂಪೂರ್ಣ ವಿರುದ್ಧವಾಗಿತ್ತು. ಅವನು ತನ್ನೊಳಗೆ ಅವಲೋಕಿಸಿ ಕೇಶವ ಮತ್ತು ವಿಜಯರ ಅಪಾರ ಗುಣರಾಶಿಗೆ ತನ್ನ ಆಗಿನ ಮನಸ್ಸಿನ ಸ್ಥಿತಿಯನ್ನು ನಿರಪೇಕ್ಷವಾಗಿ ಹೋಲಿಸಿ ನೋಡಿದನು. ಅಂತಹ ಪ್ರಶಂಸೆಗೆ ತಾನು ಯೋಗ್ಯನಲ್ಲ ಎಂದು ಭಾವಿಸಿ ಶ್ರೀರಾಮಕೃಷ್ಣರ ಮಾತನ್ನು ವಿರೋಧಿಸುತ್ತ ಹೇಳಿದ : "ಮಹಾಶಯರೇ ನೀವೇನು ಹೇಳುತ್ತಿರುವಿರಿ ? ಜನರು ನಿಮ್ಮ ಮಾತನ್ನು ಕೇಳಿ ದರೆ ಖಂಡಿತಾ ನಿಮಗೆ ಹುಚ್ಚು ಹಿಡಿದಿದೆ ಎಂದು ಭಾವಿಸುತ್ತಾರೆ. ಜಗದ್ವಿಖ್ಯಾತನಾದ ಕೇಶವ ಮತ್ತು ಪರಮಶ್ರೇಷ್ಠನಾದ ವಿಜಯ ಇವರುಗಳೆಲ್ಲಿ ಮತ್ತು ನನ್ನಂತಹ ನಗಣ್ಯ ಶಾಲೆಯ ಹುಡುಗನೆಲ್ಲಿ ! ಇನ್ನು ಹೀಗೆ ಎಂದೂ ಅವರುಗಳಿಗೆ ನನ್ನನ್ನು ಹೋಲಿಸಿ ಮಾತನಾಡಿಬೇಡಿ." ಶ್ರೀರಾಮಕೃಷ್ಣರು ಆ ಮಾತನ್ನು ಕೇಳಿ ಸಂತುಷ್ಟರಾಗಿ ಹೇಳಿದರು : "ನಾನೇನು ಮಾಡಲಪ್ಪ ? ನಾನು ಆ ರೀತಿ ಹೇಳಿದೆ ಎಂದು ನೀನು ಭಾವಿಸಿದೆಯೇನು, ತಾಯಿ ಜಗನ್ಮಾತೆಯೆ ನನಗೆ ಹಾಗೆ ತೋರಿಸಿರುವಳು. ಅದಕ್ಕೆ ಹಾಗೆ ಹೇಳಿದೆ. ತಾಯಿಯು ಸತ್ಯವಲ್ಲದೆ ಅಸತ್ಯವಾದುದನ್ನೆಂದೂ ತೋರಿಸುವುದಿಲ್ಲ. ಅದಕ್ಕೇ ಹೇಳಿದೆ."

'ತಾಯಿ ತೋರಿಸಿದಳು ಮತ್ತು ಮಾತನಾಡಿಸಿದಳು' ಎಂದು ಹೇಳಿಯೆ ಶ್ರೀರಾಮ ಕೃಷ್ಣರು ನರೇಂದ್ರನ ಕೈಯಿಂದ ಪಾರಾಗುತ್ತಿದ್ದರು ಎಂದು ಹೇಳಲಾಗುವುದಿಲ್ಲ. ಅವರ ದರ್ಶನಗಳ ಸತ್ಯತೆಯನ್ನು ಸಂದೇಹಿಸುತ್ತ ಧೈರ್ಯಶಾಲಿಯಾದ ನರೇಂದ್ರನು ಕೆಲ

ವೊಮ್ಮೆ ಹೀಗೆ ಹೇಳುತ್ತಿದ್ದನು : "ತಾಯಿ ತೋರಿಸುವಳೊ ಅಥವಾ ನಿಮ್ಮ ಬುದ್ಧಿ ಭ್ರಮಣೆಯಿಂದ ನಿಮಗೆ ಇವೆಲ್ಲ ಕಾಣುವುದೊ ಯಾರಿಗೆ ಗೊತ್ತು ? ನನಗೆ ಈ ರೀತಿ ಆದರೆ ಇದು ಖಂಡಿತ ಬುದ್ಧಿಭ್ರಮಣೆಯ ಫಲ ಎಂದು ಭಾವಿಸುತ್ತಿದ್ದೆ. ಪಾಶ್ಚಾತ್ಯ ವಿಜ್ಞಾನ ಮತ್ತು ತತ್ತ್ವಶಾಸ್ತ್ರ ಇದನ್ನು ನಿಸ್ಸಂದೇಹವಾಗಿ ಪ್ರಮಾಣೀಕರಿಸಿವೆ. ಕಣ್ಣು ಕಿವಿ ಮುಂತಾದ ಇಂದ್ರಿಯಗಳು ಅನೇಕವೇಳೆ ನಮ್ಮನ್ನು ಮೋಸಪಡಿಸುತ್ತವೆ. ಅಷ್ಟೇ ಅಲ್ಲದೆ ಯಾವುದೋ ಒಂದು ವಿಶಿಷ್ಟ ವಸ್ತುವನ್ನು ನೋಡಬೇಕೆಂಬ ಆಸೆ ನಮ್ಮ ಮನಸ್ಸಿನಲ್ಲಿ ಯಾವಾಗಲೂ ಜಾಗ್ರತವಾಗಿದ್ದರೆ ಅದು ಇಲ್ಲದಿದ್ದರೂ ಇಂದ್ರಿಗಳು ಮತ್ತೆ ಮತ್ತೆ ನಮ್ಮ ಮುಂದೆ ಕಾಣುವಂತೆ ಮಾಡುತ್ತವೆ. ನೀವು ನನ್ನನ್ನು ಪ್ರೀತಿಸುತ್ತೀರಿ, ಮತ್ತು ಎಲ್ಲಾ ವಿಷಯದಲ್ಲೂ ನಾನು ಶ್ರೇಷ್ಠನೆಂದು ತಿಳಿಯಲು ಇಷ್ಟಪಡುತ್ತೀರಿ. ಇದರಿಂದಾಗಿಯೇ ನಿಮಗೆ ಈ ಎಲ್ಲ ದರ್ಶನಗಳು ಆಗುತ್ತಿವೆ."

14. ಹೀಗೆ ನರೇಂದ್ರನು ಪಾಶ್ಚಾತ್ಯ ವಿಜ್ಞಾನದ ಸಹಾಯದಿಂದ, ಅನೇಕ ದೃಷ್ಟಾಂತಗಳ ಮೂಲಕ ಶ್ರೀರಾಮಕೃಷ್ಣರ ಮುಂದೆ ಈ ವಿಷಯವನ್ನು ಪ್ರಮಾಣಪಡಿಸಲು ಕೆಲವೊಮ್ಮೆ ಮುಂದಾಗುತ್ತಿದ್ದ. ಶ್ರೀರಾಮಕೃಷ್ಣರು ಉಚ್ಚ ಭಾವಸ್ತರದಲ್ಲಿದ್ದಾಗ ನರೇಂದ್ರನ ಈ ರೀತಿಯ ಬಾಲಸಹಜ ಸತ್ಯನಿಷ್ಠೆಯ ಸೂಚಕವಾದ ಮಾತುಗಳಿಂದ ಅವನ ವಿಷಯದಲ್ಲಿ ಇನ್ನಷ್ಟು ಸಂತುಷ್ಟರಾಗುತ್ತಿದ್ದರು. ಆದರೆ ಅವರು ಸಾಧಾರಣ ಭಾವಸ್ತರದಲ್ಲಿದ್ದಾಗ ನರೇಂದ್ರನ ಈ ತೀಕ್ಷ್ಣ ಯುಕ್ತಿಯಿಂದ ಕೂಡಿದ ಮಾತುಗಳನ್ನು ಕೇಳಿ ಬಾಲಕ ಸ್ವಭಾವದ ಅವರು ಚಿಂತೆಗೊಳಗಾಗುತ್ತಿದ್ದರು. "ಮನೋವಾಕ್ಕಾಯವಾಗಿ ಸತ್ಯ ಪರಾಯಣನಾದ ನರೇಂದ್ರನು ಸುಳ್ಳನ್ನು ಹೇಳುವವನೇ ಅಲ್ಲ, ಅವನಂತಹ ದೃಢ ಸತ್ಯನಿಷ್ಠ ವ್ಯಕ್ತಿಗಳ ಮನಸ್ಸಿನಲ್ಲಿ ಸತ್ಯವಲ್ಲದೆ ಮಿಥ್ಯಾಸಂಕಲ್ಪಗಳು ಉದಯಿಸುವುದೇ ಇಲ್ಲ. ಶಾಸ್ತ್ರವೂ ಇದನ್ನೇ ಹೇಳುತ್ತದೆ. ಹಾಗಾದರೆ ನನ್ನ ದರ್ಶನಗಳೆಲ್ಲ ಭ್ರಮೆಯ ಫಲವೇ"—ಈ ರೀತಿ ಅವರು ಭಾವಿಸುತ್ತಿದ್ದುದುಂಟು. ಇನ್ನು ಕೆಲವೊಮ್ಮೆ ಅವರು ಆಲೋಚಿಸುತ್ತಿದ್ದರು: "ಆದರೆ ನಾನು ಹಿಂದೆ ಅನೇಕ ಬಾರಿ ಪರೀಕ್ಷಿಸಿರುವೆನು. ತಾಯಿಯು ನನಗೆ ಸತ್ಯವನ್ನಲ್ಲದೆ ಮಿಥ್ಯವಾದುದನ್ನೆಂದೂ ತೋರಿಸಲಿಲ್ಲ. ಅವಳಿಂದ ಎಷ್ಟೋ ಬಾರಿ ಆಶ್ವಾಸನೆಯನ್ನೂ ಪಡೆದಿರುವೆನು. ಹಾಗಿರುವಾಗ ನರೇಂದ್ರನು ನನ್ನ ದರ್ಶನಗಳೆಲ್ಲ ಭ್ರಮೆ ಎಂದು ಹೇಳುತ್ತಾನಲ್ಲ ಯಾಕೆ ? ಯಾಕೆ ಅವನ ಮನಸ್ಸು ನಾನು ಹೇಳಿದುದರಲ್ಲಿ ವಿಶ್ವಾಸವಿರಿಸುತ್ತಿಲ್ಲ ?"

ಈ ರೀತಿ ಚಿಂತಿಸುತ್ತ ಶ್ರೀರಾಮಕೃಷ್ಣರು ಕೊನೆಗೆ ಜಗನ್ಮಾತೆಯನ್ನು ಕೇಳುತ್ತಿದ್ದರು. ಆಕೆಯಿಂದ ಈ ರೀತಿ ಸಂದೇಶ ಬರುತ್ತಿತ್ತು : "ಅವನ (ನರೇಂದ್ರನ) ಮಾತನ್ನೇಕೆ ಕೇಳುತ್ತೀಯೆ ? ಸ್ವಲ್ಪ ದಿನಗಳ ನಂತರ ಅವನು ಎಲ್ಲವನ್ನೂ ಸ್ವೀಕರಿಸುತ್ತಾನೆ." ಜಗನ್ಮಾತೆಯಿಂದ ಈ ಆಶ್ವಾಸನೆಯನ್ನು ಪಡೆದು ಅವರು ನಿಶ್ಚಿಂತರಾಗುತ್ತಿದ್ದರು. ಇದಕ್ಕೆ ದೃಷ್ಟಾಂತರೂಪವಾಗಿ ಒಂದು ದಿನದ ಘಟನೆಯನ್ನು ನಾವಿಲ್ಲಿ ಉಲ್ಲೇಖಿಸುತ್ತೇವೆ.

15. ಆಗ ಕೂಚ್‌ಬಿಹಾರ್ ವಿವಾಹದ ಫಲವಾಗಿ ಬ್ರಹ್ಮಸಮಾಜವು ಇಬ್ಭಾಗ

ವಾಗಿತ್ತು. ಸಾಧಾರಣ ಬ್ರಹ್ಮಸಮಾಜವು ಪ್ರತಿಷ್ಠಾಪನೆಗೊಂಡು ಕೆಲವು ವರ್ಷಗಳು ಕಳೆದಿದ್ದವು. ನರೇಂದ್ರನಾಥನು ಕೇಶವನನ್ನು ಆಗಾಗ ಭೇಟಿಯಾಗುತ್ತಿದ್ದರೂ ಅವನು ಸಾಧಾರಣ ಬ್ರಹ್ಮಸಮಾಜದ ಉಪಾಸನೆಗೇ ಯಾವಾಗಲೂ ಹೋಗುತ್ತಿದ್ದನು ಮತ್ತು ಭಾನುವಾರದ ಉಪಾಸನೆಯಲ್ಲಿ ಭಕ್ತಿಗೀತೆಗಳನ್ನು ಹಾಡುತ್ತಿದ್ದನು. ಒಮ್ಮೆ ನರೇಂದ್ರನು ಒಂದು ಅಥವಾ ಎರಡು ವಾರಗಳವರೆಗೆ ದಕ್ಷಿಣೇಶ್ವರಕ್ಕೆ ಹೋಗಲಿಲ್ಲ. ಶ್ರೀರಾಮಕೃಷ್ಣರು ಬಹಳ ದಿನಗಳವರೆಗೆ ಕಾದು ಕೊನೆಗೆ ನಿರಾಸೆಯಿಂದ ತಾವೇ ಅವನನ್ನು ನೋಡಲು ಕಲ್ಕತ್ತೆಗೆ ಹೋಗುವುದಾಗಿ ನಿರ್ಧರಿಸಿದರು. ಅನಂತರ ಅವರಿಗನ್ನಿಸಿತು, ಅಂದು ಭಾನುವಾರವಾದುದರಿಂದ ನರೇಂದ್ರನು ಸಿಕ್ಕಲಿಕ್ಕಿಲ್ಲ ಎಂದು. ಏಕೆಂದರೆ ಅವನು ಬೇರೆ ಯಾರನ್ನಾದರೂ ನೋಡಲು ಹೋಗಿರುತ್ತಾನೆ. ಬ್ರಹ್ಮಸಮಾಜಕ್ಕೆ ಹೋದರೆ ಅವನನ್ನು ಖಂಡಿತ ಸಂಧಿಸಬಹುದು ಎಂದು ಅವರು ತೀರ್ಮಾನಕ್ಕೆ ಬಂದರು. ಅಲ್ಲಿಗೆ ಅವನು ಸಂಜೆಯ ಉಪಾಸನೆಯ ವೇಳೆಗೆ ಭಕ್ತಿಗೀತೆಗಳನ್ನು ಹಾಡಲು ಬಂದೇ ಬರುತ್ತಾನೆ. ತಾವು ಇದ್ದಕ್ಕಿದ್ದಂತೆಯೆ ಅನಿರೀಕ್ಷಿತವಾಗಿ ಅಲ್ಲಿಗೆ ಹೋದರೆ ಬ್ರಾಹ್ಮಭಕ್ತರು ಅಸಂತುಷ್ಟರಾಗಬಹುದು ಎಂದು ಶ್ರೀರಾಮಕೃಷ್ಣರ ಮನಸ್ಸಿಗೆ ಹೊಳೆಯಿತು. ಆದರೆ ಮರುಕ್ಷಣವೇ ಅವರಿಗನ್ನಿಸಿತು : "ಹಾಗೇಕೆ ಆಗಬೇಕು, ನಾನು ಅನೇಕ ಬಾರಿ ಕೇಶವನ ಸಮಾಜಕ್ಕೆ ಆ ರೀತಿ ಹೋಗಿರುವೆನು. ಅವರು ಅಂಥ ಸಂದರ್ಭಗಳಲ್ಲಿ ಯಾವಾಗಲೂ ಸಂತೋಷಗೊಂಡಿರಲಿಲ್ಲವೆ ? ವಿಜಯ, ಶಿವನಾಥ ಮುಂತಾದ ಸಾಧಾರಣ ಬ್ರಹ್ಮ ಸಮಾಜದವರು ದಕ್ಷಿಣೇಶ್ವರಕ್ಕೆ ಆಗಾಗ ಬಂದು ಹೋಗುವುದಿಲ್ಲವೇ ?" ಹೀಗೆ ಅವರು ನಿರ್ಣಯಕ್ಕೆ ಬರುವಾಗ ಸರಳ ಹೃದಯದ ಶ್ರೀರಾಮಕೃಷ್ಣರಿಗೆ ಒಂದು ಮುಖ್ಯ ಅಂಶ ಹೊಳೆಯಲೇ ಇಲ್ಲ. ಶ್ರೀರಾಮಕೃಷ್ಣರೆಡೆಗೆ ಬರತೊಡಗಿದ ಮೇಲೆ ಕೇಶವ ಮತ್ತು ವಿಜಯರಲ್ಲಿ ಆದ ಧಾರ್ಮಿಕ ಪರಿವರ್ತನೆಯನ್ನು ಗಮನಿಸಿ ಶಿವನಾಥ ಮತ್ತು ಇನ್ನೂ ಅನೇಕ ಸಾಧಾರಣ ಬ್ರಹ್ಮಸಮಾಜದವರು ಕ್ರಮೇಣ ಅವರೆಡೆಗೆ ಬರುವುದನ್ನು ನಿಲ್ಲಿಸಿದ್ದರು. ಈ ಅಂಶವನ್ನು ಗಮನಿಸದಿರುವುದು ಶ್ರೀರಾಮಕೃಷ್ಣರಿಗೆ ಸ್ವಾಭಾವಿಕವೇ ಆಗಿತ್ತು. ಏಕೆಂದರೆ ಮನುಷ್ಯನು ಉನ್ನತ ಆಧ್ಯಾತ್ಮಿಕ ಪ್ರಜ್ಞಾಸ್ತರಗಳಿಗೆ ಏರಿದಂತೆಲ್ಲ ಹಿಂದಿನ ಆಧ್ಯಾತ್ಮಿಕ ಭಾವನೆಗಳು ಬದಲಾಗುತ್ತವೆ ಎಂಬುದು ಶ್ರೀರಾಮಕೃಷ್ಣರಿಗೆ ಮೊದಲಿನಿಂದಲೂ ವೇದ್ಯವಾಗಿತ್ತು. ಆದ್ದರಿಂದ ಸತ್ಯವನ್ನು ಪ್ರೀತಿಸುವ ಮತ್ತು ಅದಕ್ಕಾಗಿ ಹೋರಾಡುವ ಬ್ರಹ್ಮಸಮಾಜದವರು ಈಗ ಬೇರೆ ಮಾರ್ಗವನ್ನು ಹಿಡಿದು ಆಧ್ಯಾತ್ಮಿಕ ಅನುಭವಗಳಿಗೆ ಒಂದು ಮಿತಿಯನ್ನು ಕಲ್ಪಿಸುತ್ತಾರೆಂಬುದು ಶ್ರೀರಾಮಕೃಷ್ಣರಿಗೆ ಹೊಳೆಯುವುದಾದರೂ ಹೇಗೆ ?

ಆಗ ಸಂಜೆ. ನೂರಾರು ಬ್ರಾಹ್ಮ ಭಕ್ತರು ಭಕ್ತಿಯ ಆವೇಶದಲ್ಲಿ "ಸತ್ಯಂ ಜ್ಞಾನಂ ಅನಂತಂ ಬ್ರಹ್ಮ" ಇತ್ಯಾದಿ ಮಂತ್ರಗಳನ್ನು ಪಠಿಸುತ್ತಿದ್ದರು. ಅವರ ಮನಸ್ಸು ಭಗವಂತನ ಪಾದ ಪದ್ಮದಲ್ಲಿಯೇ ನೆಲೆಸಿತ್ತು. ಪ್ರಾರ್ಥನೆ ಮತ್ತು ಧ್ಯಾನ ಕ್ರಮೇಣ ಸಮಾಪ್ತಿಗೊಂಡಿತು. ಈಗ ಆಚಾರ್ಯನು ವೇದಿಕೆಯ ಮೇಲೆ ಕುಳಿತು ಬ್ರಾಹ್ಮ ಭಕ್ತರಿಗೆ

ಆಧ್ಯಾತ್ಮಿಕ ಉಪದೇಶವನ್ನು ನೀಡತೊಡಗಿದನು. ಇದೇ ಸಂದರ್ಭದಲ್ಲಿ ಶ್ರೀರಾಮ ಕೃಷ್ಣರು ಅರ್ಧ ಬಾಹ್ಯದಶೆಯಲ್ಲಿ ಬ್ರಾಹ್ಮ ಮಂದಿರವನ್ನು ಪ್ರವೇಶಿಸಿದರು. ಅವರು ನೇರವಾಗಿ ವೇದಿಕೆಯ ಮೇಲೆ ಕುಳಿತಿದ್ದ ಆಚಾರ್ಯನೆಡೆಗೆ ಹೋದರು. ಅಲ್ಲಿ ನೆರೆದಿದ್ದ ಅನೇಕರಿಗೆ ಅವರ ಪರಿಚಯವಿತ್ತು. ಆದ್ದರಿಂದ ಅಲ್ಲಿ ನೆರೆದಿದ್ದವರಿಗೆ ಅವರು ಬಂದಿರುವ ವಿಚಾರ ತಿಳಿಯಲು ಹೆಚ್ಚು ಸಮಯ ಹಿಡಿಯಲಿಲ್ಲ. ಅವರನ್ನು ಹಿಂದೆ ನೋಡಿರದ ಕೆಲ ವರು ನೆಲದ ಮೇಲೆಯೂ, ಬೆಂಚಿನ ಮೇಲೆಯೂ ಅವರನ್ನು ನೋಡಲು ಎದ್ದು ನಿಂತರು. ಹೀಗೆ ಸಭೆಯಲ್ಲಿ ಗಲಾಟೆ, ಗೊಂದಲ ಉಂಟಾಯಿತು, ಆಚಾರ್ಯನು ತನ್ನ ಉಪನ್ಯಾಸ ವನ್ನು ನಿಲ್ಲಿಸಬೇಕಾಯಿತು, ನರೇಂದ್ರನು ಗಾಯಕರ ಗುಂಪಿನಲ್ಲಿ ಕುಳಿತಿದ್ದನು. ಶ್ರೀರಾಮ ಕೃಷ್ಣರ ಅನಿರೀಕ್ಷಿತ ಭೇಟಿಯ ಕಾರಣ ಅವನಿಗೆ ತಿಳಿದು ಅವರ ಹತ್ತಿರ ಬಂದನು. ಆದರೆ ವಿಜಯ ಮುಂತಾದವರಲ್ಲಿ ಮತಭೇದಕ್ಕೆ ಶ್ರೀರಾಮಕೃಷ್ಣರೇ ಕಾರಣರಾದುದರಿಂದ ವೇದಿಕೆಯ ಮೇಲಿದ್ದ ಆಚಾರ್ಯ ಮತ್ತು ಇತರ ಪ್ರಮುಖ ವ್ಯಕ್ತಿಗಳು ತುಂಬಾ ಉದಾ ಸೀನರಾಗಿದ್ದು ಸಾಮಾನ್ಯ ಆಗಂತುಕರಿಗೆ ತೋರಿಸಬೇಕಾದ ಮರ್ಯಾದೆಯನ್ನೂ ಶ್ರೀರಾಮಕೃಷ್ಣರಿಗೆ ತೋರಿಸಲಿಲ್ಲ.

ಶ್ರೀರಾಮಕೃಷ್ಣರು ಯಾವ ದಿಕ್ಕಿಗೂ ತಿರುಗದೆ ನೇರವಾಗಿ ವೇದಿಕೆಯ ಮೇಲೆ ಹೋಗಿ ಸಮಾಧಿಸ್ಥರಾದರು. ಸಭಿಕರೆಲ್ಲರೂ ಅವರ ಆ ಸ್ಥಿತಿಯನ್ನು ನೋಡುವುದರಲ್ಲಿ ಅತ್ಯಂತ ಕುತೂಹಲಿಗಳಾದರು. ಇದರಿಂದ ಸಭೆಯ ಗಲಾಟೆ, ಗೊಂದಲ ಇನ್ನೂ ಅಧಿಕ ವಾಯಿತು. ಈ ಗೊಂದಲವನ್ನು ತಡೆಯಲು ಅನಿಲದೀಪವನ್ನು ಆರಿಸಿಬಿಟ್ಟರು. ಇದ ರಿಂದ ಮತ್ತಷ್ಟು ಗಲಾಟೆ ಅಧಿಕವಾಗಿ ಕತ್ತಲೆಯಿಂದ ಹೊರಬರಲು ಜನ ಬಾಗಿಲ ಕಡೆ ನುಗ್ಗಿದರು.

16. ಶ್ರೀರಾಮಕೃಷ್ಣರನ್ನು ಯಾರೂ ಸ್ವಾಗತಿಸದಿರುವುದನ್ನು ನೋಡಿ ನರೇಂದ್ರ ನಿಗೆ ತುಂಬಾ ವೇದನೆಯಾಯಿತು. ಈ ಕತ್ತಲೆಯಿಂದ ಅವರನ್ನು ಮಂದಿರದಿಂದ ಕರೆದು ಕೊಂಡು ಬರುವುದು ಹೇಗೆ ಎಂಬುದೇ ಅವನಿಗೆ ದೊಡ್ಡ ಸಮಸ್ಯೆಯಾಯಿತು. ಅನಂತರ ಶ್ರೀರಾಮಕೃಷ್ಣರ ಸಮಾಧಿ ಭಂಗವಾದ ಕೂಡಲೇ ಮಂದಿರದ ಹಿಂಬಾಗಿಲಿನಿಂದ ಅವ ರನ್ನು ಹೇಗೊ ಕರೆದುಕೊಂಡು ಬಂದು ಗಾಡಿಯಲ್ಲಿ ಕೂರಿಸಿ ದಕ್ಷಿಣೇಶ್ವರಕ್ಕೆ ಕಳುಹಿಸಿ ದನು. ನರೇಂದ್ರನು ಹೇಳುತ್ತಿದ್ದನು : "ನನ್ನ ಸಲುವಾಗಿ ಅಂದು ಶ್ರೀರಾಮಕೃಷ್ಣರಿಗೆ ಅವ ಮಾನವಾಯಿತಲ್ಲ ಎಂದು ನನ್ನ ಮನಸ್ಸಿಗೆ ಎಷ್ಟೊಂದು ವ್ಯಥೆಯಾಯಿತೆಂಬುದನ್ನು ಹೇಳಲಾಗುವುದಿಲ್ಲ. ಅವರು ಆ ರೀತಿ ಮಾಡಿದುದಕ್ಕಾಗಿ ಅವರನ್ನು ಅಂದು ತುಂಬಾ ತರಾಟೆಗೆ ತೆಗೆದುಕೊಂಡೆ. ಅವರಾದರೊ ಈ ಘಟನೆಯಿಂದ ಖಿನ್ನರಾಗಲೂ ಇಲ್ಲ, ನನ್ನ ಮಾತಿಗೆ ಕಿವಿಗೊಡಲೂ ಇಲ್ಲ.

17. "ನನ್ನ ಮೇಲಿನ ಪ್ರೀತಿಯ ಸಲುವಾಗಿ ತಮ್ಮ ಕಡೆಗೆ ಅವರ ಲಕ್ಷ್ಯ ಸ್ವಲ್ಪವೂ ಇಲ್ಲದಿರುವುದನ್ನು ನೋಡಿ ಕೆಲವೊಮ್ಮೆ ಅವರನ್ನು ಕಟುವಾಗಿ ನಿಂದಿಸುವುದಕ್ಕೂ ಹಿಂಜ ರಿಯುತ್ತಿರಲಿಲ್ಲ. ಹೇಳುತ್ತಿದ್ದೆ ; 'ಭರತರಾಜನು ಹರಿಣವನ್ನು ಚಿಂತಿಸುತ್ತಾ ಸಾವಿನ

ನಂತರ ಹರಿಣವೇ ಆದ ಎಂದು ಪುರಾಣದಲ್ಲಿದೆ. ಇದು ಸತ್ಯವಾದರೆ ನನ್ನ ಬಗ್ಗೆ ಈ ರೀತಿ ಚಿಂತಿಸುವುದರ ಪರಿಣಾಮ ಏನಾದೀತು ಎಂಬುದರ ಬಗ್ಗೆ ನೀವು ಸ್ವಲ್ಪ ಆಲೋಚಿಸಬೇಕು.' ಬಾಲಕ ಸ್ವಭಾವದ ಶ್ರೀರಾಮಕೃಷ್ಣರು ಈ ಮಾತನ್ನು ಕೇಳಿ ತುಂಬಾ ಚಿಂತಿತರಾಗಿದ್ದರು. ಅವರು ಹೇಳಿದ್ದರು : 'ನೀನು ಸರಿಯಾಗಿಯೆ ಹೇಳಿದೆ. ಹೌದು ಹಾಗಾದರೆ ಏನಾಗುವುದು ? ನನಗೆ ಮಾತ್ರ ನಿನ್ನನ್ನು ನೋಡದೆ ಇರಲಾಗುವುದಿಲ್ಲ.' ತುಂಬಾ ವ್ಯಥೆಗೊಂಡು ಈ ವಿಷಯವನ್ನು ತಿಳಿಸಲು ಜಗನ್ಮಾತೆಯ ಬಳಿಗೆ ಹೋದರು. ಸ್ವಲ್ಪ ಹೊತ್ತಿನ ನಂತರ ನಗುನಗುತ್ತ ಹಿಂತಿರುಗಿ ಬಂದು ಹೇಳಿದರು : 'ಹೋಗೊ ಮೂರ್ಖ, ನಿನ್ನ ಮಾತನ್ನು ನಾನು ಕೇಳುವುದಿಲ್ಲ. ನೀನು ಅವನನ್ನು ನಾರಾಯಣನೆಂದೇ ತಿಳಿದಿರುವುದರಿಂದ ಅಷ್ಟೊಂದು ಪ್ರೀತಿಸುತ್ತೀಯೆ. ಎಂದು ಅವನಲ್ಲಿ ನಾರಾಯಣನನ್ನು ನೋಡಲಾಗುವುದಿಲ್ಲವೊ ಅಂದು ಅವನ ಮುಖವನ್ನೂ ನೋಡಲಾರೆ ಎಂದು ತಾಯಿ ಹೇಳಿದಳು.' ಹೀಗೆ ನನ್ನ ಮೇಲೆ ಅವರಿಗಿದ್ದ ವಿಶೇಷ ಪ್ರೀತಿಯ ವಿರುದ್ಧವಾಗಿ ನಾನು ಹೇಳಿದ ಎಲ್ಲಾ ಮಾತುಗಳನ್ನು ಅಂದು ಒಂದೇ ಮಾತಿನಲ್ಲಿ ತಳ್ಳಿಹಾಕಿಬಿಟ್ಟರು."

## ಆರನೆಯ ಅಧ್ಯಾಯ

## ದ್ವಿತೀಯ ಪಾದ

# ಶ್ರೀರಾಮಕೃಷ್ಣ ಮತ್ತು ನರೇಂದ್ರನಾಥರ ಅಲೌಕಿಕ ಸಂಬಂಧ

**1. ನರೇಂದ್ರನ ಶ್ರೇಷ್ಠತೆಯ ಬಗ್ಗೆ ಶ್ರೀರಾಮಕೃಷ್ಣರ ಮಾತು 2. ಮಾರ್ವಾಡಿಗಳು ಕೊಟ್ಟ ಆಹಾರವಸ್ತುವನ್ನು ಅವರು ನರೇಂದ್ರನಿಗೆ ಕೊಡುತ್ತಿದ್ದರು 3. ನರೇಂದ್ರನು ನಿಷಿದ್ಧ ಆಹಾರವನ್ನು ಸೇವಿಸಿದರೆ ಅದು ದೋಷವಲ್ಲ 4. ಶ್ರೀರಾಮಕೃಷ್ಣರಿಗೆ ನರೇಂದ್ರನ ಮೇಲಿದ್ದ ಪ್ರೀತಿ ವಿಶ್ವಾಸದಿಂದ ಅವನು ಹೆಚ್ಚು ಪ್ರಗತಿಯನ್ನು ಸಾಧಿಸುವಂತಾಯಿತು 5. ನರೇಂದ್ರ ಮತ್ತು ಮಹೇಂದ್ರರ (ಮ) ವಾದ 6. ಭಕ್ತ ಕೇದಾರನಾಥ ಚಟ್ಟೋಪಾಧ್ಯಾಯ 7. ಕೇದರನ ತಾರ್ಕಿಕ ನೈಪುಣ್ಯ, ನರೇಂದ್ರನೊಡನೆ ಅವನ ಪರಿಚಯ 8. ಕೇದಾರನ ಬಗ್ಗೆ ನರೇಂದ್ರನ ಬಿಚ್ಚು ಮಾತು 9. ಸಾಕಾರ ದೇವರನ್ನು ಪೂಜಿಸಿದುದಕ್ಕೆ ರಾಖಾಲನನ್ನು ನರೇಂದ್ರ ಬಯ್ಯುತ್ತಾನೆ 10. ಅದ್ವೈತ ಮಾರ್ಗದಲ್ಲಿ ನರೇಂದ್ರನನ್ನು ತೊಡಗಿಸಲು ಶ್ರೀರಾಮಕೃಷ್ಣರ ಪ್ರಯತ್ನ, ನರೇಂದ್ರನ ಪ್ರತಿಕ್ರಿಯೆ 11. ಪ್ರತಾಪಚಂದ್ರ ಹಾಜ್ರ 12. ಅವನಿಗೂ ನರೇಂದ್ರನಿಗೂ ಇದ್ದ ಸಂಬಂಧ 13. ನರೇಂದ್ರನು ದಕ್ಷಿಣೇಶ್ವರಕ್ಕೆ ಬಂದಾಗ ಶ್ರೀರಾಮಕೃಷ್ಣರ ವರ್ತನೆ 14. ಹಾಜ್ರನೊಡನೆ ನರೇಂದ್ರನ ಅದ್ವೈತ ಸತ್ಯದ ಪರಿಹಾಸ್ಯ, ಶ್ರೀರಾಮಕೃಷ್ಣರು ನರೇಂದ್ರನನ್ನು ಸ್ಪರ್ಶಿಸಿದುದು 15. ಈ ಸ್ಪರ್ಶದ ಪರಿಣಾಮವಾಗಿ ನರೇಂದ್ರನಿಗೆ ಅದ್ಭುತ ಅನುಭವವಾಗುತ್ತದೆ. 16. ಶ್ರೀರಾಮಕೃಷ್ಣರ ಅಸಾಮಾನ್ಯ ಶಕ್ತಿ—ಇದರ ಸಂಬಂಧವಾಗಿ ನರೇಂದ್ರನು ಹೇಳಿದ ಒಂದು ಅದ್ಭುತ ಘಟನೆ 17. ಗ್ರಂಥಕಾರನ ಮನೆಯನ್ನು ಪ್ರವೇಶಿಸಿದಾಗ ನರೇಂದ್ರನಿಗೆ ಒಂದು ವಿಚಿತ್ರ ಅನುಭವವಾಯಿತು**

1. ನರೇಂದ್ರನಾಥನ ಪವಿತ್ರ ಹೃದಯ ಮನಸ್ಸುಗಳು ಉಚ್ಚ ಭಾವಗಳನ್ನು ಆಶ್ರಯಿಸಿಯೇ ಯಾವಾಗಲೂ ಕಾರ್ಯ ಪ್ರವೃತ್ತವಾಗುವುವು. ಇದನ್ನು ಶ್ರೀರಾಮಕೃಷ್ಣರ ಸೂಕ್ಷ್ಮ ದೃಷ್ಟಿ ಮೊದಲಿನಿಂದಲೂ ಅರಿತಿತ್ತು. ಆದ್ದರಿಂದ ನರೇಂದ್ರನೊಡನೆ ಅವರ ಆಚರಣೆ ಯಾವಾಗಲೂ ಬೇರೆ ರೀತಿಯೇ ಆಗಿರುತ್ತಿತ್ತು. ಭಗವದ್ಭಕ್ತಿಗೆ ಹಾನಿಯಾಗಬಾರದೆಂದು ಆಹಾರ, ವಿಹಾರ, ನಿದ್ರೆ, ಜಪಧ್ಯಾನ ಮುಂತಾದ ವಿಷಯಗಳಲ್ಲಿ ಕಟ್ಟುನಿಟ್ಟಿನ ನಿಯಮವನ್ನು ತಾವೇ ಪಾಲಿಸುತ್ತಾ ಇತರ ಭಕ್ತರಿಗೂ ಹಾಗೇ ಮಾಡಲು ಪ್ರೋತ್ಸಾಹ ನೀಡುತ್ತಿದ್ದರು. ನರೇಂದ್ರನು ಈ ನಿಯಮಗಳನ್ನು ಉಲ್ಲಂಘಿಸಿದರೂ ಕೂಡ ಅವನಿಗೆ ಏನೂ ಹಾನಿ ಉಂಟಾಗುವುದಿಲ್ಲ ಎಂದು ಅವರೇ ನಿಃಸಂಕೋಚವಾಗಿ ಎಲ್ಲರ ಮುಂದೆ ಹೇಳುತ್ತಿದ್ದರು. 'ನರೇಂದ್ರ ನಿತ್ಯಸಿದ್ಧ,' 'ನರೇಂದ್ರನ ಒಳಗೆ ಯಾವಾ

ಗಲೂ ಜ್ಞಾನಾಗ್ನಿಯು ಜ್ವಲಿಸುತ್ತಿದ್ದು ಎಲ್ಲಾ ಪ್ರಕಾರದ ದೋಷಗಳನ್ನೂ ಬೂದಿ ಮಾಡುತ್ತಿದೆ. ಆದ್ದರಿಂದ ಅವನು ಎಲ್ಲಿ ಹೇಗೆ ಏನು ತಿಂದರೂ ಅವನ ಮನಸ್ಸು ಕಲುಷಿತವಾಗುವುದಿಲ್ಲ ಅಥವಾ ವಿಕ್ಷಿಪ್ತಗೊಳ್ಳುವುದಿಲ್ಲ.' 'ಅವನು ಜ್ಞಾನ ಖಡ್ಗದ ಸಹಾಯದಿಂದ ಮಾಯೆಯ ಸಮಸ್ತ ಬಂಧನಗಳನ್ನೂ ತುಂಡು ತುಂಡಾಗಿ ಕತ್ತರಿಸುತ್ತಿರುತ್ತಾನೆ. ಮಹಾಮಾಯೆಯು ಅವನನ್ನು ಯಾವುದೇ ರೀತಿಯಲ್ಲೂ ತನ್ನ ವಶಪಡಿಸಿಕೊಳ್ಳಲು ಅಸಮರ್ಥಳಾಗಿರುವಳು'. ನರೇಂದ್ರನ ವಿಷಯವಾಗಿ ಇಂಥ ಅನೇಕ ಮಾತುಗಳನ್ನು ಶ್ರೀರಾಮಕೃಷ್ಣರ ಬಾಯಿಂದ ಯಾವಾಗಲೂ ಕೇಳುತ್ತಾ ನಾವು ಆಶ್ಚರ್ಯಚಕಿತರಾಗುತ್ತಿದ್ದೆವು.

2. ಮಾರ್ವಾಡಿ ಭಕ್ತರು ಶ್ರೀರಾಮಕೃಷ್ಣರನ್ನು ನೋಡಲು ಬಂದಾಗ ಅವರಿಗೆ ಕಲ್ಲುಸಕ್ಕರೆ, ಗೇರುಬೀಜ, ಬಾದಾಮಿ, ದ್ರಾಕ್ಷಿ ಮುಂತಾದ ಖಾದ್ಯವಸ್ತುಗಳನ್ನು ಅರ್ಪಿಸಿ ಹೋಗುತ್ತಿದ್ದರು. ಶ್ರೀರಾಮಕೃಷ್ಣರು ಇವುಗಳಲ್ಲಿ ಯಾವುದನ್ನೂ ತಾವೂ ಸ್ವೀಕರಿಸದೆ ನೆರೆದ ಇತರ ಭಕ್ತರುಗಳಿಗೂ ಕೊಡುತ್ತಿರಲಿಲ್ಲ. ಅವರು ಹೇಳುತ್ತಿದ್ದರು : "ಈ ಮಾರ್ವಾಡಿಗಳಿಗೆ ನಿಷ್ಕಾಮ ಭಾವದಿಂದ ದಾನ ಮಾಡುವುದೇ ತಿಳಿಯದು. ಸಾಧುವಿಗೆ ಒಂದು ತಾಂಬೂಲ ನೀಡುವಾಗಲೂ ಅದರ ಹಿಂದೆ ಹದಿನಾರು ಕಾಮನೆಗಳು ಇರುತ್ತವೆ. ಈ ರೀತಿ ಸಕಾಮದಿಂದ ಕೊಟ್ಟ ಅನ್ನ ಭೋಜನ ಭಕ್ತಿಗೆ ಹಾನಿಯನ್ನುಂಟುಮಾಡುತ್ತದೆ." ಈಗ ಅವರು ಕೊಟ್ಟ ಪದಾರ್ಥಗಳನ್ನು ಏನು ಮಾಡುವುದು ಎಂಬ ಪ್ರಶ್ನೆ ಏಳುತ್ತದೆ. ಶ್ರೀರಾಮಕೃಷ್ಣರು ಹೇಳುತ್ತಿದ್ದರು : "ಹೋಗು, ಇವನ್ನೆಲ್ಲ ನರೇಂದ್ರನಿಗೆ ಕೊಟ್ಟು ಬಿಟ್ಟು ಬಾ. ಅವನು ಇವನ್ನೆಲ್ಲ ತಿಂದರೂ ಅವನಿಗೆ ಏನೂ ತೊಂದರೆ ಉಂಟಾಗುವುದಿಲ್ಲ."

3. ನರೇಂದ್ರನು ಹೋಟೇಲಿನಲ್ಲಿ ತಿಂದು ಬಂದು ಶ್ರೀರಾಮಕೃಷ್ಣರಿಗೆ ಹೇಳುತ್ತಿದ್ದ : "ಮಹಾಶಯರೆ, ಇಂದು ಹೋಟೆಲ್‌ನಲ್ಲಿ ತಿನ್ನಬಾರದುದನ್ನು ತಿಂದು ಬಂದಿದ್ದೇನೆ." ಶ್ರೀರಾಮಕೃಷ್ಣರಿಗೆ ಗೊತ್ತು ತಮ್ಮಿಂದ ಹೊಗಳಿಸಿಕೊಳ್ಳಲು ಹಾಗೆ ಹೇಳಲಿಲ್ಲ ಎಂದು. ಶ್ರೀರಾಮಕೃಷ್ಣರಿಗೆ ಮೊದಲೇ ಎಚ್ಚರಿಕೆ ನೀಡಲು ಹಾಗೆ ಹೇಳಿದ್ದನು. ತಾನು ಆ ರೀತಿ ಹೋಟೆಲ್‌ನಲ್ಲಿ ತಿಂದು ಬಂದಿದ್ದರಿಂದ ತಮ್ಮನ್ನು ಮತ್ತು ಕೊಠಡಿಯಲ್ಲಿರುವ ನೀರಿನ ಪಾತ್ರೆ ಲೋಟ ಮುಂತಾದುವುಗಳನ್ನು ಸ್ಪರ್ಶಿಸುವುದಕ್ಕೆ ಅವರ ಆಕ್ಷೇಪಣೆ ಇರಬಹುದೆಂದು ಅವನು ಈ ವಿಷಯವನ್ನು ಅವರಿಗೆ ತಿಳಿಸಿದ್ದ. ಶ್ರೀರಾಮಕೃಷ್ಣರು ಕೂಡಲೇ ಉತ್ತರಿಸಿದ್ದರು : "ಅದರಿಂದ ನಿನಗೇನೂ ದೋಷವಿಲ್ಲ. ಯಾವನಾದರೂ ಹಂದಿ ಮತ್ತು ದನದ ಮಾಂಸವನ್ನು ತಿಂದು ಭಗವಂತನಲ್ಲಿ ಮನಸ್ಸನ್ನಿರಿಸಿದರೆ ಅದು ಪವಿತ್ರ ಹವಿಷ್ಯಾನ್ನ ಉಂಡಂತೆಯೆ. ಅದರ ಬದಲು ಯಾವನಾದರೂ ಸೊಪ್ಪು ತರಕಾರಿಯನ್ನು ತಿನ್ನುತ್ತಾ ಪ್ರಾಪಂಚಿಕ ಆಸೆಗಳಲ್ಲಿ ಮಗ್ನನಾಗಿದ್ದರೆ ಅದು ಯಾವುದೇ ರೀತಿಯಲ್ಲಿಯೂ ಹಂದಿ ಮತ್ತು ದನದ ಮಾಂಸವನ್ನು ತಿನ್ನುವುದಕ್ಕಿಂತ ಉತ್ತಮವಲ್ಲ, ನೀನು ನಿಷಿದ್ಧ ಆಹಾರವನ್ನು ಸೇವಿಸಿದರೆ ನಾನು ದೋಷವೆಂದು ಪರಿಗಣಿಸುವುದಿಲ್ಲ. (ಬೇರೆ

ಯವರ ಕಡೆ ನಿರ್ದೇಶಿಸಿ) ಅವರಲ್ಲಿ ಬೇರೆ ಯಾರಾದರೂ ಬಂದು ಹೇಳಿದ್ದರೆ ನಾನು ಅವನನ್ನು ಮುಟ್ಟುತ್ತಲೂ ಇರುತ್ತಿರಲಿಲ್ಲ.

4. ಹೀಗೆ ಮೊದಲಿನಿಂದಲೂ ಯಾವ ರೀತಿ ನರೇಂದ್ರನು ಶ್ರೀರಾಮಕೃಷ್ಣರ ಪ್ರೀತಿ ಮತ್ತು ಪ್ರಶಂಸೆಗೆ ಪಾತ್ರನಾದನು ಮತ್ತು ಎಲ್ಲ ವಿಷಯದಲ್ಲಿಯೂ ಸ್ವಾಧೀನತೆಯನ್ನು ಅನುಭವಿಸಿದನು ಎಂಬುದನ್ನು ಯಥಾವತ್ತಾಗಿ ಓದುಗರಿಗೆ ತಿಳಿಸಿಕೊಡಲು ಸಾಧ್ಯವಿಲ್ಲ. ಮಹಾನುಭಾವ ಶಿಷ್ಯನ ಆಂತರಿಕ ಶಕ್ತಿಗೆ ಇಷ್ಟೊಂದು ಮಾನ್ಯತೆಯನಿತ್ತು ಅವನೊಡನೆ ಈ ರೀತಿ ವ್ಯವಹರಿಸುವುದು ಬೇರೆ ಜಗದ್ಗುರುಗಳ ಜೀವನದಲ್ಲಿ ಕಂಡು ಬರುವುದೊ ಇಲ್ಲವೊ ಸಂದೇಹ. ತಮ್ಮ ಅಂತರಂಗ ವಿಷಯದಲ್ಲಿಯೂ ಅವನ ಅಭಿಪ್ರಾಯವನ್ನು ಕೇಳುತ್ತಿದ್ದರು. ಅವನೊಡನೆ ಚರ್ಚಿಸಿ ತಮ್ಮೆಡೆಗೆ ಬರುತ್ತಿದ್ದ ವ್ಯಕ್ತಿಗಳ ಮನಸ್ಥಿತಿಯನ್ನು ಪರೀಕ್ಷಿಸುತ್ತಿದ್ದರು. ಸರಿಯಾಗಿ ಪರೀಕ್ಷಿಸದೆ ಯಾವುದೇ ವಿಷಯವನ್ನು ಸತ್ಯವೆಂದು ಸ್ವೀಕರಿಸಲು ಅವನನ್ನು ಎಂದೂ ಒತ್ತಾಯಿಸುತ್ತಿರಲಿಲ್ಲ. ಶ್ರೀರಾಮಕೃಷ್ಣರ ಈ ರೀತಿಯ ಆಚರಣೆಯಿಂದಾಗಿ ನರೇಂದ್ರನ ಆತ್ಮವಿಶ್ವಾಸ, ಪುರುಷಕಾರ, ಸತ್ಯಪ್ರಿಯತೆ, ಮತ್ತು ಶ್ರದ್ಧಾಭಕ್ತಿ ಸ್ವಲ್ಪಕಾಲದಲ್ಲಿಯೇ ನೂರುಮಡಿ ವೃದ್ಧಿಯಾದುವು ಎಂಬುದನ್ನು ಹೇಳಬೇಕಾಗಿಯೇ ಇಲ್ಲ. ಅವರ ಅಪಾರ ವಿಶ್ವಾಸ ಮತ್ತು ಪ್ರೀತಿ ಅವನನ್ನು ದುರ್ಭೇದ್ಯ ಕೋಟೆಯಂತೆ ರಕ್ಷಿಸಿತು, ಸ್ವತಂತ್ರ ಮನೋಭಾವದ ನರೇಂದ್ರನನ್ನು ಅವನಿಗರಿವಿಲ್ಲದಂತೆಯೆ ಯಾವಾಗಲೂ ಎಲ್ಲ ಬಗೆಯ ಪ್ರಲೋಭನೆ ಮತ್ತು ಹೀನ ಕೃತ್ಯಗಳಿಂದ ರಕ್ಷಿಸಿತು. ಹೀಗೆ ಪ್ರಥಮ ಭೇಟಿಯಾದಂದಿನಿಂದ ಒಂದು ವರ್ಷದ ಒಳಗೆಯೆ ನರೇಂದ್ರನು ಶ್ರೀರಾಮಕೃಷ್ಣರ ಪ್ರೀತಿಗೆ ತನ್ನನ್ನು ಸಂಪೂರ್ಣ ಮಾರಿಕೊಂಡಿದ್ದನು. ಆದರೆ ಶ್ರೀರಾಮಕೃಷ್ಣರ ಅಹೇತುಕ ಪ್ರೇಮ ಪ್ರವಾಹ ಅವನನ್ನು ಮೆಲ್ಲಮೆಲ್ಲಗೆ ಆ ಹಾದಿಯಲ್ಲಿ ಎಷ್ಟುದೂರ ಕರೆದುಕೊಂಡು ಹೋಗಿತ್ತು ಎಂಬುದನ್ನು ಆತ ಸಂಪೂರ್ಣ ತಿಳಿದುಕೊಂಡಿದ್ದನೇನು ? ಇಲ್ಲವೆಂದೇ ಅನಿಸುತ್ತದೆ. ಶ್ರೀರಾಮಕೃಷ್ಣರ ದಿವ್ಯಪ್ರೇಮವನ್ನು ಪಡೆದು ಅವನ ಹೃದಯ ಶುದ್ಧ ಆನಂದದಿಂದ ತುಂಬಿಹೋಗಿತ್ತು. ಆದ್ದರಿಂದ ಆ ಪ್ರೀತಿ ಎಷ್ಟು ದುರ್ಲಭವಾದುದು, ಸ್ವಾರ್ಥಪರ ಸಾಂಸಾರಿಕ ಪ್ರೀತಿಗೆ ಹೋಲಿಸಿದರೆ ಅದೆಷ್ಟು ಅಪೂರ್ವವಾದುದು ಎಂಬುದನ್ನು ಅವನಿನ್ನೂ ತಿಳಿಯುವುದಿತ್ತು. ಇದನ್ನು ಸ್ಪಷ್ಟಪಡಿಸಲು ಕೆಲವು ದೃಷ್ಟಾಂತಗಳನ್ನು ಇಲ್ಲಿ ಕೊಡುತ್ತೇವೆ.

5. ನರೇಂದ್ರನಾಥನು ಶ್ರೀರಾಮಕೃಷ್ಣರೆಡೆಗೆ ಬಂದು ಕೆಲವು ತಿಂಗಳುಗಳು ಕಳೆದಿದ್ದುವು. ೧೮೮೨ ಫೆಬ್ರುವರಿ ತಿಂಗಳಿನಲ್ಲಿ 'ಶ್ರೀ ಶ್ರೀರಾಮಕೃಷ್ಣ ಕಥಾಮೃತ'ದ ಕರ್ತೃವಾದ ಮಹೇಂದ್ರನಾಥಗುಪ್ತನು ಶ್ರೀರಾಮಕೃಷ್ಣರ ಪುಣ್ಯ ದರ್ಶನವನ್ನು ಪಡೆದನು. ಅವನು ವರಾಹನಗರದಲ್ಲಿರುವಾಗ ಮತ್ತೆ ಮತ್ತೆ ಶ್ರೀರಾಮಕೃಷ್ಣರೆಡೆಗೆ ಹೋಗುವ ಅವಕಾಶ ದೊರಕಿತು. ಶ್ರೀರಾಮಕೃಷ್ಣರ ಒಂದೆರಡು ಜ್ಞಾನಪೂರ್ಣ ಕಟುವಾಕ್ಯಗಳು ಅವನ ಜ್ಞಾನಾಭಿಮಾನವನ್ನು ಹೋಗಲಾಡಿಸಿ ಅವನನ್ನು ವಿನೀತ ಶಿಕ್ಷಾರ್ಥಿಯನ್ನಾಗಿ ಪರಿವರ್ತಿಸಿದುವು. ಈ ಎಲ್ಲ ವಿಷಯಗಳನ್ನೂ ಅವನು ತನ್ನ ಸ್ವಂತ ಗ್ರಂಥದಲ್ಲಿ ಬರೆದಿರು

ವನು. ನರೇಂದ್ರನಾಥನು ಹೇಳುತ್ತಾನೆ : "ಆ ಸಮಯದಲ್ಲಿ ಒಂದು ದಿವಸ ನಾನು ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಹತ್ತಿರವೇ ರಾತ್ರಿಯನ್ನು ಕಳೆದೆ. ಪಂಚವಟಿಯಲ್ಲಿ ಸ್ವಲ್ಪಹೊತ್ತು ಸುಮ್ಮನೆ ಕುಳಿತುಕೊಂಡಿರುವಾಗ ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆಯೆ ಅಲ್ಲಿಗೆ ಬಂದರು. ಅವರು ನನ್ನ ಕೈಯನ್ನು ಹಿಡಿದು ಮುಗುಳ್ನಗುತ್ತಾ ಹೇಳಿದರು, : 'ನಿನ್ನ ಬುದ್ಧಿ ಮತ್ತು ಜ್ಞಾನಗಳನ್ನು ಇವತ್ತು ಪರೀಕ್ಷಿಸಬಹುದು. ನೀನು ಎರಡೂವರೆ ಪರೀಕ್ಷೆಯನ್ನು ಮಾತ್ರ ಪಾಸಾಗಿರುವೆ. ಮೂರೂವರೆ ಪರೀಕ್ಷೆಯನ್ನು ಪಾಸು ಮಾಡಿರುವ ಉಪಾಧ್ಯಾಯನು ಇಂದು ಬಂದಿದ್ದಾನೆ. ಬಾ ಅವನೊಡನೆ ನೀನು ಹೇಗೆ ಸಂಭಾಷಿಸು ತ್ತೀಯೊ ನೋಡುತ್ತೇನೆ.' ಹಿಂದೆ ಮುಂದೆ ನೋಡುತ್ತಾ ನಾನು ಶ್ರೀರಾಮಕೃಷ್ಣರೊಡನೆ ಹೋಗಬೇಕಾಯಿತು. ನಾನು ಅವರ ಕೊಠಡಿಗೆ ಹೋಗಿ ಮಹೇಂದ್ರನಾಥರ ಪರಿಚಯ ವಾದ ಮೇಲೆ ವಿವಿಧ ವಿಷಯಗಳ ಬಗ್ಗೆ ಅವರೊಡನೆ ಮಾತನಾಡತೊಡಗಿದೆ. ನಮ್ಮನ್ನು ಹೀಗೆ ಮಾತನಾಡಲು ಬಿಟ್ಟು ಶ್ರೀರಾಮಕೃಷ್ಣರು ನಮ್ಮ ಸಂಭಾಷಣೆಯನ್ನು ಕೇಳುತ್ತಾ ನಮ್ಮನ್ನೇ ವೀಕ್ಷಿಸುತ್ತಾ ಕುಳಿತುಕೊಂಡರು. ಅನಂತರ ಮಹೇಂದ್ರನಾಥರು ಹೊರಟು ಹೋದ ಮೇಲೆ ಅವರು ಹೇಳಿದರು : 'ಅವನು ಆ ಪರೀಕ್ಷೆಗಳನ್ನು ಪಾಸು ಮಾಡಿದ್ದ ರೇನು ಬಂತು. ಉಪಾಧ್ಯಾಯನು ಹೆಣ್ಣಿನ ಸ್ವಭಾವದವನು—ತುಂಬಾ ನಾಚಿಕೆ. ಮಾತ ನಾಡುವುದಕ್ಕೇ ಆಗುವುದಿಲ್ಲ.' ಹೀಗೆ ಶ್ರೀರಾಮಕೃಷ್ಣರು ನನ್ನನ್ನು ಎಲ್ಲರೊಡನೆ ವಾದ ದಲ್ಲಿ ತೊಡಗಿಸಿ ಮಜಾ ನೋಡುತ್ತಿದ್ದರು."

6. ಕೇದರ್‌ನಾಥ್ ಚಟ್ಟೋಪಾಧ್ಯಾಯ ಶ್ರೀರಾಮಕೃಷ್ಣರ ಗೃಹಸ್ಥ ಭಕ್ತರಲ್ಲಿ ಒಬ್ಬನು. ನರೇಂದ್ರನಾಥನು ದಕ್ಷಿಣೇಶ್ವರಕ್ಕೆ ಬರುವುದಕ್ಕೆ ಮುಂಚಿನಿಂದಲೂ ಅವನು ಶ್ರೀರಾಮಕೃಷ್ಣರೆಡೆಗೆ ಬಂದು ಹೋಗುತ್ತಿದ್ದ. ಆದರೆ ಅವನಿಗೆ ಉದ್ಯೋಗವಿದ್ದುದು ಪೂರ್ವ ಬಂಗಾಳದ ಢಾಕಾದಲ್ಲಿ. ಇದರಿಂದಾಗಿ ವಿಶೇಷ ಹಬ್ಬದ ದಿನಗಳಲ್ಲದೆ ಬೇರೆ ಸಮಯಗಳಲ್ಲಿ ಶ್ರೀರಾಮಕೃಷ್ಣರೆಡೆಗೆ ಬರುವುದು ಅವನಿಗೆ ಕಷ್ಟವಾಗುತ್ತಿತ್ತು. ಕೇದಾರ ನಾಥನು ವೈಷ್ಣವ ತಂತ್ರದಲ್ಲಿ ಹೇಳಿರುವ ಭಾವಗಳನ್ನು ಅವಲಂಬಿಸಿ ಸಾಧನ ಮಾರ್ಗ ದಲ್ಲಿ ಮುಂದುವರಿಯುತ್ತಿದ್ದನು. ಭಜನೆ, ಕೀರ್ತನೆಗಳನ್ನು ಕೇಳಿದರೆ ಅವನ ಕಣ್ಣುಗಳಿಂದ ಧಾರಾಕಾರವಾಗಿ ಕಂಬನಿ ಸುರಿಯುತ್ತಿತ್ತು. ಇದರಿಂದಾಗಿ ಶ್ರೀರಾಮಕೃಷ್ಣರು ಅವನನ್ನು ಎಲ್ಲರ ಮುಂದೆ ತುಂಬಾ ಹೊಗಳುತ್ತಿದ್ದರು. ಕೇದಾರನಾಥನ ಭಗವದ್ಭಕ್ತಿಯನ್ನು ನೋಡಿ ಢಾಕಾದ ಅನೇಕ ಜನರಿಗೆ ಅವನ ಮೇಲೆ ಶ್ರದ್ಧಾ ಭಕ್ತಿ ಇತ್ತು. ಮತ್ತೆ ಅನೇಕರು ಅವನ ಉಪದೇಶದಂತೆ ಧರ್ಮ ಜೀವನವನ್ನು ನಡೆಸುತ್ತಿದ್ದರು. ಶ್ರೀರಾಮಕೃಷ್ಣರೆಡೆಗೆ ಅನೇಕ ಜನರು ಬರತೊಡಗಿದ ಮೇಲೆ ಅವರೊಡನೆ ಆಧ್ಯಾತ್ಮಿಕ ವಿಷಯವಾಗಿ ಮಾತನಾಡಿ ಮಾತನಾಡಿ ಸುಸ್ತಾಗಿ ಶ್ರೀರಾಮಕೃಷ್ಣರು ಜಗನ್ಮಾತೆಗೆ ಒಮ್ಮೆ ಹೀಗೆ ಹೇಳಿದ್ದರಂತೆ : "ತಾಯಿ, ನನಗಿನ್ನು ಇಷ್ಟು ಮಾತನಾಡಲಾಗುವುದಿಲ್ಲ. ನೀನು ಕೇದಾರ, ರಾಮ್, ಗಿರೀಶ್ ಮತ್ತು ವಿಜಯ ಇವರುಗಳಿಗೆ ಸ್ವಲ್ಪ ಸ್ವಲ್ಪ ಶಕ್ತಿಯನ್ನು ಕೊಡು. ಜನರು ಅವರೆಡೆಗೆ ಹೋಗಿ ಸ್ವಲ್ಪ ಕಲಿತು ಇಲ್ಲಿಗೆ ಬರಲಿ. ಒಂದೆರಡು ಮಾತಿನಿಂದಲೇ ಅವರಿಗೆ

ಚೈತನ್ಯ ಉಂಟಾಗಲಿ.' ಇದು ಬಹಳ ಮುಂದಿನ ವಿಷಯ.

7. ಸ್ವಲ್ಪ ಸಮಯದ ಮಟ್ಟಿಗೆ ಅವಕಾಶ ಮಾಡಿಕೊಂಡು ಕೇದಾರನು ಕಲ್ಕತ್ತೆಗೆ ಬಂದಿದ್ದನು. ಆಗಾಗ ಶ್ರೀರಾಮಕೃಷ್ಣರೆಡೆಗೆ ಬಂದು ಹೋಗುತ್ತಿದ್ದನು. ಶ್ರೀರಾಮಕೃಷ್ಣರು ಆ ಸಾಧಕ ಭಕ್ತನನ್ನು ಕಂಡು ಉತ್ಸಾಹಭರಿತರಾದರು. ತಮ್ಮೆಡೆಗೆ ಬರುತ್ತಿದ್ದ ಇತರ ಭಕ್ತರುಗಳಿಗೆ ಅವನ ಪರಿಚಯ ಮಾಡಿಸಿದರು. ಈ ಸಮಯದಲ್ಲಿ ಒಮ್ಮೆ ನರೇಂದ್ರನು ದಕ್ಷಿಣೇಶ್ವರಕ್ಕೆ ಬಂದಾಗ ಕೇದಾರನಾಥನನ್ನು ಸಂಧಿಸಿದನು ಮತ್ತು ಭಜನೆಯನ್ನು ಹಾಡುವಾಗ ಭಾವಾವೇಶದಲ್ಲಿದ್ದುದನ್ನು ಗಮನಿಸಿದ್ದನು. ಮುಂದೆ ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತಿನ ಮಟ್ಟಿಗೆ ಕೇದಾರ ಮತ್ತು ನರೇಂದ್ರರನ್ನು ವಾದದಲ್ಲಿ ತೊಡಗಿಸಿದರು. ಕೇದಾರನು ತನ್ನದೇ ಆದ ರೀತಿಯಲ್ಲಿ ಉತ್ತಮ ವಾದಿಯಾಗಿದ್ದ. ಆಗಾಗ ವ್ಯಂಗ್ಯೋಕ್ತಿಗಳಿಂದ ವಿರೋಧಿಯ ಅಯುಕ್ತಿಯನ್ನು ಖಂಡಿಸುತ್ತಿದ್ದ. ಒಂದು ದಿನ ಅವನು ವಿರೋಧಿಯ ಹುಟ್ಟಡಗಿಸಿದ ರೀತಿಯನ್ನು ನೋಡಿ ಶ್ರೀರಾಮಕೃಷ್ಣರಿಗೆ ತುಂಬಾ ಮೆಚ್ಚಿಗೆಯಾಗಿತ್ತು. ಯಾರಾದರೂ ಅವರ ಮುಂದೆ ಅದೇ ಪ್ರಶ್ನೆಗಳನ್ನು ಎತ್ತಿದರೆ ಶ್ರೀರಾಮಕೃಷ್ಣರು ಕೇದಾರನು ಆ ಪ್ರಶ್ನೆಗೆ ಹೀಗೆ ಉತ್ತರಿಸಿದ ಎಂದು ಹೇಳುತ್ತಿದ್ದರು. ಅಂದು ವಿರೋಧಿಯು ಈ ಪ್ರಶ್ನೆಯನ್ನು ಹಾಕಿದ, "ದೇವರು ನಿಜವಾಗಿ ದಯಾಮಯನಾದರೆ ಅವನೇಕೆ ನೋವು ಸಂಕಟಗಳನ್ನು, ಶೋಷಣೆ, ದಬ್ಬಾಳಿಕೆಗಳನ್ನು ಸೃಷ್ಟಿಸಿರುವನು ? ಸಾವಿರಾರು ಜನರು ಆಗಾಗ ಕ್ಷಾಮದಿಂದ ಹೊಟ್ಟೆಗಿಲ್ಲದೆ ಸಾಯುತ್ತಾರಲ್ಲ ಏಕೆ ?" ಕೇದಾರನು ಉತ್ತರಿಸಿದ : "ದೇವರು ತಾನು ದಯಾಮಯನಾದರೂ ನೋವು ಸಂಕಟ, ದಬ್ಬಾಳಿಕೆ, ಶೋಷಣೆಗಳು ತನ್ನ ಸೃಷ್ಟಿಯಲ್ಲಿ ಇರಬೇಕೆಂದು ಅವನು ನಿರ್ಣಯಿಸುವ ಸಭೆಗೆ ದೇವರು ನನ್ನನ್ನು ದುರದೃಷ್ಟದಿಂದ ಆಹ್ವಾನಿಸಿರಲಿಲ್ಲ. ಹಾಗಿರುವಾಗ ನನಗೆ ಅದರ ಕಾರಣ ಹೇಗೆ ಗೊತ್ತಾಗಬೇಕು ?" ಆದರೆ ನರೇಂದ್ರನ ತೀಕ್ಷ್ಣ ವಿಚಾರದ ಮುಂದೆ ಕೇದಾರನು ಅಂದು ತಲೆ ತಗ್ಗಿಸಬೇಕಾಯಿತು.

8. ಕೇದಾರನು ಹೊರಟುಹೋದಮೇಲೆ ಶ್ರೀರಾಮಕೃಷ್ಣರು ನರೇಂದ್ರನನ್ನು ಕೇಳಿದರು : "ಏನಪ್ಪಾ ಹೇಗಿತ್ತು ! ಎಂಥಾ ಭಕ್ತಿ ನೋಡಿದೆಯಾ. ಭಗವಂತನ ಹೆಸರನ್ನು ಹೇಳುತ್ತಾ ಒಮ್ಮೆಯೆ ಅಳಲು ಶುರು ಮಾಡಿದ. ಹರಿನಾಮವನ್ನುಚ್ಚರಿಸುತ್ತಾ ಯಾರ ಕಣ್ಣಿನಿಂದ ನೀರು ಸುರಿಯುವುದೋ ಅವನು ಜೀವನ್ಮುಕ್ತ. ಕೇದಾರ ಎಂಥ ಉತ್ತಮ ವ್ಯಕ್ತಿ! ಅಲ್ಲವೇ?" ಪವಿತ್ರ ಹೃದಯನೂ, ವರ್ಚಸ್ವಿಯೂ ಆದ ನರೇಂದ್ರನು ಯಾವುದೇ ಕಾರಣಕ್ಕಾಗಿಯಾದರೂ ಪುರುಷನು ಸ್ತ್ರೀಭಾವವನ್ನು ಅವಲಂಬಿಸಿದರೆ ಅವನನ್ನು ತಿರಸ್ಕಾರದಿಂದ ಕಾಣುತ್ತಿದ್ದನು. ದೃಢಸಂಕಲ್ಪ ಮತ್ತು ಉದ್ಯಮಶೀಲತೆಗಳಿಲ್ಲದೆ ಯಾರಾದರೂ ಭಗವಂತನ ಮುಂದೆ ಅಳುವುದನ್ನು ನೋಡಿದರೆ ಅದು ಪುರುಷತ್ವಕ್ಕೆ ಅವಮಾನ ಎಂದು ಪರಿಗಣಿಸುತ್ತಿದ್ದನು. ಭಗವಂತನನ್ನು ಸಂಪೂರ್ಣ ಆಶ್ರಯಿಸಿದರೂ ಪುರುಷನು ಪುರುಷನಾಗಿಯೆ ಇರಬೇಕು. ಪುರುಷನಂತೆಯೆ ಭಗವಂತನಿಗೆ ಆತ್ಮಸಮರ್ಪಣೆ ಮಾಡಬೇಕು–ಇದು ಅವನ ಅಭಿಪ್ರಾಯವಾಗಿತ್ತು. ಆದ್ದರಿಂದ ಮೇಲೆ ಹೇಳಿದ ಶ್ರೀರಾಮ

ಕೃಷ್ಣರ ಮಾತನ್ನು ಸಂಪೂರ್ಣ ಒಪ್ಪಿಕೊಳ್ಳಲಾಗದೆ ಅವನು ಹೇಳಿದ : "ಹೌದು ಮಹಾ ಶಯರೆ, ನನಗೇನು ಗೊತ್ತು? ನಿಮಗೇ ಗೊತ್ತು, ನೀವೇ ಹೇಳಬಲ್ಲಿರಿ. ಅತ್ತು ಕರೆಯುವು ದನ್ನು ನೋಡಿ ಒಳಿತು ಕೆಡಕನ್ನು ನಿರ್ಣಯಿಸಲಾಗುವುದಿಲ್ಲ. ಒಂದೇ ಕಡೆ ನಿರಂತರವಾಗಿ ನೋಡುತ್ತಿದ್ದರೆ ಕಣ್ಣುಗಳಿಂದ ನೀರು ಸುರಿಯುತ್ತದೆ. ಶ್ರೀಮತಿಯ ವಿರಹದ ಕೀರ್ತನೆ ಗಳನ್ನು ಕೇಳಿ ಯಾರು ಅಳುತ್ತಾರೋ ಅವರಲ್ಲನೇಕರು ತಮ್ಮ ಪತ್ನಿಯ ವಿರಹವನ್ನೆ ನೆನಸಿಕೊಳ್ಳುತ್ತಾರೆ ಅಥವಾ ತಮ್ಮ ಮೇಲೆ ಆ ಅವಸ್ಥೆಯನ್ನು ಆರೋಪಿಸಿಕೊಂಡು ಅಳುತ್ತಾರೆ. ಇದರಲ್ಲಿ ಸಂದೇಹವೇ ಇಲ್ಲ. ಇಂಥಾ ಸ್ಥಿತಿಯ ಪರಿಚಯವಿಲ್ಲದ ನನ್ನಂಥ ವ್ಯಕ್ತಿಗಳು ಮಾಥುರ್ ಕೀರ್ತನೆಗಳನ್ನು* ಕೇಳಿದರೂ ಬೇರೆಯವರಿಗಾಗುವಂತೆ ಅಳುವ ಪ್ರವೃತ್ತಿ ಉಂಟಾಗುವುದಿಲ್ಲ." ಹೀಗೆ ನರೇಂದ್ರನು ಯಾವುದನ್ನು ಸತ್ಯವೆಂದು ತಿಳಿದಿರು ತ್ತಿದ್ದನೊ ಅದನ್ನು ಶ್ರೀರಾಮಕೃಷ್ಣರ ಮುಂದೆ ಹೇಳಿಬಿಡುತ್ತಿದ್ದ. ಶ್ರೀರಾಮಕೃಷ್ಣರೂ ಇದರಿಂದ ಯಾವಾಗಲೂ ಕೋಪಗೊಳ್ಳದೆ ಸಂತೋಷಪಡುತ್ತಿದ್ದರು, ಏಕೆಂದರೆ ಸತ್ಯ ಪ್ರಾಣನಾದ ನರೇಂದ್ರನ ಅಂತರಂಗದಲ್ಲಿ ಕಳ್ಳತನ ನಡೆಯುವುದೇ ಇಲ್ಲ ಎಂದು ಅಂತರ್ದರ್ಶಿಗಳಾದ ಶ್ರೀರಾಮಕೃಷ್ಣರಿಗೆ ಗೊತ್ತಿತ್ತು.

9. ಶ್ರೀರಾಮಕೃಷ್ಣರನ್ನು ಸಂಧಿಸುವುದಕ್ಕೆ ಸ್ವಲ್ಪ ಮುಂಚೆ ನರೇಂದ್ರನಾಥನು ಬ್ರಹ್ಮ ಸಮಾಜಕ್ಕೆ ಸೇರಿದ್ದನು, ನಿರಾಕಾರ ಅದ್ವಿತೀಯ ಈಶ್ವರನನ್ನೆ ನಂಬಿ ಅವನನ್ನೇ ಉಪಾಸಿಸಿ ಧ್ಯಾನಿಸುತ್ತೇನೆ ಎಂಬ ಬ್ರಹ್ಮಸಮಾಜದ ಅಂಗೀಕಾರ ಪತ್ರಕ್ಕೆ ಸಹಿ ಹಾಕಿ ದ್ದನು. ಆದರೆ ಬ್ರಹ್ಮ ಸಮಾಜದ ಕಾರ್ಯಕರ್ತನಾಗಿ ಅದಕ್ಕೆ ಸಂಬಂಧಿಸಿದ ಎಲ್ಲಾ ಆಚಾರ ವ್ಯವಹಾರಾದಿಗಳನ್ನು ಅನುಸರಿಸುವ ಸಂಕಲ್ಪ ಅವನ ಮನಸ್ಸಿನಲ್ಲಿ ಉದಯಿಸಿರ ಲಿಲ್ಲ. ರಾಖಾಲನಿಗೆ ಇದಕ್ಕೂ ಮುಂಚೆಯೆ ನರೇಂದ್ರನ ಪರಿಚಯ ಇತ್ತು ಮತ್ತು ಬಹಳ ಹೊತ್ತು ಅವನೊಡನೆ ಕಳೆಯುತ್ತಿದ್ದನು. ಶಿಶುವಿನ ಸಮಾನನಾದ ಕೋಮಲ ಸ್ವಭಾವವುಳ್ಳ ರಾಖಾಲನು ನರೇಂದ್ರನ ಪ್ರೇಮಪೂರ್ಣ ವರ್ತನೆಗೆ ಮುಗ್ಧನಾಗಿ ಅವನ ಪ್ರಬಲವಾದ ಇಚ್ಛಾಶಕ್ತಿಯ ವಶವರ್ತಿಯಾದುದರಲ್ಲಿ ಆಶ್ಚರ್ಯವೇನಿಲ್ಲ. ನರೇಂದ್ರನ ಮಾತಿಗೆ ಒಪ್ಪಿ ಅವನು ಬ್ರಹ್ಮಸಮಾಜದ ಆ ಅಂಗೀಕಾರ ಪತ್ರಕ್ಕೆ ಸಹಿ ಹಾಕಿದ್ದ. ಇದಾದ ಸ್ವಲ್ಪ ಕಾಲದಲ್ಲಿಯೇ ರಾಖಾಲನು ಶ್ರೀರಾಮಕೃಷ್ಣರನ್ನು ಸಂಧಿಸಿ ಅವರ ಉಪ ದೇಶದ ಮೇರೆಗೆ ಸಾಕಾರೋಪಾಸನೆಯಲ್ಲಿ ತೊಡಗಿದ. ಇದರ ಮೂಲಕ ಅವನ ಸುಪ್ತ ಪ್ರೀತಿ ಪುನಃ ಜಾಗ್ರತಗೊಂಡಿತು. ಇದಾದ ಕೆಲವು ತಿಂಗಳುಗಳಲ್ಲಿಯೇ ನರೇಂದ್ರನಾಥನು ಶ್ರೀರಾಮಕೃಷ್ಣರೆಡೆಗೆ ಬಂದು ಅಲ್ಲಿ ರಾಖಾಲನನ್ನು ನೋಡಿ ಅವನಿಗೆ ತುಂಬಾ ಸಂತೋಷ ವಾಯಿತು. ಕೆಲವು ದಿನಗಳನಂತರ ರಾಖಾಲನು ಶ್ರೀರಾಮಕೃಷ್ಣರೊಡನೆ ಮಂದಿರಗಳಿಗೆ ಹೋಗಿ ದೇವದೇವಿಯರ ವಿಗ್ರಹಗಳಿಗೆ ಪ್ರಣಾಮ ಮಾಡುವುದನ್ನು ನೋಡಿದ. ಇದ

* ಕೃಷ್ಣನು ಬೃಂದಾವನದಿಂದ ಮಧುರೆಗೆ ಹೋದಾಗ ಗೋಪಿಯರ ತೀವ್ರ ವಿರಹವೇದನೆ ಯನ್ನು ಚಿತ್ರಿಸುವ ಕೀರ್ತನೆಗಳು.

ರಿಂದ ನರೇಂದ್ರನು ತುಂಬಾ ಅಸಂತೃಪ್ತನಾಗಿ ರಾಖಾಲನಿಗೆ ಹಿಂದಿನ ಮಾತನ್ನು ನೆನಪಿಸಿ ಕೊಟ್ಟು ಅವನನ್ನು ತೀವ್ರವಾಗಿ ಖಂಡಿಸತೊಡಗಿದನು. ಅವನು ಹೇಳಿದ : "ಬ್ರಹ್ಮ ಸಮಾಜದ ಅಂಗಿಕಾರ ಪತ್ರಕ್ಕೆ ಸಹಿ ಹಾಕಿದ ಮೇಲೆ ಮತ್ತೆ ಮಂದಿರಕ್ಕೆ ಹೋಗಿ ಪ್ರಣಾಮ ಮಾಡಿದುದರಿಂದ ನೀನು ಸುಳ್ಳು ಹೇಳಿದಂತಾಯಿತು." ಕೋಮಲ ಸ್ವಭಾವದ ರಾಖಾಲನು ಸ್ನೇಹಿತನ ಈ ಮಾತನ್ನು ಕೇಳಿ ಮೌನದಿಂದಿದ್ದ ಮತ್ತು ಅಂದಿನಿಂದ ಕೆಲವುಕಾಲ ಅವನನ್ನು ನೋಡುವುದಕ್ಕೂ ಭಯ ಸಂಕೋಚವಾಗುತ್ತಿತ್ತು. ಕೊನೆಗೆ ಶ್ರೀರಾಮಕೃಷ್ಣರು ರಾಖಾಲನ ಈ ಸ್ಥಿತಿಯ ಕಾರಣವನ್ನು ತಿಳಿದುಕೊಂಡು ನರೇಂದ್ರ ನನ್ನು ಮಧುರವಾದ ಮಾತಿನಿಂದ ಸಮಾಧಾನ ಪಡಿಸುತ್ತಾ ಹೇಳಿದರು :. "ನೋಡು ರಾಖಾಲನಿಗೆ ಇನ್ನು ಎಂದೂ ಏನೂ ಹೇಳಬೇಡ. ಅವನಿಗೆ ನಿನ್ನನ್ನು ನೋಡಿದರೇ ಭಯ. ಅವನಿಗೀಗ ಸಾಕಾರದಲ್ಲಿ ವಿಶ್ವಾಸ ಉಂಟಾಗಿದೆ. ಅದಕ್ಕೇನು ಮಾಡುವುದಕ್ಕಾ ಗುತ್ತದೆ ಹೇಳು ? ಎಲ್ಲರೂ ಪ್ರಾರಂಭದಿಂದಲೇ ನಿರಾಕಾರವನ್ನು ಗ್ರಹಿಸಲು ಸಾಧ್ಯವೆ ?" ನರೇಂದ್ರನು ಅಂದಿನಿಂದ ರಾಖಾಲನ ಮೇಲೆ ದೋಷಾರೋಪಣೆ ಮಾಡುವುದನ್ನು ನಿಲ್ಲಿಸಿದನು.

10. ನರೇಂದ್ರನು ಉತ್ತಮ ಅಧಿಕಾರಿಯೆಂದು ತಿಳಿದು ಶ್ರೀರಾಮಕೃಷ್ಣರು ಮೊದಲಿನಿಂದಲೂ ಅವನಿಗೆ ಅದ್ವೈತ ಸತ್ಯದಲ್ಲಿ ನಂಬಿಕೆ ಉಂಟಾಗುವಂತೆ ಮಾಡಲು ಪ್ರಯತ್ನಿಸಿದರು. ಅವನು ದಕ್ಷಿಣೇಶ್ವರಕ್ಕೆ ಬಂದಕೂಡಲೇ 'ಅಷ್ಟಾವಕ್ರ ಸಂಹಿತೆ'ಯೆ ಮುಂತಾದ ಗ್ರಂಥಗಳನ್ನು ಓದುವುದಕ್ಕೆ ಕೊಡುತ್ತಿದ್ದರು. ನಿರಾಕಾರ ಸಗುಣಬ್ರಹ್ಮನನ್ನು ದ್ವೈತಭಾವದಲ್ಲಿ ಉಪಾಸಿಸುತ್ತಿದ್ದ ನರೇಂದ್ರನಿಗೆ ಈ ಎಲ್ಲ ಪುಸ್ತಕಗಳು ನಾಸ್ತಿಕವಾದವು ಗಳೆಂದು ಅನಿಸುತ್ತಿತ್ತು. ಶ್ರೀರಾಮಕೃಷ್ಣರ ಒತ್ತಾಯದಿಂದ ಸ್ವಲ್ಪ ಓದಿದ ಮೇಲೆ ಅವನು ಸ್ಪಷ್ಟವಾಗಿ ಹೇಳುತ್ತಿದ್ದ : "ಇದಕ್ಕೂ ನಾಸ್ತಿಕತೆಗೂ ಏನು ವ್ಯತ್ಯಾಸ ? ಸೃಷ್ಟ ಜೀವಿಯು ತನ್ನನ್ನು ಸ್ರಷ್ಟಾ ಎಂದು ಭಾವಿಸಲು ಸಾಧ್ಯವೆ ? ಇದಕ್ಕಿಂತ ದೊಡ್ಡ ಪಾಪ ಇನ್ನೇನಿದೆ ? ನಾನೂ ಈಶ್ವರ, ನೀನೂ ಈಶ್ವರ, ಜನ್ಮ ಮರಣಗಳಿಂದ ಕೂಡಿದ ಎಲ್ಲಾ ಪದಾರ್ಥಗಳೂ ಈಶ್ವರ—ಇದಕ್ಕಿಂತ ಹೆಚ್ಚಿನ ಅವಿಚಾರಕ ಮಾತು ಬೇರೆ ಇರಲು ಸಾಧ್ಯವೇ ? ಗ್ರಂಥಕರ್ತರಾದ ಋಷಿಮುನಿಗಳ ತಲೆ ಖಂಡಿತ ಕೆಟ್ಟಿದ್ದಿರಬೇಕು. ಇಲ್ಲ ದಿದ್ದರೆ ಇಂಥ ಮಾತುಗಳನ್ನು ಎಂದಾದರೂ ಬರೆಯುವುದುಂಟೆ ?" ಸ್ಪಷ್ಟವಾದಿಯಾದ ನರೇಂದ್ರನ ಮಾತನ್ನು ಕೇಳಿ ಶ್ರೀರಾಮಕೃಷ್ಣರು ನಗುತ್ತಿದ್ದರು. ಕೂಡಲೇ ಅವನ ಈ ಅಭಿಪ್ರಾಯಕ್ಕೆ ಆಘಾತ ಉಂಟುಮಾಡಬಾರದೆಂದು ಹೇಳುತ್ತಿದ್ದರು : "ನೀನು ಈಗ ಈ ಮಾತನ್ನು ಒಪ್ಪಿಕೊಳ್ಳದೇ ಇರಬಹುದು. ಆದರೆ ಋಷಿಮುನಿಗಳನ್ನು ನಿಂದಿಸುತ್ತೀಯೆ, ಏಕೆ ? ಭಗವಂತನ ಸ್ವರೂಪಕ್ಕೆ ಮಿತಿಯನ್ನು ಕಲ್ಪಿಸುವುದಾದರೂ ಏತಕ್ಕೆ ? ನೀನು ಸತ್ಯಸ್ವರೂಪನಾದ ಭಗವಂತನನ್ನು ಕರೆಯುತ್ತಾ ಹೋಗು. ಅನಂತರ ಅವನು ನಿನಗೆ ಯಾವ ರೀತಿ ಕಾಣಿಸಿಕೊಳ್ಳುವನೊ ಅದರಲ್ಲಿ ವಿಶ್ವಾಸವಿರಿಸು." ಆದರೆ ನರೇಂದ್ರನು ಶ್ರೀರಾಮಕೃಷ್ಣರ ಈ ಮಾತಿಗೆ ಹೆಚ್ಚು ಕಿವಿಗೊಡುತ್ತಿರಲಿಲ್ಲ, ಏಕೆಂದರೆ ಯಾವುದನ್ನು

ಯುಕ್ತಿಯಿಂದ ಪ್ರಮಾಣೀಕರಿಸಲಾಗುವುದಿಲ್ಲವೊ ಅದನ್ನು ಮಿಥ್ಯವೆಂದೇ ಪರಿಗಣಿಸುತ್ತಿದ್ದನು ಮತ್ತು ಎಲ್ಲಾ ರೀತಿಯ ಮಿಥ್ಯದ ವಿರುದ್ಧ ಹೋರಾಡುವುದೇ ಅವನ ಸ್ವಭಾವವಾಗಿತ್ತು. ಶ್ರೀರಾಮಕೃಷ್ಣರಲ್ಲದೆ ಇನ್ನು ಅನೇಕರ ಮುಂದೆಯೂ ಯುಕ್ತಿಯ ಮೂಲಕ ಅದ್ವೈತವನ್ನು ಖಂಡಿಸುತ್ತಿದ್ದನು ಮತ್ತು ಕೆಲವೊಮ್ಮೆ ವ್ಯಂಗ್ಯೋಕ್ತಿಗಳ ಮೂಲಕ ಅದನ್ನು ನಿಂದಿಸುತ್ತಿದ್ದನು ಕೂಡ.

11. ಪ್ರತಾಪಚಂದ್ರ ಹಾಜರಾ ಎಂಬ ಹೆಸರಿನ ಒಬ್ಬ ವ್ಯಕ್ತಿ ಆಗ ದಕ್ಷಿಣೇಶ್ವರದ ತೋಟದಲ್ಲಿ ವಾಸಿಸುತ್ತಿದ್ದ. ಪ್ರತಾಪನ ಸಾಂಸಾರಿಕ ಸ್ಥಿತಿ ಮೊದಲಿನಿಂದ ಉತ್ತಮವಾಗಿರಲಿಲ್ಲ. ಇದರಿಂದಾಗಿ ಅವನು ಆಧ್ಯಾತ್ಮಿಕ ಸಾಧನೆಗಳಲ್ಲಿ ನಿರತನಾಗಿದ್ದರೂ ಧನದ ಆಸೆ ಅವನ ಮನಸ್ಸಿನಲ್ಲಿ ಆಧಿಪತ್ಯವನ್ನು ಸಾಧಿಸಿತ್ತು. ಅವನ ಧಾರ್ಮಿಕ ಆಚರಣೆಯ ಹಿಂದೆ ಸಕಾಮ ಭಾವವಿತ್ತು, ಆದರೆ ಅವನು ಇದನ್ನು ಹೊರಗೆ ತೋರಿಸಿಕೊಳ್ಳದಿರುವುದು ಮಾತ್ರವಲ್ಲದೆ ನಿಷ್ಕಾಮ ಆಧ್ಯಾತ್ಮ ಸಾಧನೆಯ ಬಗ್ಗೆ ಎಲ್ಲರ ಮುಂದೆ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಾ ಅವರ ಪ್ರಶಂಸೆಯನ್ನು ಪಡೆಯಲು ಪ್ರಯತ್ನಿಸುತ್ತಿದ್ದ. ಇಷ್ಟೇ ಅಲ್ಲದೆ ಧಾರ್ಮಿಕ ಕ್ರಿಯೆಗಳನ್ನು ಮಾಡುವಾಗ ಪ್ರತಿ ಹೆಜ್ಜೆಗೂ ಲಾಭನಷ್ಟಗಳ ಲೆಕ್ಕಾಚಾರ ಮಾಡುವುದೇ ಅವನ ಸ್ವಭಾವವಾಗಿತ್ತು. ಜಪತಪಾದಿಗಳ ಮೂಲಕ ಏನಾದರೂ ಸಿದ್ಧಿಯನ್ನು ಸಂಪಾದಿಸಿ ಅದರಿಂದ ಹಣದಾಸೆಯನ್ನು ಪೂರ್ತಿಗೊಳಿಸಬೇಕೆಂಬ ಉದ್ದೇಶ ಆಗಾಗ ಅವನ ಮನಸ್ಸನ್ನು ಪ್ರವೇಶಿಸುತ್ತಿತ್ತು, ಶ್ರೀರಾಮಕೃಷ್ಣರಿಗೆ ಅವನ ಈ ಮನಸ್ಸಿನ ಸ್ಥಿತಿ ಮೊದಲಿನಿಂದಲೂ ತಿಳಿದಿತ್ತು, ಮನಸ್ಸಿನ ಆಸೆಯನ್ನು ತ್ಯಜಿಸಿ ನಿಷ್ಕಾಮ ಭಾವದಿಂದ ಭಗವಂತನನ್ನು ಕರೆಯಬೇಕೆಂದು ಅವನಿಗೆ ಉಪದೇಶ ನೀಡುತ್ತಿದ್ದರು. ದುರ್ಬಲ ಮನಸ್ಸಿನವನಾದ ಹಾಜರಾ ಶ್ರೀರಾಮಕೃಷ್ಣರ ಈ ಮಾತನ್ನು ಸ್ವೀಕರಿಸದೆ ಇರುವುದು ಮಾತ್ರವಲ್ಲದೆ ಭ್ರಮೆಯಿಂದಲೂ, ಅಹಂಕಾರದಿಂದಲೂ ಕೂಡಿದ ಅವನು ಶ್ರೀರಾಮಕೃಷ್ಣರನ್ನು ನೋಡಲು ಬರುತ್ತಿದ್ದ ವ್ಯಕ್ತಿಗಳಿಗೆ ಅವಕಾಶ ಸಿಕ್ಕಿದಾಗ ತಾನೇನೂ ಕಡಿಮೆ ಸಾಧುವಲ್ಲ ಎಂದು ಕೊಚ್ಚಿಕೊಳ್ಳುತ್ತಿದ್ದ. ಅವನು ಈ ರೀತಿ ಇದ್ದರೂ ಅವನಲ್ಲಿ ಉತ್ತಮನಾಗುವ ಇಚ್ಛೆ ಸ್ವಲ್ಪ ಮಟ್ಟಿಗಾದರೂ ಇತ್ತು. ಏಕೆಂದರೆ ಅವನ ಆ ರೀತಿಯ ವರ್ತನೆ ಶ್ರೀರಾಮಕೃಷ್ಣರಿಗೆ ತಿಳಿದಿದ್ದರೂ ಮತ್ತು ಕೆಲವೊಮ್ಮೆ ಅದಕ್ಕಾಗಿ ಅವನನ್ನು ಬಯ್ದಿದ್ದರೂ ಅವರು ಅವನನ್ನು ಅಲ್ಲಿಂದ ಒಮ್ಮೆಯೆ ಓಡಿಸಲಿಲ್ಲ ಆದರೆ ಅವನೊಡನೆ ಹೆಚ್ಚು ಬೆರೆಯಬಾರದೆಂದು ನಮಗೆ ಎಚ್ಚರಿಕೆ ನೀಡುತ್ತಿದ್ದರು. "ಆ ಮನುಷ್ಯನದು ತುಂಬಾ ಲೆಕ್ಕಾಚಾರದ ಬುದ್ಧಿ, ಅವನ ಮಾತಿಗೆ ಕಿವಿಗೊಡಬೇಡಿ" ಎನ್ನುತ್ತಿದ್ದರು.

12. ಬೇರೆ ಒಳ್ಳೆಯ ಮತ್ತು ಕೆಟ್ಟ ಗುಣಗಳ ಜೊತೆ ಹಾಜರಾನಲ್ಲಿ ಸಂಶಯ ಬುದ್ಧಿಯೂ ಇತ್ತು. ಅವನಷ್ಟೇ ಶಿಕ್ಷಣವನ್ನು ಪಡೆದ ಇತರ ವ್ಯಕ್ತಿಗಳಿಗೆ ಹೋಲಿಸಿದರೆ ಅವನು ಹೆಚ್ಚು ಬುದ್ಧಿವಂತನೇ ಆಗಿದ್ದ. ನರೇಂದ್ರ ಮುಂತಾದ ಇಂಗ್ಲಿಷ್ ಶಿಕ್ಷಣವನ್ನು ಪಡೆದವರು ಪಾಶ್ಚಾತ್ಯ ಅಜ್ಞೇಯ ವಾದಗಳ ಬಗ್ಗೆ ನಡೆಸುತ್ತಿದ್ದ ಚರ್ಚೆಯನ್ನು ಅವನು ಸ್ವಲ್ಪ ಮಟ್ಟಿಗೆ ಅರ್ಥ ಮಾಡಿಕೊಳ್ಳುತ್ತಿದ್ದ. ಆದ್ದರಿಂದ ಬುದ್ಧಿಶಾಲಿಯಾದ ನರೇಂದ್ರನು

ದಕ್ಷಿಣೇಶ್ವರಕ್ಕೆ ಬಂದಾಗಲೆಲ್ಲ ಹಾಜರಾನೊಡನೆ ಮಾತನಾಡುತ್ತಾ ಒಂದೆರಡು ಗಂಟೆಗಳನ್ನು ಕಳೆಯುತ್ತಿದ್ದ. ಎಷ್ಟಾದರೂ ಹಾಜರಾ ನರೇಂದ್ರನ ತೀಕ್ಷ್ಣ ಬುದ್ಧಿಗೆ ಮಣಿಯಲೇ ಬೇಕಾಗುತ್ತಿತ್ತು. ಅವನು ನರೇಂದ್ರನ ಮಾತುಗಳನ್ನು ಆಸಕ್ತಿಯಿಂದ ಕೇಳುತ್ತಿದ್ದ ಮತ್ತು ಕೆಲವೊಮ್ಮೆ ಅವನಿಗೆ ಧೂಮಪಾನ ಮಾಡಲು ತಂಬಾಕು ಸಿದ್ಧಮಾಡಿಕೊಡುತ್ತಿದ್ದ. ನರೇಂದ್ರನು ಹಾಜರಾನೊಡನೆ ಅಷ್ಟೊಂದು ಸ್ನೇಹಭಾವದಿಂದ ವರ್ತಿಸುವುದನ್ನು ನೋಡಿ ನಮ್ಮಲ್ಲನೇಕರು "ಹಾಜರಾ ನರೇಂದ್ರನ ಫ್ರೆಂಡ್" ಎಂದು ಹಾಸ್ಯ ಮಾಡುತ್ತಿದ್ದರು.

13. ನರೇಂದ್ರನು ದಕ್ಷಿಣೇಶ್ವರಕ್ಕೆ ಬಂದಾಗ ಶ್ರೀರಾಮಕೃಷ್ಣರು ಅನೇಕ ವೇಳೆ ಅವನನ್ನು ನೋಡಿದ ಕೂಡಲೇ ಭಾವಾವಿಷ್ಟರಾಗುತ್ತಿದ್ದರು. ಅನಂತರ ಅರ್ಧಬಾಹ್ಯ ದೆಶೆಯಲ್ಲಿ ಬಹಳ ಹೊತ್ತು ಪರಮಾನಂದದಿಂದ ಅವನೊಡನೆ ಆಧ್ಯಾತ್ಮಿಕ ವಿಷಯಗಳನ್ನು ಮಾತನಾಡುತ್ತಿದ್ದರು. ಈ ಸಮಯದಲ್ಲಿ ಅವರು ಅನೇಕ ಮಾತು ಮತ್ತು ಕೃತಿಗಳ ಮೂಲಕ ಉಚ್ಚ ಆಧ್ಯಾತ್ಮಿಕ ದರ್ಶನಗಳು ಅವನ ಅಂತರವನ್ನು ಪ್ರವೇಶಿಸುವಂತೆ ಮಾಡುತ್ತಿದ್ದರು. ಕೆಲವೊಮ್ಮೆ ಅವರಿಗೆ ಅವನು ಹಾಡುವುದನ್ನು ಕೆಳಬೇಕೆಂದೆನಿಸುತ್ತಿತ್ತು. ನರೇಂದ್ರನು ಮಧುರವಾಗಿ ಹಾಡುವುದನ್ನು ಕೇಳುತ್ತಿದ್ದಂತೆಯೇ ಸಮಾಧಿಸ್ಥರಾಗಿಬಿಡುತ್ತಿದ್ದರು. ಇದರಿಂದಾಗಿ ನರೇಂದ್ರನು ನಿಲ್ಲಿಸುತ್ತಲೇ ಇರಲಿಲ್ಲ, ತನ್ಮಯನಾಗಿ ಒಂದಾದ ಮೇಲೆ ಮತ್ತೊಂದನ್ನು ಹಾಡುತ್ತಾ ಕೆಲವು ಗಂಟೆ ಕಳೆಯುತ್ತಿದ್ದನು. ಶ್ರೀರಾಮಕೃಷ್ಣರು ಮತ್ತೆ ಅರ್ಧ ಬಾಹ್ಯದೆಶೆಯನ್ನು ಪಡೆದು ಬಹುಶಃ ಯಾವುದೋ ಒಂದು ವಿಶೇಷ ಹಾಡನ್ನು ಹಾಡಲು ನರೇಂದ್ರನಿಗೆ ಹೇಳುತ್ತಿದ್ದರು. ಆದರೆ ಎಲ್ಲಾ ಸಂದರ್ಭದಲ್ಲಿಯೂ ಕೊನೆಯಲ್ಲಿ ನರೇಂದ್ರನ ಬಾಯಿಂದ 'ಜೋ ಕುಛ್ ಹೈ ಸೋ ತುಹಿ ಹೈ' ಈ ಹಾಡನ್ನು ಕೇಳದಿದ್ದರೆ ಅವರ ಮನಸ್ಸಿಗೆ ಪೂರ್ಣ ತೃಪ್ತಿಯಾಗುತ್ತಿರಲಿಲ್ಲ. ಅನಂತರ ಅದ್ವೈತ ವಿಷಯಕವಾದ ಚರ್ಚೆಯಲ್ಲಿ ಸ್ವಲ್ಪ ಹೊತ್ತು ಕಳೆಯುತ್ತಿತ್ತು. ಹೀಗೆ ನರೇಂದ್ರನು ದಕ್ಷಿಣೇಶ್ವರಕ್ಕೆ ಬಂದನೆಂದರೆ ದೊಡ್ಡ ಆನಂದದ ಬಿರುಗಾಳಿಯೇ ಏಳುತ್ತಿತ್ತು.

14. ಒಂದು ದಿನ ಶ್ರೀರಾಮಕೃಷ್ಣರು ನರೇಂದ್ರನಿಗೆ ಅದ್ವೈತದಲ್ಲಿ ಬರುವ ಜೀವ ಬ್ರಹ್ಮರ ಐಕ್ಯದ ಬಗ್ಗೆ ಅನೇಕ ವಿಷಯಗಳನ್ನು ಹೇಳಿದರು. ನರೇಂದ್ರನು ಅವುಗಳನ್ನೆಲ್ಲ ಕೇಳಿದರೂ ಅರ್ಥಮಾಡಿಕೊಳ್ಳಲಿಲ್ಲ. ಶ್ರೀರಾಮಕೃಷ್ಣರೊಡನೆ ಮಾತು ಮುಗಿದ ಮೇಲೆ ಅವನು ಹಾಜರಾನ ಹತ್ತಿರ ಹೋಗಿ ಧೂಮಪಾನ ಮಾಡುತ್ತ ಅವನೊಡನೆ ಅದೇ ವಿಷಯವನ್ನು ಚರ್ಚಿಸತೊಡಗಿದನು. ನರೇಂದ್ರನು ಹೇಳಿದ : "ಇದೆಂದಿಗಾದರೂ ಆಗಲು ಸಾಧ್ಯವೆ ? ಈ ಮಡಕೆಯೂ ದೇವರಂತೆ, ಈ ಲೋಟವೂ ದೇವರಂತೆ, ನಾವು ಏನನ್ನೆಲ್ಲ ನೋಡುತ್ತೇವೆಯೊ ಅದೆಲ್ಲ ದೇವರಂತೆ ?" ಹಾಜರಾನೂ ಕೂಡ ನರೇಂದ್ರನೊಡನೆ ಸೇರಿಕೊಂಡು ಈ ಭಾವನೆಯನ್ನು ಹಾಸ್ಯ ಮಾಡುತ್ತಾ ಇಬ್ಬರು ಜೋರಾಗಿ ನಗತೊಡಗಿದರು. ಶ್ರೀರಾಮಕೃಷ್ಣರು ಆಗಲೂ ಅರ್ಧ ಬಾಹ್ಯದೆಶೆಯಲ್ಲಿದ್ದರು. ನರೇಂದ್ರನ ನಗುವನ್ನು ಕೇಳಿ ಅವರು ಕಂಕುಳಲ್ಲಿ ಬಟ್ಟೆಯನ್ನಿಟ್ಟುಕೊಂಡು ಕೊಠಡಿಯಿಂದ ಹೊರ

ಬಂದರು. "ಏನು ಮಾತನಾಡುತ್ತಿರುವಿರಿ ?" ಎಂದು ಮುಗುಳ್ನಗುತ್ತಾ ಪ್ರೀತಿಯಿಂದ ಕೇಳಿದರು. ಅನಂತರ ಅವರು ನರೇಂದ್ರನನ್ನು ಸ್ಪರ್ಶಿಸಿ ಸಮಾಧಿಸ್ಥರಾದರು.

15. ನರೇಂದ್ರನು ಹೇಳುತ್ತಾನೆ : "ಶ್ರೀರಾಮಕೃಷ್ಣರ ಅಂದಿನ ಅದ್ಭುತ ಸ್ಪರ್ಶದಿಂದ ಒಂದೇ ಕ್ಷಣದಲ್ಲಿ ಭಾವಾಂತರವಾಯಿತು. ಭಗವಂತನ ಹೊರತು ಈ ವಿಶ್ವದಲ್ಲಿ ಬೇರೇನೂ ಇಲ್ಲವ ಇಲ್ಲ ಎಂದು ಸ್ಪಷ್ಟವಾಗಿ ಅನುಭವಕ್ಕೆ ಬಂತು. ಅದನ್ನು ನೋಡುತ್ತಾ ಮೌನವಾಗಿ ಇದ್ದೆ. ಎಷ್ಟು ಕಾಲ ಈ ಭಾವವಿರುತ್ತದೆ ಎಂದು ನೋಡಬೇಕು ಅನಿಸಿತು. ಆದರೆ ಆ ಭಾವ ಅಂದು ಕಡಿಮೆಯಾಗಲೇ ಇಲ್ಲ. ಮನೆಗೆ ಹೋದರೆ ಆಗಲೂ ಅದೇ. ನಾನೇನನ್ನು ನೋಡುತ್ತಿದ್ದನೊ ಅದೆಲ್ಲವೂ ಅವನೇ ಎಂದು ಅನುಭವವಾಗುತ್ತಿತ್ತು. ಊಟಕ್ಕೆ ಕುಳಿತರೆ ಅನ್ನ, ತಟ್ಟೆ, ಒಡಿಸುವವರು ಮತ್ತು ನಾನೂ ಕೂಡ ಅವನಲ್ಲದೆ ಬೇರೆಯಲ್ಲ ಎಂದೆನಿಸಿತು. ಒಂದೆರಡು ಅಗುಳು ತಿಂದು ಸುಮ್ಮನೆ ಕುಳಿತುಬಿಟ್ಟೆನು. 'ಸುಮ್ಮನೆ ಕುಳಿತಿದ್ದೀಯಲ್ಲ ಉಣ್ಣು' ಎಂದು ತಾಯಿಯು ಹೇಳಿದಾಗ ಪ್ರಜ್ಞೆ ಬಂದು ಉಣ್ಣುವುದಕ್ಕೆ ಪ್ರಾರಂಭಿಸುತ್ತಿದ್ದ. ಹೀಗೆ ಉಣ್ಣುವಾಗ, ಮಲಗುವಾಗ, ಕಾಲೇಜಿಗೆ ಹೋಗುವಾಗ ಯಾವಾಗಲೂ ಇದೇ ಅನುಭವ. ಯಾವಾಗಲೂ ಒಂದು ರೀತಿಯ ಅಮಲಿನಲ್ಲೇ ಇರುತ್ತಿದ್ದೆ. ರಸ್ತೆಯಲ್ಲಿ ಹೋಗುತ್ತಿರುವಾಗ, ಗಾಡಿ ಬರುತ್ತಿರುವುದನ್ನು ನೋಡಿದರೂ ಹಿಂದಿನಂತೆ ಒದಿಗೆ ಸರಿಯಬೇಕೆಂದನಿಸುತ್ತಿರಲಿಲ್ಲ. ನಾನೂ ಅದೇ ಅಲ್ಲವೇ, ಬೇರೆ ಇನ್ನೇನು ಎಂದೆನಿಸುತ್ತಿತ್ತು. ನನ್ನ ಕೈಕಾಲುಗಳು ಆಗ ಮರಗಟ್ಟಿದಂತಾಗಿರುತ್ತಿದ್ದವು. ನಾನು ಊಟ ಮಾಡಿದಾಗ ತೃಪ್ತಿಯೇ ಆಗುತ್ತಿರಲಿಲ್ಲ. ಬೇರೆ ಯಾರೋ ಊಟ ಮಾಡುತ್ತಿರುವಂತೆ ಅನಿಸುತ್ತಿತ್ತು, ಕೆಲವೊಮ್ಮೆ ಊಟದ ಸಮಯದಲ್ಲಿ ಮಲಗಿಬಿಡುತ್ತಿದ್ದೆ ಮತ್ತೆ ಸ್ವಲ್ಪ ಹೊತ್ತಿನ ನಂತರ ಮೇಲೆದ್ದು ಉಣ್ಣುವುದನ್ನು ಮುಂದುವರಿಸುತ್ತಿದ್ದೆ. ಕೆಲವು ದಿನಗಳಲ್ಲಿ ನಾನು ಯಾವಾಗಲೂ ಉಣ್ಣುವುದಕ್ಕಿಂತ ಜಾಸ್ತಿ ಉಂಡುಬಿಡುತ್ತಿದ್ದೆ. ಆದರೆ ಅದರಿಂದ ನನ್ನ ಆರೋಗ್ಯ ಕೆಡಲಿಲ್ಲ. ನನ್ನ ತಾಯಿಯು ಭಯದಿಂದ ಹೇಳಿದಳು 'ನಿನಗೇನೊ ಭಯಂಕರ ಕಾಯಿಲೆ ಆಗಿರಬೇಕು' ಎಂದು. ಕೆಲವೊಮ್ಮೆ ಅವಳು ಹೇಳುತ್ತಿದ್ದಳು : 'ಅವನು ಇನ್ನು ಬದುಕುವುದಿಲ್ಲ' ಎಂದು, ಆ ಅಮಲು ಸ್ವಲ್ಪ ಇಳಿದ ಮೇಲೆ ಈ ಪ್ರಪಂಚ ಕನಸಾಗಿ ಕಂಡಿತು. 'ಹದುವಾ' ಕೊಳದ ತೀರದಲ್ಲಿ ಹೋಗುತ್ತಿರುವಾಗ ಅದರ ಸುತ್ತ ಇದ್ದ ಕಬ್ಬಿಣದ ಬೇಲಿಗೆ ಅದು ನಿಜವಾಗಿ ಇರುವುದೇ ಅಥವಾ ಕನಸೆ ಎಂದು ನೋಡಲು ತಲೆ ಚಚ್ಚಿದೆ. ಕೈಕಾಲುಗಳು ಮರಗಟ್ಟಿ ಹೋದುದರಿಂದ ನನಗೆ ಪಾರ್ಶ್ವವಾಯು ಆಗುವುದೆಂದು ಭಯವಾಯಿತು. ಈ ಭಯಂಕರ ಅಮಲು ಮತ್ತು ಅವಶ ಸ್ಥಿತಿ ಕೆಲವು ಕಾಲ ನನ್ನನ್ನು ಬಿಡಲಿಲ್ಲ. ನಾನು ಸಾಮಾನ್ಯ ಸ್ಥಿತಿಗೆ ಬಂದಾಗ ಅದು ಅದ್ವೈತಜ್ಞಾನದ ಸೂಚಕ ಎಂದೆನಿಸಿತು. ಶಾಸ್ತ್ರದಲ್ಲಿ ಹೇಳಿರುವುದು ಸತ್ಯವೇ. ಮುಂದೆ ನಾನು ಎಂದೂ ಅದ್ವೈತ ಸತ್ಯದ ಬಗ್ಗೆ ಸಂದೇಹ ಪಡಲಿಲ್ಲ,"

16. ಇನ್ನೊಂದು ಸಂದರ್ಭದಲ್ಲಿ ಬೇರೊಂದು ಅದ್ಭುತ ಘಟನೆಯನ್ನು ನರೇಂದ್ರನಿಂದ ಕೇಳಿರುವೆವು. ನಾವು ಅವನ ನಿಕಟವರ್ತಿಗಳಾದಾಗ ೧೮೮೪ರ ಚಳಿಗಾಲದಲ್ಲಿ

ಅವನು ನಮಗೆ ಇದನ್ನು ಹೇಳಿದನು, ಆದರೆ ಆ ಘಟನೆ ಸಂಭವಿಸಿದ್ದು ಈ ಸಮಯ ದಲ್ಲಿ ಎಂಬುದು ನಮ್ಮ ಊಹೆ. ಆದ್ದರಿಂದ ಅದನ್ನು ಇಲ್ಲಿಯೇ ವಿವರಿಸುತ್ತಿದ್ದೇವೆ. ನಾವು ಅಂದು ಮಧ್ಯಾಹ್ನಕ್ಕೆ ಸ್ವಲ್ಪಮುಂಚೆ ನರೇಂದ್ರನ ಮನೆಗೆ ಹೋಗಿ ರಾತ್ರೆ ಹನ್ನೊಂದು ಗಂಟೆಯವರೆಗೂ ಅವನೊಡನೆ ಇದ್ದೆವು. ಸ್ವಾಮಿ ರಾಮಕೃಷ್ಣಾನಂದರೂ ಅಂದು ನಮ್ಮೊಡನಿದ್ದರು. ನರೇಂದ್ರನನ್ನು ಸಂಧಿಸಿದಂದಿನಿಂದಲೂ ಅವನ ಕಡೆ ಒಂದು ಸ್ವರ್ಗೀಯ ಆಕರ್ಷಣೆಯನ್ನು ನಾವು ಅನುಭವಿಸುತ್ತಿದ್ದೆವು. ಅಂದು ಇದು ದೈವಾನು ಗ್ರಹದಿಂದ ಸಾವಿರಪಾಲು ವೃದ್ಧಿಯಾಯಿತು. ಶ್ರೀರಾಮಕೃಷ್ಣರ ಬಗ್ಗೆ ನಮ್ಮ ಭಾವನೆ ಏನಾಗಿತ್ತೆಂದರೆ ಅವರೊಬ್ಬರು ಭಗವಂತನನ್ನು ಕಂಡ ಪರಿಪೂರ್ಣ ವ್ಯಕ್ತಿ ಎಂಬುದು. ಆದರೆ ಅಂದು ಶ್ರೀರಾಮಕೃಷ್ಣರ ವಿಷಯವಾಗಿ ನರೇಂದ್ರನು ಹೇಳಿದ ಮಾತು ನಮ್ಮ ಹೃದಯವನ್ನು ಪ್ರವೇಶಿಸಿ ಒಂದು ಹೊಸ ಬೆಳಕನ್ನು ಕೊಟ್ಟಿತು. ಪ್ರಪಂಚದ ಮಹಾ ಪುರುಷರುಗಳಾದ ಜೀಸಸ್, ಚೈತನ್ಯ ಮುಂತಾದವರ ಜೀವನದಲ್ಲಿ ಬರುವ ಅಸಾಮಾನ್ಯ ಘಟನೆಗಳನ್ನು ಓದಿ ನಾವು ಮೊದಲು ಸಂದೇಹ ಪಡುತ್ತಿದ್ದೆವು. ಆದರೆ ಅಂದು ಅಂಥ ಘಟನೆಗಳು ಶ್ರೀರಾಮಕೃಷ್ಣರ ಜೀವನದಲ್ಲಿ ಪ್ರತಿನಿತ್ಯ ಸಂಭವಿಸುತ್ತಿವೆ ಎಂಬುದನ್ನು ಅರಿತುಕೊಂಡೆವು. ತಮ್ಮನ್ನು ಆಶ್ರಯಿಸಿದವರಿಗೆ ಸ್ಪರ್ಶದ ಮೂಲಕ ಅಥವಾ ಕೇವಲ ಇಚ್ಛೆಯ ಮೂಲಕ ಅವರ ಹಳೆಯ ಸಂಸ್ಕಾರಗಳ ಗಂಟನ್ನು ಕಳಚಿ ಶ್ರೀರಾಮಕೃಷ್ಣರು ಭಕ್ತಿಯನ್ನು ನೀಡಿದರು, ಅವರು ಸಮಾಧಿಯನ್ನು ಪಡೆದು ದಿವ್ಯಾನಂದವನ್ನು ಅನು ಭವಿಸುವಂತೆ ಮಾಡಿದರು. ಅಥವಾ ಅವರ ಜೀವನದ ಗತಿಯನ್ನು ಬದಲಾಯಿಸಿ ಆಧ್ಯಾತ್ಮಿಕ ಮಾರ್ಗದ ಮೂಲಕ ಬೇಗನೆ ಭಗವತ್ ಸಾಕ್ಷಾತ್ಕಾರವನ್ನು ಪಡೆಯುವಂತೆ ಮಾಡಿದರು. ನರೇಂದ್ರನು ಸಂಜೆಯ ವೇಳೆ 'ಹೆದುವಾ' ಕೊಳದ ತೀರಕ್ಕೆ ನಮ್ಮನ್ನು ತಿರುಗಾಡಲು ಕರೆದುಕೊಂಡು ಹೋದ. ಆಗ ಶ್ರೀರಾಮಕೃಷ್ಣರ ಅನುಗ್ರಹದಿಂದ ತನಗಾದ ದಿವ್ಯ ಅನುಭವಗಳನ್ನೆಲ್ಲಾ ವಿವರಿಸಿದ. ತನ್ನಲ್ಲೇ ನಿಮಗ್ನನಾಗಿ ಸ್ವಲ್ಪಹೊತ್ತು ಸುಮ್ಮನಿದ್ದು ಅತ್ಯಂತ ಮಧುರವಾಗಿ ತನ್ನ ಹೃದಯದ ಅದ್ಭುತ ಆನಂದವನ್ನು ವ್ಯಕ್ತ ಪಡಿಸುತ್ತ ಈ ಹಾಡನ್ನು ಹಾಡಿದನು :

ಕುಂಭ ಕುಂಭಗಳಲಿ ತುಂಬಿ
ಗೌರಾಂಗನು ಪ್ರೇಮಸುಧೆಯ
ಕಡೆಯಿಲ್ಲದೆ ಸುರಿವನು
ನಿತ್ಯಾನಂದನೆಲ್ಲರನೂ
ಅಕ್ಕರೆಯಲಿ ಕರೆವನು
ಶಾಂತಿಪುರವು ಪ್ರೇಮಪೂರ–
ದಲ್ಲಿ ಇದೊ ಮುಳುಗಿತು,
ನದಿಯಾವೂ ಕೊಚ್ಚಿತು. (ವಚನವೇದದಿಂದ)

ಹಾಡುವುದು ಮುಗಿಯಿತು. ನರೇಂದ್ರನು ಸ್ವಗತವಾಗಿ ಎನ್ನುವಂತೆ ಮೆತ್ತಗೆ

ಹೇಳುತ್ತಿದ್ದಾನೆ: "ಅವರು ನಿಜವಾಗಿ ಪ್ರೀತಿಯನ್ನು ಹಂಚುತ್ತಿದ್ದಾರೆ. ಗೋರರಾಯನು ಪ್ರೇಮ, ಭಕ್ತಿ, ಜ್ಞಾನ, ಮುಕ್ತಿ ಇವುಗಳನ್ನು ಯಾರಿಗೆ ಯಾವುದು ಬೇಕೊ ಅದರಂತೆ ಹಂಚುತ್ತಿದ್ದಾನೆ. ಎಂಥ ಅದ್ಭುತ ಶಕ್ತಿ ! (ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಮುಂದು ವರಿಸಿದ) ನಾನು ರಾತ್ರಿ ಒಳಗಿನಿಂದ ಬಾಗಿಲ ಅಗಳಿಯನ್ನು ಹಾಕಿಕೊಂಡು ಮಲಗಿ ಕೊಂಡಿದ್ದ. ಆಗ ಇದ್ದಕ್ಕಿದ್ದಂತೆಯೆ ಶರೀರದ ಒಳಗೆ ಯಾವುದಿದೆಯೋ ಅದನ್ನು ಆಕರ್ಷಿಸಿ ದಕ್ಷಿಣೇಶ್ವರಕ್ಕೆ ಕರೆದುಕೊಂಡು ಹೋದರು ಅನಂತರ ಬಹಳ ಮಾತು ಉಪದೇಶಗಳಾದ ಮೇಲೆ ಪುನಃ ಹಿಂದಿರುಗುವಂತೆ ಮಾಡಿದರು. ಅವರು ಏನೂ ಮಾಡಬಲ್ಲರು–ದಕ್ಷಿಣೇಶ್ವರದ ಆ ಗೋರರಾಯ್ ಎಲ್ಲವನ್ನೂ ಮಾಡಬಲ್ಲರು.

17. ಸಂಧ್ಯೆಯ ಅಂಧಕಾರ ಘನೀಭೂತವಾಗಿ ರಾತ್ರಿಯು ಗಾಢಾಂಧಕಾರವಾಗಿ ಪರಿಣಮಿಸಿತು. ಪರಸ್ಪರರನ್ನು ಈಗ ನೋಡಲಾಗುತ್ತಿಲ್ಲ. ನೋಡುವ ಆವಶ್ಯಕತೆಯೂ ಇರಲಿಲ್ಲ. ಏಕೆಂದರೆ ನರೇಂದ್ರನ ಜ್ವಲಂತ ಭಾವರಾಶಿಯು ಹೃದಯವನ್ನು ಪ್ರವೇಶಿಸಿ ಒಂದು ರೀತಿಯ ದಿವ್ಯ ಉನ್ಮಾದವನ್ನು ಉಂಟು ಮಾಡಿತ್ತು. ದೇಹವು ತೂರಾಡುತ್ತಿರು ವಂತಿತ್ತು ಮತ್ತು ಇದುವರೆಗೂ ಇದ್ದ ಪ್ರಪಂಚವು ಕನಸಿನ ರಾಜ್ಯವನ್ನು ಪ್ರವೇಶಿಸಿ ದಂತಿತ್ತು. ಅಹೇತುಕ ಕೃಪೆಯ ಪರಿಣಾಮವಾಗಿ ಅನಂತ ಈಶ್ವರನು ಸಾಂತರೂಪವನ್ನು ಪಡೆದು ಜೀವಿಗಳ ಸಂಸ್ಕಾರ ಬಂಧನಗಳನ್ನು ನಾಶಗೊಳಿಸಿ ಧರ್ಮಚಕ್ರವನ್ನು ಪ್ರವರ್ತಿಸು ತ್ತಾನೆ. ಈ ಸತ್ಯವು ಜಗತ್ತಿನಲ್ಲಿ ಅನೇಕರ ಪಾಲಿಗೆ ಒಂದು ಸುಂದರ ಕಲ್ಪನೆ ಅಷ್ಟೆ. ಆದರೆ ಅಂದು ಇದು ಜೀವಂತ ಸತ್ಯವಾಗಿ ನಮ್ಮ ಮುಂದೆ ಕಾಣಿಸಿಕೊಂಡಿತು. ಸಮಯ ಹೇಗೆ ಕಳೆದು ಹೋಯಿತೊ ನಮಗೆ ತಿಳಿಯಲೇ ಇಲ್ಲ. ಆದರೆ ಇದ್ದಕ್ಕಿದ್ದಂತೆಯೇ ರಾತ್ರಿ ಒಂಭತ್ತು ಗಂಟೆ ಹೊಡೆದುದು ಕೇಳಿಸಿತು ಮನಸ್ಸಿಲ್ಲದ ಮನಸ್ಸಿನಿಂದ ನಾವು ನರೇಂದ್ರ ನಿಂದ ಬೀಳ್ಕೊಳ್ಳುವಾಗ ಅವನು ಹೇಳಿದ "ನಡೆಯಿರಿ ನಿಮ್ಮೊಡನೆ ನಾನು ಸ್ವಲ್ಪ ದೂರ ಬರುತ್ತೇನೆ." ಎಂದು. ಹೋಗುತ್ತಿದ್ದಂತೆಯೆ ಮತ್ತೆ ಮಾತು ಪ್ರಾರಂಭವಾಯಿತು. ಎಷ್ಟು ದೂರ ಹೋದೆವೊ ನಮಗೇ ತಿಳಿಯಲಿಲ್ಲ. ಚಾಂಪಾತಲದ ಹತ್ತಿರವಿದ್ದ ಮನೆಗೆ ಬಂದಾಗ ನರೇಂದ್ರನನ್ನು ಇಷ್ಟು ದೂರ ಬರುವಂತೆ ಮಾಡಬಾರದಿತ್ತು ಎಂದೆನಿಸಿತು. ಮನೆಗೆ ಕರೆದು ಅವನಿಗೆ ತಿಂಡಿಯನ್ನು ಕೊಟ್ಟು ಮತ್ತೆ ಅವನನ್ನು ಅವನ ಮನೆಯವರೆಗೆ ಕರೆದು ಕೊಂಡು ಹೋಗಿಬಿಟ್ಟೆವು. ಆ ದಿನಕ್ಕೆ ಸಂಬಂಧಪಟ್ಟ ಇನ್ನೊಂದು ವಿಷಯ ಸ್ಪಷ್ಟವಾಗಿ ನೆನಪಿದೆ. ನಮ್ಮ ಮನೆಯನ್ನು ಪ್ರವೇಶಿಸಿದ ಕೂಡಲೇ ನರೇಂದ್ರನು ಇದ್ದಕ್ಕಿದ್ದಂತೆಯೇ ಸ್ಥಿರವಾಗಿ ನಿಂತು ಹೇಳಿದನು: "ಈ ಮನೆಯನ್ನು ನಾನು ಮೊದಲೇ ನೋಡಿದ್ದೆನಲ್ಲ. ಇದ ರಲ್ಲಿ ಎಲ್ಲಿಂದ ಎಲ್ಲಿಗೆ ಹೋಗಬೇಕು. ಎಲ್ಲಿ ಯಾವ ಕೊಠಡಿ ಇದೆ ಇದೆಲ್ಲ ನನಗೆ ಗೊತ್ತಿದೆ–ಆಶ್ಚರ್ಯ !" ನರೇಂದ್ರನ ಜೀವನದಲ್ಲಿ ಆಗಾಗ ಈ ರೀತಿಯ ಅನುಭವ ವಾಗುವುದನ್ನೂ ಅದಕ್ಕೆ ಕಾರಣವನ್ನೂ ನಾವು ಓದುಗರಿಗೆ ಬೇರೆ ಕಡೆ ತಿಳಿಸಿರುವೆವು. ಆದ್ದರಿಂದ ಅದನ್ನು ಇಲ್ಲಿ ಮತ್ತೆ ಪುನರಾವರ್ತಿಸುವುದಿಲ್ಲ.

## ಏಳನೆಯ ಅಧ್ಯಾಯ

# ಶ್ರೀರಾಮಕೃಷ್ಣರ ಪರೀಕ್ಷಾ ವಿಧಾನ ಮತ್ತು ನರೇಂದ್ರನಾಥ್

1. ಜನರ ಸ್ವಭಾವವನ್ನು ಪರೀಕ್ಷಿಸುವ ಶ್ರೀರಾಮಕೃಷ್ಣರ ಅದ್ಭುತ ಕಲೆ 2. ಪರೀಕ್ಷೆಯ ಸಾಮಾನ್ಯ ವಿಧಾನ 3. ಶ್ರೇಷ್ಠ ಅಧಿಕಾರಿಯೊಬ್ಬನು ಪ್ರಥಮ ಬಾರಿಗೆ ಬಂದಾಗ ಶ್ರೀರಾಮಕೃಷ್ಣರಿಗೆ ಅವನಿಗನುರೂಪವಾದ ಭಾವಾವೇಶವುಂಟಾಗುತ್ತಿತ್ತು 4. ಅವರು ಜನರನ್ನು ಪರೀಕ್ಷಿಸುವ ನಾಲ್ಕು ವಿಧಾನಗಳು 5. ದೇಹಲಕ್ಷಣಗಳ ಮೂಲಕ ಮಾನಸಿಕ ಪ್ರವೃತ್ತಿಯನ್ನು ತಿಳಿಯುವುದು 6. ಈ ವಿಷಯದಲ್ಲಿ ಶ್ರೀರಾಮ ಕೃಷ್ಣರಿಗಿದ್ದ ಅದ್ಭುತ ಜ್ಞಾನ 7. ಮುಂಗೈ ತೂಗುವುದರ ಮೂಲಕ ಬುದ್ಧಿಯ ಒಳಿತು ಕೆಡಕನ್ನು ನಿರ್ಣಯಿಸುವುದು 8. ದೈನಂದಿನ ಶಾರೀರಿಕ ಕ್ರಿಯೆಗಳೂ ಸಂಸ್ಕಾರ ವೈವಿಧ್ಯವನ್ನು ಸೂಚಿಸುತ್ತವೆ. 9. ದ್ವಾರಪಾಲಕ ಹನುಮಾನ್ ಸಿಂಗ್ 10. ಕಾರ್‍ಯ ಮತ್ತು ಅಂಗರಚನೆಯ ಮೂಲಕ ಮಹಿಳೆಯ ಸ್ವಭಾವವನ್ನು ನಿರ್ಣಯಿಸು ವುದು 11. ನರೇಂದ್ರನ ಭೌತಿಕ ಲಕ್ಷಣಗಳ ಬಗ್ಗೆ ಶ್ರೀರಾಮಕೃಷ್ಣರ ಹೇಳಿಕೆ 12. ಸಾಮಾನ್ಯ ಕಾರ್‍ಯಗಳಲ್ಲಿ ಕಂಡುಬರುವ ಮಾನಸಿಕ ಪ್ರತಿಕ್ರಿಯೆಗಳ ಮೂಲಕ ಒಬ್ಬನ ಸ್ವಭಾವವನ್ನು ನಿರ್ಣಯಿಸುವುದು 13. ಬಾಲಕರ ಬಗ್ಗೆ ಶ್ರೀರಾಮಕೃಷ್ಣರು 14. ತಮ್ಮೆಡೆಗೆ ಬರುತ್ತಿದ್ದ ಭಕ್ತರ ನೈತಿಕ ಮತ್ತು ಆಧ್ಯಾತ್ಮಿಕ ಉನ್ನತಿಯನ್ನು ಅಳೆ ಯುತ್ತಿದ್ದರು 15. ಇದಕ್ಕೆ ಉದಾಹರಣೆಗಳು 16. ಗಂಗೆಯಲ್ಲಿ ಉಬ್ಬರ 17. ವಿವಾಹ ಮತ್ತು ಚಾಕರಿಯ ಸಂಬಂಧವಾಗಿ ಶ್ರೀರಾಮಕೃಷ್ಣರು 18. ಭಗವಂತ ನಲ್ಲಿ ಸರಳ ವಿಶ್ವಾಸ ಮತ್ತು ದಡ್ಡತನ ಒಂದೇ ಅಲ್ಲ 19. ಮಾರ್ದವತೆ ಮತ್ತು ಕಠೋರತೆಯನ್ನು ಕುರಿತು ವ್ಯಕ್ತಿಗನುಗುಣವಾಗಿ ಉಪದೇಶ 20. ಗುರುನಿಂದೆ ಯನ್ನು ವಿರೋಧಿಸದಿದ್ದುದಕ್ಕೆ ಯೋಗಾನಂದರಿಗೆ ಭರ್ತ್ಸನೆ 21. ಅದೇ ಸನ್ನಿವೇಶಕ್ಕೆ ಸಂಬಂಧಿಸಿದಂತೆ ನಿರಂಜನನಿಗೆ ಬೇರೆ ರೀತಿಯ ಉಪದೇಶ 22. ಸ್ತ್ರೀ ಭಕ್ತರಿಗೂ ಅದೇ ರೀತಿ ಉಪದೇಶಿಸುತ್ತಿದ್ದರು 23. ಹರೀಶನ ಕಥೆ "ದಯೆ ತೋರಿಸುವುದಕ್ಕೆ ಇದು ಯೋಗ್ಯವಲ್ಲ" 24. ವ್ಯಕ್ತಿಗಳ ಚಿಕ್ಕಪುಟ್ಟ ಕೆಲಸಗಳನ್ನೂ ಗಮನಿಸಿ ಶ್ರೀರಾಮ ಕೃಷ್ಣರು ಅದಕ್ಕನುಗುಣವಾಗಿ ಉಪದೇಶವೀಯುತ್ತಿದ್ದರು 25. ತಮ್ಮನ್ನು ಎಷ್ಟರ ಮಟ್ಟಿಗೆ ಅರ್ಥಮಾಡಿಕೊಂಡಿದ್ದಾನೆ ಎಂಬುದರ ಮೇಲೆ ವ್ಯಕ್ತಿಯ ಆಧ್ಯಾತ್ಮಿಕ ಉನ್ನತಿ ಯನ್ನು ನಿರ್ಣಯಿಸುವುದು 26. ಈ ವಿಧಾನವನ್ನು ಅಳವಡಿಸಿಕೊಳ್ಳುವುದಕ್ಕೆ ಕಾರಣ 27. "ನನ್ನ ಬಗ್ಗೆ ನಿನ್ನ ಅಭಿಪ್ರಾಯವೇನು"–ಈ ಪ್ರಶ್ನೆಗೆ ಬೇರೆ ಬೇರೆ ಭಕ್ತರ ಬೇರೆ ಬೇರೆ ಉತ್ತರ 28. ಮೊದಲನೆಯ ಉದಾಹರಣೆ : ಭಕ್ತ ಪೂರ್ಣಚಂದ್ರ 29. ಪೂರ್ಣನನ್ನು ಕಂಡು ಶ್ರೀರಾಮಕೃಷ್ಣರಿಗೆ ಸಂತೋಷ ಮತ್ತು ಅವನ ಪ್ರಶಂಸೆ 30. ಪೂರ್ಣನ ಮೇಲೆ ಅವರ ಪ್ರೀತಿ, ಅವನನ್ನು ನೋಡಬೇಕೆಂಬ ಅವರ ವ್ಯಾಕುಲತೆ 31. ಎರಡನೆಯ ಉದಾಹರಣೆ : ಅದೇ ಪ್ರಶ್ನೆಗೆ ಇನ್ನೊರ್ವ ಭಕ್ತನ ಉತ್ತರ 32. ಮಾತು ಕೃತಿ ಒಂದೇ ಇಲ್ಲದವರನ್ನು ನಂಬಬಾರದು 33. ಉದಾಹರಣೆಗೆ : ವೈದ್ಯ ಮತ್ತು ಬಾಲಕ ರೋಗಿಯ ಕಥೆ 34. ಭಕ್ತರೂ ಶ್ರೀರಾಮಕೃಷ್ಣರನ್ನು

ಪರೀಕ್ಷಿಸಿದ ಮೊದಲ ದೃಷ್ಟಾಂತ: ಸ್ವಾಮಿ ಯೋಗಾನಂದರ ಕಥೆ 35. ಯೋಗಿಂದ್ರನ ಸತ್ಸಂಸ್ಕಾರಗಳು ಮತ್ತು ಬುದ್ಧಿಶಕ್ತಿ 36. ಯೋಗೀಂದ್ರನ ವಿವಾಹ, ಅದರಿಂದ ಅವನ ಮನಸ್ಸಿನ ಮೇಲಾದ ಪರಿಣಾಮ 37. ಶ್ರೀರಾಮಕೃಷ್ಣರ ಮೇಲೆ ಅವನ ಸಂದೇಹ 38. ಯೋಗೀಂದ್ರನು ಗುರುವಿಗೆ ಶರಣಾಗತನಾಗುತ್ತಾನೆ 39. ನರೇಂದ್ರನ ಕ್ರಿಯೆಗಳನ್ನು ಗಮನಿಸಿ ಅವನ ಬಗ್ಗೆ ಶ್ರೀರಾಮಕೃಷ್ಣರ ಅಭಿಪ್ರಾಯ 40. ನರೇಂದ್ರ ಬಾವುಲಿಯನ್ನು ಚಾತಕವೆಂದು ಭ್ರಮಿಸಿದುದು 41. ನರೇಂದ್ರನ ಆತ್ಮ-ನಿಗ್ರಹ 42. ನರೇಂದ್ರನ ಭಕ್ತಿ ಭಾವವನ್ನು ಭೌತಿಕ ಲಕ್ಷಣಗಳ ಮೂಲಕ ಗುರುತಿಸುವುದು 43. ಶ್ರೀರಾಮಕೃಷ್ಣರು ಉದಾಸೀನರಾದಾಗ ನರೇಂದ್ರನ ವರ್ತನೆ 44. ನರೇಂದ್ರನು ಪವಾಡಶಕ್ತಿಯನ್ನು ನಿರಾಕರಿಸಿದುದು.

1. ಅಸಾಧಾರಣ ಲಕ್ಷಣಗಳನ್ನು ಕಂಡು ಉತ್ತಮ ಅಧಿಕಾರಿಯೆಂದು ನಿರ್ಣಯಿಸಿ ಶ್ರೀರಾಮಕೃಷ್ಣರು ನರೇಂದ್ರನಾಥನನ್ನು ಮೊದಲಿನಿಂದಲೂ ಅಪೂರ್ವ ಅಹೇತುಕ ಪ್ರೀತಿಯಿಂದ ಬಂಧಿಸಿದರು ಮತ್ತು ಆಗಾಗ ಅವನನ್ನು ಪರೀಕ್ಷಿಸುತ್ತ ಎಲ್ಲ ವಿಷಯ ದಲ್ಲಿಯೂ ಅವನಿಗೆ ಶಿಕ್ಷಣ ನೀಡುತ್ತಿದ್ದರು. ಅವರು ಅವನನ್ನು ಯಾವ ರೀತಿ ಪರೀಕ್ಷಿಸು ತ್ತಿದ್ದರು ಎಂಬುದನ್ನು ಈಗ ನೋಡೋಣ.

ಕೂಚ್ ಬಿಹಾರ್ ವಿವಾಹದ ದೆಸೆಯಿಂದ ಬ್ರಹ್ಮ ಸಮಾಜವು ಇಬ್ಭಾಗವಾದಾಗ ಇದಕ್ಕೆ ಸಂಬಂಧ ಪಟ್ಟಂತೆ ಕೇಶವಚಂದ್ರಸೇನನಿಗೆ ಶ್ರೀರಾಮಕೃಷ್ಣರು ಹೇಳಿದ್ದರು: "ನೀನು ಪರೀಕ್ಷೆ ಮಾಡದೆ ಸಿಕ್ಕಿದವರನ್ನೆಲ್ಲ ಸಂಘಕ್ಕೆ ಸೇರಿಸಿಕೊಳ್ಳುತ್ತೀಯೆ. ಇದರಿಂದ ಸಂಘವು ಒಡೆದು ಹೋಗುವುದರಲ್ಲಿ ಆಶ್ಚರ್ಯವೇನಿದೆ? ನಾನು ಪರೀಕ್ಷೆ ಮಾಡದೆ ಯಾರನ್ನೂ ಸ್ವೀಕರಿಸುವುದಿಲ್ಲ." ನಿಜವಾಗಿಯೂ ತಮ್ಮೆಡೆಗೆ ಬರುತ್ತಿದ್ದ ಭಕ್ತರನ್ನು ಅವರಿಗೆ ತಿಳಿದೂ ತಿಳಿಯದೆಯೊ ಎಷ್ಟೊಂದು ಬಗೆಯಲ್ಲಿ ಶ್ರೀರಾಮಕೃಷ್ಣರು ಪರೀಕ್ಷಿಸು ತ್ತಿದ್ದರು ಎಂಬುದನ್ನು ನೋಡಿದಾಗ ಆಶ್ಚರ್ಯವಾಗುತ್ತದೆ. ಅವರು ನಿರಕ್ಷರರೆಂದೇ ಎಲ್ಲರಿಗೂ ಪರಿಚಿತರಾಗಿದ್ದರು. ಹಾಗಿದ್ದರೂ ಕೂಡ ಜನರ ಸ್ವಭಾವವನ್ನು ಅರಿಯುವ ಆ ಎಲ್ಲ ವಿಧಾನಗಳನ್ನು ಅವರು ಎಲ್ಲಿಂದ ಸಂಗ್ರಹಿಸಿದರು ಎಂಬುದು ಆಶ್ಚರ್ಯವನ್ನು ಹುಟ್ಟಿಸುತ್ತದೆ. ಅವರು ಹಿಂದಿನ ಜನ್ಮದಲ್ಲಿ ಪಡೆದ ವಿದ್ಯೆ ಈ ಜನ್ಮದಲ್ಲಿ ಜಾಗ್ರತವಾಗಿರ ಬಹುದೇ ಅಥವಾ ಸಾಧನೆಯ ಪ್ರಭಾವದಿಂದ ಅವರು ಪಡೆದ ಋಷಿಸದೃಶವಾದ ಅತೀಂದ್ರಿಯ ಜ್ಞಾನ ಮತ್ತು ಸರ್ವಜ್ಞತ್ವದ ಫಲವೇ ಅಥವಾ ಅವರು ತಮ್ಮ ಅಂತ ರಂಗ ಭಕ್ತರಿಗೆ ತಿಳಿಸಿದಂತೆ ತಾವು ಭಗವಂತನ ಅವತಾರವಾಗಿದ್ದುದರಿಂದ ಈ ವಿಶೇಷ ಜ್ಞಾನವು ಪ್ರಕಾಶಗೊಂಡಿತೇ? ಹೀಗೆ ಇದನ್ನು ಕುರಿತಂತೆ ಅನೇಕ ವಿಷಯಗಳು ಮನಸ್ಸಿಗೆ ಬಂದರೂ ಇದರ ವಿಷಯವಾಗಿ ಚರ್ಚಿಸಲು ಹೊರಟಿಲ್ಲ, ಸುಮ್ಮನೆ ಇದಕ್ಕೆ ಸಂಬಂಧ ಪಟ್ಟ ಘಟನೆಗಳನ್ನು ವಿವರಿಸಿ ಅದರ ಗೂಢಾರ್ಥವನ್ನು ತಿಳಿಯುವ ಭಾರವನ್ನು ಓದುಗ ರಿಗೇ ಬಿಡುತ್ತೇವೆ.

2. ಶ್ರೀರಾಮಕೃಷ್ಣರು ಜನರ ಸ್ವಭಾವವನ್ನು ಅರಿಯುವುದಕ್ಕೆ ಯಾವ ವಿಧಾನ

ಗಳನ್ನು ಅನುಸರಿಸುತ್ತಿದ್ದರು ಎಂಬುದಕ್ಕೆ ಇಲ್ಲಿ ಕೆಲವು ಘಟನೆಗಳನ್ನು ಹೇಳಿದರೆ ಅವುಗಳ ಅಲೌಕಿಕತ್ವ ಓದುಗರಿಗೆ ವೇದ್ಯವಾಗುತ್ತದೆ. ಆದರೆ ಅದಕ್ಕೆ ಮುಂಚೆ ಅವುಗಳ ವಿಚಾರವಾಗಿ ಕೆಲವು ಮಾತುಗಳನ್ನು ಹೇಳುವುದು ಆವಶ್ಯಕ. ಯಾವ ವ್ಯಕ್ತಿಯಾಗಲಿ ಶ್ರೀರಾಮಕೃಷ್ಣರೆಡೆಗೆ ಬಂದಾಗ ಅವನನ್ನು ಅವರು ತದೇಕ ದೃಷ್ಟಿಯಿಂದ ನೋಡುತ್ತಿದ್ದರು. ಹೀಗೆ ಮಾಡಿದಾಗ ಅವನ ಬಗ್ಗೆ ಅವರ ಮನಸ್ಸಿನಲ್ಲಿ ಸ್ವಲ್ಪವಾದರೂ ಆಕರ್ಷಣೆ ಉಂಟಾದರೆ ಅವನೊಡನೆ ಸಾಧಾರಣ ರೀತಿಯಲ್ಲಿ ಧಾರ್ಮಿಕ ವಿಚಾರವಾಗಿ ಮಾತನಾಡುತ್ತಿದ್ದರು ಮತ್ತು ತಮ್ಮೆಡೆಗೆ ಬಂದು ಹೋಗಲು ಹೇಳುತ್ತಿದ್ದರು. ಹೀಗೆ ದಿನಕಳೆದಂತೆಲ್ಲ ಅವನು ಅವರೆಡೆಗೆ ಹೆಚ್ಚು ಹೆಚ್ಚು ಬರತೊಡಗಲು ಅವರು ಅವನಿಗರಿವಿಲ್ಲದಂತೆಯೆ ಪರೀಕ್ಷಿಸುತ್ತಿದ್ದರು. ಅವನ ಶಾರೀರಿಕ ಅಂಗಾಂಗಗಳ ರಚನೆ, ಅವನ ಮಾನಸಿಕ ಭಾವಗಳು, ಕಾಮಕಾಂಚನಾಸಕ್ತಿ, ಭೋಗತೃಷ್ಣೆ ಮತ್ತು ಇದರ ಪರಿಣಾಮ, ತಮ್ಮ ಕಡೆ ಅವನ ಮನಸ್ಸು ಎಷ್ಟರ ಮಟ್ಟಿಗೆ ಆಕರ್ಷಿತವಾಗಿದೆ, ಅವನ ಚಲನವಲನ, ಮಾತುಕತೆ, ಇವನ್ನೆಲ್ಲ ಸೂಕ್ಷ್ಮವಾಗಿ ಅವರು ಪರೀಕ್ಷಿಸುತ್ತಿದ್ದರು. ಇದರ ಮೂಲಕ ಅವನಲ್ಲಿ ಸುಪ್ತವಾಗಿರುವ ಆಧ್ಯಾತ್ಮಿಕತೆಯ ಬಗ್ಗೆ ಒಂದು ನಿಶ್ಚಿತವಾದ ನಿರ್ಣಯಕ್ಕೆ ಬರುತ್ತಿದ್ದರು. ಹೀಗೆ ಮೂರು ನಾಲ್ಕು ದಿನದ ಭೇಟಿಯಿಂದಲೆ ಆ ವ್ಯಕ್ತಿಯ ಬಂಡವಾಳವನ್ನು ನಿಸ್ಸಂದೇಹವಾಗಿ ತಿಳಿದು ಬಿಡುತ್ತಿದ್ದರು. ಇನ್ನು ಆ ವ್ಯಕ್ತಿಯ ನಿಗೂಢವಾದ ಯಾವುದೇ ವಿಷಯವನ್ನು ತಿಳಿಯಬೇಕಾದ ಆವಶ್ಯಕತೆ ಇದ್ದರೆ ತಮ್ಮ ಯೋಗದೃಷ್ಟಿಯನ್ನು ಉಪಯೋಗಿಸುತ್ತಿದ್ದರು. ಈ ವಿಷಯದಲ್ಲಿ ಅವರು ಒಮ್ಮೆ ನಮಗೆ ಹೀಗೆ ಹೇಳಿದ್ದರು : "ರಾತ್ರಿ ಕಳೆದ ಮೇಲೆ ಒಬ್ಬನೇ ಕುಳಿತು ನಿಮ್ಮೆಲ್ಲರ ಹಿತ ಚಿಂತನೆ ಮಾಡುತ್ತಿರುವಾಗ ತಾಯಿಯು ನನಗೆಲ್ಲವನ್ನು ತಿಳಿಸಿಕೊಡುತ್ತಾಳೆ ಮತ್ತು ತೋರಿಸಿಕೊಡುತ್ತಾಳೆ. ಯಾರು ಎಷ್ಟು ಉನ್ನತಿಯನ್ನು ಪಡೆದಿದ್ದಾರೆ, ಯಾರಿಗೆ ಯಾವ ಕಾರಣದಿಂದ ಉನ್ನತಿ ಆಗುತ್ತಿಲ್ಲ ಇತ್ಯಾದಿಯಾಗಿ ಎಲ್ಲವನ್ನೂ ತೋರಿಸಿಕೊಡುತ್ತಾಳೆ." ಶ್ರೀರಾಮಕೃಷ್ಣರ ಯೋಗದೃಷ್ಟಿ ಕೇವಲ ಆ ಸಮಯದಲ್ಲಿ ಮಾತ್ರ ತೆರೆಯುತ್ತಿತ್ತು ಎಂದು ಓದುಗರು ಭಾವಿಸಬಾರದು. ತಾವು ಇಚ್ಛಿಸಿದರೆ ಉಚ್ಚ ಭಾವಸ್ತರವನ್ನು ಏರಿ ಎಲ್ಲ ಸಮಯದಲ್ಲೂ ಆ ದೃಷ್ಟಿಯನ್ನು ಪಡೆಯುವ ಸಾಮರ್ಥ್ಯ ಅವರಿಗಿತ್ತು ಎಂಬುದು ಅವರ ಬೇರೆ ಮಾತುಗಳಿಂದ ತಿಳಿದು ಬರುತ್ತದೆ. ಉದಾಹರಣೆಗೆ: "ಗಾಜಿನ ಬೀರುವನ್ನು ನೋಡಿದಾಗ ಅದರ ಒಳಗಿರುವ ಪದಾರ್ಥಗಳೆಲ್ಲ ಕಣ್ಣಿಗೆ ಕಾಣಿಸುವಂತೆ ಮನುಷ್ಯರನ್ನು ನೋಡಿದ ಕೂಡಲೇ ಅವರ ಆಲೋಚನೆ, ಸಂಸ್ಕಾರಾದಿಗಳೆಲ್ಲವೂ ನನಗೆ ಕಂಡು ಬಿಡುತ್ತವೆ"–ಇತ್ಯಾದಿ.

3. ಶ್ರೀರಾಮಕೃಷ್ಣರು ಜನರ ಸ್ವಭಾವವನ್ನು ಅರಿಯಲು ಈ ಮೇಲಿನ ವಿಧಾನಗಳನ್ನು ಸಾಮಾನ್ಯವಾಗಿ ಅನುಸರಿಸುತ್ತಿದ್ದರು. ಆದರೆ ಕೆಲವರು ವಿಶಿಷ್ಟ ಅಂತರಂಗ ಭಕ್ತರ ವಿಷಯದಲ್ಲಿ ಈ ನಿಯಮದ ಉಲ್ಲಂಘನೆ ಆಗಿರುವುದನ್ನು ಕಾಣುತ್ತೇವೆ. ದೈವಾನುಗ್ರಹದಿಂದ ಅವರು ಉನ್ನತ ಪ್ರಜ್ಞಾಸ್ತರದಲ್ಲಿರುವಾಗ ಆ ಭಕ್ತನನ್ನು ಪ್ರಥಮ ಬಾರಿಗೆ ಸಂಧಿಸುತ್ತಿದ್ದರು. ಶ್ರೀರಾಮಕೃಷ್ಣರ ಅದ್ಭುತ ಸಾಧನೆಯ ಫಲವಾಗಿ ಅವರ

ಶರೀರ ಮನಸ್ಸುಗಳು ಸೂಕ್ಷ್ಮ ಆಧ್ಯಾತ್ಮಿಕ ಶಕ್ತಿಗಳನ್ನು ಗ್ರಹಿಸಲು ಮತ್ತು ಪ್ರಯೋಗಿಸಲು ಒಂದು ಯಂತ್ರಸ್ವರೂಪದಂತೆ ಆಗಿದ್ದುವು. ಈ ಮಾತು ಒಂದು ಕಾಲದಲ್ಲಿ ಅಕ್ಷರಶಃ ಸತ್ಯವಾಯಿತು. ಯಾವುದೇ ಒಂದು ವಿಶಿಷ್ಟ ಆಧ್ಯಾತ್ಮಿಕ ಭಾವದಿಂದ ಕೂಡಿದ ವ್ಯಕ್ತಿಯನ್ನು ನೋಡಿದಾಗ ದೈವೇಚ್ಛೆಯಿಂದ ಆ ಭಾವವು ಶ್ರೀರಾಮಕೃಷ್ಣರ ಅಂತರಂಗದಲ್ಲಿ ಪ್ರತಿಬಿಂಬಿತವಾಗುತ್ತಿತ್ತು. ಪೂರ್ವಕರ್ಮ ಮತ್ತು ಸಂಸ್ಕಾರಗಳ ಫಲವಾಗಿ, ಆಧ್ಯಾತ್ಮಿಕ ರಾಜ್ಯದಲ್ಲಿ ಯಾರು ಎಷ್ಟು ದೂರ ಮೇಲೇರಿರುವರು ಎಂಬುದು ಅವರಿಗೆ ತಿಳಿಯುತ್ತಿತ್ತು. ಶ್ರೀರಾಮಕೃಷ್ಣರ ಮನಸ್ಸು ವ್ಯಕ್ತಿಯ ಮಾನಸಿಕ ಸ್ತರಕ್ಕೆ ಏರಿ ಅವನ ಆಂತರಿಕ ಸ್ಥಿತಿಯನ್ನು ಅವರಿಗೆ ತಿಳಿಸಿಕೊಡುತ್ತಿತ್ತು. ನರೇಂದ್ರನನ್ನು ಪ್ರಥಮ ಬಾರಿಗೆ ಶ್ರೀರಾಮಕೃಷ್ಣರು ನೋಡಿದಾಗಿನಿಂದ ಅವರಿಗಾದ ಅನುಭವಗಳ ಮೂಲಕ ನಾವು ಮೇಲಿನ ಈ ವಿಷಯವನ್ನು ಅರ್ಥಮಾಡಿಕೊಳ್ಳಬಹುದು.

4. ಹೀಗಿದ್ದರೂ ಜನರ ಸ್ವಭಾವವನ್ನು ಅರಿಯಲು ಶ್ರೀರಾಮಕೃಷ್ಣರು ಸಾಧಾರಣವಾಗಿ ಅವಲಂಬಿಸುತ್ತಿದ್ದ ಕ್ರಮಗಳನ್ನು ತಮ್ಮ ಅಂತರಂಗ ಭಕ್ತರ ವಿಷಯದಲ್ಲಿ ಪ್ರಯೋಗಿಸುತ್ತಿರಲಿಲ್ಲ ಎನ್ನುವಂತಿಲ್ಲ. ಅವರು ಸಾಧಾರಣ ಭಾವಾವಸ್ಥೆಯಲ್ಲಿರುವಾಗ ಈ ಉಪಾಯಗಳನ್ನು ಬೇರೆಯವರ ವಿಷಯವಿರಲಿ ನರೇಂದ್ರನ ಮೇಲೆಯೂ ಪ್ರಯೋಗಿಸುತ್ತಿದ್ದರು. ಆದ್ದರಿಂದ ಈ ವಿಷಯವನ್ನು ಓದುಗರಿಗೆ ತಿಳಿಸುವುದು ಇಲ್ಲಿ ಆವಶ್ಯಕ. ಈ ಪರೀಕ್ಷಾ ವಿಧಾನಗಳನ್ನು ನಾಲ್ಕು ವಿಧಾನಗಳಾಗಿ ವಿಂಗಡಿಸಬಹುದು. ನಾವು ಮೊದಲೇ ಈ ವಿಷಯವನ್ನು ಸೂಚ್ಯವಾಗಿ ತಿಳಿಸಿರುವೆವು. ಆದ್ದರಿಂದ ಇಲ್ಲಿ ಈ ನಾಲ್ಕು ವಿಭಾಗಗಳನ್ನು ದೃಷ್ಟಾಂತಗಳ ಮೂಲಕ ವಿವರಿಸಲು ಪ್ರಯತ್ನಿಸುತ್ತೇವೆ ;

5. ಮೊದಲನೆಯದಾಗಿ ಶಾರೀರಿಕ ಲಕ್ಷಣಗಳನ್ನು ನೋಡಿ ಶ್ರೀರಾಮಕೃಷ್ಣರು ತಮ್ಮೆಡೆಗೆ ಬರುತ್ತಿದ್ದ ವ್ಯಕ್ತಿಗಳ ಪೂರ್ವ ಸಂಸ್ಕಾರಗಳು ಎಂತಹವು ಎಂಬುದನ್ನು ನಿರ್ಣಯಿಸುತ್ತಿದ್ದರು. ನಮ್ಮ ಆಲೋಚನೆಗಳು ಕ್ರಿಯಾರೂಪದಲ್ಲಿ ವ್ಯಕ್ತವಾಗುವಾಗ ನಮ್ಮ ಮಿದುಳು ಮತ್ತು ದೇಹದ ಭಾಗದ ಮೇಲೆ ತಮ್ಮ ಗುರುತನ್ನು ಬಿಡುತ್ತವೆ. ಆಧುನಿಕ ಶರೀರಶಾಸ್ತ್ರ ಮತ್ತು ಮನಶ್ಶಾಸ್ತ್ರಗಳು ಈ ನಂಬಿಕೆಯನ್ನು ಬಹುಮಟ್ಟಿಗೆ ಸಾಬೀತು ಪಡಿಸಿವೆ. ವೇದ ಮತ್ತು ಇತರ ಶಾಸ್ತ್ರಗಳು ಈ ವಿಷಯವನ್ನು ಬಹು ಹಿಂದಿನ ಕಾಲದಿಂದಲೂ ಹೇಳಿಕೊಂಡು ಬಂದಿವೆ. ವೇದ ಸ್ಮೃತಿ ಪುರಾಣ ದರ್ಶನ ಮುಂತಾದ ಹಿಂದೂ ಶಾಸ್ತ್ರಗಳು ಮನಸ್ಸು ದೇಹವನ್ನು ಸೃಷ್ಟಿಸುತ್ತದೆ ಎಂದು ಸಾರುವುವು. ಮನುಷ್ಯನ ಆಲೋಚನೆಗಳು ಒಳ್ಳೆಯ ಅಥವಾ ಕೆಟ್ಟ ಹಾದಿಯಲ್ಲಿ ನಿರಂತರವಾಗಿ ಪ್ರವಹಿಸುತ್ತಿದ್ದರೆ ಅವನ ದೇಹವೂ ಕೂಡ ಆ ಆಲೋಚನೆಗಳ ಪೂರ್ತಿಗೆ ಸಹಾಯಕವಾಗುವ ರೀತಿಯಲ್ಲಿ ಬದಲಾವಣೆಯನ್ನು ಹೊಂದುವುದು. ದೇಹ ಮತ್ತು ಅಂಗಾಂಗಗಳ ರಚನೆಯನ್ನು ನೋಡಿ ಜನರ ನಡತೆಯನ್ನು ನಿರ್ಣಯಿಸುವ ಅನೇಕ ಗಾದೆ ಮಾತುಗಳು ರೂಢಿಯಲ್ಲಿವೆ. ಮದುವೆಗೆ ಮುಂಚೆ ವಧುವಿನ ಅಂಗರಚನೆಗಳನ್ನು ಪರೀಕ್ಷಿಸುವ ರೂಢಿ ಇತ್ತೀಚಿನವರೆಗೂ ಇತ್ತು. ಹಾಗೆಯೆ ಗುರುವೂ ಕೂಡ ದೀಕ್ಷೆಗೆ ಮುಂಚೆ ಶಿಷ್ಯನನ್ನು ಪರೀಕ್ಷಿಸುತ್ತಿದ್ದನು.

6. ಆದ್ದರಿಂದ ಎಲ್ಲಾ ಶಾಸ್ತ್ರಗಳಲ್ಲಿಯೂ ನಂಬಿಕೆ ಇಟ್ಟಿದ್ದ ಶ್ರೀರಾಮಕೃಷ್ಣರು ತಮ್ಮ ಶಿಷ್ಯರನ್ನು ಈ ರೀತಿ ಪರೀಕ್ಷಿಸಿದುದರಲ್ಲಿ ಆಶ್ಚರ್ಯವೇನಿಲ್ಲ. ಕೆಲವು ಸಂದರ್ಭ ಗಳಲ್ಲಿ ಅವರು ಮಾತಿನ ಮಧ್ಯೆ ಇದಕ್ಕೆ ಸಂಬಂಧಪಟ್ಟಂತೆ ಎಷ್ಟೋ ವಿಷಯಗಳನ್ನು ಹೇಳುತ್ತಿದ್ದರು. ನಮಗೆ ಅದನ್ನು ಕೇಳಿ ಇದರ ಬಗ್ಗೆ ಇಷ್ಟೊಂದು ಮಾಹಿತಿಗಳನ್ನು ಅವರು ಎಲ್ಲಿ ಸಂಗ್ರಹಿಸಿದರು ಎಂದು ಆಶ್ಚರ್ಯವಾಗುತ್ತಿತ್ತು. ಈ ವಿಷಯಕ್ಕೆ ಸಂಬಂಧಪಟ್ಟ ಉದ್ಗ್ರಂಥವೊಂದು ಇರಬಹುದೇ ? ಅದನ್ನು ಓದಿಯೋ ಅಥವಾ ಕೇಳಿಯೋ ಅವರು ಇದನ್ನೆಲ್ಲ ತಿಳಿದುಕೊಂಡಿರಬಹುದೇ—ಎಂದೆಲ್ಲ ನಾವು ಚಿಂತಿಸುತ್ತಿದ್ದೆವು. ಆದರೆ ನಾವು ಇದುವರೆವಿಗೂ ಅಂಥ ಪುಸ್ತಕವನ್ನು ನೋಡಿಯೂ ಇಲ್ಲ ಕೇಳಿಯೂ ಇಲ್ಲ. ನಾವು ಅವರು ಹೇಳಿದುದನ್ನು ಆಶ್ಚರ್ಯಚಕಿತರಾಗಿ ಕೇಳುತ್ತಿದ್ದೆವು. ಮನುಷ್ಯ ದೇಹದ ಪ್ರತಿಯೊಂದು ಅಂಗದ ಮತ್ತು ಇಂದ್ರಿಯ ರಚನೆ, ಅವನ ದೈನಂದಿನ ಜ್ಞಾನ ಮತ್ತು ಅವುಗಳ ಉತ್ತಮ ಮತ್ತು ಕೆಟ್ಟ ಪರಿಣಾಮಗಳು—ಇವನ್ನೆಲ್ಲ ಶ್ರೀರಾಮಕೃಷ್ಣರು ತುಂಬ ವಿವರವಾಗಿ ಮನೋಜ್ಞವಾಗಿ ತಿಳಿಸಿಕೊಡುತ್ತಿದ್ದರು. ಉದಾಹರಣೆಗೆ ಒಬ್ಬ ವ್ಯಕ್ತಿಯ ಕಣ್ಣುಗಳನ್ನು ತೆಗೆದುಕೊಳ್ಳಿ. ಕೆಲವರ ಕಣ್ಣುಗಳು ಕಮಲದ ದಳಗಳಂತಿರುತ್ತವೆ, ಇನ್ನು ಕೆಲವರಲ್ಲಿ ಅವು ಗೂಳಿಯ ಕಣ್ಣುಗಳಂತಿರುತ್ತವೆ. ಮತ್ತೆ ಕೆಲವರಲ್ಲಿ ಯೋಗಿ ಗಳ ಕಣ್ಣುಗಳಂತಿರುತ್ತವೆ. "ಕಮಲದ ದಳಗಳಂತೆ ಇರುವ ಕಣ್ಣುಗಳುಳ್ಳವನಲ್ಲಿ ಉತ್ತಮ ಆಲೋಚನೆಗಳಿರುತ್ತವೆ, ಗೂಳಿಯ ಕಣ್ಣು ಉಳ್ಳವನಲ್ಲಿ ಕಾಮ ಪ್ರಧಾನ ವಾಗಿರುತ್ತದೆ. ಯೋಗಿಯ ಕಣ್ಣುಗಳು ಮೇಲ್ಮುಖವೂ ರಕ್ತವರ್ಣದ್ದೂ ಆಗಿರುತ್ತವೆ. ದೇವತೆಗಳಿಗಿರುವಂಥ ಕಣ್ಣುಗಳು ಹೆಚ್ಚು ವಿಶಾಲವಾಗಿರುವುದಿಲ್ಲ ಹೆಚ್ಚು ಉದ್ದವಾಗಿ ರುತ್ತವೆ, ಕಿವಿಯ ಹತ್ತಿರದವರೆಗೂ ಚಾಚಿಕೊಂಡಿರುತ್ತವೆ. ಆಗಾಗ ಓರೆಗಣ್ಣಿನಿಂದ ನೋಡುವ ಅಭ್ಯಾಸವುಳ್ಳವರು ಸಾಮಾನ್ಯ ಜನರಿಗಿಂತ ಹೆಚ್ಚು ಬುದ್ಧಿವಂತರಾಗಿರು ತ್ತಾರೆ." ಜನರ ದೇಹಗಳ ಸಾಮಾನ್ಯ ರಚನೆಯ ಸ್ವರೂಪದ ಬಗ್ಗೆ ಮಾತನಾಡುತ್ತ ಹೀಗೆ ಹೇಳುತ್ತಿದ್ದರು : "ಭಕ್ತನ ದೇಹ ಸ್ವಾಭಾವಿಕವಾಗಿ ಮೃದುವಾಗಿರುತ್ತದೆ ಮತ್ತು ಅವನ ಕೈಕಾಲುಗಳ ಗ್ರಂಥಿಗಳು ಶಿಥಿಲವಾಗಿರುತ್ತವೆ. (ಅಂದರೆ ಸುಲಭವಾಗಿ ಕೈಕಾಲು ಗಳನ್ನು ತಿರುಗಿಸಲು ಸಾಧ್ಯವಾಗುವಂತೆ ಇರುತ್ತವೆ) ಅವನ ದೇಹ ಕೃಶವಾಗಿದ್ದರೂ ಅಸ್ಥಿ ಮಾಂಸ ಇತ್ಯಾದಿಗಳು ಎಷ್ಟು ಚೆನ್ನಾಗಿ ಜೋಡಿಸಲ್ಪಟ್ಟಿರುತ್ತವೆಂದರೆ ಗ್ರಂಥಿಗಳು ಹೆಚ್ಚು ವಕ್ರವಾಗಿರುವುದಿಲ್ಲ." ಒಬ್ಬ ವ್ಯಕ್ತಿಯ ಬುದ್ಧಿಶಕ್ತಿ ಒಳ್ಳೆಯದರ ಕಡೆ ವಾಲಿದೆಯೊ ಕೆಟ್ಟದರ ಕಡೆ ವಾಲಿದೆಯೊ ಎಂಬುದನ್ನು ನಿರ್ಣಯಿಸಲು ಅವನ ಮುಂಗೈಯನ್ನು ಹಿಡಿದು ತೂಗುತ್ತಿದ್ದರು. ಹಾಗೆ ಮಾಡುವಾಗ ಅವನಿಗೆ ಕೈಯನ್ನು ಸಡಿಲವಾಗಿ ಬಿಡಲು ಹೇಳುತ್ತಿದ್ದರು. ಅದು ಜನ ಸಾಮಾನ್ಯರ ಕೈಗಿಂತ ಹಗುರವಾಗಿ ಕಂಡರೆ ಅವನ ಬುದ್ಧಿಶಕ್ತಿ ಉತ್ತಮವಾದುದೆಂದು ನಿರ್ಣಯಿಸುತ್ತಿದ್ದರು. ನಾವು ಮೊದಲೇ ತಿಳಿಸಿರು ವಂತೆ ಸ್ವಾಮಿ ಪ್ರೇಮಾನಂದರು ಮೊದಲು ದಕ್ಷಿಣೇಶ್ವರಕ್ಕೆ ಬಂದಾಗ ಶ್ರೀರಾಮಕೃಷ್ಣರು ಅವರ ಕೈಯನ್ನು ಹೀಗೆ ತೂಗಿ ನೋಡಿದ್ದರು. ಆದರೆ ಅದರ ಕಾರಣವನ್ನು ಪ್ರೇಮಾ

ನಂದರು ತಿಳಿಸದೆ ಇದ್ದುದರಿಂದ ನಾವೂ ಅಲ್ಲಿ ಅದರ ಉದ್ದೇಶವನ್ನು ಪ್ರಸ್ತಾಪಿಸಲಿಲ್ಲ. ಇನ್ನೊಂದು ಸಂದರ್ಭದಲ್ಲಿ ಇದರ ಕಾರಣ ನಮಗೆ ತಿಳಿದು ಬಂತು. ಅದನ್ನು ಇಲ್ಲಿ ವಿವರಿಸುತ್ತೇವೆ.

7. ಶ್ರೀರಾಮಕೃಷ್ಣರು ಆಗ ಗಂಟಲು ಬೇನೆಯಿಂದ ನರಳುತ್ತಾ ಕಾಶೀಪುರದಲ್ಲಿ ತಂಗಿದ್ದರು. ಆ ಸಮಯದಲ್ಲಿ ಈ ಲೇಖಕನ ಕಿರಿಯ ಸಹೋದರ (ಶ್ರೀ ಚಾರುಚಂದ್ರ ಚಕ್ರವರ್ತಿ) ಒಂದು ದಿನ ಅವರನ್ನು ನೋಡಲು ಹೋಗಿದ್ದನು. ಶ್ರೀರಾಮಕೃಷ್ಣರು ಅವನನ್ನು ನೋಡಿ ತುಂಬ ಪ್ರಸನ್ನತೆಯಿಂದ ಹತ್ತಿರ ಕೂರಿಸಿಕೊಂಡು ಅನೇಕ ಧರ್ಮೋಪದೇಶಗಳನ್ನು ಮಾಡಿದರು. ಆ ಸಮಯದಲ್ಲಿ ಲೇಖಕನು ಅಲ್ಲಿಗೆ ಹೋದಾಗ ಶ್ರೀರಾಮಕೃಷ್ಣರು "ಈ ಹುಡುಗನು ನಿನ್ನ ತಮ್ಮನೇ" ಎಂದು ಕೇಳಿದರು. ಲೇಖಕನು ಹೌದೆನ್ನಲು ಅವರು ಹೇಳಿದರು : "ಒಳ್ಳೆ ಹುಡುಗ. ನಿನಗಿಂತಲೂ ಇವನಿಗೆ ಬುದ್ಧಿ ಜಾಸ್ತಿ. ಸದ್ಬುದ್ಧಿಯೊ ಅಸದ್ಬುದ್ಧಿಯೊ ನೋಡುತ್ತೇನೆ." ಹೀಗೆ ಹೇಳಿ ಅವರು ಅವನ ಬಲಗೈಯನ್ನು ಹಿಡಿದು ತೂಗುತ್ತಾ "ಸದ್ಬುದ್ಧಿ" ಎಂದರು. ಅನಂತರ ಲೇಖಕನನ್ನು ಪ್ರಶ್ನಿಸಿದರು : "ಇವನನ್ನು ಎಳೆದುಕೊಂಡು ಬಿಡಲೇ, ಏನು ಹೇಳುತ್ತೀಯೆ ?" ಲೇಖಕನು ಹೇಳಿದ : "ಒಳ್ಳೆಯದು ಮಹಾಶಯರೆ, ಹಾಗೆಯೇ ಮಾಡಿ." ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತು ಯೋಚಿಸಿ ಹೇಳಿದರು : "ಬೇಡ, ಇರಲಿ. ಒಬ್ಬನನ್ನು ಆಗಲೇ ಸೆಳೆದು ಬಿಟ್ಟಿದ್ದೇನೆ. ಇನ್ನೊಬ್ಬನನ್ನೂ ಕರೆದುಕೊಂಡು ಬಿಟ್ಟರೆ ನಿನ್ನ ತಂದೆ ತಾಯಿಗಳಿಗೆ ತುಂಬಾ ಕಷ್ಟವಾಗುತ್ತದೆ–ವಿಶೇಷವಾಗಿ ನಿನ್ನ ತಾಯಿಗೆ. ನನ್ನ ಜೀವನದಲ್ಲಿ ಅನೇಕ ಶಕ್ತಿಗಳನ್ನು ನೋಯಿಸಿದ್ದೇನೆ. ಇಷ್ಟೇ ಸಾಕು." ಇಷ್ಟು ಹೇಳಿ ಶ್ರೀರಾಮಕೃಷ್ಣರು ಅವನಿಗೆ ಅನೇಕ ಉಪದೇಶಗಳನ್ನಿತ್ತು ಸ್ವಲ್ಪ ತಿಂಡಿ ತಿನ್ನಿಸಿ ಕಳಿಸಿಕೊಟ್ಟರು.

8. ಶರೀರದ ಅವಯವ ರಚನೆಗಳಂತೆಯೆ ನಿದ್ರೆ, ಶೌಚ ಮುಂತಾದ ಶಾರೀರಿಕ ಕ್ರಿಯೆಗಳೂ ವ್ಯಕ್ತಿಗಳ ವಿಭಿನ್ನ ಸಂಸ್ಕಾರಗಳನ್ನು ಸೂಚಿಸುತ್ತವೆ ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು : ಆದ್ದರಿಂದಲೇ ಅನುಭವಸ್ಥರು ವ್ಯಕ್ತಿಗಳ ನಡತೆಯನ್ನು ಇವುಗಳ ಮೂಲಕವೂ ನಿರ್ಣಯಿಸುತ್ತಾರೆ. ಶ್ರೀರಾಮಕೃಷ್ಣರು ಹೇಳುತ್ತಿದ್ದಂತೆ ನಿದ್ರೆ ಮಾಡುತ್ತಿರುವಾಗ ಎಲ್ಲರೂ ಒಂದೇ ರೀತಿ ಉಸಿರಾಡುವುದಿಲ್ಲ. ಪ್ರಾಪಂಚಿಕ ವ್ಯಕ್ತಿ ಉಸಿರಾಡುವ ಬಗೆಯೇ ಬೇರೆ, ತ್ಯಾಗಿಯ ಬಗೆಯೇ ಬೇರೆ. ಪ್ರಾಪಂಚಿಕ ವ್ಯಕ್ತಿಯು ಶೌಚ ಮಾಡುವಾಗ ಮೂತ್ರಧಾರೆಯು ಎಡಭಾಗಕ್ಕೂ ತ್ಯಾಗಿಯದು ಬಲಭಾಗಕ್ಕೂ ಇರುತ್ತದೆ. ಯೋಗಿಯ ಮಲವನ್ನು ಹಂದಿಯು ತಿನ್ನುವುದಿಲ್ಲ–ಇತ್ಯಾದಿ ಇತ್ಯಾದಿ.

9. ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಶ್ರೀರಾಮಕೃಷ್ಣರು ಒಂದು ಘಟನೆಯನ್ನು ಹೇಳಿದ್ದರು. ಹನುಮಾನ್ ಸಿಂಗ್ ಎಂಬ ವ್ಯಕ್ತಿಯು ದಕ್ಷಿಣೇಶ್ವರ ದೇವಸ್ಥಾನವನ್ನು ಕಾಯುವ ಕೆಲಸದಲ್ಲಿ ನಿಯುಕ್ತನಾಗಿದ್ದನು. ಅವನು ಬಾಗಿಲು ಕಾಯುವವರಲ್ಲಿ ಒಬ್ಬನಾದರೂ ವಿಶೇಷ ಗೌರವಕ್ಕೆ ಪಾತ್ರನಾಗಿದ್ದನು. ಏಕೆಂದರೆ ಅವನು ಪ್ರಸಿದ್ಧ ಪೈಲ್ವಾನ್ ಮಾತ್ರವಲ್ಲದೆ ನಿಷ್ಠಾವಂತ ಸಾಧಕನೂ ಆಗಿದ್ದ, ಹನುಮಾನ್ ಸಿಂಗನನ್ನು

ಸೋಲಿಸಿ ಅವನ ಸ್ಥಾನ ಪಡೆಯಲು ಇನ್ನೊಬ್ಬ ಪೈಲ್ವಾನ್ ದಕ್ಷಿಣೇಶ್ವರಕ್ಕೆ ಬಂದ. ಅವನು ತುಂಬಾ ದಪ್ಪನೂ, ಬಲಶಾಲಿಯೂ ಆಗಿದ್ದ. ಆದರೂ ಹನುಮಾನ್ ಸಿಂಗನು ಅವನನ್ನು ಎದುರಿಸಲು ಹಿಂಜರಿಯಲಿಲ್ಲ. ಒಂದು ದಿನ ಕುಸ್ತಿಯ ಏರ್ಪಾಡಾಯಿತು. ಮಥುರನಾಥನೇ ಮುಂತಾದವರು ತೀರ್ಪುಗಾರರಾಗಿದ್ದರು.

ಆಗಂತುಕ ಕುಸ್ತಿಗಾರನು ಚೆನ್ನಾಗಿ ಪೌಷ್ಟಿಕ ಆಹಾರವನ್ನು ತಿನ್ನತೊಡಗಿದನು ಮತ್ತು ಸಾಕಷ್ಟು ವ್ಯಾಯಾಮ ಮಾಡತೊಡಗಿದನು. ಇದಕ್ಕೆ ವಿರುದ್ಧವಾಗಿ ಹನುಮಾನ್ ಸಿಂಗನು ಪ್ರತಿದಿನ ಸ್ನಾನಮಾಡಿ ತನ್ನ ಇಷ್ಟದೇವತೆಯಾದ ಹನುಮಂತನ ಮಂತ್ರವನ್ನು ದಿನವೆಲ್ಲ ಉಚ್ಚರಿಸುತ್ತಿದ್ದ ಮತ್ತು ಸಂಜೆ ಒಂದು ಊಟ ಮಾಡುತ್ತಿದ್ದ. ಹನುಮಾನ್ ಸಿಂಗನಿಗೆ ಭಯವಾಗಿ ಗೆಲ್ಲುವ ಆಸೆಯನ್ನೇ ಬಿಟ್ಟಿರುವನೆಂದು ಎಲ್ಲರೂ ಭಾವಿಸಿದರು. ಶ್ರೀರಾಮಕೃಷ್ಣರಿಗೆ ಅವನ ಮೇಲೆ ತುಂಬಾ ಪ್ರೀತಿ. ಕುಸ್ತಿಯ ಹಿಂದಿನ ದಿನ ಅವನನ್ನು ವಿಚಾರಿಸಿದರು : "ನೀನು ವ್ಯಾಯಾಮ ಮಾಡುತ್ತಿಲ್ಲ, ಪೌಷ್ಟಿಕ ಆಹಾರ ಸೇವಿಸುತ್ತಿಲ್ಲ, ಆದರೂ ಈ ಹೊಸ ವ್ಯಕ್ತಿಯೊಡನೆ ನೀನು ಗೆಲ್ಲುವ ಸಾಧ್ಯತೆ ಇದೆಯೇನು ?" ಹನುಮಾನ್ ಸಿಂಗನು ಅವರಿಗೆ ಭಕ್ತಿಯಿಂದ ವಂದಿಸಿ ಹೇಳಿದ : "ನೀವು ಅನುಗ್ರಹಿಸಿದರೆ ಖಂಡಿತಾ ಗೆಲ್ಲುತ್ತೇನೆ. ರಾಶಿಗಟ್ಟಲೆ ಆಹಾರವನ್ನು ತಿನ್ನುವುದರಿಂದ ದೇಹಕ್ಕೆ ಶಕ್ತಿ ಬರುವುದಿಲ್ಲ, ಆಹಾರ ಸರಿಯಾಗಿ ಜೀರ್ಣವಾಗಬೇಕು. ನಾನು ಗುಪ್ತವಾಗಿ ಅವನ ಮಲವನ್ನು ಪರೀಕ್ಷಿಸಿದೆ. ಅವನು ತನ್ನ ಜೀರ್ಣಶಕ್ತಿಗೆ ಮೀರಿ ತಿನ್ನುತ್ತಿದ್ದಾನೆ." ಹನುಮಾನ್ ಸಿಂಗನು ಸ್ಪರ್ಧೆಯ ದಿನ ನಿಜವಾಗಿಯೂ ಆ ವ್ಯಕ್ತಿಯನ್ನು ಸೋಲಿಸಿದನೆಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು.

10. ಶ್ರೀರಾಮಕೃಷ್ಣರು ಸ್ತ್ರೀಯರ ಮತ್ತು ಪುರುಷರ ಅವಯವ ರಚನೆಯ ಸಂಬಂಧವಾಗಿ ಅನೇಕ ವಿಷಯಗಳನ್ನು ಹೇಳಿರುವರು. ಇವುಗಳ ಆಧಾರದ ಮೇಲೆಯೆ ಅವರು ಕೆಲವು ಸ್ತ್ರೀಯರನ್ನು ವಿದ್ಯಾಶಕ್ತಿ ಉಳ್ಳವರು, ಅಂದರೆ ಪುರುಷರಿಗೆ ಭಗವಂತನ ಕಡೆ ಹೋಗಲು ಸಹಾಯ ಮಾಡುವವರು ಎಂದು, ಮತ್ತೆ ಕೆಲವರನ್ನು ಅವಿದ್ಯಾ ಶಕ್ತಿ ಉಳ್ಳವರು, ಎಂದರೆ ಪುರುಷರನ್ನು ಪ್ರಪಂಚದ ಕಡೆಗೆ ಎಳೆಯುವವರು ಎಂದು ಹೇಳುತ್ತಿದ್ದರು. ಅವರು ಹೇಳುತ್ತಿದ್ದರು : "ವಿದ್ಯಾಶಕ್ತಿ ಉಳ್ಳವರು ಸ್ವಲ್ಪ ಊಟ ಮಾಡುತ್ತಾರೆ, ಅವರ ನಿದ್ರೆಯೂ ಕಡಿಮೆ ಮತ್ತು ಸ್ವಾಭಾವಿಕವಾಗಿಯೆ ಇಂದ್ರಿಯ ವ್ಯಾಮೋಹ ಕಡಿಮೆ ಇರುತ್ತದೆ. ಅವರ ಪತಿಯರು ಭಗವತ್ಸಂಬಂಧವಾಗಿ ಮಾತನಾಡುವುದನ್ನು ಕೇಳಿ ಅವರ ಹೃದಯ ಆನಂದದಿಂದ ತುಂಬುತ್ತದೆ. ಅವರೇ ಭಗವತ್ಸಂಬಂಧವಾಗಿ ಮಾತನಾಡುತ್ತಾ ಪತಿಗೆ ಆಧ್ಯಾತ್ಮಿಕ ಸ್ಫೂರ್ತಿಯನ್ನು ನೀಡುತ್ತಾರೆ. ಅವನನ್ನು ಕೀಳು ಪ್ರವೃತ್ತಿಗಳಿಂದ ರಕ್ಷಿಸುತ್ತಾರೆ, ಅವನು ಭಗವತ್ಸಾಕ್ಷಾತ್ಕಾರವನ್ನು ಪಡೆಯಲೆಂದು ಎಲ್ಲಾ ರೀತಿಯಿಂದಲೂ ಅವನಿಗೆ ಸಹಾಯ ಮಾಡುತ್ತಾರೆ. ಅವಿದ್ಯಾ ಶಕ್ತಿಯುಳ್ಳವರ ಸ್ವಭಾವ ಇದಕ್ಕೆ ಸಂಪೂರ್ಣ ವಿರುದ್ಧವಾದುದು. ಆಹಾರ, ನಿದ್ರೆ ಮುಂತಾದ ಭೌತಿಕ ಸುಖಕ್ಕಾಗಿ ಅವರು ಬಾಯಿ ಬಿಡುತ್ತಾರೆ. ತಮ್ಮ ಪತಿ ತಮ್ಮ ಸುಖಕ್ಕಾಗಿ ಗಮನವನ್ನು ಕೊಡುವು

ದಲ್ಲದೆ ಬೇರೆ ಯಾವುದರ ಕಡೆಯೂ ಅವನ ಮನಸ್ಸು ಹೋಗದಂತೆ ಮಾಡುವುದೇ ಅವರ ಮುಖ್ಯ ಗುರಿ. ಪತಿ ಆಧ್ಯಾತ್ಮಿಕ ವಿಷಯವಾಗಿ ಮಾತನಾಡಿದರೆ ಅವರು ಬೇಸರ ಗೊಳ್ಳುತ್ತಾರೆ ಮತ್ತು ಕೋಪಿಸಿಕೊಳ್ಳುತ್ತಾರೆ.

11. ಭೌತಿಕ ಲಕ್ಷಣಗಳನ್ನು ಪರೀಕ್ಷಿಸಿ ಮಾನವ ಸ್ವಭಾವವನ್ನು ಗುರುತಿಸು ವುದರ ಬಗ್ಗೆ ಶ್ರೀರಾಮಕೃಷ್ಣರು ಏನೇನು ಹೇಳಿರುವರೊ ಅದಕ್ಕೆ ಕೊನೆಯೆ ಇಲ್ಲ. ಜನರ ಸ್ವಭಾವವನ್ನು ತಿಳಿಯುವುದಕ್ಕೆ ಅದೊಂದು ಸಾಧನ ಎಂದು ಅವರು ಪರಿಗಣಿ ಸಿದ್ದರು. ನರೇಂದ್ರ ಮತ್ತು ಬೇರೆ ಭಕ್ತರನ್ನು ಅವರು ಇದರ ಸಹಾಯದಿಂದ ಪರೀಕ್ಷಿಸಿ ದ್ದರು. ನರೇಂದ್ರನನ್ನು ಆ ರೀತಿ ಪರೀಕ್ಷಿಸಿ ಒಂದು ದಿನ ಸಂತೃಪ್ತಿಯಿಂದ ಅವನಿಗೆ ಹೇಳಿದರು : "ನಿನ್ನ ಎಲ್ಲಾ ಅವಯವಗಳೂ ಒಳ್ಳೇ ಲಕ್ಷಣಗಳಿಂದ ಕೂಡಿವೆ. ಒಂದೇ ದೋಷವೆಂದರೆ ನೀನು ನಿದ್ರಿಸುವಾಗ ಜೋರಾಗಿ ಉಸಿರಾಡುತ್ತೀಯೆ. ಹೀಗೆ ಜೋರಾಗಿ ಉಸಿರಾಡುವವರು ಅಲ್ಪಾಯುಗಳೆಂದು ಯೋಗಿಗಳು ಹೇಳುತ್ತಾರೆ."

12. ವ್ಯಕ್ತಿಯ ಸ್ವಭಾವವನ್ನು ಅರಿಯುವ ಶ್ರೀರಾಮಕೃಷ್ಣರ ಎರಡನೆಯ ಮತ್ತು ಮೂರನೆಯ ವಿಧಾನಗಳಾವುವೆಂದರೆ ವ್ಯಕ್ತಿಯ ಸಾಮಾನ್ಯ ಕ್ರಿಯೆಗಳ ಮೂಲಕ ವ್ಯಕ್ತವಾಗುವ ಮಾನಸಿಕ ಸ್ಥಿತಿಯನ್ನು ಗಮನಿಸುವುದು ಮತ್ತು ಅವನ ಕಾಮಕಾಂಚನಾ ಸಕ್ತಿಯ ಕಡೆ ಲಕ್ಷ್ಯವಿರಿಸುವುದು. ಯಾರೇ ವ್ಯಕ್ತಿಯು ದಕ್ಷಿಣೇಶ್ವರಕ್ಕೆ ಬಂದರೂ ಮೊದ ಲಿನಿಂದಲೂ ಶ್ರೀರಾಮಕೃಷ್ಣರು ಅವನನ್ನು ಸ್ವಲ್ಪಕಾಲ ನಿಶ್ಯಬ್ದವಾಗಿ ಮೇಲೆ ಹೇಳಿದ ರೀತಿಯಲ್ಲಿ ಗಮನಿಸುತ್ತಿದ್ದರು. ಅನಂತರ ಅವನನ್ನು ತಮ್ಮವನಾಗಿ ಸ್ವೀಕರಿಸಬೇಕೆಂದು ಯಾವಾಗ ನಿರ್ಧರಿಸುತ್ತಿದ್ದರೊ ಅಂದಿನಿಂದ ಅವನಿಗೆ ಅನೇಕ ಉಪದೇಶಗಳನ್ನು ನೀಡಲು ಪ್ರಾರಂಭಿಸುತ್ತಿದ್ದರು. ಆವಶ್ಯಕವಾದರೆ ಆಗಾಗ ಮೃದುವಾಗಿ ಅವನನ್ನು ಬಯ್ಯುತ್ತಾ ಅವನಲ್ಲಿರುವ ದೋಷಗಳನ್ನು ಪರಿಹರಿಸಲು ಪ್ರಯತ್ನಿಸುತ್ತಿದ್ದರು. ಅವನು ಮುಂದೆ ಸಂನ್ಯಾಸಿ ಆಗಬೇಕೊ ಅಥವಾ ಗೃಹಸ್ಥ ಜೀವನವನ್ನು ನಡೆಸಬೇಕೋ ಎಂಬು ದನ್ನು, ಅವನಿಗೆ ಶಿಕ್ಷಣವನ್ನು ನೀಡುವುದಕ್ಕೆ ಮುಂಚೆಯೆ ನಿರ್ಧರಿಸುತ್ತಿದ್ದರು. ತಮ್ಮೆಡೆಗೆ ಬಂದ ವ್ಯಕ್ತಿಯನ್ನು ಮೊದಲೇ ಪ್ರಶ್ನಿಸುತ್ತಿದ್ದರು : ಅವನಿಗೆ ವಿವಾಹವಾಗಿದೆಯೇ, ಅವನ ಮನೆಯಲ್ಲಿ ಊಟಬಟ್ಟೆಗೆ ಸಾಕಷ್ಟಿದೆಯೆ ಅಥವಾ ಅವನು ಸಂಸಾರ ತ್ಯಾಗ ಮಾಡಿ ದರೆ ಅವನ ಸ್ಥಾನದಲ್ಲಿ ಸಂಸಾರವನ್ನು ನಿರ್ವಹಿಸುವವರು ಇರುವರೇ ಎಂಬುದನ್ನೆಲ್ಲ ಕೇಳಿ ತಿಳಿದುಕೊಳ್ಳುತ್ತಿದ್ದರು.

13. ಶಾಲೆ ಕಾಲೇಜುಗಳ ವಿದ್ಯಾರ್ಥಿಗಳ ಮೇಲೆ ಅವರಿಗೆ ವಿಶೇಷ ಕೃಪೆ ಇತ್ತು. ಅವರು ಹೇಳುತ್ತಿದ್ದರು : "ಇವರ ಮನಸ್ಸು ಪತ್ನಿ ಪುತ್ರ ಮಾನ ಯಶಸ್ಸು ಇವುಗಳಿಂದ ವಿಕ್ಷಿಪ್ತವಾಗಿಲ್ಲ. ಇವರು ಹದಿನಾರಾಣೆ ಮನಸ್ಸನ್ನು ಭಗವಂತನಿಗೆ ಕೊಡಬಲ್ಲರು." ಆದ್ದ ರಿಂದ ಇವರುಗಳಿಗೆ ಧರ್ಮೋಪದೇಶ ಮಾಡುವುದಕ್ಕೆ ಅವರು ಹೆಚ್ಚು ಪ್ರಯತ್ನಿಸಿದರು. ಅನೇಕ ದೃಷ್ಟಾಂತಗಳ ಮೂಲಕ ಅವರು ಮೇಲೆ ಹೇಳಿದ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದರು. ಅವರು ಹೇಳುತ್ತಿದ್ದರು : "ಮನಸ್ಸು ಸಾಸಿವೆ ಬೀಜಗಳ ಗಂಟು

ಇದ್ದಂತೆ. ಅದು ಒಮ್ಮೆ ಹರಡಿ ಬಿಟ್ಟರೆ ಪುನಃ ಅವನ್ನು ಒಟ್ಟು ಹಾಕುವುದು ಸಾಧ್ಯವಿಲ್ಲ ವೆನ್ನಬಹುದು." "ಕುತ್ತಿಗೆಯಲ್ಲಿ ಬಣ್ಣದ ಉಂಗುರ ಕಾಣಿಸಿಕೊಂಡು ಬಿಟ್ಟರೆ ಗಿಳಿಗೆ 'ರಾಧಾಕೃಷ್ಣ' ಎಂದು ಹೇಳಲು ಬೋಧಿಸಲಾಗುವುದಿಲ್ಲ", "ಹಂಚಿನ ಮೇಲೆ ಬಿದ್ದ ದನ ಗಳ ಹೆಜ್ಜೆ ಗುರುತನ್ನು, ಅದನ್ನು ಸುಡುವುದಕ್ಕೆ ಮುಂಚೆ ಅಳಿಸುವುದು ಸುಲಭ. ಸುಟ್ಟ ಮೇಲೆ ಆ ಗುರುತನ್ನು ಅಳಿಸಲಾಗುವುದಿಲ್ಲ." ಇತ್ಯಾದಿ ಇತ್ಯಾದಿ. ಆದ್ದರಿಂದ ಶ್ರೀರಾಮ ಕೃಷ್ಣರು ವಿಶೇಷವಾಗಿ ಶಾಲಾಕಾಲೇಜು ವಿದ್ಯಾರ್ಥಿಗಳಿಗೆ ಅನೇಕ ಪ್ರಶ್ನೆಗಳನ್ನು ಹಾಕಿ ಅವರ ಸ್ವಾಭಾವಿಕ ಪ್ರವೃತ್ತಿ ಎಂಥದು ಎಂಬುದನ್ನು ನೋಡುತ್ತಿದ್ದರು. ಅನಂತರ ಅವರು ಯೋಗ್ಯರು ಎನಿಸಿದರೆ ತ್ಯಾಗಮಾರ್ಗದಲ್ಲಿ ಅವರಿಗೆ ಮಾರ್ಗದರ್ಶನ ನೀಡು ತ್ತಿದ್ದರು.

14. ಶ್ರೀರಾಮಕೃಷ್ಣರು ವ್ಯಕ್ತಿಯ ಕ್ರಿಯೆಗಳನ್ನು ಸೂಕ್ಷ್ಮವಾಗಿ ಗಮನಿಸಿ ಅವನ ಮನಃಸ್ಥಿತಿಯನ್ನು ಅರಿಯುವಷ್ಟರಲ್ಲಿಯೆ ತೃಪ್ತರಾಗುತ್ತಿರಲಿಲ್ಲ. ಅವರು ಅವನನ್ನು ಪರೀಕ್ಷಿಸಿ ಅವನು ಸರಳನೇ, ಸತ್ಯಸಂಧನೇ, ತಾವು ಹೇಳಿದುದನ್ನು ಎಷ್ಟರ ಮಟ್ಟಿಗೆ ಅನು ಸರಿಸುತ್ತಾನೆ, ವಿವೇಕಪೂರ್ಣವಾಗಿ ಎಲ್ಲಾ ಕೆಲಸಗಳನ್ನೂ ಮಾಡುತ್ತಾನೆಯೆ ಇಲ್ಲವೇ ಮತ್ತು ತಾವು ಹೇಳಿದುದರಲ್ಲಿ ಅವನಿಗೆ ಎಷ್ಟು ನಂಬಿಕೆ ಇದೆ ಎಂಬುದನ್ನೆಲ್ಲ ನೋಡು ತ್ತಿದ್ದರು. ಇದಕ್ಕೆ ಕೆಲವು ದೃಷ್ಟಾಂತಗಳನ್ನು ಕೊಡಬಹುದು :

15. ಒಬ್ಬ ಬಾಲಕನು ದಕ್ಷಿಣೇಶ್ವರಕ್ಕೆ ಬಂದು ಹೋಗಲು ತೊಡಗಿ ಕೆಲವು ದಿನ ಗಳಾದ ಮೇಲೆ ಶ್ರೀರಾಮಕೃಷ್ಣರು ಒಂದು ದಿನ ಅವನನ್ನು ಕೇಳಿದರು "ನೀನು ವಿವಾಹ ಮಾಡಿಕೊಳ್ಳುವುದಿಲ್ಲವೇ" ಎಂದು. ಅವನು ಉತ್ತರಿಸಿದ : "ಮಹಾಶಯರೆ, ಮನಸ್ಸು ಇನ್ನೂ ನನ್ನ ವಶವಾಗಿಲ್ಲ, ಈಗ ನಾನು ವಿವಾಹ ಮಾಡಿಕೊಂಡರೆ ಹಿತ ಅಹಿತ ವಿವೇಚನೆ ಇಲ್ಲದೆ ಪತ್ನಿಯಲ್ಲಿ ಆಸಕ್ತಿ ಉಂಟಾಗುವುದು. ಯಾವಾಗ ಕಾಮವನ್ನು ಜಯಿಸುತ್ತೇನೋ ಆಗ ಮದುವೆ ಆಗುತ್ತೇನೆ". ಒಳಗಡೆ ಆಸಕ್ತಿ ಪ್ರಬಲವಾಗಿದ್ದರೂ ಬಾಲಕನ ಮನಸ್ಸು ನಿವೃತ್ತಿಮಾರ್ಗದ ಕಡೆ ತಿರುಗಿದೆ ಎಂಬುದನ್ನು ಶ್ರೀರಾಮಕೃಷ್ಣರು ಅರ್ಥ ಮಾಡಿ ಕೊಂಡರು. ಅವರು ನಗುತ್ತಾ ಹೇಳಿದರು: "ಯಾವಾಗ ಕಾಮವನ್ನು ಜಯಿಸುತ್ತೀಯೊ ಆಗ ಮದುವೆ ಮಾಡಿಕೊಳ್ಳುವ ಆವಶ್ಯಕತೆಯೇ ಇರುವುದಿಲ್ಲ."

ದಕ್ಷಿಣೇಶ್ವರದಲ್ಲಿ ಒಂದು ದಿನ ಬಾಲಕನ ಜೊತೆ ಅನೇಕ ವಿಷಯಗಳ ಬಗ್ಗೆ ಮಾತ ನಾಡುತ್ತಾ ಶ್ರೀರಾಮಕೃಷ್ಣರು ಹೇಳಿದರು : "ಇದೇನು ಹೇಳು, ನನ್ನ ಸೊಂಟದಲ್ಲಿ ಬಟ್ಟೆಯೇ ನಿಲ್ಲುತ್ತಿಲ್ಲ. ಕೆಲವೊಮ್ಮೆ ಅದು ಬಿದ್ದು ಹೋಗಿದ್ದೇ ಗೊತ್ತಾಗುವುದಿಲ್ಲ; ನಾನು ಇಂಥ ಪ್ರೌಢ ವ್ಯಕ್ತಿ ಬರಿ ಮೈಯಲ್ಲಿ ಓಡಾಡುವುದೇ ? ಆದರೆ ನನಗೆ ಸ್ವಲ್ಪವೂ ನಾಚಿಕೆ ಆಗುತ್ತಿಲ್ಲ. ಮೊದಲು ನಾನು ಈ ಸ್ಥಿತಿಯಲ್ಲಿರುವುದನ್ನು ಯಾರು ನೋಡು ತ್ತಾರೆ ಎಂಬುದರ ಪ್ರಜ್ಞೆಯೇ ಇರುತ್ತಿರಲಿಲ್ಲ. ನೋಡುವವರಿಗೆ ನಾಚಿಕೆ ಆಗುವುದೆಂದು ಈಗ ತೊಡೆಯ ಮೇಲೆ ಬಟ್ಟೆ ಇಟ್ಟುಕೊಳ್ಳುತ್ತೇನೆ, ನನ್ನಂತೆ ಜನರ ಮುಂದೆ ಬತ್ತಲೆ ಯಾಗಿರಬಲ್ಲೆಯಾ ?" ಬಾಲಕ ಉತ್ತರಿಸಿದ : "ಮಹಾಶಯರೆ, ಅದು ಹೇಳುವುದು

ಸ್ವಲ್ಪ ಕಷ್ಟ. ಆದರೆ ನೀವು ಹೇಳಿದರೆ ನಾನು ಬಟ್ಟೆಯನ್ನು ಕಳಚಿಹಾಕಿಬಿಡುತ್ತೇನೆ." ಶ್ರೀರಾಮಕೃಷ್ಣರು ಹೇಳಿದರು : "ನೋಡೋಣ ನಿನ್ನ ಬಟ್ಟೆಯನ್ನು ಪೇಟದಂತೆ ಸುತ್ತಿಕೊಂಡು ದೇವಸ್ಥಾನದ ಅಂಗಳದಲ್ಲಿ ಒಂದು ಸುತ್ತು ಹೋಗಿಬಿಟ್ಟು ಬಾ". ಹುಡುಗನು ಉತ್ತರಿಸಿದ : "ಅದು ಸಾಧ್ಯವಿಲ್ಲ. ನಿಮ್ಮ ಮುಂದೆ ಬೇಕಾದರೆ ಹಾಗೆ ಮಾಡುತ್ತೇನೆ" ಶ್ರೀರಾಮಕೃಷ್ಣರು ಹೇಳಿದರು : "ಅನೇಕರು ಹಾಗೆಯೆ ಹೇಳುತ್ತಾರೆ. 'ನಿಮ್ಮ ಮುಂದೆ ಉಟ್ಟಬಟ್ಟೆಯನ್ನು ಕಳಚಲು ನಾಚಿಕೆ ಆಗುವುದಿಲ್ಲ. ಆದರೆ ಬೇರೆಯವರ ಮುಂದೆ ಹಾಗೆ ಮಾಡಲು ನಾಚಿಕೆ ಆಗುತ್ತದೆ' ಎಂದು ಅವರು ಹೇಳುತ್ತಾರೆ."

16. ಶ್ರೀರಾಮಕೃಷ್ಣರು ಬಟ್ಟೆಯನ್ನು ಕಳಚಿ ಹಾಕುವ ಸಂಬಂಧವಾಗಿ ಒಂದು ಘಟನೆ ನೆನಪಿಗೆ ಬರುತ್ತದೆ. ಅಂದು ಬೆಳದಿಂಗಳ ರಾತ್ರಿ, ಮಲಗಿ ಸ್ವಲ್ಪ ಹೊತ್ತಿನಲ್ಲಿಯೆ ಗಂಗೆಯಲ್ಲಿ ಉಬ್ಬರ ಉಂಟಾಯಿತು. ಶ್ರೀರಾಮಕೃಷ್ಣರು ಹಾಸಿಗೆಯಿಂದ ಎದ್ದು "ನೋಡು, ಬಾನ್ ಬಂದಿದೆ, ಬಾ" ಎಂದು ಹೇಳಿ ಎಲ್ಲರನ್ನೂ ಕರೆಯುತ್ತಾ ಗಂಗೆಯ ದಡಕ್ಕೆ ಓಡಿದರು. ನದಿಯ ಶಾಂತ ಶುಕ್ಲ ಜಲರಾಶಿಯು ನೊರೆಯ ಕಿರೀಟವನ್ನು ಧರಿಸಿ ಉನ್ನತ ತರಂಗ ರೂಪದಲ್ಲಿ ನರ್ತಿಸುತ್ತಾ ವಿರುದ್ಧ ದಿಕ್ಕಿಗೆ ಪ್ರಚಂಡ ವೇಗದಲ್ಲಿ ಮುನ್ನುಗ್ಗುತ್ತಿತ್ತು ಮತ್ತು ತೀರವನ್ನು ಜೋರಾಗಿ ಬಂದು ಬಡಿಯುತ್ತಿತ್ತು. ಇದನ್ನು ನೋಡಿ ಶ್ರೀರಾಮಕೃಷ್ಣರು ಬಾಲಕನಂತೆ ಆನಂದದಿಂದ ನರ್ತಿಸತೊಡಗಿದರು. ಶ್ರೀರಾಮಕೃಷ್ಣರು ನಮ್ಮನ್ನು ಕರೆದಾಗ ನಾವು ನಿದ್ರೆಯ ಜೋಂಪಿನಲ್ಲಿದ್ದೆವು. ಮೇಲೆದ್ದು ನಮ್ಮ ಬಟ್ಟೆಯನ್ನೆಲ್ಲ ಸರಿಪಡಿಸಿಕೊಂಡು ಬರುವ ಹೊತ್ತಿಗೆ ಸ್ವಲ್ಪ ತಡವಾಯಿತು. ನಾವು ಗಂಗಾತೀರಕ್ಕೆ ಬಂದಾಗ ಉಬ್ಬರ ಮುಗಿದು ಹೋಗಿತ್ತು. ಕೆಲವರಿಗೆ ಅದರ ದೂರ ದರ್ಶನವಾಯಿತು, ಮತ್ತೆ ಕೆಲವರಿಗೆ ಅದೂ ದಕ್ಕಲಿಲ್ಲ. ಶ್ರೀರಾಮಕೃಷ್ಣರು ಬಹಳ ಹೊತ್ತು ಅದೇ ಆನಂದದಲ್ಲಿ ತಲ್ಲೀನರಾಗಿದ್ದರು. ಆ ನಂತರ ನಮ್ಮ ಕಡೆ ತಿರುಗಿ ಹೇಳಿದರು. "ಏನಪ್ಪಾ, ಉಬ್ಬರ ಹೋಗಿತ್ತು ?" ನಾವು ಬಟ್ಟೆಹಾಕಿಕೊಂಡು ಬರುವಷ್ಟರಲ್ಲಿ ಉಬ್ಬರ ಇಳಿದು ಹೋಗಿತ್ತು, ಎಂಬುದನ್ನು ಕೇಳಿ ಅವರು ಹೇಳಿದರು " ಎಂಥಾ ಮೂರ್ಖರು ನೀವು, ಬಟ್ಟೆ ಹಾಕಿಕೊಳ್ಳುವವರೆಗೆ ಅದು ನಿಮಗಾಗಿ ಕಾದಿರುವುದೇನು ? ನನ್ನಂತೆಯೆ ಬಟ್ಟೆಯನ್ನು ಹಾಗೆಯೆ ಬಿಟ್ಟುಬರಬಾರದಿತ್ತೆ ?"

17. 'ವಿವಾಹ ಮಾಡಿಕೊಳ್ಳುವ ಇಚ್ಛೆ ಇದೆಯೆ ಇಲ್ಲವೆ', 'ಚಾಕರಿ ಮಾಡುತ್ತೀಯೊ ಇಲ್ಲವೊ'–ಈ ರೀತಿಯ ಶ್ರೀರಾಮಕೃಷ್ಣರ ಪ್ರಶ್ನೆಗಳಿಗೆ ನಮ್ಮಲ್ಲಿ ಕೆಲವರು ಈ ರೀತಿ ಉತ್ತರಿಸುತ್ತಿದ್ದರು : "ಮಹಾಶಯರೆ, ವಿವಾಹ ಮಾಡಿಕೊಳ್ಳುವ ಇಚ್ಛೆ ಇಲ್ಲ, ಆದರೆ ಚಾಕರಿ ಮಾಡಬೇಕಾಗುತ್ತದೆ." ಅತ್ಯಂತ ಸ್ವಾತಂತ್ರ್ಯ ಪ್ರಿಯರಾದ ಶ್ರೀರಾಮಕೃಷ್ಣರಿಗೆ ಈ ಮಾತು ರುಚಿಸುತ್ತಿರಲಿಲ್ಲ. ಅವರು ಹೇಳುತ್ತಿದ್ದರು : "ನೀನು ವಿವಾಹವಾಗಿ ಸಂಸಾರ ಧರ್ಮವನ್ನು ಪಾಲಿಸುವುದಿಲ್ಲವಾದರೆ ನೀನು ಜೀವನದುದ್ದಕ್ಕೂ ಇತರರ ಆಳಾಗಿ ಬಾಳುವುದೇಕೆ ? ಹದಿನಾರಾಣೆ ಮನಸ್ಸನ್ನು ಭಗವಂತನಿಗೆ ಅರ್ಪಿಸಿ, ಅವನನ್ನು ಉಪಾಸಿಸು. ಸಂಸಾರದಲ್ಲಿ ಜನ್ಮವೆತ್ತಿದ ಮೇಲೆ ಮಾನವನಿಗೆ ಇದಕ್ಕಿಂತ ಮಹತ್ತರವಾದ

ಕಾರ್ಯ ಮತ್ತಾವುದೂ ಇಲ್ಲ, ಹೀಗೆ ಮಾಡಲಾಗದಿದ್ದರೆ ಮದುವೆ ಮಾಡಿಕೊಂಡು ಭಗವತ್ಸಾಕ್ಷಾತ್ಕಾರವನ್ನೇ ಜೀವನದ ಚರಮ ಉದ್ದೇಶವೆಂದು ಪರಿಗಣಿಸಿ ಸನ್ಮಾರ್ಗದಲ್ಲಿ ಸಂಸಾರವನ್ನು ನಡೆಸಿಕೊಂಡು ಹೋಗಬೇಕು." ಇದರಿಂದಾಗಿ ಆಧ್ಯಾತ್ಮಿಕ ಜೀವನದಲ್ಲಿ ಯಾರನ್ನು ಅವರು ಉತ್ತಮ ಮತ್ತು ಮಧ್ಯಮ ಅಧಿಕಾರಿ ಎಂದು ಪರಿಗಣಿಸಿದ್ದರೊ ಅವರಲ್ಲಿ ಯಾರಾದರೂ ಮದುವೆ ಆಗಿರುವರು ಅಥವಾ ವಿಶೇಷ ಕಾರಣಕ್ಕಲ್ಲದೆ ಜನ ಸಾಧಾರಣರಂತೆ ಧನಾರ್ಜನೆಗಾಗಿ ಚಾಕರಿ ಮಾಡುತ್ತಿರುವರು ಅಥವಾ ಹೆಸರು ಕೀರ್ತಿಗಾಗಿ ಬೇರೆ ಯಾವುದಾದರೂ ಕಾರ್ಯದಲ್ಲಿ ಪ್ರವೃತ್ತರಾಗಿರುವರು ಎಂಬುದನ್ನು ಕೇಳಿದಾಗ ಅವರಿಗೆ ತುಂಬಾ ಹೃದ್ವೇದನೆ ಉಂಟಾಗುತ್ತಿತ್ತು. ತಮ್ಮ ಬಾಲಕ ಭಕ್ತರಲ್ಲಿ ಒಬ್ಬರಾದ ಸ್ವಾಮಿ ನಿರಂಜನಾನಂದರು ಚಾಕರಿ ಸ್ವೀಕರಿಸುವುದನ್ನು ಕೇಳಿ, ಒಂದು ದಿನ ಅವರಿಗೆ ಹೇಳಿದರು : "ನೀನು ನಿನ್ನ ವೃದ್ಧ ತಾಯಿಗೋಸ್ಕರವಾಗಿ ಚಾಕರಿ ಮಾಡುತ್ತಿರುವೆ, ಹಾಗಿಲ್ಲದೆ ಇದ್ದಿದ್ದರೆ ನೀನು ಚಾಕರಿ ಮಾಡುವುದನ್ನು ಕೇಳಿ ನಿನ್ನ ಮುಖವನ್ನೇ ನೋಡ ಲಾಗುತ್ತಿರಲಿಲ್ಲ." ಇನ್ನೊಬ್ಬ ಬಾಲಕ ಭಕ್ತನು ವಿವಾಹ ಮಾಡಿಕೊಂಡು ಕಾಶೀಪುರದ ತೋಟಕ್ಕೆ ಅವರನ್ನು ನೋಡಲು ಬಂದಾಗ ತಮಗೆ ಪುತ್ರಶೋಕ ಉಂಟಾಗಿದೆಯೊ ಎನ್ನುವಂತೆ ರೋದಿಸುತ್ತಾ ಅವನನ್ನು ಅಪ್ಪಿಕೊಂಡು ಹೇಳಿದರು : "ಭಗವಂತನನ್ನು ಮರೆತು ಒಮ್ಮೆಯೆ ಸಂಸಾರದಲ್ಲಿ ಮುಳುಗಿಬಿಡಬೇಡಪ್ಪ".

18. ಶ್ರದ್ಧೆಯಿಲ್ಲದೆ ಧರ್ಮ ಮಾರ್ಗದಲ್ಲಿ ಮುಂದುವರಿಯಲಾಗುವುದಿಲ್ಲ. ಭಕ್ತಿಯ ನವ ಉತ್ಸಾಹದಲ್ಲಿ ನಮ್ಮಲ್ಲಿ ಕೆಲವರು ಇದಕ್ಕೆ ತಪ್ಪಾರ್ಥವನ್ನು ಕಲ್ಪಿಸಿಕೊಂಡು ವಿಚಾರವಿಲ್ಲದೆ ಎಲ್ಲವನ್ನೂ ನಂಬುತ್ತಿದ್ದರು. ಶ್ರೀರಾಮಕೃಷ್ಣರ ಸೂಕ್ಷ್ಮದೃಷ್ಟಿಗೆ ಇದು ತಿಳಿದಾಗ ಅವರು ಈ ವಿಷಯದಲ್ಲಿ ಎಚ್ಚರಿಕೆ ನೀಡುತ್ತಿದ್ದರು. ವಿಶ್ವಾಸವನ್ನೇ ಅವ ಲಂಬಿಸಿ ಧರ್ಮಮಾರ್ಗದಲ್ಲಿ ಮುಂದುವರಿಯಬೇಕೆಂದು ಅವರು ಹೇಳಿದ್ದರೂ ಎಂದೂ ಯಾರಿಗೂ ಸದಸದ್ ವಿಚಾರವನ್ನು ಬಿಟ್ಟುಬಿಡಲು ಅವರು ಹೇಳಲೇ ಇಲ್ಲ. ಸದಸದ್ ವಿಚಾರ ಸಂಪನ್ನನಾಗಿ ಧರ್ಮಮಾರ್ಗದಲ್ಲಿ ಮುಂದುವರಿಯಬೇಕು. ಮತ್ತು ಇಷ್ಟಾನಿಷ್ಟ ವನ್ನು ವಿಚಾರ ಮಾಡದೇ ಸಾಂಸಾರಿಕ ಕರ್ಮವನ್ನು ಮಾಡಕೂಡದು. ಇದೇ ಶ್ರೀರಾಮ ಕೃಷ್ಣರ ಅಭಿಮತವಾಗಿತ್ತು. ಸ್ವಾಮಿ ಯೋಗಾನಂದರು ಒಂದು ದಿನ ಪೇಟೆಯಿಂದ ಒಂದು ಕಬ್ಬಿಣದ ಬಾಂಡಲಿಯನ್ನು ಕೊಂಡು ತಂದರು. ಕೊಂಡುಕೊಳ್ಳುವಾಗ ಮೋಸಮಾಡಿ ದರೆ ಭಗವಂತನ ಕೋಪಕ್ಕೆ ಒಳಗಾಗಬೇಕಾಗುತ್ತದೆಂದು ಅಂಗಡಿಯವನನ್ನು ಹೆದರಿಸಿ ದ್ದರು. ಮನೆಗೆ ಬಂದು ನೋಡಿದಾಗ ಅದರಲ್ಲಿ ಸ್ವಲ್ಪ ಒಡಕು ಇತ್ತು. ಶ್ರೀರಾಮಕೃಷ್ಣ ರಿಗೆ ಇದು ತಿಳಿದಾಗ ಅವರನ್ನು ಅವರು ಹೀಗೆ ಬಯ್ದರು : "ಭಕ್ತನಾದರೆ ಮೂರ್ಖನಾ ಗಬೇಕೇನು ? ಅಂಗಡಿಯವನು ಧರ್ಮ ಆಚರಿಸಲು ಅಂಗಡಿ ಇಟ್ಟಿರುವನೇನು ? ಧರ್ಮದ ಹೆಸರಿನಲ್ಲಿ ಅವರನ್ನು ನಂಬಿ ಬಾಂಡಲೆಯನ್ನು ಪರೀಕ್ಷಿಸದೇ ತಂದು ಬಿಡುವುದೆ ? ಇನ್ನೆಂದೂ ಹಾಗೆ ಮಾಡಬೇಡ. ಯಾವುದೇ ವಸ್ತುವನ್ನು ಖರೀದಿಸುವಾಗ ಬೇರೆ ಬೇರೆ ಅಂಗಡಿಗಳಲ್ಲಿ ಕೇಳಿ ನಿಜವಾದ ಬೆಲೆಯನ್ನು ತಿಳಿದುಕೊಳ್ಳಬೇಕು. ಕೊಂಡುಕೊಳ್ಳುವಾಗ

ಅದನ್ನು ಚೆನ್ನಾಗಿ ಪರೀಕ್ಷಿಸಬೇಕು. ಮಾರಾಟವಾದ ಮೇಲೆ ಅಂಗಡಿಯವನು ಕೊಡುವ ಕೊಸರನ್ನೂ ಕೂಡ ಬಿಟ್ಟು ಬರಬಾರದು."

19, ಧರ್ಮಮಾರ್ಗವನ್ನು ಹಿಡಿದ ಕೆಲವರಲ್ಲಿ ದಯಾಭಾವವು ಎಷ್ಟು ಅಧಿಕ ವಾಗಿ ಬಿಡುತ್ತದೆ ಎಂದರೆ ಕೊನೆಗೆ ಅದೇ ಒಂದು ಬಂಧನವಾಗಿ ಬಿಡುತ್ತದೆ. ಹಾಗೂ ಕೆಲವೊಮ್ಮೆ ಅವರನ್ನು ಧರ್ಮಮಾರ್ಗದಿಂದ ಭ್ರಷ್ಟರನ್ನಾಗಿಸುತ್ತದೆ. ಕೋಮಲ ಸ್ವಭಾವದ ಜನರಿಗೆ ಸಾಮಾನ್ಯವಾಗಿ ಹೀಗಾಗುವುದುಂಟು. ಶ್ರೀರಾಮಕೃಷ್ಣರು ಇಂಥ ವರಿಗೆ ಸ್ವಲ್ಪ ಕಠೋರವಾಗಿರಬೇಕೆಂದು, ಇದಕ್ಕೆ ವಿರುದ್ಧವಾಗಿರುವವರಿಗೆ ಸ್ವಲ್ಪ ಮೃದು ವಾಗಿರಬೇಕೆಂದೂ ಉಪದೇಶಿಸುತ್ತಿದ್ದರು. ಯೋಗಾನಂದರದು ತುಂಬಾ ಕೋಮಲ ಸ್ವಭಾವ. ಯಾವುದೇ ಕಾರಣಕ್ಕೂ ಅವರು ಕೋಪಗೊಳ್ಳುತ್ತಿರಲಿಲ್ಲ. ಅವರು ಗಡುಸಾಗಿ ಮಾತನಾಡಿದ್ದನ್ನು ನಾವು ಕೇಳಿಯೇ ಇಲ್ಲ. ಮದುವೆ ಮಾಡಿಕೊಳ್ಳುವುದಕ್ಕೆ ಅವರಿಗೆ ಸ್ವಲ್ಪವೂ ಇಚ್ಛೆ ಇಲ್ಲದಿದ್ದರೂ, ಅವರ ಸ್ವಭಾವವೇ ಅದಕ್ಕೆ ವಿರುದ್ಧವಾಗಿದ್ದರೂ ತಮ್ಮ ತಾಯಿಯ ಕಂಬನಿಯನ್ನು ನೋಡಲಾರದೆ ವಿವಾಹ ಬಂಧನಕ್ಕೆ ಒಳಗಾಗಿದ್ದರು. ಮುಂದೆ ಇದರಿಂದಾಗಿ ಅವರು ಅತ್ಯಂತ ಪರಿತಪಿಸಬೇಕಾಯಿತು. ಶ್ರೀರಾಮಕೃಷ್ಣರೇ ಅವರಿಗೆ ಆಶ್ವಾಸನೆಯನ್ನಿತ್ತು ರಕ್ಷಿಸಿದರು. ಅವರು ತಮ್ಮ ಮೃದು ಸ್ವಭಾವವನ್ನು ನಿಗ್ರ ಹಿಸಿ ಪ್ರತಿಯೊಂದು ಕಾರ್ಯವನ್ನೂ ವಿಚಾರ ಪೂರ್ಣವಾಗಿ ಮಾಡಬೇಕೆಂದು ಶ್ರೀರಾಮ ಕೃಷ್ಣರು ಅವರ ವಿಚಾರದಲ್ಲಿ ತುಂಬ ಎಚ್ಚರಿಕೆ ವಹಿಸಿದ್ದರು. ಇಲ್ಲಿ ಒಂದೆರಡು ಘಟನೆ ಗಳನ್ನು ಪ್ರಸ್ತಾಪಿಸಿದರೆ ಈ ವಿಷಯ ಸ್ಪಷ್ಟವಾಗುತ್ತದೆ, ಶ್ರೀರಾಮಕೃಷ್ಣರ ಬಟ್ಟೆ ಮತ್ತು ಇತರ ವಸ್ತುಗಳನ್ನು ಇಟ್ಟಿದ್ದ ಪೆಟ್ಟಿಗೆಯಲ್ಲಿ ಒಂದು ದಿನ ಒಂದು ಜಿರಳೆ ಇತ್ತು. ಶ್ರೀರಾಮಕೃಷ್ಣರು ಯೋಗಾನಂದರಿಗೆ ಹೇಳಿದರು ಜಿರಲೆಯನ್ನು ಹಿಡಿದು ಹೊರಗೆ ತೆಗೆದುಕೊಂಡುಹೋಗಿ ಕೊಲ್ಲು ಎಂದು. ಅವರು ಅದನ್ನು ಹಿಡಿದು ಹೊರಗೆ ತೆಗೆದು ಕೊಂಡು ಹೋಗಿ ಕೊಲ್ಲದೆ ಹಾಗೆಯೆ ಬಿಟ್ಟುಬಿಟ್ಟರು. ಅವರು ಹಿಂತಿರುಗಿ ಬಂದಮೇಲೆ ಜಿರಲೆಯನ್ನು ಕೊಂದೆಯಾ ಎಂದು ಶ್ರೀರಾಮಕೃಷ್ಣರು ಕೇಳಿದರು. ಯೋಗಾನಂದರು ತಬ್ಬಿಬ್ಬಾಗಿ "ಇಲ್ಲ ಮಹಾಶಯರೆ ಹಾಗೇ ಬಿಟ್ಟು ಬಿಟ್ಟೆ" ಎಂದರು. ಶ್ರೀರಾಮಕೃಷ್ಣರು ಅವರಿಗೆ ಬಯ್ದು ಹೇಳಿದರು : 'ಆಹ್ ನಾನು ನಿನಗೆ ಕೊಲ್ಲಲು ಹೇಳಿದೆ, ನೀನು ಹಾಗೆಯೆ ಬಿಟ್ಟು ಬಟ್ಟೆಯಾ. ನಾನು ಹೇಳಿದಂತೆಯೆ ಮಾಡಬೇಕು. ಇಲ್ಲದಿದ್ದರೆ ಗಂಭೀರ ವಿಷಯ ಗಳಲ್ಲಿಯೂ ನೀನು ಮುಂದೆ ನಿನ್ನ ಮನಸ್ಸಿಗೆ ಬಂದದ್ದನ್ನು ಮಾಡಿ ಕೊನೆಗೆ ಪಶ್ಚಾತ್ತಾಪ ಪಡಬೇಕಾಗುತ್ತದೆ."

20. ಒಂದು ದಿನ ಯೋಗಾನಂದರು ಕಲ್ಕತ್ತೆಯಿಂದ ದಕ್ಷಿಣೇಶ್ವರಕ್ಕೆ ದೋಣಿ ಯಲ್ಲಿ ಬರುತ್ತಿದ್ದರು. ಇನ್ನೊಬ್ಬ ಪ್ರಯಾಣಿಕನು ಕೇಳಿದಾಗ ತಾವು ದಕ್ಷಿಣೇಶ್ವರಕ್ಕೆ ಶ್ರೀರಾಮಕೃಷ್ಣರನ್ನು ನೋಡಲು ಹೋಗುತ್ತಿರುವುದಾಗಿ ಹೇಳಿದರು. ಇದನ್ನು ಕೇಳಿದ ಕೂಡಲೇ ಆ ವ್ಯಕ್ತಿಯು ನಿಷ್ಕಾರಣವಾಗಿ ಶ್ರೀರಾಮಕೃಷ್ಣರನ್ನು ನಿಂದಿಸುತ್ತಾ ಹೇಳಿ ದನು: "ಅವರೊಬ್ಬರು ಢಾಂಬಿಕರು, ಚೆನ್ನಾಗಿ ತಿನ್ನುತ್ತಾರೆ. ಒಳ್ಳೆಯ ಹಾಸಿಗೆಯ ಮೇಲೆ

ಮಲಗುತ್ತಾರೆ. ಧರ್ಮದ ಸೋಗು ಹಾಕಿಕೊಂಡು ಶಾಲಾ ಮಕ್ಕಳ ಮನಸ್ಸನ್ನೆಲ್ಲ ಕೆಡಿಸು ತ್ತಿದ್ದಾರೆ," ಇತ್ಯಾದಿ. ಈ ಮಾತುಗಳನ್ನು ಕೇಳಿ ಯೋಗಾನಂದರು ನೊಂದರು. ಇದರ ವಿರುದ್ಧವಾಗಿ ಒಂದೆರಡು ಮಾತು ಆಡಬೇಕು ಎಂದೆನಿಸಿತು ಅವರಿಗೆ. ಆದರೆ ತಮ್ಮ ಶಾಂತ ಪ್ರಕೃತಿಯ ಪರಿಣಾಮವಾಗಿ ಅವರಿಗನಿಸಿತು, ಶ್ರೀರಾಮಕೃಷ್ಣರನ್ನು ತಿಳಿಯದ ಅನೇಕರು ಅನೇಕ ಪ್ರಕಾರವಾಗಿ ಅವರ ಬಗ್ಗೆ ಹೇಳಿಕೊಳ್ಳುತ್ತಾರೆ. ಅದಕ್ಕೆ ತಾವೇನು ಮಾಡಲಾದೀತು ? ಈ ರೀತಿ ಯೋಚಿಸಿ ಆ ವ್ಯಕ್ತಿಯ ವಿರುದ್ಧವಾಗಿ ಏನೂ ಮಾತ ನಾಡದೆ ಸುಮ್ಮನೆ ಕುಳಿತರು. ಶ್ರೀರಾಮಕೃಷ್ಣರೆಡೆಗೆ ಬಂದ ಮೇಲೆ ಮಾತಿನ ಸಂದರ್ಭ ದಲ್ಲಿ ಈ ಘಟನೆಯನ್ನು ಆದ್ಯಂತವಾಗಿ ವಿವರಿಸಿದರು. ನಿಂದಾಸ್ತುತಿಗಳನ್ನು ಲೆಕ್ಕಿಸದ ನಿರಭಿಮಾನಿಯಾದ ಶ್ರೀರಾಮಕೃಷ್ಣರು ಇದನ್ನು ಕೇಳಿ ನಕ್ಕು ಸುಮ್ಮನಾಗಿ ಬಿಡುತ್ತಾರೆ ಎಂದು ಯೋಗಾನಂದರು ಭಾವಿಸಿದ್ದರು. ಆದರೆ ನಿಜವಾಗಿ ನಡೆದದ್ದೇ ಬೇರೆ. ಶ್ರೀರಾಮ ಕೃಷ್ಣರು ಆ ಘಟನೆಯನ್ನು ಇನ್ನೊಂದು ದೃಷ್ಟಿಯಿಂದ ನೋಡಿ ಯೋಗಾನಂದರ ವರ್ತನೆ ಯನ್ನು ಖಂಡಿಸಿ ಹೇಳಿದರು : "ನನ್ನನ್ನು ಅವನು ಸುಮ್ಮನೆ ಅಷ್ಟೊಂದು ನಿಂದಿಸಿದ. ನೀನು ಸುಮ್ಮನೆ ಅದನ್ನೆಲ್ಲ ಕೇಳಿಕೊಂಡು ಬಂದು ಬಿಟ್ಟೆಯಾ? ಶಾಸ್ತ್ರದಲ್ಲಿ ಏನು ಹೇಳಿದೆ ಗೊತ್ತೆ, ಗುರು ನಿಂದೆ ಮಾಡಿದವರ ತಲೆ ಕತ್ತರಿಸಬೇಕು. ಇಲ್ಲದಿದ್ದರೆ ಆ ಸ್ಥಾನವನ್ನು ಬಿಟ್ಟು ಹೊರಟು ಹೋಗಬೇಕು. ನೀನು ಆ ಸುಳ್ಳುನಿಂದೆಯ ವಿರುದ್ಧವಾಗಿ ಒಂದು ಮಾತನ್ನೂ ಆಡಲಿಲ್ಲವಲ್ಲ !"

21. ಇದೇ ರೀತಿಯ ಇನ್ನೊಂದು ಘಟನೆಯನ್ನು ಇಲ್ಲಿ ಉಲ್ಲೇಖಿಸಬಹುದು. ಇದು ಶ್ರೀರಾಮಕೃಷ್ಣರ ಉಪದೇಶ ಎಷ್ಟರ ಮಟ್ಟಿಗೆ ವ್ಯಕ್ತಿಗಳ ಸ್ವಭಾವಕ್ಕೆ ಅನುಗುಣ ವಾಗಿರುತ್ತದೆ ಎಂಬುದನ್ನು ತೋರಿಸುತ್ತದೆ. ಸ್ವಾಮಿ ನಿರಂಜನಾನಂದರ ಸ್ವಭಾವ ಉಗ್ರವಾದುದು. ಅವರೂ ಒಂದು ದಿನ ದೋಣಿಯಲ್ಲಿ ದಕ್ಷಿಣೇಶ್ವರಕ್ಕೆ ಬರುವಾಗ ದೋಣಿಯಲ್ಲಿದ್ದವರು ಶ್ರೀರಾಮಕೃಷ್ಣರನ್ನು ನಿಂದಿಸುವುದನ್ನು ಕೇಳಿದರು. ಮೊದಲು ನಿರಂಜನಾನಂದರು ಅವರನ್ನು ತೀವ್ರವಾಗಿ ವಿರೋಧಿಸಿದರು. ಅನಂತರ ಅವರು ಸುಮ್ಮ ನಾಗದಿರಲು ನಿರಂಜನಾನಂದರು ದೋಣಿಯನ್ನು ಮುಳುಗಿಸುವುದಾಗಿ ಗದರಿಸಿ ಅದನ್ನು ಜೋರಾಗಿ ಅಲುಗಾಡಿಸತೊಡಗಿದರು. ನಿರಂಜನಾನಂದರು ದೃಢಕಾಯರು ಮತ್ತು ಅವರಿಗೆ ಚೆನ್ನಾಗಿ ಈಜು ಬರುತ್ತಿತ್ತು. ಅವರ ಕ್ರೋಧದಿಂದ ಜ್ವಲಿಸುತ್ತಿದ್ದ ಮೂರ್ತಿ ಯನ್ನು ನೋಡಿ ಎಲ್ಲರೂ ಭಯದಿಂದ ತತ್ತರಿಸತೊಡಗಿದರು. ಅವರ ಕ್ಷಮೆ ಯಾಚಿಸಿ ಅವರು ಆ ಸಾಹಸಕ್ಕಿಳಿಯದಂತೆ ಮಾಡಿದರು. ಶ್ರೀರಾಮಕೃಷ್ಣರು ಮುಂದೆ ಈ ಘಟನೆ ಯನ್ನು ತಿಳಿದಾಗ ಅವರನ್ನು ಹೀಗೆ ಬಯ್ದರು: "ಕ್ರೋಧವೊಂದು ಚಂಡಾಲ. ಕ್ರೋಧಕ್ಕೆ ವಶನಾಗುವುದೇ ? ಸತ್ಪುರುಷರ ಕೋಪ ನೀರಿನ ಮೇಲಿನ ಗೆರೆಯಿದ್ದ ಹಾಗೆ. ಹೀನ ಬುದ್ಧಿಯ ಜನರು ಏನೇನೊ ಮಾತನಾಡಿಕೊಳ್ಳುತ್ತಾರೆ. ಇದಕ್ಕೆಲ್ಲ ತಲೆ ಕೆಡಿಸಿಕೊಂಡರೆ ವಾದ ವಿವಾದದಲ್ಲಿಯೆ ಇಡೀ ಜೀವನ ಕಳೆದುಹೋಗುತ್ತದೆ. ಇಂಥ ಸಂದರ್ಭಗಳಲ್ಲಿ ಜನರು ಒಂದು ಕೀಟವೆಂದು ಭಾವಿಸಿ ಅವರ ಮಾತನ್ನು ಉಪೇಕ್ಷಿಸಬೇಕು. ನೀನು ಕೋಧ

ವಶನಾಗಿ ಎಂಥ ಅನ್ಯಾಯ ಮಾಡುವುದರಲ್ಲಿದ್ದೆ ನೋಡು. ದೋಣಿ ನಡೆಸುವವರು ನಿನಗೇನು ಅನ್ಯಾಯ ಮಾಡಿದ್ದರು ? ಆ ಬಡವರಿಗೂ ನೀನು ತೊಂದರೆ ಕೊಡುವವ ನಿದ್ದೆಯಲ್ಲ."

22. ಪುರುಷಭಕ್ತರಿಗೆ ಹೇಗೋ ಹಾಗೆ ಸ್ತ್ರೀಭಕ್ತರ ವಿಷಯದಲ್ಲಿಯೂ ಶ್ರೀರಾಮಕೃಷ್ಣರು ಅವರ ಸ್ವಾಭಾವಿಕ ಗುಣಗಳನ್ನರಿತು ಉಪದೇಶ ನೀಡುತ್ತಿದ್ದರು. ನಮಗೆ ನೆನಪಿರುವಂತೆ ಕೋಮಲ ಸ್ವಭಾವದ ಸ್ತ್ರೀಯೊಬ್ಬಳಿಗೆ ಈ ಕೆಳಗಿನಂತೆ ಎಚ್ಚರಿಕೆ ನುಡಿಗಳನ್ನು ನುಡಿದಿದ್ದರು : "ನಿನಗೆ ಪರಿಚಿತರೊಬ್ಬರು ತುಂಬ ಕಷ್ಟಪಟ್ಟು ಎಲ್ಲಾ ವಿಷಯದಲ್ಲಿಯೂ ಸಹಾಯ ಮಾಡುತ್ತಾರೆ ಎಂದಿಟ್ಟುಕೊ, ಆದರೆ ಸೌಂದರ್ಯ ವ್ಯಾಮೋಹವನ್ನು ನಿಗ್ರಹಿಸಲಾರದೆ ಅವನ ದುರ್ಬಲ ಮನಸ್ಸು ನಿನಗಾಗಿ ಹಾತೊರೆಯು ವುದಾದರೆ ನಿನ್ನ ದಯೆಯ ಕಡಿವಾಣವನ್ನು ಸಡಿಲವಾಗಿ ಬಿಡಬೇಕೆ ಅಥವಾ ಅವನ ವಿಷಯದಲ್ಲಿ ಸ್ವಲ್ಪ ಕಠೋರಳಾಗಬೇಕೆ ? ಅವನಿಗೆ ಸರಿಯಾಗಿ ಒದ್ದು ಅವನಿಂದ ದೂರವಿರಬೇಡವೆ ನೀನು ? ಆದ್ದರಿಂದ ಎಲ್ಲಾ ಸಂದರ್ಭದಲ್ಲಿಯೂ ಎಲ್ಲರಿಗೂ ದಯೆ ತೋರಿಸಬೇಕೆಂದಿಲ್ಲ. ದಯೆಗೂ ಒಂದು ಮಿತಿ ಇರಬೇಕು. ದಯೆಯನ್ನು ತೋರಿಸುವಾಗ ದೇಶಕಾಲಪಾತ್ರಗಳನ್ನು ಪರಿಗಣಿಸಬೇಕು."

23. ಇದಕ್ಕೆ ಸಂಬಂಧವಾದ ಇನ್ನೊಂದು ಘಟನೆ ನಮಗೆ ನೆನಪಿದೆ. ಹರೀಶನು ಶಕ್ತಿಯುತನಾದ ಯುವಕ. ಅವನಿಗೆ ಸುಂದರಳಾದ ಪತ್ನಿ, ಒಂದು ಚಿಕ್ಕ ಮಗು ಇದ್ದರು. ಅವನ ಆರ್ಥಿಕ ಪರಿಸ್ಥಿತಿಯು ಉತ್ತಮವಾಗಿತ್ತೆನ್ನಬಹುದು. ಅವನು ಶ್ರೀರಾಮಕೃಷ್ಣ ರೆಡೆಗೆ ಬರತೊಡಗಿ ಸ್ವಲ್ಪ ಕಾಲದಲ್ಲಿಯೆ ಅವನ ಮನಸ್ಸು ತ್ಯಾಗದಿಂದ ತುಂಬಿ ಹೋಯಿತು. ಅವನ ಸರಳ ಸ್ವಭಾವ, ನಿಷ್ಠೆ, ಶಾಂತ ಮನೋಭಾವ ಇವುಗಳನ್ನು ನೋಡಿ ಶ್ರೀರಾಮಕೃಷ್ಣರು ಸಂತೋಷಗೊಂಡು ಅವನಿಗೆ ಆಶ್ರಯವನ್ನಿತ್ತರು. ಅಂದಿನಿಂದ ಅವನು ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಸೇವೆ, ಧ್ಯಾನ ಜಪಾದಿಗಳನ್ನು ಮಾಡುತ್ತಾ ಹೆಚ್ಚು ಕಾಲ ಕಳೆಯ ತೊಡಗಿದನು. ಅವನ ಸಂಬಂಧಿಕರ ಒತ್ತಾಯವಾಗಲಿ ಅವನ ವಶಾವಂದಿರ ಕುಟುಂಬದ ಪ್ರೀತಿಯ ಆಹ್ವಾನವಾಗಲಿ ಅಥವಾ ಅವನ ಪತ್ನಿಯ ಪರಿತಾಪ ವಾಗಲಿ ಅವನನ್ನು ವಿಚಲಿತಗೊಳಿಸಲಿಲ್ಲ. ಅವನು ಯಾರ ಮಾತಿಗೂ ಬೆಲೆ ಕೊಡದೆ ತನ್ನ ಮಾರ್ಗದಲ್ಲಿ ಮುಂದುವರಿಯಲು ನಿರ್ಧರಿಸಿದ ಮತ್ತು ಅವನು ಮೌನ ವ್ರತವನ್ನು ಕೈಗೊಂಡ. ಅವನ ಶಾಂತ ಮತ್ತು ನಿಷ್ಠ ಮನೋಭಾವವನ್ನು ನಿರ್ದೇಶಿಸಿ ಶ್ರೀರಾಮ ಕೃಷ್ಣರು ಹೇಳುತ್ತಿದ್ದರು : "ಹರೀಶನಂತಹ ನಿಜವಾದ ಮನುಷ್ಯತ್ವವುಳ್ಳವರು ಎಂಥ ಪ್ರಚೋದನೆಗೂ ಒಳಗಾಗದೆ ಯಾವ ಪ್ರತಿಕ್ರಿಯೆಯನ್ನೂ ತೋರಿಸದೆ ಇರುತ್ತಾರೆ."

ಹರೀಶನು ಹೀಗೆ ಪ್ರಾಪಂಚಿಕ ವ್ಯವಹಾರಗಳನ್ನೆಲ್ಲ ತ್ಯಜಿಸಿ ಸಾಧನೆಯಲ್ಲಿ ತೊಡಗಿ ರುವಾಗ ಒಂದು ದಿನ ಸುದ್ದಿ ಬಂತು ಅವನ ಕುಟುಂಬದವರೆಲ್ಲ ತುಂಬಾ ದುಃಖಿತರಾಗಿ ದ್ದಾರೆ, ಅವನ ಪತ್ನಿಯಂತೂ ಅವನ ವಿಯೋಗ ದುಃಖವನ್ನು ತಡೆಯಲಾರದೆ ದುಃಖ ದಿಂದ ಅನ್ನ ನೀರನ್ನೇ ಬಿಟ್ಟು ಬಿಟ್ಟಿದ್ದಾಳೆ ಎಂದು. ಹರೀಶನು ಇದನ್ನು ಕೇಳಿ ಎಂದಿ

ನಂತೆಯೆ ಸುಮ್ಮನಿದ್ದ. ಅವನ ಮನಸ್ಸನ್ನು ಪರೀಕ್ಷಿಸಲು ಅವನನ್ನು ಪಕ್ಕಕ್ಕೆ ಕರೆದು ಶ್ರೀರಾಮಕೃಷ್ಣರು ಹೇಳಿದರು : "ನಿನ್ನ ಪತ್ನಿ ಅಷ್ಟೊಂದು ದುಃಖಿಸುತ್ತಿದ್ದಾಳೆ. ಒಮ್ಮೆ ಮನೆಗೆ ಹೋಗಿ ಏಕೆ ಮುಖ ತೋರಿಸಬಾರದು ? ಒಂದು ದೃಷ್ಟಿಯಿಂದ ಅವಳನ್ನು ನೋಡಿಕೊಳ್ಳುವವರು ಯಾರೂ ಇಲ್ಲವೇ ಇಲ್ಲವೆನ್ನಬಹುದು. ಆದ್ದರಿಂದ ಅವಳ ವಿಷಯದಲ್ಲಿ ನೀನು ಸ್ವಲ್ಪ ದಯೆ ತೋರಿಸಿದರೆ ಏನು ತೊಂದರೆ ?" ಹರೀಶನು ನಮ್ರತೆ ಯಿಂದ ಹೇಳಿದ : "ಮಹಾಶಯರೇ, ಇದು ದಯೆ ತೋರಿಸುವ ವಿಷಯವಲ್ಲ. ನಾನು ಇಲ್ಲಿ ದಯೆ ತೋರಿಸಿದರೆ ಪ್ರಾಪಂಚಿಕ ವ್ಯಾಮೋಹಕ್ಕೆ ವಶವಾಗಿ ಜೀವನದ ಮುಖ್ಯ ಗುರಿಯನ್ನೇ ಮರೆತುಬಿಡಬಹುದು, ದಯವಿಟ್ಟು ಹಾಗೆ ಆಜ್ಞಾಪಿಸಬೇಡಿ." ಶ್ರೀರಾಮ ಕೃಷ್ಣರು ಈ ಮಾತಿನಿಂದ ಅತ್ಯಂತ ಸಂತೃಪ್ತರಾದರು. ಆಗಾಗ ಅವನ ವೈರಾಗ್ಯವನ್ನು ಪ್ರಶಂಸಿಸುತ್ತ ಅವನ ಈ ಮೇಲಿನ ಮಾತನ್ನು ಉದ್ಧರಿಸುತ್ತಿದ್ದರು.

24. ಶ್ರೀರಾಮಕೃಷ್ಣರು ನಮ್ಮ ದೈನಂದಿನ ಕ್ರಿಯೆಗಳನ್ನೆಲ್ಲ ವೀಕ್ಷಿಸುತ್ತ ನಮ್ಮ ಮನಸ್ಸಿನ ಶುಭಾಶುಭ ಗುಣಗಳನ್ನು ತಿಳಿಯುತ್ತಿದ್ದರು ಎಂಬುದಕ್ಕೆ ಅನೇಕ ಉದಾಹರಣೆ ಗಳನ್ನು ಕೊಡಬಹುದು. ನಿರಂಜನನು ಬಹಳ ತುಪ್ಪವನ್ನು ತಿನ್ನುತ್ತಿದ್ದುದನ್ನು ಗಮ ನಿಸಿ ಅವರು ಹೇಳಿದರು : "ಅಷ್ಟೊಂದು ತುಪ್ಪ ತಿನ್ನುವುದೆ ? ಕೊನೆಗೆ ಅವರಿವರ ಮಗಳು ಸೊಸೆಯರನ್ನೆಲ್ಲ ಹಾರಿಸಿಕೊಂಡು ಹೋಗುವೆ." ಒಬ್ಬ ವ್ಯಕ್ತಿ ತುಂಬ ನಿದ್ರಿಸು ತ್ತಿದ್ದುದನ್ನು ನೋಡಿ ಶ್ರೀರಾಮಕೃಷ್ಣರು ಅವನ ವಿಷಯದಲ್ಲಿ ತುಂಬ ಅಸಂತುಷ್ಟರಾಗಿ ದ್ದರು. ಇನ್ನೊಬ್ಬ ವ್ಯಕ್ತಿ ವೈದ್ಯಕೀಯ ಶಾಸ್ತ್ರವನ್ನು ಓದುವ ತೀವ್ರ ಆಸೆಯಿಂದ ಶ್ರೀರಾಮಕೃಷ್ಣರ ಮಾತನ್ನು ಕಡೆಗಣಿಸಿದನು. ಅವರು ಅವನನ್ನು ಬಯ್ದು ಹೇಳಿದರು : "ಒಂದಾದ ಮೇಲೆ ಒಂದು ಆಸೆಯನ್ನು ಬಿಡುವುದರ ಬದಲು ನೀನು ಸೇರಿಸಿಕೊಂಡು ಹೋಗುತ್ತಿದ್ದೀಯೆ. ಹಾಗಿರುವಾಗ ಆಧ್ಯಾತ್ಮಿಕ ಪ್ರಗತಿ ಆಗುವುದು ಹೇಗೆ ?" ಬೇರೆ ಬೇರೆ ಸಂದರ್ಭಗಳಲ್ಲಿ ಇದಕ್ಕೆ ಸಂಬಂಧಿಸಿದಂತೆ ಅನೇಕ ಉದಾಹರಣೆಗಳನ್ನು ಕೊಟ್ಟಿರು ವೆವು. ಆದ್ದರಿಂದ ಅದನ್ನು ಇಲ್ಲಿ ಲಂಬಿಸುವ ಆವಶ್ಯಕತೆ ಇಲ್ಲ.

ಮೇಲೆ ಹೇಳಿದ ವಿಧಾನಗಳ ಮೂಲಕ ಶ್ರೀರಾಮಕೃಷ್ಣರು ತಮ್ಮನ್ನು ಆಶ್ರಯಿಸಿ ದವರ ಸ್ವಾಭಾವಿಕ ಮನೋಭಾವವನ್ನು ಗುರುತಿಸುತ್ತಿದ್ದರಷ್ಟೆ. ಅವರ ದೋಷವನ್ನು ಸರಿಪಡಿಸಲು ಅನೇಕ ಸಲಹೆಗಳನ್ನು ನೀಡುತ್ತಿದ್ದರು. ಅಷ್ಟೇ ಅಲ್ಲದೆ ಅದನ್ನು ಅವರು ಸರಿಯಾಗಿ ಅನುಸರಿಸುತ್ತಿರುವರೊ ಇಲ್ಲವೊ ಎಂಬುದನ್ನೂ ಗಮನಿಸುತ್ತಿದ್ದರು. ಯಾವುದೇ ವ್ಯಕ್ತಿಯ ಆಧ್ಯಾತ್ಮಿಕ ಉನ್ನತಿಯನ್ನು ಅಳೆಯಲು ಅವರು ಒಂದು ವಿಶೇಷ ವಿಧಾನವನ್ನು ಅಳವಡಿಸುತ್ತಿದ್ದರು. ಅದು ಈ ಕೆಳಗಿನದು.

25. ಭಕ್ತರು ತಮ್ಮೆಡೆಗೆ ಯಾವ ಶ್ರದ್ಧಾಭಕ್ತಿಯಿಂದ ಬರುತ್ತಿದ್ದರೊ ಅದು ದಿನ ದಿನವೂ ವೃದ್ಧಿಯಾಗುತ್ತಿದೆಯೆ ಇಲ್ಲವೆ ಎಂಬುದನ್ನು ಶ್ರೀರಾಮಕೃಷ್ಣರು ಪರೀಕ್ಷಿಸಿ ನೋಡುತ್ತಿದ್ದರು. ಇದರ ಸಲುವಾಗಿ ಅವರು ಯಾರಾದರೂ ಒಬ್ಬ ವ್ಯಕ್ತಿಯನ್ನು ಅವನು ಎಷ್ಟರ ಮಟ್ಟಿಗೆ ತಮ್ಮ ಯಾವುದೋ ಒಂದು ಆಧ್ಯಾತ್ಮಿಕ ಸ್ಥಿತಿಯನ್ನೊ

ಅಥವಾ ಕೃತಿಯನ್ನೊ ಅರ್ಥ ಮಾಡಿಕೊಂಡಿರುವನು ಎಂದು ವಿಚಾರಿಸುತ್ತಿದ್ದರು. ಬೇರೆ ಸಮಯಗಳಲ್ಲಿ ಆ ವ್ಯಕ್ತಿಗೆ ತಮ್ಮ ಎಲ್ಲಾ ಮಾತುಗಳಲ್ಲಿ ಶ್ರದ್ಧೆ ಇದೆಯೋ ಇಲ್ಲವೇ ಎಂಬುದನ್ನು ನೋಡುತ್ತಿದ್ದರು. ಮತ್ತೆ ಕೆಲವು ಸಮಯಗಳಲ್ಲಿ ಅವನನ್ನು ತಮ್ಮ ಇತರರ ಭಕ್ತರಿಗೆ ಪರಿಚಯಿಸಿ ಅವನ ಆಧ್ಯಾತ್ಮಿಕ ಭಾವವನ್ನು ತೀವ್ರಗೊಳಿಸಲು ಸಹಾಯ ಮಾಡುತ್ತಿದ್ದರು. ಆ ವ್ಯಕ್ತಿಯು ತನ್ನ ಸ್ವಾಭಾವಿಕ ಪ್ರೇರಣೆಯಿಂದ ತಮ್ಮನ್ನು ಜಗತ್ತಿನ ಸರ್ವಶ್ರೇಷ್ಠ ಆಧ್ಯಾತ್ಮಿಕ ಆದರ್ಶವೆಂದು ಪರಿಗಣಿಸುವವರೆಗೂ ಅವನ ಆಧ್ಯಾತ್ಮಿಕ ಉನ್ನತಿಯಲ್ಲಿ ಅವರು ಅತ್ಯಾಸಕ್ತಿಯನ್ನು ತೋರಿಸುತ್ತಿದ್ದರು.

26. ಈ ಮೇಲಿನ ಮಾತುಗಳಿಂದ ಓದುಗರಿಗೆ ಆಶ್ಚರ್ಯವಾಗಬಹುದು. ಇದರಲ್ಲಿ ಆಶ್ಚರ್ಯ ಪಡುವಂಥಹುದು ಏನೂ ಇಲ್ಲ ಎನ್ನುವಂತಿಲ್ಲ. ಆದರೆ ಈ ರೀತಿ ಮಾಡುವುದೆ ಶ್ರೀರಾಮಕೃಷ್ಣರ ಪಾಲಿಗೆ ಯುಕ್ತಿಯುಕ್ತವೂ ಸ್ವಾಭಾವಿಕವೂ ಆಗಿತ್ತು. ಅವರು ತಮ್ಮಲ್ಲಿ ಅಪೂರ್ವ ಆಧ್ಯಾತ್ಮಿಕ ಪ್ರಕಾಶವನ್ನು ನಿಜವಾಗಿಯೂ ಕಂಡಿದ್ದರು. ಆದ್ದರಿಂದ ಅವರು ಆ ರೀತಿ ಆಚರಿಸುವುದು ಅನಿವಾರ್ಯವಾಗಿತ್ತು. ದೀರ್ಘ ಅಲೌಕಿಕ ತಪಸ್ಸು ಮತ್ತು ಸಾಧನೆಯ ಮೂಲಕ ಶ್ರೀರಾಮಕೃಷ್ಣರು ತಮ್ಮ ಅಭಿಮಾನ ಅಹಂಕಾರಗಳನ್ನು ಸಂಪೂರ್ಣ ನಾಶಗೊಳಿಸಿದ್ದರು. ಅವರಲ್ಲಿ ಭ್ರಮ, ಪ್ರಮಾದ ಇವು ಸಾಧ್ಯವೇ ಇರಲಿಲ್ಲ. ಅಖಂಡ ಸ್ಮೃತಿ ಮತ್ತು ಜ್ಞಾನ ಇವುಗಳ ಸಹಾಯದಿಂದ ತಮ್ಮ ಶರೀರ ಮನಸ್ಸುಗಳ ಮೂಲಕ ಯಾವ ಒಂದು ಹೊಸ ಆಧ್ಯಾತ್ಮಿಕ ಆದರ್ಶ ಪ್ರಕಾಶವಾಗಿದೆಯೊ ಅದು ಜಗತ್ತಿನಲ್ಲಿ ಹಿಂದೆ ಎಂದೂ ಎಲ್ಲಿಯೂ ಪ್ರಕಾಶಗೊಂಡಿರಲಿಲ್ಲ, ಎಂಬುದನ್ನು ಅವರು ಹೃತ್ಪೂರ್ವಕ ಅರಿತಿದ್ದರು. ಈ ಆದರ್ಶದ ಬೆಳಕಿನಲ್ಲಿ ವ್ಯಕ್ತಿಯು ತನ್ನ ಜೀವನವನ್ನು ರೂಪಿಸಿಕೊಳ್ಳಲು ಪ್ರಯತ್ನಿಸಬೇಕು. ಇದೇ ವರ್ತಮಾನಯುಗದ ಆಧ್ಯಾತ್ಮಿಕ ಉನ್ನತಿಯ ಸುಗಮ ಮತ್ತು ಸಹಜವಾದ ಮಾರ್ಗ ಎಂಬ ದೃಢವಿಶ್ವಾಸ ಶ್ರೀರಾಮಕೃಷ್ಣರಿಗಿತ್ತು. ಇದಕ್ಕಾಗಿಯೆ ತಮ್ಮೆಡೆಗೆ ಬಂದ ವ್ಯಕ್ತಿಗಳು ಈ ಮೇಲಿನ ವಿಷಯವನ್ನು ತಿಳಿದಿರುವರೆ ಇಲ್ಲವೆ, ಮತ್ತು ತಾವು ತೋರಿಸಿದ ಉದಾರವಾದ ಭಾವವನ್ನು ಆಶ್ರಯಿಸಿ ತಮ್ಮ ಜೀವನವನ್ನು ರೂಪಿಸಿಕೊಳ್ಳುತ್ತಿರುವರೇ ಇಲ್ಲವೇ ಎಂಬ ಈ ವಿಷಯದಲ್ಲಿ ಅವರು ಕಾಳಜಿ ತೋರಿಸುತ್ತಿದ್ದುದರಲ್ಲಿ ಆಶ್ಚರ್ಯವೇನಿಲ್ಲ.

ಈ ಮೇಲಿನ ತಮ್ಮ ವಿಶ್ವಾಸವನ್ನು ಶ್ರೀರಾಮಕೃಷ್ಣರು ಆಗಾಗ ನಮ್ಮ ಮುಂದೆ ವ್ಯಕ್ತಪಡಿಸುತ್ತಿದ್ದರು. ಅವರು ಹೇಳುತ್ತಿದ್ದರು : "ನವಾಬರ ಕಾಲದ ನಾಣ್ಯ ಬಾದಶಾರ ಕಾಲದಲ್ಲಿ ನಡೆಯುವುದಿಲ್ಲ", "ನಾನು ಹೇಳಿದಂತೆ ನೀವು ನಡೆದರೆ ನೇರವಾಗಿ ಗುರಿ ಸೇರುತ್ತೀರಿ", "ಯಾರಿಗೆ ಇದು ಕೊನೆಯ ಜನ್ಮವೊ ಅವರು ಇಲ್ಲಿಗೆ ಬಂದು ಈ ಉದಾರ ಮತವನ್ನು ಸ್ವೀಕರಿಸಬೇಕು", "ನಿಮ್ಮ ಇಷ್ಟ ದೇವತೆ (ತಮ್ಮ ದೇಹವನ್ನು ತೋರಿಸಿ) ಇಲ್ಲಿ ನೆಲೆಸಿರುವನು. ಇದರ ಮೇಲೆ ನೀವು ಧ್ಯಾನ ಮಾಡಿದರೆ ಅವನನ್ನೇ ಧ್ಯಾನಿಸಿದಂತಾಗುವುದು"—ಇತ್ಯಾದಿ ಇತ್ಯಾದಿ. ಇತರರಿಗೆ ತಮ್ಮ ಮೇಲಿರುವ ನಂಬಿಕೆಯ ಬಗ್ಗೆ ಅವರು ಹೇಗೆ ವಿಚಾರಿಸುತ್ತಿದ್ದರು ಎಂಬುದಕ್ಕೆ ಇಲ್ಲಿ ಕೆಲವು ಉದಾಹರಣೆಗಳನ್ನು ಕೊಡು

ತ್ತೇವೆ. ಆಗ ಓದುಗರಿಗೆ ನಾವು ಹೇಳಿರುವುದನ್ನು ಅರ್ಥಮಾಡಿಕೊಳ್ಳಲು ಸುಲಭ ವಾಗುತ್ತದೆ.

27. ಶ್ರೀರಾಮಕೃಷ್ಣರ ಪುಣ್ಯ ದರ್ಶನವನ್ನು ಪಡೆದು ಅವರ ಅಹೇತುಕ ಕೃಪೆಗೆ ಪಾತ್ರರಾದ ಪ್ರತಿಯೊಬ್ಬರನ್ನೂ ಯಾವುದಾದರೂ ಒಂದು ಸಂದರ್ಭದಲ್ಲಿ ಶ್ರೀರಾಮ ಕೃಷ್ಣರು ಹೀಗೆ ಕೇಳಿದ್ದುಂಟು: "ಒಳ್ಳೆಯದು, ನನ್ನ ಬಗ್ಗೆ ನಿನಗೆ ಹೇಗನಿಸುತ್ತದೆ ಹೇಳು?" ದಕ್ಷಿಣೇಶ್ವರಕ್ಕೆ ಹೋಗಿ ಸ್ವಲ್ಪ ಘನಿಷ್ಠ ಸಂಬಂಧ ಉಂಟಾದ ಕೂಡಲೇ ಭಕ್ತರಿಗೆ ಈ ಪ್ರಶ್ನೆ ಹಾಕುತ್ತಿದ್ದರು. ಪ್ರಥಮ ದರ್ಶನದ ಸಮಯದಲ್ಲಿಯೆ ಈ ಪ್ರಶ್ನೆಯನ್ನು ಎಂದೂ ಕೇಳುತ್ತಿರಲಿಲ್ಲ ಎಂದು ಹೇಳುವಂತಿಲ್ಲ. ಯಾರ ಆಗಮನವನ್ನು ಅವರು ಮೊದಲೇ ದಿವ್ಯ ದೃಷ್ಟಿಯಿಂದ ಕಂಡಿದ್ದರೋ ಅಂಥ ಭಕ್ತರು ಪ್ರಥಮ ಬಾರಿಗೆ ಬಂದಾಗಲೇ ಈ ಪ್ರಶ್ನೆ ಯನ್ನು ಹಾಕುತ್ತಿದ್ದರು. ಭಕ್ತರು ಈ ರೀತಿಯ ಪ್ರಶ್ನೆಗೆ ಅನೇಕ ರೀತಿಯ ಉತ್ತರ ಗಳನ್ನು ನೀಡುತ್ತಿದ್ದರು—ಒಬ್ಬೊಬ್ಬರದೂ ಒಂದೊಂದು ವಿಧ : 'ನೀವು ನಿಜವಾದ ಸಾಧು' 'ಯಥಾರ್ಥ ಭಕ್ತರು ನೀವು' ; 'ಮಹಾಪುರುಷ' ; 'ಸಿದ್ಧ ಪುರುಷ'; 'ಈಶ್ವರಾವತಾರ'; 'ಸ್ವಯಂ ಶ್ರೀಚೈತನ್ಯ'; 'ಸಾಕ್ಷಾತ್ ಶಿವ': 'ಭಗವಾನ್' ಇತ್ಯಾದಿ ಇತ್ಯಾದಿ ಈಶ್ವರಾವತಾರದಲ್ಲಿ ನಂಬಿಕೆ ಇಲ್ಲದ ಬ್ರಹ್ಮಸಮಾಜದ ಕೆಲವರು "ನೀವು ಶ್ರೀಕೃಷ್ಣ, ಬುದ್ಧ, ಕ್ರಿಸ್ತ, ಶ್ರೀಚೈತನ್ಯ ಇವರೇ ಮೊದಲಾದ ಭಕ್ತಾಗ್ರಣಿಗಳಿಗೆ ಸಮಾನ ರಾದ ಭಗವದ್ಭಕ್ತರು" ಎಂದು ಹೇಳುತ್ತಿದ್ದರು. ಮತ್ತೆ ಕ್ರೈಸ್ತಭಕ್ತನಾದ ವಿಲಿಯಂಸ್ ಎಂಬುವನಿಗೆ ಇದೇ ಪ್ರಶ್ನೆಯನ್ನು ಹಾಕಿದಾಗ ಅವನು ಹೇಳಿದ : "ನೀವು ನಿತ್ಯ ಚಿನ್ಮಯ ವಿಗ್ರಹನಾದ ಭಗವತ್ಪುತ್ರನಾದ ಏಸುಕ್ರಿಸ್ತ". ಉತ್ತರವನ್ನು ನೀಡುತ್ತಿದ್ದವರು ಶ್ರೀರಾಮ ಕೃಷ್ಣರನ್ನು ಎಷ್ಟರ ಮಟ್ಟಿಗೆ ಅರ್ಥಮಾಡಿಕೊಂಡಿದ್ದರು ಎಂಬುದನ್ನು ಹೇಳುವುದಕ್ಕೆ ಆಗುವುದಿಲ್ಲ, ಆದರೆ ಈ ಎಲ್ಲ ವಾಕ್ಯಗಳಿಂದ ಶ್ರೀರಾಮಕೃಷ್ಣರ ಸಂಬಂಧವಾಗಿ ಮತ್ತೆ ಅದರ ಜೊತೆಗೆ ಭಗವತ್ಸಂಬಂಧವಾಗಿ ತಮ್ಮ ತಮ್ಮ ಮನೋಭಾವವನ್ನು ಯಥಾ ವತ್ತಾಗಿ ವ್ಯಕ್ತಪಡಿಸಿದ್ದರು ಎಂಬುದನ್ನು ಹೇಳಬಹುದು. ಶ್ರೀರಾಮಕೃಷ್ಣರು ಈ ಉತ್ತರಗಳ ಮೂಲಕ ಯಾರ ಭಾವವು ಎಂತಹುದು ಎಂಬುದನ್ನು ಅರಿತು ಅದಕ್ಕನು ಗುಣವಾಗಿ ಅವರೊಡನೆ ವ್ಯವಹರಿಸುತ್ತಿದ್ದರು ಮತ್ತು ಉಪದೇಶ ನೀಡುತ್ತಿದ್ದರು. ಭಾವಮಯರಾದ ಶ್ರೀರಾಮಕೃಷ್ಣರು ಯಾವಾಗಲೂ ಯಾರ ಭಾವವನ್ನೂ ನಷ್ಟಗೊಳಿ ಸುತ್ತಿರಲಿಲ್ಲ. ಅವರವರ ಭಾವವನ್ನು ಪುಷ್ಟಿಗೊಳಿಸುತ್ತ ಅದರ ಮೂಲಕವೇ ಅವರು ಸತ್ಯಸಾಕ್ಷಾತ್ಕಾರವನ್ನು ಪಡೆಯಲು ಸಹಾಯ ಮಾಡುತ್ತಿದ್ದರು. ಆದರೆ ಒಬ್ಬ ವ್ಯಕ್ತಿಯು ತನ್ನ ಭಾವನೆಯನ್ನು ವ್ಯಕ್ತಪಡಿಸುತ್ತಿರುವನೊ ಅಥವಾ ಇತರರ ಪ್ರೇರಣೆಯಿಂದ ಮಾತನಾಡುತ್ತಿರುವನೊ ಎಂಬ ವಿಷಯಗಳ ಕಡೆ ಅವರು ವಿಶೇಷ ಗಮನವಿರಿಸುತ್ತಿದ್ದರು.

28. ಪೂರ್ಣಚಂದ್ರ ಘೋಷನು ಮೊದಲ ಬಾರಿಗೆ ಶ್ರೀರಾಮಕೃಷ್ಣರೆಡೆಗೆ ಬಂದಾಗ ಅತ್ಯಂತ ಎಳೆಯ ವಯಸ್ಸಿನ ಬಾಲಕನಾಗಿದ್ದ. ಅವನಿಗಾಗ ಸುಮಾರು ಹದಿ ಮೂರು ವರ್ಷ ವಯಸ್ಸಿದ್ದಿರಬಹುದು ಅಷ್ಟೆ. ಆಗ ಮಹೇಂದ್ರನಾಥಗುಪ್ತನು ಶ್ಯಾಮ್

ಬಜಾರಿನಲ್ಲಿದ್ದ ವಿದ್ಯಾಸಾಗರನ ವಿದ್ಯಾಲಯದಲ್ಲಿ ಮುಖ್ಯೋಪಾಧ್ಯಾಯನಾಗಿದ್ದ. ವಿದ್ಯಾರ್ಥಿಗಳ ಮಧ್ಯೆ ಸ್ವಾಭಾವಿಕವಾಗಿ ಭಗವದ್ ಭಕ್ತಿ ಉಳ್ಳವರನ್ನು ಕಂಡರೆ ಅವರನ್ನು ಅವನು ದಕ್ಷಿಣೇಶ್ವರಕ್ಕೆ ಕರೆದುಕೊಂಡು ಬರುತ್ತಿದ್ದ. ಹೀಗೆ ತೇಜ್‌ಚಂದ್ರ, ನಾರಾಯಣ, ಹರಿಪದ, ವಿನೋದ, ಚಿಕ್ಕ ನರೇನ್, ಪ್ರಮಥ, ಇವರೇ ಮುಂತಾದ ಬಾಗ್ ಬಜಾರ್ ಪ್ರದೇಶದ ಅನೇಕ ಹುಡುಗರನ್ನು ಒಬ್ಬೊಬ್ಬರನ್ನಾಗಿ ಶ್ರೀರಾಮಕೃಷ್ಣರ ಆಶ್ರಯವನ್ನು ಪಡೆಯುವಂತೆ ಮಾಡಿದನು. ಇದರಿಂದಾಗಿ ನಮ್ಮಲ್ಲಿ ಕೆಲವರು ಹಾಸ್ಯಕ್ಕಾಗಿ ಅವನನ್ನು ಮಕ್ಕಳನ್ನು ಹಾರಿಸುವ ಮಾಸ್ಟರ್ ಎಂದು ಕರೆಯುತ್ತಿದ್ದರು. ಶ್ರೀರಾಮಕೃಷ್ಣರು ಇದನ್ನು ಕೇಳಿ ನಗುತ್ತಾ "ಈ ಹೆಸರು ಅವನಿಗೆ ಯೋಗ್ಯವಾಗಿದೆ" ಎಂದು ಹೇಳುತ್ತಿದ್ದರು. ಪೂರ್ಣನು ವಿದ್ಯಾಲಯದ ಮೂರನೇ ತರಗತಿಯಲ್ಲಿ ಓದುತ್ತಿರುವಾಗ ಅವನ ಸುಂದರ ಸ್ವಭಾವ ಮತ್ತು ಸವಿನುಡಿಗಳಿಂದ ತುಂಬ ಆಕರ್ಷಿತನಾಗಿ ಮಹೇಂದ್ರನು ಅವನನ್ನು ಶ್ರೀರಾಮಕೃಷ್ಣರಿಗೆ ಪರಿಚಯ ಮಾಡಿಸುವ ವ್ಯವಸ್ಥೆ ಮಾಡಿಸಿದ. ಈ ವ್ಯವಸ್ಥೆ ಗುಪ್ತವಾಗಿಯೆ ನಡೆಯಿತು. ಏಕೆಂದರೆ ಪೂರ್ಣನ ಹಿತೈಷಿಗಳೆಲ್ಲ ಒರಟು ಸ್ವಭಾವದವರಾಗಿದ್ದರು. ಅವರಿಗೆ ತಿಳಿದರೆ ಉಪಾಧ್ಯಾಯ ಮತ್ತು ವಿದ್ಯಾರ್ಥಿ ಇಬ್ಬರಿಗೂ ತೊಂದರೆ ಉಂಟಾಗುವುದಿತ್ತು. ಪೂರ್ಣನು ಒಂದು ದಿನ ಎಂದಿನಂತೆ ಶಾಲೆಗೆ ಬಂದಾಗ ಅವನನ್ನು ಗಾಡಿಯಲ್ಲಿ ದಕ್ಷಿಣೇಶ್ವರಕ್ಕೆ ಕಳಿಸಲಾಯಿತು. ಅನಂತರ ಹಿಂದಿರುಗುವಾಗ ಶಾಲೆಗೆ ಬಂದು ಶಾಲೆ ಬಿಡುವ ವೇಳೆಗೆ ಎಂದಿನಂತೆ ಮನೆಗೆ ಹೋದನು.

29. ಅಂದು ಪೂರ್ಣನನ್ನು ನೋಡಿ ಶ್ರೀರಾಮಕೃಷ್ಣರಿಗೆ ತುಂಬಾ ಸಂತೋಷವಾಯಿತು. ಅವನಿಗೆ ಉಪದೇಶವನ್ನೂ ಸ್ವಲ್ಪ ಉಪಾಹಾರವನ್ನೂ ಇತ್ತು ಅನಂತರ ಕಳಿಸಿಕೊಡುವಾಗ ಹೇಳಿದರು : "ನಿನಗೆ ಅನುಕೂಲವಾದಾಗಲೆಲ್ಲ ಬಾ. ಗಾಡಿ ಮಾಡಿಕೊಂಡು ಬಾ. ಗಾಡಿ ಬಾಡಿಗೆಯನ್ನು ಇಲ್ಲಿಂದಲೇ ಕೊಡಲು ವ್ಯವಸ್ಥೆ ಮಾಡಲಾಗುವುದು." ಅನಂತರ ನಮಗೆ ಹೇಳಿದರು : "ಪೂರ್ಣನು ನಾರಾಯಣನ ಒಂದು ಅಂಶ. ಅವನು ಸತ್ತ್ವಪ್ರಧಾನನಾದ ಆಧ್ಯಾತ್ಮಿಕ ಸಾಧಕ. ಈ ದೃಷ್ಟಿಯಿಂದ ಅವನು ನರೇಂದ್ರನಿಂದ ಒಂದು ಹೆಜ್ಜೆ ಕೆಳಗಿನ ಸ್ಥಾನವನ್ನು ಪಡೆಯುತ್ತಾನೆ. ಪೂರ್ಣನ ಬರುವಿಕೆಯೊಂದಿಗೆ ನಾನು ಯೋಗದೃಷ್ಟಿಯಿಂದ ನೋಡಿದ ಭಕ್ತರೆಲ್ಲ ಬಂದಂತಾಯಿತು. ಆ ಶ್ರೇಣಿಗೆ ಸೇರಿದವರಾರೂ ಒರುವುದಿಲ್ಲ." ಅಂದು ಪೂರ್ಣನಲ್ಲಿ ಅಸಾಧಾರಣ ಮಾನಸಿಕ ಬದಲಾವಣೆ ಉಂಟಾಯಿತು. ಶ್ರೀರಾಮಕೃಷ್ಣರೊಡನಿದ್ದ ಅವನ ಹಳೆಯ ಸಂಬಂಧದ ನೆನಪು ಜಾಗ್ರತವಾಯಿತು. ಅವನು ಸಂಪೂರ್ಣ ಶಾಂತನೂ, ಅಂತರ್ಮುಖಿಯೂ ಆದನು. ಅವನ ಕಣ್ಣುಗಳಿಂದ ಆನಂದಾಶ್ರು ಧಾರಾಕಾರವಾಗಿ ಹರಿಯಿತು, ತನ್ನ ಹಿತೈಷಿಗಳ ಭಯದಿಂದ ಅವನು ಪ್ರಯತ್ನ ಪೂರ್ವಕವಾಗಿ ತನ್ನ ಭಾವವನ್ನು ನಿಗ್ರಹಿಸಬೇಕಾಯಿತು.

30. ಅಂದಿನಿಂದ ಪೂರ್ಣನನ್ನು ನೋಡುವ ಮತ್ತು ಅವನಿಗೆ ಏನಾದರೂ ತಿನ್ನಿಸುವ ತೀವ್ರ ಆಕಾಂಕ್ಷೆ ಶ್ರೀರಾಮಕೃಷ್ಣರಲ್ಲುಂಟಾಯಿತು. ಅವಕಾಶ ಸಿಕ್ಕಿದಾಗಲೆಲ್ಲ ವಿವಿಧ ಬಗೆಯ ತಿಂಡಿಗಳನ್ನು ಅವನಿಗಾಗಿ ಕಳಿಸಿಕೊಡುತ್ತಿದ್ದರು. ಅದನ್ನು ತೆಗೆದುಕೊಂಡು

ಹೋಗುವವನಿಗೆ ಗುಪ್ತವಾಗಿ ಅದನ್ನು ಪೂರ್ಣನಿಗೆ ಕೊಡಬೇಕೆಂದು ಸಲಹೆ ನೀಡು ತ್ತಿದ್ದರು. ಏಕೆಂದರೆ ಅವನ ಮನೆಯವರಿಗೆ ಅದು ತಿಳಿದರೆ ಅವನಿಗೆ ಉಪದ್ರವ ಕೊಡು ತ್ತಾರೆ. ಪೂರ್ಣನನ್ನು ನೋಡಬೇಕೆಂಬ ವ್ಯಾಕುಲತೆಯಿಂದ ಶ್ರೀರಾಮಕೃಷ್ಣರು ಆಗಾಗ ಅತ್ಯಂತ ಕಣ್ಣೀರು ಸುರಿಸುತ್ತಿದ್ದುದನ್ನು ನಾವು ನೋಡಿರುವೆವು. ಅದನ್ನು ನೋಡಿ ನಾವು ಆಶ್ಚರ್ಯ ಪಟ್ಟಾಗ ಒಂದು ದಿನ ನಮಗೆ ಅವರು ಹೇಳಿದರು : "ಪೂರ್ಣನೆಡೆಗೆ ಇರುವ ಈ ಆಕರ್ಷಣೆಯನ್ನು ನೋಡಿ ನಿಮಗೆ ಆಶ್ಚರ್ಯವಾಗುತ್ತದೆ. ಆದರೆ ನರೇಂದ್ರನಿಗಾಗಿ ಮೊದ ಮೊದಲು ನನ್ನ ಹೃದಯ ಹೇಗೆ ವ್ಯಾಕುಲಪಡುತ್ತಿತ್ತು ಮತ್ತು ಅವನಿಗಾಗಿ ನಾನು ಹೇಗೆ ಚಟಪಡಿಸುತ್ತಿದ್ದೆ ಎಂಬುದನ್ನು ನೀವು ನೋಡಿದ್ದರೆ ನಿಮಗೇನೆನಿಸು ತ್ತಿತ್ತೊ ?" ಅವರಿಗೆ ಪೂರ್ಣನನ್ನು ನೋಡಬೇಕೆಂದೆನಿಸಿದಾಗಲೆಲ್ಲ ಮಧ್ಯಾಹ್ನದ ವೇಳೆ ಕಲ್ಕತ್ತೆಗೆ ಬರುತ್ತಿದ್ದರು. ಬಾಗಬಜಾರಿನ ಬಲರಾಮನ ಮನೆಗೊ ಅಥವಾ ಅದೇ ಪ್ರದೇಶದ ಬೇರೆ ಯಾರದಾದರೂ ಭಕ್ತರ ಮನೆಗೊ ಹೋಗಿ ಪೂರ್ಣನಿಗೆ ಹೇಳಿಕಳು ಹಿಸಿ ಶಾಲೆಯಿಂದ ಕರೆಸಿಕೊಳ್ಳುತ್ತಿದ್ದರು. ಪೂರ್ಣನು ಶ್ರೀರಾಮಕೃಷ್ಣರನ್ನು ಎರಡನೆಯ ಬಾರಿ ನೋಡಿದುದು ಅದೇ ಪ್ರದೇಶದಲ್ಲಿಯೆ. ಅಂದು ಅವನು ಸಂಪೂರ್ಣ ತನ್ಮಾತ್ಮದಲ್ಲಿ ಮೈಮರೆತಿದ್ದನು. ಅಂದು ಶ್ರೀರಾಮಕೃಷ್ಣರು ತಾಯಿಯಂತೆ ಅವನಿಗೆ ಪ್ರೀತಿಯಿಂದ ಉಣಿಸಿ ಕೇಳಿದರು : "ಒಳ್ಳೆಯದು, ನನ್ನ ಬಗ್ಗೆ ನಿನ್ನ ಭಾವನೆ ಏನು? ನಾನು ಯಾರು?" ಪೂರ್ಣನು ಭಕ್ತಿಭಾವದ ಆವೇಶದಲ್ಲಿ ಉತ್ತರಿಸಿದನು : "ನೀವು ಭಗವಾನ್, ಸಾಕ್ಷಾತ್ ಈಶ್ವರನೆ" ಎಂದು. ಬಾಲಕ ಪೂರ್ಣನು ಅವರ ದರ್ಶನ ಮಾತ್ರದಿಂದಲೆ ಅವರನ್ನು ಪರಮೋಚ್ಚ ಆಧ್ಯಾತ್ಮಿಕ ಆದರ್ಶವಾಗಿ ಸ್ವೀಕರಿಸಲು ಸಮರ್ಥನಾದನು. ಈ ವಿಷಯ ವನ್ನು ತಿಳಿದ ಶ್ರೀರಾಮಕೃಷ್ಣರ ಅಂದಿನ ಆನಂದಕ್ಕೆ ಪಾರವೇ ಇರಲಿಲ್ಲ. ಅವರು ಅವ ನನ್ನು ಹೃತ್ಪೂರ್ವಕವಾಗಿ ಆಶೀರ್ವದಿಸಿ ಅವನಿಗೆ 'ಶಕ್ತಿ' ಮಂತ್ರವನ್ನಿತ್ತು, ಸಾಧನೆಯ ರಹಸ್ಯವನ್ನು ಉಪದೇಶಿಸಿದರು. ಅನಂತರ ದಕ್ಷಿಣೇಶ್ವರಕ್ಕೆ ಬಂದ ಮೇಲೆ ನಮಗೆ ಮತ್ತೆ ಮತ್ತೆ ಹೇಳಿದರು : "ಒಳ್ಳೆಯದು, ಪೂರ್ಣ ಇನ್ನೂ ಹುಡುಗ, ಬುದ್ಧಿ ಪರಿಪಕ್ವವಾಗಿಲ್ಲ. ಅವನಿಗೆ ಹೇಗೆ ಆ ವಿಷಯ ಅರ್ಥವಾಯಿತು ಹೇಳಿ ? ಇನ್ನು ಕೆಲವರು ದಿವ್ಯ ಸಂಸ್ಕಾರದ ಫಲವಾಗಿ ಆ ಪ್ರಶ್ನೆಗೆ ಪೂರ್ಣನಂತೆ ಉತ್ತರ ನೀಡಿರುವರು. ಇದು ನಿಜವಾಗಿಯೂ ಪೂರ್ವಜನ್ಮದ ಸಂಸ್ಕಾರದ ಫಲವೇ. ಇವರ ಶುದ್ಧ ಸಾತ್ತ್ವಿಕ ಮನಸ್ಸಿನಲ್ಲಿ ಸತ್ಯದ ಚಿತ್ರವು ಸ್ವಾಭಾವಿಕವಾಗಿಯೆ ಅತ್ಯಂತ ಸ್ಪಷ್ಟವಾಗಿ ಕಾಣಿಸುವುದು."

ಪೂರ್ಣನು ಮದುವೆಯಾಗಿ ಸಾಧಾರಣರಂತೆಯೆ ಸಂಸಾರ ನಿರ್ವಹಣೆ ಮಾಡ ಬೇಕಾಯಿತು, ಆದರೆ ಅವನನ್ನು ಅತ್ಯಂತ ಹತ್ತಿರದಿಂದ ಬಲ್ಲವರೆಲ್ಲರೂ ಅವನ ಅಲೌಕಿಕ ವಿಶ್ವಾಸ, ಶರಣಾಗತಿ, ಸಾಧನಾಸಕ್ತಿ, ನಮ್ರತೆ ಮತ್ತು ವೈರಾಗ್ಯ ಇವುಗಳ ಸಂಬಂಧವಾಗಿ ಒಕ್ಕೊರಲಿನಿಂದ ನುಡಿಯುತ್ತಾರೆ.

31. ತಮ್ಮ ಆಶ್ರಯವನ್ನು ಪಡೆದ ಭಕ್ತರನ್ನು ಮೇಲೆ ಹೇಳಿದ ರೀತಿಯಲ್ಲಿ ಪ್ರಶ್ನಿಸುವ ಸಂಬಂಧವಾಗಿ ಇನ್ನೊಂದು ಘಟನೆಯನ್ನು ಇಲ್ಲಿ ಉಲ್ಲೇಖಿಸುತ್ತೇವೆ. ನಮಗೆ

ಪರಿಚಿತ ಇದ್ದ ಒಬ್ಬ ವ್ಯಕ್ತಿಯು ದಕ್ಷಿಣೇಶ್ವರಕ್ಕೆ ಬಂದುಹೋಗಲು ಪ್ರಾರಂಭಿಸಿದ ಸ್ವಲ್ಪ ಕಾಲದ ನಂತರ ಶ್ರೀರಾಮಕೃಷ್ಣರು ಒಂದು ದಿನ ತಮ್ಮ ಕೊಠಡಿಯಲ್ಲಿದ್ದ ಶ್ರೀ ಚೈತನ್ಯನ ಸಂಕೀರ್ತನೆಯ ಚಿತ್ರವನ್ನು ಆ ವ್ಯಕ್ತಿಗೆ ತೋರಿಸಿ ಕೇಳಿದರು : "ನೋಡಿದೆಯಾ. ಅವರೆಲ್ಲ ಈಶ್ವರ ಭಾವದಲ್ಲಿ ಎಷ್ಟೊಂದು ಮುಳುಗಿ ಹೋಗಿದ್ದಾರೆ."

ಆ ವ್ಯಕ್ತಿ : "ಅವರೆಲ್ಲ ಸಾಮಾನ್ಯ ವ್ಯಕ್ತಿಗಳು, ಮಹಾಶಯರೆ."

ಶ್ರೀರಾಮಕೃಷ್ಣರು : "ಅದು ಹೇಗೆ ? ಹಾಗೆ ಹೇಳುವುದು ಸರಿಯೆ ?"

ಆ ವ್ಯಕ್ತಿ: "ಹೌದು ಮಹಾಶಯರೆ, ನಾನು ನದಿಯಾದವನು, ನನಗೆ ಗೊತ್ತು ಈ ವೈಷ್ಣವರೆಲ್ಲ ಕೀಳು ವರ್ಗದವರು."

ಶ್ರೀರಾಮಕೃಷ್ಣರು : "ನೀನು ನದಿಯಾದವನೆ, ಹಾಗಾದರೆ ನಿನಗೆ ಇನ್ನೊಂದು ನಮಸ್ಕಾರ. ಒಳ್ಳೆಯದು, ರಾಮ ಮುಂತಾದವರು (ತಮ್ಮನ್ನು ತೋರಿಸಿ) ಇದನ್ನು ಅವ ತಾರ ಎನ್ನುತ್ತಾರೆ, ನಿನಗೇನೆನ್ನಿಸುತ್ತೆ ಹೇಳು ?"

ಆ ವ್ಯಕ್ತಿ : "ಮಹಾಶಯರೆ, ಅವರು ಅಷ್ಟೊಂದು ಸಣ್ಣ ಮಾತನಾಡಿದರೆ ?"

ಶ್ರೀರಾಮಕೃಷ್ಣರು : "ಇದೇನಯ್ಯ ಇದು, ಭಗವಂತನ ಅವತಾರ ಎನ್ನುತ್ತಾರೆ. ಅದನ್ನು ಸಣ್ಣ ವಿಷಯ ಅನ್ನುತ್ತೀಯಲ್ಲ."

ಆ ವ್ಯಕ್ತಿ : "ಹೌದು ಮಹಾಶಯರೆ, ಅವತಾರವೆಂದರೆ ಈಶ್ವರನ ಅಂಶ. ನಾನು ನಿಮ್ಮನ್ನು ಸಾಕ್ಷಾತ್ ಶಿವನೆಂದೇ ಪರಿಗಣಿಸುತ್ತೇನೆ."

ಶ್ರೀರಾಮಕೃಷ್ಣರು ; "ಇದೇನು ಹೇಳುತ್ತಿರುವೆ ?"

ಆ ವ್ಯಕ್ತಿ : "ಹಾಗನ್ನಿಸುತ್ತಿದೆ, ಇನ್ನೇನು ಹೇಳಲಿ ? ನೀವು ನನಗೆ ಶಿವನನ್ನು ಧ್ಯಾನಿಸಲು ಹೇಳಿದಿರಿ. ಪ್ರತಿನಿತ್ಯ ಪ್ರಯತ್ನಿಸಿದರೂ ಸಾಧ್ಯವಾಗುತ್ತಿಲ್ಲ. ಧ್ಯಾನ ಮಾಡಲು ಕುಳಿತ ಕೂಡಲೇ ನಿಮ್ಮ ಪ್ರಸನ್ನ ಮುಖ ಮುದ್ರೆಯು ನನ್ನ ಮುಂದೆ ಪ್ರಜ್ವ ಲಿಸುವುದು. ಅದನ್ನು ಆ ಕಡೆ ಸರಿಸಿ ಶಿವನನ್ನು ಧ್ಯಾನಿಸಲು ಎಷ್ಟೇ ಪ್ರಯತ್ನಿಸಿದರೂ ಆಗುತ್ತಿಲ್ಲ. ಮನಸ್ಸೂ ಬರುತ್ತಿಲ್ಲ, ನಿಮ್ಮನ್ನೆ ಶಿವನೆಂದು ಭಾವಿಸುತ್ತೇನೆ."

ಶ್ರೀರಾಮಕೃಷ್ಣರು (ನಗುತ್ತಾ) : "ಏನು ಹೇಳುತ್ತೀಯೆ ? ನನಗೆ ಗೊತ್ತು, ನಾನು ಒಂದು ಸಣ್ಣ ರೋಮಕ್ಕೆ ಸಮಾನ (ಇಬ್ಬರೂ ನಗುತ್ತಾರೆ). ನಿನ್ನ ಬಗ್ಗೆ ನಾನು ತುಂಬಾ ಕಾತರನಾಗಿದ್ದೆ. ಇಂದು ನಿಶ್ಚಿಂತನಾದೆ."

ಕೊನೆಯಲ್ಲಿ ಹೇಳಿದ ಮಾತನ್ನು ಶ್ರೀರಾಮಕೃಷ್ಣರು ಏಕೆ ಹೇಳಿದರು ಎಂಬು ದನ್ನು ಆ ವ್ಯಕ್ತಿಯು ಅರ್ಥಮಾಡಿಕೊಂಡನೊ ಏನೊ ತಿಳಿಯದು. ಇಂಥ ಸಂದರ್ಭ ಗಳಲ್ಲಿ ಶ್ರೀರಾಮಕೃಷ್ಣರು ತುಂಬ ಪ್ರಸನ್ನರಾಗಿರುವುದನ್ನು ನೋಡಿಯೆ ನಮ್ಮ ಹೃದಯ ಆನಂದದಿಂದ ತುಂಬಿ ಹೋಗುತ್ತಿತ್ತು. ಆದ್ದರಿಂದ ಆ ಮಾತಿನ ಅರ್ಥವನ್ನು ತಿಳಿಯುವ ಆಸೆಯೆ ಉಂಟಾಗುತ್ತಿರಲಿಲ್ಲ. ಶ್ರೀರಾಮಕೃಷ್ಣರು ಆ ಮಾತನ್ನು ಆಡುವುದಕ್ಕೆ ಕಾರಣ ವೇನೆಂದರೆ ಆ ವ್ಯಕ್ತಿಯು ತಮ್ಮನ್ನು ಉನ್ನತ ಆಧ್ಯಾತ್ಮಿಕ ಆದರ್ಶವಾಗಿ ಸ್ವೀಕರಿಸಿದುದು ಎಂಬುದು ನಮ್ಮ ಭಾವನೆ.

32. ತಮ್ಮ ಭಕ್ತರು ತಮ್ಮ ಪ್ರತಿಯೊಂದು ಆಚರಣೆಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಿ ಸರಿಯಾಗಿ ಅರ್ಥ ಮಾಡಿಕೊಂಡು ತಮ್ಮನ್ನು ಸ್ವೀಕರಿಸುವಂತೆ ಮಾಡುವುದು ಶ್ರೀರಾಮಕೃಷ್ಣರ ಪ್ರಯತ್ನವಾಗಿತ್ತು. ಏಕೆಂದರೆ ನಮಗೆ ಅವರು ಸಾಮಾನ್ಯವಾಗಿ ಹೀಗೆ ಹೇಳುತ್ತಿದ್ದರು : "ಸಾಧುವನ್ನು ಹಗಲಿನಲ್ಲೂ ಪರೀಕ್ಷಿಸಬೇಕು. ರಾತ್ರಿಯಲ್ಲೂ ಪರೀಕ್ಷಿಸಬೇಕು. ಅನಂತರ ಸಾಧುವಿನಲ್ಲಿ ವಿಶ್ವಾಸವಿರಿಸಬೇಕು." ಸಾಧುವು ಇತರರಿಗೆ ಏನನ್ನು ಬೋಧಿಸುತ್ತಾನೊ ಅದನ್ನು ತಾನು ಸ್ವತಃ ಅನುಷ್ಠಾನ ಮಾಡುತ್ತಾನೊ ಇಲ್ಲವೊ ಎಂಬುದನ್ನು ಸರಿಯಾಗಿ ಪರಿಶೀಲಿಸಿ ನೋಡಬೇಕೆಂದು ಶ್ರೀರಾಮಕೃಷ್ಣರು ನಮಗೆ ಯಾವಾಗಲೂ ಹೇಳುತ್ತಿದ್ದರು. ಅವರು ಹೇಳುತ್ತಿದ್ದರು : "ಮಾತು ಮತ್ತು ಕೃತಿ, ಮನಸ್ಸು ಮತ್ತು ಮಾತು ಇವುಗಳು ಒಂದೇ ಆಗಿರದಿದ್ದರೆ ಅಂಥವನ ಮಾತಿನಲ್ಲಿ ಖಂಡಿತಾ ವಿಶ್ವಾಸವಿರಿಸಬಾರದು." ಇದಕ್ಕೆ ಸಂಬಂಧವಾಗಿ ಅವರು ಒಂದು ಕಥೆಯನ್ನು ಕೆಲವೊಮ್ಮೆ ಹೇಳುತ್ತಿದ್ದರು :

33. "ಒಬ್ಬ ವ್ಯಕ್ತಿಯ ಚಿಕ್ಕ ಮಗನು ಯಾವಾಗಲೂ ಅಜೀರ್ಣ ರೋಗದಿಂದ ನರಳುತ್ತಿದ್ದ. ತಂದೆಯು ಚಿಕಿತ್ಸೆಗಾಗಿ ಅವನನ್ನು ಗ್ರಾಮದ ಪ್ರಸಿದ್ಧ ವೈದ್ಯನೆಡೆಗೆ ಕರೆದುಕೊಂಡು ಹೋದನು. ವೈದ್ಯನು ಬಾಲಕನನ್ನು ಪರೀಕ್ಷಿಸಿ ರೋಗದ ಕಾರಣವನ್ನು ಕಂಡುಹಿಡಿದನು. ಆದರೆ ಓಷಧಿಯನ್ನು ಹೇಳದೆ ಅದಕ್ಕಾಗಿ ಮರುದಿನ ಮತ್ತೆ ಬರಬೇಕೆಂದು ಹೇಳಿದನು.

"ತಂದೆಯು ಮಗನನ್ನು ಕರೆದುಕೊಂಡು ಮರುದಿನ ವೈದ್ಯನ ಹತ್ತಿರ ಹೋದಾಗ ಅವನು ಹೇಳಿದ : 'ನೀನು ಬೆಲ್ಲ ತಿನ್ನಕೂಡದು. ಹಾಗೆ ಮಾಡಿದರೆ ಗುಣವಾಗುತ್ತದೆ. ಔಷಧಿ ತೆಗೆದುಕೊಳ್ಳುವ ಅಗತ್ಯವಿಲ್ಲ. 'ತಂದೆಯು ಈ ಮಾತನ್ನು ಕೇಳಿ ಹೇಳಿದ: 'ಮಹಾಶಯರೆ, ಇದನ್ನು ನೆನ್ನೆಯೆ ಹೇಳಬಹುದಿತ್ತಲ್ಲ. ಇಷ್ಟೊಂದು ಕಷ್ಟ ಪಟ್ಟು ಇಂದು ಮತ್ತೆ ಇಲ್ಲಿಗೆ ಬರುವ ಆವಶ್ಯಕತೆ ಏನಿತ್ತು ?' ವೈದ್ಯನು ನುಡಿದ : 'ನಿನ್ನೆ ಇಲ್ಲಿ ಅನೇಕ ಜಾಡಿ ಬೆಲ್ಲ ಇತ್ತು. ನೀವು ನೋಡಿರಬಹುದು. ನಿನ್ನೆ ನಾನು ಬಾಲಕನಿಗೆ ಬೆಲ್ಲ ತಿನ್ನಬೇಡ ಎಂದು ಹೇಳಿದರೆ ಬಾಲಕನು ಭಾವಿಸುತ್ತಿದ್ದ "ಈ ಕವಿರಾಜನು ತಾನೇ ಅಷ್ಟೊಂದು ಬೆಲ್ಲ ತಿನ್ನುತ್ತಾನೆ, ನನಗೆ ಮಾತ್ರ ಬೆಲ್ಲ ತಿನ್ನಬೇಡ ಎಂದು ಹೇಳುತ್ತಾನೆ" ಎಂದು. ಹೀಗೆ ಭಾವಿಸಿ ನನ್ನ ಮಾತಿನಲ್ಲಿ ಶ್ರದ್ಧೆಯಿಡುತ್ತಿರಲಿಲ್ಲ ಅವನು. ಆದ್ದರಿಂದ ಬೆಲ್ಲದ ಜಾಡಿಯನ್ನೆಲ್ಲ ಬೇರೆ ಕಡೆ ಸಾಗಿಸುವುದಕ್ಕಿಂತ ಮುಂಚೆ ಆ ಮಾತು ಹೇಳಲಿಲ್ಲ.' "

34. ಶ್ರೀರಾಮಕೃಷ್ಣರ ಈ ರೀತಿಯ ಶಿಕ್ಷಣದ ಪ್ರೇರಣೆಯಿಂದಾಗಿ ನಾವು ಅವರ ಎಲ್ಲಾ ಆಚರಣೆಗಳನ್ನೂ ವಿಶೇಷ ರೀತಿಯಲ್ಲಿ ಪರಿಶೀಲಿಸುತ್ತಿದ್ದೆವು. ಕೆಲವರು ಇದರ ಪ್ರಭಾವದಿಂದ ಅವರನ್ನು ಪರೀಕ್ಷಿಸಲು ಹಿಂಜರಿಯುತ್ತಿರಲಿಲ್ಲ, ನಮ್ಮ ನಮ್ಮ ಭಕ್ತಿ ವಿಶ್ವಾಸಗಳ ವೃದ್ಧಿಗಾಗಿ ಸರಳ ಅಂತಃಕರಣದಿಂದ ನಾವು ಮಾಡಿದ ಈ ಸ್ವಾತಂತ್ರ್ಯ ದುರುಪಯೋಗವನ್ನು ಅವರು ಪ್ರಸನ್ನಚಿತ್ತರಾಗಿ ಸಹಿಸಿದ್ದರು. ಈ ಕೆಳಗಿನ ಘಟನೆಯು ಇದಕ್ಕೆ ಒಂದು ದೃಷ್ಟಾಂತರೂಪದಲ್ಲಿದೆ. ಸ್ವಾಮಿ ಯೋಗಾನಂದರ ಬಗ್ಗೆ ಆಗಲೇ ಹೇಳಿ

ರುವೆವು. ಈ ಘಟನೆ ಅವರಿಗೇ ಸಂಬಂಧಪಟ್ಟದ್ದು ಮತ್ತು ಅವರೇ ನಮಗೆ ಇದನ್ನು ಹೇಳಿದುದು. ಯೋಗಾನಂದರ ಸಂಕ್ಷಿಪ್ತ ಪರಿಚಯವನ್ನು ನೀಡಿ ಅನಂತರ ಈ ಘಟನೆಯನ್ನು ವಿವರಿಸುತ್ತೇವೆ : ಯೋಗಾನಂದರ ಮೊದಲ ಹೆಸರು ಯೋಗಿಂದ್ರನಾಥರಾಯ್ ಚೌಧುರಿ ಎಂದು. ವಿಖ್ಯಾತ ಚೌಧುರಿ ವಂಶದಲ್ಲಿ ಹುಟ್ಟಿದವರು. ತಂದೆಯಾದ ನವೀನ್ ಚಂದ್ರನು ಒಂದು ಕಾಲದಲ್ಲಿ ಧನಾಢ್ಯ ಜಮೀನ್ದಾರನಾಗಿದ್ದನು. ಅನೇಕ ತಲೆಮಾರಿನಿಂದ ಅವನು ದಕ್ಷಿಣೇಶ್ವರದ ಹಳ್ಳಿಯಲ್ಲಿಯೆ ವಾಸಿಸುತ್ತಿದ್ದನು. ಯೋಗೀಂದ್ರನ ಮನೆಯಲ್ಲಿ ಯಾವಾಗಲೂ ಮಹಾಭಾರತ, ಭಾಗವತ ಮುಂತಾದ ಶಾಸ್ತ್ರ ಪಠಣಗಳು, ಪೂಜೆ ಸಂಕೀರ್ತನೆ ಇತ್ಯಾದಿಗಳು ನಡೆಯುತ್ತಿದ್ದವು. ಶ್ರೀರಾಮಕೃಷ್ಣರು ತಮ್ಮ ಸಾಧನೆಯ ಸಮಯದಲ್ಲಿ ಹರಿಕಥೆಯನ್ನು ಕೇಳಲು ಅವರ ಮನೆಗೆ ಅನೇಕ ಬಾರಿ ಹೋಗಿದ್ದರಂತೆ, ಅವರ ಮನೆಯವರ ಕೆಲವರ ಪರಿಚಯವೂ ಅವರಿಗಿತ್ತು. ಆದರೆ ಯೋಗೀಂದ್ರನು ಹುಡುಗನಾಗಿರುವಾಗಲೇ ಅವರು ತಮ್ಮ ಆಸ್ತಿಯ ಬಹು ಪಾಲನ್ನು ಕೌಟುಂಬಿಕ ಕಲಹವೇ ಮುಂತಾದ ಕಾರಣಗಳಿಂದ ಕಳೆದುಕೊಂಡರು. ಚೌಧುರಿ ಕುಟುಂಬದವರು ದಿನದಿನವೂ ಬಡವರಾಗುತ್ತಿದ್ದರು.

35. ಯೋಗೀಂದ್ರನು ಬಾಲ್ಯಕಾಲದಿಂದಲೂ ಧೀರನೂ, ವಿನಯಶೀಲನೂ, ಮಧುರಸ್ವಭಾವದವನೂ ಆಗಿದ್ದ. ಸಾಮಾನ್ಯವಾದ ಶುಭ ಸಂಸ್ಕಾರಗಳಿಂದ ಕೂಡಿಯೆ ಅವನು ಸಂಸಾರದಲ್ಲಿ ಜನ್ಮವೆತ್ತಿದ್ದನು. ಅವನಿಗೆ ಬುದ್ಧಿ ಬೆಳೆಯುತ್ತಿದ್ದಂತೆಯೆ ಬಾಲ್ಯಕಾಲದಲ್ಲಿ ತಾನು ಈ ಪ್ರಪಂಚದವನಲ್ಲ ಎಂದೆನಿಸುತ್ತಿತ್ತು. ತನ್ನ ಮನೆ ಇಲ್ಲಿಲ್ಲ ಬಹುದೂರದ ಯಾವುದೊ ನಕ್ಷತ್ರ ಪುಂಜದಲ್ಲಿ ತನ್ನ ವಾಸ ಮತ್ತು ಅಲ್ಲಿಯೆ ತನ್ನ ಪರಿಚಿತ ಸಂಗಡಿಗರು ಈಗಲೂ ಇದ್ದಾರೆ ಎಂದು ಅವನಿಗನ್ನಿಸುತ್ತಿತ್ತು. ಅವನು ಎಂದೂ ಕೋಪಗೊಂಡಿದ್ದನ್ನು ನೋಡಿಲ್ಲ. ಸ್ವಾಮಿ ವಿವೇಕಾನಂದರು ಹೇಳುತ್ತಿದ್ದರು "ನಮ್ಮಲ್ಲಿ ಯಾರಾದರೂ ಸಂಪೂರ್ಣ ಕಾಮವನ್ನು ಜಯಿಸಿದವರು ಇದ್ದರೆ ಅದು ಯೋಗಿನ್ ಮಾತ್ರ" ಎಂದು. ಸರಳ ರೀತಿಯಲ್ಲಿ ಎಲ್ಲರ ಮೇಲೂ ವಿಶ್ವಾಸವಿರಿಸುತ್ತಿದ್ದ ಅವನನ್ನು ಶ್ರೀರಾಮಕೃಷ್ಣರು ಕೆಲವೊಮ್ಮೆ ಬಯ್ಯುತ್ತಿದ್ದರೂ ಯೋಗೀಂದ್ರನು ತಿಳಿವಳಿಕೆ ಇಲ್ಲದವನಲ್ಲ. ಅವನು ಯಾವಾಗಲೂ ಶಾಂತರೀತಿಯಲ್ಲಿ ತನ್ನ ಕಾರ್ಯದಲ್ಲಿ ತಾನು ತೊಡಗಿರುತ್ತಿದ್ದರೂ ಅವನ ವಿಚಾರಶೀಲ ಮನಸ್ಸು ಎಲ್ಲರ ಎಲ್ಲ ಕಾರ್ಯಗಳನ್ನೂ ಸೂಕ್ಷ್ಮವಾಗಿ ಗಮನಿಸಿ ಅವುಗಳ ಬಗ್ಗೆ ಯಥಾವತ್ತಾಗಿ ನಿರ್ಣಯಕ್ಕೆ ಬರುವ ಸಾಮರ್ಥ್ಯ ಪಡೆದಿತ್ತು. ಆದ್ದರಿಂದ ಯೋಗೀಂದ್ರನಿಗೆ ತಾನು ತುಂಬ ಬುದ್ಧಿವಂತ ಎಂಬ ಸ್ವಲ್ಪ ಅಹಂಕಾರವಿತ್ತು. ದಕ್ಷಿಣೇಶ್ವರದಲ್ಲಿಯೆ ಇದ್ದುದರಿಂದ ಅವನು ಯೌವನಕ್ಕೆ ಕಾಲಿಡುತ್ತಿದ್ದಂತೆಯೆ ಶ್ರೀರಾಮಕೃಷ್ಣರ ಪುಣ್ಯದರ್ಶನವನ್ನು ಪಡೆಯುವ ಸೌಭಾಗ್ಯ ಅವನಿಗೆ ದೊರಕಿತು. ಮೊದಲನೆ ಸಲ ಬಂದಾಗಲೆ ಶ್ರೀರಾಮಕೃಷ್ಣರು ಅವನನ್ನು ನೋಡಿ ಅವನ ಪರಿಚಯವನ್ನು ಪಡೆದು ತುಂಬ ಸಂತೋಷಗೊಂಡಿದ್ದರು. ಯೋಗೀಂದ್ರನು ಶ್ರೀ ಜಗನ್ಮಾತೆಯು ತಮ್ಮೆಡೆಗೆ ಯಾರು ಯಾರು ಬರುತ್ತಾರೆಂದು ತೋರಿಸಿದ್ದಳೊ ಅವರಲ್ಲಿ ಒಬ್ಬನಾಗಿ

ದ್ದುದು ಮಾತ್ರವಲ್ಲದೆ ಆರು ಜನ ಈಶ್ವರಕೋಟಿಗಳಲ್ಲಿ ಒಬ್ಬನೆಂದು ಶ್ರೀರಾಮಕೃಷ್ಣರು ಅರ್ಥ ಮಾಡಿಕೊಂಡರು.

36. ನಾವು ಮೊದಲೇ ತಿಳಿಸಿರುವಂತೆ ತಾಯಿಯ ಕ್ರಂದನಕ್ಕೆ ಮನಸೋತು ಯೋಗಾನಂದರು ತಮಗಿಷ್ಟವಿಲ್ಲದಿದ್ದರೂ ಮದುವೆಯಾಗಿದ್ದರು. ಅವರು ಹೇಳು ತ್ತಿದ್ದರು : "ಮದುವೆ ಆದಕೂಡಲೆ ಇನ್ನು ಭಗವಂತನ ಸಾಕ್ಷಾತ್ಕಾರ ಕೇವಲ ಬಾಯಿ ಮಾತು ಎಂದೆನಿಸಿತು. ಶ್ರೀರಾಮಕೃಷ್ಣರ ಪ್ರಪ್ರಥಮ ಉಪದೇಶವೇ ಕಾಮಿನಿ ಕಾಂಚನ ತ್ಯಾಗ. ಇನ್ನು ಯಾತಕ್ಕೆ ಅವರಡೆಗೆ ಹೋಗಲಿ ? ಮೃದು ಸ್ವಭಾವದಿಂದಾಗಿ ನನ್ನ ಜೀವನವನ್ನೇ ಹಾಳು ಮಾಡಿಕೊಂಡೆ. ಇನ್ನು ಇದಕ್ಕೆ ಪರಿಹಾರವೆಲ್ಲಿ ? ಆದಷ್ಟು ಬೇಗ ಸಾಯುವುದೇ ಒಳಿತು. ಮೊದಲು ಶ್ರೀರಾಮಕೃಷ್ಣರೆಡೆಗೆ ಪ್ರತಿನಿತ್ಯ ಹೋಗುತ್ತಿದ್ದೆ. ಈ ಘಟನೆಯ ನಂತರ ಶ್ರೀರಾಮಕೃಷ್ಣರೆಡೆಗೆ ಹೋಗುವುದನ್ನು ಒಮ್ಮೆಯೆ ನಿಲ್ಲಿಸಿಬಿಟ್ಟೆ. ಅತ್ಯಂತ ನಿರಾಸೆ ಮನಸ್ತಾಪದಿಂದ ದಿನ ಕಳೆಯುತ್ತಿತ್ತು. ಆದರೆ ಶ್ರೀರಾಮಕೃಷ್ಣರು ಬಿಡಲಿಲ್ಲ. ಮತ್ತೆ ಮತ್ತೆ ನನಗಾಗಿ ಹೇಳಿಕಳುಹಿಸಿದರು. ಅಷ್ಟಾದರೂ ನಾನು ಹೋಗ ದಿರಲು ಅವರು ಒಂದು ಉಪಾಯವನ್ನು ಹೂಡಿದರು. ಕಾಳೀ ಮಂದಿರದ ಒಬ್ಬ ವ್ಯಕ್ತಿ ಏನೊ ಸಾಮಾನು ಕೊಂಡುಕೊಂಡು ಬರಲು ಕೆಲವು ರೂಪಾಯಿಗಳನ್ನು ಮದುವೆಗೆ ಮುಂಚೆ ಕೊಟ್ಟಿದ್ದ. ವಸ್ತುವಿನ ಬೆಲೆ ಕೊಟ್ಟಾದ ಮೇಲೆ ಎರಡು ಮೂರಾಣೆ ಮಿಕ್ಕಿತ್ತು. ವಸ್ತುವನ್ನು ಕಳಿಸಿಕೊಟ್ಟು ಹಣವನ್ನು ಮತ್ತೆ ಕೊಡುವುದಾಗಿ ಹೇಳಿದೆ. ಶ್ರೀರಾಮ ಕೃಷ್ಣರು ಇದನ್ನು ತಿಳಿದು ಒಂದು ದಿನ ಕೃತಕ ಕೋಪವನ್ನು ವ್ಯಕ್ತಪಡಿಸಿ ನನಗೆ ಹೇಳಿ ಕಳುಹಿಸಿದರು : 'ನೀನೆಂಥ ಮನುಷ್ಯ. ವಸ್ತುವನ್ನು ಕೊಂಡುಕೊಂಡು ಬರಲು ಹೋದ ವನು ಪತ್ತೆಯೇ ಇಲ್ಲ, ಉಳಿದ ಹಣವನ್ನು ಹಿಂದಿರುಗಿಸುವುದಂತೂ ಇರಲಿ, ಯಾವಾಗ ಕೊಡುತ್ತೇನೆಂದು ಒಂದು ಸುದ್ದಿಯನ್ನಾದರೂ ಕಳಿಸಬೇಡವೆ ?' ಈ ಮಾತಿನಿಂದ ನನ್ನ ಸ್ವಾಭಿಮಾನ ಜಾಗ್ರತವಾಯಿತು. ಶ್ರೀರಾಮಕೃಷ್ಣರು ಇಷ್ಟು ದಿನಗಳ ನಂತರ ನನ್ನನ್ನು ಮೋಸಗಾರನೆಂದು ಪರಿಗಣಿಸಿದರಲ್ಲ ! ಇರಲಿ, ಇಂದು ಹೋಗಿ ಈ ಲೆಕ್ಕ ತೀರಿಸಿ ಬಂದು ಬಿಡುತ್ತೇನೆ. ಮತ್ತೆ ಕಾಳೀಮಂದಿರದ ಕಡೆಗೇ ಹೋಗುವುದಿಲ್ಲ ಎಂದು ಭಾವಿಸಿದೆ. ಈಗ ನಿರಾಸೆ ಅನುತಾಪ ಅಪಮಾನ ಇವೆಲ್ಲವೂ ನನ್ನ ಮನಸ್ಸನ್ನು ಕಿತ್ತು ತಿನ್ನು ತ್ತಿದ್ದುವು. ಮಧ್ಯಾಹ್ನ ಕಾಳೀ ಮಂದಿರಕ್ಕೆ ಹೋದೆ. ಶ್ರೀರಾಮಕೃಷ್ಣರು ಉಟ್ಟ ಬಟ್ಟೆ ಯನ್ನು ಬಗಲಿನಲ್ಲಿಟ್ಟುಕೊಂಡು ಕೋಣೆಯ ಹೊರಗೆ ಭಾವಾವಿಷ್ಟರಾಗಿ ನಿಂತಿರುವುದನ್ನು ನಾನು ದೂರದಿಂದಲೇ ನೋಡಿದೆ. ನನ್ನನ್ನು ನೋಡಿದ ಕೂಡಲೆ ಬೇಗನೆ ನನ್ನೆಡೆಗೆ ಬಂದು ಹೇಳತೊಡಗಿದರು: 'ವಿವಾಹ ಮಾಡಿಕೊಂಡಿದ್ದೀಯೆ. ಅದರಿಂದ ಭಯವೇಕೆ ? ಇಲ್ಲಿಯ ಕೃಪೆಯೊಂದಿದ್ದರೆ ಲಕ್ಷ ವಿವಾಹ ಮಾಡಿಕೊಂಡರೂ ಅದರಿಂದ ಹಾನಿ ಉಂಟಾಗದು. ಸಂಸಾರದಲ್ಲಿದ್ದು ಭಗವಂತನನ್ನು ಪಡೆಯಬೇಕೆಂದಿದ್ದರೆ ನಿನ್ನ ಪತ್ನಿಯನ್ನು ಒಮ್ಮೆ ಇಲ್ಲಿಗೆ ಕರೆದುಕೊಂಡು ಬಾ. ಆಕೆಗೆ ಮತ್ತು ನಿನಗೆ ಹಾಗೆಯೆ ಆಗುವಂತೆ ಮಾಡುತ್ತೇನೆ. ಮತ್ತೆ ಸಂಸಾರವನ್ನು ತ್ಯಜಿಸಿ ಭಗವಂತನನ್ನು ಪಡೆಯಬೇಕೆಂದಿದ್ದರೆ ಹಾಗೂ ಮಾಡು

ತ್ತೇನೆ!" ಅರ್ಧ ಬಾಹ್ಯದೆಶೆಯಲ್ಲಿ ಶ್ರೀರಾಮಕೃಷ್ಣರು ಆಡಿದ ಈ ಮಾತು ಒಮ್ಮೆಯೆ ನನ್ನ ಹೃದಯವನ್ನು ಸ್ಪರ್ಶಿಸಿತು. ಹಿಂದಿನ ಹತಾಶ ಅಂಧಕಾರ ಎಲ್ಲೋ ಕಣ್ಮರೆಯಾಗಿ ಹೋಯಿತು. ಕಂಬನಿ ಸುರಿಸುತ್ತ ಅವರಿಗೆ ನಮಸ್ಕರಿಸಿದೆ. ಅವರು ಪ್ರೀತಿಯಿಂದ ನನ್ನ ಕೈಹಿಡಿದು ಕೋಣೆಯ ಒಳಗೆ ಕರೆದುಕೊಂಡು ಹೋದರು. ಹಣದ ವಿಚಾರವನ್ನು ಎತ್ತಿದಾಗ ಅವರು ಅದನ್ನು ಕಿವಿಗೇ ಹಾಕಿಕೊಳ್ಳಲಿಲ್ಲ."

ಸಂಸಾರ ತ್ಯಾಗಿಯಂತೆ ಉದಾಸೀನ ಭಾವದಿಂದ ಅವರು ಸಂಸಾರದಲ್ಲಿ ಹುಟ್ಟಿದ್ದರು. ಅವರು ಮದುವೆ ಆಗಿದ್ದರೂ ಆ ಉದಾಸೀನ ಭಾವ ಸ್ವಲ್ಪವೂ ಬದಲಾಗಿರಲಿಲ್ಲ. ಈಗ ಅವರು ಏಕಮಾತ್ರ ಆಶ್ರಯವಾದ ಶ್ರೀರಾಮಕೃಷ್ಣರನ್ನು ಸೇವಿಸುವುದರಲ್ಲಿ ಹೆಚ್ಚು ಸಮಯ ಕಳೆದರು. ಪ್ರಾಪಂಚಿಕ ವಿಷಯದಲ್ಲಿ ಮತ್ತು ಹಣ ಸಂಪಾದಿಸುವುದರಲ್ಲಿ ಅವರ ಔದಾಸೀನ್ಯವನ್ನು ಕಂಡು ತಂದೆ ತಾಯಿಗಳು ದೂರತೊಡಗಿದರು. ಅವರು ಹೇಳುತ್ತಾರೆ: "ಒಂದು ದಿನ ನನ್ನ ತಾಯಿಯು ಈ ರೀತಿ ದೂರುತ್ತಾ ಹೇಳಿದಳು: 'ನಿನಗೆ ಹಣ ಸಂಪಾದನೆಯಲ್ಲಿ ಮನಸ್ಸಿಲ್ಲದಿದ್ದರೆ ಯಾಕೆ ಮದುವೆ ಮಾಡಿಕೊಂಡೆ ?' ನಾನು ಹೇಳಿದೆ: 'ನಾನು ಎಷ್ಟೊಂದು ಹೇಳಿದೆ ನಿನಗೆ ನಾನು ಮದುವೆ ಮಾಡಿಕೊಳ್ಳುವುದಿಲ್ಲ ಎಂದು. ನೀನು ಅಳುವುದನ್ನು ನೋಡಲಾಗದೆ, ಕೊನೆಗೆ ನಾನು ಮದುವೆಗೆ ಒಪ್ಪಿದೆ.' ಅವಳು ಕ್ರುದ್ಧಳಾಗಿ ಹೇಳಿದಳು : 'ಹಾಗೆ ಹೇಳಬೇಡ. ನಿನಗೆ ಅದರಲ್ಲಿ ಆಸೆ ಇಲ್ಲದೆ ನನಗಾಗಿ ಮದುವೆ ಆದೆಯಾ ? ಯಾರು ನಂಬುತ್ತಾರೆ ಇದನ್ನು ?' ಈ ಮಾತಿನಿಂದ ನನಗೆ ಇರಿದಂತಾಯಿತು. ನಾನು ಈಕೆಯ ಕಷ್ಟವನ್ನು ನೋಡಿ ತಡೆಯಲಾಗದೆ ಮದುವೆಯಾದೆ. ಭಗವಂತನೆ, ಆಕೆಗಾಗಿ ನಿನ್ನನ್ನು ತ್ಯಾಗಮಾಡಿದೆ. ಸಾಕು ಇದು. ಈ ಪ್ರಪಂಚದಲ್ಲಿ ಶ್ರೀರಾಮಕೃಷ್ಣರನ್ನು ಬಿಟ್ಟರೆ ಯಾರೂ ಗತಿ ಇಲ್ಲ ಎಂದು ಭಾವಿಸಿದೆ, ಅಂದಿನಿಂದ ಸಂಸಾರದ ಬಗ್ಗೆ ತೀವ್ರವಾದ ತಿರಸ್ಕಾರ ಭಾವನೆ ನನ್ನ ಮನಸ್ಸನ್ನು ಆವರಿಸಿತು. ಅಂದಿನಿಂದ ರಾತ್ರಿಯನ್ನೂ ಶ್ರೀರಾಮಕೃಷ್ಣರ ಹತ್ತಿರವೇ ಕಳೆಯತೊಡಗಿದೆ."

37. ಹೀಗೆ ಶ್ರೀರಾಮಕೃಷ್ಣರೊಡನೆ ವಾಸಿಸುತ್ತಿರುವಾಗ ಒಂದು ದಿನ ಒಂದು ಘಟನೆ ಸಂಭವಿಸಿತು. ಸಂಜೆಯಾಗುತ್ತಿದ್ದಂತೆಯೆ ಭಕ್ತರೆಲ್ಲರೂ ಒಬ್ಬೊಬ್ಬರಾಗಿ ತಮ್ಮ ತಮ್ಮ ಮನೆಗೆ ಹೊರಟುಹೋದರು, ಶ್ರೀರಾಮಕೃಷ್ಣರಿಗೆ ಏನಾದರೂ ಬೇಕಾಗಬಹುದು ಎಂದು ಭಾವಿಸಿ ಯೋಗಾನಂದರು ಅಂದು ರಾತ್ರಿ ದಕ್ಷಿಣೇಶ್ವರದಲ್ಲಿಯೆ ಉಳಿದರು. ಶ್ರೀರಾಮಕೃಷ್ಣರಿಗೂ ಅವರು ಇರುವುದರಿಂದ ಸಂತೋಷವಾಯಿತು. ಆಧ್ಯಾತ್ಮಿಕ ವಿಷಯವಾಗಿ ಮಾತನಾಡುತ್ತಾ ಸಮಯ ಹೋದದ್ದೇ ಗೊತ್ತಾಗಲಿಲ್ಲ. ಆಗ ರಾತ್ರಿ ಹತ್ತು ಗಂಟೆ. ಶ್ರೀರಾಮಕೃಷ್ಣರು ಸ್ವಲ್ಪ ಉಪಾಹಾರವನ್ನು ಸ್ವೀಕರಿಸಿದರು. ಯೋಗಾನಂದರಿಗೆ ಊಟವಾದ ಮೇಲೆ ಅವರನ್ನು ತಮ್ಮ ಕೋಣೆಯಲ್ಲಿಯೆ ಮಲಗಲು ಹೇಳಿ ತಾವೂ ಮಲಗಿಕೊಂಡರು. ಈಗ ನಡುರಾತ್ರಿ ಕಳೆದಿದೆ. ಶ್ರೀರಾಮಕೃಷ್ಣರಿಗೆ ಹೊರಗೆ ಹೋಗಬೇಕೆಂದೆನಿಸಿತು. ಅವರು ಯೋಗಾನಂದರ ಕಡೆ ನೋಡಿದರು. ಅವರು ಗಾಢ ನಿದ್ರೆಯಲ್ಲಿದ್ದರು. ಅವರ ನಿದ್ರೆಯನ್ನು ಕೆಡಿಸುವುದು ಬೇಡವೆಂದು ತಾವೆ ಪಂಚವಟಿಯ

ಕಡೆಗೆ ಹೊರಟರು ಮತ್ತು ಅಲ್ಲಿಂದ ಮುಂದೆ ಹುಣಿಸೆ ಮರಗಳ ಕಡೆಗೆ ಹೊರಟರು.

ಯೋಗಾನಂದರು ಯಾವಾಗಲೂ ನಿದ್ರೆ ಮಾಡುವುದು ಕಡಮೆ. ಶ್ರೀರಾಮಕೃಷ್ಣರು ಹೊರಟುಹೋದ ಸ್ವಲ್ಪಹೊತ್ತಿನಲ್ಲಿಯೆ ಅವರ ನಿದ್ರಾಭಂಗವಾಯಿತು. ಕೋಣೆಯ ಬಾಗಿಲು ತೆರೆದಿರುವುದನ್ನು ನೋಡಿ ಮೇಲೆದ್ದು ನೋಡುತ್ತಾರೆ. ಶ್ರೀರಾಮಕೃಷ್ಣರು ಹಾಸಿಗೆಯ ಮೇಲಿಲ್ಲ. ಈ ರಾತ್ರಿ ಎಲ್ಲಿಗೆ ಹೋಗಿರಬಹುದು ಎಂದು ಯೋಚಿಸ ತೊಡಗಿದರು. ತಂಬಿಗೆ ಮುಂತಾದುವುಗಳೆಲ್ಲ ಯಥಾ ಸ್ಥಾನದಲ್ಲಿಯೆ ಇದ್ದುವು. ಹಾಗಾದರೆ ಶ್ರೀರಾಮಕೃಷ್ಣರು ಹೊರಗಡೆ ಓಡಾಡುತ್ತಿರಬಹುದೆ ? ಯೋಗಾನಂದರು ಹೊರಗಡೆ ಬಂದು ನೋಡಿದರು. ಬೆಳದಿಂಗಳ ಬೆಳಕಿನಲ್ಲಿ ಸುತ್ತಲೂ ಕಣ್ಣು ಹಾಯಿಸಿದರು. ಯಾವ ವ್ಯಕ್ತಿಯೂ ಕಾಣಿಸಲಿಲ್ಲ. ಆಗ ಅವರ ಮನಸ್ಸಿಗೆ ಒಂದು ಸಂದೇಹ ಉಂಟಾಯಿತು. ಹಾಗಾದರೆ ಶ್ರೀರಾಮಕೃಷ್ಣರು ನಹಬತ್ತಿನಲ್ಲಿರುವ ತಮ್ಮ ಪತ್ನಿಯೆಡೆಗೆ ಹೋಗಿರುವರೆ? ಹಾಗಾದರೆ ಅವರೂ ಬಾಯಲ್ಲಿ ಹೇಳುವುದು ಒಂದು, ಮಾಡುವುದು ಒಂದೇ?

ಯೋಗಾನಂದರು ಹೇಳುತ್ತಾರೆ: "ಆ ಚಿಂತೆ ಮನಸ್ಸಿಗೆ ಬಂದಕೂಡಲೇ ಸಂದೇಹ, ಭಯ ಮುಂತಾದ ಅನೇಕ ಭಾವಗಳು ನನ್ನ ಮನಸ್ಸನ್ನು ಆವರಿಸಿದವು. ಅನಂತರ ಇದು ಕಠೋರವಾದರೂ ಅರುಚಿಯಾದರೂ ಈ ಸತ್ಯವನ್ನು ತಿಳಿಯಲೇ ಬೇಕು ಎಂದು ನಿರ್ಧರಿಸಿದೆ. ಅನಂತರ ಹತ್ತಿರದ ಒಂದು ಸ್ಥಳದಲ್ಲಿ ನಿಂತು ನಹಬತ್ತಿನ ಬಾಗಿಲನ್ನೇ ನೋಡತೊಡಗಿದೆ. ಹೀಗೆ ಸ್ವಲ್ಪಹೊತ್ತು ನಿಂತಾದಮೇಲೆ ಪಂಚವಟಿ ಕಡೆಯಿಂದ ಪಾದರಕ್ಷೆಯ ಧ್ವನಿ ಕೇಳಿಬಂತು. ಸ್ವಲ್ಪಹೊತ್ತಿನಲ್ಲಿಯೆ ಶ್ರೀರಾಮಕೃಷ್ಣರು ನನ್ನ ಮುಂದೆ ಬಂದು ನಿಂತರು. ನನ್ನನ್ನು ನೋಡಿ ಕೇಳಿದರು, "ನೀನು ಇಲ್ಲೇಕೆ ನಿಂತುಕೊಂಡಿರುವೆ ?" ಎಂದು. ಅವರ ಬಗ್ಗೆ ವೃಥಾ ಸಂದೇಹ ಪಟ್ಟೆನಲ್ಲ ಎಂಬ ನಾಚಿಕೆ ಮತ್ತು ಭಯದಿಂದ ತಲೆ ತಗ್ಗಿಸಿಕೊಂಡು ನಿಂತೆ. ಅವರ ಪ್ರಶ್ನೆಗೆ ಏನೂ ಉತ್ತರ ಕೊಡಲಾಗಲಿಲ್ಲ. ಶ್ರೀರಾಮಕೃಷ್ಣರಿಗೆ ನನ್ನ ಮುಖವನ್ನು ನೋಡಿಯೆ ಎಲ್ಲಾ ಅರ್ಥವಾಯಿತು. ಅವರು ಇದನ್ನು ಅಪರಾಧವೆಂದು ಪರಿಗಣಿಸದೆ ನನಗೆ ಆಶ್ವಾಸನೆ ಇತ್ತು ಹೇಳಿದರು : "ಬಹಳ ಒಳ್ಳೆಯದು. ಸಾಧುವನ್ನು ಹಗಲೂ ನೋಡಬೇಕು, ರಾತ್ರಿಯೂ ನೋಡಬೇಕು. ಅನಂತರ ಅವನಲ್ಲಿ ವಿಶ್ವಾಸವಿರಿಸಬೇಕು" ಹೀಗೆ ಹೇಳಿ ಶ್ರೀರಾಮಕೃಷ್ಣರು ನನಗೆ ಅವರನ್ನು ಅನುಸರಿಸಲು ಹೇಳಿ ತಮ್ಮ ಕೋಣೆಯ ಕಡೆ ಹೊರಟರು. ಈ ಸಂದೇಹ ಪ್ರವೃತ್ತಿಯ ಫಲವಾಗಿ ಎಂಥಾ ಅಪರಾಧ ಎಸಗಿದೆ, ಎಂಬುದನ್ನೇ ಚಿಂತಿಸುತ್ತಿದ್ದ ನನಗೆ ಅಂದು ರಾತ್ರಿ ನಿದ್ದೆ ಬರಲಿಲ್ಲ."

38. ಗುರುವಿನ ಪಾದದಲ್ಲಿ ತಮ್ಮನ್ನು ಸಂಪೂರ್ಣ ಅರ್ಪಿಸಿಕೊಂಡು ಮೊದಲು ಅವರನ್ನು ಅನಂತರ ಅವರ ದೇಹಾವಸಾನದ ನಂತರ ಶ್ರೀಮಾತೆಯವರನ್ನು ಹೃತ್ಪೂರ್ವಕವಾಗಿ ಸೇವಿಸಿ ಸ್ವಾಮಿ ಯೋಗಾನಂದರು ತಮ್ಮ ಈ ಅಪರಾಧಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡರು. ಅವರಂತಹ ತೀವ್ರವೈರಾಗ್ಯವುಳ್ಳ ಜ್ಞಾನಭಕ್ತಿಗಳೆರಡನ್ನೂ ಸಮಾನವಾಗಿ ಹೊಂದಿದ್ದ ಯೋಗಿ ಪುರುಷರು ಶ್ರೀರಾಮಕೃಷ್ಣರ ಸಂನ್ಯಾಸಿ ಸಂಘದಲ್ಲಿ ವಿರಳವೆಂದು

ಹೇಳಬಹುದು. 1899ರಲ್ಲಿ ದೇಹತ್ಯಾಗವನ್ನು ಮಾಡಿ ಪರಮಪದವನ್ನೈದಿದರು.

39. ನರೇಂದ್ರನು ದಕ್ಷಿಣೇಶ್ವರಕ್ಕೆ ಬಂದ ಮೇಲೆ ಶ್ರೀರಾಮಕೃಷ್ಣರು ಅವನ ಪ್ರತಿ ಕಾರ್ಯವನ್ನೂ ಪರಿಶೀಲಿಸುತ್ತಿದ್ದರು ಎಂಬುದನ್ನು ನಾವು ಮೊದಲೇ ತಿಳಿಸಿರುವೆವು. ಇದರ ಫಲವಾಗಿ ನರೇಂದ್ರನಲ್ಲಿ ಆಧ್ಯಾತ್ಮಿಕ ಉತ್ಸಾಹ, ಸಾಹಸ, ಸಂಯಮ, ಶಕ್ತಿ ಮತ್ತು ಶ್ರೇಷ್ಠ ಉದ್ದೇಶಕ್ಕಾಗಿ ಆತ್ಮಾರ್ಪಣೆ ಮಾಡುವ ಪ್ರವೃತ್ತಿ ಇವೇ ಮುಂತಾದ ಸದ್ಗುಣಗಳು ಸ್ವಾಭಾವಿಕವಾಗಿಯೇ ದೇದೀಪ್ಯಮಾನವಾಗಿ ಬೆಳಗುತ್ತಿವೆ ಎಂದು ಅರ್ಥ ಮಾಡಿಕೊಂಡರು. ಅವನಲ್ಲಿ ಶುಭ ಸಂಸ್ಕಾರಗಳು ಎಷ್ಟು ಪ್ರಬಲವಾಗಿವೆ ಎಂದರೆ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಇತರರಂತೆ ಪ್ರಲೋಭನೆಗೊಳಗಾಗಿ ಹೀನ ಕಾರ್ಯದಲ್ಲಿ ತೊಡಗುವುದು ಅವನಿಗೆ ಎಂದೂ ಸಾಧ್ಯವೇ ಇಲ್ಲ, ಎಂಬುದನ್ನು ಅರ್ಥಮಾಡಿಕೊಂಡರು. ನರೇಂದ್ರನ ದೃಢವಾದ ಸತ್ಯನಿಷ್ಠೆಯನ್ನು ನೋಡಿ ಅವನ ಎಲ್ಲಾ ಮಾತುಗಳಲ್ಲಿಯೂ ವಿಶ್ವಾಸವಿರಿಸುತ್ತಿದ್ದುದಷ್ಟೇ ಅಲ್ಲದೆ ಮುಂದೆ ಅವನಿಗೆ ಎಂಥಾ ಅವಸ್ಥೆ ಬರುವುದೆಂದರೆ ಅವನ ಬಾಯಿಂದ ಸತ್ಯವಲ್ಲದೆ ಮಿಥ್ಯವು ಪ್ರಮಾದದಿಂದಲೂ ಬರುವುದಿಲ್ಲ ಎಂದು ಅವರು ನಂಬಿದ್ದರು. ಅವನ ಮನಸ್ಸಿನಲ್ಲಿ ತಾನಾಗಿಯೇ ಉಂಟಾದ ಸಂಕಲ್ಪಗಳೂ ಕೂಡ ಸತ್ಯವಾಗಿ ಪರಿಣಮಿಸುವುವು. ಶ್ರೀರಾಮಕೃಷ್ಣರು ಈ ವಿಷಯದ ಬಗ್ಗೆ ಹೇಳುತ್ತಿದ್ದರು: "ಯಾರು ಮನೋವಾಕ್ಕಾಯವಾಗಿ ಸತ್ಯವನ್ನೇ ಆಶ್ರಯಿಸಿಕೊಂಡಿರುತ್ತಾರೊ ಅವರು ಸತ್ಯಸ್ವರೂಪವಾದ ಭಗವಂತನನ್ನು ಪಡೆಯುತ್ತಾರೆ" ; "ಹನ್ನೆರಡು ವರ್ಷ ಮನೋವಾಕ್ಕಾಯವಾಗಿ ಸತ್ಯವನ್ನು ಪರಿಪಾಲಿಸಿದರೆ ಮಾನವನು ಸತ್ಯಸಂಕಲ್ಪನಾಗುತ್ತಾನೆ."

40. ನರೇಂದ್ರನಾಥನ ಸತ್ಯನಿಷ್ಠೆಗಾಗಿ ಶ್ರೀರಾಮಕೃಷ್ಣರಿಗೆ ಅವನ ಮೇಲೆ ಇದ್ದ ದೃಢ ವಿಶ್ವಾಸಕ್ಕೆ ಸಂಬಂಧಪಟ್ಟಂತೆ ಒಂದು ಹಾಸ್ಯಮಯ ಘಟನೆ ಸಂಭವಿಸಿತು. ಒಂದು ದಿನ ಮಾತಿನ ಸಂದರ್ಭದಲ್ಲಿ ಶ್ರೀರಾಮಕೃಷ್ಣರು ಭಕ್ತರ ಸ್ವಭಾವವು ಚಾತಕಪಕ್ಷಿಯಂತೆ ಎಂಬುದನ್ನು ತಿಳಿಸುತ್ತಾ ಹೇಳಿದರು : "ಚಾತಕಪಕ್ಷಿಯು ತನ್ನ ನೀರಡಿಕೆಯನ್ನು ನೀಗಿಸಲು ಯಾವಾಗಲೂ ಮೇಘದ ಕಡೆಗೇ ತಿರುಗಿಕೊಂಡಿರುತ್ತದೆ ಮತ್ತು ಅದನ್ನೆ ಆಶ್ರಯಿಸಿಕೊಂಡಿರುತ್ತದೆ. ಹಾಗೆಯೆ ಭಕ್ತನೂ ಕೂಡ ಹೃದಯದ ನೀರಡಿಕೆಯನ್ನು ಮತ್ತು ಎಲ್ಲಾ ಬಗೆಯ ಕೊರತೆಯನ್ನು ನೀಗಿಸಲು ಭಗವಂತನನ್ನೆ ಸಂಪೂರ್ಣ ಆಶ್ರಯಿಸಬೇಕು." ನರೇಂದ್ರನು ಆಗ ಅಲ್ಲಿ ಕುಳಿತಿದ್ದನು. ಅವನು ಇದ್ದಕ್ಕಿದ್ದಂತೆ ಹೇಳತೊಡಗಿದ: "ಮಹಾಶಯರೆ ಚಾತಕಪಕ್ಷಿಯು ಮಳೆಯ ನಿರನ್ನಲ್ಲದೆ ಮತ್ತೇನನ್ನೂ ಕುಡಿಯುವುದಿಲ್ಲವೆಂದು ಪ್ರಸಿದ್ಧವಾದರೂ ಅದು ಸತ್ಯವಲ್ಲ, ಬೇರೆ ಪಕ್ಷಿಗಳಂತೆ ನದಿ, ಕೊಳ ಮುಂತಾದ ನೀರಿನ ಮೂಲಕ ತನ್ನ ಬಾಯಾರಿಕೆಯನ್ನು ಶಮನಗೊಳಿಸುತ್ತದೆ. ಚಾತಕಪಕ್ಷಿಯು ಆ ರೀತಿ ನೀರು ಕುಡಿಯುವುದನ್ನು ನಾನು ನೋಡಿದ್ದೇನೆ." ಶ್ರೀರಾಮಕೃಷ್ಣರು ಹೇಳಿದರು: "ಇದೇನಯ್ಯಾ ನೀನು ಹೇಳುವುದು ? ಚಾತಕವು ಬೇರೆ ಪಕ್ಷಿಗಳಂತೆ ನೀರು ಕುಡಿಯುವುದೇನು? ಹಾಗಾದರೆ ಇದುವರೆಗಿನ ನನ್ನ ನಂಬಿಕೆ ಸುಳ್ಳಾಯಿತು. ನೀನು ಅದನ್ನು ನೋಡಿರುವಾಗ ನಾನು ಈ ವಿಷಯದಲ್ಲಿ ಸಂದೇಹ ಪಡಲಾರೆ." ಬಾಲಕ ಸ್ವಭಾವದ ಶ್ರೀರಾಮಕೃಷ್ಣರು

ಇಷ್ಟು ಹೇಳಿ ಸುಮ್ಮನಾಗಲಿಲ್ಲ. ಮತ್ತೆ ಯೋಚಿಸತೊಡಗಿದರು : "ಈ ನಂಬಿಕೆಯು ಭ್ರಮೆಯಾದ ಮೇಲೆ ಬೇರೆ ನಂಬಿಕೆಗಳೂ ಭ್ರಮೆಯಾಗಿರಬಾರದೇಕೆ? ಹೀಗೆ ಯೋಚಿಸಿ ಅವರು ತುಂಬಾ ಖಿನ್ನರಾದರು. ಇದಾದ ಸ್ವಲ್ಪ ದಿನಗಳಲ್ಲಿಯೆ ನರೇಂದ್ರನು ಒಂದು ದಿನ ಶ್ರೀರಾಮಕೃಷ್ಣರನ್ನು ಇದ್ದಕ್ಕಿದ್ದಂತೆಯೆ ಕರೆದು ಹೇಳಿದ, ಇಲ್ಲಿ ನೋಡಿ ಮಹಾಶಯರೆ, ಚಾತಕಪಕ್ಷಿ ಗಂಗಾನೀರು ಕುಡಿಯುತ್ತಿದೆ" ಎಂದು. ಶ್ರೀರಾಮಕೃಷ್ಣರು ಆತುರದಿಂದ ಬಂದು ನೋಡಿ 'ಎಲ್ಲಿ ?' ಎಂದು ನರೇಂದ್ರನನ್ನು ಕೇಳಿದರು. ಅವರು ನೋಡುತ್ತಾರೆ, ಒಂದು ಚಿಕ್ಕ ಬಾವಲಿ ನೀರು ಕುಡಿಯುತ್ತಿತ್ತು. ಶ್ರೀರಾಮಕೃಷ್ಣರು ಮುಗುಳ್ನಕ್ಕು ಹೇಳಿದರು : "ಇದು ಬಾವಲಿ. ಎಂಥಾ ಮನುಷ್ಯ ನೀನು ! ಬಾವಲಿಯನ್ನೆ ನೀನು ಚಾತಕಪಕ್ಷಿ ಅಂದುಕೊಂಡೆಯಲ್ಲ. ನನ್ನ ಮನಸ್ಸಿನಲ್ಲಿ ಅನಾವಶ್ಯಕವಾಗಿ ಗೊಂದಲವನ್ನೆ ಎಬ್ಬಿಸಿದೆ. ನಿನ್ನ ಮಾತನ್ನು ಎಂದೂ ಕೇಳುವುದಿಲ್ಲ."

41. ಸನ್ಮಾನ, ಶಿಷ್ಟಾಚಾರ, ಸೌಂದರ್ಯಾನುಭವ ಇತ್ಯಾದಿಗಳ ಪ್ರೇರಣೆಯಿಂದ ಮನುಷ್ಯನ ಸ್ವಭಾವವು ಕೋಮಲವಾಗುವುದು. ಆದರೆ ಸ್ತ್ರೀಯ ಮುಂದೆ ನಿಂತಾಗ ಮಾನವನ ಅಂತರ್ಯವು ಇದಕ್ಕಿಂತಲೂ ಅಧಿಕವಾಗಿ ಮೃದುತ್ವವನ್ನು ಪಡೆಯುವುದು. ಇದಕ್ಕೆ ಪೂರ್ವ ಸಂಸ್ಕಾರಗಳೇ ಕಾರಣವೆಂದು ಶಾಸ್ತ್ರ ಹೇಳುತ್ತದೆ ನರೇಂದ್ರನ ಹೃದಯದಲ್ಲಿ ಇಂಥ ಸಂಸ್ಕಾರ ಸ್ವಲ್ಪವೂ ಇರಲಿಲ್ಲ. ಇದನ್ನು ಗಮನಿಸಿದ ಶ್ರೀರಾಮಕೃಷ್ಣರು ನರೇಂದ್ರನು ಎಂದೂ ರೂಪಕ್ಕೆ ಮನಸೋತು ತನ್ನ ಸಂಯಮವನ್ನು ಕಳೆದುಕೊಳ್ಳುವುದಿಲ್ಲ ಎಂದು ದೃಢವಾಗಿ ನಂಬಿದ್ದರು. ತುಂಬಾ ಭಾವಸಮಾಧಿಯನ್ನು ಪಡೆಯುತ್ತಿದ್ದ ಒಬ್ಬ ವ್ಯಕ್ತಿಯ ಮೇಲೆ ನಮಗೆ ತುಂಬಾ ಗೌರವವಿತ್ತು. ಅವನೊಡನೆ ನರೇಂದ್ರನನ್ನು ಹೋಲಿಸಿ ಶ್ರೀರಾಮಕೃಷ್ಣರು ಒಂದು ದಿನ ಹೇಳಿದರು : "ಅವನು ಸ್ತ್ರೀಯರ ಪ್ರೀತಿಗೆ ವಶವಾಗುತ್ತಾನೆ. ಆದರೆ ನರೇಂದ್ರನು ಹಾಗಲ್ಲ. ನಾನು ಸೂಕ್ಷ್ಮವಾಗಿ ಅವನನ್ನು ಪರೀಕ್ಷಿಸಿ ನೋಡಿದ್ದೇನೆ, ಅಂಥ ಸಂದರ್ಭಗಳಲ್ಲಿ ಅವನು ತಿರಸ್ಕಾರದಿಂದ ತಲೆ ತಿರುಗಿಸಿ 'ಇವರೇಕೆ ಇಲ್ಲಿರುವರು ?' ಎಂದು ಹೇಳುವನು."

42. ಜ್ಞಾನ ಮತ್ತು ಪೌರುಷ ಭಾವಗಳು ನರೇಂದ್ರನಲ್ಲಿ ಪ್ರಧಾನವಾಗಿದ್ದರೂ ಕೋಮಲತೆ ಮತ್ತು ಭಕ್ತಿಭಾವ ಇವೂ ಕಡಮೆಯೇನಿರಲಿಲ್ಲ. ಶ್ರೀರಾಮಕೃಷ್ಣರು ಇದನ್ನು ನಮಗೆ ಅನೇಕ ಬಾರಿ ತಿಳಿಸಿರುವರು. ನರೇಂದ್ರನ ಸಾಮಾನ್ಯ ವರ್ತನೆಗಳನ್ನು ಗಮನಿಸಿ ಅವರು ಈ ರೀತಿಯ ತೀರ್ಮಾನಕ್ಕೆ ಬಂದಿದ್ದರು ಎಂದು ಹೇಳುವಂತಿಲ್ಲ; ಅವನ ಶಾರೀರಿಕ ಲಕ್ಷಣಗಳನ್ನೂ ಗಮನಿಸಿ ಅವರು ಇದನ್ನು ನಿರ್ಧರಿಸಿದ್ದರು. ನಮಗೆ ನೆನಪಿದೆ, ಒಂದು ದಿನ ಅವರು ನರೇಂದ್ರನ ಮುಖದ ಶೋಭೆಯನ್ನು ನೋಡುತ್ತಾ ಹೇಳಿದರು : "ಈ ರೀತಿಯ ಕಣ್ಣುಗಳು ಶುಷ್ಕಜ್ಞಾನಿಗೆ ಇರಲು ಸಾಧ್ಯವೆ ? ಜ್ಞಾನದೊಡನೆ ಸ್ತ್ರೀಸಹಜ ಭಕ್ತಿಭಾವವೂ ನಿನ್ನೊಳಗಿದೆ. ಯಾರಲ್ಲಿ ಕೇವಲ ಪುರುಷೋಚಿತವಾದ ಸ್ವಭಾವವಿರುತ್ತದೊ ಅವರ ಸ್ತನದ ತುದಿಯ ಸುತ್ತ ಕಪ್ಪುಬಣ್ಣವಿರುವುದಿಲ್ಲ; ಅರ್ಜುನನಲ್ಲಿ ಹಾಗಿತ್ತು."

43. ಮೇಲೆ ಹೇಳಿದ ಸಾಮಾನ್ಯ ನಾಲ್ಕು ವಿಧಾನಗಳಲ್ಲದೆ ಬೇರೆ ವಿಧಾನಗಳ ಮೂಲಕವೂ ಶ್ರೀರಾಮಕೃಷ್ಣರು ನರೇಂದ್ರನನ್ನು ಪರೀಕ್ಷಿಸಿದರು. ಅವುಗಳಲ್ಲಿ ಮುಖ್ಯವಾದ ಒಂದೆರಡನ್ನು ಇಲ್ಲಿ ಪ್ರಸ್ತಾಪಿಸುತ್ತೇವೆ. ನರೇಂದ್ರನು ದಕ್ಷಿಣೇಶ್ವರಕ್ಕೆ ಬಂದಾಗಲೆಲ್ಲ ಶ್ರೀರಾಮಕೃಷ್ಣರು ಅವನೊಡನೆಯೆ ಕಾಲ ಕಳೆಯುತ್ತಿದ್ದರು. ದೂರದಲ್ಲಿ ನರೇಂದ್ರನನ್ನು ಕಂಡಾಕ್ಷಣ ಅವರ ಮನಸ್ಸು ದೇಹವನ್ನು ಬಿಟ್ಟು ಓಡಿ ಹೋಗಿ ನರೇಂದ್ರನನ್ನು ಪ್ರೀತಿಯಿಂದ ಅಪ್ಪಿಕೊಳ್ಳುತ್ತಿತ್ತು. ಎಷ್ಟೋ ಬಾರಿ ಶ್ರೀರಾಮಕೃಷ್ಣರು "ಅಲ್ಲಿ ನ— ಅಲ್ಲಿ ನ—"ಎಂದು ಹೇಳುತ್ತಾ ಸಮಾಧಿಗೆ ಹೋಗುತ್ತಿದ್ದರು! ಇಷ್ಟಾದರೂ ಶ್ರೀರಾಮಕೃಷ್ಣರು ನರೇಂದ್ರನ ವಿಷಯವಾಗಿ ತುಂಬಾ ಉದಾಸೀನತೆಯನ್ನು ಒಮ್ಮೆ ತಾಳಿದರು. ನರೇಂದ್ರನು ಬರುತ್ತಾನೆ, ಶ್ರೀರಾಮಕೃಷ್ಣರಿಗೆ ನಮಸ್ಕರಿಸುತ್ತಾನೆ, ಮುಂದುಗಡೆ ಕುಳಿತು ಸ್ವಲ್ಪ ಹೊತ್ತು ಕಾಯುತ್ತಿರುತ್ತಾನೆ. ಆದರೆ ಶ್ರೀರಾಮಕೃಷ್ಣರು ಅವನನ್ನು ಆದರಿಸುವುದಿರಲಿ, ಕುಶಲ ಪ್ರಶ್ನೆಯನ್ನೂ ಕೇಳುತ್ತಿರಲಿಲ್ಲ. ಯಾವನೋ ಅಪರಿಚಿತನೆನ್ನುವಂತೆ ಒಮ್ಮೆ ಅವನ ಕಡೆ ದೃಷ್ಟಿ ಹಾಯಿಸಿ ತಮ್ಮ ಪಾಡಿಗೆ ತಾವು ಇದ್ದುಬಿಡುತ್ತಿದ್ದರು. ನರೇಂದ್ರನು ಭಾವಿಸುತ್ತಿದ್ದ 'ಶ್ರೀರಾಮಕೃಷ್ಣರು ಭಾವಾವಿಷ್ಟರಾಗಿರುವರು' ಎಂದು. ಸ್ವಲ್ಪಹೊತ್ತಿನ ನಂತರ ಹೊರಗೆ ಬಂದು ಹಾಜರಾನೊಡನೆ ಧೂಮಪಾನ ಮಾಡುತ್ತಾ ಮಾತನಾಡುತ್ತಿದ್ದನು. ಶ್ರೀರಾಮಕೃಷ್ಣರು ಇತರರೊಡನೆ ಮಾತನಾಡುತ್ತಿರುವುದನ್ನು ಕೇಳಿ ಅವನು ಮತ್ತೆ ಕೊಠಡಿಗೆ ಹೋಗುತ್ತಿದ್ದನು. ಶ್ರೀರಾಮಕೃಷ್ಣರು ಆಗಲೂ ಅವನೊಡನೆ ಮಾತನಾಡದೆ ಬೇರೆ ಕಡೆ ಮುಖಮಾಡಿಕೊಂಡು ಮಲಗುತ್ತಿದ್ದರು. ಹೀಗೆ ಇಡೀ ದಿನ ಕಳೆದರೂ ಶ್ರೀರಾಮಕೃಷ್ಣರು ತನ್ನನ್ನು ಮಾತನಾಡಿಸದಿರಲು ಅವನು ಅವರಿಗೆ ನಮಸ್ಕರಿಸಿ ಕಲ್ಕತ್ತೆಗೆ ಹೋಗುತ್ತಿದ್ದ.

ಹೀಗೆ ಅನೇಕ ದಿನಗಳು ಕಳೆದವು. ನರೇಂದ್ರನು ಬರುವುದನ್ನು ನಿಲ್ಲಿಸಲಿಲ್ಲ ಮತ್ತು ಈ ಔದಾಸೀನ್ಯದಿಂದ ಸ್ವಲ್ಪವೂ ವಿಚಲಿತನಾಗಲಿಲ್ಲ. ನರೇಂದ್ರನು ಮನೆಯಲ್ಲಿರುವಾಗ ಅವನ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಬರಲು ಶ್ರೀರಾಮಕೃಷ್ಣರು ಆಗಾಗ ಯಾರನ್ನಾದರೂ ಕಳುಹಿಸುತ್ತಿದ್ದರು. ಆದರೆ ಅವನು ಅವರೆಡೆಗೆ ಬಂದಾಗ ಮಾತ್ರ ಸಂಪೂರ್ಣ ಉದಾಸೀನರಾಗಿರುತ್ತಿದ್ದರು. ಹೀಗೆ ಒಂದು ತಿಂಗಳು ಕಳೆದ ಮೇಲೆ ಶ್ರೀರಾಮಕೃಷ್ಣರು ಒಂದು ದಿನ ಅವನನ್ನು ಹತ್ತಿರ ಕರೆದು ವಿಚಾರಿಸಿದರು: "ಒಳ್ಳೆಯದು, ನಾನು ನಿನ್ನೊಡನೆ ಒಂದು ಮಾತನ್ನೂ ಆಡುತ್ತಿಲ್ಲ. ಆದರೂ ನೀನು ಇಲ್ಲಿಗೆ ಬರುತ್ತಿದ್ದೀಯಲ್ಲ ಹೇಗೆ ?" ನರೇಂದ್ರನು ಉತ್ತರಿಸಿದ: "ನಾನು ಇಲ್ಲಿಗೆ ಕೇವಲ ನಿಮ್ಮ ಮಾತು ಕೇಳಲು ಬರುತ್ತಿರುವೆನೇನು ? ನಾನು ನಿಮ್ಮನ್ನು ಪ್ರೀತಿಸುತ್ತೇನೆ, ನಿಮ್ಮನ್ನು ನೋಡಲು ಇಚ್ಛೆಯಾಗುತ್ತದೆ. ಅದಕ್ಕಾಗಿಯೆ ಬರುತ್ತೇನೆ." ಶ್ರೀರಾಮಕೃಷ್ಣರು ಇದನ್ನು ಕೇಳಿ ತುಂಬಾ ಸಂತೋಷದಿಂದ ನುಡಿದರು : "ನಾನು ನಿನ್ನನ್ನು ಪರೀಕ್ಷಿಸುತ್ತಿದ್ದೆ. ನಿನ್ನನ್ನು ಆದರಿಸದಿದ್ದರೆ ಓಡಿ ಹೋಗುವೆಯೊ ಎಂದು ನೋಡುತ್ತಿದ್ದೆ. ನಿನ್ನಂತಹ ಯೋಗ್ಯರಿಗೆ ಮಾತ್ರ ಇಷ್ಟೊಂದು ಉದಾಸೀನತೆಯನ್ನು ಸಹಿಸಿಕೊಳ್ಳಲು ಸಾಧ್ಯ. ಬೇರೆ ಯಾರಾದರೂ

ಆಗಿದ್ದರೆ ಇದಕ್ಕೆ ಬಹಳ ಮುಂಚೆಯೆ ಓಡಿ ಹೋಗುತ್ತಿದ್ದರು, ಮತ್ತೆ ಈ ಕಡೆ ಮುಖ ತೋರಿಸುತ್ತಿರಲಿಲ್ಲ."

44. ಇನ್ನೊಂದು ಘಟನೆಯನ್ನು ಉಲ್ಲೇಖಿಸಿ ಈ ಪ್ರಸಂಗವನ್ನು ಸಮಾಪ್ತಿಗೊಳಿಸುತ್ತೇವೆ. ಭಗವಂತನ ಸಾಕ್ಷಾತ್ಕಾರಕ್ಕಾಗಿ ನರೇಂದ್ರನಾಥನು ಎಷ್ಟರ ಮಟ್ಟಿಗೆ ಹಂಬಲಿಸುತ್ತಿದ್ದ ಎಂಬುದನ್ನು ಈ ಘಟನೆ ಸ್ಪಷ್ಟಪಡಿಸುತ್ತದೆ. ಒಂದು ದಿನ ಶ್ರೀರಾಮಕೃಷ್ಣರು ನರೇಂದ್ರನಾಥನನ್ನು ಪಂಚವಟಿಗೆ ಕರೆದುಕೊಂಡು ಹೋಗಿ ಹೇಳಿದರು : "ನೋಡು, ತಪಸ್ಸಿನ ಸ್ವಭಾವದಿಂದ ನನ್ನಲ್ಲಿ ಅಣಿಮಾದಿ ಸಿದ್ಧಿಗಳು ಅನೇಕ ಕಾಲದಿಂದ ಇವೆ. ಆದರೆ ನನಗೆ ಸರಿಯಾಗಿ ಬಟ್ಟೆ ಹಾಕಿಕೊಳ್ಳಲೂ ಆಗುವುದಿಲ್ಲ. ಇಂಥವನಿಗೆ ಅವುಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳುವ ಅವಕಾಶವೆಲ್ಲಿ ? ತಾಯಿಗೆ ತಿಳಿಸಿ ನಿನಗೆ ಅದನ್ನೆಲ್ಲ ಕೊಟ್ಟುಬಿಡೋಣ ಎಂದು ಯೋಚಿಸುತ್ತಿದ್ದೆ. ಏಕೆಂದರೆ ನೀನು ಆಕೆಯ ಅನೇಕ ಕೆಲಸಗಳನ್ನು ಮಾಡಬೇಕಾಗಿದೆ ಎಂದು ಅವಳು ತೋರಿಸಿಕೊಟ್ಟಿರುವಳು. ನೀನು ಈ ಶಕ್ತಿಗಳನ್ನು ಪಡೆದರೆ ನಿನ್ನ ಕಾರ್ಯದಲ್ಲಿ ಅವು ಸಹಾಯಕವಾಗಬಹುದು. ಏನು ಹೇಳುತ್ತೀಯೆ ?" ಶ್ರೀರಾಮಕೃಷ್ಣರನ್ನು ನೋಡಿದಂದಿನಿಂದಲೂ ಅವರಲ್ಲಿ ಅನೇಕ ದೈವೀಶಕ್ತಿಗಳಿರುವುದನ್ನು ನರೇಂದ್ರನು ಕಂಡಿದ್ದನು. ಆದ್ದರಿಂದ ಅವರ ಮಾತಿನಲ್ಲಿ ಅವಿಶ್ವಾಸಕ್ಕೆ ಎಡೆಯೆ ಇರಲಿಲ್ಲ. ಅವನಲ್ಲಿ ಸ್ವಾಭಾವಿಕವಾಗಿಯೆ ಭಗವದ್‌ಭಕ್ತಿ ಇದ್ದುದರಿಂದ ಈ ಸಿದ್ಧಿಗಳನ್ನು ವಿಚಾರವಿಲ್ಲದೆ ಸ್ವೀಕರಿಸುವುದು ಸಾಧ್ಯವಿರಲಿಲ್ಲ. ಅವನು ಆಲೋಚಿಸಿ ಪ್ರಶ್ನಿಸಿದ: "ಮಹಾಶಯರೆ, ಇವುಗಳು ಭಗವಂತನನ್ನು ಪಡೆಯಲು ಸಹಾಯಕವಾಗುವುವೆ ?" ಶ್ರೀರಾಮಕೃಷ್ಣರು ಹೇಳಿದರು : "ಆ ವಿಷಯದಲ್ಲಿ ಸಹಾಯಕವಾಗದಿದ್ದರೂ ಭಗವಂತನನ್ನು ಪಡೆದ ಮೇಲೆ ಅವನ ಕಾರ್ಯದಲ್ಲಿ ನಿರತನಾದಾಗ ಇವು ತುಂಬಾ ಸಹಾಯಕ್ಕೆ ಬರುತ್ತವೆ." ನರೇಂದ್ರನು ಈ ಮಾತನ್ನು ಕೇಳಿ ಹೇಳಿದನು : "ಮಹಾಶಯರೆ, ನನಗೆ ಇವುಗಳಿಂದ ಯಾವ ಪ್ರಯೋಜನವೂ ಇಲ್ಲ. ಮೊದಲು ಭಗವಂತನ ಸಾಕ್ಷಾತ್ಕಾರವಾಗಲಿ, ಅನಂತರ ಇವುಗಳು ಬೇಕೆ ಬೇಡವೇ ಎಂಬುದನ್ನು ತೀರ್ಮಾನಿಸುವುದು. ಈ ವಿಚಿತ್ರಶಕ್ತಿಗಳನ್ನು ಪಡೆದು ಜೀವನದ ನೈಜ ಉದ್ದೇಶವನ್ನು ಮರೆತು ಸ್ವಾರ್ಥ ಪ್ರೇರಣೆಯಿಂದ ಇವುಗಳ ದುರುಪಯೋಗ ಮಾಡಿದರೆ ಅದರಿಂದ ಸರ್ವನಾಶವಾಗುತ್ತದೆ." ಶ್ರೀರಾಮಕೃಷ್ಣರು ನರೇಂದ್ರನಿಗೆ ಅಣಿಮಾದಿ ಸಿದ್ಧಿಗಳನ್ನು ನಿಜವಾಗಿಯೂ ಕೊಡಲು ಬಯಸಿದ್ದರೊ ಅಥವಾ ಅವನನ್ನು ಪರೀಕ್ಷಿಸುವುದಕ್ಕಾಗಿ ಹೀಗೆ ಹೇಳಿದರೊ ಎಂಬುದನ್ನು ನಿರ್ದಿಷ್ಟವಾಗಿ ಹೇಳಲಾಗುವುದಿಲ್ಲ. ಆದರೆ ಅವುಗಳನ್ನು ಸ್ವೀಕರಿಸಲು ಅವನು ನಿರಾಕರಿಸಿದ್ದು ಅವರಿಗೆ ತುಂಬಾ ಸಂತೋಷವನ್ನುಂಟು ಮಾಡಿತ್ತು ಎಂಬುದು ನಮಗೆಲ್ಲರಿಗೂ ತಿಳಿದ ವಿಷಯವಾಗಿದೆ.

## ಎಂಟನೆಯ ಅಧ್ಯಾಯ

# ಸಂಸಾರ ಮತ್ತು ಶ್ರೀರಾಮಕೃಷ್ಣರ ಮೂಲಕ ನರೇಂದ್ರನಿಗೆ ಶಿಕ್ಷಣ

## ಪ್ರಥಮ ಪಾದ

**1. ಶ್ರೀರಾಮಕೃಷ್ಣರಲ್ಲಿ ಸ್ತ್ರೀಭಾವ ಮತ್ತು ನರೇಂದ್ರನಲ್ಲಿ ಪುರುಷಭಾವ 2. ನರೇಂದ್ರನ ಮೇಲೆ ಪಾಶ್ಚಾತ್ಯ ಚಿಂತನೆಯ ಪ್ರಭಾವ 3. ತಂದೆಯ ಜೀವನ ಮತ್ತು ವಾತಾವರಣ ಇದಕ್ಕೆ ಕಾರಣವಾಗಿತ್ತು 4. ಸತ್ಯಾನ್ವೇಷಣೆಯ ಹಂಬಲದಿಂದ ಪಾಶ್ಚಾತ್ಯ ವಿಜ್ಞಾನ ಮತ್ತು ತತ್ತ್ವ ಶಾಸ್ತ್ರಗಳ ಅಧ್ಯಯನ 5. ಸತ್ಯವನ್ನರಿಯಲು ಇಂದ್ರಿಯ ಪ್ರತ್ಯಕ್ಷ ಅಸಮರ್ಥವೆಂದು ಅವನ ನಿರ್ಧಾರ 6. ನರೇಂದ್ರನ ತೀಕ್ಷ್ಣ ವೈಚಾರಿಕ ಮನೋಭಾವ 7. ಗುರುವಿನ ಅನುಗ್ರಹದಿಂದ ಮತ್ತು ಸ್ವಂತ ಅನುಭವ ಗಳಿಂದ ಅವನಲ್ಲಿ ಭಗವದ್ವಿಶ್ವಾಸ ಉಳಿಯಿತು 8. ನರೇಂದ್ರನ ಸಾಧನೆ 9. ಧ್ಯಾನದ ಸಮಯದಲ್ಲಿ ಬುದ್ಧನ ದರ್ಶನ**

1. ಶ್ರೀರಾಮಕೃಷ್ಣರು ಕೆಲವೊಮ್ಮೆ ನರೇಂದ್ರನನ್ನು ತಮ್ಮ ಸ್ವಭಾವದೊಡನೆ ಹೋಲಿಸಿ ಹೀಗೆ ಹೇಳುತ್ತಿದ್ದರು: "ಇದರ ಒಳಗೆ ಯಾವುದಿದೆಯೋ, ಅದು ಸ್ತ್ರೀಭಾವದ ಅಭಿವ್ಯಕ್ತಿ. ನರೇಂದ್ರನಲ್ಲಿರುವುದು ಪುರುಷಭಾವದ ಅಭಿವ್ಯಕ್ತಿ." ಶ್ರೀರಾಮಕೃಷ್ಣರ ಈ ಮಾತಿನ ಅರ್ಥ ನಿಜವಾಗಿಯೂ ಏನೆಂಬುದನ್ನು ನಿರ್ಧರಿಸುವುದು ಕಷ್ಟ. ಅವರಿಬ್ಬರೂ ಅನುಸರಿಸಿದ ಮಾರ್ಗ ಮತ್ತು ಅವರು ಭಗವತ್ಸಾಕ್ಷಾತ್ಕಾರಕ್ಕಾಗಿ ಕೈಗೊಂಡ ಮುಖ್ಯ ಸಾಧನೆಗಳು ಇವುಗಳನ್ನು ಅಧ್ಯಯನ ಮಾಡಿದಾಗ ಈ ಮೇಲಿನ ಮಾತಿಗೆ ಒಂದು ಯುಕ್ತಿಯುಕ್ತವಾದ ಅರ್ಥವನ್ನು ಕಲ್ಪಿಸಬಹುದು. ಶ್ರೀರಾಮಕೃಷ್ಣರು ಗುರುವಿನ ಉಪ ದೇಶವನ್ನು ಪಡೆದ ಕೂಡಲೇ ಅದರಲ್ಲಿ ಪೂರ್ಣಶ್ರದ್ಧೆ ಇರಿಸಿ ಶಾಸ್ತ್ರಸಮ್ಮತವಾದ ವಿವಿಧ ಸಾಧನೆಗಳನ್ನು ಕೈಗೊಂಡರು. ಆದರೆ ಈ ವಿಷಯದಲ್ಲಿ ನರೇಂದ್ರನ ವರ್ತನೆಯೇ ಬೇರೆ ಆಗಿತ್ತು. ನರೇಂದ್ರನು ತನ್ನ ಬುದ್ಧಿಶಕ್ತಿಯ ಮೂಲಕ ಶಾಸ್ತ್ರ ಮತ್ತು ಗುರುವಾಕ್ಯ ಗಳನ್ನು ಸರಿಯೆ ತಪ್ಪೇ ಎಂದು ನಿರ್ಧರಿಸಿ ಅನಂತರವೇ ಸಾಧನೆಯಲ್ಲಿ ತೊಡಗುತ್ತಿದ್ದನು. ಪೂರ್ವ ಸಂಸ್ಕಾರಗಳ ಪ್ರಭಾವದಿಂದ ಭಗವಂತನ ಅಸ್ತಿತ್ವದಲ್ಲಿ ದೃಢವಾದ ಶ್ರದ್ಧೆ ಯಿದ್ದರೂ ನರೇಂದ್ರನು ಪ್ರತಿಯೊಬ್ಬರೂ ಅನೇಕ ಬಗೆಯ ಭ್ರಮೆ ಮತ್ತು ಮೂಢ ನಂಬಿಕೆಗಳ ಪ್ರಭಾವಕ್ಕೆ ಒಳಪಟ್ಟಿರುವರು ಎಂದು ನಂಬಿದ್ದನು. ಆದ್ದರಿಂದ ಯಾರ ಮಾತನ್ನೂ ವಿಚಾರವಿಲ್ಲದೆ ಸ್ವೀಕರಿಸಬಾರದು ಎಂಬ ಧೋರಣೆಯನ್ನು ಅವನ ಜೀವ ನದ್ದಕ್ಕೂ ಕಾಣಬಹುದು. ಹೀಗೆ ಶ್ರದ್ಧಾಭಕ್ತಿಯನ್ನು, ಅದರ ಉತ್ಪತ್ತಿ ಮತ್ತು ಫಲ

ಯಾವುದೇ ಆಗಲೀ, ವಿಚಾರದ ಮೂಲಕ ನಿಗ್ರಹಿಸಿ ಅದರ ಬೆಳಕಿನಲ್ಲಿಯೆ ನಮ್ಮ ಜೀವನವನ್ನು ನಡೆಸಬೇಕು ಎಂಬುದನ್ನು ಆಧುನಿಕ ಯುಗದಲ್ಲಿ ಎಲ್ಲರೂ ಒಪ್ಪುವುದು ಸ್ವಾಭಾವಿಕವಾಗಿದೆ.

2. ಮನುಷ್ಯನ ಜೀವನವನ್ನು ರೂಪಿಸುವುದರಲ್ಲಿ ಎಲ್ಲಾ ಸಮಯ ಮತ್ತು ಎಲ್ಲಾ ದೇಶಗಳಲ್ಲಿಯೂ ಪರಿಸರವು ಮಹತ್ತರವಾದ ಪಾತ್ರವನ್ನು ವಹಿಸುತ್ತದೆ. ಆದ್ದರಿಂದ ನರೇಂದ್ರನ ಜೀವನದ ಮೇಲೆಯೂ ಅದು ತನ್ನ ಪ್ರಭಾವವನ್ನು ಬೀರಿದುದರಲ್ಲಿ ಆಶ್ಚರ್ಯವೇನಿಲ್ಲ. ಶ್ರೀರಾಮಕೃಷ್ಣರೆಡೆಗೆ ಬರುವುದಕ್ಕೆ ಮುಂಚೆಯೆ ನರೇಂದ್ರನಾಥನು ತನ್ನ ಅಸಾಮಾನ್ಯ ಬುದ್ಧಿಶಕ್ತಿಯ ಮೂಲಕ ಇಂಗ್ಲಿಷ್ ಸಾಹಿತ್ಯವನ್ನು ಐರೋಪ್ಯ ಮತ್ತು ಭಾರತೀಯ ಇತಿಹಾಸಗಳನ್ನು, ಪಾಶ್ಚಾತ್ಯ ತರ್ಕಶಾಸ್ತ್ರವನ್ನು ಆಳವಾಗಿ ಅಧ್ಯಯನ ಮಾಡಿದ್ದನು. ಇದರ ಪರಿಣಾಮವಾಗಿ ಪಾಶ್ಚಾತ್ಯ ಭಾವನೆಗಳು ಅವನಲ್ಲಿ ನೆಲೆಯೂರಿದ್ದವು. ಪಾಶ್ಚಾತ್ಯ ಭಾವನೆಗಳ ಮುಖ್ಯತತ್ವಗಳಾದ ಸಂಶೋಧನೆ ಮತ್ತು ವಿಚಾರ ಸ್ವಾತಂತ್ರ್ಯ ಅವನ ನರನಾಡಿಯನ್ನು ಪ್ರವೇಶಿಸಿದ್ದವು. ಆದ್ದರಿಂದ ಶಾಸ್ತ್ರವಾಕ್ಯಗಳಲ್ಲಿ ಸಂಶಯಪಡುವುದು ಮತ್ತೆ ಕೆಲವೊಮ್ಮೆ ಅವನ್ನು ಅಸತ್ಯವೆಂದು ಪರಿಗಣಿಸುವುದು ಮತ್ತು ಯಾವನೇ ಒಬ್ಬ ಮನುಷ್ಯನನ್ನು ಗುರುವೆಂದು ಸ್ವೀಕರಿಸಲು ಹಿಂಜರಿಯುವುದು ಅವನಿಗೆ ಸ್ವಾಭಾವಿಕವೇ ಆಗಿತ್ತು.

3. ನರೇಂದ್ರನ ಹಿತೈಷಿಗಳ ಆದರ್ಶ, ಅಂದಿನ ಕಲ್ಕತ್ತಾ ಸಮಾಜದ ಪರಿಸ್ಥಿತಿ ಇವೂ ಕೂಡ ಅವನ ಮನೋಭಾವಕ್ಕೆ ಪೂರಕವಾಗಿದ್ದವು. ಅವನ ಅಜ್ಜನಿಗೆ ಹಿಂದೂ ಶಾಸ್ತ್ರಗಳಲ್ಲಿ ಬಹಳ ನಂಬಿಕೆ ಇತು ಮತ್ತು ಅವನು ಸಂನ್ಯಾಸಿಯೂ ಆದನು. ಆದರೆ ನರೇಂದ್ರನ ತಂದೆ ಪಾಶ್ಚಾತ್ಯ ಶಿಕ್ಷಣ ಮತ್ತು ಸ್ವತಂತ್ರ ಚಿಂತನೆಗಳ ಪರಿಣಾಮವಾಗಿ ಈ ಶ್ರದ್ಧೆಯನ್ನು ಕಳೆದುಕೊಂಡಿದ್ದನು. ಪರ್ಶಿಯನ್ ಕವಿ ಹಫೀಸನ ಕವನಗಳು ಮತ್ತು ಬೈಬಲ್‌ನಲ್ಲಿ ದಾಖಲೆ ಆಗಿರುವ ಜೀಸಸ್‌ನ ನುಡಿಗಳು ಇವೇ ಅವನ ಪಾಲಿಗೆ ಅತ್ಯುತ್ತಮ ಆಧ್ಯಾತ್ಮಿಕ ಭಾವನೆಗಳಾಗಿದ್ದವು. ಅವನಿಗೆ ಸಂಸ್ಕೃತಭಾಷೆ ಗೊತ್ತಿಲ್ಲದೆ ಇದ್ದುದರಿಂದ ಗೀತೆ ಮುಂತಾದ ಹಿಂದೂಶಾಸ್ತ್ರಗಳನ್ನು ಅವನು ಓದುವಂತಿರಲಿಲ್ಲ. ಆದ್ದರಿಂದಲೆ ತನ್ನ ಆಧ್ಯಾತ್ಮಿಕ ತೃಪ್ತಿಗಾಗಿ ಈ ಮೇಲಿನ ಪುಸ್ತಗಳನ್ನು ಓದಬೇಕಾಯಿತು. ಒಂದು ದಿನ ನರೇಂದ್ರನು ಧರ್ಮದ ಬಗ್ಗೆ ಓದುತ್ತಿರುವಾಗ ಅವನ ತಂದೆಯು ಅವನಿಗೆ ಒಂದು ಬೈಬಲನ್ನು ಕೊಟ್ಟು ಹೇಳಿದನು: "ಧರ್ಮ ಎಂಬುದು ಏನಾದರೂ ಇದ್ದರೆ ಇದರಲ್ಲಿದೆ." ಬೈಬಲ್ ಮತ್ತು ಹಫೀಸನ ಕವನಗಳನ್ನು ಅಷ್ಟೊಂದು ಪ್ರಶಂಸಿಸುತ್ತಿದ್ದರೂ ಅವನ ಜೀವನವು ಆಧ್ಯಾತ್ಮಿಕವಾಗಿ ರೂಪುಗೊಂಡಿರಲಿಲ್ಲ. ಆಧ್ಯಾತ್ಮಿಕ ಆವಶ್ಯಕತೆಯನ್ನೆ ಅವನು ಭಾವಿಸಿದಂತೆ ಕಂಡು ಬರುವುದಿಲ್ಲ. ಆ ಪುಸ್ತಕಗಳನ್ನು ಓದುವಾಗ ಏನೋ ಒಂದು ತಾತ್ಕಾಲಿಕವಾದ ಆನಂದ ದೊರೆಯುತ್ತಿತ್ತು ಅಷ್ಟೆ. ಹಣವನ್ನು ಸಂಪಾದಿಸಿ ತಾನು ಸುಖ ಜೀವನವನ್ನು ನಡೆಸುತ್ತಾ ಇತರರ ಸುಖಕ್ಕಾಗಿ ತನ್ನ ಕೈಯಲ್ಲಾದಷ್ಟು ಸಹಾಯ ಮಾಡುವುದು—ಇದೇ ಅವನ ಜೀವನದ ಮುಖ್ಯ ಗುರಿ ಆಗಿತ್ತು. ಇದರಿಂದ

ಮತ್ತು ಅವನ ದೈನಂದಿನ ಚಟುವಟಿಕೆಗಳಿಂದ ದೇವರು ಆತ್ಮ ಮುಂತಾದವುಗಳಲ್ಲಿ ಅವನಿಗೆ ದೃಢವಾದ ನಂಬಿಕೆ ಇರಲಿಲ್ಲ ಎಂದು ತಿಳಿದು ಬರುತ್ತದೆ. ಪಾಶ್ಚಾತ್ಯ ಜಡವಾದ ಮತ್ತು ಈ ಪ್ರಪಂಚವೇ ಸರ್ವಸ್ವ ಎಂಬ ಭಾವನೆ ನರೇಂದ್ರನ ತಂದೆಯಂತಹ ಅನೇಕ ವ್ಯಕ್ತಿಗಳ ಮನಸ್ಸಿನಲ್ಲಿ ಭೌತಾತೀತ ಸತ್ಯಗಳಲ್ಲಿ ಸಂದೇಹವನ್ನು ಉಂಟು ಮಾಡಿತು. ಅವರಲ್ಲನೇಕರು ಹಿಂದೂ ಶಾಸ್ತ್ರಗಳಿಂದ ಕಲಿಯುವಂತಹದು ಏನೂ ಇಲ್ಲ, ಅವು ಕೇವಲ ದೌರ್ಬಲ್ಯ ಮತ್ತು ಮೂಢನಂಬಿಕೆಗಳನ್ನು ಬೋಧಿಸುತ್ತವೆ ಎಂದು ಭಾವಿಸಿದರು. ಇದರ ಪರಿಣಾಮವಾಗಿ ಆಧ್ಯಾತ್ಮಿಕ ಹಿನ್ನೆಲೆ ಮತ್ತು ಧಾರ್ಮಿಕ ನಂಬಿಕೆಗಳಿಲ್ಲದೆ ಅವರ ಆಂತರಿಕ ಭಾವನೆಗಳೇ ಒಂದು, ಹೊರಗೆ ತೋರಿಸಿಕೊಳ್ಳುವುದೇ ಒಂದು ಎಂಬಂತೆ ಆಯಿತು. ಬ್ರಹ್ಮ ಸಮಾಜವನ್ನು ಸ್ಥಾಪಿಸಿದ ಮಹಾ ಮೇಧಾವಿ ರಾಜಾರಾಮ್‌ಮೋಹನರಾಯನು ಈ ನಾಸ್ತಿಕತೆ ಮತ್ತು ಜಡವಾದದ ಪ್ರಭಾವವನ್ನು ತಡೆಯಲು ಸ್ವಲ್ಪಕಾಲದ ಮಟ್ಟಿಗೆ ಪ್ರಯತ್ನ ಪಟ್ಟನು. ಆದರೆ ಪಾಶ್ಚಾತ್ಯ ನಾಗರೀಕತೆಯ ಒತ್ತಡದಿಂದಾಗಿ ಅಂತಃಕಲಹ ಉಂಟಾಗಿ ಆ ಸಂಸ್ಥೆಯು ಇಬ್ಭಾಗವಾಯಿತು. ಆ ಸಂಸ್ಥೆಯ ಎರಡೂ ಬಣದವರು ಪ್ರಸ್ತುತ ಪರಿಸ್ಥಿತಿಯ ಒತ್ತಡಕ್ಕೆ ಬಲಿಯಾಗಿದ್ದರು.

4. ನರೇಂದ್ರನಾಥನು ೧೮೮೧ರಲ್ಲಿ ತನ್ನ ಎಫ್. ಎ. ಪರೀಕ್ಷೆಯ ನಂತರ ಪಾಶ್ಚಾತ್ಯ ವಿಜ್ಞಾನ ಮತ್ತು ತತ್ತ್ವಶಾಸ್ತ್ರಗಳಲ್ಲಿ ಹೆಚ್ಚು ಪರಿಣತಿಯನ್ನು ಪಡೆದನು. ಅವನಾಗಲೆ ಮಿಲ್ ಮತ್ತು ಇತರ ಪಾಶ್ಚಾತ್ಯ ತಾರ್ಕಿಕರ ತತ್ತ್ವಗಳನ್ನು ಕರಗತ ಮಾಡಿ ಕೊಂಡಿದ್ದನು. ಈಗ ಡೇಕಾರ್ಟ್‌ನ ತತ್ತ್ವವನ್ನು ಹ್ಯೂಮ್ ಮತ್ತು ಬೆಂಥಾಮ್‌ನ ನಾಸ್ತಿಕ ವಾದವನ್ನು ಸ್ಪಿನೋಸನ್‌ನ ಪ್ರಕೃತಿ ದೇವತಾ ವಾದವನ್ನು ಡಾರ್ವಿನ್ನನ ವಿಕಾಸ ವಾದವನ್ನು ಕ್ಯಾಂಟ್ ಮತ್ತು ಸ್ಪೆನ್ಸರರ ಅಜ್ಞೇಯವಾದ ಮತ್ತು ಆದರ್ಶ ಸಮಾಜ ವಾದ ಇವೇ ಮುಂತಾದ ಪಾಶ್ಚಾತ್ಯ ದಾರ್ಶನಿಕ ಸಿದ್ಧಾಂತಗಳನ್ನು ಕರಗತ ಮಾಡಿ ಕೊಳ್ಳುವುದರಲ್ಲಿ ಉತ್ಸುಕನಾದನು ಎಲ್ಲಾ ಆಸಕ್ತಿಯ ಹಿಂದೆ ಸತ್ಯಾನ್ವೇಷಣೆಯ ಪ್ರೇರಣೆ ಇತ್ತು. ಜರ್ಮನ್ ದಾರ್ಶನಿಕರ ಪ್ರಸಿದ್ಧಿಯನ್ನು ಕೇಳಿ ಕ್ಯಾಂಟ್, ಫಿಷೆ, ಹೆಗಲ್, ಶೋಪನ್‌ಹೋವರ್ ಮತ್ತು ಇತರ ದಾರ್ಶನಿಕರ ತತ್ತ್ವಗಳನ್ನು ಸಾಧ್ಯವಾದಷ್ಟು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದನು. ಮಿದುಳು ಮತ್ತು ಸ್ನಾಯುಮಂಡಲ ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ತಿಳಿಯಲು ತನ್ನ ಸ್ನೇಹಿತರೊಡನೆ ಕಲ್ಕತ್ತಾ ಮೆಡಿಕಲ್ ಕಾಲೇಜಿಗೆ ಆಗಾಗ ಹೋಗುತ್ತಿದ್ದನು. ಅವನು ೧೮೮೪ರಲ್ಲಿ ಬಿ.ಎ. ಪಾಸಾಗುವ ಹೊತ್ತಿಗೆ ಪಾಶ್ಚಾತ್ಯ ದರ್ಶನಗಳ ಸಾಕಷ್ಟು ಅಧ್ಯಯನ ನಡೆಸಿದನು. ಆದರೆ ಅವನ ಮನಸ್ಸಿನಲ್ಲಿ ಅಶಾಂತಿಯು ಇನ್ನೂ ಅಧಿಕವಾಯಿತು. ಅಸೀಮ ಸತ್ಯದ ಸುಳಿವನ್ನು ಪಡೆಯಲು ಮನಸ್ಸು ಮತ್ತು ಬುದ್ಧಿಯ ಅಸಮರ್ಥತೆಯನ್ನು ಅವನು ಪಡೆದ ಜ್ಞಾನವು ಸ್ಪಷ್ಟವಾಗಿ ತೋರಿಸಿತು. ಆ ಸತ್ಯವನ್ನು ಸಾಕ್ಷಾತ್ಕರಿಸಿಕೊಂಡು ಅದರ ಮೂಲಕ ಪರಮ ಶಾಂತಿಯನ್ನು ಪಡೆಯುವುದಂತೂ ದೂರದ ಮಾತು.

5. ಬಾಹ್ಯ ಸಂವೇದನೆಗೆ ಮಿದುಳು ಮತ್ತು ಇಂದ್ರಿಯಗಳು ತೋರಿಸುವ ಪ್ರತಿ

ಕ್ರಿಯೆ ಮಾನವನ ಮನಸ್ಸಿನಲ್ಲಿ ಅನೇಕ ಬದಲಾವಣೆಗಳನ್ನು ಮಾಡಿ ಅದರ ಮೂಲಕ ಸುಖದುಃಖಗಳ ಜ್ಞಾನವನ್ನು ಉತ್ಪತ್ತಿಮಾಡುತ್ತದೆ ಎಂಬುದನ್ನು ನರೇಂದ್ರನಾಥನು ಪಾಶ್ಚಾತ್ಯ ವಿಜ್ಞಾನ ಮತ್ತು ದರ್ಶನಗಳ ಸಹಾಯದಿಂದ ಅರ್ಥಮಾಡಿಕೊಂಡನು. ಮಾನವನು ನಿಜವಾಗಿಯೂ ಈ ಮಾನಸಿಕ ವಿಕಾರಗಳನ್ನೇ ದೇಶಕಾಲಾದಿಗಳ ಮೂಲಕ ಅನುಭವಿಸುತ್ತಿರುವುದು. ಸಂವೇದನೆಯನ್ನು ಉಂಟುಮಾಡುವಂತಹ ಬಾಹ್ಯ ಜಗತ್ತು ಮತ್ತು ಅದರ ಎಲ್ಲಾ ವಸ್ತುಗಳ ಯಂಥಾರ್ಥ ಸ್ವರೂಪ ಅವನಿಗೆ ಯಾವಾಗಲೂ ಅಜ್ಞಾತವಾಗಿಯೆ ಉಳಿದಿದೆ. ಇದೇ ಮಾತು ಅಂತರ್ಜಗತ್ತಿಗೂ ಮಾನವನ ನೈಜ ಸ್ವರೂಪಕ್ಕೂ ಅನ್ವಯಿಸುತ್ತದೆ. ಅಲ್ಲಿಯೂ ಕೂಡ ಯಾವುದೇ ಒಂದು ಅಪೂರ್ವ ವಸ್ತು ತನ್ನ ಶಕ್ತಿಯ 'ಮೂಲಕ ಮನಸ್ಸಿನಲ್ಲಿ' ಅಹಂ ಜ್ಞಾನವನ್ನು, ನಾನಾ ಭಾವಗಳನ್ನು ಉತ್ಪಾದಿಸುತ್ತಿದೆ. ಆದರೆ ಅದರ ಸ್ವರೂಪವು ದೇಶ ಕಾಲಗಳಿಗೆ ಅತೀತವಾಗಿರುವುದರಿಂದ ಮಾನವನಿಗೆ ಅದನ್ನು ಗ್ರಹಿಸಲು ಸಾಧ್ಯವಾಗುತ್ತಿಲ್ಲ. ಹೀಗೆ ಬಾಹ್ಯಜಗತ್ತಿನಲ್ಲಾಗಲಿ ಅಂತರ್ಜಗತ್ತಿನಲ್ಲಾಗಲಿ ಮಾನವನ ಮನಸ್ಸು ಆತ್ಯಂತಿಕ ಸತ್ಯವನ್ನು ಅರಿಯಲು ಹೋದಾಗ ದೇಶಕಾಲದ ಒಂದು ದುರ್ಭೇದ್ಯವಾದ ಗೋಡೆ ಎದುರಿಗೆ ಬಂದು ಅದು ತನ್ನ ಅಸಮರ್ಥತೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಪಂಚಜ್ಞಾನೇಂದ್ರಿಯ ಮನಸ್ಸು ಬುದ್ಧಿ ಈ ಉಪಕರಣಗಳ ಮೂಲಕ ಮಾನವನು ವಿಶ್ವರಹಸ್ಯವನ್ನು ಕಂಡುಹಿಡಿಯಲು ಹೊರಟು ಅದರ ಮೂಲ ಕಾರಣವನ್ನು ನಿರ್ಧರಿಸಲು ಅಸಮರ್ಥನಾಗಿರುವನು ಮತ್ತು ನಮ್ಮ ಎಲ್ಲಾ ಜ್ಞಾನಗಳ ಆಧಾರವಾದ ಇಂದ್ರಿಯ ಪ್ರತ್ಯಕ್ಷವೇ ದೋಷಪೂರ್ಣವಾದುದು ಎಂದು ನರೇಂದ್ರನು ಅರ್ಥಮಾಡಿಕೊಂಡನು ದೇಹದಿಂದ ಬೇರೆಯಾದ ಆತ್ಮದ ಅಸ್ತಿತ್ವವನ್ನು ನಿರ್ಧರಿಸುವ ಪ್ರಯತ್ನದಲ್ಲಿ ಪಾಶ್ಚಾತ್ಯ ಮನೀಷಿಗಳು ಸಂಪೂರ್ಣ ವಿಫಲರಾಗಿರುವರು. ಆಧ್ಯಾತ್ಮಿಕ ಸತ್ಯಕ್ಕೆ ಸಂಬಂಧಪಟ್ಟ ಪಾಶ್ಚಾತ್ಯ ದರ್ಶನದ ಚರಮ ಸಿದ್ಧಾಂತಗಳು ನರೇಂದ್ರನಿಗೆ ವಿಚಾರಹೀನವಾಗಿ ಕಂಡುಬಂದವು. ಇಂದ್ರಿಯ ಜ್ಞಾನಗಳನ್ನೇ ಆಧಾರವಾಗಿಟ್ಟುಕೊಂಡು ತತ್ತ್ವಶಾಸ್ತ್ರದ ಸಿದ್ಧಾಂತಗಳನ್ನು ರೂಪಿಸುವುದು ಸರಿಯೆ ಎಂದು ನರೇಂದ್ರನು ತೀವ್ರವಾಗಿ ಸಂದೇಹ ಪಡತೊಡಗಿದನು. ಏಕೆಂದರೆ ಇಂದ್ರಿಯಗಳು ಯಾವಾಗಲೂ ಪ್ರಾಪಂಚಿಕ ಸುಖಕ್ಕಾಗಿಯೆ ಬಳಸಲ್ಪಡುತ್ತವೆ; ಬುದ್ಧ, ಜೀಸಸ್ ಮುಂತಾದ ಶ್ರೇಷ್ಠ ಪುರುಷರ ಅಸಾಮಾನ್ಯ ಅನುಭವಗಳನ್ನೇ ಆಧಾರವಾಗಿಟ್ಟುಕೊಳ್ಳುವುದು ಒಳ್ಳೆಯದಲ್ಲವೆ ಎಂದೆನಿಸಿತು ಅವನಿಗೆ.

6. ಪಾಶ್ಚಾತ್ಯ ದರ್ಶನಗಳ ಸಿದ್ಧಾಂತಗಳಲ್ಲಿ ಅನೇಕವು ನರೇಂದ್ರನಿಗೆ ಅಸಮರ್ಪಕವಾಗಿ ಕಂಡರೂ ಪಾಶ್ಚಾತ್ಯ ವೈಜ್ಞಾನಿಕ ಸಂಶೋಧನೆಗಳನ್ನೂ ವಿಶ್ಲೇಷಣಾ ವಿಧಾನವನ್ನೂ ಅವನು ಬಹಳವಾಗಿ ಪ್ರಶಂಸಿಸಿದನು. ಮನಶ್ಶಾಸ್ತ್ರ ಮತ್ತು ಆಧ್ಯಾತ್ಮಿಕತೆಯ ಸತ್ಯತೆಗಳನ್ನು ಪರೀಕ್ಷಿಸುವಾಗ ಅವನು ಯಾವಾಗಲೂ ಈ ಸಂಶೋಧನೆ ಮತ್ತು ವಿಶ್ಲೇಷಣೆಗಳ ಸಹಾಯವನ್ನು ಪಡೆದನು. ಇದೇ ಪರೀಕ್ಷಾ ವಿಧಾನವನ್ನು ಶ್ರೀರಾಮಕೃಷ್ಣರ ಅಸಾಧಾರಣ ಅನುಭವಗಳ ಮೇಲೂ ಪ್ರಯೋಗಿಸಿದನು. ಈ ಕಠೋರ ಪರೀಕ್ಷೆಯಿಂದ ಸಾಬೀ

ತಾದುದನ್ನೇ ಅವನು ಸ್ವೀಕರಿಸಿ ನಿರ್ಭಯವಾಗಿ ಅದನ್ನು ಅನುಸರಿಸುತ್ತಿದ್ದನು. ಸತ್ಯದ ಹಂಬಲ ಎಷ್ಟೇ ಅವನ ಮನಸ್ಸನ್ನು ಕೊರೆಯುತ್ತಿದ್ದರೂ ವಿಚಾರ ಮಾಡದೆ ಯಾವುದನ್ನೂ ಸ್ವೀಕರಿಸುವುದು ಅಥವಾ ಭಯದಿಂದ ಯಾವ ವ್ಯಕ್ತಿಯನ್ನಾದರೂ ಗೌರವಿಸುವುದು ಅವನ ಸ್ವಭಾವಕ್ಕೆ ವಿರುದ್ಧವಾದುದು. ತೀವ್ರ ವಿಚಾರದ ಪರಿಣಾಮವು ನಾಸ್ತಿಕತೆಯಾದರೆ ಅವನು ಅದನ್ನೂ ಸ್ವೀಕರಿಸಲು ಸಿದ್ಧನಿದ್ದ. ಅವನು ತನ್ನ ಪ್ರಾಣವನ್ನೇ ಆದರೂ ಬಲಿಕೊಟ್ಟು ಸತ್ಯವನ್ನರಸಲು ಅಥವಾ ಜೀವನ ರಹಸ್ಯವನ್ನು ಆವಿಷ್ಕರಿಸಲು ಸಿದ್ಧನಿದ್ದ. ಅದಕ್ಕಾಗಿ ಪ್ರಾಪಂಚಿಕ ಸುಖವನ್ನು ತ್ಯಜಿಸುವುದಂತೂ ಅವನ ಪಾಲಿಗೆ ಅತ್ಯಂತ ಸಣ್ಣ ಸಂಗತಿಯಾಗಿತ್ತು. ಆದ್ದರಿಂದ ಆತ್ಯಂತಿಕ ಸತ್ಯವನ್ನು ಕಂಡುಹಿಡಿಯುವ ನಿರ್ಧಾರದಿಂದ ಅವನು ಈಗ ಪಾಶ್ಚಾತ್ಯ ಶಿಕ್ಷಣದಲ್ಲಿ ಮನಸ್ಸು ತೊಡಗಿಸಿದ ಮತ್ತು ಅದರ ಉತ್ತಮ ಅಂಶಗಳನ್ನು ಸ್ವೀಕರಿಸತೊಡಗಿದ. ಸಂದೇಹಗಳು ಅವನನ್ನು ಕಾಡಿಸುತ್ತಿದ್ದುದರಿಂದ ಶ್ರದ್ಧಾಭಕ್ತಿಯ ನೇರ ಮಾರ್ಗವನ್ನು ಕೈಬಿಟ್ಟ. ಆದರೆ ಅವನ ಅಸಾಮಾನ್ಯ ಉದ್ಯಮಶೀಲತೆ ಮತ್ತು ಬೌದ್ಧಿಕ ಶಕ್ತಿ ಕೊನೆಯಲ್ಲಿ ಜಯಗಳಿಸಿದುವು ಮತ್ತು ಜೀವನದ ಆತ್ಯಂತಿಕ ಗುರಿಯನ್ನು ಮುಟ್ಟಲು ಸಹಾಯ ಮಾಡಿದವು. ಪಾಶ್ಚಾತ್ಯ ಪುಸ್ತಕಗಳಲ್ಲಿ ಪ್ರಕಟವಾಗಿದ್ದ ಅಭಿಪ್ರಾಯಗಳೆಲ್ಲವನ್ನೂ ನರೇಂದ್ರನು ವಿಚಾರ ಮಾಡದೆ ಸ್ವೀಕರಿಸುತ್ತಿರುವನೆಂದು ಆಗ ಜನರು ಭಾವಿಸುತ್ತಿದ್ದರು. ಅವನ ಪಾಶ್ಚಾತ್ಯ ಭಾವನೆಗಳ ಕಡೆಗಿನ ಒಲವು ಅವನ ಸ್ನೇಹಿತರುಗಳಿಗೆಲ್ಲರಿಗೂ ತಿಳಿದ ವಿಷಯವಾಗಿತ್ತು. ಅವನು ಒಂದು ದಿನ ಭಗವದ್ಗೀತೆಯನ್ನು ಓದಿ ಅದನ್ನು ಪ್ರಶಂಸಿಸಿದಾಗ ಅವರಿಗೆ ಅತ್ಯಾಶ್ಚರ್ಯವಾಗಿ ಈ ವಿಷಯವನ್ನು ಶ್ರೀರಾಮಕೃಷ್ಣರಿಗೆ ತಿಳಿಸಿದರು. ಶ್ರೀರಾಮಕೃಷ್ಣರೂ ಕೂಡ ಅದನ್ನು ಕೇಳಿ "ಯಾರೋ ಪಾಶ್ಚಾತ್ಯ ವಿದ್ವಾಂಸರು ಹಾಗೆ ಅಭಿಪ್ರಾಯಪಟ್ಟಿರುವರೆಂದು ಅವನು ಆ ರೀತಿ ಮಾಡಿರಲಿಕ್ಕಿಲ್ಲ ಎಂದು ಆಶಿಸುತ್ತೇನೆ" ಎಂದರು.

7. ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದ ಅವನ ಭಾವ ಪರಿವರ್ತನೆ ಆಗುವುದಕ್ಕಿಂತ ಮುಂಚೆಯೇ ಅವನು ಶ್ರೀರಾಮಕೃಷ್ಣರನ್ನು ಸಂಧಿಸಿ ಅನೇಕ ಅಸಾಧಾರಣ ಆಧ್ಯಾತ್ಮಿಕ ಅನುಭವಗಳನ್ನು ಪಡೆದಿದ್ದನು ಎಂಬುದನ್ನು ನಾವು ಇಲ್ಲಿ ಗಮನಿಸಬೇಕು. ಭಗವಂತನ ಅಸ್ತಿತ್ವದಲ್ಲಿ ದೃಢವಾದ ನಂಬಿಕೆಯನ್ನಿರಿಸಲು ಅವನಿಗೆ ಅವು ಸಹಾಯಕವಾದವು. ಇಲ್ಲದಿದ್ದರೆ ಪಾಶ್ಚಾತ್ಯ ಭಾವನೆಗಳ ಪ್ರಭಾವದಿಂದ ಅವನು ಏನಾಗುತ್ತಿದ್ದನೊ ಎಂದು ನಿರ್ಧರಿಸುವುದು ಕಷ್ಟವಾಗುತ್ತಿತ್ತು. ಭಗವಂತನ ಅಸ್ತಿತ್ವದಲ್ಲಿದ್ದ ಅವನ ನಂಬಿಕೆಯನ್ನು ಅವು ಸಂಪೂರ್ಣ ನಾಶಪಡಿಸದಿದ್ದರೂ ಆ ನಂಬಿಕೆಯನ್ನು ಅವು ಚೆನ್ನಾಗಿ ಅಲುಗಾಡಿಸುವ ಸಾಧ್ಯತೆಯಂತೂ ಇತ್ತು. ಆದರೆ ಹಾಗಾಗಲಿಲ್ಲ. ಅವನು ಈ ಸಂಸಾರದಲ್ಲಿ ಮಹತ್ ಕಾರ್ಯವನ್ನು ಸಾಧಿಸುವುದಕ್ಕಾಗಿ ಜನಿಸಿದವನು. ಆದ್ದರಿಂದ ಹಾಗಾಗಲು ಹೇಗೆ ಸಾಧ್ಯ? ದೈವಕೃಪೆಯಿಂದ ಅವನು ಯಾವ ಸದ್ಗುರುವಿನ ಆಶ್ರಯವನ್ನು ಪಡೆದನೊ ಅವರು ಆಗಾಗ ಹೇಳುತ್ತಿದ್ದರು : "ಮಾನವನ ವ್ಯಾಕುಲ ಪ್ರಾರ್ಥನೆಯನ್ನು ಭಗವಂತನು ಯಾವಾಗಲೂ ಕೇಳುತ್ತಾನೆ. ನಾವು ಈಗ ಮಾತನಾಡುತ್ತಿರುವುದಕ್ಕಿಂತ ಹೆಚ್ಚು ಸ್ಪಷ್ಟ

ವಾಗಿ ಅವನನ್ನು ನೋಡಬಹುದು, ಕೇಳಬಹುದು, ಸ್ಪರ್ಶಿಸಬಹುದು. ಇದನ್ನು ನಾನು ಶಪಥ ಮಾಡಿ ಹೇಳುತ್ತೇನೆ !" ಅವರು ಮತ್ತೆ ಹೇಳುತ್ತಾರೆ : "ಸಾಮಾನ್ಯವಾಗಿ ಪ್ರಸಿದ್ಧ ವಾಗಿರುವ ಭಗವಂತನ ಯಾವ ಭಾವ ಮತ್ತು ರೂಪಗಳುಂಟೊ ಅವು ಮಾನವ ಕಲ್ಪಿತ ಎಂದು ಅವುಗಳಲ್ಲಿ ವಿಶ್ವಾಸವಿರಿಸಲಾಗದಿದ್ದರೆ ಮತ್ತು ಜಗತ್ತಿನ ನಿಯಾಮಕನಾದ ಒಬ್ಬ ಭಗವಂತನು ಇರುವನೆಂದು ನೀನು ನಂಬುವುದಾದರೆ ಆಗ 'ಹೇ ಭಗವಂತ ನಿನ್ನ ಸ್ವರೂಪವೇನೊ ನನಗೆ ತಿಳಿಯದು, ನೀನು ಹೇಗಿರುವೆಯೊ ಹಾಗೆ ನನಗೆ ದರ್ಶನವನ್ನು ಕೊಡು.' ಹೀಗೆ ಪ್ರಾರ್ಥಿಸಿದರೂ ಅವನು ಅದನ್ನು ಕೇಳಿ ಕೃಪೆ ತೋರಿಸುವನು." ಶ್ರೀ ರಾಮಕೃಷ್ಣರ ಈ ಎಲ್ಲ ಮಾತುಗಳು ನರೇಂದ್ರನಿಗೆ ಆಶ್ವಾಸನೆಯನ್ನಿತ್ತು ಅವನನ್ನು ಸಾಧನೆಯಲ್ಲಿ ಹೆಚ್ಚು ತೊಡಗಿಸಿದವು. ಪಾಶ್ಚಾತ್ಯ ದಾರ್ಶನಿಕನಾದ ಹ್ಯಾಮಿಲ್ಟನ್ ತನ್ನ ತತ್ತ್ವಶಾಸ್ತ್ರದ ಮೇಲಿನ ಪುಸ್ತಕದ ಕೊನೆಯಲ್ಲಿ ಹೀಗೆ ಹೇಳುತ್ತಾನೆ : "ಜಗತ್ತಿನ ನಿಯಾಮಕನಾದ ಭಗವಂತನೊಬ್ಬನು ಇದ್ದಾನೆ ಎಂಬುದಕ್ಕೆ ನಾವು ಒಂದು ಸುಳಿವನ್ನು ಮಾತ್ರ ಪಡೆಯಬಹುದು, ಅಲ್ಲಿಗೆ ಮಾನವನ ಬುದ್ಧಿಶಕ್ತಿಯು ಕೊನೆಗೊಳ್ಳುತ್ತದೆ. ಆ ಭಗವಂತನ ಸ್ವರೂಪವನ್ನು ತಿಳಿಯುವ ಶಕ್ತಿ ಅದಕ್ಕಿಲ್ಲ. ಆದ್ದರಿಂದ ತತ್ತ್ವಶಾಸ್ತ್ರವು ಇಲ್ಲಿಯೇ ಕೊನೆಗೊಳ್ಳುತ್ತದೆ. ಎಲ್ಲಿ ತತ್ತ್ವಶಾಸ್ತ್ರವು ಕೊನೆಗೊಳ್ಳುವುದೊ ಧರ್ಮವು ಅಲ್ಲಿಂದ ಪ್ರಾರಂಭವಾಗುತ್ತದೆ." ನರೇಂದ್ರನಿಗೆ ಈ ಮಾತುಗಳು ತುಂಬ ಮೆಚ್ಚಿಕೆ ಆದವು. ನಮ್ಮೊಡನೆ ಮಾತಿನ ಸಂದರ್ಭದಲ್ಲಿ ಇದನ್ನು ಅನೇಕ ಬಾರಿ ಉದ್ಧರಿಸಿರುವನು. ಅವನು ಸಾಧನೆಯಲ್ಲಿ ತನ್ನ ಮನಸ್ಸನ್ನಿರಿಸಿದ್ದರೂ ತತ್ತ್ವಶಾಸ್ತ್ರದ ಅಧ್ಯಯನವನ್ನು ನಿಲ್ಲಿಸಲಿಲ್ಲ. ಅವನು ತನ್ನ ಹೆಚ್ಚಿನ ಸಮಯವನ್ನು ಗಾನ, ಧ್ಯಾನ, ಅಧ್ಯಯನಗಳಲ್ಲಿ ಕಳೆ ಯುತ್ತಿದ್ದನು.

8. ನರೇಂದ್ರನು ಈಗ ಧ್ಯಾನದ ಹೊಸ ವಿಧಾನವನ್ನು ಅಳವಡಿಸಿಕೊಂಡನು. ನಮಗೆ ತಿಳಿದಿರುವಂತೆ ಭಗವಂತನ ಮೇಲೆ ಧ್ಯಾನ ಮಾಡುವುದೆಂದರೆ ಅವನ ಮಾನವೀಯ ರೂಪವನ್ನು ಚಿಂತಿಸುವುದು. ನರೇಂದ್ರನು ಮೊದಲು ಬ್ರಹ್ಮ ಸಮಾಜದಲ್ಲಿ ಹೇಳಿರುವ ಸಗುಣ ನಿರಾಕಾರ ಬ್ರಹ್ಮದ ಮೇಲೆ ಧ್ಯಾನ ಮಾಡುತ್ತಿದ್ದನು. ಈಗ ಅವನಿಗೆ ಅನ್ನಿಸಿತು. ಈ ಭಗವದ್ಭಾವನೆಯೂ ಮಾನವೀಯವಾದುದು. ಈ ಬಗೆಯ ಧ್ಯಾನವನ್ನು ಕೈಬಿಟ್ಟು ಅವನು ಈ ರೀತಿ ಪ್ರಾರ್ಥಿಸತೊಡಗಿದನು : "ಓ ಭಗವಂತನೆ, ನಿನ್ನ ನೈಜ ಸ್ವರೂಪ ವನ್ನು ನೋಡಲು ನನಗೆ ಯೋಗ್ಯತೆಯನ್ನು ಕೊಡು." ಅನಂತರ ಅವನು ಮನಸ್ಸಿನಿಂದ ಎಲ್ಲಾ ಆಲೋಚನೆಗಳನ್ನೂ ತೆಗೆದು ಹಾಕಿ ನಿರ್ವಾತ ದೀಪದಂತೆ ಸ್ಥಿರವಾಗಿಯೂ ನಿಶ್ಚಲ ವಾಗಿಯೂ ಅದನ್ನಿರಿಸಲು ಪ್ರಯತ್ನಿಸಿದನು. ಮೊದಲೆ ಸಾಕಷ್ಟು ಸಂಯಮಗೊಂಡಿದ್ದ ಅವನ ಮನಸ್ಸು ಈಗ ಈ ರೀತಿಯ ಸಾಧನೆಯ ಫಲವಾಗಿ ಸ್ವಲ್ಪ ಕಾಲದಲ್ಲಿಯೆ ಅದು ತನ್ನಲ್ಲಿಯೆ ಆಳವಾಗಿ ಮುಳುಗಿ ಕಾಲಪ್ರಜ್ಞೆಯೆ ಹೊರಟು ಹೋಗುತ್ತಿತ್ತು. ಆಗಾಗ ಅವನು ತನ್ನ ದೇಹ ಪ್ರಜ್ಞೆಯನ್ನೂ ಕಳೆದುಕೊಳ್ಳುತ್ತಿದ್ದ. ಮನೆಯವರೆಲ್ಲ ಮಲಗಿದ ಮೇಲೆ ಅವನು ತನ್ನ ಕೊಠಡಿಯಲ್ಲಿ ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದ ಮತ್ತು ಅನೇಕ

ವೇಳೆ ಇಡೀ ರಾತ್ರಿಯನ್ನು ಧ್ಯಾನದಲ್ಲಿ ಕಳೆಯುತ್ತಿದ್ದ. ಇದರ ಪರಿಣಾಮವಾಗಿ ಒಂದು ದಿನ ನರೇಂದ್ರನಿಗೆ ಒಂದು ಅಪೂರ್ವ ದರ್ಶನವಾಯಿತು. ಇದನ್ನು ಮುಂದೊಮ್ಮೆ ಹೀಗೆ ವಿವರಿಸಿದರು :

9. "ನಾನು ನನ್ನ ಮನಸ್ಸನ್ನು ಎಲ್ಲ ವಸ್ತುಗಳಿಂದ ಪ್ರತ್ಯೇಕಿಸಿ ಸ್ಥಿರಗೊಳಿಸಿದಾಗ ಪ್ರಶಾಂತವಾದ ಆನಂದದ ಪ್ರವಾಹವೊಂದು ನನ್ನ ಮನಸ್ಸಿನಲ್ಲಿ ಹರಿಯತೊಡಗಿತು. ಇದರ ಪ್ರಭಾವದಿಂದ ಧ್ಯಾನದನಂತರವೂ ಕೂಡ ಬಹಳ ಕಾಲದವರೆಗೆ ನಾನು ಒಂದು ಅಮಲಿನ ಸ್ಥಿತಿಯಲ್ಲಿದ್ದೆ. ನನಗೆ ಆಸನವನ್ನು ಬಿಟ್ಟು ಮೇಲೇಳಲೇ ಮನಸ್ಸಾಗಲಿಲ್ಲ. ಒಂದು ದಿನ ಧ್ಯಾನದ ನಂತರ ನಾನು ಹಾಗೆ ಕುಳಿತುಕೊಂಡಿರುವಾಗ ಇದಕ್ಕಿದ್ದಂತೆಯೆ ಒಬ್ಬ ಸಂನ್ಯಾಸಿಯ ಅಸಾಧಾರಣ ಮೂರ್ತಿಯನ್ನು ಕಂಡೆ. ಎಲ್ಲಿಂದಲೊ ಬಂದ ಆ ಸಂನ್ಯಾಸಿ ನನ್ನಿಂದ ಸ್ವಲ್ಪ ದೂರದಲ್ಲಿಯೆ ನಿಂತಿದ್ದನು. ಅವನ ದಿವ್ಯಜ್ಯೋತಿ ಕೊಠಡಿಯನ್ನೆಲ್ಲ ಬೆಳಗುತ್ತಿತ್ತು. ಅವನು ಕಾವಿ ಧರಿಸಿದ್ದನು ಮತ್ತು ಕಮಂಡಲು ಹಿಡಿದಿದ್ದನು. ಅವನ ಮುಖದ ಮೇಲೆ ಎಲ್ಲಾ ವಸ್ತುಗಳ ವಿಚಾರದಲ್ಲಿ ಔದಾಸೀನ್ಯದಿಂದ ಉಂಟಾದ ಒಂದು ಅಪೂರ್ವ ಶಾಂತಿ ಮತ್ತು ಪ್ರಸನ್ನತೆ ರಾರಾಜಿಸುತ್ತಿತ್ತು. ನನಗಾಶ್ಚರ್ಯವಾಯಿತು. ಕೂಡಲೆ ನಾನು ಅವನೆಡೆಗೆ ಆಕರ್ಷಿತನಾದೆ. ನನಗೇನೊ ಹೇಳಬೇಕು ಎನ್ನುವಂತೆ ನನ್ನ ಮೇಲೆಯೆ ನೆಟ್ಟದೃಷ್ಟಿಯುಳ್ಳವನಾಗಿ ಅವನು ನಿಧಾನವಾಗಿ ಹೆಜ್ಜೆಯಿಡುತ್ತಾ ನನ್ನಡೆಗೆ ಬಂದನು. ಆದರೆ ನನಗೆ ಭಯವಾಯಿತು. ಸುಮ್ಮನಿರಲಾಗಲಿಲ್ಲ ನಾನು ಮೇಲೆದ್ದು ಬಾಗಿಲನ್ನು ತೆರೆದು ಬೇಗನೆ ಹೆಜ್ಜೆ ಹಾಕುತ್ತಾ ಕೊಠಡಿಯಿಂದ ಹೊರಬಂದೆ. 'ಯಾಕೆ ಈ ಮೂರ್ಖ ಭಯ ?' ಎಂದು ನಾನು ಮರುಕ್ಷಣವೇ ಯೋಚಿಸಿದೆ. ನಾನು ಧೈರ್ಯಮಾಡಿಕೊಂಡು ಆ ಸಂನ್ಯಾಸಿಯ ಮಾತನ್ನು ಕೇಳಲು ಮತ್ತೆ ಕೊಠಡಿಗೆ ಹೋದೆ. ಆದರೆ ಅಯ್ಯೋ ! ಅವನು ಕಣ್ಮರೆಯಾಗಿದ್ದ. ನಾನು ಬಹಳ ಹೊತ್ತು ಕಾದೆ, ಆದರೆ ಏನೂ ಪ್ರಯೋಜನವಾಗಲಿಲ್ಲ. ನಾನೆಂಥ ತಪ್ಪು ಮಾಡಿದೆ ? ಅವನು ಏನು ಹೇಳುತ್ತಾನೆ ಎಂಬುದನ್ನು ಕೇಳದೆಯೆ ಹೊರಟು ಹೋಗಿಬಿಟ್ಟೆನಲ್ಲ ಎಂದು ಮನಸ್ಸಿಗೆ ವ್ಯಥೆಯಾಯಿತು. ನಾನು ಅನೇಕ ಜನ ಸಂನ್ಯಾಸಿಗಳನ್ನು ನೋಡಿರುವೆನು. ಆದರೆ ಅಂದು ನಾನು ಆ ಮುಖದ ಮೇಲೆ ಕಂಡ ಆ ಅಪೂರ್ವ ಶೋಭೆಯನ್ನು ಬೇರೆ ಯಾರಲ್ಲಿಯೂ ಕಂಡಿಲ್ಲ. ಆ ಮುಖ ನನ್ನ ಹೃದಯದಲ್ಲಿ ಅಚ್ಚಳಿಯದೆ ನಿಂತಿದೆ. ಅದು ಭ್ರಮೆಯಾಗಿದ್ದಿರಬಹುದು. ಆದರೆ ನನಗೆ ಯಾವಾಗಲೂ ಅನ್ನಿಸುತ್ತದೆ ಅಂದು ನಾನು ಕಂಡದ್ದು ಬುದ್ಧನನ್ನು ಎಂದು."

## ಎಂಟನೆಯ ಅಧ್ಯಾಯ

## ದ್ವಿತೀಯ ಪಾದ

# ಸಂಸಾರ ಮತ್ತು ಶ್ರೀರಾಮಕೃಷ್ಣರ ಮೂಲಕ ನರೇಂದ್ರನಿಗೆ ಶಿಕ್ಷಣ

**1. ನರೇಂದ್ರನಿಗೆ ವಕೀಲ ವೃತ್ತಿ, ಶಿಕ್ಷಣ ಮತ್ತು ವಿವಾಹದ ಯೋಜನೆ. ಅಖಂಡ ಬ್ರಹ್ಮಚರ್ಯ ಪಾಲನೆ ಮಾಡಲು ಅವನಿಗೆ ಶ್ರೀರಾಮಕೃಷ್ಣರ ಉಪದೇಶ 2. ಅವನು ಸಂನ್ಯಾಸಿಯಾಗಬಹುದೆಂದು ಮನೆಯವರಿಗೆಲ್ಲ ಭಯ 3. ಮೊದಲಿನಂತೆಯೇ ನರೇಂದ್ರನು ಶ್ರೀರಾಮಕೃಷ್ಣರೆಡೆಗೆ ಬಂದುಹೋಗುತ್ತಿದ್ದನು; 4. ಅವರೊಡನೆ ತಾನು ಹೇಗೆ ಕಾಲ ಕಳೆದೆ ಎಂಬುದನ್ನು ನರೇಂದ್ರನು ವಿವರಿಸುತ್ತಾನೆ 5. ಭವನಾಥ ಮತ್ತು ಭಾರಾನಗರದ ಸ್ನೇಹಿತರು 6. ತಂದೆಯ ಮರಣ ಮತ್ತು ಸಾಂಸಾರಿಕ ದುಃಸ್ಥಿತಿ 7. ಅವನು ಕೆಲಸಕ್ಕಾಗಿ ಅಲೆಯುವುದು—ಜೀವನದ ಕಟು ಸತ್ಯದ ಅರಿವು 8. ಕಿತ್ತು ತಿನ್ನುವ ದಾರಿದ್ರ್ಯ 9. ಮಹಿಳೆಯರಿಂದ ಪ್ರಲೋಭನೆ 10. ದೇವರ ಹೆಸರನ್ನು ಹೇಳಿದ್ದಕ್ಕೆ ತಾಯಿಯಿಂದ ಭರ್ತ್ಸನೆ 11. ಅಭಿಮಾನದಿಂದ ನಾಸ್ತಿಕ ಬುದ್ಧಿ 12. ನರೇಂದ್ರನ ಅಧಃಪತನವನ್ನು ಭಕ್ತರೆಲ್ಲರೂ ನಂಬಿದರೂ ಶ್ರೀರಾಮಕೃಷ್ಣರು ಅನ್ಯಮನಸ್ಕರಾಗಿದ್ದರು 13. ಅವನಲ್ಲಿ ಘೋರ ಅಶಾಂತಿ 14. ಅದ್ಭುತ ದರ್ಶನ ದಿಂದ ನರೇಂದ್ರನಿಗೆ ಶಾಂತಿ 15. ಸಂನ್ಯಾಸಿಯಾಗಬೇಕೆಂಬ ಅವನ ಸಂಕಲ್ಪ ಮತ್ತು ಶ್ರೀರಾಮಕೃಷ್ಣರ ಭೇಟಿ 16. ಶ್ರೀರಾಮಕೃಷ್ಣರ ಪ್ರಾರ್ಥನೆಯ ಮೇರೆಗೆ ಮನೆ ಯನ್ನು ಬಿಡುವ ನಿರ್ಧಾರವನ್ನು ಕೈಬಿಡುತ್ತಾನೆ 17. ಜಗನ್ಮಾತೆಯ ಸಹಾಯದಿಂದ ದಾರಿದ್ರ್ಯ ನಿವಾರಣೆಯ ಪ್ರಯತ್ನ 18. ನರೇಂದ್ರನಿಗೆ ಜಗನ್ಮಾತೆಯ ದರ್ಶನವಾಗಿ ಪ್ರಪಂಚವನ್ನು ಮರೆಯುತ್ತಾನೆ 19. ಮೂರು ಬಾರಿ ಹಣಕ್ಕಾಗಿ ಪ್ರಾರ್ಥಿಸಲು ಹೋದರೂ ವಿವೇಕ ವೈರಾಗ್ಯವನ್ನೇ ಪ್ರಾರ್ಥಿಸುತ್ತಾನೆ 20. ಸಾದಾ ಊಟ ಬಟ್ಟೆಗೆ ಕೊರತೆಯುಂಟಾಗುವುದಿಲ್ಲವೆಂದು ಶ್ರೀರಾಮಕೃಷ್ಣರ ಆಶ್ವಾಸನೆ 21. ನರೇಂದ್ರನಿಗೆ ಮೂರ್ತಿ ಪೂಜೆಯಲ್ಲಿ ನಂಬಿಕೆಯುಂಟಾಗುತ್ತದೆ 22. ಇದರಿಂದ ಶ್ರೀರಾಮಕೃಷ್ಣರಿ ಗಾದ ಸಂತೋಷವನ್ನು ಕುರಿತು ವೈಕುಂಠನಾಥ ಸಂನ್ಯಾಲ 23. ಶ್ರೀರಾಮಕೃಷ್ಣರು ನರೇಂದ್ರನು ತಮ್ಮಿಂದ ಬೇರೆಯಲ್ಲ ಎಂಬುದನ್ನು ತಿಳಿಸಿಕೊಡುವುದು 24. ಶ್ರೀರಾಮ ಕೃಷ್ಣರ ನಿಃಸ್ವಾರ್ಥ ಪ್ರೀತಿಯನ್ನು ನರೇಂದ್ರನು ಅನುಭವಿಸಿದನು.**

1. ಹೀಗೆ ಏಕಾಂತವಾಸ ಅಧ್ಯಯನ ತಪಸ್ಸು ಮತ್ತು ದಕ್ಷಿಣೇಶ್ವರಕ್ಕೆ ಬಂದು ಹೋಗುವುದು ಇವುಗಳಲ್ಲಿ ನರೇಂದ್ರನ ಸಮಯವು ಕಳೆಯುತ್ತಿತ್ತು. ಅವನ ಭವಿಷ್ಯ ತ್ತನ್ನು ಚಿಂತಿಸುತ್ತಿದ್ದ ಅವನ ತಂದೆಯು ಕಲ್ಕತ್ತೆಯ ಪ್ರಸಿದ್ಧ ವಕೀಲನಾದ ನಿಮಾಯ್ ಚರಣ್ ಬಸುವಿನ ಹತ್ತಿರ ವಕೀಲ ವೃತ್ತಿಯನ್ನು ಕಲಿಯಲು ಅವನಿಗೆ ವ್ಯವಸ್ಥೆಯನ್ನು

ಮಾಡಿದ್ದನು. ಪುತ್ರನನ್ನು ಸಂಸಾರವಂದಿಗನನ್ನಾಗಿ ಮಾಡುವ ಉದ್ದೇಶದಿಂದ ಅವನಿಗೆ ಒಂದು ಯೋಗ್ಯ ವಧುವನ್ನು ಅರಸುತ್ತಿದ್ದನು. ಆದರೆ ವಿವಾಹವಾಗಲು ನರೇಂದ್ರನಿಗೆ ಇಚ್ಛೆ ಇಲ್ಲದುದರಿಂದ ಮತ್ತು ಯೋಗ್ಯ ವಧುವೂ ಕೂಡ ದೊರೆಯದಿದ್ದುದರಿಂದ ಅವನ ಆಸೆ ಪೂರ್ಣವಾಗಲಿಲ್ಲ. ರಾಮ್‌ತನು ಬಸು ಲೇನ್‌ನಲ್ಲಿ ಇದ್ದ ನರೇಂದ್ರನ ಅಧ್ಯಯನ ಗೃಹಕ್ಕೆ ಶ್ರೀರಾಮಕೃಷ್ಣರು ಆಗಾಗ ಇದ್ದಕ್ಕಿದ್ದ ಹಾಗೆಯೆ ಬಂದು ಬಿಡು ತ್ತಿದ್ದರು ಮತ್ತು ಸಾಧನೆ ಭಜನೆಯ ಸಂಬಂಧವಾಗಿ ಅನೇಕ ಉಪದೇಶಗಳನ್ನು ನೀಡು ತ್ತಿದ್ದರು. ತಂದೆ ತಾಯಿಗಳ ಕಳಕಳಿಯ ಒತ್ತಾಯಕ್ಕೆ ನರೇಂದ್ರನು ಎಲ್ಲಿ ವಿವಾಹ ಬಂಧನಕ್ಕೆ ಒಳಗಾಗಿ ಬಿಡುವನೊ ಎಂದು ಹೆದರಿ ಶ್ರೀರಾಮಕೃಷ್ಣರು ಅವನು ಬ್ರಹ್ಮ ಚರ್ಯ ಪಾಲಿಸುವುದಕ್ಕೆ ಉತ್ತೇಜನ ನೀಡುತ್ತಿದ್ದರು. ಅವರು ಹೇಳುತ್ತಿದ್ದರು : "ಹನ್ನೆರಡು ವರ್ಷ ಅಖಂಡ ಬ್ರಹ್ಮಚರ್ಯವನ್ನು ಪರಿಪಾಲಿಸಿದರೆ ಮಾನವನ ಮೇಧಾ ನಾಡಿಯು ತೆರೆಯುತ್ತದೆ. ಆಗ ಅವನ ಬುದ್ಧಿಯು ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ಗ್ರಹಿಸಲು ಸಮರ್ಥವಾಗುತ್ತದೆ. ಈ ರೀತಿಯ ಬುದ್ಧಿಯಿಂದಲೇ ಭಗವಂತನ ಪ್ರತ್ಯಕ್ಷ ದರ್ಶನವನ್ನು ಪಡೆಯಲು ಸಾಧ್ಯ. ಅವನು ಕೇವಲ ಇಂಥ ಬುದ್ಧಿಗೆ ಗೋಚರಿಸತಕ್ಕ ವನು."

2. ಶ್ರೀರಾಮಕೃಷ್ಣರೊಡನೆಯ ಘನಿಷ್ಠ ಸಂಬಂಧದ ಫಲವಾಗಿಯೆ ನರೇಂದ್ರನು ಮದುವೆಯಾಗಲು ಒಪ್ಪಲಿಲ್ಲ ಎಂದು ಮನೆಯ ಸ್ತ್ರೀಯರೆಲ್ಲರೂ ಆಗ ಭಾವಿಸುತ್ತಿದ್ದರು' ನರೇಂದ್ರನು ಹೇಳುತ್ತಿದ್ದನು : "ಒಂದು ದಿನ ಅಧ್ಯಯನ ಗೃಹಕ್ಕೆ ಬಂದು ಶ್ರೀರಾಮ ಕೃಷ್ಣರು ಬ್ರಹ್ಮಚರ್ಯ ಪಾಲನೆಯ ಬಗ್ಗೆ ನನಗೆ ಉಪದೇಶ ನೀಡುತ್ತಿದ್ದರು. ಆಗ ನನ್ನ ಅಜ್ಜಿ ಕದ್ದು ನಿಂತು ಈ ಮಾತುಗಳನ್ನೆಲ್ಲ ಕೇಳಿ ತಂದೆ ತಾಯಿಗಳಿಗೆ ತಿಳಿಸಿಬಿಟ್ಟಳು. ಸಂನ್ಯಾಸಿಯೊಡನೆ ಬೆರೆತು ನಾನೂ ಸಂನ್ಯಾಸಿಯಾಗಿಬಿಡುವೆನೆಂದು ಹೆದರಿ ಅಂದಿನಿಂದ ನನ್ನ ಮದುವೆಗೆ ಹೆಚ್ಚು ಪ್ರಯತ್ನ ಮಾಡತೊಡಗಿದರು. ಆದರೆ ಶ್ರೀರಾಮಕೃಷ್ಣರ ಪ್ರಬಲ ಇಚ್ಛೆಯ ವಿರುದ್ಧ ಅವರ ಪ್ರಯತ್ನವೆಲ್ಲ ನೀರಿನಲ್ಲಿ ಹೋಮ ಮಾಡಿದಂತಾ ಯಿತು. ಎಲ್ಲವೂ ಇತ್ಯರ್ಥವಾಗಿರುವಾಗ ಸಾಮಾನ್ಯ ವಿಷಯದಲ್ಲಿ ಎರಡೂ ಪಕ್ಷದವರಲ್ಲಿ ಮತಭೇದ ಉಂಟಾಗಿ ವಿವಾಹ ಸಂಬಂಧ ಒಮ್ಮೆಯೆ ಕಡಿದು ಹೋಗುತ್ತಿತ್ತು."

3. ನರೇಂದ್ರನು ದಕ್ಷಿಣೇಶ್ವರಕ್ಕೆ ಹೋಗುವುದು ಮನೆಯವರಿಗಾರಿಗೂ ರುಚಿಸ ದಿದ್ದರೂ ಈ ವಿಷಯದಲ್ಲಿ ಅವನನ್ನು ತಡೆಯುವ ಸಾಹಸಕ್ಕೆ ಯಾರೂ ಕೈಹಾಕಲಿಲ್ಲ. ತಂದೆತಾಯಿಗಳ ಪರಮಪ್ರೀತಿಯ ಪುತ್ರನಾದ ನರೇಂದ್ರನು ಬಾಲ್ಯಕಾಲದಿಂದಲೂ ಯಾವಾಗಲೂ ಯಾರ ನಿಷೇಧಕ್ಕೂ ತಲೆ ಬಾಗಿದವನಲ್ಲ ಮತ್ತು ಅವನು ಯೌವನಕ್ಕೆ ಕಾಲಿಡುವ ಹೊತ್ತಿಗೆ ಆಹಾರ ವಿಹಾರ ಮುಂತಾದ ಎಲ್ಲ ವಿಷಯಗಳಲ್ಲಿಯೂ ಅವನು ಸಂಪೂರ್ಣವಾಗಿ ಸ್ವತಂತ್ರನಾಗಿ ವರ್ತಿಸುತ್ತಿದ್ದ. ಬಾಲಕ ಅಥವಾ ಚಂಚಲ ಬುದ್ಧಿಯ ಯುವಕರನ್ನು ನಾವು ಹೇಗೆ ನಿಯಂತ್ರಿಸುತ್ತೇವೆಯೊ ಹಾಗೆ ಪ್ರಬಲ ಬುದ್ಧಿಯ ನರೇಂದ್ರ ನನ್ನು ನಿಯಂತ್ರಿಸಲು ಹೊರಟರೆ ಅದರ ಫಲ ವಿಪರೀತವಾಗಬಹುದೆಂಬುದು ಮನೆಯ

ವರಿಗೆಲ್ಲ ತಿಳಿದಿತ್ತು. ಆದ್ದರಿಂದ ಹಿಂದಿನಂತೆಯೇ ನರೇಂದ್ರನು ಶ್ರೀರಾಮಕೃಷ್ಣರೆಡೆಗೆ ಬಂದು ಹೋಗುತ್ತಿದ್ದನು.

4. ಈ ಸಮಯದಲ್ಲಿ ನರೇಂದ್ರನು ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರೊಡನೆ ಕಳೆದ ದಿನಗಳು ಮಧುರ ಸ್ಮೃತಿಯಾಗಿ ಅವನ ಜೀವನದುದ್ದಕೂ ಉಳಿದವು. ಅವನು ಹೇಳುತ್ತಿದ್ದನು : "ಶ್ರೀರಾಮಕೃಷ್ಣರೊಡನೆ ಎಂಥ ಆನಂದದಿಂದ ದಿನ ಕಳೆದೆ ಎಂಬುದನ್ನು ಬೇರೆಯವರಿಗೆ ತಿಳಿಸಿಕೊಡುವುದು ದುಷ್ಕರ. ಆಟ, ಹಾಸ್ಯ ಮುಂತಾದ ದೈನಂದಿನ ಸಾಮಾನ್ಯಕ್ರಿಯೆಗಳ ಮೂಲಕವೂ ಅವರು ನಿರಂತರವಾಗಿ ಉಚ್ಚ ಶಿಕ್ಷಣವನ್ನು ನೀಡುತ್ತಾ ನಮಗರಿವಿಲ್ಲದಂತೆಯೆ ನಮ್ಮ ಆಧ್ಯಾತ್ಮಿಕ ಜೀವನವನ್ನು ರೂಪಿಸಿದರು. ಈಗ ಇದನ್ನು ನೆನಸಿಕೊಂಡರೆ ನನ್ನ ಆಶ್ಚರ್ಯಕ್ಕೆ ಮಿತಿಯೆ ಇರುವುದಿಲ್ಲ. ಶಕ್ತಿಯುತನಾದ ಮಲ್ಲನು ಬಾಲಕನಿಗೆ ಕುಸ್ತಿಯನ್ನು ಕಲಿಸುವಾಗ ತನ್ನ ಶಕ್ತಿಯನ್ನು ತಡೆಹಿಡಿದು ಸ್ವಲ್ಪ ಮಾತ್ರ ಪ್ರದರ್ಶಿಸುತ್ತಾನೆ. ಇದಕ್ಕೆ ಕಾರಣ ಬಾಲಕನಿಗೆ ಕಲಿಸುವಾಗ ಅವನಿಗೆ ಆತ್ಮ ವಿಶ್ವಾಸ ಬರಲಿ ಎಂದು ತಾನೇ ಅವನ ಕೈಯಿಂದ ಸೋಲುತ್ತಾನೆ. ಹಾಗೆಯೆ ಶ್ರೀರಾಮ ಕೃಷ್ಣರೂ ನಮಗೆ ಕಲಿಸುವಾಗ ಇದೇ ಭಾವವನ್ನೇ ಅಳವಡಿಸಿಕೊಂಡರು. ಅವರು ಯಾವಾಗಲೂ 'ಬಿಂದುವಿನಲ್ಲಿ ಸಿಂಧುವನ್ನು' ಕಾಣುತ್ತಿದ್ದರು. ಅವರು ತಮ್ಮ ಒಳದೃಷ್ಟಿ ಯಿಂದ ನಮ್ಮಲ್ಲಿ ಅಂತರ್ಹಿತವಾಗಿದ್ದ ಆಧ್ಯಾತ್ಮಿಕ ಬೀಜವನ್ನು ಗುರುತಿಸಿದರು ಮತ್ತು ಅದು ಮುಂದೆ ಹೇಗೆ ಹೆಮ್ಮರವಾಗಿ ಬೆಳೆದು ಫಲಪುಷ್ಪಗಳಿಂದ ಶೋಭಿಸುವುದು ಎಂಬ ಭವಿಷ್ಯತ್ ಸತ್ಯವನ್ನೂ ಕಂಡಿದ್ದರು. ಆದ್ದರಿಂದ ನಮ್ಮನ್ನು ಎಲ್ಲಾ ರೀತಿಯಿಂದಲೂ ಎಲ್ಲ ಸಮಯದಲ್ಲಿಯೂ ಪ್ರಶಂಸಿಸುತ್ತಾ ಉತ್ತೇಜನ ನೀಡುತ್ತಿದ್ದರು. ನಮ್ಮ ಪ್ರತಿಯೊಂದು ಕಾರ್ಯಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದರು. ನಾವು ಆಸೆಗಳ ಬಲೆಗೆ ಸಿಕ್ಕಿ ಜೀವ ನದ ಗುರಿಯನ್ನು ಮುಟ್ಟಲು ವಿಫಲರಾಗಬಹುದೆಂದು ನಮ್ಮನ್ನು ಒಂದು ನಿಯಂತ್ರಣ ದಲ್ಲಿರಿಸಿದ್ದರು. ಆದರೆ ಅವರು ನಮ್ಮನ್ನು ಅಷ್ಟು ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದರು ಮತ್ತು ಅಷ್ಟೊಂದು ಪರಿಣಾಮಕಾರಿಯಾಗಿ ನಿಯಂತ್ರಿಸುತ್ತಿದ್ದರು ಎಂಬುದನ್ನು ನಮಗೆ ತಿಳಿಯಲು ಸಾಧ್ಯವಾಗಲೇ ಇಲ್ಲ. ಹೀಗೆ ನಮಗೆ ಉಪದೇಶಿಸುವುದರಲ್ಲಿ ನಮ್ಮ ಜೀವನ ವನ್ನು ರೂಪಿಸುವುದರಲ್ಲಿ ಅವರು ಅಸಾಮಾನ್ಯವಾದ ಕೌಶಲವನ್ನು ವ್ಯಕ್ತಪಡಿಸಿದರು. ನಮ್ಮ ಮನಸ್ಸು ಧ್ಯಾನದ ವೇಳೆ ಸ್ವಲ್ಪ ಏಕಾಗ್ರಗೊಂಡರೂ ಸರಿಯಾದ ಧ್ಯೇಯವಸ್ತು ಇಲ್ಲದೆ ಇದ್ದುದರಿಂದ ಧ್ಯಾನದಲ್ಲಿ ಆಳವಾಗಿ ಮುಳುಗಲು ಆಗುತ್ತಿರಲಿಲ್ಲ. ಇದಕ್ಕೆ ನಾವೇನು ಮಾಡಬೇಕೆಂದು ಅವರನ್ನು ಕೇಳಿದಾಗ ಅವರು ತಾವು ಇಂತಹ ಪರಿಸ್ಥಿತಿಯಲ್ಲಿ ಏನು ಮಾಡಿದರೆಂಬುದನ್ನು ವಿವರಿಸಿ ಹೇಳಿ ಯುಕ್ತ ಸಲಹೆಯನ್ನು ನೀಡಿದರು. ನಾನು ರಾತ್ರಿಯ ಕೊನೆಯ ಪ್ರಹರದಲ್ಲಿ ಧ್ಯಾನಕ್ಕೆ ಕುಳಿತಾಗ ಆಲಂಬಜಾರ್ ಸೆಣಬಿನ ಗಿರಣಿಯ ಶಿಳ್ಳಿನ ಶಬ್ದ ಏಕಾಗ್ರತೆಯನ್ನು ಕೆಡಿಸುತ್ತಿತ್ತು. ಇದನ್ನು ಅವರಿಗೆ ತಿಳಿಸಿದಾಗ ಆ ಶಿಳ್ಳಿನ ಶಬ್ದದ ಮೇಲೆಯೆ ಮನಸ್ಸನ್ನು ಏಕಾಗ್ರಗೊಳಿಸಲು ಹೇಳಿದರು. ಹಾಗೆ ಮಾಡಿದಾಗ ಉತ್ತಮ ಪ್ರತಿಫಲವೂ ದೊರೆಯಿತು. ಇನ್ನೊಂದು ದಿನ ಧ್ಯಾನದ ಸಮಯದಲ್ಲಿ ಶರೀರ

ವನ್ನು ಮರೆತು ಮನಸ್ಸನ್ನು ಧ್ಯೇಯವಸ್ತುವಿನಲ್ಲಿ ಏಕಾಗ್ರಗೊಳಿಸಲು ಯಾವುದೋ ಒಂದು ತಡೆಯಿರುವಂತೆ ಅನುಭವವಾಯಿತು. ಅವರಿಗೆ ಇದನ್ನು ತಿಳಿಸಿದಾಗ, ತಮಗೆ ವೇದಾಂತಸಾಧನೆಯ ಸಮಯದಲ್ಲಿ ಹಾಗೇ ಆದಾಗ ತೋತಾಪುರಿಯು ಭ್ರೂಮಧ್ಯದಲ್ಲಿ ಹೇಗೆ ಧ್ಯಾನಮಾಡಲು ತಿಳಿಸಿಕೊಟ್ಟನೊ ಆ ವಿಷಯವನ್ನು ತಿಳಿಸಿ ತಮ್ಮ ಉಗುರಿನ ಮೂಲಕ ನನ್ನ ಭ್ರೂಮಧ್ಯದಲ್ಲಿ ಘಾಯವನ್ನು ಮಾಡಿ ಈ ವೇದನೆಯ ಮೇಲೆ ಮನಸ್ಸನ್ನು ಏಕಾಗ್ರಗೊಳಿಸು ಎಂದು ಹೇಳಿದರು. ಈ ರೀತಿ ಘಾಯದ ನೋವಿನ ಮೇಲೆ ನನಗೆ ಇಷ್ಟ ಬಂದಷ್ಟು ಕಾಲವೂ ನಿರಂತರವಾಗಿ ಮನಸ್ಸನ್ನು ಇರಿಸಲು ಸಾಧ್ಯ ಎಂಬುದನ್ನು ಕಂಡುಕೊಂಡೆ. ದೇಹದ ಎಲ್ಲಾ ಭಾಗಗಳ ಅಸ್ತಿತ್ವವನ್ನೂ ನಾನು ಸಂಪೂರ್ಣ ಮರೆತುಬಿಟ್ಟೆ. ಇನ್ನು ಅವು ನನ್ನ ಮನಸ್ಸನ್ನು ವಿಕ್ಷಿಪ್ತಗೊಳಿಸುವುದಂತೂ ದೂರದ ಮಾತು. ಶ್ರೀರಾಮಕೃಷ್ಣರ ಸಾಧನಾಸ್ಥಳವಾದ ಪಂಚವಟಿಯು ನಮಗೆ ಧ್ಯಾನ ಮತ್ತಿತರ ಆಧ್ಯಾತ್ಮಿಕ ಸಾಧನೆಗಳಿಗೆ ಅತ್ಯಂತ ಪ್ರಶಸ್ತ ಸ್ಥಾನವಾಗಿತ್ತು. ಬರೀ ಸಾಧನೆಯೆ ಏಕೆ, ಅಲ್ಲಿ ನಾವು ಹೆಚ್ಚಿನ ಸಮಯವನ್ನು ಆಟ ಪರಿಹಾಸ್ಯಗಳಲ್ಲಿ ಕಳೆದೆವು. ಅಂತಹ ಸಮಯಗಳಲ್ಲಿ ಶ್ರೀರಾಮಕೃಷ್ಣರೂ ನಮ್ಮೊಡನೆ ಸೇರಿ ನಮ್ಮ ಸಂತೋಷವನ್ನು ಹೆಚ್ಚಿಸುತ್ತಿದ್ದರು. ಅಲ್ಲಿ ನಾವು ಮರ ಹತ್ತುತ್ತಿದ್ದೆವು. ಮಾಧವೀ ಬಳ್ಳಿಯನ್ನು ಹಿಡಿದು ಜೋಕಾಲೆ ಆಡುತ್ತಿದ್ದೆವು. ಕೆಲವೊಮ್ಮೆ ಅಲ್ಲಿಯೆ ಅಡಿಗೆ ಮಾಡಿ ವನಭೋಜನ ಮಾಡುತ್ತಿದ್ದೆವು. ವನಭೋಜನದ ಮೊದಲನೆ ದಿನ ನಾನು ಸ್ವತಃ ಅಡಿಗೆ ಮಾಡಿದೆ. ಅಡುಗೆ ಮಾಡುವುದನ್ನು ನೋಡಿ ತಾವೇ ಆಹಾರವನ್ನು ಸ್ವೀಕರಿಸಿದರು. ಅವರು ಬ್ರಾಹ್ಮಣೇತರರು ಮಾಡಿದ ಆಹಾರವನ್ನು ಸ್ವೀಕರಿಸುವುದಿಲ್ಲ ಎಂದು ನನಗೆ ತಿಳಿದಿತ್ತು. ಆದ್ದರಿಂದ ನಾನು ಅವರಿಗಾಗಿ ದೇವಸ್ಥಾನದ 'ಪ್ರಸಾದೀ' ಆಹಾರದ ವ್ಯವಸ್ಥೆ ಮಾಡುತ್ತಿದ್ದೆ. ಆದರೆ ಶ್ರೀರಾಮಕೃಷ್ಣರು ಇದನ್ನು ನಿಷೇಧಿಸಿ ಹೇಳಿದರು : 'ನಿನ್ನಂತಹ ಶುದ್ಧ ಸತ್ತ್ವಗುಣ ಉಳ್ಳವರ ಕೈಯಿಂದ ತಯಾರಿಸಿದ ಆಹಾರವನ್ನು ಉಂಡರೆ ಯಾವ ದೋಷವೂ ತಗಲುವುದಿಲ್ಲ.' ನಾನು ಎಷ್ಟೇ ಆಕ್ಷೇಪಿಸಿದರೂ ಅವರು ಕೇಳದೆ ಅಂದು ನಾನು ತಯಾರಿಸಿದ ಆಹಾರವನ್ನೇ ಸ್ವೀಕರಿಸಿದರು."

5. ಈ ನಡುವೆ ಭವನಾಥ ಎಂಬ ಒಬ್ಬ ಸುಂದರ ಯುವಕ ಭಕ್ತನು ಶ್ರೀರಾಮಕೃಷ್ಣರೆಡೆಗೆ ಬರತೊಡಗಿದನು. ಅವನಿಗೂ ಮತ್ತು ನರೇಂದ್ರನಾಥನಿಗೂ ತುಂಬಾ ಸೌಹಾರ್ದ ಉಂಟಾಯಿತು. ನಮ್ರತೆ, ಸರಳತೆ, ಭಕ್ತಿ ವಿಶ್ವಾಸಗಳಿಂದ ಕೂಡಿದ ಭವನಾಥನು ಶ್ರೀರಾಮಕೃಷ್ಣರ ವಿಶೇಷ ಮೆಚ್ಚಿಕೆಗೆ ಪಾತ್ರನಾದನು. ಅವನ ಸ್ತ್ರೀ ಸಹಜ ಕೋಮಲ ಸ್ವಭಾವ ಮತ್ತು ನರೇಂದ್ರನಾಥನ ಮೇಲಿದ್ದ ವಿಶೇಷ ಪ್ರೀತಿ ಇವುಗಳನ್ನು ನೋಡಿ ಶ್ರೀರಾಮಕೃಷ್ಣರು ಆಗಾಗ "ಹಿಂದಿನ ಜನ್ಮದಲ್ಲಿ ನೀನು ನರೇಂದ್ರನ ಪತ್ನಿಯಾಗಿದ್ದಿರಬೇಕು" ಎಂದು ಹಾಸ್ಯ ಮಾಡುತ್ತಿದ್ದರು ಭವನಾಥನು ವರಾಹ ನಗರದಲ್ಲಿ ವಾಸಿಸುತ್ತಿದ್ದನು. ಅವಕಾಶ ದೊರೆತಾಗಲೆಲ್ಲ ನರೇಂದ್ರನಾಥನನ್ನು ತನ್ನ ಮನೆಗೆ ಆಹ್ವಾನಿಸಿ ತಿಂಡಿ ತಿನಿಸುಗಳನ್ನು ಕೊಡುತ್ತಿದ್ದನು. ಅವನ ನೆರೆಯವನಾದ ಸಾತ್‌ಕೋಡಿ ಲಾಹರಿ ನರೇಂದ್ರ

ನಿಗೆ ತುಂಬಾ ಪರಿಚಿತ ಮತ್ತು ದಾಶರಥಿ ಸನ್ಯಾಲನು ಅವನ ಸಹಪಾಠಿಯಾಗಿದ್ದನು. ಇವರು ನರೇಂದ್ರನು ಸಿಕ್ಕಿದರೆ ಸಾಕು, ಹಗಲೂ ರಾತ್ರಿ ಅವನೊಡನೆ ಕಾಲ ಕಳೆಯು ತ್ತಿದ್ದರು. ಹೀಗೆ ದಕ್ಷಿಣೇಶ್ವರಕ್ಕೆ ಹೋಗಿ ಬರುವಾಗ ಮತ್ತು ಕೆಲವೊಮ್ಮೆ ವಿಶೇಷ ರೀತಿ ಯಲ್ಲಿ ಆಹ್ವಾನಿಸಲ್ಪಟ್ಟಾಗ ನರೇಂದ್ರನಾಥನು ವರಾಹ ನಗರದ ಈ ಎಲ್ಲ ಸ್ನೇಹಿತರೊಡನೆ ಮಧ್ಯೆ ಮಧ್ಯೆ ಕೆಲವು ಗಂಟೆಗಳು ಅಥವಾ ಒಂದೆರಡು ದಿನಗಳು ಕಳೆಯುತ್ತಿದ್ದನು.

6. ೧೮೮೪ ರಲ್ಲಿ ಬಿ. ಎ. ಪರೀಕ್ಷೆಯ ಫಲಿತಾಂಶ ಪ್ರಕಟವಾಗುವುದಕ್ಕೆ ಸ್ವಲ್ಪ ಮುಂಚೆ ನರೇಂದ್ರನಾಥನ ಜೀವನದಲ್ಲಿ ಒಂದು ವಿಶೇಷ ಪರಿವರ್ತನೆ ಉಂಟಾಯಿತು. ತೀವ್ರ ಪರಿಶ್ರಮದಿಂದ ಅವನ ತಂದೆಯ ದೇಹ ಆಗಲೇ ತುಂಬಾ ಬಳಲಿಹೋಗಿತ್ತು. ಈಗ ಇದ್ದಕ್ಕಿದ್ದಂತೆಯೆ ಒಂದು ದಿನ ರಾತ್ರಿ ಸುಮಾರು ಹತ್ತು ಗಂಟೆಯ ಹೊತ್ತಿಗೆ ಹೃದಯಾಘಾತದಿಂದ ಮೃತ್ಯುವಶನಾದನು. ನರೇಂದ್ರನು ಅಂದು ವರಾಹನಗರದ ತನ್ನ ಸ್ನೇಹಿತರೊಡನೆ ಇದ್ದನು. ರಾತ್ರಿ ಸುಮಾರು ಹನ್ನೊಂದು ಗಂಟೆಯವರೆಗೂ ಭಜನಾದಿ ಗಳಲ್ಲಿ ನಿರತನಾಗಿದ್ದು, ಊಟವನ್ನು ಮುಗಿಸಿ ಅನೇಕ ವಿಷಯಗಳ ಬಗ್ಗೆ ಮಾತನಾಡುತ್ತಾ ಮಲಗಿಕೊಂಡಿದ್ದರು. ಅವನ ಸ್ನೇಹಿತನಾದ ಹೇಮಾಲಿಯು ರಾತ್ರಿ ಸುಮಾರು ಎರಡು ಗಂಟೆಯ ಹೊತ್ತಿಗೆ ಈ ದುಃಖವಾರ್ತೆಯನ್ನು ಅವನಿಗೆ ಅರುಹಿ ಕೂಡಲೇ ಅವನನ್ನು ಕಲ್ಕತ್ತೆಗೆ ಕರೆದುಕೊಂಡು ಹೋದನು. ಮನೆಗೆ ಹಿಂದಿರುಗಿ ನರೇಂದ್ರನಾಥನು ತಂದೆಯ ಕೊನೆಯ ಸಂಸ್ಕಾರಗಳನ್ನೆಲ್ಲ ಮುಗಿಸಿದನು. ಅನಂತರ ತಿಳಿದು ಬಂತು, ಅವರ ಸಂಸಾರವು ಅತ್ಯಂತ ಶೋಚನೀಯ ಸ್ಥಿತಿಯಲ್ಲಿದೆ ಎಂದು. ತಂದೆಯು ಹಣವನ್ನು ಕೂಡಿಟ್ಟಿರುವು ದಂತೂ ದೂರದ ಮಾತು, ವರಮಾನಕ್ಕಿಂತಲೂ ಅಧಿಕವಾಗಿ ಖರ್ಚು ಮಾಡಿ ಸಾಲ ಮಾಡಿದ್ದನು. ಅವನ ಸಹಾಯವನ್ನು ಪಡೆದು ಉತ್ತಮ ಸ್ಥಿತಿಯಲ್ಲಿದ್ದ ಅವನ ನೆಂಟ ರಿಷ್ಟರೆ ಈಗ ಶತ್ರುಗಳಾಗಿ ಅವರನ್ನು ಮನೆಯಿಂದ ಓಡಿಸಲು ಪ್ರಯತ್ನ ಪಟ್ಟರು. ಸಂಸಾರದಲ್ಲಿ ಈಗ ವರಮಾನವೇ ಇಲ್ಲವೆನ್ನಬಹುದು. ಈ ಪರಿಸ್ಥಿತಿಯಲ್ಲಿ ಆರು ಏಳು ಜನರ ಜೀವನಯಾಪನೆಯಾಗಬೇಕಾಗಿದೆ. ಇದುವರೆಗೂ ಸುಖ ಜೀವನವನ್ನು ನಡೆಸಿದ್ದ ನರೇಂದ್ರನಾಥನು ತಬ್ಬಿಬ್ಬಾದನು. ಕೆಲಸಕ್ಕಾಗಿ ಎಲ್ಲಾ ಕಡೆ ಅರಸ ತೊಡಗಿದನು. ಅನಿಷ್ಟ ಸಮಯದಲ್ಲಿ ಮಾನವನು ಎಷ್ಟೇ ಪ್ರಯತ್ನ ಪಟ್ಟರೂ ವಿಫಲವಾಗುವುದು. ನರೇಂದ್ರ ನಿಗೂ ಎಲ್ಲಾ ಕಡೆಗಳಿಂದಲೂ ನಿರಾಸೆಯೆ ಕಾದಿತ್ತು.

7. ತಂದೆಯು ತೀರಿ ಹೋಗಿ ಮೂರು ನಾಲ್ಕು ತಿಂಗಳುಗಳಾದರೂ ದುಃಖದ ದುರ್ದಿನಗಳು ಕೊನೆಗೊಳ್ಳುವ ಸೂಚನೆಗಳು ಕಂಡುಬರಲಿಲ್ಲ. ನಿಜವಾಗಿಯೂ ಅವನ ಜೀವನವನ್ನು ಇಂಥ ಗಾಢಾಂಧಕಾರವು ಎಂದಾದರೂ ಆವರಿಸಿತ್ತೇ ಎಂಬುದು ಸಂದೇಹ. ಈ ಸಮಯದ ತನ್ನ ಸ್ಥಿತಿಯನ್ನು ನರೇಂದ್ರನು ಹೀಗೆ ವರ್ಣಿಸುತ್ತಾನೆ : "ಸತ್ತ ಸೂತಕ ಕಳೆಯುವುದಕ್ಕೆ ಮುಂಚೆಯೆ ನಾನು ಕೆಲಸ ಹುಡುಕಲು ಅಲೆಯ ತೊಡಗಿದೆ. ಆಹಾರ ವಿಲ್ಲದೆ ಬರಿಗಾಲಿನಲ್ಲಿ ಉದ್ಯೋಗದ ಅರ್ಜಿ ಹಿಡಿದುಕೊಂಡು ಮಧ್ಯಾಹ್ನದ ಉರಿಬಿಸಿಲಿ ನಲ್ಲಿ ಆಫೀಸಿನಿಂದ ಆಫೀಸಿಗೆ ಅಲೆಯುತ್ತಿದ್ದೆ. ತುಂಬಾ ಹತ್ತಿರದ ಸ್ನೇಹಿತರು ಕೆಲವರು

ನನ್ನ ದುಃಖದಲ್ಲಿ ಭಾಗಿಗಳಾಗಿ ಕೆಲವೊಮ್ಮೆ ನನ್ನೊಡನೆ ಇರುತ್ತಿದ್ದರು. ಕೆಲವೊಮ್ಮೆ ಸಾಧ್ಯವಾಗುತ್ತಿರಲಿಲ್ಲ. ಆದರೆ ಎಲ್ಲೇ ಹೋದರೂ ವಿಫಲ ಮನೋರಥನಾಗಿ ಹಿಂತಿರುಗ ಬೇಕಾಗಿತ್ತು. ಇದು ನನಗೆ ಸಂಸಾರದ ಪ್ರಥಮ ಪರಿಚಯ. ಸ್ವಾರ್ಥಶೂನ್ಯ ಸಹಾನು ಭೂತಿ ಎಂಬುದು ಇಲ್ಲಿ ಅತಿ ವಿರಳ. ದುರ್ಬಲರಿಗೂ, ದರಿದ್ರರಿಗೂ ಇಲ್ಲಿ ಸ್ಥಾನವಿಲ್ಲ ಎಂದರಿವಾಯಿತು. ಎರಡು ದಿನಗಳ ಹಿಂದೆ ನನಗೆ ಏನಾದರೂ ಸಹಾಯ ಮಾಡಲು ಅವಕಾಶ ಸಿಕ್ಕಿದರೆ ಸಾಕು ಎಂದು ತಿಳಿಯುತ್ತಿದ್ದವರು ಈಗ ನನ್ನನ್ನು ನೋಡಿದರೆ ಮುಖ ತಿರುಗಿಸಿಕೊಂಡು ಹೋಗುತ್ತಿದ್ದರು. ಸಹಾಯ ಮಾಡುವ ಶಕ್ತಿಯಿದ್ದರೂ ಹಿಂದೇಟು ಹಾಕುತ್ತಿದ್ದರು. ಇದನ್ನೆಲ್ಲ ನೋಡಿ ಈ ಸಂಸಾರವೊಂದು ರಾಕ್ಷಸ ಸೃಷ್ಟಿ ಎಂದೆನಿಸು ತ್ತಿತ್ತು. ಈ ಸಮಯದಲ್ಲಿ ಒಂದು ದಿನ ಬಿಸಿಲಿನಲ್ಲಿ ಅಲೆಯುತ್ತಾ ಕಾಲುಗಳಲ್ಲಿ ಬೊಕ್ಕೆ ಗಳುಂಟಾದುವು. ತುಂಬಾ ಆಯಾಸವಾಗಿ ಮೈದಾನದಲ್ಲಿ ಆಕ್ಟರ್‌ಲೋನಿ ಮಾನ್ಯು ಮೆಂಟಿನ ನೆರಳಿನಲ್ಲಿ ಕುಳಿತುಕೊಂಡೆ. ಆಗ ಒಂದಿಬ್ಬರು ಸ್ನೇಹಿತರು ನನ್ನೊಡನಿದ್ದರು ಅಥವಾ ಇದ್ದಕ್ಕಿದ್ದಂತೆಯೆ ಬಂದಿರಬಹುದು. ಅವರಲ್ಲಿ ಒಬ್ಬನು ನನಗೆ ಸಮಾಧಾನವನ್ನು ಉಂಟುಮಾಡಲು ಒಂದು ಹಾಡನ್ನು ಹಾಡಿದನು: 'ಕೃಪಾಘನ ಬ್ರಹ್ಮನ ಉಸಿರು ಬೀಸು ತಿಹುದು ಗಾಳಿಯಾಗಿ' ಇತ್ಯಾದಿ. ಆ ಹಾಡನ್ನು ಕೇಳಿ ನನಗಾರೊ ತಲೆಯ ಮೇಲೆ ಬಲ ವಾಗಿ ಹೊಡೆದಂತಾಯಿತು. ತಾಯಿ ಮತ್ತು ಸೋದರ, ಸೋದರಿಯರ ಕರುಣಾಮಯ ದುಃಸ್ಥಿತಿಯು ಮನಸ್ಸಿಗೆ ಬಂತು. ಮನಸ್ಸು ವಿಕ್ಷಿಪ್ತಗೊಂಡು, ನಿರಾಶೆಯಿಂದಲೂ ಅಭಿ ಮಾನದಿಂದಲೂ ನಾನು ಹೇಳಿದೆ 'ಸಾಕು ಸಾಕು ನಿಲ್ಲಿಸು, ತಮ್ಮ ನೆಂಟರಿಷ್ಟರು ಹಸಿವಿನ ಬೇಗೆಯಿಂದ ಕಷ್ಟಪಡದೆ ಇರುವಾಗ, ಬಟ್ಟೆಯ ಅಭಾವವನ್ನು ಕಂಡರಿಯದೆ ಇರುವ ವಿಲಾಸ ಜೀವನವನ್ನು ನಡೆಸುವವರಿಗೆ ಈ ರೀತಿಯ ಕಲ್ಪನೆ ತುಂಬ ಮಧುರವೆನಿಸ ಬಹುದು. ನನಗೂ ಒಮ್ಮೆ ಹಾಗೆಯೆ ಅನ್ನಿಸುತ್ತಿತ್ತು. ಕಠೋರ ಸತ್ಯದ ಮುಂದೆ ಈಗ ಇದು ವ್ಯಂಗ್ಯವಾಗಿ ತೋರುತ್ತಿದೆ.'

8. "ನನ್ನ ಈ ಮಾತನ್ನು ಕೇಳಿ ಆ ಸ್ನೇಹಿತನಿಗೆ ತುಂಬಾ ಬೇಸರವಾಗಿರಬೇಕು. ದಾರಿದ್ರ್ಯದ ತೀವ್ರವೇದನೆಯಿಂದ ಆ ಮಾತು ಹೊರಬಂದಿತ್ತು ಎಂಬುದನ್ನು ಅವನು ಹೇಗೆ ತಾನೆ ತಿಳಿದಾನು ? ಬೆಳಗ್ಗೆ ಎದ್ದು ಅಂದು ಊಟಕ್ಕೆ ಸಾಕಷ್ಟು ಇಲ್ಲ ಎಂಬುದನ್ನು ಗುಪ್ತವಾಗಿ ವಿಚಾರಿಸಿ ತಿಳಿಯುತ್ತಿದ್ದೆ. ಅಂದು 'ನನಗೆ ಆಹ್ವಾನವಿದೆ' ಎಂದು ತಾಯಿಗೆ ಹೇಳಿ ಹೊರಗೆ ಹೊರಟುಹೋಗುತ್ತಿದ್ದೆ. ಕೆಲವು ದಿನ ಏನಾದರೂ ಸ್ವಲ್ಪ ತಿಂದು ಮತ್ತೆ ಕೆಲವು ದಿನ ಏನೂ ತಿನ್ನದೆಯೆ ಕಾಲ ಕಳೆಯುತ್ತಿತ್ತು. ಅಭಿಮಾನದಿಂದಾಗಿ ಇದನ್ನು ನಾನು ಮನೆಯವರಿಗೂ ತಿಳಿಸುತ್ತಿರಲಿಲ್ಲ, ಇತರರಿಗೂ ತಿಳಿಸುತ್ತಿರಲಿಲ್ಲ. ಶ್ರೀಮಂತ ಸ್ನೇಹಿತರನೇಕರು ನನ್ನನ್ನು ಮೊದಲಿನಂತೆಯೆ ತಮ್ಮ ಮನೆಗೆ ಕರೆದುಕೊಂಡು ಹೋಗು ತ್ತಿದ್ದರು ಮತ್ತು ನನ್ನ ಮೂಲಕ ಸಂಗೀತ ಹಾಡಿಸುತ್ತಿದ್ದರು. ತಪ್ಪಿಸಿಕೊಳ್ಳಲಾಗದೆ ಆಗಾಗ ಅವರ ಮನೆಗೆ ಹೋಗಿ ಅವರಿಗೆ ಮನರಂಜನೆ ನೀಡುತ್ತಿದ್ದೆ. ಆದರೆ ನನ್ನ ಆಂತರಿಕ ವಿಷಯವನ್ನು ಮಾತ್ರ ಹೊರಗೆಡಹುತ್ತಿರಲಿಲ್ಲ. ಅವರೂ ಕೂಡ ತಾವಾಗಿಯೇ ಅದನ್ನು

ತಿಳಿಯುವ ಪ್ರಯತ್ನ ಮಾಡಲಿಲ್ಲ. ಅವರಲ್ಲಿ ಒಬ್ಬಿಬ್ಬರು ಕೆಲವೊಮ್ಮೆ 'ನೀನು ಇಂದು ತುಂಬಾ ಖಿನ್ನನಾಗಿರುವಂತಿದೆಯಲ್ಲ, ದುರ್ಬಲನಾಗಿ ಕಾಣುತ್ತೀಯಲ್ಲ ಯಾಕೆ ?' ಎಂದು ವಿಚಾರಿಸುತ್ತಿದ್ದರು. ಒಬ್ಬ ಸ್ನೇಹಿತನು ನನಗೆ ತಿಳಿಯದಂತೆ ಇತರರ ಮೂಲಕ ನಮ್ಮ ಪರಿಸ್ಥಿತಿಯನ್ನು ಅರಿತುಕೊಂಡು, ತನ್ನ ಹೆಸರು ಹೇಳಿಕೊಳ್ಳದೆ ನನ್ನ ತಾಯಿಗೆ ಆಗಾಗ ಹಣ ಕಳುಹಿಸುತ್ತಾ ನನ್ನನ್ನು ಚಿರಋಣಿಯನ್ನಾಗಿ ಮಾಡಿರುವನು.

9. "ನನ್ನ ಕೆಲವು ಬಾಲ್ಯ ಸ್ನೇಹಿತರು ಚಾರಿತ್ರ್ಯಹೀನರಾಗಿ ದುರ್ಮಾರ್ಗದಲ್ಲಿ ಹಣ ಸಂಪಾದಿಸುತ್ತಿದ್ದರು. ಅವರಲ್ಲಿ ಕೆಲವರಿಗೆ ನನ್ನ ಬಡತನದ ವಿಷಯ ತಿಳಿದು ನನ್ನನ್ನು ಅವರ ಗುಂಪಿಗೆ ಸೆಳೆಯಲು ಪ್ರಯತ್ನಿಸಿದರು. ಅವರಲ್ಲಿಯೂ ಕೆಲವರು ನನ್ನಂತೆಯೆ ದುಃಸ್ಥಿತಿಗೀಡಾಗಿ ಬೇರೆ ದಾರಿಗಾಣದೆ ಇಂಥ ಹೀನ ಸ್ಥಿತಿಗೆ ಇಳಿದಿದ್ದರು. ಅವರು ನಿಜವಾಗಿಯೂ ನನಗಾಗಿ ವ್ಯಥೆ ಪಟ್ಟುದನ್ನು ಕಂಡೆ. ಮಹಾಮಾಯೆಯೂ ಕೂಡ ಈಗ ಸುಮ್ಮನೆ ಕುಳಿತುಕೊಳ್ಳಲಿಲ್ಲ. ನನ್ನನ್ನು ಪ್ರಲೋಭನೆಗೊಳಪಡಿಸಲು ಆಕೆಗೆ ಒಂದು ಸದವಕಾಶ ದೊರಕಿತು. ಓರ್ವ ಶ್ರೀಮಂತ ಮಹಿಳೆ ನನ್ನ ಮೇಲೆ ಬಹಳ ಹಿಂದಿನಿಂದಲೂ ಕೆಟ್ಟ ದೃಷ್ಟಿ ಇಟ್ಟಿದ್ದಳು. ಇದೇ ತಕ್ಕ ಸಮಯವೆಂದು ಭಾವಿಸಿ ಆಸ್ತಿ ಕೊಡುವುದಾಗಿ ಹೇಳಿ ತನ್ನನ್ನು ಮದುವೆ ಮಾಡಿಕೊಳ್ಳಬೇಕೆಂದು ಹೇಳಿ ಕಳುಹಿಸಿದಳು. ಕಟುವಾಗಿಯೂ ದೃಢವಾಗಿಯೂ ಆಕೆಯ ಪ್ರಸ್ತಾಪವನ್ನು ತಿರಸ್ಕರಿಸಬೇಕಾಯಿತು. ಇನ್ನೋರ್ವ ಮಹಿಳೆ ನನ್ನನ್ನು ಮೋಹಿಸಲು ಬಂದಾಗ ನಾನಾಕೆಗೆ ಹೇಳಿದೆ : 'ನನ್ನ ಮಗು, ನಿನ್ನ ಈ ವ್ಯರ್ಥ ದೈಹಿಕ ಸುಖಕ್ಕಾಗಿ ಇದುವರೆಗೂ ಎಷ್ಟೊಂದು ಕಷ್ಟಪಟ್ಟೆ. ಸಾವು ಅತ್ಯಂತ ಸಮೀಪವಿದೆ. ಆ ಕ್ಷಣಕ್ಕಾಗಿ ನೀನೇನಾದರೂ ವ್ಯವಸ್ಥೆ ಮಾಡಿರುವೆಯೇನು ? ಈ ಹೀನ ಬುದ್ಧಿಯನ್ನು ಬಿಟ್ಟು ಭಗವಂತನನ್ನು ಕರೆ.'

10. "ಇಷ್ಟೆಲ್ಲ ಕಷ್ಟ ನೋವನ್ನನುಭವಿಸಿದರೂ ಇಂಥ ಒಂದು ಪರೀಕ್ಷೆಗೆ ಒಳಗಾದರೂ ಭಗವಂತನ ಅಸ್ತಿತ್ವದಲ್ಲಿದ್ದ ನಂಬಿಕೆ ಹೋಗಲಿಲ್ಲ ಮತ್ತು ಭಗವಂತನು ಮಂಗಳಮಯ ಎಂಬುದನ್ನೂ ಸಂದೇಹ ಪಡಲಿಲ್ಲ. ಬೆಳಗ್ಗೆ ನಿದ್ದೆಯಿಂದ ಎದ್ದ ಕೂಡಲೇ ಭಗವಂತನನ್ನು ನೆನೆಸಿಕೊಂಡು ಅವನ ನಾಮೋಚ್ಚಾರಣೆ ಮಾಡುತ್ತಾ ಹಾಸಿಗೆಯಿಂದ ಏಳುತ್ತಿದ್ದೆ. ಅನಂತರ ದೃಢ ಪ್ರಜ್ಞೆಯಿಂದ ಮತ್ತು ಭರವಸೆಯಿಂದ ಹಣ ಸಂಪಾದನೆಗಾಗಿ ಕೆಲಸ ಹುಡುಕಲು ಹೊರಡುತ್ತಿದ್ದೆ. ಒಂದು ದಿನ ನಾನು ಹಾಸಿಗೆಯಿಂದ ಏಳುವಾಗ ಭಗವನ್ನಾಮವನ್ನು ಉಚ್ಚರಿಸುತ್ತಿದ್ದುದನ್ನು ನನ್ನ ತಾಯಿಯು ಪಕ್ಕದ ಕೋಣೆಯಿಂದ ಕೇಳಿದಳು : 'ನಿಲ್ಲಿಸು ಮಗು, ನೀನು ಚಿಕ್ಕಂದಿನಿಂದಲೂ ನಿರಂತರವಾಗಿ ಭಗವನ್ನಾಮವನ್ನು ಜಪಿಸುತ್ತಿರುವೆ, ನಿನ್ನ ಭಗವಂತನು ಏನು ಮಾಡಿದ ಹೇಳು ?' ಎಂದು ನೋವಿನಿಂದ ನುಡಿದಳು. ಆ ಮಾತುಗಳು ನನ್ನನ್ನು ತೀವ್ರವಾಗಿ ಚುಚ್ಚಿದವು. ಇದ್ದಕ್ಕಿದ್ದಂತೆಯೆ ನನಗನ್ನಿಸತೊಡಗಿತು : 'ದೇವರು ನಿಜವಾಗಿ ಇರುವನೆ ? ಅವನು ಇರುವುದಾದರೆ ಮನುಷ್ಯನ ಆರ್ತ ಪ್ರಾರ್ಥನೆಯನ್ನು ಕೇಳುವನೆ ? ನನ್ನ ಇಷ್ಟೊಂದು ಪ್ರಾರ್ಥನೆಯಿಂದಲೂ ಏನೂ ಪ್ರಯೋಜನವಾಗಲಿಲ್ಲವಲ್ಲ. ಮಂಗಳಮಯನಾದ ಸೃಷ್ಟಿ

ಕರ್ತನ ಈ ಸೃಷ್ಟಿಯಲ್ಲಿ ಇಷ್ಟೊಂದು ಅನಿಷ್ಟಗಳೇಕೆ? ವಿದ್ಯಾಸಾಗರನು ಇತರರ ದುಃಖ ವನ್ನು ಕಂಡು ನೊಂದು ದೇವರು ಮಂಗಳಮಯನೂ ಆನಂದಮಯನೂ ಆದರೆ ಲಕ್ಷ ಗಟ್ಟಲೆ ಜನರು ಭಯಂಕರ ಕ್ಷಾಮದ ದವಡೆಗೆ ಬಲಿಯಾಗುತ್ತಾರಲ್ಲ, ಒಂದು ತುತ್ತು ಅನ್ನವಿಲ್ಲದೆ ಸಾಯುತ್ತಾರಲ್ಲ, ಯಾಕೆ ? ಎಂದು ತನ್ನನ್ನು ತಾನೆ ಕೇಳಿಕೊಂಡನು. ಆ ಪ್ರಶ್ನೆ ಕರಾಳ ಶಬ್ದದೊಡನೆ ನನ್ನ ಕಿವಿಯಲ್ಲಿ ಅನುರಣಿಸತೊಡಗಿತು, ನನ್ನ ಹೃದಯ ವನ್ನು ಇರಿದಂತಾಯಿತು. ಭಗವಂತನ ಅಸ್ತಿತ್ವದಲ್ಲಿನ ಸಂದೇಹವು ನನ್ನನ್ನು ಕಾಡಿಸ ತೊಡಗಿತು.

11. "ಏನಾದರೂ ಮಾಡಿ ಅದನ್ನು ಮುಚ್ಚಿಡುವುದು ನನ್ನ ಸ್ವಭಾವಕ್ಕೆ ವಿರುದ್ಧ ವಾದುದು. ಚಿಕ್ಕಂದಿನಿಂದಲೂ ಭಯದಿಂದಾಗಲಿ ಅಥವಾ ಇನ್ನಾವುದೇ ಉದ್ದೇಶದಿಂದಾ ಗಲಿ, ನನ್ನ ಕ್ರಿಯೆಗಳನ್ನಿರಲಿ ಯಾವುದೇ ಆಲೋಚನೆಯನ್ನೂ ಕೂಡ ಮುಚ್ಚಿಡುವುದು ನನ್ನಿಂದಾಗುತ್ತಿರಲಿಲ್ಲ. ಆದ್ದರಿಂದ ಈಗ ಜನರ ಮುಂದೆ ದೇವರೇ ಇಲ್ಲ, ಇದ್ದರೂ ಅವನನ್ನು ಕರೆಯುವುದರಿಂದ ಯಾವ ಪ್ರಯೋಜನವೂ ಇಲ್ಲ ಎಂದು ಘಂಟಾಘೋಷ ವಾಗಿ ಸಾರುತ್ತಾ ಹೋದುದರಲ್ಲಿ ಆಶ್ಚರ್ಯವೇನಿದೆ ? ಪರಿಣಾಮವಾಗಿ ಕೆಲವೇ ದಿನಗ ಳಲ್ಲಿ ನಾನು ನಾಸ್ತಿಕನಾದೆ, ದುಷ್ಟರಲ್ಲಿ ಬೆರೆಯುತ್ತಿರುವೆನು. ಅಷ್ಟೇ ಅಲ್ಲದೆ ನಿಷಿದ್ಧ ಸ್ಥಳಗಳಿಗೂ ಹೋಗಲು ಹಿಂಜರಿಯುತ್ತಿಲ್ಲ ಎಂದೆಲ್ಲ ಸುದ್ದಿ ಹರಡಿತು. ಚಿಕ್ಕಂದಿ ನಿಂದಲೂ ಮೃದುವಲ್ಲದ ನನ್ನ ಹೃದಯವು ಈಗ ಮತ್ತೂ ಕಠಿಣವಾಯಿತು, ಈ ಸುಳ್ಳು ನಿಂದನೆಯನ್ನು ಕೇಳಿ. ಈ ಪ್ರಪಂಚದ ದುಃಖ ನೋವುಗಳನ್ನು ಮರೆತು ಸ್ವಲ್ಪ ಸುಖ ವನ್ನು ಪಡೆಯುವುದಾದರೆ ಮನುಷ್ಯನು ಮದ್ಯ ಸೇವಿಸುವುದರಿಂದಾಗಲಿ, ವೇಶ್ಯಾಸಹ ವಾಸ ಮಾಡುವುದರಿಂದಾಗಲಿ, ಯಾವ ದೋಷವೂ ಇಲ್ಲ ಎಂದು ಸಾರ್ವತ್ರಿಕವಾಗಿ ಸಾರ ತೊಡಗಿದೆ. ಅಷ್ಟೇ ಅಲ್ಲದೆ ಹಾಗೆ ಮಾಡುವುದರಿಂದ ನನಗೆ ಸುಖ ಸಿಕ್ಕುತ್ತದೆ ಎಂದು ದೃಢವಾದರೆ ನಾನು ಆ ಕೃತ್ಯಕ್ಕಿಳಿಯಲು ಇತರರ ಭಯದಿಂದ ಹಿಂಜರಿಯುವುದಿಲ್ಲ.

12. "ಸುದ್ದಿ ಕಿವಿಯಿಂದ ಕಿವಿಗೆ ಹರಡಿತು. ಈ ನನ್ನ ಮಾತುಗಳು ವಿಕೃತರೂಪ ವನ್ನು ಪಡೆದು ಕೊನೆಗೆ ಶ್ರೀರಾಮಕೃಷ್ಣರ ಕಿವಿಗೂ, ಅವರ ಭಕ್ತರ ಕಿವಿಗೂ ಬಿತ್ತು. ಕೆಲವರು ನನ್ನ ನೈಜಸ್ಥಿತಿಯನ್ನು ಅರಿಯಲು ಬಂದರು ಮತ್ತು ತಾವು ಕೇಳಿರುವುದನ್ನು ನಂಬಲು ಅವರು ಸಿದ್ಧರಾಗಿರುವಂತೆ ಅವರ ಮಾತು ವರ್ತನೆಗಳಿಂದ ತಿಳಿದುಬಂತು. ನನ್ನನ್ನು ಅಷ್ಟು ಕೀಳಾಗಿ ಕಾಣಲು ಅವರು ಹಿಂಜರಿಯದಿದ್ದುದರಿಂದ ನನಗೆ ತುಂಬ ವೇದನೆಯಾಯಿತು. ಶಿಕ್ಷೆಯ ಭಯದಿಂದ ಭಗವಂತನನ್ನು ನಂಬುವುದು ಮಹಾ ದೌರ್ಬಲ್ಯವೆಂದು ನಾನು ಭಾವಿಸಿದೆ. ಹ್ಯೂಮ್, ಮಿಲ್, ಕಾಂಪ್ಟೆ ಮುಂತಾದ ಪಾಶ್ಚಾತ್ಯ ದಾರ್ಶನಿಕರ ಹೇಳಿಕೆಗಳನ್ನು ಉದ್ಧರಿಸಿ ದೇವರ ಅಸ್ತಿತ್ವಕ್ಕೆ ಯಾವ ಸಾಕ್ಷಿಯೂ ಇಲ್ಲ ಎಂದು ಅವರೊಡನೆ ಭಯಂಕರವಾಗಿ ವಾದಿಸಿದೆ. ಇದರ ಪರಿಣಾಮವಾಗಿ ನನ್ನ ಪತನದ ವಿಷಯದಲ್ಲಿ ಇನ್ನೂ ಹೆಚ್ಚು ದೃಢವಿಶ್ವಾಸದಿಂದ ಹೊರಟು ಹೋದರು. ಅದು ನನಗೆ ಸಂತೋಷವನ್ನೇ ಉಂಟುಮಾಡಿತು. ಶ್ರೀರಾಮಕೃಷ್ಣರು ಅವರಿಂದ ಇದನ್ನು

ಕೇಳಿ ನಂಬಹುದೆಂದು ಭಾವಿಸಿದೆ. ಈ ಭಾವನೆ ಮನಸ್ಸಿಗೆ ಬಂದ ಕೂಡಲೇ ನನ್ನ ಹೃದಯವು ಭಗ್ನಭಾವದಿಂದ ಪರಿತಪಿಸತೊಡಗಿತು. ಹಾಗೆಯೆ ಆಗಲಿ ಎಂದು ನಿರ್ಧರಿಸಿದೆ. ಒಳ್ಳೆಯದಾಗಲಿ ಕೆಟ್ಟದಾಗಲಿ ಜನರ ಅಭಿಪ್ರಾಯಗಳೆಲ್ಲವೂ ಪುಡಿಕಾಸಿನದು ಎಂದು ಭಾವಿಸಿದೆ. ಮುಂದೆ ನನಗೆ ತಿಳಿದುಬಂತು ಶ್ರೀರಾಮಕೃಷ್ಣರು ಅದನ್ನೆಲ್ಲ ಕೇಳಿ ಯಾವ ಪ್ರತಿಕ್ರಿಯೆಯನ್ನೂ ತೋರಿಸಲಿಲ್ಲ ಎಂದು. ಆದರೆ ಭವನಾಥನು ಅವರೆಡೆಗೆ ಹೋಗಿ 'ಮಹಾಶಯರೆ ನರೇಂದ್ರನು ಇಂಥಾ ಸ್ಥಿತಿಗೆ ಇಳಿಯುವನೆಂದು ನಾವು ಕನಸಿನಲ್ಲಿಯೂ ಕಂಡಿರಲಿಲ್ಲ' ಎಂದು ಹೇಳಿದಾಗ ಅವರು ಕ್ರುದ್ಧರಾಗಿ ನುಡಿದರಂತೆ: 'ಬಾಯಿ ಮುಚ್ಚು ನೀನು. ತಾಯಿ ತೋರಿಸಿರುವಳು, ಅವನೆಂದಿಗೂ ಹಾಗಾಗಲಾರ. ಇನ್ನು ಈ ವಿಷಯವನ್ನು ನೀನು ಪ್ರಸ್ತಾಪಿಸಿದರೆ ನಿನ್ನ ಮುಖವನ್ನು ನಾನು ನೋಡುವುದಿಲ್ಲ.' ಇದನ್ನು ಕೇಳಿ ನನಗೆ ಆಶ್ಚರ್ಯವಾಯಿತು.

13. "ಈ ರೀತಿ ಅಹಂಕಾರ ಅಭಿಮಾನಗಳಿಂದ ನಾಸ್ತಿಕತೆಯಲ್ಲಿ ಮನಸ್ಸನ್ನು ತೊಡಗಿಸುವುದರಿಂದಲೂ ಪ್ರಯೋಜನವೇನು ? ನಾನು ಚಿಕ್ಕಂದಿನಿಂದಲೂ ಪಡೆದ ಅಸಾಮಾನ್ಯ ಅನುಭವಗಳು ವಿಶೇಷವಾಗಿ ಶ್ರೀರಾಮಕೃಷ್ಣರನ್ನು ಸಂಧಿಸಿದ ಮೇಲೆ ಪಡೆದ ಅನುಭವಗಳು ನನ್ನ ಮನಸ್ಸಿನ ಮೇಲೆ ಜಾಜ್ವಲ್ಯಮಾನವಾಗಿ ಬೆಳಗತೊಡಗಿದುವು. ನನಗನ್ನಿಸತೊಡಗಿತು 'ದೇವರು ನಿಜವಾಗಿಯೂ ಇರಬೇಕು ಮತ್ತು ಅವನನ್ನು ಪಡೆಯುವ ಮಾರ್ಗವೂ ಇರಲೇಬೇಕು. ಇಲ್ಲದಿದ್ದರೆ ಈ ಜೀವನವಾದರೂ ಏತಕ್ಕೆ ? ಇದರರ್ಥವೇನು ? ಆ ಮಾರ್ಗವನ್ನು ಅದು ಎಷ್ಟೇ ದುಃಖದಾಯಕವಾದರೂ ಕಂಡುಹಿಡಿಯಲೇ ಬೇಕು.' ಸಮಯ ಉರುಳಿತು, ಮನಸ್ಸು ಶ್ರದ್ಧೆ ಸಂದೇಹಗಳ ನಡುವೆ ಡೋಲಾಯಮಾನವಾಗಿತ್ತು ಮತ್ತು ಶಾಂತಿ ಎಂದಿಗಿಂತಲೂ ಬಹುದೂರವಾಯಿತು. ನನ್ನ ಬಡತನ ನೀಗುವ ಸೂಚನೆಯೆ ಕಂಡುಬರಲಿಲ್ಲ.

14. "ಬೇಸಿಗೆಯ ನಂತರ ವರ್ಷಾಕಾಲವು ಬಂತು. ಉದ್ಯೋಗದ ಹುಡುಕಾಟ ಮೊದಲಿನಂತೆಯೆ ಮುಂದುವರಿಯಿತು. ಒಂದು ದಿನ ರಾತ್ರಿ ತುಂಬ ಆಯಾಸದಿಂದ ಮನೆಗೆ ಬರುತ್ತಿದ್ದೆ. ದೇಹಕ್ಕಿಂತಲೂ ಮನಸ್ಸು ಹೆಚ್ಚು ದಣಿದಿತ್ತು. ಇಡೀ ದಿನ ಆಹಾರ ಸೇವಿಸಿರಲಿಲ್ಲ. ಮಳೆಯಿಂದ ಮೈಯೆಲ್ಲ ಒದ್ದೆಯಾಗಿತ್ತು. ಬಳಲಿ ಸುಸ್ತಾಗಿ ಮುಂದೆ ಹೆಜ್ಜೆ ಹಾಕಲಾಗದೆ ಒಂದು ಮನೆಯ ಹೊರ ವರಾಂಡದಲ್ಲಿ ಮರದ ತುಂಡಿನಂತೆ ಬಿದ್ದುಬಿಟ್ಟೆ. ನಾನು ಸಂಪೂರ್ಣ ಪ್ರಜ್ಞಾಶೂನ್ಯನಾಗಿದ್ದೆನೊ ನನಗೆ ತಿಳಿಯದು. ಆದರೆ ವಿವಿಧ ಆಲೋಚನೆಗಳು ಮತ್ತು ವಿವಿಧ ಬಣ್ಣದ ಚಿತ್ರಗಳು ಒಂದಾದ ಮೇಲೆ ಒಂದರಂತೆ ನನ್ನ ಮನಸ್ಸಿನಲ್ಲಿ ಕಾಣಿಸಿಕೊಂಡು ಮಾಯವಾಗುತ್ತಿದ್ದುವು. ನನಗೆ ಅವುಗಳನ್ನು ತಳ್ಳಿಹಾಕುವ ಶಕ್ತಿಯೂ ಇರಲಿಲ್ಲ. ಅಥವಾ ಅವುಗಳಲ್ಲಿ ಯಾವುದಾದರೂ ಒಂದರ ಮೇಲೆ ಏಕಾಗ್ರಗೊಳಿಸುವ ಶಕ್ತಿಯೂ ಇರಲಿಲ್ಲ. ಇದ್ದಕ್ಕಿದ್ದಂತೆಯೆ ನನ್ನ ಮನಸ್ಸಿನಲ್ಲಿ ಪರದೆಗಳು ಒಂದಾದ ಮೇಲೆ ಒಂದರಂತೆ ಸರಿಯುತ್ತಿರುವುದು ನನ್ನ ಅನುಭವಕ್ಕೆ ಬಂತು. ನನ್ನ ಹೃದಯಾಂತರಾಳದಲ್ಲಿ ನನ್ನನ್ನು ಇದುವರೆಗೂ ಕಾಡಿಸುತ್ತಿದ್ದ ಗಂಭೀರ ಸಮಸ್ಯೆಗಳಿಗೆ

ಪರಿಹಾರಗಳು ಹೊಳೆಯತೊಡಗಿದುವು. ಆ ಸಮಸ್ಯೆಗಳು ಯಾವುದೆಂದರೆ 'ಈ ಭಗವ ತ್ಸೃಷ್ಟಿಯಲ್ಲಿ ದುಷ್ಟಶಕ್ತಿಗಳು ಇರುವುದು ಏಕೆ ? ನಿಷ್ಠುರ ನ್ಯಾಯ ಮತ್ತು ಭಗವತ್ಕೃಪೆ ಇವುಗಳನ್ನು ಸಮನ್ವಯಗೊಳಿಸುವುದು ಹೇಗೆ ?' ಇತ್ಯಾದಿ. ನನಗೆ ಪರಮಾನಂದ ವಾಯಿತು. ಅನಂತರ ನಾನು ಮನೆಯ ಕಡೆ ನಡೆದುಕೊಂಡು ಹೊರಟೆ. ದೇಹದಲ್ಲಿ ದಣಿವು ಸ್ವಲ್ಪವೂ ಇರಲಿಲ್ಲ. ನನ್ನ ಮನಸ್ಸು ಅನಂತಶಕ್ತಿ ಮತ್ತು ಶಾಂತಿಯಿಂದ ತುಂಬಿತ್ತು. ಆಗ ಕತ್ತಲೆಯು ಕಳೆದು ಬೆಳಕು ಹರಿಯುವುದರಲ್ಲಿತ್ತು.

15. "ಜಗತ್ತಿನ ನಿಂದಾಸ್ತುತಿಗಳನ್ನು ಸಂಪೂರ್ಣ ಉಪೇಕ್ಷಿಸತೊಡಗಿದೆ. ನಾನು ಹಣ ಸಂಪಾದನೆಗೆ ಕುಟುಂಬ ನಿರ್ವಹಣೆಗೆ ಮತ್ತು ಜನಸಾಮಾನ್ಯರಂತೆ ಪ್ರಾಪಂಚಿಕ ಸುಖದಲ್ಲಿ ಕಾಲ ಕಳೆಯಲು ಹುಟ್ಟಿದವನಲ್ಲ ಎಂಬ ದೃಢ ನಂಬಿಕೆ ನನಗುಂಟಾಯಿತು. ನನ್ನ ಅಜ್ಜನಂತೆ ಸಂಸಾರವನ್ನು ತ್ಯಜಿಸಲು ಗುಪ್ತವಾಗಿ ಸಿದ್ಧತೆ ನಡೆಸುತ್ತಿದ್ದೆ. ಮನೆ ಯನ್ನು ಬಿಟ್ಟು ಹೊರಡುವ ದಿನವನ್ನು ನಿರ್ಧರಿಸಿದೆ. ಅಂದೇ ಶ್ರೀರಾಮಕೃಷ್ಣರು ಕಲ್ಕ ತ್ತೆಯ ಒಬ್ಬ ಭಕ್ತನ ಮನೆಗೆ ಬರುತ್ತಿರುವುದಾಗಿ ಸುದ್ದಿ ಬಂತು. ನನಗನ್ನಿಸಿತು, ಇದು ಒಳ್ಳೆಯದೇ ಆಯಿತು ಎಂದು. ಮನೆಯನ್ನು ಬಿಡುವುದಕ್ಕೆ ಮುಂಚೆ ಗುರುವನ್ನು ಒಮ್ಮೆ ನೋಡುವುದೆಂದು ನಿರ್ಧರಿಸಿದೆ. ನಾನು ಶ್ರೀರಾಮಕೃಷ್ಣರನ್ನು ನೋಡಿದ ಕೂಡಲೇ ಅವರು ಒತ್ತಾಯಪೂರ್ವಕವಾಗಿ ಹೇಳಿದರು : 'ಇಂದು ನೀನು ನನ್ನೊಡನೆ ದಕ್ಷಿಣೇಶ್ವರಕ್ಕೆ ಬರಲೇಬೇಕು' ಎಂದು. ನಾನು ಎಷ್ಟೇ ನೆವ ಒಡ್ಡಿದರೂ ಪ್ರಯೋಜನವಾಗಲಿಲ್ಲ. ನಾನು ಅವರೊಡನೆ ಹೋಗಲೇಬೇಕಾಯಿತು. ಗಾಡಿಯಲ್ಲಿ ಹೆಚ್ಚು ಮಾತುಕತೆ ಆಗಲಿಲ್ಲ. ದಕ್ಷಿಣೇ ಶ್ವರಕ್ಕೆ ಹೋದ ಮೇಲೆ ಬೇರೆಯವರ ಜೊತೆ ಅವರ ಕೋಣೆಯಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದೆ. ಶ್ರೀರಾಮಕೃಷ್ಣರಿಗೆ ಭಾವಸಮಾಧಿ ಉಂಟಾಗಿತ್ತು. ಮರುಕ್ಷಣವೆ ಅವರು ನನ್ನ ಹತ್ತಿರ ಬಂದು ನನ್ನ ಕೈಯನ್ನು ಹಿಡಿದುಕೊಂಡು ಕಣ್ಣೀರು ಸುರಿಸುತ್ತಾ ಹಾಡಿದರು:

'ಮಾತಾಡಲೂ ಭಯ, ಆಡದಿರಲೂ ಭಯ
ಓ ರಾಧೆ, ನಾನಿನ್ನ
ಕಳೆದುಕೊಂಡೇನೆಂಬ ಶಂಕೆ ನನಗೆ'.

16. "ನಾನು ಬಹಳ ಹೊತ್ತು ನನ್ನ ಭಾವ ಪ್ರವಾಹವನ್ನು ತಡೆಹಿಡಿದುಕೊಂಡೆ. ಆದರೆ ಕೊನೆಗೆ ನನ್ನ ಶಕ್ತಿಯನ್ನು ಮೀರಿತು. ನನ್ನ ಎದೆಯೂ ಶ್ರೀರಾಮಕೃಷ್ಣರದಂತೆಯೆ ಕಣ್ಣೀರಿನಿಂದ ತೋಯ್ದು ಹೋಯ್ತು. ಶ್ರೀರಾಮಕೃಷ್ಣರಿಗೆ ಎಲ್ಲವೂ ತಿಳಿದಿರುವುದೆಂದು ನನಗೆ ನಿಶ್ಚಯವಾಗಿ ಗೊತ್ತಿತ್ತು. ನಮ್ಮ ಈ ವರ್ತನೆಯನ್ನು ನೋಡಿ ಇತರರು ವಿಸ್ಮಿತ ರಾದರು. ಶ್ರೀರಾಮಕೃಷ್ಣರು ಸಾಮಾನ್ಯಸ್ಥಿತಿಗೆ ಬಂದ ಮೇಲೆ ಇದಕ್ಕೆ ಕಾರಣವನ್ನು ವಿಚಾರಿಸಿದಾಗ ಅವರು ಮುಗುಳ್ನಕ್ಕು ಹೇಳಿದರು, 'ಇದು ನಮ್ಮಿಬ್ಬರಿಗೇ ಸಂಬಂಧಿಸಿ ದುದು' ಎಂದು. ಅನಂತರ ಎಲ್ಲರನ್ನೂ ಕಳಿಸಿಕೊಟ್ಟ ಮೇಲೆ ರಾತ್ರಿ ನನ್ನನ್ನು ಕರೆದು ಹೇಳಿದರು : 'ನನಗೆ ಗೊತ್ತು. ತಾಯಿಯ ಕೆಲಸಕ್ಕಾಗಿ ನೀನು ಈ ಪ್ರಪಂಚಕ್ಕೆ ಬಂದಿರುವೆ ಎಂದು. ನೀನು ಪ್ರಾಪಂಚಿಕ ಜೀವನವನ್ನು ನಡೆಸಲಾರೆ. ಆದರೆ ನಾನು ಬದುಕಿರುವವರೆಗೆ

ನನಗೋಸ್ಕರ ಮನೆಯಲ್ಲಿಯೇ ಇರು.' ಹೀಗೆ ಹೇಳುತ್ತಾ ಶ್ರೀರಾಮಕೃಷ್ಣರು ಮತ್ತೆ ಕಣ್ಣೀರು ಸುರಿಸತೊಡಗಿದರು.

17. "ನಾನು ಮರುದಿನ ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ಮನೆಗೆ ಹಿಂದಿರುಗಿದೆ. ಕೂಡಲೇ ನೂರಾರು ಯೋಚನೆಗಳು ಮನಸ್ಸನ್ನು ಕಾಡತೊಡಗಿದವು. ನಾನು ಈಗ ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆಯುತೊಡಗಿದೆ. ನಾನು ಒಬ್ಬ ಲಾಯರ್‌ನ ಆಫೀಸಿನಲ್ಲಿ ಕೆಲಸಕ್ಕೆ ಸೇರಿಕೊಂಡು ಕೆಲವು ಪುಸ್ತಕಗಳನ್ನು ಅನುವಾದಿಸಿದೆ. ಅದರಿಂದ ಬಂದ ಹಣದಿಂದ ಹೇಗೊ ಕುಟುಂಬ ನಿರ್ವಹಣೆ ಸಾಧ್ಯವಾಯಿತು. ಆದರೆ ಇವೆಲ್ಲ ತಾತ್ಕಾಲಿಕ ಉದ್ಯೋಗಗಳು. ಯಾವ ಶಾಶ್ವತವಾದ ಕೆಲಸವೂ ಇಲ್ಲದೆ ಸುಸೂತ್ರವಾಗಿ ಕುಟುಂಬವನ್ನು ನಿರ್ವಹಿಸುವುದು ಅಸಾಧ್ಯವಾಗಿತ್ತು. ಭಗವಂತನು ಶ್ರೀರಾಮಕೃಷ್ಣರ ಪ್ರಾರ್ಥನೆಗಳನ್ನು ಪೂರ್ತಿಗೊಳಿಸುತ್ತಾನೆ ಎಂದು ನನ್ನ ನೆನಪಿಗೆ ಬಂತು. ನನ್ನ ತಾಯಿ ಮತ್ತು ಸಹೋದರರ ಊಟ ಬಟ್ಟೆಯ ಕೊರತೆಯನ್ನು ನಿವಾರಿಸುವಂತೆ ಅವರು ಪ್ರಾರ್ಥಿಸುವಂತೆ ಮಾಡಬೇಕು. ನನಗಾಗಿ ಅವರು ಆ ರೀತಿ ಮಾಡಲು ಖಂಡಿತ ನಿರಾಕರಿಸುವುದಿಲ್ಲ ಎಂದೆನಿಸಿತು. ನಾನು ದಕ್ಷಿಣೇಶ್ವರಕ್ಕೆ ಧಾವಿಸಿದೆ. ನನ್ನ ಮನೆಯವರ ಹಣದ ಕೊರತೆಯನ್ನು ನೀಗಿಸುವಂತೆ ಜಗನ್ಮಾತೆಯನ್ನು ಪ್ರಾರ್ಥಿಸಬೇಕೆಂದು ಅವರನ್ನು ಮತ್ತೆ ಮತ್ತೆ ಕೇಳಿಕೊಂಡೆ. ಶ್ರೀರಾಮಕೃಷ್ಣರು ಪ್ರೀತಿಯಿಂದ ಹೇಳಿದರು : 'ನನ್ನ ಮಗು, ನಾನು ಅಂಥ ಮಾತನ್ನು ಹೇಳಲಾರೆ. ನೀನೇ ಏಕೆ ಪ್ರಾರ್ಥಿಸಬಾರದು ? ನೀನು ತಾಯಿಯನ್ನು ಒಪ್ಪುವುದಿಲ್ಲ. ಅದಕ್ಕಾಗಿಯೇ ಇಷ್ಟೊಂದು ಕಷ್ಟ ನಿನಗೆ.' ನಾನು ಉತ್ತರಿಸಿದೆ : 'ನನಗೆ ತಾಯಿಯ ಬಗ್ಗೆ ಏನೂ ತಿಳಿಯದು. ನನಗಾಗಿ ನೀವೇ ಆಕೆಯನ್ನು ಪ್ರಾರ್ಥಿಸಿ. ನೀವು ಪ್ರಾರ್ಥಿಸಲೇಬೇಕು. ಇಲ್ಲದಿದ್ದರೆ ನಿಮ್ಮನ್ನು ಬಿಡುವುದಿಲ್ಲ.' ಶ್ರೀರಾಮಕೃಷ್ಣರು ಪ್ರೀತಿಯಿಂದ ಹೇಳಿದರು : 'ನಿನ್ನ ಕಷ್ಟವನ್ನು ನಿವಾರಿಸಲು ನಾನು ತಾಯಿಯನ್ನು ಅನೇಕಬಾರಿ ಪ್ರಾರ್ಥಿಸಿರುವೆ. ಆದರೆ ನೀನು ಅವಳನ್ನು ಒಪ್ಪಿಕೊಳ್ಳದೆ ಇರುವುದರಿಂದ ಅವಳು ಪ್ರಾರ್ಥನೆಯನ್ನು ಪೂರ್ತಿಗೊಳಿಸುತ್ತಿಲ್ಲ. ಇಂದು ಮಂಗಳವಾರ ತಾಯಿಯ ಶುಭದಿನ. ತಾಯಿ ಇಂದು ನೀನು ಏನು ಕೇಳಿದರೂ ಕೊಡುತ್ತಾಳೆ. ಇಂದು ರಾತ್ರಿ ದೇವಸ್ಥಾನಕ್ಕೆ ಹೋಗಿ ಜಗನ್ಮಾತೆಗೆ ವಂದಿಸಿ ವರಕ್ಕಾಗಿ ಅವಳನ್ನು ಪ್ರಾರ್ಥಿಸು. ನನ್ನ ಪ್ರೇಮಮಯಿ ತಾಯಿ ಬ್ರಹ್ಮನ ಶಕ್ತಿ, ಅವಳು ಶುದ್ಧ ಚಿದ್ಘನ ಮೂರ್ತಿ. ತನ್ನ ಇಚ್ಛಾನುಸಾರವಾಗಿ ಈ ಜಗತ್ತಿಗೆ ಜನ್ಮವಿತ್ತಿರುವಳು. ಅವಳು ಇಚ್ಛಿಸಿದರೆ ಯಾವುದು ತಾನೇ ಅಸಾಧ್ಯ ?'

18. "ಶ್ರೀರಾಮಕೃಷ್ಣರು ಹೇಳಿರುವುದರಿಂದ ನಾನು ತಾಯಿಯನ್ನು ಪ್ರಾರ್ಥಿಸಿದ ಕೂಡಲೆ ಎಲ್ಲ ಕಷ್ಟಗಳೂ ಪರಿಹಾರವಾಗಿಬಿಡುವುದೆಂದು ದೃಢವಾಗಿ ನಂಬಿದ್ದೆ. ರಾತ್ರಿ ಬಂತು, ರಾತ್ರಿಯಾಗಿ ಮೂರುಗಂಟೆಗಳನಂತರ ಶ್ರೀರಾಮಕೃಷ್ಣರು ನನ್ನನ್ನು ದೇವಸ್ಥಾನಕ್ಕೆ ಹೋಗಲು ಹೇಳಿದರು. ನಾನು ಹೋಗುತ್ತಿದ್ದಂತೆಯೇ ನನ್ನಲ್ಲಿ ಏನೊ ಒಂದು ರೀತಿಯ ಭಾವಾಂತರ ಉಂಟಾಯಿತು. ನಾನು ತೂರಾಡುತ್ತಿದ್ದೆ. ನಾನು ನಿಜವಾಗಿಯೂ

ತಾಯಿಯನ್ನು ಕಂಡು ಅವಳ ಮಾತುಗಳನ್ನು ಕೇಳುವೆ ಎಂಬ ದೃಢ ವಿಶ್ವಾಸ ನನ್ನಲ್ಲಿ ಬೇರೂರಿತು. ನಾನು ಬೇರೆ ಎಲ್ಲ ವಿಷಯಗಳನ್ನು ಮರೆತು ಅದೇ ಆಲೋಚನೆಯಲ್ಲಿಯೆ ಸಂಪೂರ್ಣ ಮಗ್ನನಾಗಿದ್ದೆ. ನಾನು ದೇವಸ್ಥಾನಕ್ಕೆ ಬಂದಾಗ ಜಗನ್ಮಾತೆಯು ನಿಜವಾಗಿಯೂ ಶುದ್ಧಚೈತನ್ಯಮಯಿಯೂ ಜೀವಂತಳೂ ಅನಂತ ಪ್ರೇಮ ಸೌಂದರ್ಯಗಳ ಮೂಲರೂಪಿಣಿಯೂ ಆಗಿ ಕಾಣಿಸಿಕೊಂಡಳು. ನನ್ನ ಹೃದಯ ಪ್ರೇಮ ಭಕ್ತಿಯಿಂದ ಉಬ್ಬಿಹೋಯಿತು. ನಾನು ಆನಂದ ಪರವಶನಾಗಿ ಮತ್ತೆ ಮತ್ತೆ ಅವಳಿಗೆ ನಮಸ್ಕರಿಸಿ ಪ್ರಾರ್ಥಿಸಿದೆ : 'ತಾಯಿ ನನಗೆ ವಿವೇಕವನ್ನು ಕೊಡು, ವೈರಾಗ್ಯವನ್ನು ಕೊಡು, ದಿವ್ಯ ಜ್ಞಾನ ಭಕ್ತಿಗಳನ್ನು ಕೊಡು. ನಿನ್ನ ಅಖಂಡ ದರ್ಶನ ಯಾವಾಗಲೂ ಆಗುತ್ತಿರುವಂತೆ ಮಾಡು". ನನ್ನ ಹೃದಯದಲ್ಲಿ ಶಾಂತಿಯ ಪ್ರವಾಹವು ಹರಿಯಿತು. ಇಡೀ ಪ್ರಪಂಚವೇ ಸಂಪೂರ್ಣ ಮಾಯವಾಯಿತು, ತಾಯಿಯೊಬ್ಬಳೇ ಹೃದಯದಲ್ಲಿ ಉಳಿದಳು.

19. "ನಾನು ಶ್ರೀರಾಮಕೃಷ್ಣರೆಡೆಗೆ ಬಂದಕೂಡಲೇ ಅವರು ಕೇಳಿದರು : 'ನಿನ್ನ ದಾರಿದ್ರ್ಯ ನಿವಾರಣೆಗಾಗಿ ತಾಯಿಯನ್ನು ಪ್ರಾರ್ಥಿಸಿದೆಯಾ ?' ನಾನು ಸ್ತಂಭಿತನಾಗಿ ಹೇಳಿದೆ : 'ಇಲ್ಲ ಮಹಾಶಯರೆ, ನನಗದು ಮರೆತೇ ಹೋಯಿತು. ಈಗ ನಾನೇನು ಮಾಡಲಿ ?' ಅವರು ಹೇಳಿದರು : 'ಮತ್ತೆ ಬೇಗ ಹೋಗಿ ಅವಳನ್ನು ಪ್ರಾರ್ಥಿಸು.' ನಾನು ಮತ್ತೆ ದೇವಸ್ಥಾನಕ್ಕೆ ಹೋದೆ. ತಾಯಿಯ ಮುಂದೆ ನಿಂತಕೂಡಲೇ ಮತ್ತೆ ಭಾವಾಂತರವಾಯಿತು. ನಾನು ಎಲ್ಲವನ್ನು ಮರೆತು ಮತ್ತೆಮತ್ತೆ ಅವಳನ್ನು ನಮಸ್ಕರಿಸುತ್ತ ಜ್ಞಾನ ಭಕ್ತಿಗಳಿಗಾಗಿ ಪ್ರಾರ್ಥಿಸಿದೆ. ನಾನು ಹಿಂದಿರುಗಿದ ಕೂಡಲೇ ಶ್ರೀರಾಮಕೃಷ್ಣರು ಮುಗುಳ್ನಗುತ್ತಾ 'ಈಗಲಾದರೂ ಅವಳನ್ನು ಕೇಳಿದೆಯಾ ?' ಎಂದು ವಿಚಾರಿಸಿದರು. ಮತ್ತೆ ನಾನು ಸ್ತಂಭಿತನಾಗಿ ಹೇಳಿದೆ : 'ಇಲ್ಲ ಮಹಾಶಯರೆ, ನಾನು ತಾಯಿಯನ್ನು ನೋಡಿದ ಕೂಡಲೆ ಯಾವುದೊ ಅವರ್ಣನೀಯವಾದ ದಿವ್ಯಶಕ್ತಿಯ ಪ್ರಭಾವದಿಂದ ಎಲ್ಲವನ್ನೂ ಮರೆತುಬಿಡುತ್ತೇನೆ. ಕೇವಲ ಜ್ಞಾನ, ಭಕ್ತಿಗಳಿಗಾಗಿ ಮಾತ್ರ ಪ್ರಾರ್ಥಿಸಿದೆ. ಈಗೇನು ಮಾಡುವುದು ?' ಶ್ರೀರಾಮಕೃಷ್ಣರು ಹೇಳಿದರು : 'ಒಳ್ಳೆ ತಿಳಿಗೇಡಿ ಹುಡುಗ, ನಿನ್ನನ್ನು ನೀನು ಸ್ವಲ್ಪ ಹಿಡಿತದಲ್ಲಿಟ್ಟುಕೊಂಡು ಆ ಪ್ರಾರ್ಥನೆಯನ್ನು ಸಲ್ಲಿಸಬಾರದಾಗಿತ್ತೆ? ಮತ್ತೆ ಬೇಗ ಹೋಗು ಮತ್ತು ಅವಳನ್ನು ಪ್ರಾರ್ಥಿಸು.' ನಾನು ಮೂರನೆಯ ಬಾರಿ ದೇವಸ್ಥಾನಕ್ಕೆ ಹೋದೆ. ನಾನು ದೇವಸ್ಥಾನವನ್ನು ಪ್ರವೇಶಿಸುತ್ತಿದ್ದಂತೆಯೆ ಅದಮ್ಯವಾದ ಲಜ್ಜೆ ನನ್ನ ಹೃದಯವನ್ನು ಆಕ್ರಮಿಸಿತು. ಎಂಥಾ ಕ್ಷುಲ್ಲಕ ವಿಷಯವನ್ನು ಕೇಳಲು ತಾಯಿಯೆಡೆಗೆ ಬಂದೆನಲ್ಲ. ರಾಜನ ಅನುಗ್ರಹಕ್ಕೆ ಪಾತ್ರನಾಗಿ ಅವನಿಂದ ಸೋರೆಕಾಯಿ ಕುಂಬಳಕಾಯಿ ಕೇಳಿದಂತಾಯಿತಲ್ಲ ! ಎಂಥಾ ಹೀನ ಬುದ್ಧಿ ನನ್ನದು. ಲಜ್ಜೆ ಮತ್ತು ಘೃಣಗಳಿಂದ ಅಭಿಭೂತನಾಗಿ ಅವಳಿಗೆ ಮತ್ತೆ ಮತ್ತೆ ಪ್ರಣಾಮ ಮಾಡುತ್ತಾ ಹೇಳಿದೆ : 'ನನಗಿನ್ನೇನೂ ಬೇಡ ತಾಯೆ. ಜ್ಞಾನ ಭಕ್ತಿಗಳನ್ನು ಮಾತ್ರ ಕರುಣಿಸು.'

20. "ನಾನು ದೇವಸ್ಥಾನದಿಂದ ಹೊರ ಬಂದ ಕೂಡಲೇ ಇದೆಲ್ಲ ಶ್ರೀರಾಮಕೃಷ್ಣರ ಆಟ ಎಂದು ದೃಢವಾಯಿತು. ಇಲ್ಲದಿದ್ದರೆ ಮೂರು ಸಾರಿ ತಾಯಿಯ ಹತ್ತಿರ

ಹೋದಾಗಲೂ ನನಗಾಗಿ ಏನನ್ನೂ ಕೇಳಲಾಗಲಿಲ್ಲವಲ್ಲ. ನಾನು ಅವರ ಹತ್ತಿರ ಹೋಗಿ ಹೇಳಿದೆ : 'ನೀವೇ ನನಗೆ ಹೀಗೆ ಆಗುವಂತೆ ಮಾಡಿರಬೇಕು. ನಮ್ಮ ಮನೆಯವರಿಗೆ ಊಟ ಬಟ್ಟೆಯ ಕೊರತೆ ಇಲ್ಲದಂತೆ ನೀವೇ ಮಾಡಬೇಕು' ಎಂದು ಅವರನ್ನು ಪಟ್ಟು ಹಿಡಿದು ಕೇಳಿಕೊಂಡೆ. ಅವರು ಪ್ರೀತಿಯಿಂದ ಹೇಳಿದರು : 'ಮಗು, ನಾನು ಯಾರಿಗಾಗಿಯೂ ಅಂಥ ಪ್ರಾರ್ಥನೆಯನ್ನು ಸಲ್ಲಿಸಲಾರೆ. ಅದು ನನ್ನ ಬಾಯಿಂದಲೇ ಹೊರಬರುವುದಿಲ್ಲ. ನೀನೇ ಅವಳಿಂದ ಏನು ಬೇಕಾದರೂ ಪಡೆಯಬಹುದು. ಆದರೆ ನಿನಗದನ್ನು ಕೇಳಲಾಗ ಲಿಲ್ಲ. ನೀನು ಪ್ರಾಪಂಚಿಕ ಸುಖವನ್ನು ಅನುಭವಿಸುವುದಕ್ಕಾಗಿ ಬಂದಿಲ್ಲ. ಇದಕ್ಕೆ ನಾನೇನು ಮಾಡಲಿ ?' ನಾನು ಹೇಳಿದೆ: 'ಹಾಗೆ ಹೇಳಿದರೆ ಆಗದು. ನನಗಾಗಿ ನೀವು ಆ ಪ್ರಾರ್ಥನೆ ಮಾಡಲೇಬೇಕು. ನೀವು ಹೇಳಿದರೆ ನನ್ನ ಮನೆಯವರು ಎಲ್ಲಾ ಕಷ್ಟಗಳಿಂದಲೂ ಪಾರಾಗು ತ್ತಾರೆ ಎಂಬುದು ನನ್ನ ದೃಢವಿಶ್ವಾಸ'. ಹೀಗೆ ನಾನು ಅವರನ್ನು ಮತ್ತೆ ಮತ್ತೆ ಪೀಡಿ ಸಲು 'ಒಳ್ಳೆಯದು, ಅವರಿಗೆ ಎಂದೂ ಸಾದಾ ಊಟ ಬಟ್ಟೆಗೆ ಕೊರತೆ ಉಂಟಾಗುವು ದಿಲ್ಲ' ಎಂದು ಹೇಳಿದರು.

21. ಇದುವರೆಗೆ ಹೇಳಿರುವುದು ನರೇಂದ್ರನಾಥನ ಜೀವನದಲ್ಲಿ ಅತ್ಯಂತ ಪ್ರಮುಖ ವಾದ ಘಟನೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಭಗವಂತನ ಮಾತೃಭಾವ, ಪ್ರತೀಕ ಮತ್ತು ಪ್ರತಿಮೋಪಾಸನೆ ಇವುಗಳ ಗೂಢಾರ್ಥ ಇದುವರೆಗೂ ಅವನಿಗೆ ಹೃದ್ಗತ ವಾಗಿರಲಿಲ್ಲ. ಮಂದಿರದಲ್ಲಿ ಪ್ರತಿಷ್ಠಾಪಿಸಲ್ಪಟ್ಟ ದೇವದೇವಿಯರ ಮೂರ್ತಿಗಳನ್ನು ಅಸಹ್ಯದೃಷ್ಟಿಯಿಂದ ಕಾಣುತ್ತಿದ್ದನೇ ಹೊರತು ಭಕ್ತಿಭಾವವನ್ನು ತೋರಿಸಿದವನೇ ಅಲ್ಲ. ಈಗ ಈ ರೀತಿಯ ಉಪಾಸನೆಯ ನಿಜವಾದ ಅರ್ಥ ಅವನ ಮನಸ್ಸಿಗೆ ಹೊಳೆಯಿತು ಮತ್ತು ಅವನ ಆಧ್ಯಾತ್ಮಿಕ ಜೀವನವು ಹೆಚ್ಚು ಪೂರ್ಣವೂ ವಿಶಾಲವೂ ಆಯಿತು. ಶ್ರೀರಾಮಕೃಷ್ಣರಿಗೆ ಇದರಿಂದ ಎಂಥ ಆನಂದ ಉಂಟಾಗಿತ್ತು ಎಂಬುದನ್ನು ಹೇಳಿ ಮುಗಿಸಲಾಗುವುದಿಲ್ಲ. ನಮ್ಮ ಸ್ನೇಹಿತನೊಬ್ಬನು (ವೈಕುಂಠನಾಥ ಸನ್ಯಾಲ್) ಈ ಘಟ ನೆಯ ಮರುದಿನ ದಕ್ಷಿಣೇಶ್ವರಕ್ಕೆ ಹೋಗಿದ್ದನು. ಅವನು ಏನು ಕಂಡನೊ ಮತ್ತು ಕೇಳಿ ದನೊ ಅದನ್ನು ಇಲ್ಲಿ ಪ್ರಸ್ತುತಪಡಿಸಿದರೆ ಓದುಗರಿಗೆ ಈ ವಿಷಯ ಸ್ಪಷ್ಟವಾಗುತ್ತದೆ.

22. "ತಾರಾಪದ ಘೋಷ್ ಎಂಬ ವ್ಯಕ್ತಿಯ ಪರಿಚಯ ನನಗೆ ಮೊದಲೇ ಇತ್ತು. ಏಕೆಂದರೆ ನಾವಿಬ್ಬರೂ ಒಂದೇ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದೆವು. ತಾರಾಪದ ನಿಗೂ ನರೇಂದ್ರನಾಥನಿಗೂ ತುಂಬಾ ಸ್ನೇಹ. ಇದರಿಂದಾಗಿ ಆಫೀಸಿನಲ್ಲಿ ತಾರಾಪದ ನೊಡನೆ ನರೇಂದ್ರನಾಥನನ್ನು ನಾನು ಮೊದಲೇ ಕೆಲವೊಮ್ಮೆ ನೋಡಿದ್ದೆ. ಶ್ರೀರಾಮ ಕೃಷ್ಣರು ನರೇಂದ್ರನನ್ನು ವಿಶೇಷವಾಗಿ ಪ್ರೀತಿಸುತ್ತಾರೆಂದು ತಾರಾಪದನು ಒಂದು ದಿನ ಮಾತಿನ ಸಂದರ್ಭದಲ್ಲಿ ನನಗೆ ತಿಳಿಸಿದ್ದ. ಆದರೂ ಕೂಡ ನಾನು ನರೇಂದ್ರನ ಪರಿಚಯ ವನ್ನು ಪಡೆಯುವ ಪ್ರಯತ್ನ ಮಾಡಲಿಲ್ಲ. ಇಂದು ಮಧ್ಯಾಹ್ನ ದಕ್ಷಿಣೇಶ್ವರಕ್ಕೆ ಬಂದೆ. ಬಂದು ನೋಡುತ್ತೇನೆ, ಶ್ರೀರಾಮಕೃಷ್ಣರು ಕೊಠಡಿಯಲ್ಲಿ ಒಬ್ಬರೇ ಕುಳಿತಿದ್ದಾರೆ ಮತ್ತು ನರೇಂದ್ರನು ಹೊರಗಡೆ ಒಂದು ಮೂಲೆಯಲ್ಲಿ ಮಲಗಿ ನಿದ್ರಿಸುತ್ತಿದ್ದಾನೆ.

ಶ್ರೀರಾಮಕೃಷ್ಣರ ಮುಖವು ಪರಮಾನಂದದಿಂದ ಅರಳಿತ್ತು. ನಾನು ಹತ್ತಿರ ಹೋಗಿ ಪ್ರಣಾಮ ಮಾಡುತ್ತಿದ್ದಂತೆಯೆ ಅವರು ನರೇಂದ್ರನನ್ನು ತೋರಿಸಿ ಹೇಳಿದರು : 'ಓ ನೋಡು, ಆ ಹುಡುಗ ತುಂಬ ಒಳ್ಳೆಯವನು. ಅವನ ಹೆಸರು ನರೇಂದ್ರ.. ಮೊದಲು ತಾಯಿಯನ್ನು ಒಪ್ಪುತ್ತಿರಲಿಲ್ಲ. ನೆನ್ನೆ ಒಪ್ಪಿದ. ಕಷ್ಟದಲ್ಲಿ ಸಿಕ್ಕಿಬಿದ್ದಿದ್ದಾನೆ. ಆದ್ದರಿಂದ ತಾಯಿಯಿಂದ ಹಣ ಕೇಳಲು ಅವನನ್ನು ಕಳಿಸಿದೆ. ಅವನಿಗೆ ಅದನ್ನು ಕೇಳಲಾಗಲಿಲ್ಲ. ತುಂಬಾ ಲಜ್ಜೆಯಾಯಿತಂತೆ. ಮಂದಿರದಿಂದ ಹಿಂದಿರುಗಿ ತಾಯಿಯ ಹಾಡನ್ನು ಕಲಿಸಿ ರೆಂದು ಕೇಳಿಕೊಂಡ. ನಾನು 'ಮಾ ತ್ವಂ ಹಿ ತಾರಾ'* ಎಂಬ ಹಾಡನ್ನು ಕಲಿಸಿಕೊಟ್ಟೆ. ನೆನ್ನೆ ಇಡೀ ರಾತ್ರಿ ಆ ಹಾಡನ್ನು ಹಾಡುತ್ತಿದ್ದ. ಆದ್ದರಿಂದಲೇ ಈಗ ನಿದ್ರಿಸುತ್ತಿದ್ದಾನೆ. (ಆನಂದದಿಂದ ನಗುತ್ತಾ) ನರೇಂದ್ರ ಕಾಳಿಯನ್ನು ಒಪ್ಪಿಕೊಂಡ. ಬಹಳ ಒಳ್ಳೆಯದು. ಏನು ಹೇಳುತ್ತೀಯೆ.' ಅವರ ಮಾತನ್ನು ಕೇಳಿ ಬಾಲಕರಂತೆ ಅವರು ಆನಂದ ಪಡುವು ದನ್ನು ಕಂಡು 'ಹೌದು ಮಹಾಶಯರೆ, ಬಹಳ ಒಳ್ಳೆಯದೇ ಆಯಿತು ಎಂದೆ. ಸ್ವಲ್ಪ ಹೊತ್ತಿನ ನಂತರ ಮತ್ತೆ ನಗುತ್ತಾ ಹೇಳಿದರು : 'ನರೇಂದ್ರನು ತಾಯಿಯನ್ನು ಒಪ್ಪಿ ಕೊಂಡಿದ್ದಾನೆ. ಬಹಳ ಒಳ್ಳೆಯದಾಯಿತಲ್ಲವೆ?' ಹೀಗೆ ಅತ್ತಿತ್ತ ಓಡಾಡುತ್ತಾ ಮತ್ತೆ ಮತ್ತೆ ಈ ಮಾತನ್ನು ಉಚ್ಚರಿಸುತ್ತಾ ಆನಂದ ಪಡತೊಡಗಿದರು.

23. "ನಿದ್ರೆಯ ನಂತರ ಸುಮಾರು ನಾಲ್ಕು ಗಂಟೆಯ ಹೊತ್ತಿಗೆ ನರೇಂದ್ರನು ಕೊಠಡಿಗೆ ಬಂದು ಶ್ರೀರಾಮಕೃಷ್ಣರ ಹತ್ತಿರ ಕುಳಿತನು. ಈಗ ಅವರಿಂದ ಬೀಳ್ಕೊಂಡು ಅವನು ಕಲ್ಕತ್ತೆಗೆ ಹಿಂದಿರುಗುತ್ತಾನೆ ಎಂದು ಭಾವಿಸಿದೆ. ಶ್ರೀರಾಮಕೃಷ್ಣರು ಅವನನ್ನು ನೋಡಿದ ಕೂಡಲೇ ಭಾವಾವಿಷ್ಟರಾಗಿ ತಮ್ಮ ದೇಹದಿಂದ ನರೇಂದ್ರನ ದೇಹವನ್ನು ಸ್ಪರ್ಶಿಸಿ ಅವನ ತೊಡೆಯ ಮೇಲೆಯೆ ಕುಳಿತಂತೆ ಕುಳಿತುಕೊಂಡರು. ಮತ್ತೆ ಹೇಳಿದರು:

---

* ನೀನೆ ತಾರಕ ಶಕ್ತಿ, ಓ ನನ್ನ ಜಗದಂಬ
ತ್ರಿಗುಣಾಧಾರ ಪರಾತ್ಪರಾ
ಓ ದುರ್ಗೇ, ಕರುಣಾಪೂರ್ಣೆ
ನೊಂದ ಜೀವಕ್ಕೆಲ್ಲ ನೀನೆ ಆಧಾರ
ನೀ ಸಂಧ್ಯೆ, ಗಾಯತ್ರೀ
ನೀ ಜಗದ್ಧಾತ್ರೀ
ಶರ್ವಪ್ರಿಯೆ, ಜಗದೆಲ್ಲ
ದುಃಖಿಗಳ ತಾಯಿ.
ನೆಲದಲ್ಲಿ ಜಲದಲ್ಲಿ ಸರ್ವಭೂತದ ಮೂಲ
ಚೈತನ್ಯವಾಗಿ
ನನ್ನಲ್ಲಿ, ಜಗದಲ್ಲಿ, ಸಕಲ ಚರಾಚರದ
ಎದೆ ಎದೆಗಳಲ್ಲಿ
ಮನೆಮಾಡಿ ನೆಲೆಸಿರುವೆ ; ಸಾಕಾರವಾದರೂ
ನಿನ್ನ ಮೂಲ ಸ್ಥಿತಿಯು ನಿರಾಕಾರದಲ್ಲಿ !

'ಇದು (ತಮ್ಮ ದೇಹ) ನಾನೇ ಮತ್ತು ಇದೂ (ನರೇಂದ್ರನ ದೇಹ) ಕೂಡ ನಾನೇ ಎಂದು ನೋಡುತ್ತಿದ್ದೇನೆ. ನಿಜವಾಗಿಯೂ ನನಗೆ ಯಾವ ಭೇದವೂ ಕಂಡುಬರುತ್ತಿಲ್ಲ. ಗಂಗೆಯ ನೀರಿನ ಮೇಲೆ ಕಡ್ಡಿಯನ್ನಿಟ್ಟರೆ ಅದು ಎರಡು ಭಾಗವಾಗಿ ಕಾಣುತ್ತದೆ. ಆದರೆ ನಿಜವಾಗಿಯೂ ಭಾಗವಾಗಿರುವುದಿಲ್ಲ, ನೀರು ಪೂರ್ಣವಾಗಿಯೇ ಇರುತ್ತದೆ. ಹಾಗೆಯೆ ಇಲ್ಲಿಯೂ ಕೂಡ. ನಿನಗರ್ಥವಾಯಿತೆ ? ನಿಜವಾಗಿಯೂ ಇರುವುದು ತಾಯಿಯೊಬ್ಬಳೆ. ಏನು ಹೇಳುತ್ತೀಯೆ ?' ಹೀಗೆ ಹೇಳುತ್ತಾ ಇದ್ದಕ್ಕಿದ್ದಂತೆಯೆ 'ನಾನು ಧೂಮಪಾನ ಮಾಡುತ್ತೇನೆ' ಎಂದರು. ನಾನು ಕೂಡಲೇ ಹುಕ್ಕಾ ಸಿದ್ಧಪಡಿಸಿ ಅವರಿಗೆ ಕೊಟ್ಟೆ. ಅವರು ಒಂದೆರಡು 'ದಂ' ಎಳೆದು ಹುಕ್ಕವನ್ನು ಹಿಂದಿರುಗಿಸಿ 'ನಾನು ಕೊಳವೆಯ ಮೂಲಕ ಸೇದುತ್ತೇನೆ' ಎಂದು ಹೇಳಿ ಅದನ್ನು ಕೈಲಿ ತೆಗೆದುಕೊಂಡು ಸೇದತೊಡಗಿದರು. ಮೂರು ನಾಲ್ಕು 'ದಂ' ಎಳೆದು ನರೇಂದ್ರನ ಬಾಯ ಹತ್ತಿರ ಹಿಡಿದು ಹೇಳಿದರು: 'ನೀನೂ ಸೇದು. ನನ್ನ ಕೈಯಿಂದಲೇ ಸೇದು.' ನರೇಂದ್ರನು ಹಿಂಜರಿದ. ಆಗ ಶ್ರೀರಾಮ ಕೃಷ್ಣರು ಹೇಳಿದರು : 'ಎಂತಹ ಹೀನ ಬುದ್ಧಿ ನಿನ್ನದು ! ನೀನು ಮತ್ತು ನಾನು ಬೇರೆ ಏನು ? ಇದೂ ನಾನೆ ಅದೂ ನಾನೇ' ಹೀಗೆ ಹೇಳುತ್ತಾ ಶ್ರೀರಾಮಕೃಷ್ಣರು ತಮ್ಮ ಎರಡೂ ಕೈಯನ್ನು ನರೇಂದ್ರನ ಬಾಯ ಮುಂದೆ ಹಿಡಿದು ನರೇಂದ್ರನು ಸೇದುವಂತೆ ಮಾಡಿದರು. ಹೀಗೆ ಒತ್ತಾಯಕ್ಕೆ ಕಟ್ಟು ಬಿದ್ದು ನರೇಂದ್ರನು ಎರಡು ಮೂರು ಸಾರಿ ಹೊಗೆಯನ್ನು ಸೇದಿ ಅನಂತರ ನಿಲ್ಲಿಸಿದನು. ಅನಂತರ ಶ್ರೀರಾಮಕೃಷ್ಣರು ತಾವೇ ಅದರ ಮೂಲಕ ಸೇದಲು ಹೊರಟರು. ನರೇಂದ್ರನು ಕೂಡಲೇ ಹೇಳಿದ 'ಕೈತೊಳೆದುಕೊಂಡು ಅನಂತರ ಸೇದಿ' ಎಂದು. ಆದರೆ ಶ್ರೀರಾಮಕೃಷ್ಣರು ಆ ಮಾತಿಗೆ ಬೆಲೆ ಕೊಡದೆ ಹೇಳಿದರು : 'ಎಷ್ಟು ಸಣ್ಣತನ ನಿನ್ನದು. ತೀವ್ರವಾದ ಭೇದ ಜ್ಞಾನ ನಿನ್ನಲ್ಲಿದೆ'. ಶ್ರೀರಾಮ ಕೃಷ್ಣರು, ಎಂಜಲು ಕೈಗಳಿಂದಲೆ ಧೂಮಪಾನ ಮಾಡುತ್ತಾ ಭಾವಾವೇಶದಲ್ಲಿ ಅನೇಕ ವಿಷಯಗಳನ್ನು ಹೇಳತೊಡಗಿದರು. ಶ್ರೀರಾಮಕೃಷ್ಣರು ಯಾವುದೆ ಪದಾರ್ಥವನ್ನಾಗಲಿ ಅದರ ಸ್ವಲ್ಪ ಭಾಗವನ್ನು ಇತರರಿಗೆ ಮೊದಲೆ ಕೊಟ್ಟಿದ್ದರೆ ಅದನ್ನು ಉಚ್ಛಿಷ್ಟವೆಂದು ಪರಿಗಣಿಸುತ್ತಿದ್ದರು, ಅದನ್ನು ತಾವು ಸ್ವೀಕರಿಸುತ್ತಿರಲಿಲ್ಲ. ಅಂದು ಅವರು ನರೇಂದ್ರ ನೊಡನೆ ಆ ರೀತಿ ವರ್ತಿಸಿದುದನ್ನು ನೋಡಿ ನಾನು ಸ್ತಂಭೀಭೂತನಾದೆ ಮತ್ತು ಅವರು ನರೇಂದ್ರನನ್ನು ಎಷ್ಟೊಂದು ಪ್ರೀತಿಸುತ್ತಾರಲ್ಲ ಎಂದು ಭಾವಿಸಿದೆ.

24. "ಮಾತನಾಡುತ್ತಲೆ ರಾತ್ರಿ ಎಂಟುಗಂಟೆಯಾಯಿತು. ಶ್ರೀರಾಮಕೃಷ್ಣರ ಭಾವ ಉಪಶಮನಗೊಳ್ಳಲು ನರೇಂದ್ರ ಮತ್ತು ನಾನು ಅವರಿಂದ ಬೀಳ್ಕೊಂಡು ಕಲ್ಕತ್ತೆಗೆ ನಡೆದುಕೊಂಡು ಹಿಂದಿರುಗಿದೆವು. ಇದಾದನಂತರ ನಾವು ನರೇಂದ್ರನು ಈ ಕೆಳಗಿನ ಮಾತು ಹೇಳುವುದನ್ನು ಎಷ್ಟು ಬಾರಿ ಕೇಳಿರುವೆವು : 'ನಾನು ಶ್ರೀರಾಮಕೃಷ್ಣರನ್ನು ಪ್ರಥಮ ಬಾರಿಗೆ ನೋಡಿದಂದಿನಿಂದಲೂ ಎಲ್ಲಾ ಸಮಯದಲ್ಲಿಯೂ ಸಮಭಾವದಲ್ಲಿ ನನ್ನಲ್ಲಿ ವಿಶ್ವಾಸವಿರಿಸಿದವರು ಅವರೊಬ್ಬರೆ ಮತ್ತಾರೂ ಅಲ್ಲ -ನನ್ನ ಸ್ವಂತ ತಾಯಿ

ಸಹೋದರರು ಕೂಡ ಅಲ್ಲ. ಅವರು ಈ ರೀತಿಯ ಪ್ರೀತಿ ವಿಶ್ವಾಸದಿಂದಲೆ ನನ್ನನ್ನು ಶಾಶ್ವತವಾಗಿ ಬಂಧಿಸಿರುವರು. ಅವರೊಬ್ಬರಿಗೆ ಪ್ರೀತಿಸುವುದು ಗೊತ್ತು., ಅವರೊಬ್ಬರಿಗೆ ಮಾತ್ರ ನಿಜವಾಗಿ ಪ್ರೀತಿಸುವುದು ಸಾಧ್ಯವಾಯಿತು. ಸಂಸಾರದಲ್ಲಿ ಇತರರೆಲ್ಲರೂ ಸ್ವಾರ್ಥ ಸಾಧನೆಗಾಗಿ ಪ್ರೀತಿಯ ಸೋಗು ಹಾಕಿಕೊಂಡು ತಿರುಗಾಡುತ್ತಾರೆ."

# ಒಂಬತ್ತನೆಯ ಅಧ್ಯಾಯ

## ಶ್ರೀರಾಮಕೃಷ್ಣರ ಭಕ್ತ ಸಂಘ ಮತ್ತು ನರೇಂದ್ರನಾಥ್

**1. ಶ್ರೀರಾಮಕೃಷ್ಣರ ವಿಶೇಷ ಭಕ್ತರೆಲ್ಲರೂ ೧೮೮೪ರೊಳಗೆ ಬಂದರು 2. ಅವರೊಡನೆ ಶ್ರೀರಾಮಕೃಷ್ಣರ ವಿಶೇಷ ಸಂಬಂಧ 3. ಶ್ರೀರಾಮಕೃಷ್ಣರು ಅವರವರ ಯೋಗ್ಯತೆಗೆ ತಕ್ಕಂತೆ ಅನುಗ್ರಹಿಸಿದರು 4. ಅವರ ದಿವ್ಯಸ್ಪರ್ಶ ಏನನ್ನು ಪ್ರಮಾಣೀಕರಿಸುತ್ತದೆ ? 5. ಭಕ್ತರು ಶ್ರೀರಾಮಕೃಷ್ಣರನ್ನು ತಮ್ಮ ಭಾವದವರೆಂದೇ ಪರಿಗಣಿಸುತ್ತಿದ್ದರು 6. ಭಕ್ತರು ಸಂಕುಚಿತ ಭಾವವನ್ನು ತೊರೆದು ಉದಾರಭಾವ ಸಂಪನ್ನರಾಗುತ್ತಿದ್ದರು—ಉದಾಹರಣೆಗೆ ಬಲರಾಂ ಬಸು 7. ಶ್ರೀರಾಮಕೃಷ್ಣರ ಸಂಪರ್ಕದಿಂದ ಬಲರಾಮನಲ್ಲಿ ಪರಿವರ್ತನೆ 8. ಅಹಿಂಸೆಯ ವಿಚಾರದಲ್ಲಿ ಅವನ ಮನಃಪರಿವರ್ತನೆ 9. ಶ್ರೀರಾಮಕೃಷ್ಣರ ಭಕ್ತವೃಂದ ಮತ್ತು ಬಾಲಕ ಭಕ್ತರು 10. ಗೃಹೀ ಭಕ್ತರಿಗೆ ಅವರ ಉಪದೇಶ ಕ್ರಮ 11. ಭಕ್ತರಲ್ಲೆಲ್ಲ ಅಗ್ರಗಣ್ಯ ಸ್ಥಾನ ನರೇಂದ್ರನಿಗೆ 12. ಶ್ರೀರಾಮಕೃಷ್ಣರ ಮಾತಿನ ಅಂತರಾರ್ಥವನ್ನು ತಿಳಿಯುವ ನರೇಂದ್ರನ ಸಾಮರ್ಥ್ಯ 13. 'ಶಿವಜ್ಞಾನದಲ್ಲಿ ಜೀವಸೇವೆ' 14. ಈ ಹೇಳಿಕೆಯ ಮೇಲೆ ನರೇಂದ್ರನ ವ್ಯಾಖ್ಯಾನ**

1. ಶ್ರೀರಾಮಕೃಷ್ಣರು ಯೋಗದೃಷ್ಟಿಯ ಮೂಲಕ ತಮ್ಮೆಡೆಗೆ ಬರಬೇಕಾದ ಭಕ್ತರನ್ನು ಮೊದಲೇ ತಿಳಿದುಕೊಂಡಿದ್ದರು ಎಂಬುದನ್ನು ನಾವಾಗಲೇ ತಿಳಿಸಿರುವೆವು. ಅವರೆಲ್ಲರೂ ೧೮೮೪ರ ಕೊನೆಯ ವೇಳೆಗೆ ಅವರೆಡೆಗೆ ಬಂದು ಕಲೆತಿದ್ದರು. ೧೮೮೫ರ ಪ್ರಾರಂಭದಲ್ಲಿ ಪೂರ್ಣನು ಅವರೆಡೆಗೆ ಬಂದನು. ಅವನ ಮೇಲೆ ಕೃಪೆ ತೋರಿದ ಮೇಲೆ ಶ್ರೀರಾಮಕೃಷ್ಣರು ಹೇಳಿದ್ದರು : "ಇಲ್ಲಿಗೆ ಯಾರು ಯಾರು ಬರುತ್ತಾರೆಂದು ನಾನು ನೋಡಿದ್ದೆನೊ ಪೂರ್ಣನ ಬರುವಿಕೆಯೊಂದಿಗೆ ಆ ಶ್ರೇಣಿಯ ಭಕ್ತರೆಲ್ಲ ಬಂದಂತಾಯಿತು. ಮುಂದೆ ಆ ಶ್ರೇಣಿಯವರಾರೂ ಬರುವುದಿಲ್ಲ."

2. ಮೇಲೆ ಹೇಳಿದ ಶ್ರೇಣಿಯ ಭಕ್ತರುಗಳಲ್ಲಿ ಅನೇಕರು ೧೮೮೩ರ ಮಧ್ಯಭಾಗದಿಂದ ೧೮೮೪ರ ಮಧ್ಯಭಾಗದ ಅವಧಿಯಲ್ಲಿ ಶ್ರೀರಾಮಕೃಷ್ಣರೆಡೆಗೆ ಬಂದರು. ನರೇಂದ್ರನು ಆ ಸಂದರ್ಭದಲ್ಲಿ ಸಾಂಸಾರಿಕ ವಿಪತ್ತಿನೊಡನೆ ಸಂಗ್ರಾಮದಲ್ಲಿ ತೊಡಗಿದ್ದನು. ರಾಖಾಲನು ಸ್ವಲ್ಪಕಾಲದ ಮಟ್ಟಿಗೆ ಬೃಂದಾವನವನ್ನು ನೋಡಲು ಹೋಗಿದ್ದನು. ಈ ಎಲ್ಲ ಭಕ್ತರುಗಳ ಮಧ್ಯೆ ಯಾರಾದರೂ ಒಬ್ಬರು ಪ್ರಥಮಬಾರಿಗೆ ದಕ್ಷಿಣೇಶ್ವರಕ್ಕೆ ಬರುವುದಿದ್ದಾಗ ಶ್ರೀರಾಮಕೃಷ್ಣರು ತಮ್ಮ ಸಮೀಪವಿದ್ದ ಭಕ್ತರಿಗೆ 'ಇಂದು ಈ ದಿಕ್ಕಿನಿಂದ ಇಲ್ಲಿಗೆ ಸೇರಿದ ಒಬ್ಬನು ಬರುತ್ತಾನೆ' ಎಂದು ಮೊದಲೇ ಹೇಳಿಬಿಡುತ್ತಿದ್ದರು. ಕೆಲವರು ಬಂದ ಕೂಡಲೇ 'ನೀನು ಇಲ್ಲಿಗೆ ಸೇರಿದವನು' ಎಂದು ಹೇಳಿ ಮೊದಲೇ ಪರಿಚಿತ ವ್ಯಕ್ತಿಯಂತೆ ಆ ವ್ಯಕ್ತಿಯನ್ನು ಆದರಿಸುತ್ತಿದ್ದರು. ಇನ್ನು ಯಾವನಾದರೂ ಭಾಗ್ಯ

ವಂತನನ್ನು ಮೊದಲ ಬಾರಿಗೆ ನೋಡಿದಾಗ ಮತ್ತೆ ಅವನನ್ನು ನೋಡಬೇಕು, ತಿಂಡಿ ತಿನ್ನಿಸಬೇಕು ಮತ್ತು ಅವನೊಡನೆ ಏಕಾಂತವಾಗಿ ಮಾತನಾಡಬೇಕು ಎಂದು ಶ್ರೀರಾಮ ಕೃಷ್ಣರು ತೀವ್ರವಾಗಿ ಹಂಬಲಿಸುತ್ತಿದ್ದರು. ಯಾವನಾದರೂ ವ್ಯಕ್ತಿಯ ಸ್ವಭಾವ ಸಂಸ್ಕಾರಗಳನ್ನು ಗಮನಿಸಿ ಅದೇ ಸ್ವಭಾವದ ಇನ್ನೊರ್ವ ಭಕ್ತನೊಡನೆ ಅವನ ಪರಿ ಚಯ ಮಾಡಿಸಿ ಅವರಿಬ್ಬರೂ ಧಾರ್ಮಿಕ ಚಿಂತನೆಯಲ್ಲಿ ಕಾಲಕಳೆಯುವಂತೆ ಮಾಡು ತ್ತಿದ್ದರು. ಮತ್ತೆ ಅಂಥ ಕೆಲವು ಭಕ್ತರ ಮನೆಗೆ ಆಹ್ವಾನವಿಲ್ಲದೆಯೆ ಹೋಗಿ ಅವರ ಹಿತೈಷಿಗಳನ್ನು ತಮ್ಮ ಉತ್ತಮ ಸಂಭಾಷಣೆಯಿಂದ ತೃಪ್ತಿಪಡಿಸುತ್ತಿದ್ದರು—ಅವರು ಆ ಭಕ್ತನು ತಮ್ಮೆಡೆಗೆ ಬರುವುದನ್ನು ತಡೆಯದಿರಲೆಂದು.

3. ಅಂಥ ಒಬ್ಬ ಭಕ್ತನು ತಮ್ಮೆಡೆಗೆ ಬಂದ ಕೂಡಲೇ ಅವನನ್ನು ತಮ್ಮ ಹತ್ತಿರ ಕರೆದು ಧ್ಯಾನ ಮಾಡಲು ಹೇಳುತ್ತಿದ್ದರು. ಅನಂತರ ಅವರು ದಿವ್ಯ ಸ್ಫೂರ್ತಿಯಿಂದ ಅವನ ಎದೆ, ನಾಲಗೆ ಇತ್ಯಾದಿ ದೇಹಭಾಗಗಳನ್ನು ಸ್ಪರ್ಶಿಸುತ್ತಿದ್ದರು. ಈ ದಿವ್ಯ ಸ್ಪರ್ಶದ ಫಲವಾಗಿ ಭಕ್ತನ ಮನಸ್ಸು ಅಂತರ್ಮುಖವಾಗಿ ಅವನು ಬಾಹ್ಯ ಪ್ರಜ್ಞೆಯನ್ನು ಆಂಶಿಕವಾಗಿ ಅಥವಾ ಪೂರ್ಣವಾಗಿ ಕಳೆದುಕೊಳ್ಳುತ್ತಿದ್ದನು. ಆ ಭಕ್ತನು ಪಡೆದಿದ್ದ ಆಧ್ಯಾತ್ಮಿಕ ಪೂರ್ವ ಸಂಸ್ಕಾರಗಳೆಲ್ಲ ಈಗ ಕ್ರಿಯಾಶೀಲವಾಗಿ ಅವನು ಭಗವತ್ ಸಾಕ್ಷಾ ತ್ಕಾರದಲ್ಲಿ ಮುಳುಗುವಂತೆ ಪ್ರೇರೇಪಿಸುತ್ತಿದ್ದವು. ಆ ಸ್ಪರ್ಶದ ಪ್ರಭಾವದಿಂದಾಗಿ ಕೆಲವು ಭಕ್ತರು ದಿವ್ಯ ಜ್ಯೋತಿಯನ್ನು ಕಾಣುತ್ತಿದ್ದರು. ಇನ್ನು ಕೆಲವರು ದೇವ ದೇವಿಯರ ದಿವ್ಯರೂಪಗಳನ್ನು ಕಾಣುತ್ತಿದ್ದರು. ಮತ್ತೆ ಕೆಲವರು ಆಳ ಧ್ಯಾನದಲ್ಲಿ ಮುಳುಗಿ ಬಿಡುತ್ತಿದ್ದರು. ಇನ್ನು ಕೆಲವರು ಹಿಂದೆಂದೂ ಅನುಭವಿಸದ ಪರಮಾನಂದ ವನ್ನು ಪಡೆಯುತ್ತಿದ್ದರು. ಹಲಕೆಲವರ ಹೃದಯಗ್ರಂಥಿಗಳೆಲ್ಲ ಇದ್ದಕ್ಕಿದ್ದಂತೆ ಕತ್ತರಿಸ ಲ್ಪಟ್ಟು ಭಗವತ್ಸಾಕ್ಷಾತ್ಕಾರದ ತೀವ್ರ ವ್ಯಾಕುಲತೆಯನ್ನು ಅನುಭವಿಸುತ್ತಿದ್ದರು. ಮತ್ತೆ ಕೆಲವರು ಆಧ್ಯಾತ್ಮಿಕಭಾವದಿಂದ ಸ್ಫೂರ್ತಿಗೊಂಡು ಸವಿಕಲ್ಪ ಸಮಾಧಿಯನ್ನು ಪಡೆಯು ತ್ತಿದ್ದರು. ಮತ್ತು ಅಪರೂಪಕ್ಕೆ ಒಬ್ಬರು ನಿರ್ವಿಕಲ್ಪ ಸಮಾಧಿಯ ರುಚಿಯನ್ನು ನೋಡುತ್ತಿದ್ದರು. ಅವರೆಡೆಗೆ ಬಂದು ದಿವ್ಯದರ್ಶನಗಳನ್ನು ಪಡೆದ ವ್ಯಕ್ತಿಗಳ ಸಂಖ್ಯೆಗೆ ಮಿತಿಯೇ ಇಲ್ಲ. ನಾವು ಶ್ರೀರಾಮಕೃಷ್ಣರ ಬಾಯಿಂದಲೇ ಕೇಳಿರುವಂತೆ ತಾರಕನು ಒಂದು ದಿನ ತೀವ್ರ ವ್ಯಾಕುಲತೆಯನ್ನು ಅನುಭವಿಸಿದ. ಅವನ ಹೃದಯದಿಂದ ದುಃಖ ಉಮ್ಮಳಿಸಿ ಬಂದು ಅವನ ಹೃದಯ ಗ್ರಂಥಿಗಳೆಲ್ಲ ಶಿಥಿಲವಾದವಂತೆ. ಅವರ ಪ್ರಭಾವ ಪೂರ್ಣ ಸ್ಪರ್ಶದಿಂದ ಚಿಕ್ಕ ನರೇನನು ನಿರಾಕಾರ ಈಶ್ವರನ ಮೇಲೆ ಧ್ಯಾನ ಮಾಡುತ್ತಾ ಸಮಾಧಿಗೆ ಹೋದನು. ಆದರೆ ಆ ಸ್ಪರ್ಶದ ಪ್ರಭಾವದಿಂದ ನಿರ್ವಿಕಲ್ಪ ಸಮಾಧಿಯ ರುಚಿಯನ್ನು ಕಂಡವನು ನರೇಂದ್ರನಾಥನೊಬ್ಬನೇ. ಈ ರೀತಿ ಸ್ಪರ್ಶಿಸುವು ದರ ಜೊತೆಗೆ ಶ್ರೀರಾಮಕೃಷ್ಣರು ಕೆಲವರಿಗೆ ಮಂತ್ರದೀಕ್ಷೆಯನ್ನು ಇತ್ತಿದ್ದರು. ದೀಕ್ಷೆಯ ಸಂದರ್ಭದಲ್ಲಿ ಅವರು ಸಾಮಾನ್ಯ ಗುರುಗಳಂತೆ ಶಿಷ್ಯನ ಜಾತಕ ನೋಡುತ್ತಿರಲಿಲ್ಲ ಮತ್ತು ಪೂಜಾದಿಗಳನ್ನು ಆಚರಿಸುತ್ತಿರಲಿಲ್ಲ. ಆದರೆ ತಮ್ಮ ಯೋಗದೃಷ್ಟಿಯಿಂದ

ಅವರ ಪೂರ್ವ ಸಂಸ್ಕಾರಗಳನ್ನೆಲ್ಲ ಅರಿತು "ಇದು ನಿನ್ನ ಮಂತ್ರ" ಎಂದು ಮಂತ್ರವನ್ನು ಸೂಚಿಸುತ್ತಿದ್ದರು. ಅವರೇ ಹೇಳಿರುವಂತೆ ನಿರಂಜನ, ತೇಜ್‌ಚಂದ್ರ, ವೈಕುಂಠ ಮತ್ತು ಇತರರ ಮೇಲೆ ಅವರು ಈ ರೀತಿ ತಮ್ಮ ಅನುಗ್ರಹವನ್ನು ನೀಡಿದ್ದರು. ಯಾವ ನಾದರೂ ಭಕ್ತನು ಶಾಕ್ತ ಅಥವಾ ವೈಷ್ಣವ ಕುಟುಂಬಕ್ಕೆ ಸೇರಿದವನು ಎಂದಮಾತ್ರಕ್ಕೆ ಅವನಿಗೆ ಆ ಮಂತ್ರವನ್ನು ನೀಡುತ್ತಿರಲಿಲ್ಲ. ಅವನ ಮನೋಭಾವವನ್ನು ಸರಿಯಾಗಿ ವಿಶ್ಲೇಷಿಸಿ ಅರ್ಥಮಾಡಿಕೊಂಡು ಅದಕ್ಕನುಗುಣವಾಗಿ ಶಕ್ತಿ ಅಥವಾ ವಿಷ್ಣು ಮಂತ್ರವನ್ನು ಕೊಡುತ್ತಿದ್ದರು. ಆದ್ದರಿಂದ ಅವರು ಪ್ರತಿಯೊಬ್ಬರ ಮನೋಭಾವವನ್ನು ಪರೀಕ್ಷಿಸಿ ಅದಕ್ಕನುಗುಣವಾಗಿ ಅವರಿಗೆ ಏನು ಮಾಡಬೇಕೊ ಅದನ್ನು ಮಾಡುತ್ತಿದ್ದರು.

4. ಮಹಾಪುರುಷರು ತಮ್ಮ ಇಚ್ಛೆ ಮತ್ತು ಸ್ಪರ್ಶ ಮಾತ್ರದಿಂದಲೆ ಆಂತರಿಕ ಆಧ್ಯಾತ್ಮಿಕ ಶಕ್ತಿಯನ್ನು ಜಾಗ್ರತಗೊಳಿಸಿ ಇತರರ ಮನಸ್ಸಿನ ಗತಿಯನ್ನು ಉನ್ನತ ಮಾರ್ಗದಲ್ಲಿ ಹರಿಯುವಂತೆ ಮಾಡಬಲ್ಲರು ಎಂದು ಶಾಸ್ತ್ರಗಳು ಹೇಳುತ್ತವೆ. ಅಂತರಂಗ ಶಿಷ್ಯರ ಮಾತಿರಲಿ ವೇಶ್ಯೆಯರೆ ಮುಂತಾದ ದುಷ್ಕರ್ಮಿಗಳ ಜೀವನವೂ ಇಂಥಾ ಮಹಾ ಪುರುಷರ ಶಕ್ತಿ ಪ್ರಭಾವದಿಂದ ಪರಿವರ್ತನೆಗೊಳ್ಳುತ್ತದೆ. ಇಂದಿಗೂ ಕೂಡ ಅವತಾರ ಪುರುಷರೆಂದು ಪೂಜಿಸಲ್ಪಡುತ್ತಿರುವ ಕೃಷ್ಣ, ಬುದ್ಧ, ಕ್ರಿಸ್ತ, ಶ್ರೀಚೈತನ್ಯ ಇವರೇ ಮುಂತಾದ ಮಹಾಪುರುಷರ ಜೀವನದಲ್ಲಿ ಈ ಶಕ್ತಿಯ ಪ್ರಕಾಶವನ್ನು ಕಾಣಬಹುದು. ಆದರೆ ಶಾಸ್ತ್ರದಲ್ಲಿ ಹೇಳಿದ್ದರೇನಂತೆ, ಈ ಶ್ರೇಣಿಯ ಮಹಾಪುರುಷರ ಅಲೌಕಿಕ ಕಾರ್ಯ ಕಲಾಪಗಳ ಪ್ರತ್ಯಕ್ಷ ಪರಿಚಯ ಬಹುಕಾಲದಿಂದ ಆಗದೆ ಇದ್ದುದರಿಂದ ಈಗ ಆ ವಿಷಯ ದಲ್ಲಿ ಸಂಪೂರ್ಣ ಅಪನಂಬಿಕೆ ಉಂಟಾಗಿದೆ. ಭಗವದವತಾರವನ್ನು ನಂಬುವುದಂತೂ ದೂರದ ಮಾತು, ಭಗವಂತನಲ್ಲಿ ವಿಶ್ವಾಸವಿರಿಸುವುದೂ ಕೂಡ ಕೆಟ್ಟ ಸಂಸ್ಕಾರಗಳಿಂದ ಉಂಟಾದ ಮಾನಸಿಕ ದೌರ್ಬಲ್ಯ ಎಂದು ಅನೇಕರು ಪರಿಗಣಿಸುವಂತಾಗಿದೆ. ಜನಸಾಧಾರಣ ರಲ್ಲಿ ಇರುವಂತಹ ಈ ಅವಿಶ್ವಾಸವನ್ನು ದೂರಮಾಡಿ ಮತ್ತೆ ಆಧ್ಯಾತ್ಮಿಕತೆಯ ಬೀಜ ವನ್ನು ಬಿತ್ತುವುದಕ್ಕೋಸ್ಕರ ಶ್ರೀರಾಮಕೃಷ್ಣರಂತಹ ಅಲೌಕಿಕ ಪುರುಷರು ಜನ್ಮವೆತ್ತು ವುದು ಈ ವರ್ತಮಾನಯುಗದಲ್ಲಿ ಅತ್ಯಂತ ಅವಶ್ಯಕವಾಗಿತ್ತು. ಅವರಲ್ಲಿ ಮೇಲೆ ಹೇಳಿದ ಶಕ್ತಿಯ ಪ್ರಕಾಶವನ್ನು ಕಾಣುವುದರ ಮೂಲಕ ಹಿಂದೆ ಆಗಿ ಹೋದ ಮಹಾ ಪುರುಷರ ವಿಷಯದಲ್ಲಿಯೂ ವಿಶ್ವಾಸವಿರಿಸುವುದು ನಮಗೆ ಸಾಧ್ಯವಾಯಿತು. ಶ್ರೀರಾಮ ಕೃಷ್ಣರನ್ನು ಭಗವದವತಾರವೆಂದು ಪರಿಗಣಿಸದಿದ್ದರೂ ಚಿಂತೆಯಿಲ್ಲ. ಅವರು ಶ್ರೀಕೃಷ್ಣ, ಬುದ್ಧ, ಕ್ರಿಸ್ತ ಮತ್ತು ಚೈತನ್ಯರೇ ಮುಂತಾದ ಮಹಾಪುರುಷರಿಗೆ ಸಮಾನರಾದ ಲೋಕೋತ್ತರ ವ್ಯಕ್ತಿ ಎಂದು ಯಾರಿಗೆ ಆದರೂ ಪರಿಗಣಿಸದಿರುವುದು ಅಸಾಧ್ಯ.

5. ಹಿಂದೆ ಸೂಚಿಸಿದ ಭಕ್ತರುಗಳಲ್ಲಿ ಬಾಲಕರಿದ್ದರು, ವೃದ್ಧರಿದ್ದರು, ಸಂಸಾರಿ ಮತ್ತು ತ್ಯಾಗಿಗಳಿದ್ದರು, ಸಾಕಾರ ಮತ್ತು ನಿರಾಕಾರೋಪಾಸಕರಿದ್ದರು, ಶಾಕ್ತ, ವೈಷ್ಣವ ಅಥವಾ ಬೇರೆ ಸಂಪ್ರದಾಯದವರಿದ್ದರು—ಹೀಗೆ ವಿವಿಧ ಅವಸ್ಥೆಗಳಲ್ಲಿರುವ ವಿವಿಧಭಾವ ಗಳಿಂದ ಕೂಡಿದ ಜನರಿದ್ದರು. ಹೀಗೆ ಇಷ್ಟೊಂದು ಭೇದವಿದ್ದರೂ ಕೂಡ ಒಂದು

ವಿಷಯದಲ್ಲಿ ಅವರು ಸಮಭಾವ ಉಳ್ಳವರಾಗಿದ್ದರು. ಪ್ರತಿಯೊಬ್ಬರೂ ಕೂಡ ತಮ್ಮ ತಮ್ಮ ಮತ ಅಥವಾ ಮಾರ್ಗದಲ್ಲಿ ಆಂತರಿಕ ಶ್ರದ್ಧೆ ಉಳ್ಳವರಾಗಿದ್ದರು ಮತ್ತು ನಿಷ್ಠೆಯಿಂದ ಭಗವತ್ಪ್ರಾಪ್ತಿಗಾಗಿ ಎಂಥ ತ್ಯಾಗಕ್ಕೂ ಸಿದ್ಧರಾಗಿದ್ದರು. ಶ್ರೀರಾಮಕೃಷ್ಣರು ಇವರನ್ನೆಲ್ಲ ತಮ್ಮ ಪ್ರೀತಿಯಿಂದ ಬಂಧಿಸಿ ಅವರವರ ಭಾವಗಳಿಗೆ ಧಕ್ಕೆಯಾಗದಂತೆ ಅವರೊಡನೆ ವ್ಯವಹರಿಸುತ್ತಿದ್ದರು. ಎಲ್ಲ ವಿಷಯದಲ್ಲಿಯೂ ಅವರು ಹೇಗೆ ವ್ಯವಹರಿಸುತ್ತಿದ್ದರೆಂದರೆ ಪ್ರತಿಯೊಬ್ಬ ಭಕ್ತನೂ ತಾನು ಯಾವ ಮಾರ್ಗದಲ್ಲಿ ಮುಂದುವರಿಯುತ್ತಿರುವನೊ ಅವರಿಗೆ ಅದರಲ್ಲಿಯೆ ಅಧಿಕ ಪ್ರೀತಿ ಎಂದು ಅವನಿಗೆ ಅನಿಸುತ್ತಿತ್ತು. ಇದರಿಂದಾಗಿ ಅವರಿಗೆಲ್ಲ ಶ್ರೀರಾಮಕೃಷ್ಣರ ಮೇಲಿದ್ದ ಭಕ್ತಿ ಮತ್ತು ಪ್ರೀತಿಗೆ ಒಂದು ಮಿತಿಯೆ ಇರುತ್ತಿರಲಿಲ್ಲ.

6. ಅವರ ಸದ್ಗುಣಗಳ ಮತ್ತು ಶಿಕ್ಷಣದ ಪ್ರಭಾವದಿಂದ ಪ್ರತಿಯೊಬ್ಬ ಭಕ್ತರೂ ತಮ್ಮ ತಮ್ಮ ಸಂಕುಚಿತ ಭಾವಗಳನ್ನು ಮೀರಿ ಹೋಗುತ್ತಿದ್ದರು ಮತ್ತು ಉದಾರ ಭಾವ ಸಂಪನ್ನರಾಗಿ ಅದರಲ್ಲಿಯೆ ಹಿಂದಿನ ಭಾವಗಳ ಪೂರ್ಣತೆಯನ್ನು ಕಂಡು ಮುಗ್ಧರಾಗುತ್ತಿದ್ದರು. ಇದಕ್ಕೆ ದೃಷ್ಟಾಂತವಾಗಿ ಇಲ್ಲಿ ಒಂದು ಸಾಮಾನ್ಯ ಘಟನೆಯನ್ನು ಪ್ರಸ್ತಾಪಿಸುತ್ತೇವೆ. ಕಲ್ಕತ್ತೆಯ ಬಗ್‌ಬಜಾರಿನಲ್ಲಿ ವಾಸಿಸುತ್ತಿದ್ದ ಬಲರಾಮ್ ಬಸು ವೈಷ್ಣವ ವಂಶದಲ್ಲಿ ಜನಿಸಿದವನು ಮತ್ತು ಕಟ್ಟಾ ವೈಷ್ಣವನೂ ಆಗಿದ್ದ. ಸಂಸಾರದಲ್ಲಿದ್ದರೂ ಅಸಂಸಾರಿಯಂತೆ ಜೀವಿಸುತ್ತಿದ್ದ. ಯಥೇಷ್ಟವಾದ ಸಂಪತ್ತಿದ್ದರೂ ಅವನ ಹೃದಯದಲ್ಲಿ ಅಭಿಮಾನಕ್ಕೆ ಸ್ಥಾನವೇ ಇರಲಿಲ್ಲ. ಶ್ರೀರಾಮಕೃಷ್ಣರೆಡೆಗೆ ಬರುವುದಕ್ಕೆ ಮುಂಚೆ ಅವನು ಪ್ರತಿ ದಿನ ಬೆಳಗ್ಗೆ ಪೂಜೆ ಪಾಠಾದಿಗಳಲ್ಲಿ ನಾಲ್ಕು ಐದು ಗಂಟೆ ಕಳೆಯುತ್ತಿದ್ದನು. ಅವನು ಅಹಿಂಸಾ ಧರ್ಮವನ್ನು ಎಷ್ಟರ ಮಟ್ಟಿಗೆ ಪಾಲಿಸುತ್ತಿದ್ದನೆಂದರೆ ಕೀಟ ಪತಂಗಗಳನ್ನೂ ಕೂಡ ಯಾವಾಗಲೂ ಯಾವ ಕಾರಣಕ್ಕಾಗಿಯೂ ಹಿಂಸಿಸುತ್ತಿರಲಿಲ್ಲ. ಶ್ರೀರಾಮಕೃಷ್ಣರು ಅವನನ್ನು ನೋಡಿದ ಕೂಡಲೇ ಪೂರ್ವ ಪರಿಚಿತನೆಂಬಂತೆ ಆದರದಿಂದ ಬರಮಾಡಿಕೊಂಡರು. 'ಇವನು ಮಹಾಪ್ರಭು ಚೈತನ್ಯ ದೇವನ ಸಂಗಡಿಗರಲ್ಲಿ ಒಬ್ಬ. ಇಲ್ಲಿಗೆ ಸೇರಿದವನು. ಶ್ರೀ ಅದ್ವೈತ ಮತ್ತು ನಿತ್ಯಾನಂದ ಇವರೇ ಮುಂತಾದವರೊಡನೆ ಸಂಕೀರ್ತನೆಯನ್ನು ಮಾಡುತ್ತಾ ಮಹಾಪ್ರಭುವು ದೇಶದಲ್ಲಿ ಹರಿಪ್ರೇಮದ ಪ್ರವಾಹವನ್ನೇ ಹರಿಸಿ ಆಬಾಲವೃದ್ಧ ನರನಾರಿಯರನ್ನೆಲ್ಲ ಮತ್ತರನ್ನಾಗಿಸಿದುದನ್ನು ನಾನು ಭಾವದಲ್ಲಿ ಕಂಡೆ. ಆ ಅದ್ಭುತ ಸಂಕೀರ್ತನೆಯ ದಳದ ಮಧ್ಯೆ ಬಲರಾಮನನ್ನು ಕಂಡಿದ್ದೆ" ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು.

7. ಶ್ರೀರಾಮಕೃಷ್ಣರ ಪುಣ್ಯ ದರ್ಶನವನ್ನು ಪಡೆದ ಮೇಲೆ ಬಲರಾಮನ ಮನಸ್ಸಿನಲ್ಲಿ ಬಹಳಷ್ಟು ಪರಿವರ್ತನೆ ಉಂಟಾಗಿ ಅವನು ಆಧ್ಯಾತ್ಮಿಕ ರಾಜ್ಯದಲ್ಲಿ ಬಹುಬೇಗನೆ ಮುಂದುವರಿಯುವಂತಾಯಿತು. ಬಾಹ್ಯ ಪೂಜಾದಿಗಳಿಂದ ಕೂಡಿದ ವೈಧೀಭಕ್ತಿಯ ಸೀಮೆಯನ್ನು ದಾಟಿ ಅವನು ಸ್ವಲ್ಪ ಕಾಲದಲ್ಲಿಯೆ ಭಗವಂತನಲ್ಲಿ ಸಂಪೂರ್ಣ ಶರಣಾದನು ಮತ್ತು ಸದಸದ್ ವಿಚಾರ ಸಂಪನ್ನನಾಗಿ ಸಂಸಾರವನ್ನು ನಡೆಸಲು ಸಮರ್ಥ

ನಾದನು. ಪತ್ನಿ, ಪುತ್ರ, ಧನ, ಜನ ಎಲ್ಲವನ್ನೂ ಭಗವಂತನ ಪಾದಪದ್ಮದಲ್ಲಿ ನಿವೇದಿಸಿ ದಾಸನಂತೆ ಸಂಸಾರದಲ್ಲಿ ಜೀವಿಸುತ್ತಿದ್ದನು. ಶ್ರೀರಾಮಕೃಷ್ಣರ ಆಜ್ಞಾನುವರ್ತಿಯಾಗಿ ಅವರ ಪುಣ್ಯಸಂಗದಲ್ಲಿ ಎಷ್ಟು ಸಾಧ್ಯವೊ ಅಷ್ಟು ಕಾಲ ಕಳೆಯುವುದು ಬಲರಾಮನ ಜೀವನದ ಉದ್ದೇಶವಾಗಿತ್ತು. ಶ್ರೀರಾಮಕೃಷ್ಣರ ಕೃಪೆಯಿಂದ ತಾನು ಶಾಂತಿಯನ್ನು ಪಡೆಯುವುದರಲ್ಲಿಯೆ ನಿಶ್ಚಿಂತನಾಗಲಿಲ್ಲ. ತನ್ನ ಆತ್ಮೀಯರು ಬಂಧು ಬಳಗದವರೂ ಕೂಡ ಶ್ರೀರಾಮಕೃಷ್ಣರ ಸಂಗವನ್ನು ಪಡೆದು ಯಥಾರ್ಥ ಸುಖವನ್ನು ಆಸ್ವಾದಿಸ ಬೇಕೆಂಬುದು ಅವನ ಇಚ್ಛೆಯಾಗಿತ್ತು. ಹೀಗೆ ಬಲರಾಮನ ಪ್ರೇರಣೆಯಿಂದಾಗಿ ಅನೇಕ ವ್ಯಕ್ತಿಗಳು ಶ್ರೀರಾಮಕೃಷ್ಣರ ಆಶ್ರಯವನ್ನು ಪಡೆದು ಧನ್ಯರಾದರು.

8. ಬಾಹ್ಯ ಪೂಜೆಯಂತೆಯೆ ಬಲರಾಮನ ಅಹಿಂಸಾ ಪಾಲನೆಯು ಸ್ವಲ್ಪ ಕಾಲದ ಲ್ಲಿಯೆ ಪರಿವರ್ತನೆಗೊಂಡಿತು. ಹಿಂದೆ ಬೇರೆ ಸಮಯದಲ್ಲಿ ಇರಲಿ, ಧ್ಯಾನ ಮಾಡುವಾಗ ಸೊಳ್ಳೆಗಳಿಂದ ಮನಸ್ಸು ವಿಕ್ಷಿಪ್ತಗೊಂಡರೂ ಅವುಗಳನ್ನು ಕೊಲ್ಲುವುದು ಅವನಿಗೆ ಸಾಧ್ಯ ವಾಗುತ್ತಿರಲಿಲ್ಲ. ಅದರಿಂದ ತನಗೆ ಧರ್ಮಹಾನಿಯಾಗುವುದೆಂದು ಅವನು ಭಾವಿಸಿದ್ದ. ಈಗ ಒಂದು ದಿನ ಅವನ ಮನಸ್ಸಿಗೆ ಹೊಳೆಯಿತು: "ಅನೇಕ ರೀತಿಯಲ್ಲಿ ವಿಕ್ಷಿಪ್ತಗೊಂಡ ಮನಸ್ಸನ್ನು ಭಗವಂತನಲ್ಲಿ ಏಕಾಗ್ರಗೊಳಿಸುವುದೇ ಧರ್ಮ, ಸೊಳ್ಳೆ ಮುಂತಾದ ಕೀಟ ಗಳ ಜೀವನವನ್ನು ರಕ್ಷಿಸುವುದರಲ್ಲಿಯೇ ಅದನ್ನು ತೊಡಗಿಸುವುದಲ್ಲ. ಆದ್ದರಿಂದ ನಾಲ್ಕೈದು ಸೊಳ್ಳೆಗಳನ್ನು ಕೊಂದು ಸ್ವಲ್ಪ ಹೊತ್ತಿನ ಮಟ್ಟಿಗಾದರೂ ಮನಸ್ಸನ್ನು ಭಗವಂತನಲ್ಲಿ ಇರಿಸಲು ಸಾಧ್ಯವಾದರೆ ಅದರಿಂದ ಅಧರ್ಮವೆಸಗಿದಂತೆ ಆಗದಿರುವುದು ಮಾತ್ರವಲ್ಲದೆ ಹೆಚ್ಚು ಲಾಭವೇ ಉಂಟಾಗುತ್ತದೆ." ಅವನು ಹೇಳುತ್ತಿದ್ದನು: "ಈ ಭಾವನೆಯಿಂದ ಇಷ್ಟು ಕಾಲವೂ ಅಹಿಂಸಾ ಧರ್ಮಪಾಲನೆಯಲ್ಲಿದ್ದ ಆಸಕ್ತಿ ಹೊರಟು ಹೋದರೂ ಆ ವಿಷಯದಲ್ಲಿ ಮನಸ್ಸು ಸಂಪೂರ್ಣ ನಿಸ್ಸಂದೇಹವಾಗಿರಲಿಲ್ಲ. ಈ ವಿಷಯ ದಲ್ಲಿ ಶ್ರೀರಾಮಕೃಷ್ಣರನ್ನು ಕೇಳಲು ನಾನು ದಕ್ಷಿಣೇಶ್ವರಕ್ಕೆ ಹೋದೆ. ಹೋಗುತ್ತಿರು ವಾಗ ದಾರಿಯಲ್ಲಿ ಶ್ರೀರಾಮಕೃಷ್ಣರು ಎಂದಾದರೂ ಸೊಳ್ಳೆ ಹೊಡೆದಿರುವುದನ್ನು ನೋಡಿರುವೆನೆ ? ಎಂದು ಯೋಚಿಸತೊಡಗಿದೆ. ಇಲ್ಲ ಎನಿಸಿತು. ನನ್ನ ನೆನಪಿನಾಳಕ್ಕೆ ಹೊಕ್ಕು ನೋಡಿದಾಗ ಅವರು ನನಗಿಂತಲೂ ಹೆಚ್ಚು ಅಹಿಂಸಾವ್ರತವನ್ನು ಪರಿಪಾಲಿಸು ತ್ತಾರೆ, ಎಂದೆನಿಸಿತು. ಸುಂದರ ಹುಲ್ಲುಗಾವಲಿನ ಮೇಲೆ ಯಾರೊ ನಡೆದಾಗ ಅವರಿಗೆ ತಮ್ಮ ಎದೆಯ ಮೇಲೇ ನಡೆದಂತೆ ವೇದನೆಯುಂಟಾದ ಘಟನೆ ನೆನಪಿಗೆ ಬಂತು. ಹುಲ್ಲಿನ ಲ್ಲಿದ್ದ ಜೀವಶಕ್ತಿ ಮತ್ತು ಚೈತನ್ಯ ಅವರಿಗೆ ಸುಸ್ಪಷ್ಟವಾಗಿ ಗೋಚರವಾಗಿತ್ತು. ನನ್ನ ಮನಸ್ಸೆ ನನ್ನನ್ನು ಮೋಸಪಡಿಸುತ್ತಿದೆ, ಅವರನ್ನು ಈ ವಿಷಯದಲ್ಲಿ ಪ್ರಶ್ನಿಸುವ ಆವಶ್ಯ ಕತೆ ಇಲ್ಲ ಎಂದು ನಿರ್ಧರಿಸಿದೆ. ಏನೇ ಆಗಲಿ, ಹೋಗಿ ಅವರನ್ನು ನೋಡಿ ಬರುತ್ತೇನೆ, ಮನಸ್ಸು ಪವಿತ್ರವಾಗುತ್ತದೆ ಎಂದು ನಿರ್ಧರಿಸಿದೆ.

"ದಕ್ಷಿಣೇಶ್ವರಕ್ಕೆ ಹೋಗಿ ಶ್ರೀರಾಮಕೃಷ್ಣರ ಕೋಣೆಯ ಬಾಗಿಲನ್ನು ತಲುಪಿದೆ. ಆದರೆ ಅದನ್ನು ಪ್ರವೇಶಿಸುವುದಕ್ಕೆ ಮುಂಚೆಯೆ ಅವರು ಏನು ಮಾಡುತ್ತಿರುವರು

ಎಂಬುದನ್ನು ದೂರದಿಂದ ನೋಡಿ ನಾನು ಸ್ತಂಭೀಭೂತನಾದೆ. ಅವರು ತಮ್ಮ ಹಾಸಿಗೆಯಿಂದ ತಿಗಣೆಗಳನ್ನು ಹೊರತೆಗೆದು ಕೊಲ್ಲುತ್ತಿದ್ದರು. ನಾನು ಅವರನ್ನು ಸಮೀಪಿಸಿ ಅವರಿಗೆ ಪ್ರಣಾಮ ಮಾಡುತ್ತಿದ್ದಂತೆಯೆ ಅವರು ಹೇಳಿದರು : 'ಈ ದಿಂಬಿನಲ್ಲಿ ಅನೇಕ ತಿಗಣೆಗಳಾಗಿವೆ. ಹಗಲೂ ರಾತ್ರೆ ಕಚ್ಚಿ ಮನಸ್ಸನ್ನು ವಿಕ್ಷೇಪಗೊಳಿಸುತ್ತವೆ ಮತ್ತು ನಿದ್ರಾಭಂಗ ಮಾಡುತ್ತವೆ. ಅದಕ್ಕಾಗಿ ಅವುಗಳನ್ನು ಕೊಲ್ಲುತ್ತಿದ್ದೇನೆ.' ಇನ್ನು ಕೇಳುವುದಕ್ಕೆ ಏನೂ ಇರಲಿಲ್ಲ, ಶ್ರೀರಾಮಕೃಷ್ಣರ ಮಾತಿನಿಂದ ಮತ್ತು ಕಾರ್ಯದಿಂದ ಮನಸ್ಸಿನ ಸಂಶಯ ದೂರವಾಯಿತು. ಆದರೆ ನನಗೆ ಅಂದು ಆಶ್ಚರ್ಯ, ಕಳೆದ ಎರಡು ಮೂರು ವರ್ಷಗಳಿಂದ ಇವರೆಡೆಗೆ ಅನೇಕ ಬಾರಿ ಬಂದಿದ್ದೇನೆ, ಹಗಲು ಬಂದಿದ್ದೇನೆ ರಾತ್ರಿ ಬಂದಿದ್ದೇನೆ. ಸಂಜೆ ಬಂದು ನಡುರಾತ್ರಿಯವರೆಗೂ ಇದ್ದು ಹೋಗಿದ್ದೇನೆ. ಪ್ರತಿವಾರವೂ ಹೀಗೆ ಮೂರುನಾಲ್ಕು ಸಾರಿ ಬಂದು ಹೋಗಿರುವೆ. ಆದರೆ ಒಂದು ದಿನವೂ ಅವರು ಈ ರೀತಿಯ ಕಾರ್ಯದಲ್ಲಿ ತೊಡಗಿದುದನ್ನು ನೋಡಿಯೇ ಇಲ್ಲ. ಇಂದು ಮಾತ್ರ ಏಕೆ ಹೀಗಾಯಿತು ? ಇದರ ಬಗ್ಗೆ ಯೋಚಿಸುತ್ತಾ ಇರುವಾಗ ನನ್ನ ಮನಸ್ಸಿಗೆ ಹೊಳೆಯಿತು ಹಿಂದೆ ಅವರು ಈ ರೀತಿ ಮಾಡುವುದನ್ನು ನೋಡಿದ್ದರೆ ನನ್ನ ಭಾವವು ನಷ್ಟವಾಗಿ ಇವರ ಮೇಲಿನ ಶ್ರದ್ಧೆಯನ್ನು ಕಳೆದುಕೊಳ್ಳುತ್ತಿದ್ದೆ. ಪರಮಕಾರುಣಿಕರಾದ ಶ್ರೀರಾಮಕೃಷ್ಣರು ಅದಕ್ಕಾಗಿಯೆ ಹಿಂದೆ ಎಂದೂ ನನ್ನ ಮುಂದೆ ಈ ರೀತಿಯ ಕಾರ್ಯವನ್ನು ಮಾಡಲಿಲ್ಲ.

9. ಶ್ರೀರಾಮಕೃಷ್ಣರು ಭಾವದಲ್ಲಿ ಕಂಡ ಭಕ್ತರಲ್ಲದೆ ಅನೇಕ ನರ ನಾರಿಯರು ಈ ಸಮಯದಲ್ಲಿ ಶ್ರೀರಾಮಕೃಷ್ಣರ ದರ್ಶನದಿಂದ ಶಾಂತಿಯನ್ನು ಪಡೆಯಲು ದಕ್ಷಿಣೇಶ್ವರಕ್ಕೆ ಬರುತ್ತಿದ್ದರು. ಇವರನ್ನೂ ಕೂಡ ಅವರು ಪ್ರೀತಿಯಿಂದ ಸ್ವೀಕರಿಸಿ ಕೆಲವರಿಗೆ ಉಪದೇಶ ನೀಡುತ್ತಿದ್ದರು, ಮತ್ತೆ ಕೆಲವರನ್ನು ದಿವ್ಯ ಸ್ಪರ್ಶದಿಂದ ಕೃತಾರ್ಥರನ್ನಾಗಿಸುತ್ತಿದ್ದರು. ಹೀಗೆ ದಿನ ಕಳೆದಂತೆಲ್ಲ ಒಂದು ಬೃಹತ್ತಾದ ಭಕ್ತರ ಸಂಘವೇ ಸಂಘಟಿತವಾಯಿತು. ಅವರಲ್ಲಿ ಬಾಲಕರ ಮತ್ತು ಅವಿವಾಹಿತ ಯುವಕರ ಧರ್ಮಜೀವನವನ್ನು ರೂಪಿಸುವುದರಲ್ಲಿ ಅವರು ಹೆಚ್ಚು ಗಮನವನ್ನು ಕೊಟ್ಟರು. ಇದಕ್ಕೆ ಕಾರಣವನ್ನು ನಿರ್ದೇಶಿಸಿ ಅನೇಕ ಬಾರಿ ಹೇಳುತ್ತಿದ್ದರು : "ನೂರಕ್ಕೆ ನೂರರಷ್ಟು ಮನಸ್ಸನ್ನು ಕೊಡದೆ ಭಗವಂತನ ಪೂರ್ಣದರ್ಶನವನ್ನು ಪಡೆಯಲಾಗುವುದಿಲ್ಲ, ಬಾಲಕರ ಸಂಪೂರ್ಣ ಮನಸ್ಸು ಅವರ ಹತ್ತಿರವೆ ಇದೆ—ಪತ್ನಿ ಪುತ್ರ ಧನ ಸಂಪತ್ತು ಇತ್ಯಾದಿ ಪ್ರಾಪಂಚಿಕ ವಿಷಯಗಳಲ್ಲಿ ಹರಡಿಹೋಗಿಲ್ಲ. ಈಗಿನಿಂದಲೆ ಪ್ರಯತ್ನಿಸಿ ಇವರು ಸಂಪೂರ್ಣವಾಗಿ ಮನಸ್ಸನ್ನು ಭಗವಂತನಿಗೆ ಅರ್ಪಿಸಿದರೆ ಅವನ ದರ್ಶನವನ್ನು ಪಡೆದು ಕೃತಾರ್ಥರಾಗಲು ಸಾಧ್ಯವಿದೆ. ಆದ್ದರಿಂದಲೇ ಇವರನ್ನು ಧರ್ಮಪಥದಲ್ಲಿ ತೊಡಗಿಸುವುದರಲ್ಲಿ ನನಗೆ ಹೆಚ್ಚು ಆಸಕ್ತಿ." ಸಮಯ ಸಿಕ್ಕಿದಾಗಲೆಲ್ಲ ಶ್ರೀರಾಮಕೃಷ್ಣರು ಇವರಲ್ಲಿ ಪ್ರತಿಯೊಬ್ಬರನ್ನೂ ಏಕಾಂತದಲ್ಲಿ ಕರೆದುಕೊಂಡು ಹೋಗಿ ಯೋಗ, ಧ್ಯಾನ ಮುಂತಾದ ಉಚ್ಚ ಸಾಧನೆಗಳ ಸಂಬಂಧವಾಗಿ ಮತ್ತು ವಿವಾಹ ಬಂಧನಕ್ಕೆ ಸಿಕ್ಕದೆ ಅಖಂಡ ಬ್ರಹ್ಮಚರ್ಯವನ್ನು ಪಾಲಿಸುವ ಸಂಬಂಧ

ವಾಗಿ ಉಪದೇಶ ನೀಡುತ್ತಿದ್ದರು. ಇವರಿಗೂ ಕೂಡ ಅಧಿಕಾರಿ ಭೇದದಿಂದ ಬೇರೆಬೇರೆ ರೀತಿಯಲ್ಲಿ ಉಪದೇಶ ನೀಡುತ್ತಿದ್ದರು. ಅವರವರ ಭಾವಕ್ಕೆ ಅನುಗುಣವಾಗಿ ಶಾಂತ ದಾಸ್ಯ ಮುಂತಾದ ಭಾವಗಳನ್ನು ಅವಲಂಬಿಸಿ ಪ್ರತಿಯೊಬ್ಬರೂ ಹೇಗೆ ಸುಲಭವಾಗಿ, ಆಧ್ಯಾತ್ಮಿಕ ಉನ್ನತಿಯನ್ನು ಪಡೆಯಬೇಕು ಎಂಬುದರ ಬಗ್ಗೆ ಉಪದೇಶ ನೀಯುತ್ತಿದ್ದರು.

10. ಬಾಲಕರ ಮೇಲೆ ಅವರಿಗಿದ್ದ ಆಸಕ್ತಿಯನ್ನು ಗಮನಿಸಿ ಗೃಹಸ್ಥ ಭಕ್ತರ ಮೇಲೆ ಅವರಿಗೆ ಹೆಚ್ಚು ಕೃಪೆ ಮತ್ತು ಪ್ರೀತಿ ಇರಲಿಲ್ಲ ಎಂದು ಯಾರೂ ಭಾವಿಸ ಬಾರದು. ಉಚ್ಚಸ್ತರದ ಆಧ್ಯಾತ್ಮಿಕ ಸಾಧನೆಗಳನ್ನು ಮಾಡಲು ಅವರಲ್ಲನೇಕರಿಗೆ ಸಮಯ ಮತ್ತು ಸಾಮರ್ಥ್ಯಗಳು ಇಲ್ಲದಿದ್ದುದರಿಂದ ಶ್ರೀರಾಮಕೃಷ್ಣರು ಅವರಿಗೆ ಅದನ್ನು ಮಾಡಲು ಹೇಳುತ್ತಿರಲಿಲ್ಲ. ಆದರೆ ಪ್ರಾಪಂಚಿಕ ಭೋಗಾಸಕ್ತಿಯನ್ನು ನಿಧಾನವಾಗಿ ಕಡಮೆ ಮಾಡುತ್ತಾ ಭಕ್ತಿಮಾರ್ಗವನ್ನು ಅನುಸರಿಸುತ್ತಾ ಅವರು ಕ್ರಮೇಣ ಭಗವತ್ಸಾಕ್ಷಾ ತ್ಕಾರವನ್ನು ಪಡೆಯಬೇಕೆಂದು ಅವರಿಗೆ ಯಾವಾಗಲೂ ಉತ್ತೇಜನ ನೀಡುತ್ತಿದ್ದರು. ಶ್ರೀಮಂತರ ಮನೆಯಲ್ಲಿ ಇರುವ ದಾಸ ದಾಸಿಯರಂತೆ ಮಮತೆಯನ್ನು ತೊರೆದು ಭಗ ವಂತನ ಸಂಸಾರದಲ್ಲಿ ತಮ್ಮ ತಮ್ಮ ಕರ್ತವ್ಯಗಳನ್ನು ಪರಿಪಾಲಿಸುತ್ತಾ ವಾಸಿಸಬೇಕೆಂದು ಅವರಿಗೆ ಉಪದೇಶ ನೀಡುತ್ತಿದ್ದರು. "ಒಂದೆರಡು ಮಕ್ಕಳಾದ ಮೇಲೆ ಭಗವಂತನಿಗೆ ಮನಸ್ಸನ್ನು ಅರ್ಪಿಸಿ ಪತಿಪತ್ನಿಯರು ಸಹೋದರ ಸಹೋದರಿಯರಂತೆ ಸಂಸಾರದಲ್ಲಿ ಜೀವಿಸಿರಬೇಕು—" ಇತ್ಯಾದಿಯಾಗಿ ಹೇಳಿ ಸಾಧ್ಯವಾದಷ್ಟೂ ಕೂಡ ಬ್ರಹ್ಮಚರ್ಯ ಪಾಲನೆ ಯನ್ನು ಮಾಡಬೇಕೆಂದು ಅವರಿಗೆ ಉತ್ತೇಜನ ನೀಡುತ್ತಿದ್ದರು. ಇಷ್ಟೇ ಅಲ್ಲದೆ ಯಾವಾಗಲೂ ಸತ್ಯಮಾರ್ಗದಲ್ಲಿದ್ದು ಎಲ್ಲರೊಡನೆಯೂ ಋಜುಮಾರ್ಗದಲ್ಲಿ ವ್ಯವಹರಿ ಸುತ್ತ ವಿಲಾಸಜೀವನವನ್ನು ಬಿಟ್ಟು ಸಾದಾ ಊಟ ಬಟ್ಟೆಯಲ್ಲಿ ಸಂತುಷ್ಟರಾಗಿ ಯಾವಾ ಗಲೂ ಭಗವಂತನ ಕಡೆಗೆ ದೃಷ್ಟಿ ಇರಿಸಿ ಪ್ರತಿನಿತ್ಯವೂ ಭಗವಂತನ ಸ್ಮರಣಮನನ ಪೂಜೆ ಜಪ ಸಂಕೀರ್ತನೆ ಇತ್ಯಾದಿಗಳನ್ನು ಮಾಡುತ್ತಾ ಬಾಳಬೇಕೆಂದು ಅವರಿಗೆ ಹೇಳುತ್ತಿದ್ದರು. ಗೃಹಸ್ಥರಲ್ಲಿಯೂ ಯಾರು ಇದನ್ನೆಲ್ಲ ಮಾಡಲು ಅಸಮರ್ಥರೊ ಅವರಿಗೆ ಸಂಜೆಯ ವೇಳೆ ಒಬ್ಬರೇ ಕುಳಿತು ತಾಳ ಹಾಕುತ್ತಾ ಹರಿನಾಮವನ್ನು ಉಚ್ಚರಿಸಲು ಮತ್ತು ತಮ್ಮ ಸಂಬಂಧಿಕರೊಡನೆ ಕಲೆತು ಭಜನೆ ಮಾಡಲು ಉಪದೇಶ ನೀಡುತ್ತಿದ್ದರು. ಸಾಧಾ ರಣವಾಗಿ ಸ್ತ್ರೀ ಪುರುಷರಿಗೆಲ್ಲ ಒಟ್ಟಿಗೆ ಉಪದೇಶ ನೀಡುವಾಗ ಅವರು ಸಾಮಾನ್ಯವಾಗಿ ಈ ಕೆಳಗಿನ ಮಾತುಗಳನ್ನು ಹೇಳುತ್ತಿದ್ದರು, "ಕಲಿಯುಗದಲ್ಲಿ ನಾರದೀಯ ಭಕ್ತಿಯೇ ಉತ್ತಮ ಮಾರ್ಗ. ಭಗವನ್ನಾಮವನ್ನು ಘಟ್ಟಿಯಾಗಿ ಹಾಡಿದರೆ ಜನರು ಉದ್ಧಾರ ವಾಗುತ್ತಾರೆ. ಕಲಿಯುಗದಲ್ಲಿ ಜನರು ಅನ್ನಗತ ಪ್ರಾಣರು, ಅಲ್ಪಾಯುಗಳು ಮತ್ತು ನಿಶ್ಶಕ್ತರು. ಆದ್ದರಿಂದಲೇ ಆಧ್ಯಾತ್ಮಿಕ ಸಿದ್ಧಿಯನ್ನು ಪಡೆಯಲು ಅವರಿಗಾಗಿ ಸುಲಭ ಮಾರ್ಗವು ನಿರ್ದೇಶಿಸಲ್ಪಟ್ಟಿದೆ." ಯೋಗ, ಧ್ಯಾನ ಮುಂತಾದ ಕ್ಲಿಷ್ಟ ಸಾಧನ ಮಾರ್ಗ ಗಳ ವಿಷಯವನ್ನು ಕೇಳಿ ಅವರು ನಿರುತ್ಸಾಹಿಗಳಾಗಬಾರದೆಂದು ಶ್ರೀರಾಮಕೃಷ್ಣರು

ಹೀಗೆ ಹೇಳುತ್ತಿದ್ದರು : "ಯಾವನು ಸಂನ್ಯಾಸಿ ಆಗಿರುವನೋ ಅವನು ಭಗವಂತನನ್ನು ಕರೆಯಲೇ ಬೇಕು. ಏಕೆಂದರೆ ಅದಕ್ಕಾಗಿ ತಾನೆ ಅವನು ಸಂಸಾರದ ಎಲ್ಲ ಕರ್ತವ್ಯ ಗಳನ್ನು ತ್ಯಜಿಸಿ ಬಂದಿರುವುದು ? ಅವನು ಆರೀತಿ ಮಾಡುವುದರಲ್ಲಿ ಏನು ಮಹಾ ದೊಡ್ಡಸ್ತಿಕೆ ಉಂಟು ? ಅಥವಾ ಆಶ್ಚರ್ಯವೇನಿದೆ ? ಆದರೆ ಯಾರು ಸಂಸಾರದಲ್ಲಿದ್ದು ತಂದೆ ತಾಯಿ ಪತ್ನಿ ಪುತ್ರರ ಹೊಣೆಯನ್ನೆಲ್ಲ ಹೊತ್ತುಕೊಂಡು ಒಮ್ಮೆಯಾದರೂ ಭಗ ವಂತನನ್ನು ಸ್ಮರಿಸಿದರೆ ಅವನು ತುಂಬ ಪ್ರಸನ್ನನಾಗುತ್ತಾನೆ. ಹೆಗಲ ಮೇಲೆ ಇಷ್ಟೊಂದು ಭಾರವನ್ನು ಹೊತ್ತುಕೊಂಡೂ ಈ ವ್ಯಕ್ತಿ ನನ್ನನ್ನು ಇಷ್ಟಾದರೂ ಕರೆಯುತ್ತಾನಲ್ಲ, ಇದೇನು ಸಾಮಾನ್ಯವೆ ? ಇವನು ನಿಜವಾಗಿಯೂ ವೀರಭಕ್ತ', ಎಂದು ಭಾವಿಸುತ್ತಾನೆ."

11. ಹೊಸದಾಗಿ ಬಂದ ಸಾಮಾನ್ಯ ಭಕ್ತರ ವಿಚಾರವಿರಲಿ ತಾವು ದಿವ್ಯದರ್ಶನ ದಲ್ಲಿ ಕಂಡ ಭಕ್ತರ ಗುಂಪಿನಲ್ಲಿಯೂ ನರೇಂದ್ರನಾಥನಿಗೆ ಎಂಥ ಉಚ್ಚ ಸ್ಥಾನ ನೀಡು ತ್ತಿದ್ದರೆಂಬುದನ್ನು ಊಹಿಸುವುದಕ್ಕೂ ಕಷ್ಟ. ದರ್ಶನದಲ್ಲಿ ಕಂಡ ಕೆಲವು ಭಕ್ತರನ್ನು ನಿರ್ದೇಶಿಸಿ ಅವರು ಹೇಳುತ್ತಿದ್ದರು : "ಅವರು ಈಶ್ವರ ಕೋಟಿಗಳು. ಅಂದರೆ ಭಗವಂತನ ವಿಶೇಷ ಕೆಲಸಕ್ಕಾಗಿಯೇ ಈ ಪ್ರಪಂಚದಲ್ಲಿ ಜನಿಸಿದವರು." ನರೇಂದ್ರನನ್ನು ಆ ಕೆಲವು ವ್ಯಕ್ತಿಗಳಿಗೆ ಹೋಲಿಸಿ ಅವರು ಒಂದು ದಿನ ಹೇಳಿದರು : "ನರೇನ್ ಸಹಸ್ರ ದಳ ಪದ್ಮ. ಉಳಿದ ಕೆಲವರು ಪದ್ಮಗಳೆ, ಆದರೆ ಹತ್ತು, ಹದಿನೈದು ಹೆಚ್ಚೆಂದರೆ ಇಪ್ಪತ್ತು ದಳಗಳುಳ್ಳವರು." ಇನ್ನೊಂದು ಸಂದರ್ಭದಲ್ಲಿ ಅವರು ಹೇಳಿದರು : "ಅನೇಕರು ಇಲ್ಲಿಗೆ ಬಂದಿರುವರು. ಆದರೆ ನರೇನ್‌ನಂತಹವರು ಯಾರೂ ಬರಲಿಲ್ಲ."

12. ನರೇಂದ್ರನಲ್ಲದೆ ಮತ್ತಾರಿಗೂ ಶ್ರೀರಾಮಕೃಷ್ಣರ ಮಾತುಗಳ ಮತ್ತು ಅಲೌಕಿಕ ಕೃತಿಗಳ ಗೂಢಾರ್ಥವನ್ನು ಅರ್ಥ ಮಾಡಿಕೊಂಡು ಅವುಗಳಿಗೆ ವ್ಯಾಖ್ಯಾನ ನೀಡುವ ಸಾಮರ್ಥ್ಯ ಇರಲಿಲ್ಲ. ಆ ಸಂದರ್ಭದಲ್ಲಿಯೆ ನರೇಂದ್ರನ ಮೂಲಕ ಶ್ರೀರಾಮ ಕೃಷ್ಣರ ಮಾತುಗಳನ್ನು ಕೇಳಿ ನಮಗೆ ಅತ್ಯಾಶ್ಚರ್ಯವಾಗುತ್ತಿತ್ತು. ನಾವು ಭಾವಿಸು ತ್ತಿದ್ದೆವು : "ಹಾ ! ನಾವು ಕೂಡ ಶ್ರೀರಾಮಕೃಷ್ಣರಿಂದ ಈ ಮಾತುಗಳನ್ನು ಕೇಳಿರು ವೆವು. ಆದರೆ ಅವುಗಳಿಗೆ ಇಷ್ಟೊಂದು ಆಳವಾದ ಅರ್ಥವಿದೆ ಎಂಬುದು ತಿಳಿಯಲೇ ಇಲ್ಲವಲ್ಲ." ಇಲ್ಲಿ ಅದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತೇವೆ.

13. ೧೮೮೪ರಲ್ಲಿ ಒಮ್ಮೆ ನಮ್ಮ ಸ್ನೇಹಿತನೊಬ್ಬನು ದಕ್ಷಿಣೇಶ್ವರಕ್ಕೆ ಬಂದನು. ಶ್ರೀರಾಮಕೃಷ್ಣರು ಕೊಠಡಿಯಲ್ಲಿ ಭಕ್ತರಿಂದ ಸುತ್ತುವರಿದು ಕುಳಿತಿದ್ದರು. ನರೇಂದ್ರ ನಾಥನೂ ಅಲ್ಲಿಯೆ ಇದ್ದನು. ನಾನಾ ವಿಷಯದ ಬಗ್ಗೆ ಮಾತುಕತೆ ನಡೆಯುತ್ತಿದೆ. ಮಧ್ಯೆ ಮಧ್ಯೆ ಹಾಸ್ಯದ ಹೊನಲು ಹರಿಯುತ್ತಿದೆ. ಮಾತಿನ ಸಂದರ್ಭದಲ್ಲಿ ವೈಷ್ಣವ ಧರ್ಮದ ವಿಚಾರ ಬಂತು. ಶ್ರೀರಾಮಕೃಷ್ಣರು ಆ ಧರ್ಮದ ಸಾರತತ್ತ್ವವನ್ನು ಸಂಕ್ಷೇಪವಾಗಿ ವಿವರಿಸಿ ಹೇಳಿದರು : "ಅದು ಮೂರು ನಿಯಮಗಳನ್ನು ಯಾವಾಗಲೂ ಪಾಲಿಸಬೇಕೆಂದು ಉಪ ದೇಶಿಸುತ್ತದೆ–ನಾಮದಲ್ಲಿ ರುಚಿ, ಜೀವಿಗಳಿಗೆ ದಯೆ ತೋರಿಸುವುದು ಮತ್ತು ವೈಷ್ಣ ವರನ್ನು ಪೂಜಿಸುವುದು. ಯಾವುದು ನಾಮವೊ ಅವನೆ ಭಗವಂತ. ನಾಮನಾಮಿ ಅಭೇದ

ವೆಂದು ತಿಳಿದು ಯಾವಾಗಲೂ ಪ್ರೀತಿಯಿಂದ ನಾಮಜಪ ಮಾಡಬೇಕು. ಭಕ್ತ ಮತ್ತು ಭಗವಂತ, ಕೃಷ್ಣ ಮತ್ತು ವೈಷ್ಣವ ಅಭೇದವೆಂದು ತಿಳಿದು ಯಾವಾಗಲೂ ಸಾಧು ಭಕ್ತರಿಗೆ ಶ್ರದ್ಧೆಯಿಂದ ವಂದಿಸಬೇಕು. ಈ ಜಗತ್ತು ಕೃಷ್ಣನದೆ ಎಂದು ಹೃತ್ಪೂರ್ವಕವಾಗಿ ಭಾವಿಸುತ್ತಾ ಸರ್ವಜೀವಿಗಳ ಮೇಲೂ ದಯೆ ತೋರಿಸಬೇಕು." 'ಸರ್ವ ಜೀವಿಗಳ ಮೇಲೆ ದಯೆ' ಇಷ್ಟನ್ನು ಹೇಳಿಯೆ ಅವರು ಇದ್ದಕ್ಕಿದ್ದಂತೆಯೆ ಸಮಾಧಿಸ್ಥರಾಗಿಬಿಟ್ಟರು. ಸ್ವಲ್ಪ ಹೊತ್ತಿನ ನಂತರ ಅರ್ಧ ಬಾಹ್ಯದೆಶೆಗೆ ಬಂದು ಹೇಳತೊಡಗಿದರು : " ಜೀವಿಗಳ ಮೇಲೆ ದಯೆ ತೋರಿಸುವುದೆ ? ಜೀವಿಗಳ ಮೇಲೆ ದಯೆ ತೋರಿಸುವುದೆ ? ಎಂಥ ನೀಚತನ, ಕೀಟಕ್ಕೆ ಸಮಾನನಾದ ನೀನು ಜೀವಿಗಳ ಮೇಲೆ ದಯೆ ತೋರಿಸುವೆಯಾ ? ದಯೆ ತೋರಿಸುವುದಕ್ಕೆ ನೀನಾರು ? ಇಲ್ಲ ಇಲ್ಲ ಜೀವಿಗಳ ಮೇಲೆ ದಯೆ ಅಲ್ಲ—ಶಿವಜ್ಞಾನದಲ್ಲಿ ಜೀವರ ಸೇವೆ !"

14. ಭಾವಾವಿಷ್ಟರಾಗಿ ಶ್ರೀರಾಮಕೃಷ್ಣರು ಆಡಿದ ಈ ಮಾತುಗಳನ್ನು ಎಲ್ಲರೂ ಕೇಳಿದರು ಅಷ್ಟೆ. ಆದರೆ ಅದರ ಗೂಢಾರ್ಥವು ಯಾರಿಗೂ ಹೊಳೆಯಲಿಲ್ಲ. ನರೇಂದ್ರನು ಒಬ್ಬನು ಮಾತ್ರ ಅಂದು ಶ್ರೀರಾಮಕೃಷ್ಣರ ಭಾವೋಪಶಮನದ ನಂತರ ಹೊರಗೆಬಂದು ಹೀಗೆ ಹೇಳಿದನು : "ಇಂದು ಶ್ರೀರಾಮಕೃಷ್ಣರ ಮಾತಿನಲ್ಲಿ ಎಂಥ ಅದ್ಭುತ ಬೆಳಕನ್ನು ಕಂಡೆ ! ಶುಷ್ಕ ಕಠೋರ, ನಿಷ್ಪ್ರೇಮವೆಂದು ಪ್ರಸಿದ್ಧವಾಗಿರುವ ವೇದಾಂತ ಜ್ಞಾನವನ್ನು ಭಕ್ತಿಯೊಡನೆ ಒಂದುಗೂಡಿಸಿ ಎಂಥ ಸರಳವೂ ಮಧುರವೂ ಆದ ವ್ಯಾಖ್ಯಾನವನ್ನು ನೀಡಿದರು ! ಅದ್ವೈತ ಜ್ಞಾನವನ್ನು ಪಡೆದರೆ ಸಂಸಾರ ಮತ್ತು ಪ್ರಪಂಚದ ಸಂಗವನ್ನು ತ್ಯಜಿಸಿ ಕಾಡಿಗೆ ಹೋಗಬೇಕು ಮತ್ತು ಭಕ್ತಿ, ಪ್ರೀತಿ ಮುಂತಾದ ಕೋಮಲ ಭಾವಗಳನ್ನು ಹೃದಯದಿಂದ ಸಂಪೂರ್ಣ ಕಿತ್ತೆಸೆಯಬೇಕು—ಈ ಮಾತನ್ನು ಇಷ್ಟು ಕಾಲವೂ ಕೇಳುತ್ತಾ ಬಂದಿದ್ದೇನೆ. ಇದರ ಪರಿಣಾಮವಾಗಿ ಜಗತ್ತು ಮತ್ತು ಅದರಲ್ಲಿರುವ ಪ್ರತಿಯೊಬ್ಬ ವ್ಯಕ್ತಿಗಳನ್ನೂ ಧರ್ಮಮಾರ್ಗಕ್ಕಿರುವ ಅಡಚಣೆಗಳೆಂದು ಪರಿಗಣಿಸಿ ಅವರ ಬಗ್ಗೆ ತಿರಸ್ಕಾರ ಭಾವನೆ ಉಂಟಾಗಿ ಅದೇ ಸಾಧಕನಿಗೆ ಹಾನಿಯನ್ನುಂಟುಮಾಡುತ್ತದೆ. ಇಂದು ಶ್ರೀರಾಮಕೃಷ್ಣರ ಮಾತಿನಿಂದ ತಿಳಿದು ಬರುವುದೇನೆಂದರೆ ವನದ ವೇದಾಂತವನ್ನು ಮನೆಗೆ ತರಬೇಕು. ಸಂಸಾರದ ಪ್ರತಿಯೊಂದು ಕೆಲಸದಲ್ಲಿಯೂ ಅದನ್ನು ಅವಲಂಬಿಸುವಂತೆ ಮಾಡಬೇಕು. ಮಾನವನು ಏನೇನು ಮಾಡುತ್ತಿರುವನೊ ಅದನ್ನೆ ಮಾಡಲಿ, ಅದರಲ್ಲಿ ಹಾನಿಯಿಲ್ಲ. ಆದರೆ ಅವನು ತನ್ನ ಹೃದಯಾಂತರಾಳದಲ್ಲಿ ಈ ವಿಶ್ವಾಸವನ್ನು ಇಟ್ಟುಕೊಂಡಿರಬೇಕು : ಈಶ್ವರನೆ ಜೀವಜಗತ್ತಿನ ರೂಪದಲ್ಲಿ ತನ್ನ ಮುಂದೆ ಪ್ರಕಾಶಿಸುತ್ತಿರುವನು. ಜೀವನದ ಪ್ರತಿ ಮುಹೂರ್ತದಲ್ಲಿಯೂ ಅವನು ಯಾರನ್ನು ಸಂಪರ್ಕಿಸುತ್ತಾನೊ ಯಾರನ್ನು ಪ್ರೀತಿಸುತ್ತಾನೊ, ಯಾರಿಗೆ ಶ್ರದ್ಧೆ, ದಯೆ, ಗೌರವ ತೋರಿಸುತ್ತಾನೆಯೊ ಅವರೆಲ್ಲರೂ ಭಗವಂತನ ಅಂಶ, ಪ್ರಪಂಚದಲ್ಲಿರುವ ಎಲ್ಲಾ ವ್ಯಕ್ತಿಗಳನ್ನೂ ಈ ರೀತಿ ಶಿವಜ್ಞಾನದಿಂದ ನೋಡಲು ಸಾಧ್ಯವಾದರೆ ತನ್ನನ್ನು ಒಬ್ಬ ದೊಡ್ಡ ವ್ಯಕ್ತಿಯೆಂದು ಪರಿಗಣಿಸುತ್ತಾ ಅವರ ವಿಷಯದಲ್ಲಿ ರಾಗ, ದ್ವೇಷ, ಜಂಭ ಅಥವಾ ದಯೆ ಇವುಗಳನ್ನು ವ್ಯಕ್ತ

ಪಡಿಸಲು ಅವಕಾಶವೆಲ್ಲಿ ? ಈ ರೀತಿ ಶಿವಜ್ಞಾನದಿಂದ ಜೀವಿಗಳನ್ನು ಸೇವಿಸುತ್ತಾ ಚಿತ್ತ ಶುದ್ಧಿ ಉಂಟಾಗುತ್ತದೆ. ಸ್ವಲ್ಪಕಾಲದಲ್ಲಿಯೆ ತನ್ನನ್ನು ಚಿದಾನಂದಮಯ ಭಗವಂತನ ಅಂಶ, ಶುದ್ಧ ಬುದ್ಧ ಮುಕ್ತಸ್ವಭಾವದವನು ಎಂದು ಅರಿಯಲು ಸಾಧ್ಯವಾಗುತ್ತದೆ.

"ಶ್ರೀ ರಾಮಕೃಷ್ಣರ ಈ ಮಾತಿನಿಂದ ಭಕ್ತಿ ಮಾರ್ಗದಲ್ಲಿಯೂ ವಿಶೇಷ ಬೆಳಕನ್ನು ಕಂಡಂತಾಯಿತು. ಸರ್ವಭೂತಗಳಲ್ಲಿಯೂ ಭಗವಂತನನ್ನು ಎಲ್ಲಿಯವರೆಗೆ ಕಾಣಲಾಗುವು ದಿಲ್ಲವೊ ಅಲ್ಲಿಯವರೆಗೆ ಯಥಾರ್ಥಭಕ್ತಿ ಅಥವಾ ಪರಾಭಕ್ತಿಯನ್ನು ಪಡೆಯುವುದು ಸಾಧ ಕನಿಗೆ ಬಹುದೂರದ ಮಾತು. ಶಿವ ಅಥವಾ ನಾರಾಯಣ ಬುದ್ಧಿಯಿಂದ ಜೀವಿಗಳ ಸೇವೆ ಮಾಡಿದರೆ ಎಲ್ಲರ ಒಳಗೂ ಭಗವಂತನನ್ನು ಕಾಣುವುದರ ಮೂಲಕ ಸಾಧಕನು ಯಥಾರ್ಥ ಭಕ್ತಿಯನ್ನು ಪಡೆದು ಸ್ವಲ್ಪ ಕಾಲದಲ್ಲಿಯೆ ಕೃತಾರ್ಥನಾಗುತ್ತಾನೆ. ಕರ್ಮ ಅಥವಾ ರಾಜಯೋಗವನ್ನು ಯಾರು ಅನುಸರಿಸುತ್ತಿರುವರೊ ಆ ಸಾಧಕರೂ ಕೂಡ ಈ ಮಾತಿನಲ್ಲಿ ವಿಶೇಷ ಬೆಳಕನ್ನು ಪಡೆಯುತ್ತಾರೆ. ಏಕೆಂದರೆ ದೇಹಧಾರಿಯಾದವನು ಕರ್ಮ ಮಾಡದೆ ಒಂದು ಕ್ಷಣವೂ ಇರಲಾರ. ಹಾಗಿರುವಾಗ ಶಿವಜ್ಞಾನದಲ್ಲಿ ಜೀವ ಸೇವೆಯ ರೂಪದ ಕರ್ಮಾನುಷ್ಠಾನ ಮಾಡುವುದು ಕರ್ತವ್ಯ ಮತ್ತು, ಅವನು ಹೀಗೆ ಮಾಡುವುದರಿಂದಲೆ ಬೇಗ ಗುರಿಯನ್ನು ಮುಟ್ಟುತ್ತಾನೆ. ಏನೆ ಆಗಲಿ ಭಗವಂತನು ನನಗೆ ಅವಕಾಶ ಕೊಟ್ಟಿದ್ದೆ ಆದರೆ ಇಂದು ನಾನು ಏನು ಕೇಳಿದೆನೊ ಈ ಅದ್ಭುತ ಸತ್ಯವನ್ನು ಪ್ರಪಂಚದ ಎಲ್ಲೆಡೆ ಪ್ರಚಾರ ಮಾಡುತ್ತೇನೆ. ಪಂಡಿತ, ಮೂರ್ಖ, ಶ್ರೀಮಂತ, ದರಿದ್ರ, ಬ್ರಾಹ್ಮಣ, ಚಂಡಾಲ ಎಲ್ಲರೂ ಇದನ್ನು ಕೇಳಿ ಮುಗ್ಧರಾಗುವಂತೆ ಮಾಡುತ್ತೇನೆ."

ಲೋಕೋತ್ತರ ಪುರುಷರಾದ ಶ್ರೀರಾಮಕೃಷ್ಣರು ಹೀಗೆ ಸಮಾಧಿ ಮಗ್ನರಾಗಿ ಜ್ಞಾನ, ಪ್ರೇಮ, ಯೋಗ ಮತ್ತು ಕರ್ಮ ಇವುಗಳಿಗೆ ಸಂಬಂಧಿಸಿದಂತೆ ಅಪೂರ್ವ ಬೆಳ ಕನ್ನು ಯಾವಾಗಲೂ ನೀಡುತ್ತಾ ಮಾನವರ ಜೀವನ ಪಥವನ್ನು ಬೆಳಗುತ್ತಿದ್ದರು. ಆದರೆ ದುರ್ಭಾಗ್ಯರಾದ ನಾವು ಆಗ ಅವರ ಮಾತಿನ ಅರ್ಥವನ್ನು ಗ್ರಹಿಸುತ್ತಿರಲಿಲ್ಲ. ತೀಕ್ಷ್ಣ ಬುದ್ಧಿಯವನಾದ ನರೇಂದ್ರನಾಥನು ಮಾತ್ರ ಈ ಎಲ್ಲ ದಿವ್ಯವಾಣಿಯನ್ನು ಸರಿಯಾಗಿ ಅರ್ಥಮಾಡಿಕೊಂಡು ನಮಗೆ ಆಗಾಗ ವಿವರಿಸಿ ಹೇಳುತ್ತಾ ನಮ್ಮನ್ನು ಚಕಿತಗೊಳಿಸು ತ್ತಿದ್ದನು.

## ಹತ್ತನೆಯ ಅಧ್ಯಾಯ

# ಪಾಣಿಹಾಟಿಯ ಮಹೋತ್ಸವ

1. ನರೇಂದ್ರನು ಉಪಾಧ್ಯಾಯನಾಗುತ್ತಾನೆ 2. ಅವನ ಸಂಬಂಧಿಕರ ಶತ್ರುತ್ವ ಶ್ರೀರಾಮಕೃಷ್ಣರ ಗಂಟಲು ಬೇನೆ, ಕೆಲಸಕ್ಕೆ ರಾಜೀನಾಮೆ 3. ತುಂಬ ಐಸ್ ತಿಂದದ್ದ ರಿಂದ ಅವರಿಗೆ ಕಾಯಿಲೆಯಾಯಿತು 4. ಹೆಚ್ಚು ಮಾತು ಮತ್ತು ಭಾವಸಮಾಧಿ ಯಿಂದ ರೋಗ ಉಲ್ಬಣಿಸುತ್ತಿತ್ತು 5. ಪಾಣಿಹಾಟಿ ಉತ್ಸವದ ಕಥೆ 6. ಉತ್ಸವಕ್ಕೆ ಹೋಗಬೇಕೆಂಬ ಶ್ರೀರಾಮಕೃಷ್ಣರ ಬಯಕೆ 7. ಪಾಣಿಹಾಟಿಗೆ ಹೋಗುವ ಸಿದ್ಧತೆ 8. ಉತ್ಸವಕ್ಕೆ ಹೋಗುವುದಿಲ್ಲವೆಂದು ಶ್ರೀಮಾತೆಯುವರ ನಿರ್ಧಾರ 9. ಪಾಣಿಹಾಟಿ ಯಲ್ಲಿ ಸಂಕೀರ್ತನೆ, ಶ್ರೀರಾಮಕೃಷ್ಣರು ಅದರಲ್ಲಿ ಭಾಗವಹಿಸಬಾರದೆಂದು ಭಕ್ತರ ಒತ್ತಾಯ 10. ಮಣಿಸೇನನ ಮನೆ 11. ಅವನ ದೇವಸ್ಥಾನ 12. ಸಂಕೀರ್ತನೆ ಯಲ್ಲಿ ಧಾಂಬಿಕ ಭಕ್ತನೊಬ್ಬನ ಭಕ್ತಿಪ್ರದರ್ಶನ 13. ಭಾವಸಮಾಧಿಯಲ್ಲಿ ಶ್ರೀರಾಮ ಕೃಷ್ಣರ ನರ್ತನ 14. ರಾಘವ ಪಂಡಿತನ ಮನೆಯ ಹಾದಿಯಲ್ಲಿ 15. ಭಾವಸಮಾಧಿ ಯಲ್ಲಿ ಶ್ರೀರಾಮಕೃಷ್ಣರ ಅದ್ಭುತ ಸೌಂದರ್ಯ 16. ಶ್ರೀರಾಮಕೃಷ್ಣರ ಪ್ರಭಾವ ದಿಂದ ಎಲ್ಲರಲ್ಲೂ ದಿವ್ಯ ಭಾವೋದ್ದೀಪನ 17. ಕುರೂಪಿ ವೈಷ್ಣವನೊಬ್ಬನ ಸ್ಪರ್ಶ ದಿಂದ ಶ್ರೀರಾಮಕೃಷ್ಣರ ಭಾವಭಂಗ 18. ನವಚೈತನ್ಯನ ಮೇಲೆ ಕೃಪೆ ಮತ್ತು ಅವನ ಪರಿವರ್ತನೆ 19. ದಕ್ಷಿಣೇಶ್ವರಕ್ಕೆ ಪುನರಾಗಮನ, ಶ್ರೀರಾಮಕೃಷ್ಣರಿಂದ ಚಿಕ್ಕ ನರೇನನ ಪ್ರಶಂಸೆ 20. ಶ್ರೀಮಾತೆಯುವರ ಅಸಾಮಾನ್ಯ ಬುದ್ಧಿಶಕ್ತಿಯ ಬಗ್ಗೆ ಶ್ರೀರಾಮಕೃಷ್ಣರ ಹೇಳಿಕೆ 21. ಉತ್ಸವಕ್ಕೆ ತಾವು ಹೋಗದಿದ್ದುದಕ್ಕೆ ಶ್ರೀಮಾತೆ ಯವರು ಕೊಟ್ಟ ಕಾರಣ 22. ಸ್ನಾನಯಾತ್ರೆಯ ದಿನ ಮಹಿಳೆಯೊಬ್ಬಳ ಸ್ವಾರ್ಥತೆ ಯಿಂದ ಶ್ರೀರಾಮಕೃಷ್ಣರ ಭಾವಭಂಗ.

1. ಶ್ರೀರಾಮಕೃಷ್ಣರ ಅನುಗ್ರಹದಿಂದ ನರೇಂದ್ರನಾಥನ ಮನೆಯವರ ಸಾದಾ ಊಟ ಬಟ್ಟೆಯ ಕೊರತೆ ಪರಿಹಾರವಾಯಿತು. ಇದಾದನಂತರ ನರೇಂದ್ರನಾಥನ ಸ್ಥಿತಿ ಯಲ್ಲಿ ಕ್ರಮೇಣ ಪರಿವರ್ತನೆ ಉಂಟಾಯಿತು. ಅವನ ಕುಟುಂಬದಲ್ಲಿ ಶ್ರೀಮಂತಿಕೆ ಇಲ್ಲ ದಿದ್ದರೂ ಹಿಂದಿನಂತೆ ಕಡುಬಡತನವನ್ನು ಅನುಭವಿಸಬೇಕಾಗಲಿಲ್ಲ. ಈ ಘಟನೆಯಾದ ಸ್ವಲ್ಪ ಕಾಲದಲ್ಲಿಯೆ ಮೆಟ್ರೋಪಾಲಿಟನ್ ವಿದ್ಯಾಲಯದ ಒಂದು ಶಾಖೆಯನ್ನು ಕಲ್ಕತ್ತೆಯ ಚಂಪಾತಲದಲ್ಲಿ ತೆರೆಯಲಾಯಿತು. ಈಶ್ವರಚಂದ್ರವಿದ್ಯಾಸಾಗರನ ದಯೆ ಯಿಂದ ನರೇಂದ್ರನಾಥನು ಅದರ ಮುಖ್ಯೋಪಾಧ್ಯಾಯನಾಗಿ ನೇಮಿಸಲ್ಪಟ್ಟನು. ಅವನು ಅಲ್ಲಿ ಸುಮಾರು ಮೂರು ನಾಲ್ಕು ತಿಂಗಳು, ಬಹುಶಃ ೧೮೮೫ರ ಮೇಯಿಂದ, ಉಪಾಧ್ಯಾಯನಾಗಿ ಕೆಲಸ ಮಾಡಿದನು.

2. ಅವನ ಸಾಂಸಾರಿಕ ಪರಿಸ್ಥಿತಿ ಈಗ ಸ್ವಲ್ಪ ಉತ್ತಮಗೊಂಡರೂ ಅವನ

ಸಂಬಂಧಿಕರ ಶತ್ರುತ್ವದಿಂದ ಅವನು ವ್ಯಥೆ ಪಡಬೇಕಾಯಿತು. ಇದೇ ಒಳ್ಳೆಯ
ಸಮಯವೆಂದು ತಿಳಿದು ಪಿತ್ರಾರ್ಜಿತವಾಗಿ ಬಂದ ಉತ್ತಮ ಮನೆಗಳನ್ನು ಮತ್ತು ನಿವೇಶನ
ಗಳನ್ನು ಮೋಸ ವಂಚನೆಯಿಂದ ತಮ್ಮ ವಶಕ್ಕೆ ಪಡೆದುಕೊಳ್ಳತೊಡಗಿದರು. ಆದ್ದರಿಂದ
ಅವನು ತನ್ನ ಮನೆಯನ್ನೂ ಬಿಟ್ಟು ಕೆಲವು ಕಾಲ ರಾಮ್‌ತನುಬಸು ಲೇನ್‌ನಲ್ಲಿದ್ದ
ಅಜ್ಜಿಯ ಮನೆಯಲ್ಲಿ ವಾಸಮಾಡಬೇಕಾಯಿತು. ತನಗೆ ನ್ಯಾಯವಾಗಿ ಬರಬೇಕಾ
ದ್ದನ್ನು ಪಡೆಯಲು ಅವರ ವಿರುದ್ಧವಾಗಿ ಹೈಕೋರ್ಟಿನಲ್ಲಿ ಮೊಕದ್ದಮೆ ಹೂಡಿ ಎಲ್ಲ
ವನ್ನು ವ್ಯವಸ್ಥೆಗೊಳಿಸಿದ್ದನು. ಅವನ ತಂದೆಯ ಸ್ನೇಹಿತನಾದ ನಿಮಾಯ್‌ಚರಣ್‌ಬಸು
ಎಂಬ ವಕೀಲನು ಈ ವಿಷಯದಲ್ಲಿ ಅವನಿಗೆ ತುಂಬಾ ಸಹಾಯವನ್ನು ಮಾಡಿದನು. ಈಗ
ಅವನು ಹೆಚ್ಚಿನ ಸಮಯವನ್ನು ಕೋರ್ಟ್‌ಕೇಸಿನಲ್ಲಿಯೂ, ಬಿ. ಎಲ್. ಪರೀಕ್ಷೆಗೆ ಸಿದ್ಧತೆ
ನಡೆಸುವುದರಲ್ಲಿಯೂ ಕಳೆಯಬೇಕಾಯಿತು. ಆದ್ದರಿಂದ ಉಪಾಧ್ಯಾಯ ವೃತ್ತಿಗೆ ಅವನು
ರಾಜಿನಾಮೆ ನೀಡಿದನು. ಇದಕ್ಕೆ ಇನ್ನೊಂದು ಮುಖ್ಯ ಕಾರಣವಿತ್ತು. ಶ್ರೀರಾಮಕೃಷ್ಣ
ರಿಗೆ ಈ ಸಮಯದಲ್ಲಿ ಗಂಟಲು ಬೇನೆ ಶುರುವಾಯಿತು. ತಾನೇ ಅವರ ಜೊತೆ ಇದ್ದು
ಔಷಧಿ ಚಿಕಿತ್ಸೆಗಳ ವ್ಯವಸ್ಥೆ ಮಾಡುವುದು ಆವಶ್ಯಕವಾಗಿತ್ತು.

3, ೧೮೮೫ರಲ್ಲಿ ಶ್ರೀರಾಮಕೃಷ್ಣರು ತೀವ್ರ ಉಷ್ಣದಿಂದ ಕಷ್ಟ ಪಡುತ್ತಿರುವು
ದನ್ನು ನೋಡಿ ಭಕ್ತರು ಮಂಜುಗಡ್ಡೆಯನ್ನು ಉಪಯೋಗಿಸಬೇಕೆಂದು ಅವರನ್ನು ಕೇಳಿ
ಕೊಂಡರು. ಮಂಜುಗಡ್ಡೆ ಉಪಯೋಗಿಸಿದುದರಿಂದ ಅವರಿಗೆ ಹೆಚ್ಚು ಅನುಕೂಲವಾಗು
ತ್ತಿದೆ ಎಂಬುದನ್ನು ನೋಡಿ ಭಕ್ತರು ದಕ್ಷಿಣೇಶ್ವರಕ್ಕೆ ಬರುವಾಗ ಅದನ್ನು ತರತೊಡಗಿದರು.
ಅವರೂ ಕೂಡ ಸಕ್ಕರೆ ಪಾನಕದೊಡನೆ ಅದನ್ನು ತೆಗೆದುಕೊಂಡು ಬಾಲಕರಂತೆ ವಿನೋದ
ಪಡುತ್ತಿದ್ದರು. ಅದನ್ನು ಒಂದು ಎರಡು ತಿಂಗಳು ಉಪಯೋಗಿಸಿದ ನಂತರ ಗಂಟಲಿ
ನಲ್ಲಿ ಬೇನೆ ಶುರುವಾಯಿತು. ಮೊದಲಬಾರಿಗೆ ನೋವು ಕಾಣಿಸಿಕೊಂಡುದು ಬಹುಶಃ
ಏಪ್ರಿಲ್ ತಿಂಗಳಿನಲ್ಲಿ.

4. ಒಂದು ತಿಂಗಳಿಗೂ ಅಧಿಕ ಕಳೆದರೂ ನೋವು ಕಡಿಮೆ ಆಗಲಿಲ್ಲ. ಮೇ
ತಿಂಗಳ ಹೊತ್ತಿಗೆ ರೋಗವು ಹೊಸ ತಿರುವನ್ನು ಪಡೆಯಿತು. ಅವರು ಹೆಚ್ಚು ಮಾತ
ನಾಡಿದಾಗಲೆಲ್ಲ ನೋವು ತೀವ್ರವಾಗುತ್ತಿತ್ತು. ಶೀತದಿಂದಾಗಿ ಕಂಠನಾಳವು ಊದಿ
ಕೊಂಡು ಆ ರೀತಿಯಾಗಿದೆ ಎಂದು ಸಾಮಾನ್ಯ ಪಟ್ಟಿ (plaster)ಯನ್ನು ಹಾಕಿದರು.
ಅದರಿಂದ ಏನೂ ಪ್ರಯೋಜನವಾಗದಿರಲು ಕೆಲವು ದಿನಗಳನಂತರ ಭಕ್ತನೊಬ್ಬನು
ಬೌ ಬಜಾರಿನ ಡಾ. ರಾಖಾಲ್‌ನನ್ನು ಕರೆದುಕೊಂಡು ಬಂದನು. ಡಾಕ್ಟರು ಗಂಟಲನ್ನು
ಪರೀಕ್ಷಿಸಿ ಗಂಟಲಿನ ಹೊರಗೆ ಮತ್ತು ಒಳಗೆ ಹಚ್ಚಲು ಔಷಧಿಯನ್ನು ಸೂಚಿಸಿದನು.
ಅವರು ಹೆಚ್ಚು ಮಾತನಾಡಬಾರದು ಮತ್ತು ಆಗಾಗ ಸಮಾಧಿಸ್ಥರಾಗಬಾರದು ಎಂದು
ಹೇಳಿ ಈ ವಿಚಾರದಲ್ಲಿ ಎಚ್ಚರಿಕೆ ವಹಿಸಬೇಕೆಂದು ನಮಗೆ ತಿಳಿಸಿದನು.

5. ಕ್ರಮೇಣ ಜ್ಯೇಷ್ಠಮಾಸದ ಶುಕ್ಲ ತ್ರಯೋದಶಿ ಬಂದಿತು. ಕಲ್ಕತ್ತೆಯ
ಹತ್ತಿರ ಗಂಗಾತೀರದಲ್ಲಿರುವ ಪಾಣಿಹಾಟಿ ಎಂಬ ಗ್ರಾಮದಲ್ಲಿ ಪ್ರತಿವರ್ಷವೂ ಈ ದಿವಸ

ವೈಷ್ಣವ ಸಂಪ್ರದಾಯದ ವಿಶೇಷ ಉತ್ಸವ ನಡೆಯುತ್ತದೆ. ಶ್ರೀಕೃಷ್ಣ ಚೈತನ್ಯನ ಪ್ರಧಾನ ಶಿಷ್ಯರಲ್ಲಿ ಒಬ್ಬನಾದ ರಘುನಾಥ್ ದಾಸ್ ಗೋಸ್ವಾಮಿಯ ಜ್ವಲಂತತ್ಯಾಗ ವೈರಾಗ್ಯದ ವಿಷಯ ಬಂಗಾಳದಲ್ಲಿ ಚಿರಸ್ಮರಣೀಯವಾಗಿ ಉಳಿದಿದೆ. ಅತ್ಯಂತ ಸುಂದರಿಯಾದ ಪತ್ನಿಯನ್ನೂ ಅಪಾರವಾದ ಐಶ್ವರ್ಯವನ್ನೂ ತ್ಯಜಿಸಿದ ರಘುನಾಥನು ತಂದೆಯ ಏಕಮಾತ್ರ ಪುತ್ರನಾಗಿದ್ದನು. ಮನೆಯನ್ನು ತ್ಯಜಿಸಿ ಶ್ರೀಚೈತನ್ಯನ ಚರಣಗಳನ್ನು ಆಶ್ರಯಿಸುವ ಮನಸ್ಸುಳ್ಳವನಾಗಿ ಅವನು ಮೊದಲು ಶಾಂತಿಪುರಕ್ಕೆ ಬಂದನು. ಆಗ ಚೈತನ್ಯನು ಈ ಮರ್ಕಟ ವೈರಾಗ್ಯವನ್ನು ತ್ಯಜಿಸಿ ಮನೆಗೆ ಹಿಂತಿರುಗಿ ಸ್ವಲ್ಪಕಾಲವಿರಬೇಕೆಂದು ರಘುನಾಥನಿಗೆ ಆದೇಶವಿತ್ತನು. ರಘುನಾಥನು ಚೈತನ್ಯನ ಆದೇಶವನ್ನು ಶಿರಸಾವಹಿಸಿ ಮನೆಗೆ ಹಿಂದಿರುಗಿದನು. ಸಂಸಾರವನ್ನು ತ್ಯಜಿಸುವ ಪ್ರಬಲ ಇಚ್ಛೆಯನ್ನು ತನ್ನೊಳಗೇ ಅಡಗಿಸಿಟ್ಟುಕೊಂಡು ಜನಸಾಧಾರಣರಂತೆ ಸಾಂಸಾರಿಕ ಕ್ರಿಯೆಗಳಲ್ಲಿ ತೊಡಗಿದನು ಮತ್ತು ತಂದೆ ತಾಯಿಗಳಿಗೆ ಸಹಾಯ ಮಾಡಿದನು. ಹೀಗಿದ್ದರೂ ಆಗಾಗ ಶ್ರೀಚೈತನ್ಯನ ಶಿಷ್ಯರುಗಳನ್ನು ನೋಡದೆ ಇರಲು ಅವನಿಗಾಗುತ್ತಿರಲಿಲ್ಲ. ತಂದೆಯ ಅನುಮತಿಯನ್ನು ಪಡೆದು ಬಂದು ಅವರೊಡನೆ ಕೆಲವು ದಿನ ಕಳೆದು ಮನೆಗೆ ಹಿಂದಿರುಗುತ್ತಿದ್ದನು. ಹೀಗೆ ಕೆಲವು ದಿನಗಳು ಕಳೆದುವು. ತ್ಯಾಗದ ಅವಕಾಶವನ್ನೇ ಎದುರು ನೋಡುತ್ತಾ ರಘುನಾಥನು ಸಂಸಾರದಲ್ಲಿ ಕಾಲ ಕಳೆಯತೊಡಗಿದನು. ಕ್ರಮೇಣ ಶ್ರೀಚೈತನ್ಯನು ಸಂನ್ಯಾಸವನ್ನು ಪಡೆದು ನೀಲಾಚಲದಲ್ಲಿ ವಾಸಿಸತೊಡಗಿದನು. ನಿತ್ಯಾನಂದನು ವೈಷ್ಣವ ಧರ್ಮದ ಪ್ರಚಾರದ ಹೊಣೆಯನ್ನು ಹೊತ್ತು ಗಂಗಾತೀರದಲ್ಲಿ ಖಡ್‌ದಹಾ ಎಂಬ ಗ್ರಾಮವನ್ನು ಪ್ರಧಾನ ಕೇಂದ್ರವನ್ನಾಗಿ ಮಾಡಿಕೊಂಡು ಬಂಗಾಳದ ನಾನಾ ಸ್ಥಳಗಳಲ್ಲಿ ಸುತ್ತಾಡತೊಡಗಿದನು ಮತ್ತು ನಾಮ ಸಂಕೀರ್ತನಾದಿಗಳ ಮೂಲಕ ಅನೇಕ ಜನರನ್ನು ವೈಷ್ಣವ ಧರ್ಮಕ್ಕೆ ಸೇರಿಸಿಕೊಳ್ಳತೊಡಗಿದನು.

ಒಮ್ಮೆ ನಿತ್ಯಾನಂದನು ತನ್ನ ಸ್ನೇಹಿತರು ಮತ್ತು ಅಂತರಂಗ ಶಿಷ್ಯರೊಡನೆ ಪಾಣಿಹಾಟಿ ಹಳ್ಳಿಯಲ್ಲಿ ಧರ್ಮಪ್ರಚಾರಕ್ಕಾಗಿ ತಂಗಿದನು. ರಘುನಾಥನು ಅವನನ್ನು ನೋಡಲು ಬಂದನು. ನಿತ್ಯಾನಂದನು ಅವನಿಗೆ ತನಗೂ ತನ್ನ ಭಕ್ತವೃಂದದವರಿಗೂ ಅವಲಕ್ಕಿ, ಮೊಸರು, ಹಾಲು, ಸಕ್ಕರೆ, ಬಾಳೆಹಣ್ಣು ಇವುಗಳಿಂದ ಮಾಡಿದ ರಸಾಯನವನ್ನು ದೇವರಿಗೆ ಅರ್ಪಿಸಿ ಭೋಜನ ಮಾಡಿಸಬೇಕೆಂದು ಆದೇಶವಿತ್ತನು. ರಘುನಾಥನು ಆನಂದದಿಂದ ಒಪ್ಪಿಕೊಂಡು ನಿತ್ಯಾನಂದನ ದರ್ಶನಕ್ಕೆ ಬಂದಿದ್ದ ನೂರಾರು ಭಕ್ತರಿಗೆ ಅಂದು ಗಂಗಾತೀರದಲ್ಲಿ ಸಂತರ್ಪಣೆ ಮಾಡಿಸಿದನು. ಉತ್ಸವದ ನಂತರ ನಿತ್ಯಾನಂದನಲ್ಲಿಗೆ ಹೋಗಿ ಪ್ರಣಾಮ ಮಾಡಿದಾಗ ರಘುನಾಥನನ್ನು ಪ್ರೀತಿಯಿಂದ ಆಲಂಗಿಸಿ ಹೇಳಿದನು : "ಈಗ ಕಾಲ ಒದಗಿಬಂದಿದೆ. ಸಂಸಾರವನ್ನು ಪರಿತ್ಯಜಿಸಿ ನೀಲಾಚಲಕ್ಕೆ ಹೋದರೆ ಶ್ರೀಚೈತನ್ಯನು ನಿನಗೆ ಆಶ್ರಯವನ್ನು ನೀಡುತ್ತಾನೆ ಮತ್ತು ನಿನ್ನ ಧರ್ಮಜೀವನದ ಪರಿಪೂರ್ಣತೆಗಾಗಿ ಸನಾತನ ಗೋಸ್ವಾಮಿಯು ನಿನಗೆ ಶಿಕ್ಷಣ ನೀಡುವಂತೆ ವ್ಯವಸ್ಥೆ ಮಾಡುತ್ತಾನೆ." ನಿತ್ಯಾನಂದನ ಈ ಮಾತನ್ನು ಕೇಳಿ ರಘುನಾಥನ ಉಲ್ಲಾಸಕ್ಕೆ ಸೀಮೆಯೇ ಇರಲಿಲ್ಲ. ಮನೆಗೆ

ಹಿಂದಿರುಗಿ ಸ್ವಲ್ಪಕಾಲದಲ್ಲಿಯೆ ಶಾಶ್ವತವಾಗಿ ಸಂಸಾರವನ್ನು ತ್ಯಜಿಸಿ ನೀಲಾಚಲಕ್ಕೆ ಹೊರಟು ಹೋದನು. ಅವನು ಹೊರಟು ಹೋದರೂ ವೈಷ್ಣವ ಭಕ್ತರು ಅವನನ್ನು ಮರೆಯಲಿಲ್ಲ. ಅಂದಿನಿಂದ ಪ್ರತಿವರ್ಷವೂ ಆ ದಿನದಂದು ಪಾಣಿಹಾಟಿಗೆ ಬಂದು ಕಲೆತು ಭಗವತ್ಪ್ರೀತಿಗಾಗಿ ಶ್ರೀಗೌರಾಂಗ ಮತ್ತು ನಿತ್ಯಾನಂದ ಇವರ ಹೆಸರಿನಲ್ಲಿ ದೊಡ್ಡ ಉತ್ಸವ ವನ್ನು ನಡೆಸುತ್ತಾರೆ. ಕಾಲಕ್ರಮೇಣ ಇದು 'ಪಾಣಿಹಾಟಿಯ ಅವಲಕ್ಕಿ ಉತ್ಸವ' ಎಂದೇ ಪ್ರಸಿದ್ಧಿಯನ್ನು ಪಡೆಯಿತು.

6. ಶ್ರೀರಾಮಕೃಷ್ಣರು ಅನೇಕ ಬಾರಿ ಈ ಉತ್ಸವದಲ್ಲಿ ಭಾಗವಹಿಸಿದ್ದರು. ಆದರೆ ಅವರ ಇಂಗ್ಲಿಷ್ ಕಲಿತ ಭಕ್ತರು ಬರತೊಡಗಿದ ಮೇಲೆ ಅನೇಕ ಕಾರಣಗಳ ನಿಮಿತ್ತ ಕೆಲವು ವರ್ಷಗಳ ಕಾಲ ಅಲ್ಲಿಗೆ ಹೋಗಲಾಗಿರಲಿಲ್ಲ. ತಮ್ಮ ಭಕ್ತರೊಡನೆ ಆ ಉತ್ಸವವನ್ನು ನೋಡಲು ಹೋಗುವ ಅಭಿಲಾಷೆಯನ್ನು ಪ್ರಕಾಶಪಡಿಸಿ ನಮಗೆ ಹೇಳಿ ದರು : "ಅಲ್ಲಿ ಆ ದಿನ ಆನಂದದ ಮೇಳ ನಡೆಯುತ್ತದೆ. ಹರಿನಾಮದ ಪ್ರವಾಹವೇ ಹರಿಯುತ್ತದೆ. ನೀವು 'ಯಂಗ್' ಬೆಂಗಾಲಿಗಳು ಅಂಥಾದ್ದನ್ನು ಎಂದೂ ನೋಡಿಲ್ಲ. ನಡೆಯಿರಿ, ನೋಡಿಕೊಂಡು ಬರೋಣ." ರಾಮಚಂದ್ರ ಮುಂತಾದವರು ಇದರಿಂದ ತುಂಬಾ ಆನಂದಿತರಾದರೂ ಕೆಲವರು ಅವರಿಗೆ ಗಂಟಲು ಬೇನೆ ಇದ್ದುದರಿಂದ ಅವರು ಅಲ್ಲಿಗೆ ಹೋಗುವುದನ್ನು ತಡೆಯಲು ಪ್ರಯತ್ನಿಸಿದರು. ಅವರಿಗೆ ಸಮಾಧಾನ ಮಾಡಲು ಶ್ರೀರಾಮಕೃಷ್ಣರು ಹೇಳಿದರು : "ನಾನು ಸ್ವಲ್ಪ ಆಹಾರ ಸ್ವೀಕರಿಸಿ ಬೆಳಗಿನ ಜಾವವೇ ಹೋಗುತ್ತೇನೆ ಮತ್ತು ಒಂದೆರಡು ಗಂಟೆ ಮಾತ್ರ ಇದ್ದು ಬಂದುಬಿಡುತ್ತೇನೆ. ಆದರಿಂದ ಏನೂ ಹೆಚ್ಚು ತೊಂದರೆ ಆಗುವುದಿಲ್ಲ. ನಾನು ಸಮಾಧಿಸ್ಥನಾದರೆ ಗಂಟಲು ನೋವು ಜಾಸ್ತಿಯಾಗುತ್ತದೆ ಅಷ್ಟೆ. ಆದರೆ ಹಾಗಾಗದಂತೆ ಎಚ್ಚರಿಕೆ ವಹಿಸುತ್ತೇನೆ." ಅವರ ಈ ಮಾತಿನಿಂದ ಎಲ್ಲಾ ಆಕ್ಷೇಪಣೆಗಳೂ ತಳ್ಳಲ್ಪಟ್ಟವು. ಭಕ್ತರು ಪಾಣಿಹಾಟಿಯ ಯಾತ್ರೆಗೆ ಅಣಿ ಮಾಡಲು ಪ್ರಾರಂಭಿಸಿದರು.

7. ಜ್ಯೇಷ್ಠ ಮಾಸದ ಶುಕ್ಲ ತ್ರಯೋದಶಿ. ಇಂದು ಪಾಣಿಹಾಟಿಯ ಮಹೋ ತ್ಸವ. ಸುಮಾರು ಇಪ್ಪತ್ತೈದು ಜನ ಭಕ್ತರು ಎರಡು ದೋಣಿಗಳನ್ನು ಬಾಡಿಗೆಗೆ ತೆಗೆದು ಕೊಂಡು ಬೆಳಗ್ಗೆ ಒಂಭತ್ತು ಗಂಟೆಯ ಒಳಗೇ ದಕ್ಷಿಣೇಶ್ವರಕ್ಕೆ ಬಂದರು. ಕೆಲವರು ನಡೆದುಕೊಂಡು ಬಂದರು. ಶ್ರೀರಾಮಕೃಷ್ಣರಿಗಾಗಿಯೆ ಒಂದು ಪ್ರತ್ಯೇಕ ದೋಣಿ ಸಿದ್ಧ ವಾಗಿತ್ತು. ಕೆಲವು ಜನ ಸ್ತ್ರೀಭಕ್ತರು ಬೆಳಗಿನ ಜಾವವೇ ಬಂದಿದ್ದರು. ಶ್ರೀಮಾತೆ ಶಾರದಾ ದೇವಿಯವರೊಡನೆ ಸೇರಿ ಶ್ರೀರಾಮಕೃಷ್ಣರಿಗೆ ಮತ್ತು ಭಕ್ತರಿಗೆಲ್ಲ ಆಹಾರದ ವ್ಯವಸ್ಥೆ ಮಾಡಲು ಬಂದಿದ್ದರು. ಹತ್ತು ಗಂಟೆಯ ಒಳಗೇ ಊಟ ಮುಗಿಸಿ ಹೊರಡುವುದೆಂದು ವ್ಯವಸ್ಥೆ ಆಯಿತು.

8. ಶ್ರೀರಾಮಕೃಷ್ಣರ ಊಟದ ನಂತರ ಶ್ರೀಮಾತೆಯವರು ತಾವೂ ಪಾಣಿಹಾಟಿ ಉತ್ಸವಕ್ಕೆ ಬರಬಹುದೆ ಎಂದು ಓರ್ವ ಸ್ತ್ರೀ ಭಕ್ತೆಯ ಮೂಲಕ ವಿಚಾರಿಸಿದರು. ಶ್ರೀರಾಮಕೃಷ್ಣರು ಹೇಳಿದರು, "ನೀವಂತೂ ಹೋಗುತ್ತಿದ್ದೀರಿ. ಅವಳು ಇಷ್ಟವಾದರೆ

ಬರಬಹುದು" ಎಂದು. ಶ್ರೀಮಾತೆಯವರು ಇದನ್ನು ಕೇಳಿ ಹೇಳಿದರು: "ಅನೇಕ ಜನರು ಹೋಗುತ್ತಿದ್ದಾರೆ. ಅಲ್ಲಿಯೂ ದೊಡ್ಡ ಜನಜಂಗುಳಿ ಇರುತ್ತದೆ, ಆ ಜನಸಂದಣಿಯಲ್ಲಿ ದೋಣಿಯಿಂದ ಇಳಿದು ಉತ್ಸವವನ್ನು ನೋಡುವುದು ನನಗೆ ಕಷ್ಟಸಾಧ್ಯ. ನಾನು ಹೋಗುವುದಿಲ್ಲ." ಶ್ರೀಮಾತೆಯವರು ತಾವು ಹೋಗುವುದಿಲ್ಲವೆಂದು ಸಂಕಲ್ಪಿಸಿದರು. ಮೂರು ನಾಲ್ಕು ಜನ ಸ್ತ್ರೀಭಕ್ತರು ಉತ್ಸವಕ್ಕೆ ಹೋಗುವುದೆಂದು ಸ್ಥಿರವಾಯಿತು. ಶ್ರೀಮಾತೆಯವರು ಅವರಿಗೆ ಊಟ ಮಾಡಿಸಿ ಶ್ರೀರಾಮಕೃಷ್ಣರ ನೌಕೆಯಲ್ಲಿ ಹೋಗ ಬೇಕೆಂದು ಸಲಹೆ ಇತ್ತರು.

9. ಸುಮಾರು ಮಧ್ಯಾಹ್ನ ಹನ್ನೆರಡು ಗಂಟೆಯ ಹೊತ್ತಿಗೆ ಎಲ್ಲರೂ ಪಾಣಿ ಹಾಟಿಯನ್ನು ತಲುಪಿದರು. ಅಲ್ಲಿ ಗಂಗಾತೀರದ ಪುರಾತನ ಅಶ್ವತ್ಥವೃಕ್ಷದ ಸುತ್ತ ಅನೇಕ ಜನ ಸಮಾವೇಶಗೊಂಡಿದ್ದರು. ವೈಷ್ಣವ ಭಕ್ತರು ಅನೇಕ ಜನ ಅಲ್ಲಿ ಇಲ್ಲಿ ಸಂಕೀರ್ತನೆ ಮಾಡುತ್ತಾ ಆನಂದಪಡುತ್ತಿದ್ದರು. ಇಷ್ಟಾದರೂ ಅವರಲ್ಲಿ ಅನೇಕರು ನಿಜವಾಗಿಯೂ ಭಗವನ್ನಾಮದಲ್ಲಿ ಮಗ್ನರಾಗಿದ್ದಾರೆ ಎಂದು ಹೇಳುವಂತಿರಲಿಲ್ಲ. ಎಲ್ಲಾ ಕಡೆಯೂ ಒಂದು ರೀತಿಯ ಕೊರತೆ ಮತ್ತು ನಿಸ್ಸಾರತೆ ಕಂಡುಬರುತ್ತಿದೆ. ದೋಣಿಯಲ್ಲಿ ಹೋಗು ತ್ತಿರುವಾಗ ಮತ್ತು ಅಲ್ಲಿ ತಲುಪಿದ ಮೇಲೂ ಕೂಡ ನರೇಂದ್ರನಾಥ, ಬಲರಾಮ್, ಗಿರೀಶ್‌ಚಂದ್ರ, ರಾಮಚಂದ್ರ, ಮಹೇಂದ್ರನಾಥ ಮುಂತಾದ ಪ್ರಧಾನ ಭಕ್ತರೆಲ್ಲರೂ ಶ್ರೀರಾಮಕೃಷ್ಣರು ಸಂಕೀರ್ತನೆಯಲ್ಲಿ ಭಾಗವಹಿಸಕೂಡದೆಂದು ಮತ್ತೆ ಮತ್ತೆ ಒತ್ತಿ ಹೇಳಿ ದ್ದರು. ಏಕೆಂದರೆ ಕೀರ್ತನೆಯಲ್ಲಿ ಭಾಗವಹಿಸಿದರೆ ಅವರಿಗೆ ಖಂಡಿತ ಭಾವಾವೇಶ ಉಂಟಾಗುತ್ತದೆ ಮತ್ತು ಅದರಿಂದ ಗಂಟಲು ನೋವು ವೃದ್ಧಿಯಾಗುತ್ತದೆ.

10. ದೋಣಿಯಿಂದ ಇಳಿದು ಶ್ರೀರಾಮಕೃಷ್ಣರು ಭಕ್ತರೊಡನೆ ನೇರವಾಗಿ ಮಣಿ ಸೇನನ ಮನೆಗೆ ಹೋದರು. ಅವರ ಆಗಮನದಿಂದ ಮಣಿಸೇನನ ಮನೆಯವರಿಗೆಲ್ಲಾ ತುಂಬ ಆನಂದವಾಯಿತು. ಅವರಿಗೆ ಪ್ರಣಾಮ ಮಾಡಿ ಬೈಠಕ್‌ಖಾನೆಗೆ ಅವರನ್ನು ಕರೆದುಕೊಂಡು ಹೋಗಿ ಕುಳ್ಳಿರಿಸಿದರು. ಆ ಕೊಠಡಿಯು ಮೇಜು, ಕುರ್ಚಿ, ಸೋಫಾ, ಕಾರ್ಪೆಟ್ ಇತ್ಯಾದಿಗಳ ಮೂಲಕ ಆಂಗ್ಲ ಮಾದರಿಯಲ್ಲಿ ಸುಸಜ್ಜಿತವಾಗಿತ್ತು. ಹತ್ತು ಹದಿನೈದು ನಿಮಿಷ ಅಲ್ಲಿ ವಿಶ್ರಾಂತಿ ಪಡೆದು ಶ್ರೀರಾಮಕೃಷ್ಣರು ಭಕ್ತಸಂಗಡಿಗರೊಡನೆ ರಾಧಾ ಕಾಂತ ದೇವಾಲಯಕ್ಕೆ ಹೋಗಲು ಮೇಲೆದ್ದರು.

11. ದೇವಾಲಯವು ಬೈಠಕ್‌ಖಾನೆಯ ಪಕ್ಕದಲ್ಲೇ ಇತ್ತು. ಪಕ್ಕದ ಬಾಗಿಲಿನ ಮೂಲಕ ಮಂದಿರಕ್ಕೆ ಸೇರಿಕೊಂಡಿದ್ದ ನಾಟ್ಯಶಾಲೆಗೆ ನಾವು ನೇರವಾಗಿ ಹೋದೆವು. ಅಲ್ಲಿಂದ ರಾಧಾಕಾಂತ ಯುಗಲಮೂರ್ತಿಯ ದರ್ಶನ ಮಾಡಿದೆವು. ಎರಡೂ ಮೂರ್ತಿ ಗಳು ತುಂಬ ಸುಂದರವಾಗಿದ್ದವು. ಸ್ವಲ್ಪಹೊತ್ತು ನೋಡಿದನಂತರ ಶ್ರೀರಾಮಕೃಷ್ಣರು ಅರ್ಧಬಾಹ್ಯದಶೆಯಲ್ಲಿ ಪ್ರಣಾಮ ಮಾಡತೊಡಗಿದರು. ನಾಟ್ಯಶಾಲೆಯಿಂದ ಐದು ಆರು ಮೆಟ್ಟಿಲು ಕೆಳಗಿಳಿದರೆ ದೇವಸ್ಥಾನದ ಅಂಗಳ ಸಿಕ್ಕುತ್ತದೆ. ಅಂಗಳದ ನಾಲ್ಕೂ ಕಡೆಗಳಲ್ಲಿಯೂ ಕೊಠಡಿಗಳಿದ್ದವು. ಬಾಗಿಲು ಯಾವ ರೀತಿ ಇತ್ತೆಂದರೆ ದೇವಸ್ಥಾನದ

ಅಂಗಳವನ್ನು ಪ್ರವೇಶಿಸುತ್ತಿದ್ದಂತೆಯೆ ವಿಗ್ರಹಗಳು ಕಾಣುತ್ತಿದ್ದವು.

12. ಶ್ರೀರಾಮಕೃಷ್ಣರು ಪ್ರಣಾಮ ಮಾಡುತ್ತಿರುವಾಗ ಒಂದು ಕೀರ್ತನ ದಳದವರು ಆ ಬಾಗಿಲಿನ ಮೂಲಕ ಅಂಗಳಕ್ಕೆ ಬಂದು ಹಾಡಲು ಪ್ರಾರಂಭಿಸಿದರು. ಪ್ರತಿಯೊಂದು ದಳದವರೂ ಮೊದಲು ದೇವಸ್ಥಾನದ ಅಂಗಳಕ್ಕೆ ಬಂದು ಹಾಡಿ ಅನಂತರ ಗಂಗಾತೀರಕ್ಕೆ ಹೋಗಿ ಹಾಡಲು ಪ್ರಾರಂಭಿಸುತ್ತಿದ್ದರೆಂದು ತೋರುತ್ತದೆ. ಒಬ್ಬ ಎತ್ತರದ ದಷ್ಟಪುಷ್ಟನಾದ ಬಿಳೀ ಮೈಬಣ್ಣದ ಮಧ್ಯ ವಯಸ್ಸಿನ ವ್ಯಕ್ತಿಯು ಅಲ್ಲಿಗೆ ಬಂದನು. ಅವನು ಜನಿವಾರ ಹಾಕಿದ್ದನು. ತಲೆ ಮೇಲೆ ಶಿಖೆ ಇತ್ತು. ದೇಹವು ಗಂಧದ ಮುದ್ರೆಗಳಿಂದ ಅಲಂಕೃತವಾಗಿತ್ತು. ಜಪದ ಚೀಲವನ್ನು ಹಿಡಿದು ಜಪ ಮಾಡುತ್ತಿದ್ದನು. ಅವನ ಮೇಲ್ವಸ್ತ್ರವು ಹೆಗಲ ಮೇಲೆ ನೇತಾಡುತ್ತಿತ್ತು. ಶುಭ್ರವಾದ ಬಿಳಿಯ ಪಂಚೆಯನ್ನು ಬಹಳ ಅಚ್ಚುಕಟ್ಟಾಗಿ ಸೊಂಟಕ್ಕೆ ಸುತ್ತಿಕೊಂಡಿದ್ದನು. ಆ ಪಂಚೆಯ ತುದಿಯಲ್ಲಿ ಒಂದು ನಾಣ್ಯದ ಗಂಟಿತ್ತು. ಅವನನ್ನು ನೋಡಿದ ಕೂಡಲೇ ತಿಳಿದು ಬರುತ್ತಿತ್ತು ಭಕ್ತರ ಶ್ರದ್ಧೆಯನ್ನು ದುರುಪಯೋಗಪಡಿಸಿ ಸ್ವಲ್ಪ ಹಣ ಸಂಪಾದನೆ ಮಾಡಲು ಬಂದಿರುವ ಬ್ರಾಹ್ಮಣ ಶ್ರೇಷ್ಠ ಎಂದು. ಕೀರ್ತನ ದಳದವರಿಗೆ ಉತ್ತೇಜನ ನೀಡಲು ಮತ್ತು ಬಹುಶಃ ಅಲ್ಲಿ ನೆರೆದವರ ಮುಂದೆ ತನ್ನ ಮಹತ್ವವನ್ನು ತೋರಿಸಿಕೊಳ್ಳಲು ಆ ಮಹಾಪುರುಷನು ಅಲ್ಲಿಗೆ ಬಂದವನೆ ಸಂಕೀರ್ತನೆಯಲ್ಲಿ ಭಾಗವಹಿಸಿದನು ಮತ್ತು ತಾನು ಭಾವಾವಿಷ್ಟನಾಗಿರುವನೆಂದು ತೋರಿಸಿಕೊಳ್ಳುತ್ತಾ ಅನೇಕ ಭಾವ ಭಂಗಿಯಲ್ಲಿ ಹೂಂಕರಿಸುತ್ತ ನೃತ್ಯ ಮಾಡತೊಡಗಿದನು.

13. ಶ್ರೀರಾಮಕೃಷ್ಣರು ಪ್ರಣಾಮದ ನಂತರ ನೃತ್ಯಶಾಲೆಯ ಒಂದು ಭಾಗದಲ್ಲಿ ನಿಂತು ಕಿರ್ತನೆಯನ್ನು ಕೇಳತೊಡಗಿದರು. ಆ ಬ್ರಾಹ್ಮಣನ ವೇಷ ಭೂಷಣವನ್ನೂ ಕೃತಕ ಭಾವಾವೇಶವನ್ನೂ ನೋಡಿ ಶ್ರೀರಾಮಕೃಷ್ಣರು ಸ್ವಲ್ಪ ನಕ್ಕು ನರೇಂದ್ರನೆ ಮುಂತಾದ ತಮ್ಮ ಭಕ್ತರಿಗೆ 'ಅವನ ವೇಷ ನೋಡಿ' ಎಂದು ಮೆತ್ತಗೆ ಹೇಳಿದರು. ಆಗ ಎಲ್ಲರ ಮುಖದಲ್ಲೂ ಹಾಸ್ಯದ ರೇಖೆ ಕಾಣಿಸಿಕೊಂಡಿತು. ಅವರು ಭಾವಾವಿಷ್ಟರಾಗದೆ ತಮ್ಮನ್ನು ನಿಗ್ರಹಿಸಿಕೊಳ್ಳುತ್ತಿರುವುದನ್ನು ನೋಡಿ ಭಕ್ತರೆಲ್ಲ ನಿಶ್ಚಿಂತೆಯಿಂದ ಇದ್ದಾರೆ. ಆದರೆ ಮರುಕ್ಷಣವೆ ಭಕ್ತರೆಲ್ಲ ನೋಡುತ್ತಿದ್ದಂತೆಯೆ ಶ್ರೀರಾಮಕೃಷ್ಣರು ಛಂಗನೆ ಹಾರಿ ಕೀರ್ತನ ದಳದಲ್ಲಿ ಸೇರಿಕೊಂಡರು ಮತ್ತು ಭಾವಾವೇಶದಲ್ಲಿ ಅವರ ಬಾಹ್ಯಜ್ಞಾನ ಲುಪ್ತವಾಯಿತು. ಭಕ್ತರು ಗಡಿಬಿಡಿಯಿಂದ ನೃತ್ಯಶಾಲೆಯಿಂದ ಕೆಳಗಿಳಿದು ಬಂದು ಶ್ರೀರಾಮಕೃಷ್ಣರನ್ನು ಸುತ್ತುವರಿದು ನಿಂತರು. ಶ್ರೀರಾಮಕೃಷ್ಣರು ಅರ್ಧಬಾಹ್ಯದಶೆಯಲ್ಲಿ ಸಿಂಹ ವಿಕ್ರಮದಿಂದ ನರ್ತಿಸುತ್ತಿದ್ದರು ಮತ್ತು ಕೆಲವೊಮ್ಮೆ ಸಂಪೂರ್ಣ ಪ್ರಜ್ಞೆಯನ್ನು ಕಳೆದುಕೊಂಡು ಸ್ಥಿರವಾಗಿ ನಿಂತುಬಿಡುತ್ತಿದ್ದರು. ಅವರು ಭಾವಾವೇಶದಲ್ಲಿ ನರ್ತಿಸುತ್ತ ಶೀಘ್ರವಾಗಿ ಹಜ್ಜೆ ಹಾಕುತ್ತ ಲಯಬದ್ಧವಾಗಿ ಹಿಂದೆ ಮುಂದೆ ಚಲಿಸುವುದನ್ನು ನೋಡಿದಾಗ ಆನಂದಸಾಗರದಲ್ಲಿ ಆನಂದದಿಂದ ಮೀನು ಈಜುತ್ತಿರುವಂತೆ ಕಾಣುತ್ತಿತ್ತು. ಅವರ ಪ್ರತಿಯೊಂದು ಚಲನೆಯೂ ಅದನ್ನು ಸೂಚಿಸುತ್ತಿತ್ತು. ಆದರೆ ಆ

ಸ್ವಾಭಾವಿಕ ಮತ್ತು ಸ್ವಪ್ರೇರಿತ ಆನಂದಾಭಿವ್ಯಕ್ತಿಯನ್ನು ವಿವರಿಸುವುದು ಅಸಾಧ್ಯ. ಅದರಲ್ಲಿ ಸೌಂದರ್ಯ ಮತ್ತು ಮಾರ್ದವತೆಗಳ ಮಧುರ ಸಾಮರಸ್ಯವಿತ್ತು. ನಾವು ಅನೇಕ ಬಗೆಯ ನೃತ್ಯಗಳನ್ನು ಕಂಡಿರುವೆವು. ಆದರೆ ಎಂದೂ ಇಂಥ ಒಂದು ಶಕ್ತಿ ಸೌಂದರ್ಯಗಳ ಮನೋಜ್ಞ ಸಮ್ಮಿಳನವನ್ನು ಕಂಡಿರಲಿಲ್ಲ. ದಿವ್ಯಭಾವದ ಆನಂದದಿಂದ ತುಂಬಿತುಳುಕುತ್ತಿದ್ದ ಅವರ ದೇಹವು ಅತ್ತಿತ್ತ ಓಲಾಡುವುದನ್ನು ನೋಡಿದಾಗ ಅದು ಘನದ್ರವ್ಯದಿಂದ ನಿರ್ಮಿತವಾಗಿದೆಯೆ ಇಲ್ಲವೆ ಎಂದು ಆಶ್ಚರ್ಯ ಪಡುವಾತಿತ್ತು. ಪರ್ವತಾಕಾರದ ಅಲೆಯು ಎದ್ದು ಅದು ಎಲ್ಲವನ್ನೂ ಕೊಚ್ಚಿಕೊಂಡು ಹೋಗುತ್ತಿರುವಂತೆ ಅನಿಸುತ್ತಿತ್ತು. ಈಗ ಯಥಾರ್ಥ ಮತ್ತು ಕೃತಕ ಭಾವಗಳ ವ್ಯತ್ಯಾಸವೇನು ಎಂಬುದನ್ನು ಯಾರೂ ವಿವರಿಸಿ ಹೇಳಬೇಕಾಗಿರಲಿಲ್ಲ. ಕೀರ್ತನದಳದವರು ಈಗ ಆ ಬ್ರಾಹ್ಮಣನ ಕಡೆ ಕಣ್ಣೂ ಹಾಯಿಸದೆ ಶ್ರೀರಾಮಕೃಷ್ಣರನ್ನು ಸುತ್ತುವರಿದು ಆನಂದದಿಂದ ಹಾಡತೊಡಗಿದರು.

14. ಸುಮಾರು ಅರ್ಧಗಂಟೆಯ ನಂತರ ಶ್ರೀರಾಮಕೃಷ್ಣರು ಸ್ವಲ್ಪ ಪ್ರಕೃತಿಸ್ಥರಾದುದನ್ನು ಕಂಡು ಭಕ್ತರು ಅವರನ್ನು ಕೀರ್ತನ ದಳದ ಮಧ್ಯದಿಂದ ಬೇರೆಡೆ ಕರೆದುಕೊಂಡುಹೋಗಲು ಪ್ರಯತ್ನಿಸಿದರು. ಅಲ್ಲಿಂದ ಸ್ವಲ್ಪ ದೂರದಲ್ಲಿ ಮಹಾಪ್ರಭುವಿನ ಶಿಷ್ಯನಾದ ರಾಘವ ಪಂಡಿತನ ಮನೆಯಿತ್ತು. ಅಲ್ಲಿಗೆ ಹೋಗಿ ಅವನು ಪೂಜಿಸುತ್ತಿದ್ದ ಮೂರ್ತಿ ಮತ್ತು ಸಾಲಗ್ರಾಮಗಳ ದರ್ಶನಮಾಡಿ ಅನಂತರ ದೋಣಿಯನ್ನು ಹತ್ತುವುದೆಂದು ನಿರ್ಧರಿಸಿದರು. ಶ್ರೀರಾಮಕೃಷ್ಣರು ಅದಕ್ಕೆ ಒಪ್ಪಿಗೆ ಇತ್ತು ತಮ್ಮ ಭಕ್ತರೊಡನೆ ದೇವಸ್ಥಾನದಿಂದ ಹೊರಬಂದರು. ಆದರೆ ಕೀರ್ತನಕಾರರು ಮಾತ್ರ ಅವರನ್ನು ಬಿಡಲಿಲ್ಲ. ಉತ್ಸಾಹದಿಂದ ಭಜನೆ ಮಾಡುತ್ತ ಅವರ ಹಿಂದೆಯೇ ಹೊರಟರು. ಶ್ರೀರಾಮಕೃಷ್ಣರು ಒಂದೆರಡು ಹೆಜ್ಜೆ ಮುಂದೆ ಹೋಗಿದ್ದೇ ತಡ ಮತ್ತೆ ಭಾವಾವೇಶದಿಂದ ಸ್ಥಿರವಾಗಿ ನಿಂತುಬಿಟ್ಟರು. ಅವರಿಗೆ ಸ್ವಲ್ಪ ಬಾಹ್ಯಪ್ರಜ್ಞೆ ಬಂದ ಮೇಲೆ ಭಕ್ತರು ಅವರನ್ನು ಮುಂದುವರಿಯಲು ಒತ್ತಾಯಿಸಿದರು. ಅವರು ನಾಲ್ಕೈದು ಹೆಜ್ಜೆ ಮುಂದೆ ಹೋಗಿ ಮತ್ತೆ ಭಾವಾವಿಷ್ಟರಾದರು. ಮತ್ತೆ ಮತ್ತೆ ಹೀಗಾಗಲು ಭಕ್ತರು ಅನಿವಾರ್ಯವಾಗಿ ನಿಧಾನವಾಗಿ ಮುಂದುವರಿಯಬೇಕಾಯಿತು.

15. ಭಾವಾವಿಷ್ಟರಾದ ಶ್ರೀರಾಮಕೃಷ್ಣರ ಶರೀರದಲ್ಲಿ ನಾವು ಅಂದು ನೋಡಿದ ದಿವ್ಯ ಉಜ್ವಲ ಸೌಂದರ್ಯವನ್ನು ನಾವು ಹಿಂದೆಂದೂ ಕಂಡಿರಲಿಲ್ಲ. ದಿವ್ಯ ದೇಹದ ಆ ಅಪೂರ್ವ ಶೋಭೆಯನ್ನು ಯಥಾವತ್ತಾಗಿ ವರ್ಣಿಸುವುದು ಮನುಷ್ಯ ಶಕ್ತಿಗೆ ಸಾಧ್ಯವಲ್ಲ. ಭಾವಾವೇಶದಿಂದ ದೇಹದಲ್ಲಿ ಅಂಥಾ ಒಂದು ಪರಿವರ್ತನೆ ಉಂಟಾಗಲು ಸಾಧ್ಯ ಎಂಬುದನ್ನು ನಾವು ಈ ಹಿಂದೆ ಎಂದೂ ಕಲ್ಪಿಸಿಯೂ ಇರಲಿಲ್ಲ. ಅಂದು ಅವರ ಶರೀರವು ಯಾವಾಗಲಿಗಿಂತ ಹೆಚ್ಚು ಎತ್ತರವಾಗಿ ಕಾಣಿಸುತ್ತಿತ್ತು ಮತ್ತು ಕನಸಿನ ದೇಹವೊ ಎಂಬಂತೆ ತುಂಬ ಹಗುರವಾಗಿರುವಂತೆ ಭಾಸವಾಗುತ್ತಿತ್ತು. ನಸು ನೀಲವರ್ಣವು ಉಜ್ವಲವಾಗಿ ಗೌರವರ್ಣವಾಗಿ ಪರಿಣಮಿಸಿತ್ತು. ಭಾವದಿಂದ ಬೆಳಗುತ್ತಿದ್ದ ಅವರ ಮುಖ

ಮಂಡಲವು ಅಪೂರ್ವ ಜ್ಯೋತಿಯನ್ನು ಹೊರಸೂಸುತ್ತ ನಾಲ್ಕು ದಿಕ್ಕನ್ನೂ ಪ್ರಕಾಶ ಪಡಿಸುತ್ತಿತ್ತು. ಕರುಣೆ, ಶಾಂತಿ, ಆನಂದ ಇವುಗಳಿಂದ ಕೂಡಿದ ಆ ಅನುಪಮ ಹಸನ್ಮುಖ ವನ್ನು ನೋಡಿದಾಕ್ಷಣ ಜನಸಾಧಾರಣರೂ ಕೂಡ ಮಂತ್ರ ಮುಗ್ಧರಾಗಿ ಬೇರೆಲ್ಲ ವಿಷಯ ಗಳನ್ನೂ ಮರೆತು ಅವರ ಹಿಂದೆ ಹೋಗುವಂತಿತ್ತು. ಅವರು ಉಟ್ಟಿದ್ದ ರೇಷ್ಮೆಬಟ್ಟೆಯ ಉಜ್ವಲ ಕಾವಿ ಬಣ್ಣವು ಅವರ ದೇಹಕಾಂತಿಯೊಡನೆ ಒಂದಾಗಿ ಅವರು ಅಗ್ನಿಮಯ ಪುರುಷರೊ ಎನ್ನುವಂತೆ ಕಾಣುತ್ತಿತ್ತು.

16. ಶ್ರೀರಾಮಕೃಷ್ಣರು ದೇವಸ್ಥಾನದಿಂದ ಹೊರಬಂದು ಸಾರ್ವಜನಿಕ ರಸ್ತೆಗೆ ಬಂದರು. ಕೀರ್ತನಕಾರರು ಅವರ ದಿವ್ಯಸೌಂದರ್ಯವನ್ನೂ ಮನೋಹರ ನೃತ್ಯವನ್ನೂ ದಿವ್ಯಭಾವವನ್ನೂ ಕಂಡು ಉತ್ಸಾಹಭರಿತರಾಗಿ ಈ ಕೆಳಗಿನ ಹಾಡನ್ನು ಹಾಡ ತೊಡಗಿದರು :

> ಗಂಗಾತೀರದಿ ಶ್ರೀಹರಿನಾಮವ
> ನುತಿಸುವ ಇವನಾರು ?
> ಸಗ್ಗದ ಒಲವನು ಈ ತಿರೆಗೆರೆಯುವ
> ನಿತ್ಯಾನಂದನು ಇವನೇನು ?

ಹಾಡಿನ ಕೊನೆಯ ಸಾಲನ್ನು ಮತ್ತೆ ಮತ್ತೆ ಹಾಡುತ್ತ ಅವರು ಶ್ರೀರಾಮಕೃಷ್ಣರ ಕಡೆ ಕೈತೋರಿಸತೊಡಗಿದರು. ಅವರ ಉತ್ಸಾಹವನ್ನು ಕಂಡು ಆಕರ್ಷಿತರಾಗಿ ಉತ್ಸವಕ್ಕೆ ಬಂದಿದ್ದ ಜನರೆಲ್ಲರೂ ಅಲ್ಲಿ ಬಂದು ಜಮಾಯಿಸತೊಡಗಿದರು. ಅಲ್ಲಿಗೆ ಬಂದು ಶ್ರೀರಾಮ ಕೃಷ್ಣರನ್ನು ನೋಡಿದವರೆಲ್ಲರೂ ಮುಗ್ಧರಾಗಿ ಪರಮೋತ್ಸಾಹದಿಂದ ಕೀರ್ತನೆಯಲ್ಲಿ ಭಾಗವಹಿಸಿದರು. ತಮ್ಮಲ್ಲಿ ದಿವ್ಯಭಾವವು ಇದ್ದಕ್ಕಿದ್ದಂತೆ ಜಾಗ್ರತವಾಗಿರುವುದನ್ನು ಕಂಡು ಚಕಿತರಾಗಿ ಮಂತ್ರಮುಗ್ಧರಾಗಿ ಹಾಗೆಯೆ ನಿಂತುಬಿಡುತ್ತಿದ್ದರು ಮತ್ತು ಅನಂತರ ಎವೆಯಿಕ್ಕದೆ ಶ್ರೀರಾಮಕೃಷ್ಣರನ್ನೇ ನೋಡುತ್ತಾ ಅವರ ಹಿಂದೆ ಹೋಗುತ್ತಿದ್ದರು. ಜನರ ಉತ್ಸಾಹವು ಕ್ರಮೇಣ ಎಲ್ಲಾ ಜನರನ್ನೂ ವ್ಯಾಪಿಸಿತು. ಬೇರೆ ಕೀರ್ತನೆ ದಳದವರು ಬಂದು ಹಿಂದಿನ ದಳದವರೊಡನೆ ಸೇರಿಕೊಂಡರು. ಹೀಗೆ ವಿಶಾಲ ಜನಸಂದಣಿಯು ಭಾವಾವಿಷ್ಟರಾಗಿದ್ದ ಶ್ರೀರಾಮಕೃಷ್ಣರನ್ನು ಸುತ್ತುವರಿದು ನಿಧಾನವಾಗಿ ಪಂಡಿತ ರಾಘ ವನ ಮನೆಗೆ ಮುಂದುವರಿಯಿತು.

17. ಸ್ತ್ರೀಭಕ್ತರು ಅಶ್ವತ್ಥಮರದ ಕೆಳಗೆ ಶ್ರೀಗೌರಾಂಗ ಮತ್ತು ನಿತ್ಯಾನಂದರಿಗೆ ತಟ್ಟೆತುಂಬ ಸಿಹಿತಿಂಡಿಗಳನ್ನು ನೈವೇದ್ಯಮಾಡಿ ಅದನ್ನು ಶ್ರೀರಾಮಕೃಷ್ಣರಿಗಾಗಿ ತರು ತ್ತಿದ್ದರು. ಅವರು ರಾಘವ ಪಂಡಿತನ ಮನೆಯ ಹತ್ತಿರ ಬಂದಿದ್ದರಷ್ಟೆ. ಆಗ ಕುರೂ ಪಿಯೂ ವಿಕೃತರೂಪವುಳ್ಳವನೂ ಆದ ವೈಷ್ಣವನೊಬ್ಬನು ಎಲ್ಲಿಂದಲೋ ಇದ್ದಕ್ಕಿದ್ದಂತೆ ಬಂದುಬಿಟ್ಟನು. ಆ ಸ್ತ್ರೀಭಕ್ತರ ಕೈಯಿಂದ ಸಿಹಿತಿಂಡಿಯ ತಟ್ಟೆಯನ್ನು ಕಸಿದುಕೊಂಡನು. ದಿವ್ಯಭಾವದಿಂದ ಉನ್ಮತ್ತನಾದವನಂತೆ ಅವನು ಸ್ವಲ್ಪ ಸಿಹಿ ತಿಂಡಿಯನ್ನು ಶ್ರೀರಾಮ ಕೃಷ್ಣರ ಬಾಯಿಗೆ ಹಾಕಿದನು. ಶ್ರೀರಾಮಕೃಷ್ಣರು ಆಗ ಭಾವಾವಿಷ್ಟರಾಗಿ ನಿಂತುಕೊಂಡಿ

ದ್ದರು. ಆ ಮನುಷ್ಯ ಅವರನ್ನು ಸ್ಪರ್ಶಿಸಿದ ಕೂಡಲೆ ಅವರ ಇಡೀ ದೇಹವು ಒಮ್ಮೆ ಕಂಪಿಸಿತು ಮತ್ತು ಅವರ ಭಾವವು ಭಂಗವಾಯಿತು. ಅವರು ಆ ಸಿಹಿತಿಂಡಿಯನ್ನು ಉಗುಳಿ ಬಾಯನ್ನು ತೊಳೆದುಕೊಂಡರು. ಅಲ್ಲಿ ಬಂದಿದ್ದ ವೈಷ್ಣವನು ಢಾಂಬಿಕನೆಂಬು ದನ್ನು ತಿಳಿಯಲು ಯಾರಿಗೂ ಹೆಚ್ಚು ಸಮಯ ಬೇಕಾಗಲಿಲ್ಲ. ಎಲ್ಲರೂ ಅವನನ್ನೇ ಕೆಟ್ಟದೃಷ್ಟಿಯಿಂದ ನೋಡುತ್ತಿರುವುದನ್ನು ಕಂಡು ಅವನು ಅಲ್ಲಿಂದ ಮೆತ್ತಗೆ ಜಾರಿ ಕೊಂಡನು. ಶ್ರೀರಾಮಕೃಷ್ಣರು ಅನಂತರ ಭಕ್ತರ ಕೈಯಿಂದ ಸ್ವಲ್ಪ ಪ್ರಸಾದವನ್ನು ಸ್ವೀಕರಿಸಿ ಉಳಿದುದನ್ನು ಅವರಿಗೇ ಕೊಟ್ಟರು.

18. ಹೀಗೆ ಒಂದು ಮೈಲಿ ದೂರವನ್ನು ಕ್ರಮಿಸಿ ರಾಘವ ಪಂಡಿತನ ಮನೆಗೆ ತಲುಪುವುದಕ್ಕೆ ಮೂರು ಗಂಟೆಗಳು ಹಿಡಿದುವು. ಶ್ರೀರಾಮಕೃಷ್ಣರು ದೇವಸ್ಥಾನಕ್ಕೆ ಹೋಗಿ ಸಾಲಗ್ರಾಮವನ್ನು ಸ್ಪರ್ಶಿಸಿ ಮೂರ್ತಿದರ್ಶನ ಮಾಡಿ ವಿಶ್ರಾಂತಿ ತೆಗೆದುಕೊಳ್ಳಲು ಅರ್ಧ ಗಂಟೆ ಹಿಡಿಯಿತು. ಈ ನಡುವೆ ಆ ಬೃಹದ್ ಜನಸಂದಣಿಯು ಬೇರೆ ಬೇರೆ ದಿಕ್ಕಿ ನಲ್ಲಿ ಚೆದುರಿಹೋಯಿತು. ಜನಜಂಗುಳಿ ಕಡಮೆಯಾದದ್ದನ್ನು ನೋಡಿ ಭಕ್ತರು ಶ್ರೀರಾಮ ಕೃಷ್ಣರನ್ನು ದೋಣಿಗೆ ಕರೆದುಕೊಂಡು ಹೋದರು. ಆದರೆ ಇಲ್ಲಿಯೂ ಅದ್ಭುತ ಘಟನೆ ಸಂಭವಿಸಿತು. ಕೊನ್ನಾಗರದ ನವಚೈತನ್ಯ ಮಿತ್ರನು ಶ್ರೀರಾಮಕೃಷ್ಣರು ಉತ್ಸವಕ್ಕೆ ಬಂದಿ ದ್ದಾರೆ ಎಂದು ಕೇಳಿ ಅವರನ್ನು ನೋಡುವ ಉತ್ಸಾಹದಿಂದ ಎಲ್ಲಾಕಡೆ ಹುಡುಕುತ್ತಿ ದ್ದನು. ಈಗ ಶ್ರೀರಾಮಕೃಷ್ಣರು ದೋಣಿಯಲ್ಲಿ ಇರುವುದನ್ನು ಕಂಡು ಇನ್ನೇನು ದೋಣಿ ಹೊರಡಬೇಕೆಂದಿರುವಾಗ ಅವನು ಉನ್ಮತ್ತನಂತೆ ಓಡಿ ಬಂದು ಶ್ರೀರಾಮ ಕೃಷ್ಣರ ಪಾದದಡಿ ಬಿದ್ದು 'ಕೃಪೆತೋರಿ' ಎಂದು ಭಾವಾವೇಶದಿಂದ ಅಳತೊಡಗಿದನು. ಶ್ರೀರಾಮಕೃಷ್ಣರು ಅವನ ವ್ಯಾಕುಲತೆಯನ್ನೂ ಭಕ್ತಿಯನ್ನೂ ಕಂಡು ಭಾವಾವೇಶದಿಂದ ಸ್ಪರ್ಶಿಸಿದರು. ಆ ಸ್ಪರ್ಶದ ಪ್ರಭಾವದಿಂದ ಅವನು ಏನು ಕಂಡನೊ ತಿಳಿಯದು, ಅಂತೂ ಅವನ ವ್ಯಾಕುಲ ಕ್ರಂದನವು ನಿಂತುಹೋಗಿ ಇದ್ದಕ್ಕಿದ್ದಂತೆಯೆ ಪರಮಾನಂದದಿಂದ ನರ್ತಿಸುತ್ತಾ ಶ್ರೀರಾಮಕೃಷ್ಣರನ್ನು ಅನೇಕ ರೀತಿಯಲ್ಲಿ ಸ್ತುತಿಸುತ್ತಾ ಮತ್ತೆ ಮತ್ತೆ ಸಾಷ್ಟಾಂಗ ಪ್ರಣಾಮ ಮಾಡತೊಡಗಿದನು. ಹೀಗೆ ಸ್ವಲ್ಪ ಹೊತ್ತಾದ ನಂತರ ಶ್ರೀರಾಮ ಕೃಷ್ಣರು ಬೆನ್ನಿನ ಮೇಲೆ ಕೈಯಾಡಿಸಿ ಅನೇಕ ಉಪದೇಶಗಳನ್ನು ನೀಡುತ್ತಾ ಅವನನ್ನು ಶಾಂತಗೊಳಿಸಿದರು. ನವಚೈತನ್ಯನು ಇದಕ್ಕೆ ಮುಂಚೆ ಅನೇಕ ಬಾರಿ ಶ್ರೀರಾಮಕೃಷ್ಣ ರನ್ನು ನೋಡಿದ್ದರೂ ಇದುವರೆಗೂ ಅವರ ಕೃಪೆಗೆ ಪಾತ್ರನಾಗಿರಲಿಲ್ಲ. ಇಂದು ಅದನ್ನು ಪಡೆದು ಕೃತಾರ್ಥನಾಗಿ ತನ್ನ ಸಂಸಾರದ ಭಾರವನ್ನೆಲ್ಲ ತನ್ನ ಮಗನ ಮೇಲೆ ವಹಿಸಿ ವಾನಪ್ರಸ್ಥ ಜೀವನವನ್ನು ಕೈಗೊಂಡನು. ತನ್ನ ಗ್ರಾಮದ ಗಂಗಾತೀರದ ಒಂದು ಪರ್ಣ ಕುಟೀರದಲ್ಲಿ ತನ್ನ ಉಳಿದ ಜೀವನವನ್ನು ಸಾಧನೆ ಭಜನೆ ಶ್ರೀರಾಮಕೃಷ್ಣರ ನಾಮ ಗುಣಗಾನಗಳಲ್ಲಿ ಕಳೆದನು. ಅಂದಿನಿಂದ ಸಂಕೀರ್ತನೆಯ ಸಮಯದಲ್ಲಿ ವೃದ್ಧ ನವ ಚೈತನ್ಯನಿಗೆ ಭಾವಾವೇಶ ಉಂಟಾಗುತ್ತಿತ್ತು ಮತ್ತು ಅವನ ಭಕ್ತಿ ಮತ್ತು ಆನಂದಮಯ ಮೂರ್ತಿಯನ್ನು ಕಂಡು ಅನೇಕರು ಅವನಿಗೆ ಶ್ರದ್ಧಾಗೌರವವನ್ನು ತೋರಿಸುತ್ತಿದ್ದರು.

ಹೀಗೆ ನವಚೈತನ್ಯನು ಶ್ರೀರಾಮಕೃಷ್ಣರ ಅನುಗ್ರಹದಿಂದ ಅನೇಕರ ಹೃದಯದಲ್ಲಿ ಭಗವದ್ಭಕ್ತಿಯನ್ನು ಉದ್ದೀಪನಗೊಳಿಸುವುದರಲ್ಲಿ ಸಮರ್ಥನಾದನು.

19. ನವ ಚೈತನ್ಯನು ಹೊರಟುಹೋದ ಮೇಲೆ ದೋಣಿಯು ಮುಂದುವರಿಯಲೆಂದು ಶ್ರೀರಾಮಕೃಷ್ಣರು ಆದೇಶವಿತ್ತರು. ಸ್ವಲ್ಪದೂರ ಹೋಗುವುದರಲ್ಲಿಯೆ ಸಂಜೆಯಾಯಿತು. ನಾವು ದಕ್ಷಿಣೇಶ್ವರವನ್ನು ತಲುಪಿದಾಗ ಸುಮಾರು ರಾತ್ರಿ ಎಂಟು ಗಂಟೆಯಾಗಿತ್ತು. ಅನಂತರ ಶ್ರೀರಾಮಕೃಷ್ಣರು ತಮ್ಮ ಕೊಠಡಿಗೆ ಹೋಗಿ ಕುಳಿತ ಮೇಲೆ ಭಕ್ತರೆಲ್ಲರೂ ಅವರಿಗೆ ಪ್ರಣಾಮಮಾಡಿ ಕಲಕತ್ತೆಗೆ ಹಿಂದಿರುಗಿದರು. ಎಲ್ಲರೂ ದೋಣಿಯನ್ನು ಹತ್ತಿದ್ದಾರೆ, ಆಗ ಒಬ್ಬ ವ್ಯಕ್ತಿಗೆ ತಾನು ಪಾದರಕ್ಷೆ ಮರೆತಿರುವುದು ಗೊತ್ತಾಯಿತು. ಅವನು ಅದನ್ನು ತೆಗೆದುಕೊಂಡು ಬರಲು ಮತ್ತೆ ಶ್ರೀರಾಮಕೃಷ್ಣರ ಕೊಠಡಿಯ ಕಡೆಗೆ ಹೊರಟನು. ಶ್ರೀರಾಮಕೃಷ್ಣರು ಅವನು ಬರುತ್ತಿರುವ ಕಾರಣವನ್ನು ತಿಳಿದು ನಕ್ಕು ಹೇಳಿದರು : "ನೌಕೆ ಹೊರಡುವುದಕ್ಕೆ ಮುಂಚೆಯೆ ತಿಳಿದದ್ದು ಒಳ್ಳೆಯದಾಯಿತು. ಇಲ್ಲದಿದ್ದರೆ ಈ ಒಂದು ಘಟನೆಯಿಂದ ಇಂದಿನ ಇಡೀ ದಿನದ ಆನಂದ ಹಾಳಾಗಿ ಹೋಗುತ್ತಿತ್ತು !" ಆ ಯುವಕನು ಈ ಮಾತನ್ನು ಕೇಳಿ ನಕ್ಕು ಅವರಿಗೆ ಪ್ರಣಾಮಮಾಡಿ ಹೊರಡಬೇಕೆಂದಿರುವಾಗ ಶ್ರೀರಾಮಕೃಷ್ಣರು ವಿಚಾರಿಸಿದರು : "ಇಂದು ಹೇಗಿತ್ತು ಹೇಳು ? ಒಂದು ಹರಿನಾಮದ ಮೇಳವೆ ನಡೆದಂತಿತ್ತು ಅಲ್ಲವೆ ?" ಆ ವ್ಯಕ್ತಿಯು ಹೌದೆಂದನು. ಆಗ ಶ್ರೀರಾಮಕೃಷ್ಣರು ಉತ್ಸವದ ಸಮಯದಲ್ಲಿ ಭಾವಾವಸ್ಥೆಯನ್ನು ಪಡೆದ ತಮ್ಮ ಭಕ್ತರ ಹೆಸರುಗಳನ್ನು ಉಲ್ಲೇಖಿಸಿ ಚಿಕ್ಕ ನರೇನನನ್ನು ಹೀಗೆ ಪ್ರಶಂಸಿಸತೊಡಗಿದರು : "ಆ ಕಪ್ಪು ಹುಡುಗ ಕೆಲವೇ ದಿನಗಳಿಂದ ಇಲ್ಲಿಗೆ ಬಂದು ಹೋಗುತ್ತಿದ್ದಾನೆ. ಇಷ್ಟರಲ್ಲಿಯೆ ಅವನಿಗೆ ಭಾವ ಉಂಟಾಗಲು ಪ್ರಾರಂಭವಾಗಿದೆ. ಅಂದು ಅವನ ಭಾವ ನಿಲ್ಲುತ್ತಲೆ ಇಲ್ಲ–ಒಂದು ಗಂಟೆಯವರೆಗೂ ಬಾಹ್ಯಜ್ಞಾನವಿರಲಿಲ್ಲ ! ಅವನು ಹೇಳುತ್ತಾನೆ, ಇಂದಿನ ದಿನಗಳಲ್ಲಿ ಅವನ ಮನಸ್ಸು ನಿರಾಕಾರದಲ್ಲಿ ಲೀನವಾಗುತ್ತದಂತೆ. ಚಿಕ್ಕ ನರೇನ್ ತುಂಬಾ ಒಳ್ಳೆ ಹುಡುಗ ಅಲ್ಲವೆ ? ನೀನು ಅವನ ಮನೆಗೆ ಒಂದು ದಿನ ಹೋಗಿ ಮಾತನಾಡಿ ಬರುತ್ತೀಯಾ ?" ಆ ಯುವಕನು ಈ ಎಲ್ಲ ಮಾತುಗಳನ್ನು ಒಪ್ಪಿಕೊಂಡು ಹೇಳಿದನು : "ಆದರೆ ಮಹಾಶಯರೆ, ದೊಡ್ಡ ನರೇನನು ನನಗೆ ಮೆಚ್ಚಿಗೆಯಾಗುವಷ್ಟು ಯಾರೂ ಆಗುವುದಿಲ್ಲ. ಆದ್ದರಿಂದ ಚಿಕ್ಕ ನರೇನನ ಮನೆಗೆ ಹೋಗಲು ನನಗೆ ಮನಸ್ಸಾಗುತ್ತಿಲ್ಲ." ಶ್ರೀರಾಮಕೃಷ್ಣರು ಅದಕ್ಕೆ ಅವನನ್ನು ಬಯ್ದು ಹೇಳಿದರು : "ಪೋರ, ಎಂಥ ಸಂಕುಚಿತ ಮನಸ್ಸು ನಿನ್ನದು ! ಈ ರೀತಿ ಸಂಕುಚಿತ ಮನೋಭಾವ ಹೀನಬುದ್ಧಿಯ ಲಕ್ಷಣ. ಭಗವಂತನನ್ನು ಅನೇಕ ಪುಷ್ಪಗಳಿಂದ ಅಲಂಕರಿಸಬೇಕು. ನಾನಾ ಪ್ರಕಾರದ ಭಕ್ತರಿರುತ್ತಾರೆ. ಅವರೆಲ್ಲರೊಡನೆ ಬೆರೆತು ಆನಂದ ಪಡಬೇಕು. ಹಾಗೆ ಮಾಡಲಾಗದಿದ್ದರೆ ಅದು ಹೀನಬುದ್ಧಿಯ ಲಕ್ಷಣ. ನೀನು ಚಿಕ್ಕ ನರೇನನ ಮನೆಗೆ ಒಂದು ದಿವಸ ಹೋಗಲೇ ಬೇಕು. ಏನು ಹೋಗುತ್ತೀಯಾ ?" ಅವನು ಒಪ್ಪಿಗೆ ಇತ್ತು ಅವರಿಗೆ ಪ್ರಣಾಮಮಾಡಿ ಬೀಳ್ಕೊಂಡನು. ಆ ವ್ಯಕ್ತಿಯು ಕೆಲವು ದಿನಗಳ ನಂತರ ಶ್ರೀರಾಮಕೃಷ್ಣರು ಹೇಳಿದಂತೆ

ಚಿಕ್ಕ ನರೇನನ ಹತ್ತಿರ ಮಾತನಾಡಲು ಹೋಗಿದ್ದನಂತೆ. ಅವನ ಮಾತಿನಿಂದ ಆ ವ್ಯಕ್ತಿಯ ಜೀವನದ ದೊಡ್ಡ ಸಮಸ್ಯೆಗೆ ಪರಿಹಾರ ದೊರೆಯಿತು. ಅಂದು ದೋಣಿಯು ಕಲ್ಕತ್ತೆಯನ್ನು ತಲುಪಿದಾಗ ರಾತ್ರಿ ಸುಮಾರು ಹತ್ತು ಗಂಟೆಯಾಗಿತ್ತು.

20. ಸ್ತ್ರೀ ಭಕ್ತರು ಅಂದು ರಾತ್ರಿ ಶ್ರೀಮಾತೆಯವರ ಜೊತೆ ತಂಗಿದ್ದರು. ಸ್ನಾನ ಯಾತ್ರೆಯ ದಿನ ದೇವಸ್ಥಾನದ ಉದ್ಘಾಟನೆಯ ವಾರ್ಷಿಕೋತ್ಸವವಾಗಿದ್ದರಿಂದ ದೇವಸ್ಥಾನದಲ್ಲಿ ದೊಡ್ಡ ಸಮಾರಂಭ ನಡೆಯುವುದಿತ್ತು. ಅದನ್ನು ನೋಡಿಕೊಂಡು ಕಲ್ಕತ್ತೆಗೆ ಹಿಂದಿರುಗುವುದೆಂದು ಆ ಸ್ತ್ರೀ ಭಕ್ತರು ನಿರ್ಧರಿಸಿದರು. ರಾತ್ರಿ ಊಟದ ಸಮಯದಲ್ಲಿ ಶ್ರೀರಾಮಕೃಷ್ಣರು ಅವರಲ್ಲೊಬ್ಬರಿಗೆ ಪಾಣಿಹಾಟಿ ಉತ್ಸವದ ಬಗ್ಗೆ ಹೀಗೆ ಹೇಳಿದರು : "ಎಂಥಾ ಜನಸಂದಣಿ. ಇಷ್ಟೇ ಅಲ್ಲದೆ ಭಾವ ಸಮಾಧಿಯಾದುದರಿಂದ ಎಲ್ಲರ ಕಣ್ಣೂ ನನ್ನ ಮೇಲೆ. ಅವಳು (ಶ್ರೀಮಾತೆಯವರು) ಬರದೆ ಇದ್ದದ್ದು ಒಳ್ಳೆಯದೆ ಆಯಿತು. ಅವಳು ಜೊತೆ ಇದ್ದಿದ್ದರೆ ಹಂಸ-ಹಂಸಿ ಬಂದಿದ್ದಾರೆ ಎಂದು ಜನ ಆಡಿಕೊಳ್ಳು ತ್ತಿದ್ದರು. ಅವಳು ತುಂಬಾ ಬುದ್ಧಿವಂತೆ." ಶ್ರೀಮಾತೆಯವರ ಅಸಾಮಾನ್ಯ ಬುದ್ಧಿ ಶಕ್ತಿಯ ಸಂಬಂಧವಾಗಿ ಅವರು ಇನ್ನೊಂದು ಘಟನೆಯನ್ನು ಹೇಳಿದರು : "ಮಾರ್ವಾಡಿ ಭಕ್ತನೊಬ್ಬನು (ಲಕ್ಷ್ಮೀನಾರಾಯಣ) ಹತ್ತು ಸಾವಿರ ರೂಪಾಯಿ ಕೊಡಲು ಬಂದ. ಆಗ ನನಗೆ ತಲೆಯನ್ನು ಯಾರೋ ಗರಗಸದಿಂದ ಕೊಯ್ದಂತಾಯಿತು. ತಾಯಿಗೆ ಹೇಳಿದೆ, 'ತಾಯಿ ಇಷ್ಟು ದಿನಗಳ ನಂತರ ಮತ್ತೆ ಪ್ರಲೋಭನೆ ಒಡ್ಡುತ್ತಿರುವೆಯಲ್ಲ,' ಆಗ ಅವಳ ಮನಸ್ಸನ್ನು ಅರಿಯಬೇಕೆಂದು ಅವಳನ್ನು ಕರೆದು ಹೇಳಿದೆ : 'ನೋಡು, ಇವನು ಹಣ ಕೊಡಬೇಕಂತೆ, ನೀನೇಕೆ ಅದನ್ನು ತಗೋಬಾರದು ? ನೀನೇನು ಹೇಳುತ್ತಿ ?' ಅವಳು ಕೂಡಲೇ ಹೇಳಿದಳು : 'ಅದು ಹೇಗೆ ಸಾಧ್ಯ ? ಹಣ ತೆಗೆದುಕೊಳ್ಳುವಂತೆಯೆ ಇಲ್ಲ, ನಾನು ತೆಗೆದುಕೊಂಡರೆ ನೀವು ತೆಗೆದುಕೊಂಡಂತೆಯೆ ಆಗುತ್ತದೆ. ಏಕೆಂದರೆ ನಾನು ಅದನ್ನು ಇಟ್ಟುಕೊಂಡರೆ ನಿಮ್ಮ ಸೇವೆಗಾಗಿ ಮತ್ತು ಇತರ ಆವಶ್ಯಕ ವಸ್ತುಗಳಿಗಾಗಿ ಅದನ್ನು ಖರ್ಚು ಮಾಡದೆ ಇರಲಾಗುವುದಿಲ್ಲ. ಆದ್ದರಿಂದ ನೀವೇ ಅದನ್ನು ಸ್ವೀಕರಿಸಿ ದಂತಾಗುತ್ತದೆ. ಜನರು ನಿಮ್ಮ ಮೇಲೆ ಶ್ರದ್ಧಾಭಕ್ತಿ ತೋರಿಸುತ್ತಿರುವುದು ನಿಮ್ಮ ತ್ಯಾಗ ವನ್ನು ನೋಡಿ. ಆದ್ದರಿಂದ ಹಣ ಸ್ವೀಕರಿಸುವಂತೆಯೆ ಇಲ್ಲ.' ಅವಳ ಈ ಮಾತನ್ನು ಕೇಳಿ ಸಮಾಧಾನದ ನಿಟ್ಟುಸಿರನ್ನು ಬಿಟ್ಟೆ !"

21. ಶ್ರೀರಾಮಕೃಷ್ಣರ ಊಟವಾದ ನಂತರ ಸ್ತ್ರೀಭಕ್ತರು ನಹಬತ್ತಿಗೆ ಹೋದರು. ಅಲ್ಲಿ ಶ್ರೀರಾಮಕೃಷ್ಣರು ಶ್ರೀಮಾತೆಯವರ ಬಗ್ಗೆ ಹೇಳಿದ ಮಾತನ್ನು ಅವ ರಿಗೆ ತಿಳಿಸಿದಾಗ ಅವರು ಹೇಳಿದರು : "ಬೆಳಗ್ಗೆ ಅವರು ನನಗೆ ಬರಲು ಒಪ್ಪಿಗೆ ಇತ್ತರೀತಿ ಯಲ್ಲಿಯೆ ನನಗರ್ಥವಾಯಿತು, ಅವರು ಮನಸ್ಸನ್ನು ಬಿಚ್ಚಿ ಅನುಮತಿ ನೀಡುತ್ತಿಲ್ಲ ಎಂದು. ಹಾಗಿಲ್ಲದಿದ್ದರೆ ಅವರು ಹೇಳುತ್ತಿದ್ದರು— 'ಹೌದು ಬರದೆ ಮತ್ತಿನ್ನೇನು ?' ಎಂದು. ಹಾಗೆ ಹೇಳದೆ ಅವರು ಆ ವಿಷಯವನ್ನು ನನ್ನ ಮೇಲೆ ಹೊರಿಸಿ 'ಅವಳಿಗೆ ಇಚ್ಛೆಯಾದರೆ ಬರಲಿ' ಎಂದು ಯಾವಾಗ ಹೇಳಿದರೊ ಆಗಲೆ ನಾನು ನಿರ್ಧರಿಸಿದೆ ಈ

ಸಂಕಲ್ಪವನ್ನು ಬಿಟ್ಟುಬಿಡುವುದು ಎಂದು." ದೇಹದ ಉರಿಯಿಂದಾಗಿ ಶ್ರೀರಾಮಕೃಷ್ಣರಿಗೆ ಅಂದು ರಾತ್ರಿ ನಿದ್ರೆಯೇ ಬರಲಿಲ್ಲ. ಉತ್ಸವದಲ್ಲಿ ವಿವಿಧ ಚಾರಿತ್ರ್ಯದ ವ್ಯಕ್ತಿಗಳು ಅವರ ದಿವ್ಯ ಶರೀರವನ್ನು ಸ್ಪರ್ಶಿಸಿದುದರಿಂದಲೆ ಅವರಿಗೆ ಹಾಗಾಗಿರಬೇಕು. ಅಪವಿತ್ರ ವ್ಯಕ್ತಿಗಳು ಕಾಯಿಲೆ ಗುಣವಾಗಲೆಂದೊ ಅಥವಾ ಇನ್ನಾವುದಾದರು ಸಕಾಮ ಭಾವದಿಂದಲೊ ಅವರ ಅಂಗವನ್ನು ಸ್ಪರ್ಶಿಸಿ ಪಾದಧೂಳಿಯನ್ನು ಸ್ವೀಕರಿಸಿದಾಗ ಅವರಿಗೆ ಈ ರೀತಿ ದೇಹದಲ್ಲಿ ಅನೇಕ ಬಾರಿ ಯಾತನೆಯಾದುದನ್ನು ನಾವು ಕಂಡಿರುವೆವು.

22. ಪಾಣಿಹಾಟಿಯ ಉತ್ಸವದ ಮರುದಿನವೆ ಸ್ನಾನಯಾತ್ರೆಯ ದಿನ. ಆ ದಿನ ನಮಗೆ ದಕ್ಷಿಣೇಶ್ವರದಲ್ಲಿ ಇರಲಾಗಲಿಲ್ಲ, ಅಂದು ಅನೇಕ ನರನಾರಿಯರು ಶ್ರೀರಾಮಕೃಷ್ಣರನ್ನು ನೋಡಲು ಬಂದಿದ್ದರೆಂದು ಸ್ತ್ರೀಭಕ್ತರಿಂದ ಕೇಳಿರುವೆವು. ಅವರಲ್ಲಿ ಅ–ಳ ತಾಯಿ ಎಂಬುವಳೊಬ್ಬಳು ತನ್ನ ಆಸ್ತಿಯ ವ್ಯವಸ್ಥೆಗೊಳಿಸಬೇಕೆಂದು ಅವರನ್ನು ತುಂಬಾ ಪೀಡಿಸಿ ಪೀಡಿಸಿ ಅಂದಿನ ಅವರ ಆನಂದವನ್ನೆಲ್ಲ ಹಾಳು ಮಾಡಿದಳಂತೆ. ಮಧ್ಯಾಹ್ನ ಊಟದ ಸಮಯದಲ್ಲಿ ಅವಳು ಹತ್ತಿರದಲ್ಲಿ ಕುಳಿತಿರುವುದನ್ನು ನೋಡಿ ಅವರಿಗೆ ತುಂಬಾ ಬೇಸರ ವಾಯಿತು. ಅವರು ಏನೂ ಮಾತಾಡಲಿಲ್ಲ ಮತ್ತು ಬೇರೆ ದಿವಸಗಳಂತೆ ಸರಿಯಾಗಿ ಊಟ ಮಾಡಲೂ ಆಗಲಿಲ್ಲ. ಭೋಜನಾನಂತರ ನಮ್ಮ ಪರಿಚಿತ ಭಕ್ತಳೊಬ್ಬಳು ಅವರಿಗೆ ಕೈ ತೊಳೆಯಲು ನೀರು ಕೊಡಲು ಹೋದಾಗ ಅವರು ಆಕೆಗೆ ಹೇಳಿದರು : "ಭಕ್ತಿ ಪ್ರೇಮ ವೃದ್ಧಿಯಾಗಲೆಂದು ಜನ ಇಲ್ಲಿಗೆ ಬರುತ್ತಾರೆ. ಅವಳು ಆಸ್ತಿಯ ವ್ಯವಸ್ಥೆಗಾಗಿ ಇಲ್ಲಿಗೆ ಬಂದಿದ್ದಾಳೆ ನೋಡು. ಸ್ವಾರ್ಥ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ಮಾವಿನಹಣ್ಣು, ಸಿಹಿತಿಂಡಿಗಳನ್ನು ತಂದಿದ್ದಾಳೆ. ನನಗೆ ಅದರಲ್ಲಿ ಒಂದು ಚೂರನ್ನೂ ಬಾಯಿಗೆ ಹಾಕಿಕೊಳ್ಳಲಾಗಲಿಲ್ಲ. ಇಂದು ಸ್ನಾನಯಾತ್ರೆಯ ದಿನ. ಬೇರೆ ವರ್ಷಗಳಲ್ಲಿ ಈ ದಿನದಂದು ಎಷ್ಟೊಂದು ಭಾವ ಸಮಾಧಿಯನ್ನು ಅನುಭವಿಸುತ್ತಿದ್ದೆ ! ಆ ಸಮಾಧಿಯಿಂದ ಉಂಟಾದ ಭಾವೋನ್ಮತ್ತತೆಯು ಎರಡು ಮೂರು ದಿನ ಉಳಿಯುತ್ತಿತ್ತು. ಇಂದು ಏನೂ ಆಗಲೇ ಇಲ್ಲ. ಈ ವಾತಾವರಣದಿಂದಾಗಿ ಬೇರೆ ಬೇರೆ ಬಗೆಯ ಜನರ ಸಂಪರ್ಕದಿಂದಾಗಿ ಉನ್ನತ ಭಾವ ಉಂಟಾಗಲೇ ಇಲ್ಲ." ಅ–ಳ ತಾಯಿ ಅಂದು ದಕ್ಷಿಣೇಶ್ವರದಲ್ಲೇ ತಂಗಿದಳು. ಹಾಗಾಗಿ ರಾತ್ರಿ ಕೂಡ ಶ್ರೀರಾಮಕೃಷ್ಣರಿಗೆ ಮನಶ್ಶಾಂತಿ ಇಲ್ಲ. ರಾತ್ರಿ ಊಟದ ಸಮಯದಲ್ಲಿ ಅವರು ಸ್ತ್ರೀಭಕ್ತಳೊಬ್ಬಳಿಗೆ ಹೇಳಿದರು : "ಇಲ್ಲಿ ಮಹಿಳೆಯರ ಗುಂಪು ಸೇರುವುದು ಸರಿಯಲ್ಲ. ಮಥುರನ ಮಗ ತ್ರೈಲೋಕ್ಯನು ಇಲ್ಲಿದ್ದಾನೆ. ಅವನು ಏನು ಭಾವಿಸುತ್ತಾನೊ ? ಒಂದಿಬ್ಬರು ಮಹಿಳೆಯರು ಆಗಾಗ ಬಂದು ಒಂದೆರಡು ದಿನ ಇರುವುದಾದರೆ ಪರವಾಗಿಲ್ಲ. ಆದರೆ ದೊಡ್ಡ ಗುಂಪು ಸೇರಿ ಇಲ್ಲಿರುವುದು ಒಳ್ಳೆಯದಲ್ಲ. ಸ್ತ್ರೀಯರ ಇಷ್ಟೊಂದು ನೂಕುನುಗ್ಗಲನ್ನು ನಾನು ಸಹಿಸಲಾರೆ." ಶ್ರೀರಾಮಕೃಷ್ಣರ ಅಸಮಾಧಾನಕ್ಕೆ ತಾವೆ ಕಾರಣರೆಂದು ಭಾವಿಸಿ ಸ್ತ್ರೀಭಕ್ತರಿಗೆ ಮನಸ್ಸಿಗೆ ತುಂಬಾ ಬೇಸರವಾಯಿತು ಮತ್ತು ಬೆಳಗಾದ ಕೂಡಲೆ ಕಲ್ಕತ್ತೆಗೆ ಹೊರಟುಹೋದರು. ಸ್ನಾನಯಾತ್ರೆಯ ದಿನ ದೇವಸ್ಥಾನದಲ್ಲಿ ತುಂಬಾ ವಿಜೃಂಭಣೆಯಿಂದ ಪೂಜೆ, ಯಾತ್ರೆ, ಇತ್ಯಾದಿಗಳು ನಡೆ

ದವು. ಆದರೆ ಮೇಲಿನ ಕಾರಣದಿಂದಾಗಿ ಭಕ್ತರಾರೂ ಆನಂದ ಪಡಲಿಲ್ಲ. ಶ್ರೀರಾಮ ಕೃಷ್ಣರು ಯಾವಾಗಲೂ ಉನ್ನತ ಪ್ರಜ್ಞಾಸ್ತರದಲ್ಲಿರುತ್ತಿದ್ದರೂ ದಿನದ ಪ್ರತಿಯೊಂದು ಆಗುಹೋಗುಗಳನ್ನು ಎಷ್ಟು ಸೂಕ್ಷ್ಮವಾಗಿ ಗಮನಿಸುತ್ತಿದ್ದರು ಮತ್ತು ಹೇಗೆ ಭಕ್ತರ ಒಳಿತಿಗಾಗಿ ಅವರನ್ನು ಹತೋಟಿಯಲ್ಲಿರಿಸಿ ಅವರಿಗೆ ಮಾರ್ಗದರ್ಶನ ನೀಡುತ್ತಿದ್ದರು ಎಂಬುದನ್ನು ಓದುಗರು ಸ್ವಲ್ಪ ಮಟ್ಟಿಗೆ ಅರ್ಥ ಮಾಡಿಕೊಳ್ಳಬಹುದು.

## ಹನ್ನೊಂದನೆಯ ಅಧ್ಯಾಯ

# ಶ್ರೀರಾಮಕೃಷ್ಣರು ಕಲ್ಕತ್ತೆಗೆ ಬಂದುದು

1. ಪಾಣಿಹಾಟಿಗೆ ಹೋಗಿದ್ದರಿಂದ ಗಂಟಲು ನೋವು ಜಾಸ್ತಿಯಾಯಿತು 2. ಶ್ರೀರಾಮಕೃಷ್ಣರ ಬಾಲಕ ಸ್ವಭಾವ 3. ಉಪದೇಶದ ಶ್ರಮ ಮತ್ತು ನಿದ್ರಾ ಹಾನಿ ರೋಗಕ್ಕೆ ಕಾರಣ 4. ಭಾವಸಮಾಧಿಯಲ್ಲಿ ಅವರು ಜಗನ್ಮಾತೆಯೊಡನೆ ಜಗಳ ವಾಡುತ್ತಿದ್ದುದು ಅವರಿಗೆ ದಣಿವಾಗುತ್ತಿದ್ದುದನ್ನು ಸೂಚಿಸುತ್ತದೆ 5. ಆಧ್ಯಾತ್ಮಿಕ ಪಿಪಾಸುಗಳೆಷ್ಟು ಮಂದಿ ದಕ್ಷಿಣೇಶ್ವರಕ್ಕೆ ಬಂದರು ಎಂಬುದನ್ನು ನಿರ್ಣಯಿಸಲಾಗುವುದಿಲ್ಲ 6. ತಮ್ಮ ದೇಹತ್ಯಾಗದ ಬಗ್ಗೆ ಶ್ರೀರಾಮಕೃಷ್ಣರ ಹೇಳಿಕೆ 7. ಶಿವಜ್ಞಾನದಲ್ಲಿ ಅವರು ಮಾಡಿದ ಜೀವಸೇವೆ 8. ಜನರ ಆಂತರಿಕ ಭಾವನೆ ಮತ್ತು ಸಂಸ್ಕಾರಗಳನ್ನು ಕಂಡುಹಿಡಿಯುವ ಸಾಮರ್ಥ್ಯ 9. ಅದಕ್ಕೊಂದು ದೃಷ್ಟಾಂತ 10. ರೋಗದ ಉಲ್ಬಣ, ಶ್ರೀರಾಮಕೃಷ್ಣರನ್ನು ಕಲಕತ್ತೆಗೆ ಕರೆದುಕೊಂಡು ಬಂದುದು 11. ಪ್ರಸಿದ್ಧ ವೈದ್ಯರನ್ನು ಕರೆಸಲಾಯಿತು. ಶ್ಯಾಮಪುಕುರದಲ್ಲಿ ಬಾಡಿಗೆ ಮನೆ 12. ಬಲರಾಮನ ಮನೆಯಲ್ಲಿ ಅಸಂಖ್ಯ ಭಕ್ತರಿಗೆ ಉಪದೇಶ 13. ಅಲ್ಲಿ ನಡೆದ ಒಂದು ವಿಶಿಷ್ಟ ಘಟನೆ

1. ಪಾಣಿಹಾಟಿ ಉತ್ಸವದಲ್ಲಿ ಭಾಗವಹಿಸಿದ ಮೇಲೆ ಶ್ರೀರಾಮಕೃಷ್ಣರ ಗಂಟಲು ಬೇನೆ ವೃದ್ಧಿಯಾಯಿತು. ಆ ದಿನ ಸ್ವಲ್ಪ ಮಳೆಯೂ ಆಗಿತ್ತು. ಮಳೆಯಲ್ಲಿ ನೆಂದು ಒದ್ದೆ ನೆಲದ ಮೇಲೆ ಬಹಳ ಹೊತ್ತು ಭಾವಾವೇಶದಲ್ಲಿ ಕಳೆದದ್ದರಿಂದ ರೋಗವು ಉಲ್ಬಣವಾಯಿತೆಂದು ವೈದ್ಯರು ಭಕ್ತರನ್ನು ದೂಷಿಸಿದರು ಮತ್ತು ಮುಂದೆ ಹೀಗೆ ಆಗಲು ಬಿಟ್ಟರೆ ಇದು ಇನ್ನೂ ಉಲ್ಬಣಾವಸ್ಥೆಯನ್ನು ಪಡೆಯುವುದೆಂದು ಬೆದರಿಕೆ ಹಾಕಿದರು. ಭಕ್ತರು ಈ ವಿಷಯದಲ್ಲಿ ಇನ್ನು ಮುಂದೆ ಎಚ್ಚರಿಕೆಯಿಂದಿರಬೇಕೆಂದು ಸಂಕಲ್ಪ ಮಾಡಿದರು. ಬಾಲಕ ಸ್ವಭಾವದ ಶ್ರೀರಾಮಕೃಷ್ಣರು ಆ ದಿವಸದ ಅನಿಷ್ಟದ ದೋಷವನ್ನೆಲ್ಲ ರಾಮಚಂದ್ರ, ಮುಂತಾದ ಹಿರಿಯ ಭಕ್ತರ ಮೇಲೆ ಆರೋಪಿಸಿ ಹೇಳಿದರು: "ಅವರು ಸ್ವಲ್ಪ ಒತ್ತಾಯ ಪೂರ್ವಕವಾಗಿ ನನ್ನನ್ನು ನಿಷೇಧಿಸಿದ್ದರೆ ನಾನು ಪಾಣಿಹಾಟಿ ಉತ್ಸವಕ್ಕೆ ಹೋಗುತ್ತಿದ್ದೆನೇನು?" ರಾಮಚಂದ್ರನು ವೈದ್ಯಕೀಯ ವೃತ್ತಿ ಮಾಡುತ್ತಿರದಿದ್ದರೂ ಕ್ಯಾಂಪ್‌ಬೆಲ್ ಮೆಡಿಕಲ್ ಕಾಲೇಜಿನಲ್ಲಿ ಡಿಪ್ಲೊಮಾ ಪಾಸ್ ಮಾಡಿದ್ದನು. ಅವನು ವೈಷ್ಣವನಾಗಿದ್ದುದರಿಂದ ಪಾಣಿಹಾಟಿ ಉತ್ಸವಕ್ಕೆ ಹೋಗಲು ಅವನೇ ಶ್ರೀರಾಮಕೃಷ್ಣರಿಗೆ ಹೆಚ್ಚು ಪ್ರೋತ್ಸಾಹ ನೀಡಿದ್ದನು. ಆದ್ದರಿಂದ ಈಗ ಆ ವಿಷಯದಲ್ಲಿ ಹೆಚ್ಚಿನ ದೋಷ ಅವನ ಪಾಲಿನದೆ.

2. ನಮ್ಮ ಒಬ್ಬ ಸ್ನೇಹಿತನು ಒಂದು ದಿನ ಈ ಸಮಯದಲ್ಲಿ ದಕ್ಷಿಣೇಶ್ವರಕ್ಕೆ ಹೋಗಿದ್ದನು. ಶ್ರೀರಾಮಕೃಷ್ಣರು ಗಂಟಲಿಗೆ ಲೇಪನವನ್ನು ಹಾಕಿಕೊಂಡು ಕೊಠಡಿಯ ಮಧ್ಯೆ ಚಿಕ್ಕ ಮಂಚದ ಮೇಲೆ ಸುಮ್ಮನೆ ಕುಳಿತುಕೊಂಡಿದ್ದುದನ್ನು ಅವನು ನೋಡಿ

ದನು. ಅವನು ಹೇಳುತ್ತಾನೆ : "ಬಾಲಕನಿಗೆ ಶಿಕ್ಷೆ ವಿಧಿಸಲು ಅವನು ಏನೂ ಕೆಲಸ ಮಾಡಬಾರದು ಎಂದು ಹೇಳಿ ಒಂದು ಕಡೆ ಕೂರಿಸಿದರೆ ಅವನು ಹೇಗೆ ವಿಷಣ್ಣನಾಗು ವನೊ ಹಾಗೆಯೆ ಶ್ರೀರಾಮಕೃಷ್ಣರ ಮುಖದ ಮೇಲೆ ಅದೇ ಭಾವವನ್ನು ಕಂಡೆ. ನಾನು ಪ್ರಣಾಮ ಮಾಡಿ ಏನು ವಿಷಯ ಎಂದು ಕೇಳಿದೆ. ಅವರು ತಮ್ಮ ಗಂಟಲನ್ನು ತೋರಿಸಿ ಮೃದುಸ್ವರದಲ್ಲಿ ಹೇಳಿದರು : 'ಇಲ್ಲಿ ನೋಡು, ತುಂಬಾ ನೋವಾಗುತ್ತಿದೆ. ಡಾಕ್ಟರು ಹೆಚ್ಚು ಮಾತನಾಡಬಾರದೆಂದು ಹೇಳಿಬಿಟ್ಟಿದ್ದಾರೆ.' ನಾನು ಹೇಳಿದೆ : 'ಹೌದು ಮಹಾ ಶಯರೆ, ನೀವು ಅಂದು ಪಾಣಿಹಾಟಿಗೆ ಹೋಗಿದ್ದಿರೆಂದು ಕೇಳಿದೆ. ಅದಕ್ಕಾಗಿಯೆ ನೋವು ವೃದ್ಧಿಯಾಗಿರಬೇಕು.' ಅವರು ಆಗ ಬಾಲಕನಂತೆ ಅಭಿಮಾನದಿಂದ ನುಡಿದರು : 'ಹೌದು, ನೋಡು ಮತ್ತೆ ಮೇಲೆ ನೀರು ಕೆಳಗೆ ನೀರು, ಆಕಾಶದಲ್ಲಿ ಮಳೆ ದಾರಿಯಲ್ಲಿ ಕೆಸರು. ಈ ರಾಮನು ಅಲ್ಲಿಗೆ ನನ್ನನ್ನು ಕರೆದುಕೊಂಡು ಹೋಗಿ ಇಡೀ ದಿನ ನೃತ್ಯ ಮಾಡಿಸಿದನು. ಅವನು ಡಾಕ್ಟರ್ ಪಾಸ್ ಮಾಡಿದ್ದಾನೆ. ಹೋಗುವುದು ಬೇಡವೆಂದು ಒತ್ತಾಯ ಮಾಡಿದ್ದರೆ ನಾನು ಹೋಗುತ್ತಿದ್ದೆನೇನು ?' ನಾನು ಹೇಳಿದೆ : 'ಹೌದು ಮಹಾಶಯರೆ, ರಾಮ ಬಹಳ ಅನ್ಯಾಯ ಮಾಡಿದ. ಏನಾಗಬೇಕೊ ಆಗಿಹೋಯಿತು, ಈಗ ಕೆಲವು ದಿನ ಎಚ್ಚರಿಕೆಯಿಂದಿರಿ. ಹಾಗಾದರೆ ಎಲ್ಲ ಸರಿಹೋಗುತ್ತದೆ.' ಅವರು ಈ ಮಾತು ಕೇಳಿ ಸಂತೋಷಪಟ್ಟು ಹೇಳಿದರು : 'ಹಾಗಾದರೆ ಸಂಪೂರ್ಣ ಮಾತನಾಡದೆ ಇರಲು ಸಾಧ್ಯವೇ ? ಈಗ ನೋಡು, ನೀನು ತುಂಬ ದೂರದಿಂದ ಬಂದಿದ್ದೀಯೆ, ನಾನು ನಿನ್ನೊಡನೆ ಸ್ವಲ್ಪವೂ ಮಾತನಾಡದಿದ್ದರೆ ಹೇಗಿರುತ್ತದೆ ಹೇಳು.' ನಾನೆಂದೆ : 'ನಿಮ್ಮನ್ನು ನೋಡಿದರೇನೆ ಆನಂದವಾಗುತ್ತದೆ. ಮಾತನಾಡದಿದ್ದರೂ ಪರವಾಗಿಲ್ಲ, ನಮಗೇನೂ ಬೇಸರವಾಗುವುದಿಲ್ಲ. ನಿಮಗೆ ವಾಸಿಯಾದ ಮೇಲೆ ಎಷ್ಟೋ ಮಾತು ಕೇಳಬಹುದು.' ಆದರೆ ಅವರು ಕೇಳಬೇಕಲ್ಲ, ಡಾಕ್ಟರ್ ನಿಷೇಧಿಸಿದ್ದರೂ ತಮ್ಮ ಕಷ್ಟವನ್ನೆಲ್ಲ ಮರೆತು ನನ್ನೊಡನೆ ಹಿಂದಿನಂತೆಯೆ ಮಾತನಾಡಲು ಪ್ರಾರಂಭಿಸಿದರು."

3. ಕ್ರಮೇಣ ಆಷಾಢ ಮಾಸವು ಕಳೆಯಿತು. ಒಂದು ತಿಂಗಳ ಮೇಲೆ ಚಿಕಿತ್ಸೆ ನಡೆದರೂ ಶ್ರೀರಾಮಕೃಷ್ಣರ ಗಂಟಲಿನ ವೇದನೆ ಕಡಿಮೆಯಾಗಲಿಲ್ಲ. ಬೇರೆ ಸಮಯ ಗಳಲ್ಲಿ ನೋವು ಸ್ವಲ್ಪ ಕಡಿಮೆ ಇದ್ದರೂ ಏಕಾದಶಿ ಪೂರ್ಣಿಮೆ ಮತ್ತು ಅಮಾವಾಸ್ಯೆ ಮುಂತಾದ ವಿಶೇಷ ದಿನಗಳಲ್ಲಿ ನೋವು ತುಂಬ ವೃದ್ಧಿಯಾಗುತ್ತಿತ್ತು. ಆಗ ಯಾವುದೆ ಗಟ್ಟಿಯಾದ ಆಹಾರವಸ್ತು ಮತ್ತು ತರಕಾರಿಗಳನ್ನು ನುಂಗುವುದು ಅಸಾಧ್ಯವಾಗಿತ್ತು. ಕೇವಲ ಹಾಲನ್ನು ಮತ್ತು ರವೆ ಪಾಯಸ ಮಾತ್ರ ಶ್ರೀರಾಮಕೃಷ್ಣರು ಆ ದಿನಗಳಲ್ಲಿ ಸ್ವೀಕರಿಸುತ್ತಿದ್ದರು. ವೈದ್ಯರು ಪರೀಕ್ಷೆಮಾಡಿ ಅದು "Cleargy man's Sore throat' ಎಂದು ನಿರ್ಧರಿಸಿದರು. ಎಂದರೆ ಜನರಿಗೆ ಹಗಲು ರಾತ್ರಿ ಧರ್ಮೋಪದೇಶ ಮಾಡಿ ಮಾಡಿ ಧ್ವನಿಪೆಟ್ಟಿಗೆಯನ್ನು ಬಹಳವಾಗಿ ಉಪಯೋಗಿಸಿದ್ದರಿಂದ ಗಂಟಲಿನಲ್ಲಿ ಘಾಯವಾಗಿದೆ, ಧರ್ಮ ಪ್ರಚಾರಕರಿಗೆ ಸಾಮಾನ್ಯವಾಗಿ ಹೀಗಾಗುವುದನ್ನು ವೈದ್ಯಕೀಯ ಶಾಸ್ತ್ರದಲ್ಲಿ ಹೇಳಿದೆ. ರೋಗವನ್ನು ಕಂಡುಹಿಡಿದಮೇಲೆ ವೈದ್ಯರು ಔಷಧಿ ಪಥ್ಯಾದಿ

ಗಳನ್ನು ಸೂಚಿಸಿದರು. ಶ್ರೀರಾಮಕೃಷ್ಣರು ಅದೆಲ್ಲವನ್ನು ಅನುಸರಿಸುತ್ತಿದ್ದರು. ಆದರೆ ಎರಡು ನಿಯಮಗಳನ್ನು ಮಾತ್ರ ಅವರು ಉಲ್ಲಂಘಿಸುತ್ತಿದ್ದರು. ಅಪಾರ ಭಗವದ್ಭಕ್ತಿಯಿಂದ. ಸಂಸಾರದಲ್ಲಿ ತಪ್ತರಾದವರ ಮೇಲಿನ ಕರುಣೆಯಿಂದ ತಮ್ಮನ್ನು ತಾವು ನಿಗ್ರಹಿಸಿಕೊಳ್ಳಲಾಗದೆ ಸಮಾಧಿಮಗ್ನರಾಗುವುದು ಮತ್ತು ಮಾತನಾಡುವುದು ಇವೆರಡನ್ನು ನಿಲ್ಲಿಸಲಾಗಲಿಲ್ಲ. ಭಗವಂತನ ವಿಷಯ ಬಂದ ಕೂಡಲೆ ಅವರು ದೇಹ ಬುದ್ಧಿಯನ್ನು ಕಳೆದುಕೊಂಡು ಮೊದಲಿನಂತೆಯೆ ಸಮಾಧಿಸ್ಥರಾಗಿಬಿಡುತ್ತಿದ್ದರು ಅಜ್ಞಾನಾಂಧಕಾರದಲ್ಲಿ ಮಗ್ನರಾಗಿ ಶೋಕತಾಪದಿಂದ ದಗ್ಧರಾಗಿ ಶಾಂತಿ ಸಮಾಧಾನಗಳನ್ನರಸಿ ಯಾರಾದರೂ ಬಂದರೆ ಕರುಣೆಯ ವಶರಾಗಿ ಅವರಿಗೆ ಉಪದೇಶಗಳನ್ನು ನೀಡುತ್ತಿದ್ದರು.

ಈಗ ಶ್ರೀರಾಮಕೃಷ್ಣರ ಎಡೆಗೆ ಬರುತ್ತಿದ್ದ ಧರ್ಮ ಪಿಪಾಸುಗಳ ಸಂಖ್ಯೆ ವೃದ್ಧಿಯಾಯಿತು. ಹಿಂದಿನ ಭಕ್ತರುಗಳಲ್ಲದೆ ಪ್ರತಿದಿನ ನಾಲ್ಕು ಐದು ಜನ ಹೊಸಬರು ಅವರೆಡೆಗೆ ಆಧ್ಯಾತ್ಮಿಕತೆಗಾಗಿ ಬರುತ್ತಿದ್ದರು. ೧೮೭೫ರಲ್ಲಿ ಕೇಶವನು ದಕ್ಷಿಣೇಶ್ವರಕ್ಕೆ ಬಂದಾಗಿನಿಂದ ಭಕ್ತರ ಸಂಖ್ಯೆ ಹೀಗೆ ವೃದ್ಧಿಯಾಗುತ್ತಲೇ ಇದೆ. ಆದ್ದರಿಂದ ಕಳೆದ ಹನ್ನೊಂದು ವರ್ಷಗಳಿಂದ ಭಕ್ತರಿಗೆ ಉಪದೇಶ ಮಾಡುವ ಉತ್ಸಾಹದಲ್ಲಿ ಶ್ರೀರಾಮಕೃಷ್ಣರು ದೈನಂದಿನ ಸ್ನಾನ ಊಟ ವಿಶ್ರಾಂತಿಗಳನ್ನು ನಿಯಮಿತ ಸಮಯಗಳಲ್ಲಿ ಮಾಡಲಾಗುತ್ತಿರಲಿಲ್ಲ. ಮಹಾಭಾವದ ಪ್ರಭಾವದಿಂದಾಗಿ ಅವರ ನಿದ್ರೆಯು ಅತ್ಯಲ್ಪ. ನಾವು ದಕ್ಷಿಣೇಶ್ವರದಲ್ಲಿ ತಂಗಿದ್ದಾಗಲೆಲ್ಲ ನೋಡುತ್ತಿದ್ದೆವು : ಅವರು ಮಲಗಿದ ಸ್ವಲ್ಪಹೊತ್ತಿನಲ್ಲಿಯೆ ಎದ್ದು ಭಾವದಲ್ಲಿ ಅತ್ತಿತ್ತ ಓಡಾಡುತ್ತಿದ್ದರು, ಕೆಲವೊಮ್ಮೆ ಪಶ್ಚಿಮದ ಬಾಗಿಲನ್ನು ಮತ್ತೆ ಕೆಲವೊಮ್ಮೆ ಉತ್ತರದ ಬಾಗಿಲನ್ನು ತೆರೆದು ಹೊರಗೆ ಹೋಗುತ್ತಿದ್ದರು, ಇನ್ನು ಕೆಲವೊಮ್ಮೆ ಹಾಸಿಗೆಯ ಮೇಲೆ ಮಲಗಿಕೊಂಡಿದ್ದರೂ ಸಂಪೂರ್ಣ ಎಚ್ಚರವಾಗಿರುತ್ತಿದ್ದರು. ರಾತ್ರಿ ಮೂರು ಅಥವಾ ನಾಲ್ಕು ಬಾರಿ ಹಾಸಿಗೆಯಿಂದ ಎದ್ದರೂ ಬೆಳಿಗ್ಗೆ ನಾಲ್ಕು ಗಂಟೆಯ ಹೊತ್ತಿಗೆ ಪ್ರತಿದಿನ ಏಳುತ್ತಿದರು. ಅನಂತರ ಬೆಳಕು ಹರಿಯುವವರೆಗೂ ಭಗವಂತನ ಗುಣಗಾನ ಮಾಡಿ ಅನಂತರ ನಮ್ಮನ್ನು ಎಚ್ಚರಿಸುತ್ತಿದ್ದರು. ಹೀಗೆ ನಿದ್ದೆಯ ಅಭಾವದಿಂದ, ತಮ್ಮೆಡೆಗೆ ಬರುತ್ತಿದ್ದ ಅನೇಕರಿಗೆ ಉಪದೇಶ ನೀಡುವುದರಿಂದ ಉಂಟಾದ ತೀವ್ರ ಪರಿಶ್ರಮದಿಂದ ಅವರ ದೇಹ ಜರ್ಝರಿತವಾಯಿತು.

4. ಶ್ರೀರಾಮಕೃಷ್ಣರು ತಮ್ಮ ಈ ದೇಹದ ಬಳಲಿಕೆಯನ್ನು ನಮಗಾರಿಗೂ ತಿಳಿಸುತ್ತಿರಲಿಲ್ಲ. ಅವರು ಜಗನ್ಮಾತೆಯೊಡನೆ ಕೆಲವೊಮ್ಮೆ ಪ್ರೀತಿಯಿಂದ ಜಗಳವಾಡುವುದನ್ನು ನೋಡಿದಾಗ ನಮಗೆ ಅದರ ಸುಳಿವು ಸಿಕ್ಕುತ್ತಿತ್ತು. ಆದರೆ ಅದನ್ನು ಸಂಪೂರ್ಣ ಅರ್ಥಮಾಡಿಕೊಳ್ಳಲಾಗಲಿಲ್ಲ. ಅವರು ಕಾಯಿಲೆ ಬಿದ್ದು ಸ್ವಲ್ಪ ದಿನಗಳನಂತರ ನಮ್ಮಲ್ಲಿ ಒಬ್ಬನು ದಕ್ಷಿಣೇಶ್ವರಕ್ಕೆ ಹೋಗಿದ್ದನು. ಆಗ ಶ್ರೀರಾಮಕೃಷ್ಣರು ಚಿಕ್ಕ ಮಂಚದ ಮೇಲೆ ಕುಳಿತು ದಿವ್ಯ ಭಾವದಲ್ಲಿ ಯಾರೊಡನೆಯೊ ಈ ರೀತಿ ಮಾತನಾಡುತ್ತಿರುವುದನ್ನು ಕೇಳಿದನು : "ನೋಡು ನೀನು ಎಲ್ಲ ಕಳಪೆ ಜನರನ್ನೆ ಇಲ್ಲಿಗೆ ಕರೆದುಕೊಂಡು ಬರುತ್ತಿದ್ದೀಯೆ.

ಒಂದು ಸೇರು ಹಾಲಿನಲ್ಲಿ ಐದು ಸೇರು ನೀರಿರುತ್ತದೆ. ಗಾಳಿ ಊದಿ ಊದಿ ಊದಿ ಮತ್ತು ಒದ್ದೆ ಸೌದೆಯನ್ನು ಬೆಂಕಿಗೆ ಹಾಕುತ್ತ ನನ್ನ ಕಣ್ಣೆಲ್ಲಾ ಊದಿಕೊಂಡಿದೆ ಮತ್ತು ಕೆಂಪಾಗಿ ಬಿಟ್ಟಿದೆ. ನನ್ನ ಎಲುಬೆಲ್ಲ ಪುಡಿಪುಡಿಯಾಗಿದೆ. ನಾನು ಇನ್ನು ಹೆಚ್ಚು ಮಾಡ ಲಾರೆ. ನಿನಗೆ ಬೇಕಾದರೆ ಮಾಡಿಕೊ. ಒಂದೆರಡು ಮಾತಿನಲ್ಲಿಯೆ ಆಧ್ಯಾತ್ಮಿಕ ಜಾಗ್ರತಿ ಯನ್ನು ಪಡೆಯಬಲ್ಲ ಉತ್ತಮ ವ್ಯಕ್ತಿಗಳನ್ನು ಕರೆದುಕೊಂಡು ಬಾ." ಇನ್ನೊಂದು ಸಂದರ್ಭದಲ್ಲಿ ತಮ್ಮ ಮುಂದೆ ಇದ್ದ ಭಕ್ತರಿಗೆ ಹೀಗೆ ಹೇಳಿದರು : "ವಿಜಯ, ಗಿರೀಶ್, ಕೇದಾರ್, ರಾಮ ಮತ್ತು ಮಾಸ್ಟರ್ ಇವರುಗಳಿಗೆ ಸ್ವಲ್ಪ ಶಕ್ತಿಯನ್ನು ಕೊಡು ಎಂದು ಇಂದು ನಾನು ತಾಯಿಯನ್ನು ಕೇಳಿಕೊಂಡೆ. ಇದರಿಂದಾಗಿ ಹೊಸಬರು ಇಲ್ಲಿಗೆ ಬರುವು ದಕ್ಕೆ ಮುಂಚೆಯೆ ತಮ್ಮ ವಕ್ರತೆಯನ್ನು ಸ್ವಲ್ಪ ಕಮ್ಮಿ ಮಾಡಿಕೊಂಡಿದ್ದರೆ ನನ್ನ ಕೆಲಸ ಸ್ವಲ್ಪ ಕಡಮೆಯಾಗುವುದು." ಜನರಿಗೆ ಶಿಕ್ಷಣ ನೀಡುವುದರಲ್ಲಿ, ಸಹಾಯ ಮಾಡುವು ದರ ಬಗ್ಗೆ ಶ್ರೀರಾಮಕೃಷ್ಣರು ಒಮ್ಮೆ ಸ್ತ್ರೀಭಕ್ತಳೊಬ್ಬಳಿಗೆ ಹೀಗೆ ಹೇಳಿದರು : "ನೀನು ನೀರು ಹಾಕು, ನಾನು ಮಣ್ಣನ್ನು ಸಿದ್ಧಪಡಿಸುತ್ತೇನೆ". ಗಂಟಲು ನೋವು ಸ್ವಲ್ಪ ಶುರು ವಾಗುವುದಕ್ಕೆ ಮುಂಚೆ ಧರ್ಮೋಪದೇಶಕ್ಕಾಗಿ ತಮ್ಮೆಡೆಗೆ ಬಂದಿದ್ದ ದೊಡ್ಡ ಜನರ ಗುಂಪನ್ನು ನೋಡಿ ಶ್ರೀರಾಮಕೃಷ್ಣರು ಜಗನ್ಮಾತೆಗೆ ಹೀಗೆ ಹೇಳಿದರು : "ನೀನು ಇಷ್ಟೊಂದು ಜನರನ್ನು ಕರೆದುಕೊಂಡು ಬರುವುದೆ ? ದೊಡ್ಡ ಜನಸಂದಣಿಯೆ ಇದೆ ಯಲ್ಲ. ನನಗೆ ಸ್ನಾನ ಊಟಕ್ಕೂ ಸಮಯವಿಲ್ಲ. ಇದೊಂದು ತಮಟೆ. ಎಷ್ಟೋ ರಂಧ್ರ ಗಳಿವೆ. ಹಗಲೂ ರಾತ್ರೆ ಅದನ್ನು ಹೊಡೆಯುತ್ತಾ ಇದ್ದರೆ ಎಷ್ಟು ಕಾಲ ಉಳಿ ಯುತ್ತದೆ ?"

5. ೧೮೮೪ರ ಹೊತ್ತಿಗೆ ಶ್ರೀರಾಮಕೃಷ್ಣರ ಪ್ರಸಿದ್ಧಿ ಕಲ್ಕತ್ತೆಯಲ್ಲೆಲ್ಲ ಹರಡಿತ್ತು. ಅವರ ಅಲೌಕಿಕ ಭಾವ, ಪ್ರೇಮ, ಸಮಾಧಿ ಮತ್ತು ಅಮೃತವಾಣಿ ಇವುಗಳ ವಿಷಯ ಎಷ್ಟರ ಮಟ್ಟಿಗೆ ಪ್ರಚಾರವಾಗಿತ್ತೆಂದರೆ ಅವರ ಪುಣ್ಯದರ್ಶನಕ್ಕಾಗಿ ಪ್ರತಿನಿತ್ಯವೂ ಜನರು ಗುಂಪುಗುಂಪಾಗಿ ದಕ್ಷಿಣೇಶ್ವರಕ್ಕೆ ಬರುತ್ತಿದ್ದರು. ಒಮ್ಮೆ ಬಂದರೆ ಮಂತ್ರಮುಗ್ಧ ರಾಗಿ ಮತ್ತೆ ಮತ್ತೆ ಬರುತ್ತಿದ್ದರು. ಆದರೆ ೧೮೮೫ ಜುಲೈ ತಿಂಗಳಲ್ಲಿ ಶ್ರೀರಾಮಕೃಷ್ಣರಿಗೆ ಗಂಟಲು ಬೇನೆ ಆಗುವುದಕ್ಕೆ ಮುಂಚೆ ಅವರೆಡೆಗೆ ಎಷ್ಟೊಂದು ಜನ ಬರುತ್ತಿದ್ದರೆಂಬು ದನ್ನು ನಿರ್ಧರಿಸುವುದೂ ಕಷ್ಟ. ಏಕೆಂದರೆ ಒಂದೇ ದಿನ ಒಂದೇ ಸ್ಥಾನದಲ್ಲಿ ಎಲ್ಲರೂ ಒಟ್ಟಿಗೆ ಕಲೆಯುವ ಸುಯೋಗ 'ಯಾವಾಗಲೂ ಬರಲೇ ಇಲ್ಲ. ಈ ರೀತಿಯ ಸುಯೋಗ ಉಂಟಾಗದಿದ್ದುದೇ ಒಳ್ಳೆಯದಾಯಿತು. ನಮ್ಮ ಆರಾಧ್ಯವ್ಯಕ್ತಿ ಸಕಲರಿಗೂ ಪೂಜ್ಯರಾಗು ತ್ತಿದ್ದಾರೆ, ನಮ್ಮ ಪ್ರೀತಿಯ ವ್ಯಕ್ತಿ ಎಲ್ಲರ ಪ್ರೀತಿಗೂ ಪಾತ್ರರಾಗುತ್ತಿದ್ದಾರೆ ಎಂಬು ದನ್ನು ಭಾವಿಸಿ ಶ್ರೀರಾಮಕೃಷ್ಣರ ಅಂತರಂಗ ಭಕ್ತರಿಗೆ ತುಂಬ ಆನಂದವೆ ಆಗಬೇಕಿತ್ತು. ಆದ್ದರಿಂದ ಭಕ್ತರ ಸಂಖ್ಯೆ ವೃದ್ಧಿಯಾಗುವುದು ಅವರಿಗೆ ಅತ್ಯಂತ ಸಂತೋಷವನ್ನು ಉಂಟುಮಾಡಬೇಕಿತ್ತು. ಆದರೆ ಶ್ರೀರಾಮಕೃಷ್ಣರು ಒಮ್ಮೆ ಹೇಳಿದ್ದರು, "ಅನೇಕ ಜನರು ಯಾವಾಗ ನನಗೆ ದೇವತಾ ಜ್ಞಾನದಿಂದ ಶ್ರದ್ಧಾಭಕ್ತಿ ತೋರಿಸುತ್ತಾರೋ ಆಗ ಈ

ದೇಹವು ಮಾಯವಾಗುತ್ತದೆ" ಎಂದು. ಆದ್ದರಿಂದ ಭಕ್ತರ ಸಂಖ್ಯೆಯ ಪರಿಮಾಣ ಅವರಿಗೆ ತಿಳಿಯದೇ ಇದ್ದದು ಒಳ್ಳೆಯದೇ ಆಯಿತು.

6. ತಾವು ಈ ದೇಹವನ್ನು ವಿಸರ್ಜಿಸುವ ಸಮಯದ ಸಂಬಂಧವಾಗಿ ಶ್ರೀರಾಮಕೃಷ್ಣರು ನಮಗೆ ಅನೇಕ ವೇಳೆ ಸೂಚನೆ ಇತ್ತಿದ್ದರು. ಆದರೆ ಅವರ ಪ್ರೇಮದಲ್ಲಿ ಅಂಧರಾಗಿದ್ದ ನಾವು ಈ ಎಲ್ಲ ಮಾತುಗಳನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಕೇಳಿದರೂ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಅವರ ಅಲೌಕಿಕ ಕೃಪೆಯಿಂದ ನಾವು ಹೇಗೆ ಧನ್ಯರಾಗಿದ್ದೆವೊ ಹಾಗೆಯೆ ನಮ್ಮ ಆತ್ಮೀಯರು ಸ್ನೇಹಿತರು ಪರಿಚಿತರು ಎಲ್ಲರೂ ಅವರ ಕೃಪೆಗೆ ಪಾತ್ರರಾಗಿ ಶಾಂತಿಯನ್ನು ಪಡೆಯಬೇಕೆಂಬುದು ನಮ್ಮೆಲ್ಲರ ಇಚ್ಛೆಯಾಗಿತ್ತು. ಆದ್ದರಿಂದ ಅವರ ಇಲ್ಲದಿರುವಿಕೆಯನ್ನು ಭಾವಿಸುವುದಕ್ಕೆ ಅವಕಾಶವೆಲ್ಲಿ ? ಗಂಟಲು ಬೇನೆಯು ಆಗುವುದಕ್ಕೆ ನಾಲ್ಕೈದು ವರ್ಷಗಳು ಮುಂಚೆಯೆ ಶ್ರೀಮಾತೆಯವರಿಗೆ ಈ ವಿಷಯವನ್ನು ತಿಳಿಸಿದ್ದರು, "ಯಾವಾಗ ನಾನು ಯಾರ ಕೈಯಿಂದಲಾದರೂ ಆಹಾರವನ್ನು ಸ್ವೀಕರಿಸುತ್ತೇನೆಯೊ, ರಾತ್ರಿ ಕಲ್ಕತ್ತೆಯಲ್ಲಿ ಕಳೆಯುತ್ತೇನೆಯೊ ಮತ್ತು ಆಹಾರದ ಅಗ್ರಭಾಗವನ್ನು ಬೇರೆಯವರಿಗೆ ಕೊಟ್ಟು ಉಳಿದುದನ್ನು ಸ್ವೀಕರಿಸುತ್ತೇನೋ ಆಗ ನೀನು ತಿಳಿಯಬೇಕು ಈ ದೇಹ ಇನ್ನು ಹೆಚ್ಚುಕಾಲ ಉಳಿಯುವುದಿಲ್ಲವೆಂದು." ಗಂಟಲು ಬೇನೆ ಆಗುವುದಕ್ಕೆ ಸ್ವಲ್ಪ ಮುಂಚಿನಿಂದಲೆ ಈ ಘಟನೆ ನಡೆಯತೊಡಗಿತು. ಕಲ್ಕತ್ತೆಯ ಅನೇಕ ಸ್ಥಳಗಳಲ್ಲಿ ಅನೇಕರ ಮನೆಗೆ ಹೋಗಿ ಅನ್ನವನ್ನು ಬಿಟ್ಟು ಉಳಿದ ಎಲ್ಲ ಖಾದ್ಯ ಪದಾರ್ಥಗಳನ್ನು ಯಾರ ಕೈಯಿಂದಲೆಂದರೆ ಅವರಿಂದ ಸ್ವೀಕರಿಸುತ್ತಿದ್ದರು. ಕಲ್ಕತ್ತೆಗೆ ಬಂದು ಬಲರಾಮನ ಮನೆಯಲ್ಲಿ ಆಗಾಗ ರಾತ್ರಿಯನ್ನೂ ಕಳೆಯುತ್ತಿದ್ದರು. ನರೇಂದ್ರನಿಗೆ ಒಮ್ಮೆ ಅಜೀರ್ಣ ರೋಗವಾಗಿದ್ದಾಗ ಪಥ್ಯಮಾಡಲು ತೊಂದರೆಯಾಗುವುದೆಂದು ಬಹಳ ದಿವಸ ದಕ್ಷಿಣೇಶ್ವರಕ್ಕೆ ಬಂದಿರಲಿಲ್ಲ. ಒಂದು ದಿನ ಶ್ರೀರಾಮಕೃಷ್ಣರು ಪ್ರಾತಃಕಾಲದಲ್ಲಿ ಅವನನ್ನು ಬರ ಹೇಳಿದರು. ಆಗ ತಮಗಾಗಿ ಇಟ್ಟಿದ್ದ ಆಹಾರದ ಅಗ್ರಭಾಗವನ್ನು ನರೇಂದ್ರನಾಥನಿಗೆ ಉಣಿಸಿ ಉಳಿದುದನ್ನು ತಾವು ಉಂಡರು. ಶ್ರೀಮಾತೆಯವರು ಇದನ್ನು ತಡೆದು ಅವರಿಗಾಗಿ ಬೇರೆ ಅಡಿಗೆ ಮಾಡುವೆನೆಂದು ಹೇಳಿದಾಗ ಅವರೆಂದರು : "ನರೇಂದ್ರನಿಗೆ ಅಗ್ರಭಾಗವನ್ನು ಕೊಡುವುದರಲ್ಲಿ ಯಾವ ಸಂಕೋಚವೂ ಇಲ್ಲ. ಇದರಿಂದ ಯಾವ ದೋಷವೂ ಇಲ್ಲ. ನೀನು ಮತ್ತೆ ಅಡಿಗೆ ಮಾಡಬೇಕಾದ ಆವಶ್ಯಕತೆ ಇಲ್ಲ." ಶ್ರೀಮಾತೆಯವರು ಹೇಳುತ್ತಾರೆ : "ಶ್ರೀರಾಮಕೃಷ್ಣರು ಆ ರೀತಿ ತಿಳಿಸಿಕೊಟ್ಟರೂ ಅವರ ಹಿಂದಿನ ಮಾತನ್ನು ಸ್ಮರಿಸಿಕೊಂಡು ನನ್ನ ಮನಸ್ಸಿಗೆ ತುಂಬ ದುಗುಡ ಉಂಟಾಯಿತು."

7. ಲೋಕ ಶಿಕ್ಷಣದ ಗುರುತರ ಕಾರ್ಯದಿಂದ ಶ್ರೀರಾಮಕೃಷ್ಣರ ಶರೀರವು ಕೃಶವಾದರೂ ಆ ವಿಷಯದಲ್ಲಿ ಅವರ ಉತ್ಸಾಹವು ಸ್ವಲ್ಪವೂ ಕುಂಠಿತವಾಗಲಿಲ್ಲ. ಆಧ್ಯಾತ್ಮಿಕ ವ್ಯಾಕುಲತೆಯುಳ್ಳ ಯಾರೇ ಬಂದರೂ ಅವರು ಯಾವುದೋ ಒಂದು ದಿವ್ಯಶಕ್ತಿಯಿಂದ ಪ್ರೇರಿತರಾಗಿ ಅವರಿಗೆ ಉಪದೇಶ ನೀಡುತ್ತಿದ್ದರು ಮತ್ತು ಸ್ಪರ್ಶಾದಿಗಳ ಮೂಲಕ ಅವರ ಆಧ್ಯಾತ್ಮಿಕ ಉನ್ನತಿ ಆಗುವಂತೆ ಮಾಡುತ್ತಿದ್ದರು. ಆಗಂತುಕನ

ಯಾವ ಭಾವದವನಾಗಿರುತ್ತಾನೊ ಅದೇ ಭಾವವು ಶ್ರೀರಾಮಕೃಷ್ಣರಲ್ಲಿ ಉದ್ದೀಪನ ಗೊಂಡು ಆ ಸಮಯದ ಮಟ್ಟಿಗೆ ಬೇರೆಲ್ಲ ಭಾವಗಳು ಹಿಂದೆ ಸರಿಯುತ್ತಿದ್ದವು. ಆಗ ತಮ್ಮ ಅಂತರ್ದೃಷ್ಟಿಯ ಮೂಲಕ ಆ ವ್ಯಕ್ತಿಯು ಪರಿಪೂರ್ಣತೆಯೆಡೆಗೆ ಎಷ್ಟು ಮುಂದು ವರಿದಿರುವನೊ ಮತ್ತು ಇನ್ನೂ ಮುಂದುವರಿಯಲು ಯಾವ ತಡೆ ಉಂಟಾಗಿದೆ ಎಂಬು ದನ್ನೆಲ್ಲ ಅರಿಯುತ್ತಿದ್ದರು. ಅನಂತರ ಆ ವ್ಯಕ್ತಿಯ ಹಾದಿಯಲ್ಲಿರುವ ಅಡಚಣೆಗಳನ್ನೆಲ್ಲ ತೆಗೆದುಹಾಕಿ ಅವನು ಉನ್ನತ ಪ್ರಜ್ಞಾಸ್ತರಗಳಿಗೆ ಏರುವಂತೆ ಮಾಡುತ್ತಿದ್ದರು. ಹೀಗೆ ಅವರು ಜೀವನದ ಕೊನೆ ಘಳಿಗೆಯವರೆಗೂ ಶಿವಭಾವದಲ್ಲಿ ಜೀವಸೇವೆ ಮಾಡಿದರು. ಸ್ತ್ರೀ ಪುರುಷರು ಮಕ್ಕಳು ಎಲ್ಲರ ಜನ್ಮಜನ್ಮಾಂತರಗಳಿಂದ ಪಡೆದ ವಾಸನಾರಾಶಿಗಳನ್ನು ತೊಡೆದು ಹಾಕಿ ಅವರಿಗೆ ದಿವ್ಯಜ್ಯೋತಿಯ ಅಭಿಷೇಚನ ಮಾಡಿಸಿದರು. ಹೀಗೆ ಯಾವು ದನ್ನು ಶಾಸ್ತ್ರದಲ್ಲಿ ಸರ್ವಶ್ರೇಷ್ಠ ದಾನವೆಂದು ಪರಿಗಣಿಸಲ್ಪಟ್ಟಿದೆಯೊ ಅಂಥ ದಾನವನ್ನು ಮುಕ್ತಹಸ್ತದಿಂದ ಜಗತ್ತಿಗೆ ನೀಡಿದರು.

8. ಜನರ ಮನಸ್ಸಿನ ನಿಗೂಢ ಭಾವವನ್ನು ಮತ್ತು ಸಂಸ್ಕಾರಗಳನ್ನು ಯಥಾರ್ಥ ವಾಗಿ ಅರಿಯುವ ಸಾಮರ್ಥ್ಯ ಅವರಲ್ಲಿ ಯಾವಾಗಲೂ ಉಜ್ವಲವಾಗಿಯೆ ಇತ್ತು. ಶಾರೀ ರಿಕ ಆರೋಗ್ಯ ಅಥವಾ ಅನಾರೋಗ್ಯ ಅವರ ಮನಸ್ಸನ್ನು ಎಂದೂ ಸ್ಪರ್ಶಿಸುತ್ತಿರಲಿಲ್ಲ ಎಂಬುದಕ್ಕೆ ಇದೊಂದು ಉತ್ತಮ ಪ್ರಮಾಣ. ಆದರೆ ಇತರರ ಆಂತರಿಕ ರಹಸ್ಯವನ್ನು ಸಂಪೂರ್ಣವಾಗಿ ತಿಳಿಯುವುದು ಅವರಿಗೆ ಸಾಧ್ಯವಿದ್ದರೂ ತಮ್ಮ ಅಲೌಕಿಕ ಶಕ್ತಿಯನ್ನು ತೋರಿಸಿಕೊಳ್ಳಲು ಅವರು ಎಂದೂ ಅದನ್ನು ಪ್ರದರ್ಶಿಸುತ್ತಿರಲಿಲ್ಲ. ಯಾವುದರಿಂದ ಇತರರಿಗೆ ಒಳ್ಳೆಯದಾಗುವುದೊ ಅಷ್ಟರಮಟ್ಟಿಗೆ ಮಾತ್ರ / ಆ ಶಕ್ತಿಯನ್ನು ಉಪಯೋಗಿಸಿ ಕೊಂಡು ಇತರರಿಗೆ ಉನ್ನತ ಮಾರ್ಗವನ್ನು ತೋರಿಸುತ್ತಿದ್ದರು. ಅಥವಾ ತಮ್ಮಲ್ಲಿ ಅಚಲವಾದ ವಿಶ್ವಾಸ ಮತ್ತು ನಿರ್ಭರತೆ ಉಂಟಾಗಲೆಂದು ಕೆಲವರ ಮುಂದೆ ತಮ್ಮ ಈ ಶಕ್ತಿಯನ್ನು ತೋರಿಸುತ್ತಿದ್ದರು. ಓದುಗರಿಗೆ ಈ ವಿಷಯ ಸ್ಪಷ್ಟವಾಗಲೆಂದು ಇದಕ್ಕೆ ಸಂಬಂಧಿಸಿದ ಸಾಮಾನ್ಯ ಘಟನೆಯೊಂದನ್ನು ಇಲ್ಲಿ ವಿವರಿಸುತ್ತೇವೆ.

9. ಶ್ರೀರಾಮಕೃಷ್ಣರ ಗಂಟಲು ಬೇನೆ ಹೆಚ್ಚಾಗಿದೆ, ಎಂಬುದನ್ನು ಕೇಳಿ ೧೮೮೫ ಶ್ರಾವಣ ಮಾಸದ ಕೊನೆ ಭಾಗದಲ್ಲಿ ನಮಗೆ ಪರಿಚಿತ ಮಹಿಳೆಯೊಬ್ಬಳು ಅವರನ್ನು ನೋಡಲು ಹೋಗುತ್ತಿದ್ದಳು. ಅದೇ ಗಲ್ಲಿಯಲ್ಲಿ ವಾಸಿಸುತ್ತಿದ್ದ ಇನ್ನೋರ್ವ ಮಹಿಳೆ ಈ ವಿಷಯವನ್ನು ತಿಳಿದು ಅವಳಿಗೆ ಹೇಳಿದಳು : "ಹಾಲಲ್ಲದೆ ಶ್ರೀರಾಮಕೃಷ್ಣರಿಗೆ ಕೊಡುವಂತಹ ಇನ್ನಾವುದೂ ಮನೆಯಲಿಲ್ಲ. ಒಂದು ಗಡಿಗೆ ಹಾಲನ್ನು ತೆಗೆದುಕೊಂಡು ಹೋಗುತ್ತೀಯಾ ?" ಮೊದಲನೆ ಮಹಿಳೆ ಇದಕ್ಕೆ ಅಸಮ್ಮತಿಯನ್ನು ವ್ಯಕ್ತಪಡಿಸಿ ಹೇಳಿ ದಳು : "ದಕ್ಷಿಣೇಶ್ವರದಲ್ಲಿ ಒಳ್ಳೆಯ ಹಾಲಿಗೇನೂ ಕೊರತೆ ಇಲ್ಲ ಮತ್ತು ಅವರಿಗೆ ಹಾಲಿನ ವ್ಯವಸ್ಥೆಯನ್ನು ಮಾಡಿರಬೇಕು. ಅದನ್ನು ತೆಗೆದುಕೊಂಡು ಹೋಗುವುದು ಕಷ್ಟ. ಆದ್ದರಿಂದ ಹಾಲು ಬೇಡ."

ದಕ್ಷಿಣೇಶ್ವರಕ್ಕೆ ಹೋದ ಮೇಲೆ ಆಕೆಗೆ ತಿಳಿದು ಬಂತು ಶ್ರೀರಾಮಕೃಷ್ಣರಿಗೆ

ಹಾಲನ್ನವಲ್ಲದೆ ಮತ್ತೇನನ್ನೂ ತೆಗೆದುಕೊಳ್ಳಲು ಆಗುವುದಿಲ್ಲ ಎಂದು. ಹಾಲಿನವನು ಅಂದು ಪ್ರತಿದಿನ ಕೊಡುವಷ್ಟು ಹಾಲನ್ನು ಕೊಟ್ಟಿರಲಿಲ್ಲ. ಶ್ರೀಮಾತೆಯವರು ಈ ವಿಷಯದಲ್ಲಿ ತುಂಬ ಕಾತರರಾಗಿದ್ದರು. ಆ ಭಕ್ತ ಮಹಿಳೆ ಆಗ ತಾನು ಕಲ್ಕತ್ತೆಯಿಂದ ಹಾಲು ತರದೆ ಇದ್ದುದಕ್ಕಾಗಿ ತುಂಬ ಪಶ್ಚಾತ್ತಾಪ ಪಟ್ಟಳು. ಅಲ್ಲೇ ಎಲ್ಲಾದರೂ ಹತ್ತಿರದ ಹಳ್ಳಿಯಲ್ಲಿ ಹಾಲು ಸಿಕ್ಕುವುದೆ ಎಂದು ವಿಚಾರಿಸಿದಳು. ಶ್ರೀಮತಿ ಪಾಂಡೆ ಎಂಬುವಳು ಒಂದು ಹಸುವನ್ನು ಇಟ್ಟುಕೊಂಡು ಹಾಲು ಮಾರುತ್ತಿದ್ದಳು. ಭಕ್ತ ಮಹಿಳೆ ಆಕೆಯ ಮನೆಗೆ ಹೋಗಿ ವಿಚಾರಿಸಿದಾಗ ತಿಳಿದು ಬಂತು ಹಾಲೆಲ್ಲ ಮಾರಾಟ ವಾಗಿದೆ ಎಂದು. ಕೇವಲ ಒಂದೂವರೆ ಪಾವು ಹಾಲನ್ನು ಕಾಯಿಸಿ ಇಟ್ಟುಕೊಂಡಿದ್ದಳು. ಭಕ್ತ ಮಹಿಳೆ ಅದನ್ನೇ ಕೊಂಡುಕೊಂಡು ಬಂದು ಅಂದು ಶ್ರೀರಾಮಕೃಷ್ಣರಿಗೆ ಹಾಲು ಅನ್ನ ಕೊಟ್ಟದ್ದಾಯಿತು. ಊಟವಾದ ನಂತರ ಅವರಿಗೆ ಕೈ ತೊಳೆಯಲು ನೀರು ಹಾಕಿದಳು. ಅನಂತರ ಶ್ರೀರಾಮಕೃಷ್ಣರು ಆಕೆಯನ್ನು ಏಕಾಂತದಲ್ಲಿ ಕರೆದು ಹೇಳಿದರು: "ನೋಡಮ್ಮಾ, ನನಗೆ ತುಂಬಾ ಗಂಟಲು ವೇದನೆ. ನಿನಗೆ ರೋಗ ಗುಣಮಾಡುವ ಮಂತ್ರ ಗೊತ್ತಿದೆಯಲ್ಲ ಅದನ್ನು ಉಚ್ಚರಿಸುತ್ತ ನನ್ನ ಗಂಟಲಿನ ಮೇಲೆ ಕೈಯಾಡಿಸುತ್ತೀಯಾ?" ಆ ಭಕ್ತ ಮಹಿಳೆ ಅದನ್ನು ಕೇಳಿ ಸ್ವಲ್ಪಹೊತ್ತು ಸ್ತಬ್ಧಳಾಗಿಬಿಟ್ಟಳು. ಅನಂತರ ಶ್ರೀರಾಮಕೃಷ್ಣರು ಹೇಳಿದಂತೆ ಗಂಟಲಿನ ಮೇಲೆ ಕೈಯಾಡಿಸಿಯಾದ ಮೇಲೆ ಶ್ರೀಮಾತೆ ಯವರ ಹತ್ತಿರ ಬಂದು ಹೇಳಿದಳು : "ನನಗೆ ಆ ಮಂತ್ರ ಗೊತ್ತು ಅಂತ ಅವರಿಗೆ ಹೇಗೆ ತಿಳಿಯಿತು ? ಘೋಷ್‌ಪಾಡಾ ಸಂಪ್ರದಾಯದ ಮಹಿಳೆಯೊಬ್ಬಳಿಂದ ಬಹಳ ಹಿಂದೆ ಈ ಮಂತ್ರವನ್ನು ಸ್ವೀಕರಿಸಿದ್ದೆ. ಈ ಮಂತ್ರ ಸಕಾಮದಿಂದ ಮಾಡಿದ ಕಾರ್ಯದ ಯಶಸ್ಸಿಗಾಗಿ ಬಳಸಲ್ಪಡುತ್ತದೆ. ಅನಂತರ ಭಗವಂತನನ್ನು ಯಾವ ಆಸೆಯೂ ಇಲ್ಲದೇ ಕರೆಯುವುದೇ ಜೀವನದ ಉದ್ದೇಶವೆಂದು ತಿಳಿದು ಆ ಮಂತ್ರವನ್ನು ಬಿಟ್ಟು ಬಿಟ್ಟಿದ್ದೆ. ಈ ಮಂತ್ರದ ವಿಚಾರವೊಂದನ್ನು ಬಿಟ್ಟು ಮತ್ತೆಲ್ಲವನ್ನೂ ಶ್ರೀರಾಮಕೃಷ್ಣರಿಗೆ ಹೇಳಿದ್ದೆ. ನನ್ನ ಮೇಲೆ ಅಸಮಾಧಾನ ಪಟ್ಟುಕೊಳ್ಳಬಹುದೆಂದು ಅದನ್ನು ಹೇಳಿರಲಿಲ್ಲ. ಅವರಿಗೆ ಹೇಗೆ ಇದು ಗೊತ್ತಾಯಿತು ?" ಶ್ರೀಮಾತೆಯವರು ಇದನ್ನು ಕೇಳಿ ಮುಗುಳ್ನಕ್ಕು ಹೇಳಿದರು : "ಅವರಿಗೆ ಎಲ್ಲಾ ತಿಳಿದುಬಿಡುತ್ತದೆ. ಒಳ್ಳೆಯ ಉದ್ದೇಶದಿಂದ ಪ್ರಾಮಾಣಿಕ ವಾಗಿ ಏನಾದರೂ ಮಾಡಿದರೆ ಅವರು ಅದಕ್ಕೆ ಎಂದೂ ಅಸಮಾಧಾನ ಪಟ್ಟುಕೊಳ್ಳು ವುದಿಲ್ಲ. ನೀನು ಭಯಪಡಬೇಕಿಲ್ಲ. ನಾನು ಇಲ್ಲಿಗೆ ಬರುವುದಕ್ಕೆ ಮುಂಚೆ ನಾನೂ ಆ ಮಂತ್ರವನ್ನು ಸ್ವೀಕರಿಸಿದ್ದೆ. ಅದನ್ನು ನಾನು ಅವರಿಗೆ ತಿಳಿಸಿದಾಗ ಅವರೆಂದರು : 'ನೀನು ಆ ಮಂತ್ರವನ್ನು ಪಡೆದಿದ್ದರಿಂದ ಯಾವ ತೊಂದರೆಯೂ ಇಲ್ಲ. ಈಗ ಅದನ್ನು ನಿನ್ನ ಇಷ್ಟದೇವತೆಯ ಪಾದದಲ್ಲಿ ಅರ್ಪಿಸಿಬಿಡು.'"

10. ಹೀಗೆ ಸ್ವಲ್ಪ ಸಮಯ ಕಳೆಯಿತು. ಶ್ರೀರಾಮಕೃಷ್ಣರ ಗಂಟಲು ಬೇನೆ ಕ್ರಮೇಣ ವೃದ್ಧಿಯಾಯಿತು. ಭಕ್ತರು ಎಷ್ಟೇ ಯೋಚಿಸಿದರೂ ಯಾವುದೇ ನಿರ್ಧಾರಕ್ಕೆ ಬರಲಾಗಲಿಲ್ಲ. ಆಗ ಇದ್ದಕ್ಕಿದ್ದಂತೆಯೆ ಒಂದು ಘಟನೆ ಸಂಭವಿಸಿತು. ಅದು ಅವರ

ಕರ್ತವ್ಯವೇನೆಂಬುದನ್ನು ಸ್ಪಷ್ಟವಾಗಿ ತೋರಿಸಿಕೊಟ್ಟಿತು. ಬಾಗ್‌ಬಜಾರ್‌ನಲ್ಲಿ ವಾಸಿಸು ತ್ತಿದ್ದ ಮಹಿಳೆಯೊಬ್ಬಳು ಭಕ್ತರನ್ನು ಸಂಜೆಯ ಊಟಕ್ಕೆ ಆಹ್ವಾನಿಸಿದಳು. ಶ್ರೀರಾಮ ಕೃಷ್ಣರನ್ನು ಕರೆದುಕೊಂಡು ಹೋಗಬೇಕೆಂದು ಅವಳಿಗೆ ತುಂಬ ಆಸೆ ಇತ್ತು. ಆದರೆ ಅವರ ಆರೋಗ್ಯ ಸರಿ ಇಲ್ಲದುದರಿಂದ ಆ ಆಸೆಯನ್ನು ಕೈಬಿಡಬೇಕಾಯಿತು. ಆದರೂ ಕೂಡ ಅವರು ಹಾಗೆ ಒಮ್ಮೆ ಬಂದುಹೋಗಬಹುದೇನೊ ಎಂಬ ಆಸೆಯಿಂದ ಆಕೆಯು ಒಬ್ಬ ಭಕ್ತನನ್ನು ದಕ್ಷಿಣೇಶ್ವರಕ್ಕೆ ಕಳಿಸಿದಳು. ಅವನು ರಾತ್ರಿ ಒಂಬತ್ತು ಗಂಟೆಯಾದರೂ ಹಿಂದಿರುಗಲಿಲ್ಲ. ಇನ್ನು ತಡಮಾಡುವುದು ಸರಿಯಲ್ಲವೆಂದು ಅತಿಥಿಗಳನ್ನು ಊಟಕ್ಕೆ ಕೂರಿಸಿದರು. ಆಗ ಆ ಭಕ್ತನು ಬಂದು ಶ್ರೀರಾಮಕೃಷ್ಣರ ಗಂಟಲಿನಲ್ಲಿ ಅಂದು ರಕ್ತ ಬಂದಿದ್ದರಿಂದ ಅವರು ಬರಲಾಗುವುದಿಲ್ಲ ಎಂದು ವರದಿ ಮಾಡಿದನು. ಅಲ್ಲಿ ನೆರೆದಿದ್ದ ನರೇಂದ್ರ, ರಾಮ್, ಗಿರೀಶ, ದೇವೇಂದ್ರ, ಮಹೇಂದ್ರ–ಮುಂತಾದವರು ಇದನ್ನು ಕೇಳಿ ತುಂಬ ವಿಚಲಿತರಾದರು. ಅವರು ತಮ್ಮ ತಮ್ಮಲ್ಲೇ ಮಾತನಾಡಿಕೊಂಡು ಚಿಕಿತ್ಸೆಗಾಗಿ ಶ್ರೀರಾಮಕೃಷ್ಣರನ್ನು ಬೇಗನೆ ಕಲ್ಕತ್ತೆಗೆ ಕರೆದುಕೊಂಡು ಬರಬೇಕೆಂದು ನಿರ್ಧರಿಸಿದರು. ಊಟದ ಸಮಯದಲ್ಲಿ ನರೇಂದ್ರನ ಮುಖ ತುಂಬ ಕಳೆಗುಂದಿರುವುದನ್ನು ನೋಡಿ ಒಬ್ಬ ಯುವಕನು ಅದರ ಕಾರಣವನ್ನು ಕೇಳಿದನು. ನರೇಂದ್ರನು ಉತ್ತರಿಸಿದ : "ನಾವು ಇದು ವರೆಗೂ ಯಾರೊಡನೆ ಸಂತೋಷದಿಂದ ಇದ್ದೆವೊ ಅವರು ಬಹುಶಃ ಈಗ ಹೊರಟು ಹೋಗಿ ಬಿಡಬಹುದು. ಈ ರೀತಿಯ ಗಂಟಲು ಬೇನೆ ಕ್ರಮೇಣ ಕ್ಯಾನ್ಸರ್ ಆಗಿ ಪರಿ ವರ್ತಿಸುವುದೆಂದು ನಾನು ವೈದ್ಯಕೀಯ ಪುಸ್ತಕದಲ್ಲಿ ಓದಿರುವೆನು ಮತ್ತು ಡಾಕ್ಟರ್ ಸ್ನೇಹಿತರಿಂದಲೂ ಕೇಳಿರುವೆನು. ಇಂದು ರಕ್ತಸ್ರಾವವಾಗುತ್ತಿರುವುದನ್ನು ನೋಡಿದರೆ ಈ ರೋಗ ಅದೇ ಇರಬೇಕೆಂದು ನನಗೆ ಸಂದೇಹ. ಈ ರೋಗಕ್ಕೆ ಇನ್ನೂ ಯಾವ ಔಷಧಿ ಯನ್ನೂ ಕಂಡುಹಿಡಿದಿಲ್ಲ." ಮರುದಿನ ಬೆಳಗ್ಗೆ ಕೆಲವು ಹಿರಿಯ ಭಕ್ತರು ದಕ್ಷಿಣೇಶ್ವರಕ್ಕೆ ಹೋದರು. ಚಿಕಿತ್ಸೆಗಾಗಿ ಕಲ್ಕತ್ತೆಗೆ ಬರಬೇಕೆಂದು ಶ್ರೀರಾಮಕೃಷ್ಣರನ್ನು ಕೇಳಿಕೊಂಡಾಗ ಅವರು ಒಪ್ಪಿದರು. ಶ್ರೀರಾಮಕೃಷ್ಣರು ಗಂಗಾನದಿಯನ್ನು ಪ್ರೀತಿಸುತ್ತಾರೆ ಎಂದು ಎಲ್ಲರಿಗೂ ತಿಳಿದಿತ್ತು. ಬಾಗ್‌ಬಜಾರ್‌ನಲ್ಲಿ ಗಂಗಾನದಿಯು ಕಾಣುವಂತಹ ಒಂದು ಸಣ್ಣ ಮನೆಯನ್ನು ಭಕ್ತರು ಬಾಡಿಗೆಗೆ ತೆಗೆದುಕೊಂಡರು. ಶ್ರೀರಾಮಕೃಷ್ಣರಿಗೆ ವಿಶಾಲವಾದ ತೋಟದ ವಾತಾವರಣದಲ್ಲಿ ಇದ್ದು ಅಭ್ಯಾಸವಾಗಿತ್ತು. ಅವರಿಗೆ ಈ ಚಿಕ್ಕ ಮನೆಯಲ್ಲಿ ಇರುವುದು ಸಾಧ್ಯವಾಗಲಿಲ್ಲ. ಅವರು ಕೂಡಲೆ ಬಲರಾಮನ ಮನೆಗೆ ಹೊರಟು ಹೋದರು. ಬೇರೊಂದು ಒಳ್ಳೆಯ ಮನೆ ಸಿಕ್ಕುವವರೆಗೂ ಅಲ್ಲಿಯೆ ಇರಬೇಕೆಂದು ಬಲ ರಾಮನು ಕೇಳಿಕೊಂಡನು. ಶ್ರೀರಾಮಕೃಷ್ಣರೂ ಒಪ್ಪಿದರು.

11. ಮನೆಯನ್ನು ಹುಡುಕುವುದು ಮುಂದುವರಿಯಿತು. ವೃಥಾ ಸಮಯವನ್ನು ನಷ್ಟ ಮಾಡುವುದು ಸರಿಯಲ್ಲವೆಂದು ಭಕ್ತರು ಈ ನಡುವೆ ಕಲ್ಕತ್ತೆಯ ಸುಪ್ರಸಿದ್ಧ ವೈದ್ಯ ರನ್ನೆಲ್ಲ ಕರೆದುಕೊಂಡು ಬಂದು ಶ್ರೀರಾಮಕೃಷ್ಣರನ್ನು ಪರೀಕ್ಷಿಸಿದರು. ಗಂಗಾ ಪ್ರಸಾದ್, ಗೋಪೀ ಮೋಹನ್, ದ್ವಾರಿಕಾನಾಥ್, ನವಗೋಪಾಲ್ ಇವರೇ ಮುಂತಾದ ವೈದ್ಯರು

ಗಳು ಒಂದು ಶ್ರೀರಾಮಕೃಷ್ಣರನ್ನು ಪರೀಕ್ಷಿಸಿ ಇದು ಗುಣಪಡಿಸಲಾಗದ ರೋಹಿಣಿ ಎಂಬ ಕಾಯಿಲೆ ಎಂದು ನಿರ್ಧರಿಸಿದರು. ಗಂಗಾಪ್ರಸಾದನನ್ನು ಏಕಾಂತದಲ್ಲಿ ಕರೆದು ಕೇಳಿದಾಗ ಅವನೆಂದ : "ರೋಹಿಣಿ ಎಂದರೆ ಯಾವುದನ್ನು ಪಾಶ್ಚಾತ್ಯರು ಕ್ಯಾನ್ಸರ್ ಎಂದು ಕರೆಯುತ್ತಾರೊ ಅದೆ. ಪುಸ್ತಕದಲ್ಲಿ ಅದರ ಚಿಕಿತ್ಸೆಯ ವಿಚಾರವಿದ್ದರೂ ಗುಣಪಡಿಸಲಾಗದೆಂದು ನಿರ್ಧರಿಸಲ್ಪಟ್ಟಿದೆ." ಡಾಕ್ಟರುಗಳಿಂದ ಯಾವ ಭರವಸೆಯನ್ನೂ ಕಾಣದೆ ಭಕ್ತರು ಹೋಮಿಯೋಪತಿ ಚಿಕಿತ್ಸೆ ಮಾಡಿಸುವುದೆಂದು ನಿರ್ಧರಿಸಿದರು. ಒಂದು ವಾರದಲ್ಲಿಯೆ ಶ್ಯಾಮ್‌ಪುಕುರ್ ರಸ್ತೆಯಲ್ಲಿ ಗೋಕುಲ್ ಚಂದ್ರ ಭಟ್ಟಾಚಾರ್ಯನ ಬೈಠಕ್ ಖಾನೆ ಮನೆಯನ್ನು ಶ್ರೀರಾಮಕೃಷ್ಣರಿಗಾಗಿ ಬಾಡಿಗೆಗೆ ತೆಗೆದುಕೊಂಡರು. ಕಲ್ಕತ್ತೆಯ ಸುಪ್ರಸಿದ್ಧ ಡಾಕ್ಟರಾದ ಮಹೇಂದ್ರಲಾಲ್ ಸರ್ಕಾರನ ಚಿಕಿತ್ಸೆಗೆ ಸ್ವಲ್ಪದಿನದ ಮಟ್ಟಿಗೆ ಶ್ರೀರಾಮಕೃಷ್ಣರನ್ನು ಒಳಪಡಿಸಿದರು.

12. ಶ್ರೀರಾಮಕೃಷ್ಣರು ಕಲ್ಕತ್ತೆಗೆ ಬಂದಿರುವ ಸುದ್ದಿ ಬಾಯಿಂದ ಬಾಯಿಗೆ ನಗರದಲ್ಲೆಲ್ಲ ಹರಡಿತು. ಭಕ್ತರು ಗುಂಪುಗುಂಪಾಗಿ ಶ್ರೀರಾಮಕೃಷ್ಣರನ್ನು ನೋಡಲು ಬರತೊಡಗಿದರು. ಪರಿಚಿತರು ಅಪರಿಚಿತರು ಎಲ್ಲಾ ಬಲರಾಮನ ಮನೆಗೆ ಬರತೊಡಗಿ ಒಂದು ಆನಂದೋತ್ಸವದ ವಾತಾವರಣವನ್ನು ಕಲ್ಪಿಸಿದರು. ವೈದ್ಯರ ಸಲಹೆ ಮತ್ತು ಭಕ್ತರ ಕಳಕಳಿಯ ಪ್ರಾರ್ಥನೆಯಿಂದ ಶ್ರೀರಾಮಕೃಷ್ಣರು ಆಗಾಗ ಮೌನದಿಂದ ಇರುತ್ತಿದ್ದರು. ಆದರೂ ಕೂಡ ಅವರು ಎಷ್ಟು ಉತ್ಸಾಹದಿಂದ ಭಕ್ತರೊಡನೆ ಧಾರ್ಮಿಕ ವಿಷಯಗಳ ಬಗ್ಗೆ ಮಾತನಾಡುತ್ತಿದ್ದರೆಂದರೆ ಅವರು ಈ ಉದ್ದೇಶದಿಂದಲೆ ಬಂದಿರುವರೇನೊ ಎಂದೆನಿಸುತ್ತಿತ್ತು. ಯಾರಿಗೆ ದಕ್ಷಿಣೇಶ್ವರಕ್ಕೆ ಹೋಗಲು ಅವಕಾಶವಿಲ್ಲವೊ ಅವರಿಗೆ ಧಾರ್ಮಿಕ ಬೆಳಕನ್ನು ತೋರಿಸುವುದಕ್ಕಾಗಿಯೆ ಅವರು ಇಲ್ಲಿ ಬಂದಿರುವರೊ ಎಂದು ತೋರುತ್ತಿತ್ತು. ಬೆಳಗಿನಿಂದ ಮಧ್ಯಾಹ್ನ ಊಟದವರೆಗೆ, ಊಟದನಂತರ ಸುಮಾರು ಎರಡು ಗಂಟೆ ವಿಶ್ರಾಂತಿಯನ್ನು ಪಡೆದು ಮತ್ತೆ ರಾತ್ರಿ ಊಟದವರೆಗೆ ಮತ್ತು ಅನಂತರ ಮಲಗುವವರೆಗೆ ಪ್ರತಿದಿನವೂ ಈ ರೀತಿಯ ಧಾರ್ಮಿಕ ಸಂಭಾಷಣೆ ನಡೆಯುತ್ತಲೆ ಇತ್ತು. ಅನೇಕರ ವೈಯಕ್ತಿಕ ಜಟಿಲ ಪ್ರಶ್ನೆಗಳಿಗೆ ಸಮಾಧಾನ ನೀಡುತ್ತಿದ್ದರು, ಅನೇಕ ಬಗೆಯ ಭಗವದ್ವಿಚಾರದ ಮೂಲಕ ಅನೇಕರನ್ನು ಆಧ್ಯಾತ್ಮಿಕತೆಯ ಕಡೆಗೆ ಆಕರ್ಷಿಸಿದರು ಮತ್ತು ಭಜನೆ ಸಂಕೀರ್ತನೆಗಳನ್ನು ಕೇಳುತ್ತಾ ಆಳ ಸಮಾಧಿ ರಾಜ್ಯವನ್ನು ಪ್ರವೇಶಿಸುವುದರ ಮೂಲಕ ಬಹಳ ಮಂದಿ ಸಾಧಕರ ಹೃದಯಕ್ಕೆ ಶಾಂತಿಯನ್ನೂ, ಆನಂದವನ್ನೂ ನೀಡಿದರು. ಎಲ್ಲಾ ಸಮಯದಲ್ಲೂ ನಮಗೆ ಅಲ್ಲಿರಲು ಆಗುತ್ತಿರಲಿಲ್ಲ. ಹಾಗೂ ಮನೆಯ ಯಜಮಾನನೂ ಕೂಡ ಶ್ರೀರಾಮಕೃಷ್ಣರಿಗೆ ಮತ್ತು ಭಕ್ತರಿಗಾಗಿ ಅನೇಕ ವ್ಯವಸ್ಥೆಗಳನ್ನು ಮಾಡುವುದಕ್ಕಾಗಿ ಬೇರೆ ಬೇರೆ ಕಡೆ ಹೋಗಬೇಕಾಗುತ್ತಿತ್ತು. ಇದರಿಂದಾಗಿ ಈ ಒಂದು ವಾರದ ವಿಸ್ತಾರವಾದ ವಿವರಣೆ ದೊರೆಯುವುದು ಅಸಂಭವವೆ. ಆದ್ದರಿಂದ ಶ್ರೀರಾಮಕೃಷ್ಣರು ಬಲರಾಮನ ಮನೆಯಲ್ಲಿ ಈ ಕೆಲವು ದಿನಗಳು ಹೇಗೆ ವಾಸಿಸಿದರು ಎಂಬುದಕ್ಕೆ ಒಂದು ಘಟನೆಯನ್ನು ಮಾತ್ರ ಉಲ್ಲೇಖಿಸಿ ನಾವು ಸುಮ್ಮನಾಗುತ್ತೇವೆ.

ನಾವು ಆಗ ಕಾಲೇಜಿನಲ್ಲಿ ಓದುತ್ತಿದ್ದೆವು. ವಾರದಲ್ಲಿ ಒಂದೆರಡು ಬಾರಿ ಮಾತ್ರ ಶ್ರೀರಾಮಕೃಷ್ಣರನ್ನು ನೋಡಲು ನಮಗೆ ಅವಕಾಶ ದೊರೆಯುತ್ತಿತ್ತು. ಒಂದು ದಿನ ಮಧ್ಯಾಹ್ನ ನಾವು ಬಲರಾಮನ ಮನೆಗೆ ಹೋದೆವು. ಮಹಡಿಯ ಮೇಲೆ ಒಂದು ದೊಡ್ಡ ಕೊಠಡಿಯಲ್ಲಿ ಭಕ್ತರೆಲ್ಲ ಕಿಕ್ಕಿರಿದು ಕುಳಿತಿದ್ದಾರೆ. ಗಿರೀಶ್‌ಚಂದ್ರ ಮತ್ತು ಕಾಲೀಪದ್ ಉತ್ಸಾಹದಿಂದ ಈ ಕೆಳಗಿನ ಹಾಡನ್ನು ಹಾಡುತ್ತಿದ್ದಾರೆ. "ಓ ನಿತಾಯ್ ನನ್ನನ್ನು ಹಿಡಿದುಕೊ ! ಇಂದು ನನ್ನ ಹೃದಯ ಯಾವುದೊ ಅಜ್ಞಾತವಾದ ಭಾವದಿಂದ ತುಂಬಿ ಹೋಗಿದೆ". ಹೇಗೊ ಕಷ್ಟಪಟ್ಟು ಕೊಠಡಿಯ ಒಳಗೆ ಪ್ರವೇಶಿಸಿದೆವು. ಕೊಠಡಿಯ ಪಶ್ಚಿಮ ಭಾಗದಲ್ಲಿ ಪೂರ್ವ ದಿಕ್ಕಿಗೆ ಕುಳಿತುಕೊಂಡು ಶ್ರೀರಾಮಕೃಷ್ಣರು ಸಮಾಧಿಸ್ಥರಾಗಿದ್ದಾರೆ. ಅವರ ಮುಖ ಪ್ರಸನ್ನತೆ ಮತ್ತು ಆನಂದದಿಂದ ಶೋಭಿಸುತ್ತಿದೆ. ಅವರು ಬಲಗಾಲನ್ನು ಮೇಲೆತ್ತಿಕೊಂಡು ಮುಂದೆ ಚಾಚಿಕೊಂಡಿದ್ದರು. ಅವರ ಮುಂದೆ ಕುಳಿತಿದ್ದ ಒಬ್ಬ ವ್ಯಕ್ತಿಯು ಅತ್ಯಂತ ಪ್ರೀತಿಯಿಂದ ಮತ್ತು ಮೃದುವಾಗಿ ಆ ಕಾಲನ್ನು ಹಿಡಿದುಕೊಂಡು ತನ್ನ ಎದೆಯಮೇಲೆ ಇಟ್ಟುಕೊಂಡಿದ್ದನು. ಆ ವ್ಯಕ್ತಿಯ ಕಣ್ಣುಗಳು ಮುಚ್ಚಿಕೊಂಡಿದ್ದವು ಮತ್ತು ಅವನ ಕೆನ್ನೆ ಎದೆ ಕಣ್ಣೀರಿನಿಂದ ತುಂಬಿಹೋಗಿತ್ತು. ಎಲ್ಲರೂ ಸ್ಥಿರವಾಗಿ ಕುಳಿತಿದ್ದಾರೆ. ಕೊಠಡಿಯು ದಿವ್ಯತೆಯಿಂದ ಪರಿಪ್ಲುತವಾಗಿದೆ. ಆದರೆ ಹಾಡು ಮಾತ್ರ ಮುಂದುವರಿಯುತ್ತಿದೆ :

ಯಾಕೊ ಏನೊ ಇಂದು ನನ್ನ ಪ್ರಾಣ
ಸುಮ್ಮನೆ ಚಡಪಡಿಸುತ್ತಿದೆ.
ಓ ನಿತಾಯ್, ನನ್ನನ್ನು ತೆಗೆದು
ನಿನ್ನೆದೆಗೆ ಅಪ್ಪಿಕೊ.

ಹರಿನಾಮವನ್ನು ನಾನು ಎಲ್ಲರಿಗೂ ಹಂಚುವಾಗ
ಯಾವ ತರಂಗಗಳು ಎದ್ದವೊ
ಈ ಪ್ರೇಮದ ಪ್ರವಾಹದಲ್ಲಿ,
ಅದರಲ್ಲಿ ನಾನು ತೇಲಿಹೋಗಿದ್ದೇನೆ.

ಅಷ್ಟ ಸಖಿಯರ ಸಾಕ್ಷಿಯಲ್ಲಿ. ನಾನು
ನನ್ನ ಸ್ವಹಸ್ತದಿಂದಲೇ ಸಾಲದ ಪತ್ರ
ಬರೆದು ಕೊಟ್ಟಿದ್ದೇನೆ.
ನಾನು ಪಡೆದ ಹಣವೆಲ್ಲವೂ
ಖರ್ಚಾಗಿ ಹೋಗಿರುವಾಗ,
ಈ ಪ್ರೇಮದ ಋಣವನ್ನು ಹೇಗೆ ತೀರಿಸಲಿ ?
ಈಗ ದಾರಿ ಒಂದೇ : ಋಣ ಪರಿಹಾರಕ್ಕೆ
ನನ್ನನ್ನು ನಾನೇ ಹರಾಜು ಹಾಕಬೇಕಾಗಿದೆ !

ಹಾಡುವುದು ಕೊನೆಗೊಂಡಿತು. ಶ್ರೀರಾಮಕೃಷ್ಣರು ಅರ್ಧ ಬಾಹ್ಯದೆಶೆಯಲ್ಲಿ ತಮ್ಮ ಮುಂದಿದ್ದ ವ್ಯಕ್ತಿಗೆ ಹೇಳುತ್ತಿದ್ದಾರೆ : "ಶ್ರೀಕೃಷ್ಣ ಚೈತನ್ಯ ಎಂದು ಹೇಳು, ಶ್ರೀಕೃಷ್ಣ ಚೈತನ್ಯ ಎಂದು ಹೇಳು, ಶ್ರೀಕೃಷ್ಣ ಚೈತನ್ಯ ಎಂದು ಹೇಳು." ಹೀಗೆ ಮೂರು ಬಾರಿ ಅವನು ನಾಮೋಚ್ಚಾರಣೆ ಮಾಡುವಂತೆ ಮಾಡಿ ಶ್ರೀರಾಮಕೃಷ್ಣರು ಪೂರ್ಣ ಪ್ರಕೃತಿಸ್ಥರಾಗಿ ಇತರರೊಡನೆ ಮಾತನಾಡಲು ಪ್ರಾರಂಭಿಸಿದರು. ಅನಂತರ ವಿಚಾರಿಸಿ ತಿಳಿದುಕೊಂಡೆವು, ಆ ವ್ಯಕ್ತಿಯ ಹೆಸರು ನಿತ್ಯಗೋಪಾಲ್ ಗೋಸ್ವಾಮಿ ಎಂದು. ಅವನು ಢಾಕಾದ ಕಾಲೇಜ್ ಒಂದರಲ್ಲಿ ಪ್ರಾಧ್ಯಾಪಕನಾಗಿದ್ದನು. ಶ್ರೀರಾಮಕೃಷ್ಣರ ಕಾಯಿಲೆಯ ವಿಷಯ ತಿಳಿದು ಅವರನ್ನು ನೋಡಲು ಬಂದಿದ್ದನು. ಗೋಸ್ವಾಮಿಯು ಎಷ್ಟು ಭಕ್ತಿವಂತನೊ ಅಷ್ಟೇ ನೋಡುವುದಕ್ಕೂ ಸುಂದರವಾಗಿದ್ದನು.

# ಹನ್ನೆರಡನೆಯ ಅಧ್ಯಾಯ

## ಪ್ರಥಮ ಪಾದ

## ಶ್ರೀರಾಮಕೃಷ್ಣರು ಶ್ಯಾಮ್‌ಪುಕುರದಲ್ಲಿ

**1. ಶ್ಯಾಮಪುಕುರ ಮನೆಯ ವರ್ಣನೆ 2. ಡಾ. ಮಹೇಂದ್ರಲಾಲ ಸರ್ಕಾರನ ಚಿಕಿತ್ಸೆ 3. ಪಥ್ಯ ಮತ್ತು ಸೇವೆಯ ವ್ಯವಸ್ಥೆಯ ಬಗ್ಗೆ ಪರಾಮರ್ಶೆ 4. ಅತ್ಯಂತ ಲಜ್ಜಾಸ್ವಭಾವದ ಶ್ರೀಮಾತೆಯವರನ್ನು ಶ್ಯಾಮಪುಕುರಕ್ಕೆ ಕರೆದುಕೊಂಡು ಬರುವ ಯೋಜನೆ 5. ಪರಿಸ್ಥಿತಿಗನುಗುಣವಾಗಿ ಹೊಂದಿಕೊಳ್ಳುವ ಅವರ ಸ್ವಭಾವ 6. ಡಕಾಯಿತರಿಗೆ ಪ್ರಸಿದ್ಧವಾದ ತೇಲೊಭೇಲೊ ಪ್ರದೇಶ 7. ಕಾಮಾರಪುಕುರದಿಂದ ದಕ್ಷಿಣೇಶ್ವರಕ್ಕೆ ಬರುವಾಗ ಶ್ರೀಮಾತೆಯವರು ಈ ಡಕಾಯಿತರನ್ನು ಸಂಧಿಸಿದುದು 8. ಡಕಾಯಿತ ಮತ್ತು ಆತನ ಪತ್ನಿ ಶ್ರೀಮಾತೆಯವರನ್ನು ಪ್ರೀತಿಯಿಂದ ನೋಡಿಕೊಂಡುದು 9. ಶ್ರೀಮಾತೆಯವರು ತಾರಕೇಶ್ವರಕ್ಕೆ ಬಂದು ಡಕಾಯಿತ ದಂಪತಿಗಳಿಂದ ಬೀಳ್ಕೊಂಡುದು 10. ಶ್ರೀಮಾತೆಯವರು ಶ್ಯಾಮಪುಕುರ ಮನೆಯಲ್ಲಿ ಹೇಗೆ ವಾಸಿಸಿದರು 11. ಶ್ರೀರಾಮಕೃಷ್ಣರ ಸೇವೆಯಲ್ಲಿ ನಿರತರಾದ ಬಾಲಕ ಭಕ್ತರು**

1. ಶ್ರೀರಾಮಕೃಷ್ಣರಿಗಾಗಿ ಬಾಡಿಗೆಗೆ ತೆಗೆದುಕೊಂಡ ಮನೆಯು ಶ್ಯಾಮ್ ಪುಕುರ್ ರಸ್ತೆಯ ಉತ್ತರ ಭಾಗದಲ್ಲಿ ಇದೆ. ಅದು ಪೂರ್ವ ಪಶ್ಚಿಮವಾಗಿ ಚಾಚಿಕೊಂಡಿದೆ. ಉತ್ತರ ಭಾಗದಿಂದ ಮನೆಯನ್ನು ಪ್ರವೇಶಿಸಿದ ಕೂಡಲೆ ಎಡ ಮತ್ತು ಬಲ ಭಾಗಗಳಲ್ಲಿ ಒಂದು ನೆಲಗಟ್ಟು ಮತ್ತು ಕುಳಿತುಕೊಳ್ಳುವುದಕ್ಕೆ ಕಡಿದಾದ ಜಗುಲಿ ಇವೆ. ಕೆಲವು ಹೆಜ್ಜೆ ಮುಂದೆ ಹೋದರೆ ಬಲಭಾಗಕ್ಕೆ ಮೊದಲ ಮಹಡಿಗೆ ಹೋಗುವುದಕ್ಕೆ ಮೆಟ್ಟಲುಗಳಿವೆ. ಮುಂದುಗಡೆ ಅಂಗಳ, ಅದರ ಪೂರ್ವ ಭಾಗಕ್ಕೆ ಎರಡು ಮೂರು ಚಿಕ್ಕ ಕೊಠಡಿಗಳು. ಮೆಟ್ಟಲು ಹತ್ತಿ ಮೇಲೆ ಹೋದ ಮೇಲೆ ಬಲಭಾಗಕ್ಕೆ ದಕ್ಷಿಣೋತ್ತರವಾಗಿ ಚಾಚಿಕೊಂಡಿರುವ ಒಂದು ಉದ್ದನೆಯ ಕೊಠಡಿ ಕಾಣಿಸುತ್ತದೆ. ಅದು ಸಂದರ್ಶಕರು ಕುಳಿತುಕೊಳ್ಳುವ ಜಾಗ. ಎಡಗಡೆಗೆ ಪೂರ್ವ ಪಶ್ಚಿಮಕ್ಕೆ ಚಾಚಿಕೊಂಡಿದ್ದ ಕೊಠಡಿಗಳಿಗೆ ಹೋಗಲು ಒಂದು ಆವಾರವಿದೆ. ಈ ಆವಾರದಲ್ಲಿಯೆ ಮೊದಲು ಪಡಸಾಲೆಯ ಬಾಗಿಲು ಸಿಕ್ಕುವುದು. ಶ್ರೀರಾಮಕೃಷ್ಣರು ಇದ್ದ ಕೊಠಡಿಯು ಇದೆ. ಅದರ ಉತ್ತರ ಮತ್ತು ದಕ್ಷಿಣಕ್ಕೆ ಎರಡು ವರಾಂಡಗಳಿವೆ. ಉತ್ತರದ ವರಾಂಡ ಹೆಚ್ಚು ಅಗಲವಾಗಿದ್ದು, ಅದರ ಪಶ್ಚಿಮಕ್ಕೆ ಎರಡು ಕೋಣೆಗಳಿವೆ. ಅದರಲ್ಲಿ ಒಂದು ಕೋಣೆಯಲ್ಲಿ ಭಕ್ತರು ರಾತ್ರಿ ನಿದ್ರಿಸುತ್ತಿದ್ದರು. ಮತ್ತೊಂದರಲ್ಲಿ ಶ್ರೀಮಾತೆಯವರಿರುತ್ತಿದ್ದರು ಕೊಠಡಿಯ ಪಶ್ಚಿಮ ಭಾಗಕ್ಕೆ ಒಂದು ಚಿಕ್ಕ ವರಾಂಡವಿದೆ. ಅಲ್ಲಿ ಎಲ್ಲರೂ ಕುಳಿತುಕೊಳ್ಳುತ್ತಿದ್ದರು. ಶ್ರೀರಾಮಕೃಷ್ಣರ ಕೊಠಡಿಯ ಪೂರ್ವದಿಕ್ಕಿನ ಆವಾರದ ತುದಿಯಲ್ಲಿ ಮೇಲ್ಛಾವಣಿಗೆ ಹೋಗುವು

ದಕ್ಕೆ ಮೆಟ್ಟಿಲುಗಳಿವೆ. ಛಾವಣಿಗೆ ಪ್ರವೇಶಿಸುವ ಬಾಗಿಲಿನ ಪಕ್ಕದಲ್ಲಿ ಒಂದು ಚಿಕ್ಕ ಗುಡಿಸಲು ಇದೆ. ಶ್ರೀಮಾತೆಯವರು ಹಗಲೆಲ್ಲ ಅಲ್ಲಿ ತಂಗಿದ್ದು ಶ್ರೀರಾಮಕೃಷ್ಣರ ಆಹಾರದ ವ್ಯವಸ್ಥೆ ಮಾಡುತ್ತಿದ್ದರು. ಶ್ರೀರಾಮಕೃಷ್ಣರು ಈ ಮನೆಗೆ ಬಲರಾಮನ ಮನೆಯಿಂದ ೧೮೮೫ರ ಸೆಪ್ಟೆಂಬರ್ ಪ್ರಾರಂಭದಲ್ಲಿ ಬಂದರು. ಅವರು ಅಲ್ಲಿ ಮೂರು ತಿಂಗಳಿಗೂ ಜಾಸ್ತಿ ಇದ್ದರು. ಅನಂತರ ಕಾಶೀಪುರ್ ತೋಟದ ಮನೆಗೆ ಹೋದರು.

2. ಶ್ರೀರಾಮಕೃಷ್ಣರು ಶಾಮ್‌ಪುಕುರ್ ಮನೆಗೆ ಬಂದ ಕೆಲವು ದಿನಗಳ ನಂತರ ಮೊದಲಿನ ನಿರ್ಧಾರದಂತೆ ಭಕ್ತರು ಮಹೇಂದ್ರಲಾಲ್ ಸರ್ಕಾರನನ್ನು ಚಿಕಿತ್ಸೆಗಾಗಿ ಕರೆದುಕೊಂಡು ಬಂದರು. ಮಥುರ ಬಾಬುವು ಬದುಕಿರುವಾಗ ಅವನ ಕುಟುಂಬದವರ ಚಿಕಿತ್ಸೆಗಾಗಿ ಡಾಕ್ಟರ್ ಕೆಲವು ಬಾರಿ ದಕ್ಷಿಣೇಶ್ವರಕ್ಕೆ ಬಂದಿದ್ದನು. ಆದ್ದರಿಂದ ಶ್ರೀರಾಮಕೃಷ್ಣರು ಅವನಿಗೆ ಸಂಪೂರ್ಣ ಅಪರಿಚಿತರಲ್ಲ. ಆದರೆ ಅದು ಬಹಳ ಹಿಂದಿನ ವಿಷಯ. ಈ ಪ್ರಸಿದ್ಧ ಡಾಕ್ಟರನ್ನು ಅವರು ಮರೆತು ಬಿಟ್ಟಿರಬಹುದು. ಭಕ್ತರು ಅವರ ಹೆಸರನ್ನು ಸೂಚಿಸದೆ ಅವನನ್ನು ಕರೆದುಕೊಂಡು ಬಂದರು. ಆದರೆ ಶ್ರೀರಾಮಕೃಷ್ಣರನ್ನು ನೋಡಿದ ಕೂಡಲೆ ಅವನಿಗೆ ಅವರ ಪರಿಚಯವಾಯಿತು. ಬಹಳ ಎಚ್ಚರಿಕೆಯಿಂದ ಅವರನ್ನು ಪರೀಕ್ಷಿಸಿ ರೋಗವನ್ನು ಗುರುತಿಸಿ ಔಷಧವನ್ನೂ ಪಥ್ಯವನ್ನೂ ಸೂಚಿಸಿದನು. ಅನಂತರ ಸ್ವಲ್ಪ ಹೊತ್ತು ಅವರೊಡನೆ ಧಾರ್ಮಿಕ ವಿಷಯವಾಗಿ ಮಾತನಾಡುತ್ತಾ ಇದ್ದು ಅವರಿಂದ ಬೀಳ್ಕೊಂಡು ಹೊರಟು ಹೋದನು. ನಮಗೆ ನೆನಪಿರುವಂತೆ ಶ್ರೀರಾಮಕೃಷ್ಣರ ದೈಹಿಕ ಸ್ಥಿತಿಯ ಬಗ್ಗೆ ಪ್ರತಿದಿನ ತನಗೆ ವರದಿ ಒಪ್ಪಿಸಬೇಕೆಂದು ಅವನು ಅಂದು ಭಕ್ತರಿಗೆ ಹೇಳಿ ಹೋದನು. ಅವನು ಚಿಕಿತ್ಸೆಯ ಶುಲ್ಕವನ್ನು ಯಾವಾಗಲಿನಂತೆ ಭಕ್ತರಿಂದ ಸ್ವೀಕರಿಸಿದನು. ಆದರೆ ಮರುದಿನ ಅವನು ಶ್ರೀರಾಮಕೃಷ್ಣರನ್ನು ನೋಡಲು ಬಂದಾಗ ಭಕ್ತರೇ ಅವರನ್ನು ಕಲ್ಕತ್ತೆಗೆ ಕರೆದುಕೊಂಡು ಬಂದು ಅವರ ಖರ್ಚನ್ನೆಲ್ಲ ಭರಿಸುತ್ತಿರುವರೆಂದು ಮಾತಿನ ಸಂದರ್ಭದಲ್ಲಿ ಅವನಿಗೆ ತಿಳಿದು ಬಂತು. ಅವರ ಗುರುಭಕ್ತಿಯನ್ನು ನೋಡಿ ಅವನಿಗೆ ಸಂತೋಷವಾಗಿ ಇನ್ನು ಮುಂದೆ ಶುಲ್ಕ ಸ್ವೀಕರಿಸುವುದಿಲ್ಲವೆಂದು ಹೇಳಿದನು. ಅವನು ಹೇಳಿದ : "ಹಣ ತೆಗೆದುಕೊಳ್ಳದೆ ಅವರಿಗೆ ಚಿಕಿತ್ಸೆ ಮಾಡುತ್ತೇನೆ, ನಿಮ್ಮ ಸತ್ಕಾರ್ಯದಲ್ಲಿ ನಾನೂ ಯಥಾಶಕ್ತಿ ಭಾಗವಹಿಸುತ್ತೇನೆ."

3. ತುಂಬಾ ಅನುಭವಸ್ಥ ವೈದ್ಯನ ಸಹಾಯ ದೊರೆತರೂ ಭಕ್ತರ ಕಾತರತೆ ಕಡಮೆಯಾಗಲಿಲ್ಲ. ಕೆಲವು ದಿನಗಳ ನಂತರ ಅವರಿಗೆ ತಿಳಿದು ಬಂತು ಹಗಲು ರಾತ್ರೆ ಶ್ರೀರಾಮಕೃಷ್ಣರ ಸೇವೆ ಮಾಡಲು ಅವರ ಪಥ್ಯದ ಆಹಾರವನ್ನು ತಯಾರಿಸಲು ಕೆಲವರನ್ನು ನಿಯಮಿಸಬೇಕಾಗುವುದೆಂದು. ಈ ಕೊರತೆಯನ್ನು ಹಣದಿಂದಲೆ ನೀಗಿಸುವಂತಿರಲಿಲ್ಲ. ಅವರಿಗೆ ಆಹಾರವನ್ನು ತಯಾರಿಸಲು ಶ್ರೀಮಾತೆಯವರನ್ನು ದಕ್ಷಿಣೇಶ್ವರದಿಂದ ಕರೆದುಕೊಂಡು ಬರುವುದೆಂದೂ ಮತ್ತು ಹಗಲು ರಾತ್ರೆ ಅವರ ಸೇವೆಯ ಭಾರವನ್ನು ಬಾಲಕ ಭಕ್ತರಿಗೆ ವಹಿಸುವುದೆಂದೂ ಭಕ್ತರು ನಿರ್ಧರಿಸಿದರು. ಆದರೆ ಅದಕ್ಕೂ ಒಂದು ದೊಡ್ಡ ಅಡಚಣೆ ಇತ್ತು. ಆ ಮನೆಯಲ್ಲಿ ಮಹಿಳೆಯರಿಗಾಗಿ ಪ್ರತ್ಯೇಕ ಸ್ಥಳವಿಲ್ಲದೇ

ಇದ್ದುದರಿಂದ ಶ್ರೀಮಾತೆಯವರು ಅಲ್ಲಿ ಒಬ್ಬರೇ ಹೇಗಿದ್ದಾರು ಎಂಬುದು ದೊಡ್ಡ ಚಿಂತೆಯಾಯಿತು ಭಕ್ತರಿಗೆ. ಅಷ್ಟೇ ಅಲ್ಲದೆ ಬಾಲಕ ಭಕ್ತರು ಪ್ರತಿ ದಿನ ರಾತ್ರಿ ಅಲ್ಲಿ ಬಂದಿದ್ದರೆ ಅವರ ಮನೆಯವರು ಆಕ್ಷೇಪಿಸಬಹುದು.

4. ಶ್ರೀಮಾತೆ ಅವರು ತೀವ್ರ ಲಜ್ಜಾಸ್ವಭಾವದವರೆಂದು ಭಕ್ತರೆಲ್ಲರಿಗೂ ತಿಳಿದಿತ್ತು. ಆದ್ದರಿಂದ ಅವರು ಬರುವ ವಿಷಯದಲ್ಲಿ ಭಕ್ತರು ತುಂಬ ಸಂದೇಹಪಟ್ಟಿದುದರಲ್ಲಿ ಆಶ್ಚರ್ಯವೇನಿಲ್ಲ. ದಕ್ಷಿಣೇಶ್ವರದ ನಹಬತ್ತಿನಲ್ಲಿ ಇದ್ದು ಇಷ್ಟು ಕಾಲ ಶ್ರೀರಾಮಕೃಷ್ಣರ ನಿತ್ಯಸೇವೆಯಲ್ಲಿ ತೊಡಗಿದ್ದರೂ ಇಬ್ಬರು ಮೂವರು ಜನ ಬಾಲಕ ಭಕ್ತರನ್ನು ಬಿಟ್ಟರೆ ಮತ್ತಾರೂ ಅವರ ಶ್ರೀಪಾದವನ್ನೂ ಕಂಡಿರಲಿಲ್ಲ, ಅವರ ಧ್ವನಿಯನ್ನೂ ಕೂಡ ಕೇಳಿರಲಿಲ್ಲ. ಆ ಮೂರು ನಾಲ್ಕು ಹುಡುಗರನ್ನು ಮಾತ್ರ ಶ್ರೀರಾಮಕೃಷ್ಣರೆ ಅವರಿಗೆ ಪರಿಚಯ ಮಾಡಿಸಿದ್ದರು. ಆ ಸಣ್ಣ ಜಾಗದಲ್ಲಿಯೆ ಅವರು ಇಡೀ ದಿನ ಇರುತ್ತಿದ್ದರು. ಅಲ್ಲಿಯೆ ಶ್ರೀರಾಮಕೃಷ್ಣರಿಗೆ ಮತ್ತು ಭಕ್ತರಿಗೆ ಅಡಿಗೆ ನಡೆಯುತ್ತಿತ್ತು. ಇಷ್ಟಾದರೂ ಅಲ್ಲಿ ಒಬ್ಬರು ಈ ರೀತಿ ಕಾರ್ಯನಿರತರಾಗಿದ್ದಾರೆ ಎಂಬುದು ಯಾರಿಗೂ ತಿಳಿಯುತ್ತಲೇ ಇರಲಿಲ್ಲ. ಬೆಳಗ್ಗೆ ಮೂರು ಗಂಟೆಗೆ ಇತರರು ಏಳುವುದಕ್ಕೆ ಮುಂಚೆಯೆ ಎದ್ದು ಸ್ನಾನಾದಿಗಳನ್ನು ಮುಗಿಸಿ ತಮ್ಮ ಕೊಠಡಿಯೊಳಗೆ ಹೋಗಿಬಿಡುತ್ತಿದ್ದರು. ಇಡೀ ದಿನ ಅವರು ಮತ್ತೆ ಹೊರಗೆ ಬರುತ್ತಿರಲಿಲ್ಲ. ನಿಶ್ಶಬ್ದವಾಗಿ ಅದ್ಭುತ ಸಹನೆಯಿಂದ ಎಲ್ಲಾ ಕೆಲಸಗಳನ್ನು ನೆರವೇರಿಸಿ ಪೂಜೆ, ಜಪ ಧ್ಯಾನಾದಿಗಳಲ್ಲಿ ತೊಡಗಿರುತ್ತಿದ್ದರು. ಒಂದು ದಿನ ಕತ್ತಲೆಯಲ್ಲಿ ಗಂಗಾನದಿಗೆ ಹೋಗಿದ್ದಾಗ ಮೆಟ್ಟಿಲಮೇಲೆ ಮಲಗಿದ್ದ ಒಂದು ದೊಡ್ಡ ಮೊಸಳೆಯ ಮೇಲೆ ಕಾಲಿಡುವುದರಲ್ಲಿದ್ದರು. ಅದು ಕೂಡಲೆ ನೀರಿಗೆ ಹಾರಿ ಮಾಯವಾಯಿತು. ಅಲ್ಲಿಂದ ಅವರು ಮುಂದೆ ಎಂದೂ ದೀಪವಿಲ್ಲದೆ ನದಿಗೆ ಹೋಗುತ್ತಿರಲಿಲ್ಲ.

ಇಷ್ಟುಕಾಲವೂ ಅವರು ಅಲ್ಲಿ ಯಾರ ಕಣ್ಣಿಗೂ ಬೀಳದೆ ವಾಸಿಸಿದರು. ಈಗ ಒಮ್ಮೆಯೆ ಆ ಸಂಕೋಚ, ಲಜ್ಜೆ ಎಲ್ಲವನ್ನೂ ಬಿಟ್ಟು ಮನೆಯಲ್ಲಿ ಗಂಡಸರ ಮಧ್ಯೆ ಹೇಗೆ ಇರಬಲ್ಲರು ? ಇದನ್ನು ಯೋಚಿಸಿ ಭಕ್ತರಿಗೆ ಯಾವೊಂದೂ ನಿರ್ಧಾರಕ್ಕೆ ಬರಲಾಗಲಿಲ್ಲ. ಈ ನಿರ್ಧಾರವನ್ನು ಶ್ರೀರಾಮಕೃಷ್ಣರಿಗೆ ವಹಿಸಿಬಿಟ್ಟರು. ಶ್ರೀರಾಮಕೃಷ್ಣರು ಶ್ರೀಮಾತೆಯವರ ಸ್ವಭಾವವನ್ನು ಸ್ಮರಿಸಿಕೊಂಡು ಹೇಳಿದರು : "ಅವಳಿಗೆ ಇಲ್ಲಿ ಬಂದು ಇರಲಾದೀತೆ ? ಏನೇ ಆಗಲಿ ವಿಚಾರಿಸಿನೋಡಿ, ಇಲ್ಲಿಯ ಪರಿಸ್ಥಿತಿಯನ್ನೆಲ್ಲ ಸರಿಯಾಗಿ ತಿಳಿದುಕೊಂಡು ಅವಳು ಬರಲು ಇಷ್ಟಪಟ್ಟರೆ ಬರಲಿ." ಶ್ರೀಮಾತೆಯವರನ್ನು ವಿಚಾರಿಸಿಕೊಂಡು ಬರಲು ದಕ್ಷಿಣೇಶ್ವರಕ್ಕೆ ಒಬ್ಬನನ್ನು ಕಳುಹಿಸಿದರು.

5. 'ಯಾವಾಗ ಹೇಗೊ ಆವಾಗ ಹಾಗೆ, ಎಲ್ಲಿ ಹೇಗೊ ಅಲ್ಲಿ ಹಾಗೆ, ಯಾರು ಹೇಗೊ, ಅವರಿಗೆ ಹಾಗೆ'–ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಹೀಗೆ ದೇಶ, ಕಾಲ, ಪಾತ್ರಭೇದಗಳನ್ನು ವಿವೇಚಿಸಿ ಅದಕ್ಕನುಸಾರವಾಗಿ ಸಂಸಾರದ ಎಲ್ಲಾ ಕಾರ್ಯಗಳನ್ನು ಅನುಷ್ಠಾನ ಮಾಡಬೇಕು. ಹಾಗೆ ಮಾಡದಿದ್ದರೆ ಶಾಂತಿಯಿಂದ ಇರಲಾಗುವು

ದಿಲ್ಲ ಅಥವಾ ನಮ್ಮ ಅಭೀಷ್ಟ ಗುರಿಯನ್ನೂ ಮುಟ್ಟಲಾಗುವುದಿಲ್ಲ. ಸಂಕೋಚ ಮತ್ತು ಲಜ್ಜೆಯೆಂಬ ದುರ್ಭೇದ್ಯವಾದ ಆವರಣದ ಹಿಂದೆ ಅವರು ಯಾವಾಗಲೂ ಇರುತ್ತಿದ್ದರೂ ಶ್ರೀಮಾತೆಯವರು ಈ ಮೇಲಿನ ಉಪದೇಶದಂತೆ ತಮ್ಮ ಸ್ವಂತ ಜೀವನವನ್ನು ರೂಪಿಸಿಕೊಳ್ಳುತ್ತಿದ್ದರು. ಅನಿವಾರ್ಯ ಪರಿಸ್ಥಿತಿ ಬಂದರೆ ತಮ್ಮ ಸಂಕೋಚ ಪ್ರವೃತ್ತಿಯನ್ನೂ ಮತ್ತು ಹಳೆಯ ಅಭ್ಯಾಸಗಳ ಆವರಣಗಳನ್ನೂ ಅತ್ತ ಸರಿಸಿ ಪರಿಸ್ಥಿತಿಗನುಗುಣವಾಗಿ ವರ್ತಿಸುವ ಸಾಮರ್ಥ್ಯ ಅವರಿಗೆ ಎಷ್ಟರ ಮಟ್ಟಿಗಿತ್ತು ಎಂಬುದು ಈ ಕೆಳಗಿನ ಘಟನೆಯಿಂದ ತಿಳಿದುಬರುತ್ತದೆ.

6. ಹೆಚ್ಚು ಖರ್ಚು ಮಾಡಲು ಇಷ್ಟಪಡದೆ ಮತ್ತು ಹಣದ ಅಭಾವವೂ ಇದ್ದುದರಿಂದ ಶ್ರೀಮಾತೆಯವರು ಅನೇಕ ಬಾರಿ ಜಯರಾಮ್‌ಬಾಟಿ ಮತ್ತು ಕಾಮಾರ್‌ಪುಕುರ್‌ದಿಂದ ನಡೆದುಕೊಂಡೇ ಬರುತ್ತಿದ್ದರು. ಹೀಗೆ ಬರುವಾಗ ಪಥಿಕರು ಮೊದಲು ಆರಂಬಾಗ್‌ಗೆ ಬಂದು ಹತ್ತು ಮೈಲಿದೂರದ ತೇಲೊಭೇಲೊ ಎಂಬ ಕ್ಷೇತ್ರವನ್ನು ದಾಟಿ ತಾರಕೇಶ್ವರಕ್ಕೆ ಬರಬೇಕಿತ್ತು. ಅಲ್ಲಿಂದ ಮುಂದೆ ಕೈಕೊಲಾ ಎಂಬ ಕ್ಷೇತ್ರವನ್ನು ದಾಟಿ ವೈದ್ಯವಾಟಿಯನ್ನು ಸೇರುತ್ತಿದ್ದರು. ಅಲ್ಲಿ ಗಂಗಾನದಿಯನ್ನು ದಾಟುತ್ತಿದ್ದರು. ಆ ಸಮಯದಲ್ಲಿ ಈ ಎರಡೂ ಕ್ಷೇತ್ರಗಳಲ್ಲಿ ಡಕಾಯಿತರ ಗುಂಪುಗಳು ಇರುತ್ತಿದ್ದುವು. ಅನೇಕ ಜನ ಪಥಿಕರು ಇವರ ಕೈಯಿಂದ ಪ್ರಾಣ ಕಳೆದುಕೊಂಡಿರುವರು, ಬೆಳಿಗ್ಗೆ ಮಧ್ಯಾಹ್ನ ಸಂಜೆಯೂ ಕೂಡ ಡಕಾಯಿತರು ಆಕ್ರಮಣ ಮಾಡುತ್ತಿದ್ದರು. ಇಂದಿಗೂ ಕೂಡ ತೇಲೋ ಮತ್ತು ಭೇಲೊ ಹಳ್ಳಿಗಳ ಸಮೀಪದಲ್ಲಿ ಕಾಳಿಯ ಭೀಭತ್ಸ ಮೂರ್ತಿಯನ್ನು ನೋಡಬಹುದು. ಜನರು ಅವಳನ್ನು ಡಕಾಯಿತರ ಕಾಳಿ ಎಂದೇ ಕರೆಯುತ್ತಾರೆ. ಡಕಾಯಿತರು ಅವಳನ್ನು ಪೂಜಿಸಿ ಜನರನ್ನು ಕೊಲ್ಲುವುದೇ ಮುಂತಾದ ಕ್ರೂರ ಕೃತ್ಯಗಳಲ್ಲಿ ತೊಡಗುತ್ತಿದ್ದರು. ಆದ್ದರಿಂದ ಪ್ರಯಾಣಿಕರು ಯಾವಾಗಲೂ ಈ ಜಾಗಗಳಲ್ಲಿ ಗುಂಪುಗುಂಪಾಗಿಯೆ ಹೋಗುತ್ತಿದ್ದರು.

7, ಒಮ್ಮೆ ಶ್ರೀಮಾತೆಯವರು ಕಾಮಾರ್‌ಪುಕುರದಿಂದ ದಕ್ಷಿಣೇಶ್ವರಕ್ಕೆ ನಡೆದುಕೊಂಡು ಬರುತ್ತಿದ್ದರು. ಅವರ ಜೊತೆ ಶ್ರೀರಾಮಕೃಷ್ಣರ ಅಣ್ಣ ರಾಮೇಶ್ವರನ ಮಗಳು ಮತ್ತು ಕಿರಿಯ ಮಗ ಹಾಗೂ ಇನ್ನೂ ಕೆಲವು ಮಂದಿ ಪುರುಷರು ಮಹಿಳೆಯರು ಇದ್ದರು. ಅವರು ಮೊದಲು ಆರಂಭಾಗನ್ನು ಸೇರಿದರು. ಸಂಜೆಗೆ ಮುಂಚೆ ತೇಲೊ ಭೇಲೊ ಕ್ಷೇತ್ರವನ್ನು ದಾಟಿ ಹೋಗಬಹುದೆಂದು ಅವರು ಭಾವಿಸಿ ಅಲ್ಲಿ ರಾತ್ರಿ ಕಳೆಯದೆ ಮುಂದುವರಿದರು. ಶ್ರೀಮಾತೆಯವರಿಗೆ ತುಂಬಾ ದಣಿವಾಗಿತ್ತು. ಆದರೂ ಅದನ್ನು ಯಾರಿಗೂ ತಿಳಿಸದೆ ಎಲ್ಲರೊಡನೆ ಪ್ರಯಾಣ ಬೆಳೆಸಿದರು. ಆದರೆ ನಾಲ್ಕು ಮೈಲಿ ಹೋಗುವುದರೊಳಗೆ ಅವರು ತಮ್ಮ ಸಂಗಡಿಗರಿಂದ ಹಿಂದುಳಿಯತೊಡಗಿದರು. ಸಂಗಡಿಗರು ಅವರಿಗಾಗಿ ಸ್ವಲ್ಪ ಕಾದು ಅವರು ಬಂದ ಮೇಲೆ ಬೇಗ ಬೇಗ ನಡೆಯಬೇಕೆಂದು ಹೇಳಿ ಮತ್ತೆ ಮುಂದುವರಿಯುತ್ತಿದ್ದರು. ಕ್ಷೇತ್ರದ ಮಧ್ಯಭಾಗಕ್ಕೆ ಬರುವಹೊತ್ತಿಗೆ ಶ್ರೀಮಾತೆಯವರು ಬಹಳ ಹಿಂದೆ ಉಳಿದಿದ್ದರು. ಸಂಗಡಿಗರು ಅವರು ಬರುವವರೆಗೂ

ಕಾದಿದ್ದು ಅವರಿಗೆ ಹೇಳಿದರು, "ರಾತ್ರಿಗೆ ಮುಂಚೆ ಈ ಕ್ಷೇತ್ರವನ್ನು ದಾಟಲಾಗುವುದಿಲ್ಲ. ಹೀಗೆಯೇ ನಾವು ಮುಂದುವರಿದರೆ ಡಕಾಯಿತರ ಕೈಗೆ ಸಿಕ್ಕಬೇಕಾಗುತ್ತದೆ." ತಮ್ಮಿಂದಾಗಿ ಅವರಿಗೆಲ್ಲ ತೊಂದರೆಯಾಗುತ್ತಿದೆಯಲ್ಲ ಎಂದು ಭಾವಿಸಿ ಅವರು ಹೇಳಿದರು : "ನೀವು ನನಗಾಗಿ ಕಾಯುವುದು ಬೇಡ. ನೀವು ನೇರವಾಗಿ ತಾರಕೇಶ್ವರಕ್ಕೆ ಹೋಗಿ ವಿಶ್ರಾಂತಿಯನ್ನು ಪಡೆಯಿರಿ. ನಾನು ಆದಷ್ಟು ಬೇಗ ಬಂದು ನಿಮ್ಮನ್ನು ಸೇರುತ್ತೇನೆ." ಆಗಲೆ ಸೂರ್ಯ ಮುಳುಗುತ್ತಿರುವುದನ್ನು ನೋಡಿ ಸಂಗಡಿಗರು ಬೇಗ ಬೇಗ ಹೆಜ್ಜೆ ಹಾಕುತ್ತಾ ಮುಂದುವರಿದರು. ಕೂಡಲೆ ಅವರು ದೃಷ್ಟಿಗೆ ಅಗೋಚರರಾದರು.

ಶ್ರೀಮಾತೆಯವರು ಆದಷ್ಟು ಬೇಗ ನಡೆಯತೊಡಗಿದರು. ಆದರೆ ಅವರಿಗೆ ತುಂಬ ಬಳಲಿಕೆಯಾಗಿತ್ತು, ಭೀಷಣ ಪ್ರದೇಶವನ್ನು ದಾಟುವುದಕ್ಕೆ ಮುಂಚೆಯೇ ಕತ್ತಲೆಯಾಗಿ ಬಿಟ್ಟಿತು. ಏನು ಮಾಡುವುದೆಂದು ತಿಳಿಯದೆ ತೀವ್ರ ಚಿಂತೆಗೊಳಗಾದರು. ಆಗ ಕಡು ಕಪ್ಪು ವರ್ಣದ ಬೃಹದಾಕಾರದ ವ್ಯಕ್ತಿಯೊಬ್ಬನು ಹೆಗಲ ಮೇಲೆ ಒಂದು ದೊಡ್ಡ ದೊಣ್ಣೆಯನ್ನು ಇಟ್ಟುಕೊಂಡು ಶ್ರೀಮಾತೆಯವರನ್ನೆ ದಿಟ್ಟಿಸಿ ನೋಡುತ್ತಾ ದಾಪುಗಾಲು ಹಾಕುತ್ತಾ ಮುಂದೆ ಬರುತ್ತಿದ್ದನು. ಅವನ ಹಿಂದೆಯೆ ಒಬ್ಬಳು ಮಹಿಳೆಯೂ ಬರುತ್ತಿದ್ದಳು. ಆಕೆ ಅವನ ಪತ್ನಿ ಆಗಿದ್ದಿರಬಹುದು. ಓಡುವುದರಿಂದಾಗಲಿ, ಕಿರಿಚಿಕೊಳ್ಳುವುದರಿಂದಾಗಲಿ ಯಾವ ಪ್ರಯೋಜನವು ಇಲ್ಲವೆಂದು ಭಾವಿಸಿ ಶ್ರೀಮಾತೆಯವರು ಸ್ಥಿರವಾಗಿ ನಿಂತುಕೊಂಡು ಅವರು ಬರುವುದನ್ನೆ ನಿರೀಕ್ಷಿಸುತ್ತಿದ್ದರು.

ಕೆಲವೇ ಕ್ಷಣಗಳಲ್ಲಿ ಆ ಭೀಷಣ ವ್ಯಕ್ತಿ ಹತ್ತಿರ ಬಂದ. ಅತ್ಯಂತ ಕರ್ಕಶ ಧ್ವನಿಯಲ್ಲಿ 'ಯಾರು ನೀನು ? ಈ ಅವೇಳೆಯಲ್ಲಿ ಇಲ್ಲೇಕೆ ನಿಂತುಕೊಂಡಿರುವೆ ?' ಎಂದು ಗುಡುಗುಡಿಸಿದ. ಶ್ರೀಮಾತೆಯವರು ಅವನನ್ನು ಪ್ರಸನ್ನಗೊಳಿಸುವ ಉದ್ದೇಶದಿಂದ ಅವನಿಗೆ ಶರಣಾಗತರಾಗಿ ಹೇಳಿದರು : "ತಂದೆ, ನನ್ನ ಸಂಗಡಿಗರು ನನ್ನನ್ನು ಬಿಟ್ಟುಹೋಗಿಬಿಟ್ಟಿದ್ದಾರೆ. ನಾನು ದಾರಿ ತಪ್ಪಿರಬೇಕು. ನೀನು ನನ್ನನ್ನು ಕರೆದುಕೊಂಡು ಹೋಗಿ ಅವರ ಜೊತೆ ಬಿಡುತ್ತೀಯಾ ? ನಿನ್ನ ಅಳಿಯ ದಕ್ಷಿಣೇಶ್ವರದ ಕಾಳಿಮಂದಿರದಲ್ಲಿ ಇದ್ದಾರೆ. ನಾನು ಅವರೆಡೆಗೆ ಹೋಗುತ್ತಿದ್ದೇನೆ. ನೀನು ನನ್ನನ್ನು ಅವರೆಡೆಗೆ ಕರೆದುಕೊಂಡುಹೋಗಿ ಬಿಟ್ಟರೆ ಅವರು ನಿನ್ನನ್ನು ತುಂಬಾ ಆದರಿಸುತ್ತಾರೆ." ಹೀಗೆ ಹೇಳುತ್ತಿದ್ದಂತೆಯೆ ಹಿಂದೆ ಸೂಚಿಸಿದ ಎರಡನೆ ವ್ಯಕ್ತಿ ಅಲ್ಲಿಗೆ ಬಂದಳು. ಆಕೆಯನ್ನು ನೋಡಿದ ಕೂಡಲೆ ಶ್ರೀಮಾತೆಯವರಿಗೆ ತುಂಬಾ ಸಮಾಧಾನ ಉಂಟಾಯಿತು. ಅವಳ ಕೈಹಿಡಿದುಕೊಂಡು ಹೇಳಿದರು : "ಅಮ್ಮಾ, ನಾನು ನಿನ್ನ ಮಗಳು ಶಾರದಾ. ಸಂಗಡಿಗರೆಲ್ಲ ಬಿಟ್ಟುಹೋಗಿ ನಾನೀಗ ವಿಷಮ ಪರಿಸ್ಥಿತಿಯಲ್ಲಿದ್ದೇನೆ. ನನ್ನ ಸೌಭಾಗ್ಯದಿಂದ ಅಪ್ಪಾ ಮತ್ತು ನೀನು ಬಂದಿರಿ. ಇಲ್ಲದಿದ್ದರೆ ಏನಾಗುತ್ತಿತ್ತೊ, ಯಾರಿಗೆ ಗೊತ್ತು ?"

8. ಶ್ರೀಮಾತೆಯವರ ಈ ರೀತಿಯ ನಿಸ್ಸಂಕೋಚ ಸರಳ ವರ್ತನೆ, ಆ ವಿಶ್ವಾಸ, ಮಧುರ ನುಡಿಗಳಿಂದ ಆ ಡಕಾಯಿತ ಮತ್ತು ಅವನ ಪತ್ನಿಯ ಹೃದಯ ಕರಗಿ ಹೋಯಿತು. ಸಾಮಾಜಿಕ ಆಚಾರ, ಜಾತಿ ಎಲ್ಲಾ ವಿಚಾರಗಳನ್ನೂ ಮರೆತು ಶ್ರೀಮಾತೆ

ಯವರನ್ನು ತಮ್ಮ ಮಗಳೆಂದೇ ಪರಿಗಣಿಸಿ ಅವರಿಗೆ ಸಾಂತ್ವನವನ್ನು ನೀಡಿದರು. ಅವರು ತುಂಬ ದಣಿದಿರುವುದನ್ನು ನೋಡಿ ಅವರು ಪ್ರಯಾಣ ಮುಂದುವರಿಸುವುದು ಬೇಡ ವೆಂದು ತೇಲೊಭೇಲೊ ಗ್ರಾಮದ ಒಂದು ಚಿಕ್ಕ ಅಂಗಡಿಗೆ ಕರೆದುಕೊಂಡು ಹೋಗಿ ಅಲ್ಲಿ ಅವರಿಗೆ ರಾತ್ರಿ ಕಳೆಯುವುದಕ್ಕೆ ವ್ಯವಸ್ಥೆ ಮಾಡಿದರು. ಆ ಮಹಿಳೆಯು ತನ್ನ ಬಟ್ಟೆ ಮುಂತಾದುವುಗಳಿಂದ ಅವರಿಗೆ ಹಾಸಿಗೆ ಸಿದ್ಧಪಡಿಸಿದಳು. ಆ ಪುರುಷನು ಅಂಗಡಿ ಯಿಂದ ಮಂಡಕ್ಕಿ ಮುಂತಾದುವನ್ನು ಖರೀದಿಸಿ ಅವರಿಗೆ ಊಟ ಮಾಡಿಸಿದನು. ಹೀಗೆ ತಂದೆ ತಾಯಿಗಳಂತೆ ಅವರನ್ನು ಆದರಿಸಿ ನಿದ್ದೆಮಾಡಿಸಿದರು. ಇಡೀ ರಾತ್ರೆ ಅವರನ್ನು ರಕ್ಷಿಸುತ್ತ ಅಲ್ಲಿಯೆ ಇದ್ದರು. ಬೆಳಿಗ್ಗೆ ಅವರನ್ನು ತಾರಕೇಶ್ವರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಅಂಗಡಿಯಲ್ಲಿ ಅವರಿಗೆ ವಿಶ್ರಾಂತಿ ತೆಗೆದುಕೊಳ್ಳಲು ಹೇಳಿದರು. ಅನಂತರ ಆ ಮಹಿಳೆಯು ತನ್ನ ಪತಿಯನ್ನು ಉದ್ದೇಶಿಸಿ ಹೇಳಿದಳು : "ನನ್ನ ಮಗಳು ನೆನ್ನೆ ಏನೂ ತಿನ್ನಲಿಲ್ಲ. ತಾರಕೇಶ್ವರನಿಗೆ ಪೂಜೆ ಮಾಡಿಸಿ ಪೇಟೆಯಿಂದ ಮೀನು ತರಕಾರಿ ಕೊಂಡು ಕೊಂಡು ಬಾ. ಇವತ್ತು ಅವಳಿಗೆ ಒಳ್ಳೆ ಊಟ ಮಾಡಿಸಬೇಕು."

9. ಆ ಪುರುಷನು ಅತ್ತ ಹೊರಟು ಹೋಗಲು ಶ್ರೀಮಾತೆಯವರ ಸಂಗಡಿಗರು ಅವರನ್ನು ಹುಡುಕಿಕೊಂಡು ಅಲ್ಲಿಗೆ ಬಂದರು. ಅವರು ನಿರ್ವಿಘ್ನವಾಗಿ ಬಂದುದನ್ನು ನೋಡಿ ಸಂತೋಷಪಟ್ಟರು. ಆಗ ಶ್ರೀಮಾತೆಯವರು ರಾತ್ರೆ ತಮಗೆ ಆಶ್ರಯವನ್ನು ನೀಡಿದ ತಂದೆತಾಯಿಗಳನ್ನು ಪರಿಚಯ ಮಾಡಿಸಿ ಹೇಳಿದರು : "ಇವರು ಬಂದು ನನ್ನನ್ನು ರಕ್ಷಿಸದಿದ್ದರೆ ನನಗೆ ಏನಾಗುತ್ತಿತ್ತೊ ತಿಳಿಯದು." ಅನಂತರ ಪೂಜೆ, ಅಡಿಗೆ, ಊಟ ಎಲ್ಲ ಆದ ಮೇಲೆ ಸ್ವಲ್ಪಹೊತ್ತು ಅಲ್ಲಿಯೆ ವಿಶ್ರಾಂತಿಯನ್ನು ಪಡೆದು ಎಲ್ಲರೂ ವೈದ್ಯ ವಾಟಿಯ ಕಡೆಗೆ ಹೊರಟರು. ಶ್ರೀಮಾತೆಯವರು ಆ ಪುರುಷ ಮತ್ತು ಮಹಿಳೆಗೆ ತಮ್ಮ ಅಪಾರ ಕೃತಜ್ಞತೆಯನ್ನು ವ್ಯಕ್ತಪಡಿಸಿ ಬೀಳ್ಕೊಡಬೇಕೆಂದು ಪ್ರಾರ್ಥಿಸಿದರು. ಶ್ರೀ ಮಾತೆಯವರು ಹೇಳುತ್ತಾರೆ : "ಒಂದೇ ರಾತ್ರಿಯಲ್ಲಿ ನಮ್ಮಲ್ಲಿ ಎಂಥಾ ಒಂದು ಆತ್ಮೀ ಯತೆ ಉಂಟಾಯಿತೆಂದರೆ ನಾನು ಅಲ್ಲಿಂದ ಹೊರಡುವಾಗ ತುಂಬ ವ್ಯಾಕುಲತೆಯಿಂದ ಅತ್ತುಬಿಟ್ಟೆ. ಕೊನೆಯಲ್ಲಿ ಅವಕಾಶ ಮಾಡಿಕೊಂಡು ದಕ್ಷಿಣೇಶ್ವರಕ್ಕೆ ನನ್ನನ್ನು ನೋಡಲು ಬರಬೇಕೆಂದು ಅವರನ್ನು ಒಪ್ಪಿಸಿದಮೇಲೆ ಬಹಳಕಷ್ಟದಿಂದ ಅವರನ್ನು ಬಿಟ್ಟುಹೊರಟೆ, ಹೊರಟಮೇಲೂ ನಮ್ಮ ಹಿಂದೆಯೆ ಅವರು ತುಂಬ ದೂರ ಬಂದರು. ಆ ಮಹಿಳೆಯು ಪಕ್ಕದ ಹೊಲದಿಂದ ಸ್ವಲ್ಪ ಬಟಾಣಿಯನ್ನು ಕಿತ್ತು ನನ್ನ ಬಟ್ಟೆಯ ತುದಿಗೆ ಕಟ್ಟಿ ಅಳುತ್ತಾ ಹೇಳಿದಳು : 'ನೀನು ರಾತ್ರೆ ಮಂಡಕ್ಕಿ ತಿನ್ನುವಾಗ ಇದನ್ನು ಅದರ ಜೊತೆಗೆ ಸೇರಿಸಿಕೊ.' ನನಗೆ ಕೊಟ್ಟ ಮಾತನ್ನು ಅವರು ಉಳಿಸಿಕೊಂಡರು. ಅವರು ದಕ್ಷಿಣೇಶ್ವರಕ್ಕೆ ಸಿಹಿ ತಿಂಡಿಯೊಡನೆ ಕೆಲವು ಬಾರಿ ಬಂದಿದ್ದರು. ಶ್ರೀರಾಮಕೃಷ್ಣರೂ ಕೂಡ ನನ್ನಿಂದ ಎಲ್ಲಾ ವಿಷಯವನ್ನು ತಿಳಿದು ತುಂಬ ಆದರದಿಂದ ಅವರನ್ನು ಬರಮಾಡಿಕೊಂಡರು. ಅವ ರೊಡನೆ ಅಳಿಯನಂತೆಯೆ ವರ್ತಿಸಿದರು. ಈಗ ಅವನು ಸರಳ ಹೃದಯನೂ ಉತ್ತಮ ನಡತೆಯವನೂ ಆಗಿದ್ದರೂ ಆ ನನ್ನ ಡಕಾಯಿತ ತಂದೆ ಹಿಂದೆ ಎಷ್ಟೋ ದರೋಡೆ ಮಾಡಿದ್ದನು."

10. ವೈದ್ಯರ ಸಲಹೆಯಂತೆ ಸರಿಯಾದ ಪಥ್ಯವನ್ನು ಮಾಡದಿದ್ದರೆ ಶ್ರೀರಾಮ ಕೃಷ್ಣರ ರೋಗ ಉಲ್ಬಣವಾಗುತ್ತಿತ್ತು. ಇದನ್ನು ತಿಳಿದ ಶ್ರೀಮಾತೆಯವರು ಸ್ವಲ್ಪವೂ ಹಿಂಜರಿಯದೆ ಶ್ಯಾಮ್‌ಪುಕುರ್ ಮನೆಗೆ ಬರಲು ಒಪ್ಪಿದರು. ಅಲ್ಲಿ ಅನನುಕೂಲತೆಗಳ ನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳದೆ ಶ್ರೀರಾಮಕೃಷ್ಣರ ಪಥ್ಯಾಹಾರವನ್ನು ತಯಾರಿಸಲು ಸಂತೋಷದಿಂದ ಒಪ್ಪಿಕೊಂಡರು. ಒಂದೇ ಕೊಠಡಿಯಲ್ಲಿ ಅಪರಿಚಿತ ಜನರ ನಡುವೆ ಎಲ್ಲಾ ಅನನುಕೂಲತೆಗಳನ್ನು ಸಹಿಸಿಕೊಂಡು ಮೂರು ತಿಂಗಳು ಅವರು ಅಲ್ಲಿದ್ದುದನ್ನು ನೆನಸಿಕೊಂಡರೆ ಆಶ್ಚರ್ಯವಾಗುತ್ತದೆ. ಅಲ್ಲಿ ಸ್ನಾನ ಮುಂತಾದುವುಗಳಿಗೆ ಒಂದೇ ಜಾಗ ವಿತ್ತು. ಆದರೂ ಕೂಡ ಶ್ರೀಮಾತೆಯವರು ಇವನ್ನೆಲ್ಲ ಯಾವಾಗ ಮುಗಿಸುತ್ತಿದ್ದರೊ ಯಾರಿಗೂ ತಿಳಿಯುತ್ತಲೇ ಇರಲಿಲ್ಲ. ಅವರು ಬೆಳಗ್ಗೆ ಮೂರು ಗಂಟೆಯ ಒಳಗೇ ಸ್ನಾನಾದಿಗಳನ್ನೆಲ್ಲ ಮುಗಿಸಿ ಚಾವಣಿಯ ಮೇಲೆ ಹೋಗಿಬಿಡುತ್ತಿದ್ದರು. ಇಡೀ ದಿನ ಅಲ್ಲಿಯೇ ಇದ್ದು ಶ್ರೀರಾಮಕೃಷ್ಣರ ಆಹಾರಾದಿಗಳನ್ನು ಸಿದ್ಧಪಡಿಸಿ ಅನಂತರ ಸ್ವಾಮಿ ಅದ್ಭುತಾನಂದ ಅಥವಾ ಸ್ವಾಮಿ ಅದ್ವೈತಾನಂದ ಇವರ ಮೂಲಕ ಹೇಳಿಕಳಿಸುತ್ತಿದ್ದರು. ಆಗ ಶ್ರೀರಾಮಕೃಷ್ಣರೊಡನಿದ್ದ ಜನರೆಲ್ಲರೂ ಬೇರೆ ಕಡೆ ಹೊರಟುಹೋಗುತ್ತಿದ್ದರು. ಶ್ರೀಮಾತೆಯವರು ಊಟವನ್ನು ತೆಗೆದುಕೊಂಡು ಬಂದು ಅವರಿಗೆ ಉಣಿಸುತ್ತಿದ್ದರು. ಕೆಲವೊಮ್ಮೆ ಅನುಕೂಲತೆಗೆ ತಕ್ಕಂತೆ ನಾವೆ ಊಟವನ್ನು ತೆಗೆದುಕೊಂಡು ಬಂದು ಕೊಡು ತ್ತಿದ್ದೆವು. ಮಧ್ಯಾಹ್ನ ಊಟದ ನಂತರ ಶ್ರೀಮಾತೆಯವರು ಅಲ್ಲಿಯೆ ವಿಶ್ರಮಿಸುತ್ತಿ ದ್ದರು. ರಾತ್ರಿ ಹನ್ನೊಂದು ಗಂಟೆಗೆ ಎಲ್ಲಾ ಮಲಗಿಕೊಂಡ ಮೇಲೆ ಅವರು ಕೆಳಗೆ ಬಂದು ಮೊದಲ ಮಹಡಿಯಲ್ಲಿ ಅವರಿಗಾಗಿ ಕಾದಿರಿಸಿದ ಕೊಠಡಿಯಲ್ಲಿ ಬಂದು ಮಲಗುತ್ತಿದ್ದರು. ಬೆಳಗ್ಗೆ ಎರಡು ಗಂಟೆಗೆ ಎದ್ದು ಅಲ್ಲಿಂದ ಹೊರಟು ಹೋಗುತ್ತಿದ್ದರು. ಶ್ರೀರಾಮ ಕೃಷ್ಣರು ರೋಗಮುಕ್ತರಾಗುತ್ತಾರೆಂಬ ಭರವಸೆಯಿಂದ ಶ್ರೀಮಾತೆಯವರು ಅಲ್ಲಿ ಇಂಥ ಕಷ್ಟದ ದಿನಗಳನ್ನು ಕಳೆದರು. ಅವರು ಎಷ್ಟು ನೀರವವಾಗಿ ಅಗೋಚರವಾಗಿ ಅಲ್ಲಿ ಇರುತ್ತಿದ್ದರೆಂದರೆ ಪ್ರತಿನಿತ್ಯ ಅಲ್ಲಿಗೆ ಬಂದು ಹೋಗುವವರಿಗೂ ಅವರು ಅಲ್ಲಿ ಇರುವರು ಮತ್ತು ಶ್ರೀರಾಮಕೃಷ್ಣರಿಗೆ ಅತಿಮುಖ್ಯವಾದ ಮತ್ತು ಅತಿಕಠಿಣವಾದ ಸೇವೆ ಸಲ್ಲಿಸು ತ್ತಿರುವರು ಎಂಬುದು ತಿಳಿದೇ ಇರಲಿಲ್ಲ.

11. ಈಗ ಪಥ್ಯದ ಸಮಸ್ಯೆ ಪರಿಹಾರವಾಯಿತು. ಇನ್ನು ರಾತ್ರಿ ಶ್ರೀರಾಮ ಕೃಷ್ಣರ ವೈಯಕ್ತಿಕ ಸೇವೆ ಮಾಡುವವರಾರೆಂಬ ಸಮಸ್ಯೆಯನ್ನು ಬಗೆಹರಿಸುವುದರಲ್ಲಿ ಭಕ್ತರು ಮನಸ್ಸನ್ನು ಹರಿಸಿದರು. ನರೇಂದ್ರನೆ ಈ ಜವಾಬ್ದಾರಿಯನ್ನು ವಹಿಸಿಕೊಂಡ. ಅವನಿಂದ ಪ್ರೇರೇಪಿತರಾಗಿ ಚಿಕ್ಕಗೋಪಾಲ ಕಾಳಿ ಶಶಿ ಮತ್ತು ಇನ್ನೂ ಕೆಲವು ಯುವ ಕರು ಈ ಸೇವೆಯನ್ನು ಮಾಡಲು ಮುಂದೆ ಬಂದರು. ಇವರೆಲ್ಲರೂ ಭಗವತ್ಸಾಕ್ಷಾತ್ಕಾರ ಕ್ಕಾಗಿ ತಮ್ಮ ಜೀವನವನ್ನು ಮುಡುಪಾಗಿರಿಸಲು ನಿರ್ಧರಿಸಿದ್ದರು. ಶ್ರೀರಾಮಕೃಷ್ಣರ ಜ್ವಲಂತತ್ಯಾಗ ಅವರ ಅಮೃತವಾಣಿ ಮತ್ತು ಸಂಗ ಇವುಗಳಿಂದ ಸ್ಫೂರ್ತಿಯನ್ನು ಪಡೆದು ಅವರ ಮೇಲಿನ ಶ್ರದ್ಧಾಭಕ್ತಿಯಿಂದ ಅವರ ಸೇವೆಯಲ್ಲಿ ತಮ್ಮನ್ನು ತಾವು

ಅರ್ಪಿಸಿಕೊಳ್ಳಲು ಬದ್ಧಕಂಕಣರಾದರು. ಅವರ ಮನೆಯವರು ಅವರು ಈ ರೀತಿ ಶ್ಯಾಮ್‌ಪುಕುರ್ ಮನೆಗೆ ಬರುವುದಕ್ಕೆ ಮೊದಲು ಆಕ್ಷೇಪಿಸಲಿಲ್ಲ. ಆದರೆ ಶ್ರೀರಾಮ ಕೃಷ್ಣರ ರೋಗವು ಉಲ್ಬಣವಾಗಲು ಆ ಯುವಕ ಭಕ್ತರು ಕಾಲೇಜಿಗೆ ಹೋಗುವುದನ್ನೂ ಅಧ್ಯಯನವನ್ನೂ ನಿಲ್ಲಿಸಿದರು. ಅಷ್ಟೇ ಅಲ್ಲದೆ ಮನೆಗೆ ಊಟಕ್ಕೆ ಹೋಗುವುದನ್ನೂ ನಿಲ್ಲಿಸಿಬಿಟ್ಟರು. ಈಗ ಮನೆಯವರಿಗೆ ಸಂಶಯ ಉಂಟಾಯಿತು. ಈ ಸಂಶಯದಿಂದ ದಿಗಿಲುಂಟಾಯಿತು. ಹೇಗಾದರೂ ಮಾಡಿ ಈ ಯುವಕರನ್ನು ಈ ಸೇವಾಕಾರ್ಯದಿಂದ ತಪ್ಪಿಸಲು ಅವರು ಪ್ರಯತ್ನಪಟ್ಟರು. ನರೇಂದ್ರನಾಥನ ಸ್ಫೂರ್ತಿ ಮತ್ತು ಉತ್ತೇಜನ ಇರದೆ ಇದ್ದಿದ್ದರೆ ಈ ಬಾಲಕ ಭಕ್ತರು ಈ ಎಲ್ಲ ವಿಘ್ನಗಳನ್ನೂ ದೃಢವಾಗಿ ಎದುರಿಸಲು ಸಾಧ್ಯವಾಗುತ್ತಿರಲಿಲ್ಲ. ಹೀಗೆ ಶ್ಯಾಮ್‌ಪುಕುರದಲ್ಲಿ ನಾಲ್ಕೈದು ಜನರು ಮಾತ್ರ ಸೇವಾ ವ್ರತಕ್ಕೆ ತಮ್ಮ ಜೀವನವನ್ನು ಮುಡುಪಾಗಿಸಿದರು. ಕಾಶೀಪುರದಲ್ಲಿ ಈ ಸಂಖ್ಯೆ ನಾಲ್ಕು ಪಟ್ಟು ಏರಿತು.

# ಹನ್ನೆರಡನೆಯ ಅಧ್ಯಾಯ

## ದ್ವಿತೀಯ ಪಾದ

# ಶ್ರೀರಾಮಕೃಷ್ಣರು ಶ್ಯಾಮ್‌ಪುಕುರದಲ್ಲಿ

1. ಗೃಹೀಭಕ್ತರ ಸೇವೆ. ಅವರು ಆಗಾಗ ಶ್ರೀರಾಮಕೃಷ್ಣರಲ್ಲಿ ಅಪೂರ್ವ ದಿವ್ಯ ಶಕ್ತಿಯ ಪ್ರಕಾಶವನ್ನು ಕಂಡರು 2. ಶ್ರೀರಾಮಕೃಷ್ಣರ ಸೇವೆಗಾಗಿ ಗೃಹೀಭಕ್ತರು ಎಂಥ ತ್ಯಾಗಕ್ಕೂ ಸಿದ್ಧರಿದ್ದರು 3. ರೋಗ ಭಕ್ತರನ್ನು ಒಂದುಗೂಡಿಸಲು ಸಹಾಯಕ ವಾಯಿತು 4. ಶ್ರೀರಾಮಕೃಷ್ಣರ ಕಾಯಿಲೆಯ ಬಗ್ಗೆ ಭಕ್ತರ ಮೂರು ಬಗೆಯ ಕಲ್ಪನೆ 5. ಅಭಿಪ್ರಾಯಭೇದವಿದ್ದರೂ ಭಕ್ತರಲ್ಲಿ ಪರಸ್ಪರ ಪ್ರೀತಿಯಿತ್ತು 6. ವಿಶೇಷ ಅಧ್ಯಾತ್ಮ ಪ್ರಕಾಶದ ದೃಷ್ಟಾಂತಗಳು 7. ಡಾ. ಸರ್ಕಾರನಿಗೆ ಶ್ರೀರಾಮಕೃಷ್ಣರ ಕಡೆ ಗಿದ್ದ ಆಕರ್ಷಣೆ. ಅವನ ಸತ್ಯನಿಷ್ಠೆ 8. ಅಪರಾವಿದ್ಯೆಯ ಮೂಲಕ ಪರಾವಿದ್ಯೆಯ ಸಿದ್ಧಿ 9. ಭಗವದ್ ಜ್ಞಾನಕ್ಕೆ ಮಿತಿ ಕಲ್ಪಿಸುವುದು ಸಣ್ಣತನ 10. ''ಬುದ್ಧಿಯರಿ ತರೂ ಹೃದಯವರಿಯದು'' 11. ಭಾವಾವಿಷ್ಟ ಯುವಕನ ನಾಡೀ ಪರೀಕ್ಷೆ 12. ವಿದ್ಯೆಯ ಹೆಮ್ಮೆ 13. ಡಾಕ್ಟರನ ನಮ್ರತೆ 14. ಡಾಕ್ಟರಿಗೆ ಗಿರೀಶ್ ಮತ್ತು ನರೇಂದ್ರರ ಪರಿಚಯ ಮತ್ತು ಅವರ ಪ್ರಶಂಸೆ 15. ಆಹಾರ ನಿಯಮದಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಎಂಥ ಅನಾಹುತವಾಗುತ್ತದೆ ! 16. ಅವತಾರದ ಬಗ್ಗೆ ಡಾಕ್ಟರ ನಿಲುವು 17. ಶ್ರೀರಾಮಕೃಷ್ಣರ ಸಮಾಧಿಸ್ಥಿತಿಯ ವೈಜ್ಞಾನಿಕ ಪರೀಕ್ಷೆ 18. ಕಾಯಿಲೆ ವೃದ್ಧಿಯಾಗುತ್ತದೆ 19. ಶ್ಯಾಮಪುಕುರದಲ್ಲಿ ಕಾಳೀ ಪೂಜೆಯ ಸಿದ್ಧತೆ 20. ಪೂಜೆಯ ವಿಷಯದಲ್ಲಿ ಶ್ರೀರಾಮಕೃಷ್ಣರು ಮೌನವಾಗಿದ್ದರು, ಭಕ್ತರ ಸಂದಿಗ್ಧತೆ 21. ಅವರ ಪಾದಕ್ಕೆ ಗಿರೀಶಚಂದ್ರನ ಪುಷ್ಪಾರ್ಪಣೆ. ಅವರು ಭಾವಸಮಾಧಿ ಪಡೆಯುತ್ತಾರೆ 22. ಆ ಸ್ಥಿತಿಯಲ್ಲಿ ಭಕ್ತರಿಂದ ಶ್ರೀರಾಮಕೃಷ್ಣರ ಪೂಜೆ 23. ಬೇರೆ ಸಂದರ್ಭ ಗಳಲ್ಲಿ ಶ್ರೀರಾಮಕೃಷ್ಣರಲ್ಲಿ ವಿಶೇಷ ಅಧ್ಯಾತ್ಮ ಪ್ರಕಾಶದ ಅನುಭವ 24. ಬಲ ರಾಮನಿಗೆ ಶ್ರೀರಾಮಕೃಷ್ಣರ ಮೇಲಿದ್ದ ಭಕ್ತಿ ಅವನ ಸಂಬಂಧಿಕರಿಗೆ ಹಿಡಿಸಲಿಲ್ಲ 25. ಅವನು ಶ್ರೀರಾಮಕೃಷ್ಣರೆಡೆಗೆ ಹೋಗದಂತೆ ಮಾಡಲು ಅವರು ಪ್ರಯತ್ನಿಸಿ ದರು 26. ಬಲರಾಮನ ಹಿಂದಿನ ಜೀವನ 27. ಬಲರಾಮನು ಕಲ್ಕತ್ತೆಗೆ ಬಂದು ಶ್ರೀರಾಮಕೃಷ್ಣರನ್ನು ಸಂಧಿಸಿದುದು 28, ಬಲರಾಮನ ಅಣ್ಣ ಹರಿವಲ್ಲಭನು ಕಲಕತ್ತೆಗೆ ಬಂದುದು 29. ಬಲರಾಮನಿಗಾಗಿ ಹರಿವಲ್ಲಭನನ್ನು ನೋಡಬೇಕೆಂಬ ಶ್ರೀರಾಮಕೃಷ್ಣರ ಬಯಕೆ 30. ಹರಿವಲ್ಲಭನು ಶ್ರೀರಾಮಕೃಷ್ಣರನ್ನು ಭೇಟಿಯಾ ದುದು; ಅವರು ಮಾತಿನ ಮಧ್ಯೆ ಅವನನ್ನು ಸ್ಪರ್ಶಿಸುತ್ತಾರೆ 31. ಮಾತಿದ ಮಧ್ಯೆ ಶ್ರೀರಾಮಕೃಷ್ಣರು ವ್ಯಕ್ತಿಯನ್ನು ಸ್ಪರ್ಶಿಸುತ್ತಿದ್ದುದಕ್ಕೆ ಕಾರಣ 32. ಭಕ್ತರ ಸಂಖ್ಯೆ ವೃದ್ಧಿಯಾದುದು. ಆಧ್ಯಾತ್ಮಿಕ ಮಾರ್ಗದರ್ಶನ 33. ಅವರ ವ್ಯಕ್ತಿತ್ವದ ಮಾಧುರ್ಯ ಮತ್ತು ವೈಶಿಷ್ಟ್ಯಕ್ಕೆ ಭಕ್ತರು ಮಾರುಹೋಗುತ್ತಿದ್ದರು 34. ಇದಕ್ಕೆ ಒಂದು ದೃಷ್ಟಾಂತ–ಉಪೇಂದ್ರ 35. ಅವರ ಸಾಮಾನ್ಯ ಮಾತನ್ನು ಕೇಳಿಯೆ

**ಉಪೇಂದ್ರನು ಅದರೆಡೆಗೆ ಆಕರ್ಷಿತನಾದುದು 36. ದೇವರು ಸಾಕಾರನೂ ಹೌದು ನಿರಾಕಾರನೂ ಹೌದು-ಉಪೇಂದ್ರನಿಗೆ ಶ್ರೀರಾಮಕೃಷ್ಣರ ಉಪದೇಶ 37. ರಾಮ ಚಂದ್ರದತ್ತನ ಮಾತಿನಿಂದ ಅತುಲನ ಕೋಪ**

1, ಔಷಧಿ, ಪಥ್ಯ, ಸೇವೆ ಇವುಗಳೆಲ್ಲದರ ವ್ಯವಸ್ಥೆಯಾದ ಮೇಲೆ ಭಕ್ತರು ನಿಶ್ಚಿಂತ ರಾದರೆಂದು ಹೇಳುವಂತಿಲ್ಲ. ಏಕೆಂದರೆ ಕಲ್ಕತ್ತೆಯ ಪ್ರಸಿದ್ಧ ವೈದ್ಯರುಗಳು ಶ್ರೀರಾಮ ಕೃಷ್ಣರ ಗಂಟಲು ರೋಗವನ್ನು ಗುಣಪಡಿಸುವುದು ಅಸಾಧ್ಯವಲ್ಲದಿದ್ದರೂ ಅತ್ಯಂತ ಕಷ್ಟ ಸಾಧ್ಯವೆಂದು ಅಭಿಪ್ರಾಯಪಟ್ಟಿದ್ದರು. ಅದು ಗುಣವಾಗುವುದಕ್ಕೆ ಬಹಳ ಕಾಲ ಹಿಡಿ ಯುವುದೆಂದು ಅವರು ಸೂಚಿಸಿದ್ದರು. ಅವರ ರೋಗ ವಾಸಿಯಾಗುವವರೆಗೂ ಇದರ ಖರ್ಚನ್ನು ಭರಿಸುವುದು ಹೇಗೆ ಎಂಬುದು ಅವರ ಚಿಂತೆಯಾಯಿತು. ಇದು ಸ್ವಾಭಾವಿ ಕವೆ, ಏಕೆಂದರೆ ಬಲರಾಮ, ಸುರೇಂದ್ರ, ರಾಮಚಂದ್ರ, ಗಿರೀಶ್‌ಚಂದ್ರ, ಮಹೇಂದ್ರ ನಾಥ್ ಮುಂತಾದವರು ಶ್ರೀಮಂತರೇನೂ ಆಗಿರಲಿಲ್ಲ. ಅವರಲ್ಲಿ ಯಾರೇ ಒಬ್ಬರಿಗೂ ಶ್ರೀರಾಮಕೃಷ್ಣರ ಖರ್ಚನ್ನೆಲ್ಲ ಭರಿಸುವ ಸಾಮರ್ಥ್ಯವಿರಲಿಲ್ಲ. ಸ್ವರ್ಗೀಯ ಆಶೋತ್ತರ ಆನಂದ ಮತ್ತು ಶಾಂತಿಯ ಪ್ರೇರಣೆಯಿಂದಾಗಿ ಅವರು ಭವಿಷ್ಯದ ಚಿಂತನೆಯನ್ನು ಮರೆತು ಈ ಕೆಲಸವನ್ನು ಕೈಗೊಂಡಿದ್ದರು. ಆದರೆ ಭವಿಷ್ಯದ ಚಿಂತನೆ ಆಗಾಗ ಆ ಆನಂದ ವನ್ನು ಮಸುಕುಗೊಳಿಸುತ್ತಿತ್ತು. ಆದ್ದರಿಂದ ಆ ಆನಂದದ ಪ್ರವಾಹ ನಿರಂತರವಾಗಿ ಒಂದೇ ಸಮನೆ ಹರಿಯುತ್ತಿರಲಿಲ್ಲ. ಆದರೆ ಅವರು ಕಾತರರಾದಾಗಲೆಲ್ಲ ಶ್ರೀರಾಮಕೃಷ್ಣ ರಲ್ಲಿ ಅದ್ಭುತ ಆಧ್ಯಾತ್ಮಿಕ ಭಾವವನ್ನು ಕಾಣುತ್ತಿದ್ದರು. ಅದು ಅವರ ಮನಸ್ಸಿನ ದುಗುಡ ವನ್ನು ಹೋಗಲಾಡಿಸಿ ಅವರ ಹೃದಯಗಳನ್ನು ಮತ್ತೆ ಹೊಸ ಉತ್ಸಾಹ ಮತ್ತು ಶಕ್ತಿ ಯಿಂದ ತುಂಬುತ್ತಿತ್ತು. ಅವರು ಆಗ ಅನುಭವಿಸುತ್ತಿದ್ದ ಆ ಆನಂದ ವಿಚಾರ ಬುದ್ಧಿ ಯನ್ನು ಮೀರಿರುತ್ತಿತ್ತು. ಅದು ಅವರ ಮೇಲೆ ಎಂಥ ಪ್ರಭಾವವನ್ನು ಬೀರುತ್ತಿತ್ತೆಂದರೆ ತಾವು ಆಶ್ರಯಿಸಿರುವ ಈ ಪುರುಷನು ಕೇವಲ ಅತಿಮಾನವ ಮಾತ್ರವಲ್ಲ ಇಡೀ ಆಧ್ಯಾ ತ್ಮಿಕ ಜಗತ್ತಿಗೇ ಆಶ್ರಯ, ಜೀವಕುಲದ ಪರಮಗತಿಯಾದ ದೇವಮಾನವ ನಾರಾಯಣ ಎಂದು ಅವರಿಗೆ ಭರವಸೆ ಉಂಟಾಗುತ್ತಿತ್ತು. ಅವರ ಜನ್ಮ, ಕರ್ಮ, ತಪಸ್ಸು ಆಹಾರ ವಿಹಾರ ಅಷ್ಟೇ ಅಲ್ಲದೆ ಅವರು ಈಗ ಅನುಭವಿಸುತ್ತಿರುವ ದಾರುಣ ರೋಗವೂ ಕೂಡ ಲೋಕಕಲ್ಯಾಣಕ್ಕಾಗಿ. ಇಲ್ಲದಿದ್ದರೆ ಜನ್ಮ, ಮೃತ್ಯು, ಜರಾ, ವ್ಯಾಧಿ, ದುಃಖ, ದೋಷ ಇವುಗಳನ್ನು ಮೀರಿರುವ ಸತ್ಯಸಂಕಲ್ಪನಾದ ಪುರುಷೋತ್ತಮನಿಗೆ ಈ ದೇಹದ ಕಾಯಿಲೆ ಎಲ್ಲಿಂದ ? ಭಕ್ತರಿಗೆ ಸೇವೆ ಅವಕಾಶ ಕೊಟ್ಟು ಅವರನ್ನು ಕೃತಾರ್ಥರನ್ನಾಗಿಸಲು ಅವರು ಈಗ ವ್ಯಾಧಿಗ್ರಸ್ತರಾಗಿರುವಂತೆ ಇರುವರು. ದಕ್ಷಿಣೇಶ್ವರದವರೆಗೆ ಬಂದು ಯಾರಿಗೆ ಅವರ ದರ್ಶನವನ್ನು ಪಡೆಯಲಾಗುವುದಿಲ್ಲವೋ ಅವರಿಗೆ ಆಧ್ಯಾತ್ಮಿಕ ಬೆಳಕನ್ನು ತೋರಿಸುವ ಸಲುವಾಗಿ ಶ್ರೀರಾಮಕೃಷ್ಣರು ಅವರ ಹತ್ತಿರವೇ ಬಂದಿದ್ದಾರೆ, ಪಾಶ್ಚಾತ್ಯ ಶಿಕ್ಷಣವನ್ನು ಪಡೆದ ಜಡವಾದಿಯಾದ ಮಾನವನು ಈ ವಿಜ್ಞಾನದ ನೆರಳಿನಲ್ಲಿ ನಿಂತು ಯಾವ ಆಪತ್ತೂ ಇಲ್ಲವೆಂದು ಭಾವಿಸಿರುವನು, ಸರ್ವಜ್ಞ ಎಂದು ಭಾವಿಸಿ ಇಂದ್ರಿಯ ಭೋಗ

ವನ್ನೆ ಜೀವನದ ಗುರಿಯನ್ನಾಗಿ ಮಾಡಿಕೊಂಡಿರುವನು. ಅಂಥವರಿಗೆ ಆಧ್ಯಾತ್ಮಿಕ ಬೆಳ ಕನ್ನು ತೋರಿಸಿ ಸ್ವಲ್ಪವಾದರೂ ತ್ಯಾಗಮಾರ್ಗವನ್ನು ಅವರು ಹಿಡಿಯುವಂತೆ ಮಾಡಲು ಶ್ರೀರಾಮಕೃಷ್ಣರು ಈ ಸ್ಥಿತಿಯಲ್ಲಿರುವರು. ಹಾಗಿರುವಾಗ ಈ ಆಶಂಕೆ ಏಕೆ, ಹಣದ ಕೊರತೆಯ ಚಿಂತೆಯೇಕೆ ? ಯಾರು ಈ ಸೇವೆಯ ಅವಕಾಶ ಮಾಡಿಕೊಟ್ಟಿರುವರೊ ಅವರೆ ಅದಕ್ಕೆ ಸಾಮರ್ಥ್ಯವನ್ನು ನೀಡುತ್ತಾರೆ.

2. ಮೇಲೆ ಹೇಳಿದ ಮಾತುಗಳು ಕೇವಲ ಭಾವುಕತೆಯ ಪ್ರಲಾಪವೆಂದು ಓದು ಗರು ಭಾವಿಸಬಾರದು. ಶ್ರೀರಾಮಕೃಷ್ಣರ ಸಂಗದ ಪ್ರಭಾವದಿಂದ ಭಕ್ತರು ಈ ರೀತಿ ಅನುಭವಿಸುವುದನ್ನು ಮತ್ತು ಚಿಂತಿಸುವುದನ್ನು ನಾವು ಪ್ರತಿನಿತ್ಯ ನೋಡಿರುವೆವು. ಹಣದ ಕೊರತೆಯಿಂದ ಶ್ರೀರಾಮಕೃಷ್ಣರ ಸೇವೆಯಲ್ಲಿ ಎಲ್ಲಿ ತ್ರುಟಿ ಉಂಟಾಗುವುದೊ ಎಂಬ ಆಶಂಕೆಯಿಂದ ಭಕ್ತರೆಲ್ಲರೂ ಕುಳಿತು ವಿಚಾರ ಮಾಡುತ್ತಿರುವಾಗ ಅವರಿಗೆ ಮೇಲೆ ಹೇಳಿದ ರೀತಿಯಲ್ಲಿ ಆಶ್ವಾಸನೆ ಉಂಟಾಗುತ್ತಿತ್ತು, ಮತ್ತು ನಿಶ್ಚಿಂತೆಯಿಂದ ಹಿಂದಿರುಗು ತ್ತಿದ್ದರು. ಕೆಲವರು ಹೇಳುತ್ತಿದ್ದರು : "ಶ್ರೀರಾಮಕೃಷ್ಣರು ತಮ್ಮ ವ್ಯವಸ್ಥೆಯನ್ನು ತಾವೆ ಮಾಡಿಕೊಳ್ಳುತ್ತಾರೆ. ಅವರು ಹಾಗೆ ಮಾಡದಿದ್ದರೆ ತಾನೆ ನಷ್ಟವೇನು ? (ತನ್ನ ಮನೆ ಯನ್ನು ನಿರ್ದೇಶಿಸಿ) ಎಲ್ಲಿಯವರೆಗೆ ಒಂದು ಇಟ್ಟಿಗೆಯ ಮೇಲೆ ಇನ್ನೊಂದು ಇಟ್ಟಿಗೆ ಉಳಿದಿರುತ್ತದೆಯೊ ಅಲ್ಲಿಯವರೆಗೆ ಚಿಂತೆಯೇಕೆ ? ನನ್ನ ಮನೆಯನ್ನು ಅಡವಿಟ್ಟು ಅವರ ಸೇವೆಯನ್ನು ಮಾಡುತ್ತೇನೆ." ಇನ್ನೊಬ್ಬರು ಹೇಳಬಹುದು : "ಮಕ್ಕಳ ವಿವಾಹ ಅಥವಾ ಮನೆಯಲ್ಲಿ ಕಾಯಿಲೆ ಕಸಾಲೆ ಆದಾಗ ಹೇಗೆ ನಿಭಾಯಿಸುತ್ತೇನೆಯೊ ಹಾಗೆಯೆ ಈಗಲೂ ಮಾಡುತ್ತೇನೆ. ಹೆಂಡತಿಯ ಮೈಮೇಲೆ ಸ್ವಲ್ಪ ಒಡವೆ ಇರುವವರೆಗೂ ಯಾವ ಯೋಚ ನೆಯೂ ಇಲ್ಲ." ಅಥವಾ ಇನ್ನೊಬ್ಬನು ಮಾತಿನ ಮೂಲಕ ವ್ಯಕ್ತಪಡಿಸದಿದ್ದರೂ ತನ್ನ ಸಂಸಾರದ ಖರ್ಚನ್ನು ಕಡಿಮೆ ಮಾಡಿ ಅದರಲ್ಲಿ ಉಳಿದ ಹಣವನ್ನು ಶ್ರೀರಾಮಕೃಷ್ಣರ ಸೇವೆಗೆ ಕೊಡುತ್ತಿದ್ದನು. ಈ ರೀತಿಯ ಭಾವದ ಪ್ರೇರಣೆಯಿಂದಲೆ ಸುರೇಂದ್ರನಾಥನು ಮನೆ ಬಾಡಿಗೆಯ ಸಂಪೂರ್ಣ ಭಾರವನ್ನು ತಾನೆ ಹೊತ್ತುಕೊಂಡಿದ್ದನು. ಬಲರಾಮ, ರಾಮ, ಮಹೇಂದ್ರ, ಗಿರೀಶ್‌ಚಂದ್ರ ಮುಂತಾದವರು ಒಟ್ಟುಗೂಡಿ ಶ್ರೀರಾಮಕೃಷ್ಣರ ಮತ್ತು ಅವರ ಸೇವಕ ವರ್ಗದ ಎಲ್ಲ ಖರ್ಚನ್ನೂ ವಹಿಸಿಕೊಂಡಿದ್ದರು.

3. ಹೇಗೆ ಭಕ್ತರು ದಿವ್ಯ ಉಲ್ಲಾಸವನ್ನು ಹೃದಯದಲ್ಲಿ ಅನುಭವಿಸುತ್ತಿದ್ದರೊ ಅದೆ ಈಗ ಅವರೆಲ್ಲರೂ ಒಂದುಗೂಡಿ ಪರಸ್ಪರ ಸಹಾನುಭೂತಿಯಿಂದ ಕೆಲಸ ಮಾಡಲು ತುಂಬ ಸಹಾಯಕವಾಯಿತು. ಶ್ರೀರಾಮಕೃಷ್ಣ ಭಕ್ತಸಂಘವೆಂಬ ವೃಕ್ಷವು ದಕ್ಷಿಣೇಶ್ವರ ದಲ್ಲಿಯೆ ಚಿಗುರು ಒಡೆಯಿತು ಎಂದು ಹೇಳಬಹುದು. ಅದು ಶ್ಯಾಮ್‌ಪುಕುರ್ ಮತ್ತು ಕಾಶೀಪುರದಲ್ಲಿ ತನ್ನ ನೈಜ ಆಕಾರವನ್ನು ಪಡೆದು ಬಹುಬೇಗನೆ ಬೆಳೆಯತೊಡಗಿತು. ಇದರ ಸಾಫಲ್ಯತೆಗಾಗಿಯೆ ಶ್ರೀರಾಮಕೃಷ್ಣರು ತಮ್ಮ ಶಾರೀರಿಕ ವ್ಯಾಧಿಯನ್ನು ಅನುಭವಿ ಸುತ್ತಿರುವರು ಎಂಬುದು ಅನೇಕ ಭಕ್ತರ ತಿಳಿವಳಿಕೆಯಾಗಿತ್ತು.

4. ದಿನಕಳೆದಂತೆ ಶ್ರೀರಾಮಕೃಷ್ಣರ ಕಾಯಿಲೆಯ ಕಾರಣ ಮತ್ತು ಅವರು

ಯಾವಾಗ ಆರೋಗ್ಯವಂತರಾಗುತ್ತಾರೆ ಇತ್ಯಾದಿ ವಿಷಯಗಳ ಬಗ್ಗೆ ಅನೇಕ ಊಹಾಪೋಹಗಳು ನಡೆದುವು. ಇದು ಭಕ್ತರನ್ನು ವಿವಿಧ ವರ್ಗಗಳನ್ನಾಗಿ ವಿಭಾಗಿಸಿತು. ಶ್ರೀರಾಮಕೃಷ್ಣರ ಹಿಂದಿನ ಜೀವನದ ಅದ್ಭುತ ಘಟನಾವಳಿಗಳೆ ಭಕ್ತರ ಈ ಎಲ್ಲ ಊಹಾಪೋಹಗಳಿಗೆ ಮೂಲಕಾರಣವಾಗಿತ್ತು ಎಂಬುದಂತೂ ಸ್ಪಷ್ಟ. ಒಂದು ವರ್ಗದ ಭಕ್ತರು ಭಾವಿಸಿದರು, ಅವತಾರಪುರುಷರಾದ ಶ್ರೀರಾಮಕೃಷ್ಣರ ಈ ಶಾರೀರಿಕ ಕಾಯಿಲೆ ಒಂದು ತೋರಿಕೆ ಮಾತ್ರ, ಅದು ಸತ್ಯವಲ್ಲ ಎಂದು. ಅವರು ಯಾವುದೊ ಒಂದು ವಿಶೇಷ ಉದ್ದೇಶಕ್ಕಾಗಿ ಅದನ್ನು ಉಂಟುಮಾಡಿಕೊಂಡಿರುವರು ಮತ್ತು ಆ ಉದ್ದೇಶ ಸಫಲವಾದ ಕೂಡಲೆ ಅವರು ಮೊದಲಿನಂತೆಯೆ ಆಗುತ್ತಾರೆ. ಅದ್ಭುತ ಕಲ್ಪನಾಶಕ್ತಿಯಿಂದ ಕೂಡಿದ ಗಿರೀಶನು ಈ ವರ್ಗದವರಲ್ಲಿ ಪ್ರಮುಖನಾಗಿದ್ದ. ಇನ್ನೊಂದು ವರ್ಗದವರ ಅಭಿಪ್ರಾಯವೇನೆಂದರೆ ಶ್ರೀರಾಮಕೃಷ್ಣರು ಜಗನ್ಮಾತೆಯ ಇಚ್ಛೆಗನುಸಾರವಾಗಿಯೆ ಯಾವಾಗಲೂ ನಡೆದುಕೊಳ್ಳುತ್ತಿದ್ದರು, ಈಗ ಅವಳೆ ಯಾವುದೊ ತನ್ನ ರಹಸ್ಯಉದ್ದೇಶ ಪೂರ್ತಿಗಾಗಿ ಅವರನ್ನು ಕಾಯಿಲೆಯಲ್ಲಿ ಇರಿಸಿರುವಳು. ಇದರಿಂದ ಮಾನವಕೋಟಿಗೆ ಒಳಿತೇ ಆಗುವುದು. ಈ ರಹಸ್ಯವನ್ನು ಹೊರಗೆಡಹುವುದು ಶ್ರೀರಾಮಕೃಷ್ಣರಿಗೂ ಸಾಧ್ಯವೇ ಎಂಬುದು ತಿಳಿಯದು. ಅವಳ ಉದ್ದೇಶ ಸಫಲವಾದ ಕೂಡಲೆ ಶ್ರೀರಾಮಕೃಷ್ಣರು ಆರೋಗ್ಯವಂತರಾಗುತ್ತಾರೆ. ಇನ್ನೊಂದು ವರ್ಗದವರ ವಿಚಾರವೇ ಬೇರೆಯಾಗಿತ್ತು. "ಹುಟ್ಟು ಸಾವು ಮುಪ್ಪುರೋಗ ಇತ್ಯಾದಿಗಳು ದೇಹಕ್ಕೆ ಸ್ವಾಭಾವಿಕವಾದವುಗಳು ; ದೇಹವಿರುವವರೆಗೂ ಅವು ಇದ್ದೇ ಇರುತ್ತವೆ," ಎಂಬುದು ಅವರ ವಿಚಾರವಾಗಿತ್ತು. ಆದ್ದರಿಂದ ಅದರ ಬಗ್ಗೆ ಅಷ್ಟೊಂದು ಮಾತನಾಡುವುದಾಗಲಿ ವಿಚಾರಮಾಡುವುದಾಗಲಿ ಅಲೌಕಿಕ ರಹಸ್ಯ ಕಾರಣಗಳನ್ನು ಹುಡುಕುವುದಾಗಲಿ ಆವಶ್ಯಕವೇನು? ವಿಚಾರ ಮತ್ತು ಪ್ರತ್ಯಕ್ಷಾನುಭವದ ಮಿತಿಗೆ ಒಳಪಡದ ಯಾವುದನ್ನೂ ಅವರು ಒಪ್ಪಲು ಸಿದ್ಧರಿರಲಿಲ್ಲ. ಅವರ ಕಾಯಿಲೆಯನ್ನು ಗುಣಪಡಿಸಲು ತಮ್ಮ ಜೀವನವನ್ನೇ ಮುಡುಪಾಗಿರಿಸಿ ಅವರು ಸೇವೆಗೆ ಸಿದ್ಧರಾಗಿದ್ದರು. ಶ್ರೀರಾಮಕೃಷ್ಣರು ತಮ್ಮ ಮುಂದೆ ಇಟ್ಟ ಉನ್ನತ ಆದರ್ಶಕ್ಕನುಸಾರವಾಗಿ ತಮ್ಮ ಜೀವನವನ್ನು ರೂಪಿಸಿಕೊಳ್ಳಲು ತಮ್ಮ ಕೈಲಾದ್ದನ್ನು ಮಾಡಲು ಮತ್ತು ಆಧ್ಯಾತ್ಮಿಕ ಸಾಧನೆಯಲ್ಲಿ ತಮ್ಮನ್ನು ತೊಡಗಿಸಲು ಅವರು ದೃಢಸಂಕಲ್ಪರಾಗಿದ್ದರು. ಶ್ರೀರಾಮಕೃಷ್ಣರ ಯುವಕ ಶಿಷ್ಯರ ಪ್ರತಿನಿಧಿಯಾದ ನರೇಂದ್ರನಾಥನು ಈ ಕೊನೆಯ ವರ್ಗದವರಲ್ಲಿ ಪ್ರಮುಖನಾಗಿದ್ದ.

5. ಶ್ರೀರಾಮಕೃಷ್ಣರ ಶಿಷ್ಯರು ತಮ್ಮ ವಿವಿಧ ಮನೋಭಾವಗಳಿಗನುಗುಣವಾಗಿ ಶ್ರೀರಾಮಕೃಷ್ಣರ ಬಗ್ಗೆ ಬೇರೆ ಬೇರೆ ಅಭಿಪ್ರಾಯಗಳನ್ನು ಹೊಂದಿದವರಾಗಿದ್ದರು. ಆದರೆ ಒಂದು ವಿಷಯದಲ್ಲಿ ಮಾತ್ರ ಅವರೆಲ್ಲರಲ್ಲೂ ಒಮ್ಮತವಿತ್ತು : ಶ್ರೀರಾಮಕೃಷ್ಣರ ಅತ್ಯುದಾತ್ತ ಉಪದೇಶಗಳಂತೆ ತಾವು ನಡೆದರೆ ತಮಗೆ ಉನ್ನತಿಯಾಗುವುದು ಮತ್ತು ಹೃತ್ಪೂರ್ವಕವಾಗಿ ಅವರ ಸೇವೆ ಮಾಡಿದರೆ ಅವರ ಅನುಗ್ರಹವನ್ನು ಪಡೆಯಬಹುದು ಎಂಬ ವಿಷಯದಲ್ಲಿ ಅವರಿಗೆ ಸಂಪೂರ್ಣ ನಂಬಿಕೆ ಇತ್ತು. ಕೆಲವರು ಶ್ರೀರಾಮಕೃಷ್ಣರನ್ನು

ಅವತಾರವೆಂದೂ ಕೆಲವರು ಗುರು ಎಂದೂಮತ್ತೆ ಕೆಲವರು ಅತಿಮಾನವನೆಂದೂ ಇನ್ನೂ ಕೆಲವರು ದೇವಮಾನವನೆಂದೂ–ಹೀಗೆ ಅಭಿಪ್ರಾಯ ಭೇದವಿದ್ದರೂ ಶ್ರೀರಾಮಕೃಷ್ಣರ ಭಕ್ತರಲ್ಲಿ ಪರಸ್ಪರ ಪ್ರೀತಿಗೆ ಕೊರತೆ ಇರಲಿಲ್ಲ.

6. ಶ್ರೀರಾಮಕೃಷ್ಣರು ಭಕ್ತರಿಗೆ ತಮ್ಮ ವಿವಿಧ ಆಧ್ಯಾತ್ಮಿಕ ಭಾವಗಳನ್ನು ಪ್ರಕಾಶ ಪಡಿಸಿದರು. ಇದಕ್ಕೆ ಸಂಬಂಧಿಸಿದ ಘಟನೆಗಳನ್ನು ನಾವಿಲ್ಲಿ ವಿವರಿಸುತ್ತೇವೆ. ಆ ಸಮಯದಲ್ಲಿ ಅವರನ್ನು ನೋಡಲು ಬಂದ ಅವರ ಶಿಷ್ಯರಲ್ಲದ ಇತರರೂ ಕೂಡ ಈ ಘಟನೆಗೆ ಸಾಕ್ಷಿಯಾಗಿರುವರು.

7. ಮಹೇಂದ್ರಲಾಲ್ ಸರ್ಕಾರನು ಶ್ರೀರಾಮಕೃಷ್ಣರ ಚಿಕಿತ್ಸೆಗಾಗಿ ತನ್ನ ಸಂಪೂರ್ಣ ಮನಸ್ಸನ್ನು ಕೊಟ್ಟನು. ಬೆಳಿಗ್ಗೆ ಮಧ್ಯಾಹ್ನ ಮತ್ತು ಸಂಜೆ ತಪ್ಪದೆ ಅವ ರನ್ನು ನೋಡಲು ಬರುತ್ತಿದ್ದನು. ಅವರನ್ನು ಪರೀಕ್ಷಿಸುವುದು ಔಷಧಿಯನ್ನು ಸೂಚಿಸು ವುದು ಇವೆಲ್ಲ ಆದ ಮೇಲೆ ಅವರೊಡನೆ ಧಾರ್ಮಿಕ ವಿಷಯವಾಗಿ ಮಾತನಾಡುತ್ತ ಕೆಲ ಕಾಲ ಕಳೆಯುತ್ತಿದ್ದನು. ಅವನು ಹೀಗೆ ಬಂದು ಹೋಗುತ್ತಾ ಇರಲು ಶ್ರೀರಾಮಕೃಷ್ಣರ ಉದಾತ್ತಭಾವಗಳಿಂದ ಅವನು ಆಕರ್ಷಿತನಾದನು. ಸಮಯ ದೊರೆತಾಗಲೆಲ್ಲ ಎರಡು ಮೂರು ಗಂಟೆ ಕಳೆಯುತ್ತಿದ್ದನು. ಒಂದು ದಿನ ಶ್ರೀರಾಮಕೃಷ್ಣರು ತಮಗಾಗಿ ಅವನು ತನ್ನ ಅಮೂಲ್ಯ ಸಮಯವನ್ನು ವ್ಯಯಿಸುತ್ತಿರುವುದಕ್ಕಾಗಿ ಅವನಿಗೆ ಕೃತಜ್ಞತೆಯನ್ನು ವ್ಯಕ್ತಪಡಿಸಬೇಕೆಂದಿರುವಾಗ ಡಾಕ್ಟರ್ ಯಾವಾಗಲಿನಂತೆ ಒರಟಾಗಿ ಹೇಳಿದ : "ನಾನು ನಿಮಗೋಸ್ಕರವಾಗಿಯೆ ಇಷ್ಟೊಂದು ಸಮಯವನ್ನು ಕಳೆಯುತ್ತಿದ್ದೇನೆಂದುಕೊಂಡಿರಾ ? ಇದರಲ್ಲಿ ನನ್ನ ವೈಯಕ್ತಿಕ ಹಿತಾಸಕ್ತಿಯೂ ಇದೆ. ನಿಮ್ಮೊಡನೆ ಮಾತನಾಡಿದರೆ ನನಗೆ ತುಂಬಾ ಆನಂದವಾಗುತ್ತದೆ. ನಾನು ನಿಮ್ಮನ್ನು ಹಿಂದೆ ನೋಡಿದ್ದರೂ ನಿಮ್ಮೊಡನೆ ಬೆರೆತು ನಿಮ್ಮನ್ನು ನಿಕಟವಾಗಿ ಅರ್ಥಮಾಡಿಕೊಳ್ಳುವ ಸಮಯ ದೊರೆತಿರಲಿಲ್ಲ. ನಾನು ಎಷ್ಟೋ ಕೆಲಸಗಳಲ್ಲಿ ಮಗ್ನನಾಗಿಬಿಟ್ಟಿದ್ದೆ. ನಿಮ್ಮ ಸತ್ಯದ ಮೇಲಿನ ಪ್ರೀತಿಗಾಗಿ ನಾನು ನಿಮ್ಮನ್ನು ತುಂಬ ಮೆಚ್ಚುತ್ತೇನೆ. ನೀವು ಸತ್ಯವೆಂದು ಯಾವುದನ್ನು ತಿಳಿಯುತ್ತೀರೊ ಅದನ್ನು ಚಾಚೂ ತಪ್ಪದೆ ಅನುಸರಿಸುತ್ತೀರಿ ಮತ್ತು ಮಾತನಾಡುತ್ತೀರಿ. ಬೇರೆ ಕಡೆ ಜನರು ಹೇಳುವುದೊಂದು ಮಾಡುವುದೊಂದು. ನನಗದನ್ನು ಸಹಿಸಲಾಗುವುದಿಲ್ಲ. ನಾನು ನಿಮ್ಮನ್ನು ಪ್ರಶಂಸೆ ಮಾಡುತ್ತಿದ್ದೇನೆ ಎಂದು ಭಾವಿಸಬೇಡಿ. ನಾನು ಮುಖ ಸ್ತುತಿ ಮಾಡುವ ವ್ಯಕ್ತಿಯೆ ಅಲ್ಲ. ನಾನು ತಂದೆಗೆ ಒರಟುಪುತ್ರ ಎಂದು ಎಲ್ಲರೂ ಹೇಳುತ್ತಾರೆ. ನಾನು ತಂದೆಗೂ ಕೂಡ ಅವನೇನಾದರೂ ತಪ್ಪು ಮಾಡಿದರೆ ಅವನ ಎದುರಿಗೇ ಹೇಳಿ ಬಿಡುತ್ತಿದ್ದೆ. ನನ್ನ ನಾಲಗೆ ಬಹಳ ಹರಿತವೆಂದು ಪ್ರಸಿದ್ಧಿ." ಶ್ರೀರಾಮಕೃಷ್ಣರು ಮುಗುಳ್ನಕ್ಕು ಹೇಳಿದರು : "ಹೌದು, ನಾನೂ ಹಾಗೇ ಕೇಳಿದ್ದೇನೆ. ನೀನು ಇಲ್ಲಿಗೆ ತುಂಬಾ ಕಾಲದಿಂದ ಬರುತ್ತಿದ್ದರೂ ನನಗಿನ್ನೂ ಅದರ ಪರಿಚಯವಾ ಗಿಲ್ಲ." ಡಾಕ್ಟರ್ ನಕ್ಕು ನುಡಿದನು : "ಅದು ನಮ್ಮಿಬ್ಬರ ಸೌಭಾಗ್ಯ. ಅದಿಲ್ಲದಿದ್ದರೆ ಏನಾದರೂ ಒಂದು ದೋಷ ಕಂಡಿದ್ದರೆ ಮಹೇಂದ್ರ ಸರ್ಕಾರ್ ಸುಮ್ಮನಿರುವ ವ್ಯಕ್ತಿ

ಯಲ್ಲಿ, ಏನೇ ಆಗಲಿ, ಸತ್ಯದ ಮೇಲೆ ನನಗೆ ಪ್ರೀತಿ ಇಲ್ಲ ಎಂದು ಭಾವಿಸಬೇಡಿ, ಯಾವುದು ಸತ್ಯವೊ ಅದನ್ನೇ ಪ್ರತಿಪಾದಿಸಲು ನಾನು ಜೀವನವೆಲ್ಲ ಹೋರಾಡಿರುವೆ. ಅದಕ್ಕೋಸ್ಕರವೇ ನಾನು ಹೋಮಿಯೋಪತಿಯನ್ನು ಹಿಡಿದಿದ್ದು. ವಿಜ್ಞಾನ ಬೆಳವಣಿಗೆಯ ಸಂಘದ ನಿರ್ಮಾಣವು ಇದಕ್ಕಾಗಿಯೆ. ಹೀಗೆ ನನ್ನ ಎಲ್ಲಾ ಕಾರ್ಯಗಳೂ ಸತ್ಯಕ್ಕಾಗಿಯೆ."

8. ನಮ್ಮಲ್ಲಿ ಒಬ್ಬರು ಮಧ್ಯೆ ಪ್ರವೇಶಿಸಿ ಈ ರೀತಿ ಹೇಳಿದರೆಂದು ನೆನಪು : "ಡಾಕ್ಟರನಿಗೆ ಸತ್ಯದ ಕಡೆಗೆ ಒಲವಿದ್ದರೂ ಅಪರಾವಿದ್ಯೆಯ ಕ್ಷೇತ್ರಕ್ಕೆ ಸಂಬಂಧಪಟ್ಟ ಸಾಪೇಕ್ಷಿಕ ಸತ್ಯದ ಆವಿಷ್ಕಾರವೆ ಮುಖ್ಯಗುರಿ. ಆದರೆ ಶ್ರೀರಾಮಕೃಷ್ಣರು ಯಾವಾಗಲೂ ಪ್ರೀತಿಸುವುದು ಪರಾ ವಿದ್ಯೆಯನ್ನು."

ಡಾಕ್ಟರನು ಇದರಿಂದ ತುಂಬ ಉದ್ರಿಕ್ತನಾಗಿ ಹೇಳಿದನು : "ನಿಮ್ಮದೆಲ್ಲ ಇದೊಂದೆ ರಾಗ. ವಿದ್ಯೆಯಲ್ಲಿ ಪರಾ ಅಪರಾ ಎಂಬುದಿದೆಯೇನು ? ಯಾವುದರ ಮೂಲಕ ಸತ್ಯ ಪ್ರಕಾಶಗೊಳ್ಳುವುದೊ ಅದರಲ್ಲಿ ಉಚ್ಚ ನೀಚ ಎಂಬುದಿದೆಯೇನು ? ಒಂದು ಕಾಲ್ಪನಿಕ ಭೇದವನ್ನು ನೀವು ಕಲ್ಪಿಸಿದರೂ ಅಪರಾವಿದ್ಯೆಯ ಮೂಲಕವೆ ಪರಾವಿದ್ಯೆಯನ್ನು ಪಡೆಯಬೇಕು ಎಂಬುದನ್ನು ಒಪ್ಪಿಕೊಳ್ಳಲೇಬೇಕು. ವೈಜ್ಞಾನಿಕ ಸಂಶೋಧನೆಗಳ ಮೂಲಕ ಯಾವ ಸತ್ಯಗಳು ನಮಗೆ ಗೋಚರವಾಗುವುವೊ ಅವುಗಳ ಮೂಲಕವೆ ಜಗತ್ಕಾರಣನಾದ ಭಗವಂತನನ್ನು ನಾವು ವಿಶೇಷ ರೀತಿಯಲ್ಲಿ ಅರಿಯಬಹುದು. ನಾನು ನಾಸ್ತಿಕ ವಿಜ್ಞಾನಿಗಳ ವಿಷಯವನ್ನು ಹೇಳುತ್ತಿಲ್ಲ. ನನಗೆ ಅವರ ಮಾತೇ ಅರ್ಥವಾಗುವುದಿಲ್ಲ. ಅವರು ಕಣ್ಣಿದ್ದೂ ಕುರುಡರು. ಆದರೆ ಅನಾದಿ ಅನಂತವಾದ ಭಗವಂತನ ವಿಷಯವಾಗಿ ತನಗೆಲ್ಲ ತಿಳಿದಿದೆ ಎಂದು ಹೇಳುವವನು ಖಂಡಿತವಾಗಿಯೂ ಸುಳ್ಳು ಹೇಳುತ್ತಿರುವನು, ಅವನು ಮೋಸಗಾರ. ಅವನಿಗೆ ಹುಚ್ಚಾಸ್ಪತ್ರೆಯೆ ಯೋಗ್ಯ ಸ್ಥಳ."

9. ಶ್ರೀರಾಮಕೃಷ್ಣರು ಡಾಕ್ಟರ್ ಕಡೆ ಪ್ರಸನ್ನ ದೃಷ್ಟಿಯನ್ನು ಹರಿಸಿ ನಗುತ್ತಾ ಹೇಳಿದರು : "ನೀನು ಸರಿಯಾಗಿ ಹೇಳಿದೆ. ಭಗವಂತನು ಇಷ್ಟೆ ಎಂದು ಹೇಳುವವರು ಹೀನ ಬುದ್ಧಿಯುಳ್ಳವರು. ಅವರ ಮಾತನ್ನು ನಾನು ಸಹಿಸಲಾರೆ."

ಹೀಗೆ ಹೇಳಿ ಶ್ರೀರಾಮಕೃಷ್ಣರು ನಮ್ಮಲ್ಲಿ ಒಬ್ಬನಿಗೆ ಭಕ್ತಶ್ರೇಷ್ಠನಾದ ರಾಮಪ್ರಸಾದನ ಈ ಕೆಳಗಿನ ಹಾಡನ್ನು ಹಾಡಲು ಹೇಳಿದರು :

ತಾಯಿ ದುರ್ಗೆಯ ನಿಜವನರಿಯುವ
ಧೀರರಾರೊ ಜಗದೊಳು ।
ಆರು ದರುಶನ ವೇದಶಾಸ್ತ್ರ
ಪುರಾಣವರಿಯದು ಅವಳನು ॥

ಯೋಗಿ ಹೃದಯದ ದಿವ್ಯನಿತ್ಯಾ-
ನಂದರೂಪಿಣಿ ಆಕೆಯು ।
ತನ್ನ ಆನಂದದಲಿ ತಾನೇ
ಜೀವರೆದೆಯೊಳಗಿರುವಳು ॥

ಸಕಲ ಬ್ರಹ್ಮಾಂಡವನು ಬಸಿರಲಿ
ಧರಿಸಿ ನಿತ್ಯವು ಪೊರೆವಳು ।
ಮೂಲಾಧಾರ ಸಹಸ್ರಾರದಲ್ಲಿಯೆ ।
ಮುನಿಗಳವಳನು ನೆನೆವರು ॥

ಶಿವನ ಹೊರತಿನ್ನಾರು ಅರಿಯರು
ಅವಳ ದಿವ್ಯ ಸ್ವರೂಪವ ।
ಪದ್ಮವನದಲಿ ಹಂಸರೂಪನ
ಜೊತೆಗೆ ನಲಿಯುವ ಮಾಟವ

ಕಡಲನೀಜುವೆನೆಂಬ ಮರುಳನ
ಕಲ್ಪನೆಗೆ ನಗುವಂದದಿ ।
ಇಂಥ ತಾಯಿಯ ತಿಳಿದೆನೆಂದರೆ
ಶ್ರೀಪ್ರಸಾದನು ನಗುವನು ॥

ಕುಬ್ಜನಾದವ ಮುಗಿಲ ಚಂದ್ರನ
ಹಿಡಿವಯತ್ನದ ತೆರದಲಿ
ಬುದ್ಧಿಯರಿತರೂ ಹೃದಯವರಿಯದು
ತಾಯಿ ದುರ್ಗೆಯ ನಿಜವನು ॥

10. ಅದನ್ನು ಕೇಳುತ್ತ ಕೇಳುತ್ತ ಅದರ ಭಾವಾರ್ಥವನ್ನು ಡಾಕ್ಟರಿಗೆ ಆಗಾಗ ಮೃದುಸ್ವರದಲ್ಲಿ ವಿವರಿಸಿದರು. 'ಬುದ್ಧಿ ಅರಿತರು ಹೃದಯುವರಿಯುದು ತಾಯಿ ದುರ್ಗೆಯು ನಿಜವನು' ಎಂಬ ಸಾಲನ್ನು ಹಾಡುವಾಗ 'ಹೃದಯುವರಿತರೂ ಬುದ್ಧಿಯರಿಯುದು' ಎಂದು ಗಾಯಕನು ಹಾಡಿದ. ಶ್ರೀರಾಮಕೃಷ್ಣರು ಗಾಯಕನನ್ನು ತಡೆದು ಹೀಗೆ ಹೇಳಿದರು : "ಅಲ್ಲ, ಅಲ್ಲ, ತಿರುಗುಮುರುಗು ಆಗಿದೆ. ಮನಸ್ಸು ಭಗವಂತನನ್ನು ಅರಿಯುವ ಪ್ರಯತ್ನದಲ್ಲಿ, ಅನಾದಿ ಅನಂತನಾದ ಅವನನ್ನು ಗ್ರಹಿಸುವುದು ತನ್ನ ಕೆಲಸವಲ್ಲ ಎಂಬುದನ್ನು ಅರಿಯುತ್ತದೆ. ಆದರೆ ಹೃದಯ ಇದನ್ನು ಒಪ್ಪುವುದೇ ಇಲ್ಲ. ಹೇಗೆ ಅವನನ್ನು ಪಡೆಯುವುದೆಂಬುದೇ ಅದರ ಹಂಬಲ.

ಡಾಕ್ಟರನು ಈ ಮಾತನ್ನು ಕೇಳಿ ಮುಗ್ಧನಾಗಿ ಹೇಳಿದ : "ಸರಿಯಾಗಿ ಹೇಳಿದಿರಿ. ಮನಸ್ಸು ತುಂಬಾ ಚಿಕ್ಕದು. ಸ್ವಲ್ಪದರಲ್ಲಿಯೆ ನನಗಾಗುವುದಿಲ್ಲ, ಸಾಧ್ಯವಿಲ್ಲ ಎಂದು ಕುಳಿತು ಬಿಡುತ್ತದೆ. ಆದರೆ ಹೃದಯ ಇದನ್ನು ಒಪ್ಪುವುದಿಲ್ಲ. ಇದರಿಂದಾಗಿಯೆ ಎಲ್ಲ ಆವಿಷ್ಕಾರಗಳು ನಡೆದಿರುವುದು ಮತ್ತು ನಡೆಯುತ್ತಿರುವುದು."

11. ಹಾಡನ್ನು ಕೇಳುತ್ತಿದ್ದ ಇಬ್ಬರು ಮೂವರು ಯುವಕ ಭಕ್ತರು ಭಾವಾವೇಶದಲ್ಲಿ ಬಾಹ್ಯ ಜ್ಞಾನವನ್ನು ಕಳೆದುಕೊಂಡಿದ್ದರು. ಡಾಕ್ಟರ್ ಇದನ್ನು ನೋಡಿ ಅವರ ನಾಡಿ ಪರೀಕ್ಷಿಸಿ ಹೇಳಿದ : "ಮೂರ್ಛೆ ತಪ್ಪಿದವರಂತೆ ಬಾಹ್ಯ ವಿಷಯದ ಜ್ಞಾನ ಇವರಿಗಿಲ್ಲ ವೆನಿಸುತ್ತಿದೆ." ಅವರ ಎದೆಯ ಮೇಲೆ ಕೈಯಾಡಿಸಿ ಮೃದುಸ್ವರದಲ್ಲಿ ಅವರ ಹೆಸರನ್ನು

ಕರೆದನು. ಮೊದಲಿನಂತೆ ಅವರು ಪ್ರಕೃತಿಸ್ಥರಾಗಲು ಶ್ರೀರಾಮಕೃಷ್ಣರನ್ನು ಲಕ್ಷಿಸಿ ಅವನು ಹೇಳಿದನು, "ಇದೆಲ್ಲ ನಿಮ್ಮದೆ ಆಟವೆಂದು ತೋರುತ್ತದೆ" ಎಂದು. ಶ್ರೀರಾಮ ಕೃಷ್ಣರು ನಗುತ್ತಾ ಹೇಳಿದರು : "ನನ್ನದಲ್ಲಪ್ಪ. ಇದೆಲ್ಲ ಭಗವಂತನ ಇಚ್ಛೆ. ಇವರ ಮನಸ್ಸು ಇನ್ನೂ ಪತ್ನಿ, ಪುತ್ರ, ಹಣ, ಕೀರ್ತಿ ಮುಂತಾದವುಗಳಿಗೆ ಅಂಟಿಕೊಂಡಿಲ್ಲ. ಆದ್ದ ರಿಂದಲೆ ಭಗವಂತನ ನಾಮವನ್ನು ಕೇಳಿದಾಕ್ಷಣ ಅದರಲ್ಲೆ ತನ್ಮಯರಾಗಿ ಈ ಸ್ಥಿತಿ ಉಂಟಾಗುತ್ತದೆ ಅವರಿಗೆ.

12. ಮತ್ತೆ ಹಿಂದಿನ ವಿಷಯವೆ ಪ್ರಸ್ತಾಪಕ್ಕೆ ಬಂದಿತು. ಯಾರೊ ಒಬ್ಬರು ಡಾಕ್ಟರ್‌ನಿಗೆ ಹೇಳಿದರು : ಡಾಕ್ಟರ್ ದೇವರನ್ನು ಒಪ್ಪುತ್ತಾನೆ ಮತ್ತು ಅವನಿಗೆ ಒಂದು ಮಿತಿಯನ್ನು ಕಲ್ಪಿಸುವುದಿಲ್ಲ ನಿಜ. ಆದರೂ ಕೆಲವು ವಿಜ್ಞಾನಿಗಳು ದೇವರನ್ನು ಸಂಪೂರ್ಣ ಅಲಕ್ಷಿಸಿರುವರು. ಇನ್ನು ಕೆಲವರು ಅವನ ಅಸ್ತಿತ್ವವನ್ನು ಒಪ್ಪಿಕೊಂಡರೂ ಅವನ ಸ್ವರೂ ಪಕ್ಕೆ ಮಿತಿಯನ್ನು ಕಲ್ಪಿಸುತ್ತಾರೆ ಮತ್ತು ಅವನು ಯಾವುದೋ ಒಂದು ನಿಯಮವನ್ನು ಮೀರಿಹೋಗಲಾರ ಎಂದು ಹೇಳುತ್ತಾರೆ. ಡಾಕ್ಟರ್ ಇದಕ್ಕೆ ಉತ್ತರವಾಗಿ ಹೇಳಿದ : "ಹೌದು ಇದು ಬಹುಮಟ್ಟಿಗೆ ಸತ್ಯ. ಆದರೆ ವಿಷಯ ಏನು ಗೊತ್ತೆ ? ಅದು ಕಲಿಕೆಯ ಬಿಸಿ, ಜ್ಞಾನದ ಅಜೀರ್ಣ. ಭಗವಂತನ ಸೃಷ್ಟಿಯ ಎಲ್ಲೊ ಕೆಲವು ವಸ್ತುಗಳ ಜ್ಞಾನ ವನ್ನು ಪಡೆದು ಇಡೀ ವಿಶ್ವದ ರಹಸ್ಯವನ್ನೇ ನಾವು ಕಂಡು ಹಿಡಿದಿರುವೆವು ಎಂದು ಅವರು ಭಾವಿಸುತ್ತಾರೆ. ಯಾರು ಚೆನ್ನಾಗಿ ಅಧ್ಯಯನ ಮಾಡಿರುವರೊ ಮತ್ತು ಹೆಚ್ಚು ಅನು ಭವವನ್ನು ಪಡೆದಿರುವರೊ ಅವರು ಈ ದೋಷದಿಂದ ಮುಕ್ತರಾಗಿರುವರು. ನನ್ನ ಮಟ್ಟಿಗೆ ಹೇಳುವುದಾದರೆ ನಾನೆಂದೂ ಆ ರೀತಿ ಯೋಚಿಸುವವನಲ್ಲ".

ಶ್ರೀರಾಮಕೃಷ್ಣರು ಹೇಳಿದರು : "ನೀನು ಹೇಳುವುದು ನಿಜ. ವಿದ್ಯೆಯನ್ನು ಪಡೆದ ಕೂಡಲೆ ನಾನು ಪಂಡಿತ, ನಾನು ಏನು ತಿಳಿದಿರುವೆನೊ ಅದೇ ಸತ್ಯ. ಬೇರೆಯವರು ಹೇಳುವುದೆಲ್ಲ ಸುಳ್ಳು ಎಂಬ ಒಂದು ಅಹಂಕಾರ ಬಂದುಬಿಡುತ್ತದೆ. ಮನುಷ್ಯನು ನಾನಾ ಬಂಧನಗಳಿಂದ ಬದ್ಧನಾಗಿದ್ದಾನೆ. ವಿದ್ಯಾಭಿಮಾನ ಅದರಲ್ಲಿ ಒಂದು. ನೀನು ಇಷ್ಟೊಂದು ವಿದ್ಯಾವಂತನಾಗಿದ್ದರೂ ನಿನ್ನಲ್ಲಿ ಈ ಅಹಂಕಾರ ಇಲ್ಲ. ಇದು ಭಗವಂತನ ಕೃಪೆ".

13. ಡಾಕ್ಟರನು ಈ ಮಾತನ್ನು ಕೇಳಿ ಉತ್ಸಾಹದಿಂದ ನುಡಿದ : "ಅಹಂಕಾರ ಉಂಟಾಗುವುದಂತೂ ದೂರದ ಮಾತು. ನಾನು ಏನು ಕಲಿತಿರುವೆನೊ ಅದು ಅತ್ಯಂತ ಸಾಮಾನ್ಯ, ಅದು ಏನೂ ಅಲ್ಲ ಎಂದೆನಿಸುತ್ತದೆ. ಇನ್ನೂ ಕಲಿಯಬೇಕಾದುದು ಎಷ್ಟೋ ಇದೆ. ಬೇರೆಯವರಿಗೆ ತಿಳಿದಿರುವ ಎಷ್ಟೋ ವಿಷಯಗಳು ನನಗೆ ತಿಳಿದಿಲ್ಲ ಎಂಬುದನ್ನು ನಾನು ಸ್ಪಷ್ಟವಾಗಿ ನೋಡುತ್ತಿದ್ದೇನೆ. ಕೇವಲ ಮನಸ್ಸಿನಲ್ಲಿ ಭಾವಿಸುವುದಷ್ಟೆ ಅಲ್ಲ. ಆದ್ದ ರಿಂದ ಯಾರ ಮೂಲಕವಾದರೂ ಏನನ್ನಾದರೂ ಕಲಿಯಲು ನನಗೆ ಅಪಮಾನವೆಂದೆನಿ ಸುವುದಿಲ್ಲ. (ನಮ್ಮ ಕಡೆ ಕೈ ತೋರಿಸಿ) ಇವರುಗಳ ಮೂಲಕವೂ ನಾನು ಕಲಿಯುವ ಎಷ್ಟೋ ವಿಷಯಗಳಿರಬಹುದು. ಈ ದೃಷ್ಟಿಯಿಂದ ನಾನು ಎಲ್ಲರ ಪಾದಧೂಳಿಯನ್ನು ಸ್ವೀಕರಿಸಬಲ್ಲೆ."

ಶ್ರೀರಾಮಕೃಷ್ಣರು ಇದನ್ನು ಕೇಳಿ ಹೇಳಿದರು (ನಮ್ಮ ಕಡೆ ಕೈ ತೋರಿಸಿ) : "ನಾನೂ ಇವರಿಗೆಲ್ಲ ಹೇಳುತ್ತೇನೆ 'ಸ್ನೇಹಿತನೆ, ಎಲ್ಲಿಯವರೆಗೆ ಬದುಕಿರುತ್ತೇನೆಯೊ ಅಲ್ಲಿಯವರೆಗೆ ಕಲಿಯುವೆನು' !" ಅನಂತರ ಡಾಕ್ಟರನ್ನು ತೋರಿಸಿ ನಮಗೆ ಹೇಳಿದರು : "ಎಂಥ ಒಂದು ನಿರಭಿಮಾನ, ನೋಡಿದಿರಾ ? ಒಳಗಡೆ ಪದಾರ್ಥ ಇದೆ. ಆದ್ದರಿಂದಲೆ ಈ ರೀತಿಯ ಬುದ್ಧಿ".

14. ಈ ರೀತಿ ಅನೇಕ ಮಾತುಕತೆಗಳ ನಂತರ ಡಾಕ್ಟರ್ ಬೀಳ್ಕೊಂಡು ಹೊರಟುಹೋದನು. ಡಾ. ಮಹೇಂದ್ರಲಾಲನಿಗೆ ಹೀಗೆ ದಿನದಿನವೂ ಶ್ರೀರಾಮಕೃಷ್ಣರ ಮೇಲೆ ಶ್ರದ್ಧಾ ಭಕ್ತಿ ಅಧಿಕವಾಗತೊಡಗಿತು. ಶ್ರೀರಾಮಕೃಷ್ಣರೂ ಕೂಡ ಅವನು ಧರ್ಮ ಮಾರ್ಗದಲ್ಲಿ ಮುಂದುವರಿಯುವಂತೆ ಮಾಡಲು ಪ್ರಯತ್ನಿಸುತ್ತಿದ್ದರು. ಇಷ್ಟೇ ಅಲ್ಲದೆ ಸುಸಂಸ್ಕೃತ ವ್ಯಕ್ತಿಗಳು ಸುಸಂಸ್ಕೃತರೊಡನೆ ಮಾತನಾಡಲು ಇಷ್ಟಪಡುತ್ತಾರೆ. ಇದನ್ನು ತಿಳಿದಿದ್ದ ಶ್ರೀರಾಮಕೃಷ್ಣರು ತಮ್ಮ ಶಿಷ್ಯನಾದ ಮಹೇಂದ್ರನಾಥ, ಗಿರೀಶ್‌ಚಂದ್ರ, ನರೇಂದ್ರನಾಥ್ ಇವರೇ ಮುಂತಾದವರನ್ನು ವಿದ್ವಾಂಸನಾದ ಡಾಕ್ಟರನೊಡನೆ ಮಾತ ನಾಡಲು ಕಳುಹಿಸುತ್ತಿದ್ದರು. ಗಿರೀಶಚಂದ್ರನ ಪರಿಚಯವಾದನಂತರ ಡಾಕ್ಟರ್ ಒಂದು ದಿನ 'ಬುದ್ಧಚರಿತೆ'ನಾಟಕವನ್ನು ನೋಡಲು ಹೋಗಿದ್ದನು. ಅದನ್ನು ಅವನು ನೂರು ಬಾಯಲ್ಲಿ ಪ್ರಶಂಸಿಸಿದ್ದನು ಮತ್ತು ಗಿರೀಶಚಂದ್ರನ ಇನ್ನು ಕೆಲವು ನಾಟಕ ಗಳನ್ನು ಹೋಗಿ ನೋಡಿದ್ದನು. ಹೀಗೆ ನರೇಂದ್ರನಾಥನೊಡನೆ ಮಾತನಾಡಿ ಅವನು ಮುಗ್ಧನಾಗಿ ಅವನನ್ನು ಒಂದು ದಿನ ಊಟಕ್ಕೆ ಆಹ್ವಾನಿಸಿದನು. ಅವನಿಗೆ ಸಂಗೀತ ಗೊತ್ತಿದೆಯೆಂದು ತಿಳಿದು ಡಾಕ್ಟರ್ ಒಂದು ದಿನ ಅವನ ಭಜನೆ ಕೇಳಬೇಕೆಂದು ಆಸೆ ಪಟ್ಟನು. ಇದಾದ ಕೆಲವು ದಿನಗಳ ನಂತರ ಡಾಕ್ಟರ್ ಒಂದು ದಿನ ಮಧ್ಯಾಹ್ನ ಶ್ರೀರಾಮಕೃಷ್ಣರನ್ನು ನೋಡಲು ಹೋಗಿದ್ದನು. ಆಗ ನರೇಂದ್ರನು ಎರಡು ಮೂರು ಗಂಟೆ ಹಾಡಿ ಡಾಕ್ಟರ್‌ನ ಆಸೆಯನ್ನು ಪೂರ್ಣಗೊಳಿಸಿದನು. ಡಾಕ್ಟರ್ ಅಂದು ಎಷ್ಟೊಂದು ಸಂತೋಷಗೊಂಡನೆಂದರೆ ಅಲ್ಲಿಂದ ಹೊರಡುವಾಗ ನರೇಂದ್ರನನ್ನು ಪುತ್ರ ನಂತೆ ಪ್ರೀತಿಯಿಂದ ಆಲಂಗಿಸಿ ಆಶೀರ್ವದಿಸಿದನು. ಶ್ರೀರಾಮಕೃಷ್ಣರಿಗೆ ಹೇಳಿದನು : "ಈ ರೀತಿಯ ಹುಡುಗ ಆಧ್ಯಾತ್ಮಿಕತೆಯನ್ನು ಪಡೆಯುಲು ಬಂದಿರುವುದನ್ನು ನೋಡಿ ನನಗೆ ತುಂಬ ಆನಂದವಾಗುತ್ತಿದೆ. ಇವನು ಒಂದು ರತ್ನ, ಇವನು ಏನು ತೆಗೆದು ಕೊಂಡರೂ ಅದರಲ್ಲಿ ಉನ್ನತಿ ಸಾಧಿಸುತ್ತಾನೆ." ಶ್ರೀರಾಮಕೃಷ್ಣರು ಇದನ್ನು ಕೇಳಿ ನರೇಂದ್ರನಾಥನ ಕಡೆ ಪ್ರಸನ್ನ ದೃಷ್ಟಿಯನ್ನು ಬೀರಿ ಹೇಳಿದರು : "ಅದ್ವೈತನ ಹುಂಕಾರ ವನ್ನು ಆಲಿಸಿಯೆ ಗೌರಾಂಗನು ನದಿಯಾಕ್ಕೆ ಬಂದನು ಎಂದು ಹೇಳುತ್ತಾರೆ. ಈಗ ಎಲ್ಲವೂ ಇವನಿಗಾಗಿ (ನರೇಂದ್ರ)." ಅನಂತರ ಶ್ರೀರಾಮಕೃಷ್ಣರನ್ನು ನೋಡಲು ಬಂದಾಗಲೆಲ್ಲ ಡಾಕ್ಟರ್ ನರೇಂದ್ರನಿಂದ ಕೆಲವು ಹಾಡುಗಳನ್ನು ಕೇಳದೆ ಹೋಗುತ್ತಿ ರಲಿಲ್ಲ.

15. ಈಗ ಶರತ್ಕಾಲ. ಬಂಗಾಳದಲ್ಲಿ ದುರ್ಗಾಪೂಜೆಯ ಸಮಯ. ಶ್ರೀರಾಮ

ಕೃಷ್ಣರ ಕಾಯಿಲೆ ಕೆಲವೊಮ್ಮೆ ಕಡಿಮೆಯಾಗುತ್ತಿದೆ, ಕೆಲವೊಮ್ಮೆ ವೃದ್ಧಿಯಾಗುತ್ತಿದೆ. ಔಷಧಿಯಿಂದ ಯಾವ ಪ್ರಯೋಜನವೂ ಕಂಡು ಬರಲಿಲ್ಲ. ಒಂದು ದಿನ ಡಾಕ್ಟರ್ ಬಂದವನು ಕಾಯಿಲೆ ಉಲ್ಬಣವಾಗಿರುವುದನ್ನು ಕಂಡು ಹೇಳಿದ "ಆಹಾರದಲ್ಲಿ ಏನೊ ವ್ಯತ್ಯಾಸವಾಗಿರಬೇಕು. ಇಂದು ನೀವೇನು ತಿಂದಿರಿ ಹೇಳಿ ?"

ಅವರು ಎಂದಿನಂತೆ ಬೆಳಗ್ಗೆ ಗಂಜಿ, ಸಾರು, (ರ್ಝೋಲ್) ಹಾಲು ಸೇವಿಸಿದ್ದರು. ಮತ್ತು ಸಂಜೆ ಹಾಲು ಮತ್ತು ಬಾರ್ಲಿನೀರು ತೆಗೆದುಕೊಂಡಿದ್ದರು. ಡಾಕ್ಟರಿಗೆ ಇದನ್ನು ತಿಳಿಸಿದಾಗ ಅವನು ಹೇಳಿದ : "ಇಲ್ಲ ನಾನಿದನ್ನು ಒಪ್ಪುವುದಿಲ್ಲ. ಪಥ್ಯದಲ್ಲಿ ಏನೊ ಬದಲಾವಣೆ ಆಗಿದೆ, ಹೇಳಿ ರ್ಝೋಲ್‌ನಲ್ಲಿ ಯಾವ ತರಕಾರಿ ಇತ್ತು ?" ಶ್ರೀರಾಮ ಕೃಷ್ಣರು ಉತ್ತರಿಸಿದರು : "ಅದರಲ್ಲಿ ಆಲೂಗೆಡ್ಡೆ, ಬಾಳೆಕಾಯಿ, ಬದನೆಕಾಯಿ ಮತ್ತು ಒಂದೆರಡು ತುಂಡು ಹೂಕೋಸು ಇದ್ದುವು."

ಡಾಕ್ಟರ್ ಉತ್ತೇಜನದಿಂದ : "ಹಾ ! ನೀವು ಹೂಕೋಸನ್ನು ತಿಂದಿರಾ ? ಅದೇ ತೊಂದರೆ ಆಗಿರುವುದು. ಹೂಕೋಸು ತುಂಬಾ ಉಷ್ಣ, ಅದನ್ನು ಜೀರ್ಣಿಸಿಕೊಳ್ಳುವುದು ತುಂಬಾ ಕಷ್ಟ. ಎಷ್ಟು ಹೋಳುಗಳನ್ನು ತಿಂದಿರಿ ?'

ಶ್ರೀರಾಮಕೃಷ್ಣರು : "ಒಂದೂ ತಿನ್ನಲಿಲ್ಲ. ಅದು ರ್ಝೋಲಿನಲ್ಲಿದ್ದುದನ್ನು ನೋಡಿದೆ ಅಷ್ಟೆ."

ಡಾಕ್ಟರ್ : "ನೀವು ತಿಂದಿರಲೇಬೇಕೆಂದಿಲ್ಲ. ರ್ಝೋಲಿನಲ್ಲಿ ಅದರ ಸಾರ ಇದ್ದೇ ಇರುತ್ತದೆ. ಅದು ನಿಮ್ಮ ಜೀರ್ಣವನ್ನು ಕೆಡಿಸಿ ಈಗ ರೋಗ ವೃದ್ಧಿಯಾಗಿದೆ."

ಶ್ರೀರಾಮಕೃಷ್ಣರು : "ಅದು ಹೇಗೆ ? ನಾನು ಹೂಕೋಸನ್ನೂ ತಿನ್ನಲಿಲ್ಲ, ಹೊಟ್ಟೆ ಯಲ್ಲಿ ಏನೂ ತೊಂದರೆ ಆಗಲಿಲ್ಲ. ಆದರ ಎಲ್ಲೊ ಸ್ವಲ್ಪ ರಸ ರ್ಝೋಲಿನಲ್ಲಿದ್ದುದರಿಂದ ರೋಗ ಉಲ್ಬಣವಾಯಿತೆಂಬ ಮಾತನ್ನು ಸ್ವೀಕರಿಸುವುದು ಕಷ್ಟ."

ಡಾಕ್ಟರ್ : "ಸ್ವಲ್ಪದರಲ್ಲಿಯೆ ಎಂಥ ಅಪಕಾರವಾಗಬಹುದೆಂಬುದನ್ನು ನೀವು ಗ್ರಹಿಸಲಾರಿರಿ. ನನ್ನ ಜೀವನದ ಘಟನೆಯೊಂದನ್ನು ಹೇಳುತ್ತೇನೆ, ಆಗ ನಿಮಗೆ ಅರ್ಥ ವಾಗುತ್ತದೆ. ನನಗೆ ಜೀರ್ಣಶಕ್ತಿ ಅತ್ಯಂತ ಕಡಮೆ. ಆಗಾಗ ತುಂಬಾ ಅಜೀರ್ಣವಾಗು ತ್ತಿತ್ತು. ಆದ್ದರಿಂದ ಉಣ್ಣುವ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದ ಇರುತ್ತೇನೆ. ಅಂಗಡಿಯ ಯಾವ ವಸ್ತುವನ್ನೂ ತಿನ್ನುವುದಿಲ್ಲ. ತುಪ್ಪ ಎಣ್ಣೆಯನ್ನೂ ಕೂಡ ಮನೆ ಯಲ್ಲಿಯೆ ತಯಾರಿಸುತ್ತೇವೆ. ಆದರೂ ಕೂಡ ಒಮ್ಮೆ ನನಗೆ ನೆಗಡಿ ಆಯಿತು ಮತ್ತು ಅದು ಬ್ರಾಂಕೈಟೀಸ್‌ಗೆ ತಿರುಗಿತು. ಏನು ಮಾಡಿದರೂ ವಾಸಿಯಾಗಲಿಲ್ಲ, ಆಗ ತಿಳಿಯಿತು, ಆಹಾರದಲ್ಲೆ ಏನೋ ದೋಷ ಉಂಟಾಗಿದೆ ಎಂದು. ವಿಚಾರಿಸಿ ನೋಡಿದಾಗ ಅದರಲ್ಲಿ ಯಾವ ದೋಷವೂ ಕಂಡುಬರಲಿಲ್ಲ. ಅನಂತರ ಒಂದು ದಿನ ತಿಳಿಯಿತು, ಆಳು ಹಸುವಿಗೆ ಕಿಡ್ನಿಬೀನ್ಸ್ ತಿನ್ನಿಸಿದ್ದ. ನಾನು ಹಸುವಿನ ಹಾಲನ್ನು ಕುಡಿದಿದ್ದೆ. ಯಾವುದೊ ಒಂದು ಪ್ರದೇಶದಿಂದ ಅನೇಕ ಮೂಟೆ–ಕಿಡ್ನಿಬೀನ್ಸ್ ತಂದಿದ್ದರು. ನೆಗಡಿ ಆಗುವ ಭಯದಿಂದ ಅದನ್ನು ಯಾರೂ ಸ್ವೀಕರಿಸದೆ ಎಲ್ಲವನ್ನೂ ಹಸುಗಳಿಗೆ ತಿನ್ನಿಸಿದ್ದರು. ವಿಚಾರಿಸಿ ನೋಡಿ

ದಾಗ ತಿಳಿದುಬಂತು ಅದೇ ಸಮಯದಿಂದಲೆ ನನಗೆ ನೆಗಡಿ ಶುರುವಾಗಿತ್ತು ಎಂದು. ಆಗ ಹಸುವಿಗೆ ಕಿಡ್ನಿಬೀನ್ಸ್ ತಿನ್ನಿಸುವುದನ್ನು ನಿಲ್ಲಿಸಿದೆ. ಕ್ರಮೇಣ ನನ್ನ ನೆಗಡಿಯೂ ಕಡಿಮೆ ಯಾಯಿತು. ಆ ಸಮಯದಲ್ಲಿ ನಾನು ಆರೋಗ್ಯವಂತನಾಗಲು ಬಹಳ ಸಮಯ ಹಿಡಿದಿತ್ತು. ಸುಮಾರು ನಾಲ್ಕು ಐದು ಸಾವಿರ ರೂಪಾಯಿ ಖರ್ಚು ಮಾಡಬೇಕಾಗಿತ್ತು."

ಶ್ರೀರಾಮಕೃಷ್ಣರು ಮುಗುಳ್ನಕ್ಕು : "ಅಯ್ಯಪ್ಪಾ, ಇದು ಹುಣಿಸೆಮರದ ಕೆಳಗೆ ಹೋಗಿದ್ದರಿಂದ ನೆಗಡಿ ಆದಂತೆಯೆ ಆಯಿತು !"

ಎಲ್ಲರೂ ನಕ್ಕರು. ಡಾಕ್ಟರನ ಅನುಮಾನ ತುಂಬ ಉತ್ಪ್ರೇಕ್ಷೆಯಾಗಿ ಕಂಡರೂ ಯಾರೂ ಅದನ್ನು ಪ್ರಶ್ನಿಸಲಿಲ್ಲ–ಆದರಲ್ಲಿ ಅವನಿಗೆ ತುಂಬಾ ನಂಬುಗೆ ಇದ್ದುದರಿಂದ. ಅವನ ಸೂಚನೆಯಂತೆ ಶ್ರೀರಾಮಕೃಷ್ಣರ ಝೋಲಿಗೆ ಹೂಕೋಸನ್ನು ಹಾಕುವುದನ್ನು ನಿಲ್ಲಿಸಲಾಯಿತು.

16. ಶ್ರೀರಾಮಕೃಷ್ಣರಿಗೆ ಅವನ ಮೇಲಿದ್ದ ಪ್ರೀತಿ ಅವರ ಸರಳ ಪ್ರಾಮಾಣಿಕ ವರ್ತನೆ ಮತ್ತು ಆಧ್ಯಾತ್ಮಿಕ ಸ್ವಭಾವ ಇವು ಡಾಕ್ಟರನ್ನು ಶ್ರೀರಾಮಕೃಷ್ಣರೆಡೆಗೆ ಆಕರ್ಷಿಸಿದುವು. ನಿಧಾನವಾಗಿ ಅವನಲ್ಲಿ ಅವರ ಮೇಲೆ ಶ್ರದ್ಧಾಭಕ್ತಿ ಉಂಟಾಯಿತು, ಒಂದು ಸಂದರ್ಭದಲ್ಲಿ ಅವನ ಮಾತು ಕೃತಿಗಳು ಇದನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದುವು. ಅವನಿಗೀಗ ಶ್ರೀರಾಮಕೃಷ್ಣರ ಮೇಲೆ ಮಾತ್ರವಲ್ಲದೆ ಅವರ ಭಕ್ತರ ಮೇಲೆಯೂ ಪ್ರೀತಿ ಉಂಟಾಯಿತು. ಶ್ರೀರಾಮಕೃಷ್ಣರ ಮೇಲೆ ಅವರ ಭಕ್ತಿ ಕೇವಲ ತೋರಿಕೆಯದಲ್ಲ, ಅವರು ತುಂಬ ವಿಶ್ವಾಸ ಉಳ್ಳವರು ಎಂಬುದು ಅವನಿಗೆ ದೃಢವಾಯಿತು. ಆದರೆ ಶ್ರೀರಾಮಕೃಷ್ಣರ ಮೇಲೆ ಅವರಿಗಿದ್ದ ಅತ್ಯಂತ ಆಳವಾದ ಪ್ರೀತಿ ವಿಶ್ವಾಸಗಳನ್ನು ಅವನು ಯಾವ ದೃಷ್ಟಿಯಿಂದ ಕಾಣುತ್ತಿದ್ದ ಎಂಬುದನ್ನು ಹೇಳುವುದು ಕಷ್ಟ. ಅವನ ದೃಷ್ಟಿಯಲ್ಲಿ ಅದು ಅತಿಯಾಯಿತೆಂದೇ ಇರಬೇಕು ಎನ್ನಿಸುತ್ತದೆ. ಅವರುಗಳು ಶ್ರೀರಾಮಕೃಷ್ಣರನ್ನು ಪ್ರೀತಿಸುವುದು ಸ್ವಾರ್ಥಕ್ಕಾಗಿಯೇ ಆಗಲಿ ಪ್ರದರ್ಶನಕ್ಕಾಗಿಯೆ ಆಗಲಿ ಅಲ್ಲ ಎಂಬುದಂತೂ ಅವನಿಗೆ ನಿಶ್ಚಯವಾಗಿತ್ತು. ಅವನಿಗೆ ಇದೊಂದು ವಿಚಿತ್ರವಾದ ರಹಸ್ಯವಾಗಿಯೆ ತೋರುತ್ತಿತ್ತು ಎಂದೆನಿಸುತ್ತದೆ. ಭಕ್ತರೊಡನೆ ಅವನು ಅತ್ಯಂತ ನಿಕಟವಾಗಿ ಬೆರೆತು ತನ್ನ ತೀಕ್ಷ್ಣಬುದ್ಧಿಯ ಮೂಲಕ ರಹಸ್ಯವನ್ನು ಭೇದಿಸಲು ಪ್ರತಿನಿತ್ಯ ಪ್ರಯತ್ನಿಸುತ್ತಿದ್ದರೂ ಅವನು ಅದರಲ್ಲಿ ಸಮರ್ಥನಾಗಿರಲಿಲ್ಲ. ಏಕೆಂದರೆ ಅವನು ಭಗವದ್ಭಕ್ತಿ ಉಳ್ಳವನಾದರೂ ಯಾರೆ ಒಬ್ಬ ಅಸಾಧಾರಣ ವ್ಯಕ್ತಿಯನ್ನು ಗುರು ಅಥವಾ ಅವತಾರ ಎಂದು ಪರಿಗಣಿಸಿ ಶ್ರದ್ಧಾಭಕ್ತಿಯನ್ನು ತೋರಿಸುವುದು ಅವನ ಪಾಶ್ಚಾತ್ಯ ಮನೋಭಾವಕ್ಕೆ ಒಗ್ಗುತ್ತಿರಲಿಲ್ಲ. ಅಷ್ಟೆ ಅಲ್ಲದೆ ಅವನು ಅದನ್ನು ವಿರೋಧಿಸುತ್ತಿದ್ದನೂ ಕೂಡ. ಏಕೆಂದರೆ ಈ ಜಗತ್ತಿನಲ್ಲಿ ಯಾರು ಯಾರು ಅವತಾರ ಪುರುಷರೆಂದು ಪೂಜಿಸಲ್ಪಡುತ್ತಿರುವರೊ ಅವರು ಸ್ವರೂಪತಃ ಹೇಗಿದ್ದರು ಎಂಬುದು ಜನಸಾಧಾರಣರಿಗೆ ತಿಳಿಯುವುದು ಅಸಂಭವವಾಗಿಬಿಟ್ಟಿದೆ. ಇದಕ್ಕೆ ಕಾರಣ ಅವರ ಶಿಷ್ಯರುಗಳು ಅವರ ಮಹಿಮೆಯನ್ನು ಪ್ರಚಾರ ಮಾಡುವಾಗ ತಮ್ಮ ಮನಸ್ಸಿಗೆ ತೋಚಿದಂತೆ ಉತ್ಪ್ರೇಕ್ಷೆ ಮಾಡಿ

ರುವರು. ಈ ವಿಷಯದಲ್ಲಿ ಡಾಕ್ಟರ್ ಒಂದು ದಿನ ಶ್ರೀರಾಮಕೃಷ್ಣರ ಮುಂದೆ ಸ್ಪಷ್ಟ ವಾಗಿ ಹೇಳಿದ : "ಭಗವಂತನನ್ನು ಪ್ರೀತಿಸುವುದು ಪೂಜಿಸುವುದು ಇದೆಲ್ಲ ಸರಿ. ಆದರೆ ಆ ಅನಂತ ಭಗವಂತನು ಮನುಷ್ಯರೂಪವನ್ನು ಪಡೆದು ಬಂದಿರುವನು ಎಂದು ಹೇಳಿದರೆ ತುಂಬ ಗೊಂದಲ ಉಂಟಾಗುವುದು. ಅವನು ಯಶೋದಾನಂದನ, ಮೇರಿನಂದನ, ಶಚೀ ನಂದರ ಕೌಸಲ್ಯಾನಂದನ ಆಗಿ ಬಂದಿದ್ದಾನೆ ಎಂಬ ಮಾತನ್ನು ಅರ್ಥ ಮಾಡಿಕೊಳ್ಳು ವುದು ಕಷ್ಟ. ಈ ನಂದನ ಗುಂಪಿನವರೆ ದೇಶವನ್ನು ಅವನತಿಗೆ ತಂದಿರುವುದು." ಶ್ರೀರಾಮ ಕೃಷ್ಣರು ಮುಗುಳ್ನಕ್ಕು ನಮಗೆ ಹೇಳಿದರು : "ಅವನು ಏನು ಹೇಳುತ್ತಿರುವನು ? ಹೀನ ಬುದ್ಧಿಯುಳ್ಳ ಅನೇಕರು ಅವತಾರ ಪುರುಷರನ್ನು ದೊಡ್ಡದು ಮಾಡಲು ಹೋಗಿ ಈ ರೀತಿಯ ಪ್ರತಿಕ್ರಿಯೆಗೆ ಕಾರಣರಾಗಿರುವರು."

**17.** ಗಿರೀಶ್‌ಚಂದ್ರ ಮತ್ತು ನರೇಂದ್ರನಾಥರು ಡಾಕ್ಟರೊಡನೆ ಈ ಮೇಲಿನ ಅವತಾರದ ವಿಷಯವಾಗಿ ಅನೇಕ ಸಂದರ್ಭಗಳಲ್ಲಿ ತುಂಬ ವಾದ ಮಾಡುತ್ತಿದ್ದರು. ಆದ್ದರಿಂದ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವಾಗ ಡಾಕ್ಟರ್ ತುಂಬ ಎಚ್ಚರಿಕೆ ವಹಿ ಸುತ್ತಿದ್ದ. ಆದರೆ ಶ್ರೀರಾಮಕೃಷ್ಣರ ಅಲೌಕಿಕ ಮಾಧುರ್ಯ ಪ್ರೇಮ ಮತ್ತು ಅಪೂರ್ವ ಆಧ್ಯಾತ್ಮಿಕ ಪ್ರಕಾಶ ಇವು ತರ್ಕದಿಂದ ಸಾಧಿಸಲಾಗದುದನ್ನು ಸಾಧಿಸಿದುವು. ಅವತಾರದ ವಿಷಯವಾಗಿ ಡಾಕ್ಟರ್ ತನ್ನ ಮೇಲಿನ ಅಭಿಪ್ರಾಯವನ್ನು ಕ್ರಮೇಣ ಬದಲಾಯಿಸಬೇಕಾ ಯಿತು. ಆ ವರ್ಷ ದುರ್ಗಾಪೂಜೆಯ ಸಂಧಿಕ್ಷಣದಲ್ಲಿ ಶ್ರೀರಾಮಕೃಷ್ಣರ ಅಲೌಕಿಕ ಆಧ್ಯಾ ತ್ಮಿಕ ಪ್ರಕಾಶವನ್ನು ನಾವೆಲ್ಲ ಪ್ರತ್ಯಕ್ಷ ಕಂಡೆವು. ಡಾಕ್ಟರ್ ಕೂಡ ಅದನ್ನು ನೋಡಿ ಪರೀ ಕ್ಷಿಸುವ ಅವಕಾಶ ಒದಗಿಬಂತು. ಅವನು ಅಂದು ಇನ್ನೊಬ್ಬ ಡಾಕ್ಟರನ್ನು ಕರೆದುಕೊಂಡು ಬಂದಿದ್ದನು. ಶ್ರೀರಾಮಕೃಷ್ಣರು ಭಾವಾವೇಶದಲ್ಲಿರುವಾಗ ಅವರ ಹೃದಯ ಸ್ಪಂದನ ಮುಂತಾದವುಗಳನ್ನು ಯಂತ್ರದ ಸಹಾಯದಿಂದ ಪರೀಕ್ಷಿಸಿ ನೋಡಿದನು. ಅವನೊಡನೆ ಬಂದಿದ್ದ ಡಾಕ್ಟರ್ ಶ್ರೀರಾಮಕೃಷ್ಣರ ತೆರೆದ ಕಣ್ಣು ಸಂಕೋಚಗೊಳ್ಳುವುದೊ ಎಂದು ನೋಡಲು ಅದರಲ್ಲಿ ಕೈಬೆರಳು ಇಡಲಿಕ್ಕೂ ಹಿಂಜರಿಯಲಿಲ್ಲ. ಈ ಎಲ್ಲ ಪರೀಕ್ಷೆಯ ಫಲ ವಾಗಿ ಅವರು ಈ ನಿರ್ಧಾರಕ್ಕೆ ಬಂದರು : ಹೊರಗಡೆಯಿಂದ ನೋಡುವುದಕ್ಕೆ ಸಂಪೂರ್ಣ ಮೃತಪಟ್ಟವರಂತೆ ಕಾಣುವ ಶ್ರೀರಾಮಕೃಷ್ಣರ ಸಮಾಧಿಯ ಅವಸ್ಥೆಯ ಬಗ್ಗೆ ವಿಜ್ಞಾ ನವು ಏನೂ ಹೇಳಲಾರದು. ಪಾಶ್ಚಾತ್ಯ ದಾರ್ಶನಿಕನು ಅದನ್ನು ಜಡತ್ವವೆಂದೇ ಭಾವಿಸಿ ತಿರಸ್ಕರಿಸುತ್ತಾನೆ. ಇದರ ಮೂಲಕ ತನ್ನ ಅಜ್ಞಾನವನ್ನು, ಇಂದ್ರಿಯ ಜಗತ್ತೇ ಸರ್ವಸ್ವ ಎಂಬ ತನ್ನ ಮನೋಭಾವವನ್ನು ವ್ಯಕ್ತಪಡಿಸುತ್ತಾನೆ. ಭಗವಂತನ ಈ ಪ್ರಪಂಚದಲ್ಲಿ ವಿಜ್ಞಾನವು ಭೇದಿಸಲಾಗದ ಎಷ್ಟೊ ರಹಸ್ಯಗಳಿವೆ. ಹೊರಗೆ ಮೃತಪಟ್ಟವರಂತೆ ಕಂಡರೂ ಶ್ರೀರಾಮಕೃಷ್ಣರು ಅಂದು ಅಂತರ್ಯದಲ್ಲಿ ಪಡೆದ ಅನುಭವಗಳೆಲ್ಲ ಅಕ್ಷರಶಃ ಸತ್ಯವಾಗಿದ್ದುವು ಎಂಬುದನ್ನು ನಾವು ಈ ಪುಸ್ತಕದ ಬೇರೆಡೆ ವಿವರಿಸಿರುವೆವು.*

---

* ಶ್ರೀರಾಮಕೃಷ್ಣ ಲೀಲಾಪ್ರಸಂಗ, ಸಾಧಕಭಾವ 8ನೇ ಅಧ್ಯಾಯ.

18. ಆಶ್ವಿನಿ ಮತ್ತು ಕಾರ್ತಿಕ ಕಳೆದು ಕಾಲೀ ಪೂಜೆಯು ಸಮೀಪಿಸುತ್ತಿದೆ. ಆದರೆ ಶ್ರೀರಾಮಕೃಷ್ಣರ ದೈಹಿಕ ಸ್ಥಿತಿಯಲ್ಲಿ ಯಾವ ಬದಲಾವಣೆಯೂ ಕಂಡು ಬರಲಿಲ್ಲ. ಚಿಕಿತ್ಸೆಯು ಮೊದಮೊದಲು ಉತ್ತಮ ಪರಿಣಾಮ ಬೀರಿತ್ತು. ಆದರೆ ಈಗ ಕಾಹಿಲೆಯು ತೀರ ಉಲ್ಬಣವಾಗುವ ಸ್ಥಿತಿಯಲ್ಲಿತ್ತು. ಆದರೆ ಶ್ರೀರಾಮಕೃಷ್ಣರ ಆನಂದ ಮತ್ತು ಉತ್ಸಾಹ ಹೆಚ್ಚುತ್ತಿತ್ತೇ ಹೊರತು ಕಡಮೆ ಆಗುತ್ತಿರಲಿಲ್ಲ. ಡಾಕ್ಟರ್ ಸರ್ಕಾರ್ ಆಗಾಗ ಬಂದು ಹೋಗುತ್ತಿದ್ದ, ಮತ್ತೆ ಮತ್ತೆ ಔಷಧಿ ಬದಲಾಯಿಸುತ್ತಿದ್ದ. ಆದರೆ ನಿರೀಕ್ಷಿಸಿದ ಪ್ರತಿಫಲವೇನೂ ಕಂಡುಬರಲಿಲ್ಲ. ಹವಾ ಬದಲಾವಣೆಯೆ ಅದಕ್ಕೆ ಕಾರಣ ವಿರಬಹುದೆಂದು ಅವನು ಭಾವಿಸಿದ. ಚಳಿಗಾಲ ಪ್ರಾರಂಭವಾದ ಮೇಲೆ ಪರಿಸ್ಥಿತಿ ಸುಧಾರಿಸಬಹುದೆಂದು ಅವನು ಆಲೋಚಿಸಿದ.

19. ದುರ್ಗಾಪೂಜೆ ಮತ್ತು ಕಾಳೀಪೂಜೆಯ ಸಮಯದಲ್ಲಿ ಭಕ್ತರು ಅಪೂರ್ವ ಆಧ್ಯಾತ್ಮಿಕ ಪ್ರಕಾಶವನ್ನು ಶ್ರೀರಾಮಕೃಷ್ಣರಲ್ಲಿ ಕಂಡರು. ಒಮ್ಮೆ ದೇವೇಂದ್ರನಾಥನು ಕಾಳೀಮೂರ್ತಿಯನ್ನು ತಂದು ಅದರಲ್ಲಿ ಪೂಜೆ ಮಾಡಬೇಕೆಂದು ಆಶಿಸಿದ್ದನು. ಶ್ರೀರಾಮ ಕೃಷ್ಣರು ಮತ್ತು ಭಕ್ತರ ಸಮ್ಮುಖದಲ್ಲಿ ಪೂಜೆ ನಡೆದರೆ ತುಂಬ ಆನಂದದಾಯಕವಾಗಿ ರುತ್ತದೆ ಎಂದು ಅವನು ಚಿಂತಿಸಿದನು ಮತ್ತು ಶ್ಯಾಮ್‌ಪುಕುರ್ ಮನೆಯಲ್ಲಿ ಪೂಜೆ ಯನ್ನು ಆಚರಿಸಬೇಕೆಂದು ಅವನು ಸೂಚನೆ ಇತ್ತನು. ಆದರೆ ಭಕ್ತರು ಈ ಪೂಜೆಯ ಉತ್ಸಾಹ, ಉದ್ವೇಗ ಮತ್ತು ಗಲಾಟೆಯಲ್ಲಿ ಶ್ರೀರಾಮಕೃಷ್ಣರಿಗೆ ತುಂಬ ಬಳಲಿಕೆ ಆಗ ಬಹುದೆಂದು ಅವನ ಈ ನಿರ್ಧಾರವನ್ನು ಒಪ್ಪಲಿಲ್ಲ. ದೇವೇಂದ್ರನಿಗೂ ಅದು ಸರಿಯೆನಿಸಿ ಆ ನಿರ್ಧಾರವನ್ನು ಕೈಬಿಟ್ಟನು. ಆದರೆ ಪೂಜೆಯ ಹಿಂದಿನ ದಿನ ಶ್ರೀರಾಮಕೃಷ್ಣರು ಕೆಲವು ಭಕ್ತರಿಗೆ ಇದ್ದಕ್ಕಿದ್ದಂತೆಯೆ ಹೇಳಿದರು : "ಸಂಕ್ಷಿಪ್ತ ಪೂಜೆಗಾಗಿ ಎಲ್ಲವನ್ನೂ ಅಣಿಗೊಳಿಸಿ. ನಾಳೆ ತಾಯಿ ಕಾಳಿಯ ಪೂಜೆ ಆಗಬೇಕು." ಅದನ್ನು ಕೇಳಿ ಸಂತೋಷದಿಂದ ಆ ಭಕ್ತರು ಇತರರೊಡನೆ ವಿಚಾರಿಸತೊಡಗಿದರು. ಮೇಲೆ ಹೇಳಿದ ಮಾತುಗಳನ್ನಲ್ಲದೆ ಶ್ರೀರಾಮ ಕೃಷ್ಣರು ಪೂಜಾಪದ್ಧತಿಯ ಬಗ್ಗೆ ಇನ್ನೇನೂ ಹೇಳದಿದ್ದುದರಿಂದ ಎಲ್ಲರೂ ಒಂದೊಂದು ರೀತಿ ಸಲಹೆ ಕೊಡತೊಡಗಿದರು. ಷೋಡಶೋಪಚಾರ ಮಾಡಬೇಕೆ ಅಥವಾ ಪಂಚೋಪ ಚಾರವೆ, ಅನ್ನಭೋಗ ಇರಬೇಕೆ ಬೇಡವೆ, ತಂತ್ರಧಾರಕರು ಯಾರು ? ಇತ್ಯಾದಿ ವಿಷಯಗಳಲ್ಲಿ ಅವರು ಯಾವ ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬರಲಾಗಲಿಲ್ಲ. ಕೊನೆಗೆ ಗಂಧ, ಹೂವು, ಧೂಪ, ದೀಪ, ಹಣ್ಣುಗಳು ಮತ್ತು ಸಿಹಿತಿಂಡಿ ಇವಿಷ್ಟನ್ನು ಮಾತ್ರ ತಂದಿಡುವುದೆಂದೂ ಶ್ರೀರಾಮಕೃಷ್ಣರು ಮತ್ತೆ ಏನಾದರೂ ಹೇಳಿದರೆ ಅದರಂತೆ ಮಾಡು ವುದೆಂದೂ ಅವರು ನಿರ್ಧರಿಸಿದರು. ಆದರೆ ಅಂದಿನ ದಿನವಾಗಲಿ ಪೂಜೆಯ ದಿನದ ಮಧ್ಯಾಹ್ನದವರೆಗಾಗಲಿ ಶ್ರೀರಾಮಕೃಷ್ಣರು ಯಾವ ಸೂಚನೆಯನ್ನೂ ಕೊಡಲಿಲ್ಲ.

20. ಸೂರ್ಯಾಸ್ತವಾಗಿ ಸಂಜೆ ಏಳುಗಂಟೆಯ ಸಮಯ. ಶ್ರೀರಾಮಕೃಷ್ಣರು ಪೂಜೆಯ ಬಗ್ಗೆ ಯಾವ ಸೂಚನೆಯನ್ನೂ ಕೊಡದೆ ಹಾಸಿಗೆಯ ಮೇಲೆ ಸುಮ್ಮನೆ ಕುಳಿ ತಿದ್ದರು. ಭಕ್ತರು ಹಾಸಿಗೆಯ ಪೂರ್ವದಿಕ್ಕಿನಲ್ಲಿ ನೆಲವನ್ನು ಶುದ್ಧಗೊಳಿಸಿ ತಾವು ಸಂಗ್ರ

ಹಿಸಿದ ವಸ್ತುಗಳನ್ನೆಲ್ಲ ಅಲ್ಲಿ ತಂದಿಟ್ಟರು. ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿರುವಾಗ ಕೆಲವೊಮ್ಮೆ ತಮ್ಮನ್ನೆ ಗಂಧಪುಷ್ಪಾದಿಗಳಿಂದ ಪೂಜಿಸಿಕೊಂಡಿದ್ದರು. ಕೆಲವು ಭಕ್ತರು ಅದನ್ನು ನೋಡಿದ್ದರು. ಈ ಬಾರಿಯೂ ಹಾಗೆ ಮಾಡಬಹುದೆಂದು ಭಕ್ತರು ಭಾವಿಸಿದರು. ತಮ್ಮ ದೇಹ ಮನಸ್ಸುಗಳನ್ನೆ ಪ್ರತೀಕವಾಗಿಟ್ಟುಕೊಂಡು ವಿಶ್ವಪ್ರಜ್ಞೆಯನ್ನು ಅವರು ಪೂಜಿಸಬಹುದು. ಅಥವಾ ಆತ್ಮನಲ್ಲಿಯೆ ಜಗನ್ಮಾತೆಯನ್ನು ಕಾಣುತ್ತಾ ತಮ್ಮನ್ನು ತಾವೆ ಪೂಜಿಸಬಹುದು ಎಂದು ಭಕ್ತರು ಆಲೋಚಿಸಿದರು. ಆದ್ದರಿಂದಲೆ ಅವರು ಪೂಜೋಪಕರಣಗಳನ್ನೆಲ್ಲ ಅವರ ಹಾಸಿಗೆಯ ಹತ್ತಿರವೆ ಜೋಡಿಸಿಟ್ಟರು. ಶ್ರೀರಾಮಕೃಷ್ಣರು ಅವರು ಹಾಗೆ ಮಾಡುವುದಕ್ಕೆ ಯಾವ ಆಕ್ಷೇಪಣೆಯನ್ನೂ ಎತ್ತಲಿಲ್ಲ.

ಕ್ರಮೇಣ ಎಲ್ಲ ವಸ್ತುಗಳನ್ನೂ ತಂದರು. ಧೂಪವನ್ನು ಹಚ್ಚಿದರು, ದೀಪವನ್ನು ಬೆಳಗಿದರು. ಕೊಠಡಿಯು ಬೆಳಕು ಮತ್ತು ಸುವಾಸನೆಯಿಂದ ತುಂಬಿಹೋಯಿತು. ಶ್ರೀರಾಮಕೃಷ್ಣರು ಆಗಲೂ ಸುಮ್ಮನೆ ಕುಳಿತಿರುವುದನ್ನು ನೋಡಿ ಭಕ್ತರು ಅವರ ಹತ್ತಿರ ಕುಳಿತರು. ಕೆಲವರು ಅವರ ಆದೇಶವನ್ನೆ ನಿರೀಕ್ಷಿಸುತ್ತ ಅವರನ್ನೆ ಏಕಾಗ್ರ ಮನಸ್ಸಿನಿಂದ ನೋಡುತ್ತಿದ್ದರು. ಮತ್ತೆ ಕೆಲವರು ಜಗನ್ಮಾತೆಯನ್ನು ಧ್ಯಾನಿಸುತ್ತಿದ್ದರು. ಕೊಠಡಿ ನಿಶ್ಶಬ್ದವಾಗಿತ್ತು. ಅಲ್ಲಿ ಮೂವತ್ತು ಜನರಿಗಿಂತ ಹೆಚ್ಚಿದ್ದರೂ ಕೊಠಡಿಯು ಖಾಲಿಯಾಗಿರುವಂತೆ ಇತ್ತು. ಹೀಗೆ ಸ್ವಲ್ಪಹೊತ್ತು ಕಳೆಯಿತು. ಶ್ರೀರಾಮಕೃಷ್ಣರು ಇನ್ನೂ ಸುಮ್ಮನೆ ಕುಳಿತಿದ್ದರು. ತಾವೂ ಪೂಜೆಯನ್ನು ಪ್ರಾರಂಭಿಸಲಿಲ್ಲ. ನಮ್ಮಲ್ಲಿ ಯಾರೊಬ್ಬರಿಗೂ ಅದನ್ನು ಮಾಡಲು ಹೇಳಲೂ ಇಲ್ಲ.

21. ಮಹೇಂದ್ರನಾಥ್, ರಾಮಚಂದ್ರ, ದೇವೇಂದ್ರನಾಥ್, ಗಿರೀಶ್‌ಚಂದ್ರ ಮುತ್ತಿತರ ಹಿರಿಯ ಭಕ್ತರು ಮತ್ತು ಯುವಕ ಭಕ್ತರು ಕೊಠಡಿಯಲ್ಲಿದ್ದರು. ಅವರಲ್ಲಿ ಗಿರೀಶ್‌ಚಂದ್ರನಿಗೆ ಅತಿರೇಕವಾದ ಶ್ರದ್ಧೆ ಇದೆ ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಪೂಜೆಯ ವಿಷಯದಲ್ಲಿ ಅವರ ಉದಾಸೀನವನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಯಿತು. ಆದರೆ ಗಿರೀಶನ ಹೃದಯದಲ್ಲಿ ಒಂದು ಹೊಸ ಭಾವಸ್ಫುರಣೆ ಉಂಟಾಯಿತು. ತಮಗಾಗಿ ಕಾಳೀಪೂಜೆ ಮಾಡುವ ಆವಶ್ಯಕತೆ ಶ್ರೀರಾಮಕೃಷ್ಣರಿಗೆ ಇಲ್ಲ ಎಂದು ಅವನಿಗೆ ಹೊಳೆಯಿತು. ನಿಃಸ್ವಾರ್ಥಭಕ್ತಿಯ ಪ್ರೇರಣೆಯಿಂದ ಪೂಜೆ ಮಾಡುವ ಆಸೆ ಅವರಿಗಿದ್ದಿದ್ದರೆ ಅವರೇಕೆ ಹೀಗೆ ಸುಮ್ಮನೆ ಕುಳಿತುಕೊಂಡಿರುತ್ತಿದ್ದರು ? ಹಾಗಿರಲಾರದು ಶ್ರೀರಾಮಕೃಷ್ಣರ ದೇಹವೆಂಬ ಜೀವಂತ ಮೂರ್ತಿಯಲ್ಲಿ ಭಕ್ತರು ಜಗನ್ಮಾತೆಯನ್ನು ಪೂಜಿಸಬೇಕೆಂಬುದು ಅವರ ಇಚ್ಛೆ ಆಗಿರಬಹುದಲ್ಲವೆ ? ಹಾಗೆಯೆ ಇರಬೇಕು. ಹೀಗೆ ಯೋಚಿಸುತ್ತಾ ಅವನು ಪರಮಾನಂದದಿಂದ ತುಂಬಿಹೋದ. ಥಟ್ಟನೆ ಗಂಧ ಪುಷ್ಪವನ್ನು ಕೈಯಲ್ಲಿ ತೆಗೆದುಕೊಂಡು 'ಜೈ ಮಾತಾ' ಎಂದು ಹೇಳುತ್ತಾ ಶ್ರೀರಾಮಕೃಷ್ಣರ ಪಾದಗಳಿಗೆ ಅರ್ಪಿಸಿದನು. ಆಗ ಶ್ರೀರಾಮಕೃಷ್ಣರು ರೋಮಾಂಚನಗೊಂಡು ಆಳ ಸಮಾಧಿಯಲ್ಲಿ ಮಗ್ನರಾದರು. ಅವರ ಮುಖ ಕಾಂತಿಮಯವಾಗಿತ್ತು, ಅವರ ತುಟಿಗಳು ದಿವ್ಯ ಮಂದಹಾಸದಿಂದ ಅಲಂಕೃತವಾಗಿದ್ದುವು. ಅವರ ಎರಡೂ ಕೈಗಳೂ ಅಭಯ ಮತ್ತು

ವರದಾನ ಮುದ್ರೆಯಲ್ಲಿದ್ದವು. ಜಗನ್ಮಾತೆಯು ಅವರಲ್ಲಿ ಆವಿರ್ಭಾವಗೊಂಡ ಎಲ್ಲ ಸೂಚನೆಗಳೂ ಕಂಡುಬಂದವು. ಈ ಘಟನೆಗಳೆಲ್ಲ ಅತ್ಯಲ್ಪಕಾಲದಲ್ಲಿಯೆ ನಡೆದು ಹೋದವು. ಗಿರೀಶನ ಹತ್ತಿರದಲ್ಲಿದ್ದ ಭಕ್ತರು, ಅವನು ಮೊದಲು ಶ್ರೀರಾಮಕೃಷ್ಣರು ಸಮಾಧಿಯಲ್ಲಿರುವುದನ್ನು ಕಂಡು ಅನಂತರ ಅವರಿಗೆ ಪುಷ್ಪಾದಿಗಳನ್ನು ಅರ್ಪಿಸಿದನು ಎಂದು ಭಾವಿಸಿದರು. ಸ್ವಲ್ಪದೂರ ಕುಳಿತಿದ್ದ ಭಕ್ತರಿಗೆ ದೇವಿಯ ಜ್ಯೋತಿರ್ಮಯ ಮೂರ್ತಿ ಶ್ರೀರಾಮಕೃಷ್ಣರ ದೇಹದಲ್ಲಿ ಕಂಡಂತೆ ಭಾಸವಾಯಿತು.

22. ಭಕ್ತರ ಆನಂದಕ್ಕೆ ಪಾರವೇ ಇರಲಿಲ್ಲ ಎಂದು ಹೇಳುವುದು ಅಪ್ರಸ್ತುತವಾಗುತ್ತದೆ. ಪ್ರತಿಯೊಬ್ಬ ಭಕ್ತನೂ ತಟ್ಟೆಯಿಂದ ಗಂಧಪುಷ್ಪವನ್ನು ತೆಗೆದುಕೊಂಡು ತನಗಿಷ್ಟವಾದ ಮಂತ್ರವನ್ನುಚ್ಚರಿಸುತ್ತ ಶ್ರೀರಾಮಕೃಷ್ಣರ ಪಾದಪದ್ಮವನ್ನು ಅರ್ಚಿಸಿದನು ಜೈಕಾರದ ಧ್ವನಿ ಇಡೀ ಕೊಠಡಿಯನ್ನೇ ತುಂಬಿತು. ಸ್ವಲ್ಪ ಹೊತ್ತಿನ ನಂತರ ಶ್ರೀರಾಮಕೃಷ್ಣರು ಸಮಾಧಿಯಿಂದ ಕೆಳಗಿಳಿದು ಬಂದು ಅರ್ಧ ಬಾಹ್ಯದಶೆಯಲ್ಲಿದ್ದರು. ಆಗ ಪೂಜೆಗಾಗಿ ತಂದಿದ್ದ ಹಣ್ಣು ಹಂಪಲು ಸಿಹಿತಿಂಡಿಗಳನ್ನು ಅವರಿಗೆ ನೀಡಲಾಯಿತು. ಅವರು ಅವುಗಳೆಲ್ಲದರಿಂದಲೂ ಸ್ವಲ್ಪ ಭಾಗವನ್ನು ಸ್ವೀಕರಿಸಿ ಭಕ್ತರಿಗೆ ಜ್ಞಾನ ಭಕ್ತಿ ಉಂಟಾಗಲೆಂದು ಅವರನ್ನು ಆಶೀರ್ವದಿಸಿದರು. ಅನಂತರ ಭಕ್ತರು ಅವರ ಪ್ರಸಾದವನ್ನು ಸ್ವೀಕರಿಸಿದರು. ದೇವಿಯ ವೈಭವವನ್ನೂ ಅವಳ ನಾಮದ ಮಹಿಮೆಯನ್ನೂ ಹಾಡುತ್ತ ಭಕ್ತರು ರಾತ್ರಿ ಬಹಳ ಹೊತ್ತು ಕಳೆದರು.

23. ಆ ವರ್ಷದ ಜಗನ್ಮಾತೆಯ ವಿಶೇಷ ಪೂಜೆಯಿಂದ ಭಕ್ತರು ಹಿಂದೆಂದಿಗಿಂತಲೂ ಅಧಿಕವಾದ ಆನಂದವನ್ನು ಅನುಭವಿಸಿದರು. ಅದರ ಸ್ಮೃತಿ ಶಾಶ್ವತವಾಗಿ ಅವರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯಿತು. ಅವರು ದುಃಖ ಶೋಕಗಳಿಂದ ನರಳುವಾಗಲೆಲ್ಲ ಶ್ರೀರಾಮಕೃಷ್ಣರ ಆ ಮಂದಸ್ಮಿತ ಪ್ರಶಾಂತವದನ, ವರದಾಭಯಹಸ್ತ ಅವರ ಕಣ್ಮುಂದೆ ಕಾಣಿಸಿಕೊಂಡು ಭಗವಂತನು ಯಾವಾಗಲೂ ರಕ್ಷಿಸುತ್ತಿರುವನೆಂಬ ಭರವಸೆ ಅವರಿಗೆ ಯಾವಾಗಲೂ ಉಂಟಾಗುತ್ತಿತ್ತು. ಶ್ರೀರಾಮಕೃಷ್ಣರು ಶ್ಯಾಮಪುಕುರದಲ್ಲಿ ಇದ್ದಾಗ ವಿಶೇಷದಿನಗಳಲ್ಲಿ ಮಾತ್ರ ಅವರ ದಿವ್ಯ ಸ್ವರೂಪವನ್ನು ಭಕ್ತರು ಅನುಭವಿಸುತ್ತಿದ್ದುದಲ್ಲ, ದಿನದ ಯಾವುದೇ ಸಮಯದಲ್ಲಾದರೂ ಅವರ ದಿವ್ಯ ಸ್ವಭಾವ ವಿಶೇಷವಾಗಿ ಆವಿರ್ಭವಿಸುವುದನ್ನು ಭಕ್ತರು ಕಾಣುತ್ತಿದ್ದರು. ಅವರು ದೇವಮಾನವರೆಂಬ ಶ್ರದ್ಧೆಯನ್ನು ಅದು ಭಕ್ತರಲ್ಲಿ ದೃಢಗೊಳಿಸಿತು. ಆದರೂ ಮೇಲೆ ಸೂಚಿಸಿದಂಥ ಘಟನೆಗಳು ಎಲ್ಲ ಸಾಧಾರಣರ ಮುಂದೆಯೂ ನಡೆಯಲಿಲ್ಲ. ಕೆಲವೇ ಭಕ್ತರು ಮಾತ್ರ ಅವುಗಳನ್ನು ಕಂಡಿದ್ದರು. ಅವರು ಮುಂದೆ ಇತರ ಭಕ್ತರುಗಳಿಗೆ ಅವನ್ನು ವಿವರಿಸುತ್ತಿದ್ದರು. ಕೆಲವು ಘಟನೆಗಳನ್ನು ಇಲ್ಲಿ ಉದಾಹರಣೆಗಾಗಿ ವಿವರಿಸಿದರೆ ಈ ಮಾತು ಸ್ಪಷ್ಟವಾಗುತ್ತದೆ.

24. ನಾವು ಹಿಂದೆ ಬಲರಾಮನ ಸಂಬಂಧವಾಗಿ ಕೆಲವು ವಿಷಯಗಳನ್ನು ಉಲ್ಲೇಖಿಸಿರುವೆವು. ಅವನು ಮತ್ತು ಅವನ ಕುಟುಂಬದವರಿಗೆ ಶ್ರೀರಾಮಕೃಷ್ಣರ ಮೇಲೆ

ವಿಶೇಷ ಶ್ರದ್ಧಾಭಕ್ತಿಗಳು ಇದ್ದುದರ ಪರಿಣಾಮವಾಗಿ ಅವನ ಕೆಲವು ಸಂಬಂಧಿಕರು ಅವನ ಮೇಲೆ ಅಸಮಾಧಾನಗೊಂಡರು. ಹಾಗೆ ಮಾಡಲು ಅವರಿಗೆ ಸಾಕಷ್ಟು ಕಾರಣಗಳಿದ್ದುವು. ಮೊದಲನೆಯದಾಗಿ ಅವರು ತುಂಬ ಸಂಕುಚಿತವಾದ ಧಾರ್ಮಿಕ ಸತ್ಯಗಳಿಗೆ ಅಂಟಿಕೊಂಡಿದ್ದರು ಮತ್ತು ವೈಷ್ಣವ ಸಂಪ್ರದಾಯಕ್ಕನುಗುಣವಾಗಿ ಬಾಹ್ಯಕ್ರಿಯಾ ಕಲಾಪಗಳಲ್ಲಿಯೆ ಅತ್ಯಂತ ಮಗ್ನರಾಗಿ ಹೋಗಿದ್ದರು. ಆದ್ದರಿಂದ ಶ್ರೀರಾಮಕೃಷ್ಣರ ಉದಾತ್ತ ತತ್ತ್ವಗಳನ್ನು ಅವರಿಗೆ ಗ್ರಹಿಸಲಾಗಲಿಲ್ಲ. ಶ್ರೀರಾಮಕೃಷ್ಣರು ಎಲ್ಲಾ ಧರ್ಮಗಳನ್ನು ಎಲ್ಲಾ ಮತಗಳನ್ನು ಸತ್ಯವೆಂದು ಸ್ವೀಕರಿಸಿದರು ಮತ್ತು ಅವರು ಯಾವ ಬಾಹ್ಯ ಧಾರ್ಮಿಕ ಚಿಹ್ನೆಗಳನ್ನೂ ಇಟ್ಟುಕೊಂಡಿರಲಿಲ್ಲ. ಶ್ರೀರಾಮಕೃಷ್ಣರ ಪ್ರಭಾವದಿಂದ ಬಲರಾಮನಲ್ಲಿ ಉಂಟಾಗಿದ್ದ ಉದಾತ್ತ ಮನೋಭಾವವನ್ನು ಕಂಡು ಅವನು ಧಾರ್ಮಿಕತೆಯಿಂದ ವಿಮುಖನಾಗಿರುವನೆಂದು ಅವರು ಭಾವಿಸಿದರು. ಎರಡನೆಯದಾಗಿ ಸಂಪತ್ತು ಮಾನ ಕುಲ ಮುಂತಾದ ಪ್ರಾಪಂಚಿಕ ಹಿರಿಮೆಗಳು ಮನುಷ್ಯನಲ್ಲಿ ಒಂದು ರೀತಿಯ ಹೆಮ್ಮೆ ಅಹಂಕಾರಗಳನ್ನು ಉಂಟುಮಾಡುತ್ತವೆ. ಶ್ರೇಷ್ಠ ವ್ಯಕ್ತಿಯಾದ ಕೃಷ್ಣರಾಮ ಬಸುವಿನ ಕುಟುಂಬದಲ್ಲಿ ಜನಿಸಿದುದೇ ಅವರಿಗೆ ದೊಡ್ಡ ಹೆಮ್ಮೆಯ ಮತ್ತು ವೈಭವದ ವಿಷಯವಾಗಿತ್ತು. ಬಲರಾಮನು ಈ ಕೌಟುಂಬಿಕ ಹಿರಿಮೆಯನ್ನು ಮರೆತು ಸಾಮಾನ್ಯ ವ್ಯಕ್ತಿಯಂತೆ ದಕ್ಷಿಣೇಶ್ವರದ ಶ್ರೀರಾಮಕೃಷ್ಣರೆಡೆಗೆ ಧರ್ಮವನ್ನು ಕಲಿಯಲು ಹೋಗುತ್ತಿರುವುದು ಅವರ ಹೃದಯವನ್ನು ನೋಯಿಸಿದುದರಲ್ಲಿ ಆಶ್ಚರ್ಯವೇನಿಲ್ಲ. ಇಷ್ಟೇ ಸಾಲದೆಂಬಂತೆ ಅವನು ತನ್ನ ಪತ್ನಿ ಹೆಣ್ಣುಮಕ್ಕಳು ಮತ್ತು ಇತರ ಸ್ತ್ರೀಯರು ಇವರನ್ನೂ, ಶ್ರೀರಾಮಕೃಷ್ಣರೆಡೆಗೆ ಕರೆದುಕೊಂಡು ಹೋಗುತ್ತಿದ್ದ. ಆದ್ದರಿಂದ ಅವರೆಲ್ಲರೂ ಈಗ ಅವನ ಮನಸ್ಸನ್ನು ಹೇಗಾದರೂ ಮಾಡಿ ತಿರುಗಿಸಲು ಪ್ರಯತ್ನಿಸಿದರು.

25. ಒಳ್ಳೆಯ ಉಪಾಯದಿಂದ ಕಾರ್ಯಸಿದ್ಧಿಯಾಗದಿದ್ದರೆ ಅಹಂಕಾರಿಯಾದ ವ್ಯಕ್ತಿಯು ಸಾಮಾನ್ಯವಾಗಿ ತನ್ನ ಕಾರ್ಯಸಿದ್ಧಿಗಾಗಿ ಕೆಟ್ಟ ಮಾರ್ಗವನ್ನೂ ಹಿಡಿಯುತ್ತಾನೆ. ಬಲರಾಮನ ಸಂಬಂಧಿಕರು ಕೆಲವರು ಹೀಗೆಯೆ ಮಾಡಿದರು. ಕಾಲ್ನಾದ ಭಗವಾನ್‌ದಾಸ್ ಮುಂತಾದ ವೈಷ್ಣವ ಸಾಧುಗಳ ನಿಷ್ಠೆ ಭಕ್ತಿಗಳನ್ನು ಅತಿಯಾಗಿ ಕೊಂಡಾಡಿ, ತಮ್ಮ ವಂಶಗೌರವವನ್ನು ಉಳಿಸಿಕೊಳ್ಳಬೇಕೆಂದು ಹೇಳಿ ಬಲರಾಮನನ್ನು ಶ್ರೀರಾಮಕೃಷ್ಣರ ಕಡೆ ಹೋಗುವುದನ್ನು ತಪ್ಪಿಸುವುದರಲ್ಲಿ ವಿಫಲರಾದರು. ಆಗ ಶ್ರೀರಾಮಕೃಷ್ಣರ ಮೇಲೆಯೆ ಅವರಿಗೆ ಕೋಪ ಉಂಟಾಗಿ ಆಗಾಗ ಅವರನ್ನು ನಿಂದಿಸತೊಡಗಿದರು. ಬೇರೆಯವರ ಮೂಲಕ ಕೇಳಿ ಅವರು ಶ್ರೀರಾಮಕೃಷ್ಣರಿಗೆ ಸಂಪ್ರದಾಯ ನಿಷ್ಠೆ ಇಲ್ಲ, ಯಾವುದನ್ನು ತಿನ್ನಬೇಕು ಯಾವುದನ್ನು ಬಿಡಬೇಕು ಎಂಬ ನಿಯಮವಿಲ್ಲ, ತಿಲಕಾದಿ ವೈಷ್ಣವ ಚಿಹ್ನೆಗಳನ್ನು ಧರಿಸುವುದಿಲ್ಲ ಎಂದು ತಿಳಿದುಕೊಂಡಿದ್ದರು. ಈ ನಿಂದನೆಯಿಂದಲೂ ಏನೂ ಪ್ರಯೋಜನವಾಗದಿರಲು ಅವರು ಶ್ರೀರಾಮಕೃಷ್ಣರು ಮತ್ತು ಬಲರಾಮನ ಬಗ್ಗೆ ಏನೇನೊ ಇಲ್ಲಸಲ್ಲದ ಮಾತುಗಳನ್ನು ಸೃಷ್ಟಿಸಿ ಅವನ ದಾಯಾದಿ ಸಹೋದರರಾದ ನಿಮಾಯ್‌ಚರಣ ಬಸು ಮತ್ತು ಹರಿವಲ್ಲಭ ಬಸು ಇವರ ಕಿವಿ ತುಂಬಿಸಿದರು.

26. ಬಲರಾಮನು ದಯಾವಂತನೂ ತ್ಯಾಗ ವೈರಾಗ್ಯ ಮನೋಭಾವದವನೂ ಆಗಿದ್ದನು. ಮೇಲ್ವಿಚಾರಣೆಯಲ್ಲಿ ನಿಷ್ಠುರನಾಗಿ ವರ್ತಿಸದಿದ್ದರೆ, ಆಸ್ತಿ–ಪಾಸ್ತಿಯನ್ನೆಲ್ಲ ನೋಡಿಕೊಳ್ಳುವುದು ಅಸಾಧ್ಯವಾದ ಸಂಗತಿ ಎಂಬುದು ಅವನಿಗೆ ಖಚಿತವಾಗಿತ್ತು. ಆದ್ದರಿಂದ ಅವನು ತನ್ನ ಹೊಲ ಮತ್ತು ಆಸ್ತಿಯ ಭಾರವನ್ನು ನಿಮಾಯ್ ಚರಣನ ಮೇಲೆ ವಹಿಸಿದ್ದನು. ತನ್ನ ಆಸ್ತಿಯ ವರಮಾನವಾಗಿ ಅವನಿಗೆ ಸಿಗುತ್ತಿದ್ದುದು ಅಲ್ಪ ವಾದರೂ ಅದರಿಂದಲೇ ಹೇಗೊ ತನ್ನ ಕುಟುಂಬ ನಿರ್ವಹಣೆ ಮಾಡುತ್ತಿದ್ದ. ದೈಹಿಕ ವಾಗಿಯೂ ಅವನಿಗೆ ಅವುಗಳನ್ನು ನೋಡಿಕೊಳ್ಳುವ ಸಾಮರ್ಥ್ಯವಿರಲಿಲ್ಲ. ಒಮ್ಮೆ ಅವನು ಯುವಕನಾಗಿದ್ದಾಗ ಅಗ್ನಿಮಾಂದ್ಯ ರೋಗಕ್ಕೆ ತುತ್ತಾಗಿ ನಿರಂತರ ಹನ್ನೆರಡು ವರ್ಷ ಅನ್ನ ಊಟಮಾಡದೆ ಕೇವಲ ಬಾರ್ಲಿ ನೀರು ಮತ್ತು ಹಾಲನ್ನು ಕುಡಿದೇ ಜೀವಿಸ ಬೇಕಾಗಿತ್ತು. ತನ್ನ ಆರೋಗ್ಯ ಸುಧಾರಣೆಗಾಗಿ ಆಗ ಪುರಿಯಲ್ಲಿ ಬಹಳಕಾಲ ಇದ್ದನು. ಆ ಸಂದರ್ಭದಲ್ಲಿ ಅವನು ಜಪ, ಪೂಜೆ, ಸಾಧುಸಂಗ ಪ್ರತಿದಿನ ದೇವಸ್ಥಾನಕ್ಕೆ ಹೋಗಿ ಬರುವುದು ಇವೇ ಮೊದಲಾದುವುಗಳಲ್ಲಿ ತನ್ನ ಕಾಲವನ್ನು ಕಳೆದನು. ಹೀಗೆ ಅವನಿಗೆ ವೈಷ್ಣವ ಸಮಾಜದಲ್ಲಿದ್ದ ಒಳಿತು ಕೆಡುಕುಗಳೆರಡರ ಪರಿಚಯವೂ ಇತ್ತು. ಅನಂತರ ಒಮ್ಮೆ ಅವನು ಕಲ್ಕತ್ತೆಗೆ ಬಂದಿದ್ದಾಗ ಶ್ರೀರಾಮಕೃಷ್ಣರನ್ನು ಸಂಧಿಸಿದ. ಶ್ರೀರಾಮ ಕೃಷ್ಣರ ಪವಿತ್ರಸಂಗದಿಂದ ಅವನ ಜೀವನದಲ್ಲಿ ಹೇಗೆ ಕ್ರಮೇಣ ಪರಿವರ್ತನೆ ಉಂಟಾ ಯಿತು ಎಂಬುದನ್ನು ನಾವಾಗಲೆ ನೋಡಿರುವೆವು.

27. ಬಲರಾಮನು ತನ್ನ ಹಿರಿಯ ಮಗಳ ಮದುವೆ ಸಮಯದಲ್ಲಿ ಕಲಕತ್ತೆಗೆ ಬರಬೇಕಾಯಿತು. ಹನ್ನೊಂದು ವರ್ಷಗಳ ಅವನ ಪುರಿಯ ವಾಸದ ಸಮಯದಲ್ಲಿ ಅವನ ಮನಶ್ಶಾಂತಿಯು ಬೇರೆ ಯಾವ ರೀತಿಯಲ್ಲೂ ಕದಡಿರಲಿಲ್ಲ. ಅವನ ದಾಯಾದಿಯಾದ ಹರಿವಲ್ಲಭ ಬಸು ರಾಮಕಾಂತ ಬಸು ರಸ್ತೆಯಲ್ಲಿ ಒಂದು ಮನೆಯನ್ನು ಕೊಂಡುಕೊಂಡಿ ದ್ದನು. ಅವನ ತಂದೆ ಮತ್ತು ದಾಯಾದಿಗಳಿಬ್ಬರೂ ಗುಟ್ಟಾಗಿ ಮಾತನಾಡಿಕೊಂಡು ಅವನನ್ನು ಆ ಮನೆಯಲ್ಲಿ ಇರಲು ಹೇಳಿದರು. ಪುರಿಯಲ್ಲಿ ಸಾಧುಸಂಗದ ಪ್ರಭಾವದಿಂದ ಅವನು ಪ್ರಪಂಚವನ್ನು ತ್ಯಜಿಸದಿರಲೆಂಬುದೇ ಇದರ ಉದ್ದೇಶವಾಗಿತ್ತು. ಬಲರಾಮನು ಭಾರ ಹೃದಯದಿಂದ ಕಲಕತ್ತೆಯಲ್ಲಿ ವಾಸಿಸತೊಡಗಿದನು. ಅವನಿಗೆ ಈಗ ಸಾಧುಗಳ ಸತ್ಸಂಗ ಮತ್ತು ದೈನಂದಿನ ಜಗನ್ನಾಥ ದರ್ಶನ ಇವೆರಡೂ ತಪ್ಪಿ ಹೋದವು. ಅವನು ಸ್ವಲ್ಪಕಾಲದಲ್ಲಿಯೆ ಮತ್ತೆ ಪುರಿಗೆ ಹೋಗುವ ಮನಸ್ಸು ಮಾಡಿದ್ದನೆಂದು ತೋರುತ್ತದೆ. ಆದರೆ ಶ್ರೀರಾಮಕೃಷ್ಣರನ್ನು ಸಂಧಿಸಿದ ಮೇಲೆ ಆ ನಿರ್ಧಾರವನ್ನು ಸಂಪೂರ್ಣ ಕೈಬಿಟ್ಟು ಕಲ್ಕತ್ತೆಯಲ್ಲಿಯೆ ಶಾಶ್ವತವಾಗಿರುವ ವ್ಯವಸ್ಥೆ ಮಾಡಿದ. ಈಗ ಅವನಿಗೆ ಒಂದು ಚಿಂತೆ ಏನೆಂದರೆ ಹರಿವಲ್ಲಭ ಬಸು ಆ ಮನೆಯನ್ನು ಬಿಟ್ಟುಬಿಡು ಎಂದು ಹೇಳುವನೊ ಅಥವಾ ನಿಮಾಯ್‌ಬಸು ತನ್ನನ್ನು ಹೊಲ ನೋಡಿಕೊಳ್ಳಲು ಕೊಠಾರಕ್ಕೆ ಕರೆಸಿಕೊಳ್ಳುವನೊ ಎಂದು. ಹೀಗೆ ಶ್ರೀರಾಮಕೃಷ್ಣರ ಪುಣ್ಯಸಂಗ ತನಗೆ ತಪ್ಪಿಬಿಟ್ಟರೆ ಏನು ಗತಿ ಎಂದು ಅವನು ಚಿಂತಾಕ್ರಾಂತನಾಗಿದ್ದನು.

28. ಎಷ್ಟೋ ವೇಳೆ ಚಿಂತೆ ಭವಿಷ್ಯದ್ ಘಟನೆಗಳ ಮುನ್ಸೂಚನೆ ಆಗುತ್ತದೆ. ಬಲರಾಮನ ವಿಷಯದಲ್ಲಿ ಹಾಗೆಯೇ ಆಯಿತು. ಅವನು ಯಾವುದರ ಬಗ್ಗೆ ಚಿಂತಿತನಾಗಿದ್ದನೊ ಅದು ಸತ್ಯವಾಯಿತು. ಸಂಬಂಧಿಕರ ಗುಪ್ತ ಪ್ರೇರಣೆಯಿಂದಾಗಿ ಅವನ ಇಬ್ಬರು ದಾಯಾದಿಗಳು ಅವನ ಬಗ್ಗೆ ತಮ್ಮ ಅಸಂತೃಪ್ತಿಯನ್ನು ವ್ಯಕ್ತಪಡಿಸಿ ಅವನಿಗೆ ಪತ್ರ ಬರೆದರು. ಹರಿವಲ್ಲಭ ಬಸು ಅವನೊಡನೆ ಮುಖ್ಯ ವಿಷಯವಾಗಿ ಚರ್ಚಿಸಲು ಶೀಘ್ರವೆ ಕಲ್ಕತ್ತೆಗೆ ಬರುವುದಾಗಿ ಸುದ್ದಿ ಬಂತು. ಬಲರಾಮನು ತನ್ನದೇನೂ ದೋಷವಿಲ್ಲದುದರಿಂದ ಇದರ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಳ್ಳಲಿಲ್ಲ. ಆದರೆ ಪರಿಸ್ಥಿತಿಯ ಒತ್ತಡದಿಂದಾಗಿ ಶ್ರೀರಾಮಕೃಷ್ಣರ ಸಂಗ ಎಲ್ಲಿ ತಪ್ಪಿಹೋಗುವುದೋ ಎಂಬ ದುಗುಡ ಅವನ ಮನಸ್ಸಿನಲ್ಲಿತ್ತು. ಅವನು ಇದರ ಬಗ್ಗೆ ಬಹಳ ಯೋಚಿಸಿ ಈಗ ಶ್ರೀರಾಮಕೃಷ್ಣರು ಕಾಯಿಲೆಯಿಂದ ನರಳುತ್ತಿರುವುದರಿಂದ ಏನೇ ಆದರೂ ಅವರನ್ನು ಬಿಟ್ಟುಹೋಗಬಾರದೆಂದು ನಿರ್ಧಾರಕ್ಕೆ ಬಂದನು. ಅದೇ ಸಂದರ್ಭದಲ್ಲಿ ಹರಿವಲ್ಲಭ ಬಸು ಕಲ್ಕತ್ತೆಗೆ ಬಂದನು. ಅವನು ತನ್ನೊಡನಿರುವಾಗ ಅವನಿಗೆ ಯಾವ ತೊಂದರೆಯೂ ಆಗದಂತೆ ಬಲರಾಮನು ಎಲ್ಲಾ ವ್ಯವಸ್ಥೆಯನ್ನು ಮಾಡಿದನು. ಬಲರಾಮನು ದೃಢನಿರ್ಧಾರದಿಂದ ಇದ್ದು ಯಾವ ಯೋಚನೆಯೂ ಇಲ್ಲದೆ ಎಂದಿನಂತೆ ಶ್ರೀರಾಮಕೃಷ್ಣರೆಡೆಗೆ ಹೋಗುವುದನ್ನು ಮುಂದುವರಿಸಿದನು.

29. ಮುಖವೇ ಮನಸ್ಸನ್ನು ಪ್ರತಿಬಿಂಬಿಸುವ ಕನ್ನಡಿ. ಹರಿವಲ್ಲಭ ಬಸು ಕಲ್ಕತ್ತೆಗೆ ಬಂದದಿನ ಬಲರಾಮನು ಶ್ರೀರಾಮಕೃಷ್ಣರೆಡೆಗೆ ಹೋಗಿದ್ದನು. ಅವನ ಮುಖವನ್ನು ನೋಡಿದಕೂಡಲೆ ಅವನ ಮನಸ್ಸಿನಲ್ಲಿ ಏನೋ ಹೋರಾಟ ನಡೆಯುತ್ತಿದೆ ಎಂದು ಶ್ರೀರಾಮಕೃಷ್ಣರಿಗೆ ತಿಳಿದುಹೋಯಿತು. ಶ್ರೀರಾಮಕೃಷ್ಣರು ಬಲರಾಮನನ್ನು ತಮ್ಮವನೆಂದೆ ಪರಿಗಣಿಸಿದ್ದರು. ಸಹಾನುಭೂತಿಯಿಂದ ಅವನನ್ನು ಪಕ್ಕಕ್ಕೆ ಕರೆದು ವಿಷಯವೇನೆಂದು ವಿಚಾರಿಸಿದರು. ಪರಿಸ್ಥಿತಿಯನ್ನು ತಿಳಿದ ಮೇಲೆ ಹೇಳಿದರು : "ಅವನು ಎಂಥವನು ? ಇಲ್ಲಿಗೆ ಒಂದು ದಿನ ಅವನನ್ನು ಕರೆದುಕೊಂಡು ಬರುತ್ತೀಯಾ ?" ಬಲರಾಮನು ಉತ್ತರಿಸಿದ : "ಮನುಷ್ಯ ಒಳ್ಳೆಯವನೆ. ವಿದ್ಯಾವಂತ, ಬುದ್ಧಿವಂತ, ವಿಶಾಲ ಮನೋಭಾವದವನು ಮತ್ತು ಉದಾರಿ. ಅವನು ತುಂಬ ದಾನಧರ್ಮ ಮಾಡುತ್ತಾನೆ. ಸಾಮಾನ್ಯವಾಗಿ ಎಲ್ಲ ಶ್ರೀಮಂತರಲ್ಲಿರುವ ಒಂದು ದೋಷ ಅವನಲ್ಲುಂಟು. ಅದೇನೆಂದರೆ ಅವನದು ಭೋಳೆ ಸ್ವಭಾವ. ಯಾರದೊ ಮಾತು ಕೇಳಿ ಅವನು ನನ್ನ ಬಗ್ಗೆ ಏನೊ ಭಾವಿಸಿಕೊಂಡಿರುವನು. ಈಗ ನನ್ನ ಮೇಲೆ ಅವನಿಗೆ ಅಸಮಾಧಾನ ಉಂಟಾಗಿದೆ. ಏಕೆಂದರೆ ನಾನಿಲ್ಲಿಗೆ ಬರುತ್ತಿದ್ದೇನಲ್ಲ, ಅದಕ್ಕೆ. ಆದ್ದರಿಂದ ನಾನು ಕೇಳಿಕೊಂಡರೆ ಅವನಿಲ್ಲಿಗೆ ಬರುತ್ತಾನೊ ಇಲ್ಲವೊ." ಶ್ರೀರಾಮಕೃಷ್ಣರು ಹೇಳಿದರು : "ಹಾಗಾದರೆ ನೀನು ಅವನನ್ನು ಕೇಳುವುದು ಬೇಡ. ಗಿರೀಶನನ್ನು ಇಲ್ಲಿಗೆ ಕರಿ."

ಗಿರೀಶನು ಬಂದು ಹರಿವಲ್ಲಭನನ್ನು ಕರೆದುಕೊಂಡುಬರಲು ಸಂತೋಷದಿಂದ ಒಪ್ಪಿದ. ಅವನು ಹೇಳಿದ : "ನಮ್ಮ ಯೌವನದ ಪ್ರಾರಂಭಾವಸ್ಥೆಯಲ್ಲಿ ಹರಿವಲ್ಲಭ ಮತ್ತು

ನಾನು ಸಹಪಾಠಿಗಳಾಗಿದ್ದೆವು. ಆದ್ದರಿಂದ ಅವನು ಕಲ್ಕತ್ತೆಗೆ ಬಂದಿದ್ದಾನೆಂದು ತಿಳಿದಾಗಲೆಲ್ಲ ನಾನು ಸಾಮಾನ್ಯವಾಗಿ ಅವನನ್ನು ಹೋಗಿ ನೋಡುತ್ತೇನೆ. ಆದ್ದರಿಂದ ನನಗೇನು ಅದು ಕಷ್ಟವಿಲ್ಲ. ಇಂದೇ ಅವನನ್ನು ಹೋಗಿ ನೋಡುತ್ತೇನೆ."

30. ಮರುದಿನವೇ ಗಿರೀಶನು ಸಂಜೆ ಐದು ಗಂಟೆಯ ಹೊತ್ತಿಗೆ ಹರಿವಲ್ಲಭನನ್ನು ಕರೆದುಕೊಂಡು ಬಂದು ಶ್ರೀರಾಮಕೃಷ್ಣರಿಗೆ ಪರಿಚಯಿಸಿದನು : "ಇವನು ಹರಿವಲ್ಲಭ ಬಸು. ಬಾಲ್ಯ ಸ್ನೇಹಿತ. ಇವನು ಕಟಕ್‌ನಲ್ಲಿ ಸರ್ಕಾರಿ ಪ್ಲೀಡರ್ ಆಗಿದ್ದಾನೆ. ನಿಮ್ಮನ್ನು ನೋಡಲು ಈಗ ಬಂದಿದ್ದಾನೆ." ಶ್ರೀರಾಮಕೃಷ್ಣರು ಅವನನ್ನು ಪ್ರೀತಿಯಿಂದ ಬರಮಾಡಿಕೊಂಡು ತಮ್ಮ ಪಕ್ಕದಲ್ಲಿಯೇ ಕೂರಿಸಿಕೊಂಡು ಹೇಳಿದರು : "ನಾನು ಅನೇಕರಿಂದ ನಿನ್ನ ಬಗ್ಗೆ ಕೇಳಿರುವೆ. ನಿನ್ನನ್ನು ನೋಡಬೇಕೆಂಬ ಆಸೆ ಆಗಿತ್ತು. ನಿನಗೆಲ್ಲಿ ಲೆಕ್ಕಾಚಾರ ಬುದ್ಧಿ ಉಂಟಾಗುವುದೋ ಎಂಬ ಭಯವಿತ್ತು. (ಗಿರೀಶನಿಗೆ) ಆದರೆ ಇವನು ಹಾಗಿಲ್ಲ. (ಹರಿವಲ್ಲಭನನ್ನು ನಿರ್ದೇಶಿಸಿ) ಇವನಿಗೆ ಬಾಲಕನಂಥ ಸರಳತೆ ಇದೆ. (ಗಿರೀಶನಿಗೆ) ಅವನ ಕಣ್ಣುಗಳನ್ನು ನೋಡು. ಹೃದಯ ಭಕ್ತಿಯಿಂದ ತುಂಬಿರದಿದ್ದರೆ ಇಂಥ ಕಣ್ಣುಗಳು ಇರಲು ಸಾಧ್ಯವೇ ಇಲ್ಲ. (ಥಟ್ಟನೆ ಹರಿವಲ್ಲಭನನ್ನು ಸ್ಪರ್ಶಿಸಿ). ಓ ನೀನು ನನ್ನವನೆ ಎಂದು ನನಗನ್ನಿಸುತ್ತಿದೆ. ನಿನ್ನಿಂದ ದೂರವಿರಬೇಕೆಂದು ಎನಿಸುವುದೇ ಇಲ್ಲ ನನಗೆ." ಹರಿವಲ್ಲಭನು ಶ್ರೀರಾಮಕೃಷ್ಣರಿಗೆ ನಮಸ್ಕರಿಸಿ ಅವರ ಪಾದಧೂಳಿಯನ್ನು ಸ್ವೀಕರಿಸಿ "ಅದು ನಿಮ್ಮ ಅನುಗ್ರಹ" ಎಂದು ಹೇಳಿದ.

ಗಿರೀಶನು ಹೇಳಿದ : "ಅವನಲ್ಲಿ ಭಗವದ್ಭಕ್ತಿ ಇರುವುದು ಸ್ವಾಭಾವಿಕವೆ. ಅವನು ಪ್ರಸಿದ್ಧ ಭಕ್ತರ ಕುಟುಂಬದಲ್ಲಿ ಜನಿಸಿರುವನು. ಕೃಷ್ಣರಾಮ ಬಸುವನ್ನು ದೊಡ್ಡ ಭಕ್ತನೆಂದು ಜನರು ಪರಿಗಣಿಸುತ್ತಾರೆ. ಪ್ರತಿದಿನ ಬೆಳಗ್ಗೆ ಸಂತರ ಹೆಸರನ್ನು ಹೇಳುವಾಗ ಅವನ ಹೆಸರನ್ನು ಸೇರಿಸುವುದು ಉಚಿತವೆಂದು ಪರಿಗಣಿಸುತ್ತಾರೆ. ಅವನ ಧಾರ್ಮಿಕತೆ ದೇಶದ ಈ ಭಾಗಕ್ಕೆ ಕೀರ್ತಿಯನ್ನು ತಂದಿತು. ಅವನ ಕುಟುಂಬದಲ್ಲಿ ಹುಟ್ಟಿದವರಿಗೆ ಭಕ್ತಿ ಇಲ್ಲದಿದ್ದರೆ ಇನ್ನಾರಿಗದು ಬರಲು ಸಾಧ್ಯ ?"

ಹೀಗೆ ಭಗವದ್ಭಕ್ತಿಯ ಸಂಬಂಧವಾಗಿ ಚರ್ಚೆ ಪ್ರಾರಂಭವಾಯಿತು. ಶ್ರೀರಾಮಕೃಷ್ಣರು ಭಗವಂತನಲ್ಲಿ ಶ್ರದ್ಧಾಭಕ್ತಿಯನ್ನಿರಿಸಿ ಅವನಲ್ಲಿ ಸಂಪೂರ್ಣ ಶರಣಾಗುವುದೆ ಮಾನವ ಜೀವನದ ಪರಮೋಚ್ಚ ಸಾಧನೆ ಎಂಬ ವಿಷಯವಾಗಿ ಮಾತನಾಡುತ್ತಾ ಸಮಾಧಿಸ್ಥರಾದರು. ಸ್ವಲ್ಪ ಹೊತ್ತಿನ ನಂತರ ಅರ್ಧ ಬಾಹ್ಯದಶೆಯಲ್ಲಿ ಭಕ್ತಿಗೀತೆಗಳನ್ನು ಹಾಡಲು ಭಕ್ತನೊಬ್ಬನಿಗೆ ತಿಳಿಸಿದರು. ಹರಿವಲ್ಲಭನಿಗೆ ಹಾಡಿನ ಅರ್ಥವನ್ನು ವಿವರಿಸುತ್ತ ಮತ್ತೆ ಅವರು ಸಮಾಧಿಸ್ಥರಾದರು. ಭಜನೆ ಮುಗಿದ ಮೇಲೆ ಇಬ್ಬರು ಮೂವರು ಯುವಕ ಭಕ್ತರೂ ಕೂಡ ಭಾವಸಮಾಧಿಯಲ್ಲಿರುವುದು ಕಂಡು ಬಂತು. ಶ್ರೀರಾಮಕೃಷ್ಣರ ಮಾತುಗಳನ್ನು ಕೇಳಿ ಮುಗ್ಧನಾಗಿ ಹರಿವಲ್ಲಭನು ಪ್ರೀತಿಯ ಕಂಬನಿ ಸುರಿಸಿದನು. ಕತ್ತಲೆಯಾದ ಸ್ವಲ್ಪ ಹೊತ್ತಿನ ನಂತರ ಅವನು ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ಹೊರಟುಹೋದನು.

31. ಹೊಸಬರಾರಾದರೂ ಬಂದು ತಮ್ಮ ಭಾವನೆಗಳ ವಿರುದ್ಧವಾಗಿ ವಾದಿಸಲು ತೊಡಗಿದಾಗ ಅಥವಾ ಯಾವುದಾದರೊಂದು ಕಾರಣಕ್ಕಾಗಿ ವಿರೋಧ ಭಾವದೊಡನೆ ಯಾರಾದರೂ ಬಂದಾಗ ಶ್ರೀರಾಮಕೃಷ್ಣರು ಅವರನ್ನು ಸ್ಪರ್ಶಿಸಿ ತಮ್ಮ ಮಾತನ್ನು ಒಪ್ಪಿಕೊಳ್ಳುವಂತೆ ಮಾಡಿಬಿಡುತ್ತಿದ್ದರು. ದಕ್ಷಿಣೇಶ್ವರದಲ್ಲಿ ಅವರು ಹೀಗೆ ಮಾಡುವುದನ್ನು ನಾವು ಅನೇಕ ಬಾರಿ ನೋಡಿರುವೆವು. ಆದರೆ ತಮಗೆ ಇಷ್ಟವಾದವರ ವಿಚಾರದಲ್ಲಿ ಮಾತ್ರ ಹಾಗೆ ಮಾಡುತ್ತಿದ್ದರು. ಒಂದು ದಿನ ಇದಕ್ಕೆ ಕಾರಣವನ್ನು ನಮಗೆ ಹೇಳಿದರು : "ಅಹಂಕಾರದ ಪರಿಣಾಮವಾಗಿ ಮತ್ತು ತಾವು ಯಾರಿಗೂ ಕಡಿಮೆಯಿಲ್ಲ ಎಂಬ ಅಭಿಮಾನದಿಂದ ಜನರು ಇತರರ ಮಾತುಗಳನ್ನು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. ಅವರು ಇದರಲ್ಲಿ (ತಮ್ಮ ದೇಹದಲ್ಲಿ) ವಾಸಿಸುವವನನ್ನು ಮುಟ್ಟಿದಾಕ್ಷಣ ಆ ಪ್ರವೃತ್ತಿ ತನ್ನ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ದಿವ್ಯಶಕ್ತಿಯ ಪ್ರಭಾವದಿಂದ ಆ ಅಹಂಕಾರ ತಲೆ ಎತ್ತಲಾರದು. ಒಂದು ಗಿಡಮೂಲಿಕೆಯ ಸ್ಪರ್ಶದಿಂದ ಹಾವು ತನ್ನ ಎತ್ತಿದ ಹೆಡೆಯನ್ನು ಕೆಳಗೆ ತಗ್ಗಿಸುತ್ತದೆ. ಆದ್ದರಿಂದಲೆ ಮಾತನಾಡುತ್ತಿರುವಾಗ ಕೌಶಲದಿಂದ ಅವರ ಅಂಗವನ್ನು ಸ್ಪರ್ಶಿಸಿಬಿಡುತ್ತೇನೆ."

ಹರಿವಲ್ಲಭನು ಅಂದು ಹೊರಟು ಹೋಗುವಾಗ ಸಂಪೂರ್ಣ ಅವನ ಭಾವ ಪರಿವರ್ತನೆ ಆಗಿತ್ತು. ಶ್ರದ್ಧಾಸಂಪನ್ನನಾಗಿ ಹೊರಟು ಹೋಗಿದ್ದನು. ಇದನ್ನು ನೋಡಿದಾಗ ಶ್ರೀರಾಮಕೃಷ್ಣರ ಈ ಮೇಲಿನ ಮಾತು ನೆನಪಿಗೆ ಬಂತು. ಬಲರಾಮನು ಶ್ರೀರಾಮಕೃಷ್ಣರೆಡೆಗೆ ಬರುತ್ತಿರುವುದು ಸರಿಯಲ್ಲ ಎಂದು ಅವನ ದಾಯಾದಿಗಳು ಮುಂದೆ ಎಂದೂ ಭಾವಿಸಲಿಲ್ಲ.

32. ಶ್ರೀರಾಮಕೃಷ್ಣರ ದೈಹಿಕ ಸ್ಥಿತಿ ಹದಗೆಡುತ್ತಾ ಹೋದಂತೆಲ್ಲ ಅವರೆಡೆಗೆ ಬರುವವರ ಸಂಖ್ಯೆಯೂ ಅಧಿಕವಾಯಿತು. ಅವರನ್ನು ನೋಡಲು ಮತ್ತು ಅವರ ಅನುಗ್ರಹವನ್ನು ಪಡೆಯಲು ಬರುವವರ ಸಂಖ್ಯೆ ದಿನದಿನವೂ ವೃದ್ಧಿಯಾಗತೊಡಗಿತು. ಹರೀಶ್‌ಚಂದ ಮುಸ್ತಾಫಿ ಮತ್ತು ಶಾರದಾ ಪ್ರಸನ್ನ ಮಿತ್ರ (ಸ್ವಾಮಿ ತ್ರಿಗುಣಾತೀತಾನಂದ), ಮಣೀಂದ್ರನಾಥಗುಪ್ತ ಮತ್ತು ಇನ್ನೂ ಅನೇಕರು ಶ್ರೀರಾಮಕೃಷ್ಣರನ್ನು ಪ್ರಥಮ ಬಾರಿಗೆ ಬೇಟಿಯಾದರು. ಮತ್ತೆ ಸ್ವಾಮಿ ಅಭೇದಾನಂದರೇ ಮುಂತಾದವರು ದಕ್ಷಿಣೇಶ್ವರದಲ್ಲಿ ಒಂದೆರಡು ಬಾರಿ ಭೇಟಿಯಾಗಿದ್ದರೂ ಇಲ್ಲಿ ಅವರ ನಿಕಟ ಸಂಪರ್ಕವನ್ನು ಪಡೆಯುವ ಅವಕಾಶ ಅವರಿಗೆ ದೊರಕಿತು. ಶ್ರೀರಾಮಕೃಷ್ಣರು ಅವರ ಸ್ವಭಾವವನ್ನು ಮತ್ತು ಪೂರ್ವ ಸಂಸ್ಕಾರಗಳನ್ನು ಗಮನಿಸಿ ಅದಕ್ಕನುಗುಣವಾಗಿ ಆಧ್ಯಾತ್ಮಿಕ ಸಾಧನೆಯಲ್ಲಿ ಮಾರ್ಗದರ್ಶನ ನೀಡಿದರು. ಆ ಸಾಧನೆಯ ವಿಧಾನ ಶುದ್ಧಭಕ್ತಿ ಆಗಿರಬಹುದು ಅಥವಾ ಜ್ಞಾನಮಿಶ್ರ ಭಕ್ತಿಯಾಗಿರಬಹುದು. ಶ್ರೀರಾಮಕೃಷ್ಣರು ಏಕಾಂತ ಪ್ರದೇಶದಲ್ಲಿ ಈ ಮೇಲಿನ ಸಾಧನ ಮಾರ್ಗವನ್ನು ಕುರಿತು ಯಾವಾಗಲೂ ಸಲಹೆಗಳನ್ನು ನೀಡುತ್ತಿದ್ದರು. ಸಾಕಾರ ದೇವರ ಮೇಲೆ ಧ್ಯಾನ ಮಾಡಬೇಕಾದರೆ ಯಾವ ರೀತಿ ಕುಳಿತು ಕೊಳ್ಳಬೇಕು, ನಿರಾಕಾರ ದೇವರ ಮೇಲೆ ಧ್ಯಾನ ಮಾಡಬೇಕಾದರೆ ಹೇಗೆ ಕುಳಿತುಕೊಳ್ಳ

ಬೇಕು ಎಂಬುದನ್ನು ಒಂದು ದಿನ ಯುವಕನೊಬ್ಬನಿಗೆ ಬೋಧಿಸುತ್ತಿದ್ದುದನ್ನು ನಾವು ನೋಡಿರುವೆವು. ಪದ್ಮಾಸನದಲ್ಲಿ ಕುಳಿತು ಬಲಹಸ್ತವನ್ನು ಎಡಹಸ್ತದ ಮೇಲಿಟ್ಟು ಅದನ್ನು ಎದೆಯ ಹತ್ತಿರ ಹಿಡಿದು ಕಣ್ಣುಮುಚ್ಚಿಕೊಂಡು ಶ್ರೀರಾಮಕೃಷ್ಣರು ಹೇಳಿದರು : "ಎಲ್ಲಾ ಬಗೆಯ ಭಗವಂತನ ರೂಪ ಧ್ಯಾನಕ್ಕೆ ಇದು ಅತ್ಯುತ್ತಮವಾದ ಆಸನ." ಅದೇ ಪದ್ಮಾಸನದಲ್ಲಿ ಕುಳಿತು ಬಲ ಮತ್ತು ಎಡಗೈಗಳನ್ನು ಬಲ ಮತ್ತು ಎಡ ಮಂಡಿಗಳ ಮೇಲೆ ಕ್ರಮವಾಗಿರಿಸಿ ಹೆಬ್ಬೆಟ್ಟು ಮತ್ತು ತೋರು ಬೆರಳುಗಳನ್ನು ಜೋಡಿಸಿ ಉಳಿದ ಬೆರಳುಗಳನ್ನು ನೇರವಾಗಿರಿಸಿ ಮತ್ತು ಹುಬ್ಬುಗಳ ನಡುವೆ ತಮ್ಮ ದೃಷ್ಟಿಯನ್ನು ನೆಲೆಗೊಳಿಸಿ ಶ್ರೀರಾಮಕೃಷ್ಣರು ಹೇಳಿದರು : "ಇದು ನಿರಾಕಾರ ಧ್ಯಾನಕ್ಕೆ ಅತ್ಯುತ್ತಮವಾದ ಆಸನ". ಹೀಗೆ ಹೇಳುತ್ತಿದ್ದಂತೆಯೆ ಶ್ರೀರಾಮಕೃಷ್ಣರು ಸಮಾಧಿಸ್ಥರಾದರು. ಸ್ವಲ್ಪ ಹೊತ್ತಿನ ನಂತರ ಬಲವಂತವಾಗಿ ತಮ್ಮ ಮನಸ್ಸನ್ನು ಸಾಮಾನ್ಯ ಪ್ರಜ್ಞೆಗೆ ಇಳಿಸಿ ಹೇಳಿದರು : "ಇನ್ನು ತೋರಿಸಲಾಗುವುದಿಲ್ಲ. ನಾನು ಆ ಆಸನದಲ್ಲಿ ಕುಳಿತಾಕ್ಷಣ ನನ್ನ ಮನಸ್ಸು ಸಮಾಧಿಮಗ್ನವಾಗುತ್ತದೆ. ದೇಹದ ಪ್ರಾಣಶಕ್ತಿಯು ಮೇಲ್ಮುಖವಾಗಿ ಹರಿದು ಗಂಟಲು ಬೇನೆಯನ್ನು ಅದು ವೃದ್ಧಿಗೊಳಿಸುತ್ತದೆ. ಆದ್ದರಿಂದ ಡಾಕ್ಟರ್ ಸಮಾಧಿಗೆ ಹೋಗಲೇಬಾರದೆಂದು ವಿಧಿಸಿರುವರು." ಆ ಯುವಕನು ತುಂಬ ದುಃಖದಿಂದ ಹೇಳಿದ : "ನೀವು ಅದನ್ನೆಲ್ಲ ಏಕೆ ತೋರಿಸಿದಿರಿ ? ನಾನೇನೂ ನಿಮ್ಮನ್ನು ಕೇಳಿಕೊಳ್ಳಲಿಲ್ಲ." ಶ್ರೀರಾಮಕೃಷ್ಣರು ಉತ್ತರಿಸಿದರು : "ಅದು ನಿಜ. ನಿನಗೆ ಸ್ವಲ್ಪ ತೋರಿಸದೆ ವಿವರಿಸದೆ ಇರಲಾದೀತೆ ?" ಅವರ ಅಪಾರ ಅನುಗ್ರಹವನ್ನು ಸಮಾಧಿ ಕಡೆಗಿರುವ ಅವರ ಮನಸ್ಸಿನ ಒಲವನ್ನು ಭಾವಿಸಿ ಆ ಯುವಕನು ಆಶ್ಚರ್ಯಚಕಿತನಾದನು.

33. ಶ್ರೀರಾಮಕೃಷ್ಣರ ಪ್ರತಿಯೊಂದು ಕ್ರಿಯೆಗಳಲ್ಲಿಯೂ ಎಂಥ ಒಂದು ಮಾಧುರ್ಯವಿರುತ್ತಿತ್ತೆಂದರೆ ನವಾಗತರೆಲ್ಲರೂ ಇದನ್ನು ನೋಡಿ ಮುಗ್ಧರಾಗಿ ಬಿಡುತ್ತಿದ್ದರು. ಇದಕ್ಕೆ ಉದಾಹರಣೆಯಾಗಿ ಇಲ್ಲಿ ನಾವು ಒಂದು ಘಟನೆಯನ್ನು ಉಲ್ಲೇಖಿಸುತ್ತೇವೆ. ಇದನ್ನು ನಾವು ಗಿರೀಶ್‌ಚಂದ್ರನ ತಮ್ಮನಾದ ಅತುಲ್‌ಚಂದ್ರಘೋಷನಿಂದ ಕೇಳಿರುವೆವು. ಅವನಿಗೆ ಸ್ನೇಹಿತರುಗಳ ಮೇಲೆ ವಿಶೇಷ ಪ್ರೀತಿ. ಅವನ ಭಾಷೆಯಲ್ಲಿಯೆ ಈ ಘಟನೆಯನ್ನು ವಿವರಿಸಲು ಪ್ರಯತ್ನಿಸುತ್ತೇವೆ.

34. "ಉಪೇಂದ್ರನು (ಉಪೇಂದ್ರನಾಥ ಘೋಷ್, ಶ್ಯಾಮ್ ಬಜಾರಿನ ಭೂಪೇಂದ್ರನಾಥ ಬಸುವಿನ ಸಂಬಂಧಿಕ) ನನ್ನ ಆಪ್ತ ಗೆಳೆಯನಾಗಿದ್ದನು. ಅವನು ಉಪನ್ಯಾಯಾಧೀಶನಾಗಿ ಮನೆಯಿಂದ ಬಹುದೂರ ವಾಸಿಸುತ್ತಿದ್ದನು. ನನಗೆ ಶ್ರೀರಾಮಕೃಷ್ಣರ ಸಂಪರ್ಕವಾದ ಮೇಲೆ ನಾನು ಅವನಿಗೆ ಬರೆದೆ : 'ನೀನು ಮುಂದಿನ ಸಾರಿ ಬಂದಾಗ ನಿನಗೊಂದು ಅದ್ಭುತವಾದ ವಸ್ತುವೊಂದನ್ನು ತೋರಿಸುತ್ತೇನೆ.' ಅವನು ಕ್ರಿಸ್‌ಮಸ್ ರಜಾ ದಿನಗಳಲ್ಲಿ ಬಂದು ನಾನು ಅವನಿಗೆ ಬರೆದುದನ್ನು ಜ್ಞಾಪಿಸಿದನು. ನಾನು ಹೇಳಿದೆ : 'ಶ್ರೀರಾಮಕೃಷ್ಣ ಪರಮಹಂಸರಿಗೆ ನಿನ್ನ ಪರಿಚಯ ಮಾಡಿಸಬೇಕೆಂದು ನಾನು ಭಾವಿಸಿದ್ದೆ. ಆದರೆ ಅವರಿಗೆ ಈಗ ಖಾಯಿಲೆ, ಶ್ಯಾಮ್‌ಪುಕುರದಲ್ಲಿ ತಂಗಿದ್ದಾರೆ.

ಅವರು ಮಾತನಾಡಬಾರದೆಂದು ವೈದ್ಯರು ಹೇಳಿ ಬಿಟ್ಟಿದ್ದಾರೆ. ನೀನು ಹೊಸಬ. ಅಲ್ಲಿಗೆ ನಿನ್ನನ್ನು ಹೇಗೆ ಕರೆದುಕೊಂಡು ಹೋಗಲಿ ?' ಆ ದಿನ ಕಳೆಯಿತು. ಮರುದಿನ ಉಪೇಂದ್ರನು ನನ್ನ ಅಣ್ಣನನ್ನು ನೋಡಲು ಬಂದಿದ್ದಾಗ ಶ್ರೀರಾಮಕೃಷ್ಣರ ಬಗ್ಗೆ ಮಾತು ಪ್ರಾರಂಭವಾಯಿತು. ನನ್ನ ಅಣ್ಣನು ಹೇಳಿದ ಅವನಿಗೆ : 'ನೀನು ಏಕೆ ಒಂದು ದಿನ ಅತುಲನೊಡನೆ ಹೋಗಿ ಶ್ರೀರಾಮಕೃಷ್ಣರನ್ನು ನೋಡಬಾರದು ?' ಉಪೇಂದ್ರನು ಹೇಳಿದ : 'ಕಳೆದ ಆರು ತಿಂಗಳುಗಳಿಂದ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುವುದಾಗಿ ಹೇಳುತ್ತಲೇ ಇದ್ದಾನೆ. ನಾನು ಇಲ್ಲಿಗೆ ಬಂದು ಅದನ್ನು ನೆನಪಿಸಿದಾಗ ಈಗ ಅದು ಸಾಧ್ಯವಿಲ್ಲ ಎನ್ನುತ್ತಾನೆ.' ನಾನು ಇದನ್ನು ಕೇಳಿ ಅಣ್ಣನಿಗೆ ಹೇಳಿದೆ : 'ಈಗ ನಾವೇ ಯಾವಾಗಲೂ ಒಳಗೆ ಹೋಗುವುದಕ್ಕೆ ಆಗುವುದಿಲ್ಲ. ಮತ್ತೆ ಹೊಸಬರನ್ನು ಕರೆದು ಕೊಂಡು ಹೋಗುವುದು ಹೇಗೆ.' ನನ್ನ ಅಣ್ಣನು ಹೇಳಿದ : 'ಏನೇ ಆಗಲಿ ಒಮ್ಮೆ ಕರೆದು ಕೊಂಡು ಹೋಗು. ಆದಾದ ಮೇಲೆ ಶ್ರೀರಾಮಕೃಷ್ಣರೆ ಅವನಿಗೆ ತೋರಿಸಿಕೊಳ್ಳುತ್ತಾರೆ ಮತ್ತು ಅವನ ಅದೃಷ್ಟ ಚೆನ್ನಾಗಿದ್ದರೆ, ಅವರ ಪ್ರೀತಿಗೆ ಒಳಗಾಗುತ್ತಾನೆ.'

34. "ಮುಂದೆ ಒಂದು ದಿನ ಸಂಜೆ ಉಪೇಂದ್ರನನ್ನು ಅಲ್ಲಿಗೆ ಕರೆದುಕೊಂಡು ಹೋದೆ. ಶ್ರೀರಾಮಕೃಷ್ಣರ ಕೊಠಡಿಯು ಜನರಿಂದ ತುಂಬಿಹೋಗಿತ್ತು. ಅವರ ಮಂಚದ ವರೆಗೂ ಹರಡಿದ್ದ ಎರಡು ಉದ್ದನೆಯ ಚಾಪೆಯ ಮೇಲೆ ಎಲ್ಲರೂ ಕುಳಿತುಕೊಂಡಿದ್ದರು. ಏನೇನೊ ಮಾತುಕತೆ ನಡೆದಿತ್ತು. ವರ್ಣಚಿತ್ರದ ಸಂಬಂಧವಾಗಿ, ಅಕ್ಕಸಾಲಿಗನು ಚಿನ್ನ ಕರಗಿಸುವ ಸಂಬಂಧವಾಗಿ, ಹೀಗೆ ಅನೇಕ ವಿಷಯಗಳ ಚರ್ಚೆ ನಡೆದಿತ್ತು. ನಾವು ಬಹಳಹೊತ್ತು ಕೂತೆವು. ಆದರೆ ಇದಲ್ಲದೆ ಬೇರೆ ಯಾವ ಮಾತೇ ಬರಲಿಲ್ಲ. ನಾನು ಯೋಚಿಸಿದೆ, 'ಈ ಹೊಸಬರನ್ನು ನಾನು ಕರೆದುಕೊಂಡು ಬಂದಿದ್ದೇನೆ. ಇಂದೇ ಈ ವ್ಯರ್ಥಾಲಾಪ ನಡೆಯುತ್ತಿದೆಯಲ್ಲ. ಉಪೇಂದ್ರನು ಶ್ರೀರಾಮಕೃಷ್ಣರ ಬಗ್ಗೆ ಏನು ಭಾವಿಸುತ್ತಾನೆ.' ನನಗಿದನ್ನು ಯೋಚಿಸಿ ಮನಸ್ಸಿಗೆ ಕಷ್ಟವಾಯಿತು. ನಾನು ಆಶಂಕೆಯಿಂದ ಆಗಾಗ ಅವನ ಕಡೆ ನೋಡುತ್ತಿದೆ. ಆದರೆ ನಾನು ಅವನ ಮುಖ ನೋಡಿದಾಗಲೆಲ್ಲ ಅದರಲ್ಲಿ ಆನಂದದ ಛಾಯೆ ಇತ್ತು, ಅವನು ಆ ಸಂಭಾಷಣೆಯನ್ನು ಮೆಚ್ಚುತ್ತಿರುವಂತೆ ಅನಿಸುತ್ತಿತ್ತು. ನಾನು ಹೊರಟು ಹೋಗೋಣವೆಂದು ಸೂಚಿಸಿದಾಗ ಇನ್ನೂ ಸ್ವಲ್ಪ ಹೊತ್ತು ಇರೋಣವೆಂದು ಅವನು ಸೂಚಿಸಿದನು. ನಾನು ಎರಡು ಮೂರು ಸಾರಿ ಆ ರೀತಿ ಸನ್ನೆ ಮಾಡಿದಾಗ ಅವನು ಮೇಲೆದ್ದು ನನ್ನ ಹತ್ತಿರ ಬಂದ. ನಾನು ಅವನನ್ನು ಕೇಳಿದೆ 'ಇಷ್ಟು ಹೊತ್ತು ಏನು ಕೇಳುತ್ತಿದ್ದೆ. ಈ ಮಾತಿನಲ್ಲಿ ಕೇಳುವುದೇನಿದೆ ? ನಿನ್ನನ್ನು ಸರಳ ವ್ಯಕ್ತಿ ಎಂದು ಕರೆಯುವುದು ಸುಮ್ಮನೆ ಏನು ?' ಅವನ ಹಣೆಯ ಮೇಲೆ ಹಚ್ಚೆ ಇದ್ದುದರಿಂದ ನಾವು ಅವನನ್ನು ಹಾಗೆ ಕರೆಯುತ್ತಿದ್ದೆವು. ಅವನು ಉತ್ತರಿಸಿದ 'ಇಲ್ಲ, ಅದು ಕೇಳುವುದಕ್ಕೆ ಚೆನ್ನಾಗಿತ್ತು. ಮೊದಲು ನಾನು ವಿಶ್ವಪ್ರೀತಿಯ ಬಗ್ಗೆ ಕೇಳಿದ್ದೆ. ಆದರೆ ಯಾರಲ್ಲಿಯೂ ಅದು ಅಭಿವ್ಯಕ್ತಗೊಂಡಿರುವುದನ್ನು ಕಂಡಿರಲಿಲ್ಲ. ಇಂದು ಶ್ರೀರಾಮಕೃಷ್ಣರು ಇಂಥ ಅಲ್ಪ ವಿಷಯದಲ್ಲಿಯೂ ವಿನೋದಿಸುತ್ತಿರುವುದನ್ನು ಕಂಡು ನನಗದರ ಅನುಭವ

ವಾಯಿತು. ಆದರೆ ನಾನು ಇನ್ನೊಮ್ಮೆ ಬರಬೇಕು. ನಾನು ಮೂರು ಪ್ರಶ್ನೆಗಳನ್ನು ಕೇಳಬೇಕಾ ವುದಿದೆ.'

"ಮರುದಿನ ಬೆಳಗ್ಗೆ ಉಪೇಂದ್ರನನ್ನು ಕರೆದುಕೊಂಡು ಹೋದೆ. ಆಗ ಶ್ರೀರಾಮ ಕೃಷ್ಣರ ಹತ್ತಿರ ಪ್ರಾಯಶಃ ಯಾರೂ ಇರಲಿಲ್ಲ. ಒಂದಿಬ್ಬರು ಸೇವಕರು ಮತ್ತು ನನ್ನ ಭಾವ ಶ್ರೀಮಲ್ಲಿಕ ಇದ್ದರು. ನಾವು ಹೊರಡುವುದಕ್ಕೆ ಮುಂಚೆಯೆ ಉಪೇಂದ್ರನಿಗೆ ಮತ್ತೆ ಮತ್ತೆ ಹೇಳಿದ್ದೆ : 'ನೀನು ಏನು ಕೇಳಬೇಕೊ ಅದನ್ನು ವೈಯಕ್ತಿಕವಾಗಿ ಕೇಳು. ಆಗ ನಿನಗೆ ತೃಪ್ತಿಕರವಾದ ಉತ್ತರ ದೊರೆಯುತ್ತದೆ. ಇತರರ ಮೂಲಕ ಪ್ರಶ್ನೆಗಳನ್ನು ಕೇಳಬೇಡ.' ಆದರೆ ಅವನು ನಾಚಿಕೆಯ ಸ್ವಭಾವದವನು. ನಾನು ಏನು ಮಾಡಬೇಡ ವೆಂದು ಹೇಳಿದೆನೊ ಹಾಗೆಯೆ ಮಾಡಿದ. ಮಲ್ಲಿಕನ ಮೂಲಕ ಪ್ರಶ್ನೆ ಕೇಳಿದ. ಉಪೇಂದ್ರನ ಮುಖಭಾವದಿಂದ ಶ್ರೀರಾಮಕೃಷ್ಣರು ಕೊಟ್ಟ ಉತ್ತರ ಅವನಿಗೆ ತೃಪ್ತಿ ಯಾಗಲಿಲ್ಲ ಎಂದು ನನಗೆ ಅರಿವಾಯಿತು. ಆಗ ನಾನು ಅವನಿಗೆ ಪಿಸು ಮಾತಿನಲ್ಲಿ ಹೇಳಿದೆ 'ಹಾಗಾಗದೆ ಮತ್ತೇನು ? ನೀನೆ ನೇರವಾಗಿ ಪ್ರಶ್ನೆಯನ್ನು ಕೇಳೆಂದು ಮತ್ತೆ ಮತ್ತೆ ಹೇಳಿರಲಿಲ್ಲವೆ? ನೀನೆ ವೈಯಕ್ತಿಕವಾಗಿ ಏಕೆ ಪ್ರಶ್ನೆಯನ್ನು ಕೇಳಬಾರದು ? ನಿನ್ನ ಪರವಾಗಿ ಮಾತನಾಡಲು ಒಬ್ಬ ವಕೀಲ ಬೇಕೆ ?'

36. "ಅವನು ಈಗ ಧೈರ್ಯ ಮಾಡಿಕೊಂಡು ಶ್ರೀರಾಮಕೃಷ್ಣರಿಗೆ ಒಂದು ಪ್ರಶ್ನೆ ಹಾಕಿದ : 'ಮಹಾಶಯರೆ, ಭಗವಂತನು ಸಾಕಾರನೆ ಅಥವಾ ನಿರಾಕಾರನೆ ? ಅವನು ಎರಡೂ ಆದರೆ ವಿರುದ್ಧ ಸ್ವಭಾವಗಳು ಒಬ್ಬನಲ್ಲಿಯೆ ಇರಲು ಹೇಗೆ ಸಾಧ್ಯ ?' ಶ್ರೀರಾಮಕೃಷ್ಣರು ತಕ್ಷಣ ಉತ್ತರಿಸಿದರು : 'ಅವನು ಸಾಕಾರನೂ ಹೌದು ನಿರಾಕಾರನೂ ಹೌದು—ನೀರು ಮಂಜುಗಡ್ಡೆ ಇದ್ದ ಹಾಗೆ.' ಉಪೇಂದ್ರ ಕಾಲೇಜಿನಲ್ಲಿ ಅಧ್ಯಯನ ಮಾಡಿದ್ದ. ಆದ್ದರಿಂದ ಶ್ರೀರಾಮಕೃಷ್ಣರು ಕೊಟ್ಟ ಉದಾಹರಣೆ ಸಂಪೂರ್ಣ ತೃಪ್ತಿ ಯನ್ನು ಕೊಟ್ಟಿತು. ತನ್ನ ವೈಜ್ಞಾನಿಕ ಜ್ಞಾನದ ಸಹಾಯದಿಂದ ಅವರ ಆ ಉತ್ತರ ವನ್ನು ಅರ್ಥಮಾಡಿಕೊಂಡನು. ಒಂದೇ ಪ್ರಶ್ನೆಯನ್ನು ಕೇಳಿ ಇನ್ನೆರಡು ಪ್ರಶ್ನೆಗಳನ್ನು ಕೇಳದೆಯೆ ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿ ಹೊರಗೆ ಬಂದನು. ಆಗ ನಾನು ಕೇಳಿದೆ 'ಉಪೇಂದ್ರ, ನೀನು ಮೂರು ಪ್ರಶ್ನೆಗಳಿವೆ ಎಂದು ಹೇಳಿದೆಯಲ್ಲ. ಒಂದೇ ಪ್ರಶ್ನೆ ಯನ್ನು ಕೇಳಿ ಹೊರಗೆ ಬಂದುಬಿಟ್ಟೆಯಲ್ಲ ಏಕೆ ?' ಅವನು ಉತ್ತರಿಸಿದ : 'ನಿನಗೆ ತಿಳಿಯದೆ, ಆ ಒಂದು ಉತ್ತರದಿಂದ ನನ್ನ ಮೂರು ಪ್ರಶ್ನೆಗಳಿಗೆ ಉತ್ತರ ದೊರೆ ತಂತಾಯಿತು.'

37. "ರಾಮಚಂದ್ರದತ್ತನು ಮನೆಯಲ್ಲಿ ಬೇಗ ಊಟ ಮುಗಿಸಿ ತನ್ನ ಆಫೀಸ್ ಉಡುಪನ್ನು ಒಂದು ಬ್ಯಾಗಿನಲ್ಲಿಟ್ಟುಕೊಂಡು ಶ್ರೀರಾಮಕೃಷ್ಣರ ಹತ್ತಿರ ಬರುತ್ತಿದ್ದನು. ಒಂದೆರಡು ಗಂಟೆ ಅಲ್ಲಿ ಕಳೆದು ತನ್ನ ಉಡುಪನ್ನು ಬದಲಾಯಿಸಿ ಆಫೀಸಿಗೆ ಹೋಗುತ್ತಿ ದ್ದನು. ಶ್ರೀರಾಮಕೃಷ್ಣರು ಉಪೇಂದ್ರನ ಪ್ರಶ್ನೆಗೆ ಉತ್ತರ ನೀಡುತ್ತಿರುವಾಗ ಅವನು ಆಫೀಸ್ ಉಡುಪಿನಲ್ಲಿ ಇದ್ದಕ್ಕಿದ್ದಂತೆಯೆ ಅಲ್ಲಿಗೆ ಬಂದುಬಿಟ್ಟನು. ನಾವು ಹೊರಗೆ

ಬಂದ ಮೇಲೆ ರಾಮಚಂದ್ರನು ಹೇಳಿದ : 'ಸೋದರ ಅತುಲ್. ಅವನನ್ನು (ಉಪೇಂದ್ರ) ಇಲ್ಲಿ ಕರೆದುಕೊಂಡು ಬಾ. ಅವನ ಪ್ರಶ್ನೆಗೆ ಶ್ರೀರಾಮಕೃಷ್ಣರು ಕೊಟ್ಟ ಉತ್ತರವನ್ನು ಅವನು ಅರ್ಥ ಮಾಡಿಕೊಳ್ಳುವುದು ಬಹಳ ಕಷ್ಟ. ಅವನು ಶ್ರೀರಾಮಕೃಷ್ಣರ ಮಾತು ಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಈ ನನ್ನ ಪುಸ್ತಕವನ್ನು (ತತ್ತ್ವ ಪ್ರಕಾಶಿಕಾ) ಓದಬೇಕಾಗುತ್ತದೆ.' ನನಗೆ ಆ ಮಾತನ್ನು ಕೇಳಿ ಕೋಪ ಬಂತು. ನಾನು ಹಿಂಜರಿಯದೆ ಹೇಳಿದೆ : 'ಹಾಗೇನಿಲ್ಲ, ನೀನು ಇಲ್ಲಿಗೆ ನಮಗೆಲ್ಲರಿಗೂ ಬಹಳ ಮುಂಚಿನಿಂದ, ಏಳು ವರ್ಷ ಗಳಿಂದ ಬರುತ್ತಿರುವೆ. ಆದರೂ ಶ್ರೀರಾಮಕೃಷ್ಣರು ಹೇಳಿದುದನ್ನು ಅವನು ಅರ್ಥ ಮಾಡಿಕೊಳ್ಳಲಾರ ಎಂದು ಹೇಳುತ್ತಿರುವೆ. ಈ ಪುಸ್ತಕವನ್ನು ಓದಿ ಅದು ಅರ್ಥವಾಗು ತ್ತದೆ ಅಲ್ಲವೆ ? ಶ್ರೀರಾಮಕೃಷ್ಣರು ತಿಳಿಸಿಕೊಡಲಾಗದುದನ್ನು ಇದು ತಿಳಿಸಿಕೊಡುತ್ತದೆ ಅಲ್ಲವೆ ? ಎಂಥ ವಿಚಿತ್ರ ಭಾವನೆ ? ಆದರೆ ಉಪೇಂದ್ರನಿಗೆ ನಿನ್ನ ಪುಸ್ತಕವನ್ನು ಕೊಡ ಬೇಕೆಂಬುದು ನಿನ್ನ ಇಚ್ಛೆ ಆದರೆ ಹಾಗೆ ಮಾಡಬಹುದು. ಅದು ಬೇರೆ ವಿಷಯ.' ರಾಮ ಚಂದ್ರನು ಸ್ವಲ್ಪ ತಬ್ಬಿಬ್ಬಾಗಿ ಪುಸ್ತಕವನ್ನು ಉಪೇಂದ್ರನಿಗೆ ಕೊಟ್ಟನು."

## ಹನ್ನೆರಡನೆಯ ಅಧ್ಯಾಯ

## ತೃತೀಯ ಪಾದ

# ಶ್ರೀರಾಮಕೃಷ್ಣರು ಶ್ಯಾಮ್‌ಪುಕುರದಲ್ಲಿ

1. ಇತರರ ಪಾಪಗ್ರಹಣದಿಂದ ಶ್ರೀರಾಮಕೃಷ್ಣರ ದೇಹದಲ್ಲಿ ಹುಣ್ಣು 2. ಹೊಸಬರು ಅವರ ಪಾದವನ್ನು ಸ್ಪರ್ಶಿಸಬಾರದೆಂದು ಭಕ್ತರು ನಿಯಮವನ್ನು ಹೇರಿದರು 3. ಕಾಲಿಪದನ ಸಹಾಯದಿಂದ ನಟಿಯೊಬ್ಬಳು ಶ್ರೀರಾಮಕೃಷ್ಣರನ್ನು ನೋಡಿದುದು 4. ಭಕ್ತರಲ್ಲಿ ಭಾವುಕತೆಯ ವೃದ್ಧಿ ಮತ್ತು ತ್ಯಾಗದ ಆದರ್ಶವನ್ನು ಕಡೆಗಣಿಸಿದುದು 5. ಗಿರೀಶನು ಶ್ರೀರಾಮಕೃಷ್ಣರನ್ನು ಅವತಾರವೆಂದು ಅತ್ಯುತ್ಸಾಹದಿಂದ ಸಾರುತ್ತಾನೆ 6. ಈ ವಿಷಯದಲ್ಲಿ ಗಿರೀಶನನ್ನು ಮೀರಿಸುವ ರಾಮಚಂದ್ರನ ಪ್ರಯತ್ನ 7. ವಿಜಯಕೃಷ್ಣನು ಈ ಬೆಂಕಿಗೆ ತುಪ್ಪವೆರೆದನು 8. ನರೇಂದ್ರನು ಇದಕ್ಕೆ ಪ್ರತಿಯಾಗಿ ತ್ಯಾಗ ಆತ್ಮ-ನಿಗ್ರಹಗಳಿಗೆ ಪ್ರಾಧಾನ್ಯ ನೀಡಿದನು 9. ಭಾವುಕತೆ ಜೀವನದಲ್ಲಿ ಶಾಶ್ವತ ಬದಲಾವಣೆಯನ್ನುಂಟುಮಾಡದು 10. ಕಣ್ಣೀರು ರೋಮಾಂಚನ ಮುಂತಾದ ಶಾರೀರಿಕ ವಿಕಾರಗಳು ಅನೇಕ ವೇಳೆ ಕೃತಕವಾಗಿರುತ್ತವೆ 11. ಕೆಲವು ಭಕ್ತರ ಆಚರಣೆ ಈ ಮೇಲಿನ ಮಾತನ್ನು ಸಮರ್ಥಿಸಿತು 12. ನರೇಂದ್ರನು ಭಾವುಕತೆಯನ್ನು ಗೇಲಿ ಮಾಡುತ್ತಾನೆ 13. ಭಾವುಕತೆಯ ಬದಲು ನೈಜ ತ್ಯಾಗ ಮತ್ತು ಭಕ್ತಿಯನ್ನು ಬೆಳಸಿಕೊಳ್ಳಲು ನರೇಂದ್ರನ ಪ್ರೋತ್ಸಾಹ 14. ಶ್ರೀರಾಮಕೃಷ್ಣರನ್ನು ಪ್ರೀತಿಸುವವನ ಜೀವನ ಅವರಂತೆಯೇ ಆಗುತ್ತದೆ 15. ಹೊಸ ತತ್ತ್ವಗಳನ್ನು ವಿಮರ್ಶಾಪೂರ್ವಕವಾಗಿ ಸ್ವೀಕರಿಸಬೇಕು 16. ಮಹಿಮ ಚಕ್ರವರ್ತಿಯ ಲೋಕಮಾನ್ಯತೆಯನ್ನು ಪಡೆಯಬೇಕೆಂಬ ಆಸೆ 17. ಮಹಿಮನ ವ್ಯಾಘ್ರಾಜಿನ 18. ಮಹಿಮನ ಗುರು 19. ಮಹಿಮನ ಆಧ್ಯಾತ್ಮಿಕ ಸಾಧನೆ 20. ಶ್ಯಾಮಪುಕುರದಲ್ಲಿ ಮಹಿಮಾಚರಣ 21. ಮಹಿಮ ಮತ್ತು ನರೇಂದ್ರರ ನಡುವೆ ಚರ್ಚೆ 22. ಎಲ್ಲ ನೈಜ ಸಾಧಕರನ್ನೂ ಸಮಾನವಾಗಿ ಗೌರವಿಸಬೇಕೆಂಬ ನರೇಂದ್ರನ ಉಪದೇಶ 23. ಕ್ರೈಸ್ತ ಮಿಶನರಿ ಪ್ರಭುದಯಾಲ ಮಿಶ್ರ 24. ಶ್ರೀರಾಮಕೃಷ್ಣರ ಆರೋಗ್ಯ ಇನ್ನೂ ಹದಗೆಟ್ಟಿತು. ಭಕ್ತರು ಅವರನ್ನು ಕಾಶಿಪುರಕ್ಕೆ ಕರೆದುಕೊಂಡು ಬಂದರು.

1. ಶ್ಯಾಮ್‌ಪುಕುರದಲ್ಲಿ ವಾಸಿಸುತ್ತಿರುವಾಗ ಶ್ರೀರಾಮಕೃಷ್ಣರಿಗೆ ಒಂದು ದಿನ ಒಂದು ಅದ್ಭುತ ದರ್ಶನವಾಯಿತು. ಅವರ ಸೂಕ್ಷ್ಮ ಶರೀರವು ಸ್ಥೂಲ ಶರೀರದಿಂದ ಹೊರ ಬಂದು ಕೊಠಡಿಯ ಒಳಗೆ ತಿರುಗಾಡುತ್ತಿತ್ತು. ಅದರ ಕಂಠ ಪ್ರದೇಶದ ಹಿಂಭಾಗದಲ್ಲಿ ಘಾಯವಾಗಿತ್ತು. ಅವರು ಆಶ್ಚರ್ಯದಿಂದ ಈ ರೀತಿ ಘಾಯವಾಗಿರುವುದಕ್ಕೆ ಕಾರಣವೇನೆಂದು ಚಿಂತಿಸಿದರು. ಆಗ ಜಗನ್ಮಾತೆಯು ಅವರಿಗೆ ತಿಳಿಸಿದಳು : ಅನೇಕ ಬಗೆಯ ದುಷ್ಕರ್ಮವನ್ನು ಮಾಡಿದ ವ್ಯಕ್ತಿಗಳು ಅವರನ್ನು ಸ್ಪರ್ಶಿಸಿ ಪವಿತ್ರರಾಗಿ

ರುವರು. ಅವರೆಲ್ಲರ ಪಾಪಭಾರವು ತಮ್ಮನ್ನು ಪ್ರವೇಶಿಸಿ ತಮ್ಮ ಶರೀರದಲ್ಲಿ ಈ ರೋಗ ಉಂಟಾಗಿದೆ. ಜೀವಿಗಳ ಕಲ್ಯಾಣಕ್ಕಾಗಿ ತಾವು ಲಕ್ಷಾಂತರ ಬಾರಿ ಜನ್ಮವೆತ್ತಿ ದುಃಖವನ್ನು ಅನುಭವಿಸುವುದರಲ್ಲಿ ಹೆದರುವುದಿಲ್ಲ ಎಂದು ಅವರು ದಕ್ಷಿಣೇಶ್ವರದಲ್ಲಿ ಆಗಾಗ ಹೇಳುತ್ತಿದ್ದುದನ್ನು ನಾವು ಕೇಳಿರುವೆವು. ಈ ಮೇಲಿನ ದರ್ಶನದಿಂದ ಅವರು ಸ್ವಲ್ಪವೂ ವಿಚಲಿತರಾಗದೆ ಆನಂದದಿಂದಲೆ ಆ ವಿಷಯವನ್ನು ನಮಗೆ ತಿಳಿಸಿದರು. ಅವರ ಅಪಾರ ಕರುಣೆಯ ಕಥೆಯನ್ನು ನೆನೆಸಿಕೊಂಡು ನಾವು ಮುಗ್ಧರಾದೆವು. ಶ್ರೀರಾಮಕೃಷ್ಣರ ಶರೀರವು ಹಿಂದಿನಂತೆ ಆರೋಗ್ಯವಂತವಾಗುವವರೆಗೂ ಹೊಸಬರು ಬಂದು ಅವರ ಪಾದವನ್ನು ಸ್ಪರ್ಶಿಸದಂತೆ ಭಕ್ತರು—ವಿಶೇಷವಾಗಿ ಯುವಕ ಭಕ್ತರು ಬಹಳ ಎಚ್ಚರಿಕೆ ವಹಿಸಿದರು. ಭಕ್ತರಲ್ಲಿ ಕೆಲವರು ತಮ್ಮ ಹಿಂದಿನ ಜೀವನದ ದೋಷಗಳನ್ನು ನೆನೆದು ಇನ್ನು ಶ್ರೀರಾಮಕೃಷ್ಣರ ಪವಿತ್ರ ದೇಹವನ್ನು ಸ್ಪರ್ಶಿಸಕೂಡದೆಂದು ಸಂಕಲ್ಪಿಸಿದರು. ಒಬ್ಬರು ಮಾಡಿದ ಕರ್ಮಫಲವನ್ನು ಇನ್ನೊಬ್ಬರು ಸ್ವೇಚ್ಛೆಯಿಂದ ಅನುಭವಿಸುವುದು ಕ್ರೈಸ್ತ ವೈಷ್ಣವ ಮುಂತಾದ ಧರ್ಮಗಳಲ್ಲಿ ಮೂಲಭೂತ ತತ್ತ್ವವಾಗಿದೆ. ಈ ಮೇಲಿನ ದರ್ಶನವು ಇದರ ಸತ್ಯತೆಯನ್ನು ಸೂಚಿಸುತ್ತದೆ. ನರೇಂದ್ರ ಮುಂತಾದ ಕೆಲವು ಭಕ್ತರು ಈ ವಿಷಯವನ್ನು ಕುರಿತು ಬಹಳ ಆಳವಾಗಿ ಆಲೋಚಿಸಿದರು.

2. ಶ್ರೀರಾಮಕೃಷ್ಣರೆಡೆಗೆ ಹೊಸ ವ್ಯಕ್ತಿಗಳು ಬರುವುದನ್ನು ತಡೆಯುವ ಪ್ರಯತ್ನವನ್ನು ಕಂಡು ಗಿರೀಶ್‌ಚಂದ್ರನು ಹೇಳಿದ : "ನೀವು ಪ್ರಯತ್ನ ಮಾಡುವುದು ಮಾಡಿ. ಆದರೆ ಅದು ಸಾಧ್ಯವಿಲ್ಲ. ಏಕೆಂದರೆ ಅವರು (ಶ್ರೀರಾಮಕೃಷ್ಣರು) ಅದಕ್ಕಾಗಿಯೆ ದೇಹಧಾರಣೆ ಮಾಡಿರುವುದು." ಸಂಪೂರ್ಣ ಅಪರಿಚಿತ ವ್ಯಕ್ತಿಗಳನ್ನು ನಿಷೇಧಿಸುವುದು ಸಾಧ್ಯವಾದರೂ ಭಕ್ತರಿಗೆ ಪರಿಚಿತವಿದ್ದ ಹೊಸವ್ಯಕ್ತಿಗಳನ್ನು ಬರದಂತೆ ನೋಡಿಕೊಳ್ಳುವುದು ಸಾಧ್ಯವಾಗಲಿಲ್ಲ. ಭಕ್ತರಾರಿಗೂ ಪರಿಚಯವಿಲ್ಲದ ಹೊಸಬರಾರನ್ನೂ ಶ್ರೀರಾಮಕೃಷ್ಣರ ಹತ್ತಿರ ಹೋಗಲು ಬಿಡಬಾರದು ಮತ್ತು ಆ ರೀತಿಯ ವ್ಯಕ್ತಿಗಳೂ ಕೂಡ ಶ್ರೀರಾಮಕೃಷ್ಣರ ಪಾದವನ್ನು ಸ್ಪರ್ಶಿಸಿ ಪ್ರಣಾಮ ಮಾಡಬಾರದು ಎಂದು ನಿಯಮ ಮಾಡಿದರು. ಸಂಪೂರ್ಣ ಅಪರಿಚಿತ ವ್ಯಕ್ತಿಗಳು ಕೆಲವರ ತೀವ್ರ ವ್ಯಾಕುಲತೆಯನ್ನು ಕಂಡು ಆಗಾಗ ಈ ಮೇಲಿನ ನಿಯಮ ಉಲ್ಲಂಘಿಸಲ್ಪಡುತ್ತಿತ್ತು.

3. ಒಂದು ದಿನ ಒಂದು ಹಾಸ್ಯ ಘಟನೆ ಸಂಭವಿಸಿತು. ಗಿರೀಶ್ ಚಂದ್ರನು ನಡೆಸುತ್ತಿದ್ದ ನಾಟಕ ಮಂದಿರದಲ್ಲಿ ಒಂದು ಧಾರ್ಮಿಕ ವಿಷಯವಾದ ನಾಟಕ ನಡೆಯುತ್ತಿತ್ತು. ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿದ್ದಾಗ ಅದನ್ನು ನೋಡಲು ಒಂದು ದಿನ ಹೋಗಿದ್ದರು. ಆ ನಾಟಕದ ನಾಯಕಿಯ ಪಾತ್ರವನ್ನು ಅವರು ವಿಶೇಷವಾಗಿ ಪ್ರಶಂಸಿಸಿದ್ದರು. ಆ ನಟಿಯು ನಾಟಕದ ನಂತರ ಶ್ರೀರಾಮಕೃಷ್ಣರ ಪಾದಸ್ಪರ್ಶ ಮಾಡುವ ಸೌಭಾಗ್ಯವನ್ನು ಪಡೆದಿದ್ದಳು. ಅಂದಿನಿಂದ ಆಕೆಯು ಅವರನ್ನು ನಿಜವಾದ ದೇವತೆಯೆಂದೇ ಪರಿಗಣಿಸುತ್ತಿದ್ದಳು. ಇನ್ನೊಂದು ದಿನ ಅವರನ್ನು ನೋಡುವ ಅವಕಾಶಕ್ಕಾಗಿ ಆಕೆ ಕಾಯುತ್ತಿದ್ದಳು. ಶ್ರೀರಾಮಕೃಷ್ಣರ ತೀವ್ರ ಖಾಯಿಲೆಯ ವಿಷಯವನ್ನು ಕೇಳಿ ಈಗಲೆ ಹೋಗಿ

ಅವರನ್ನು ನೋಡಬೇಕೆಂದು ಅವಳ ಮನಸ್ಸು ಚಡಪಡಿಸಿತು. ಆಕೆಗೆ ಕಾಳೀಪದಘೋಷನ ಪರಿಚಯವಿತ್ತು. ಅವನನ್ನು ಈ ವಿಷಯದಲ್ಲಿ ಆಶ್ರಯಿಸಿದಳು. ಕಾಳೀಪದನು ಎಲ್ಲ ವಿಷಯದಲ್ಲೂ ಗಿರೀಶ್ ಚಂದ್ರನನ್ನೆ ಅನುಸರಿಸುತ್ತಿದ್ದನು. ಶ್ರೀರಾಮಕೃಷ್ಣರು ಅವತಾರ ಪುರುಷರಾದುದರಿಂದ ದುಷ್ಕರ್ಮಿಗಳು ಪಶ್ಚಾತ್ತಾಪದಿಂದ ಅವರ ಶ್ರೀಚರಣವನ್ನು ಸ್ಪರ್ಶಿಸಿದರೆ ಅವರ ರೋಗ ವೃದ್ಧಿಯಾಗುತ್ತದೆ ಎಂಬ ಮಾತನ್ನು ಅವನು ಒಪ್ಪುತ್ತಿರಲಿಲ್ಲ. ಆದ್ದರಿಂದ ಆ ನಟಿಯನ್ನು ಕರೆದುಕೊಂಡು ಬರಲು ಅವನ ಮನಸ್ಸಿನಲ್ಲಿ ಯಾವ ಸಂಕೋಚವೂ ಇರಲಿಲ್ಲ. ಒಂದು ದಿನ ಗುಟ್ಟಾಗಿ ವಿಚಾರಮಾಡಿ ಸಂಧ್ಯಾ ವೇಳೆಯಲ್ಲಿ ಆಕೆಯನ್ನು ಕರೆದುಕೊಂಡು ಬಂದನು. ಅವಳು ಪುರುಷನಂತೆ ಹ್ಯಾಟು ಕೋಟು ಧರಿಸಿದ್ದಳು. ತನ್ನ ಸ್ನೇಹಿತನೆಂದು ನಮಗೆ ಅವಳನ್ನು ಪರಿಚಯಿಸಿ ಅವಳನ್ನು ಶ್ರೀರಾಮಕೃಷ್ಣರೆಡೆಗೆ ಕರೆದುಕೊಂಡು ಹೋದನು. ಅವರಿಗೆ ಆಕೆಯ ನಿಜವಾದ ಪರಿಚಯ ಮಾಡಿಸಿದನು. ಶ್ರೀರಾಮಕೃಷ್ಣರ ಕೊಠಡಿಯ ಒಳಗೆ ನಾವಾರೂ ಇರಲಿಲ್ಲ. ಆದ್ದರಿಂದ ಅವನ ಕಾರ್ಯ ನಿರ್ವಿಘ್ನವಾಗಿ ನೆರವೇರಿತು. ನಮ್ಮ ಕಣ್ಣಿಗೆ ಮಣ್ಣೆರಚುವುದಕ್ಕಾಗಿಯೆ ನಟಿಯು ವೇಷ ಬದಲಾಯಿಸಿಕೊಂಡುದನ್ನು ತಿಳಿದು ಹಾಸ್ಯಪ್ರಿಯರಾದ ಶ್ರೀರಾಮಕೃಷ್ಣರು ತುಂಬಾ ನಕ್ಕುಬಿಟ್ಟರು. ಅವಳ ಸಾಹಸವನ್ನು ಪ್ರಶಂಸಿಸಿ ಅವಳ ಶ್ರದ್ಧಾಭಕ್ತಿಗೆ ಸಂತುಷ್ಟರಾದರು. ಭಗವಂತನಲ್ಲಿ ವಿಶ್ವಾಸವಿರಿಸಿ ಅವನಲ್ಲಿ ಶರಣಾಗಬೇಕೆಂದು ಹೇಳಿ ಒಂದೆರಡು ಮಾತಿನ ನಂತರ ಆಕೆಯನ್ನು ಕಳಿಸಿಕೊಟ್ಟರು. ಅವಳು ಕಣ್ಣೀರು ಸುರಿಸುತ್ತಾ ತನ್ನ ತಲೆಯನ್ನು ಅವರ ಪಾದದ ಮೇಲಿಟ್ಟು ನಮಸ್ಕರಿಸಿ ಕಾಳೀಪದನೊಡನೆ ಹೊರಟುಹೋದಳು. ಈ ವಿಷಯವನ್ನು ನಾವು ಶ್ರೀರಾಮಕೃಷ್ಣರಿಂದ ಅನಂತರ ಕೇಳಿದೆವು. ನಾವು ಮೋಸಹೋದುದನ್ನು ಕಂಡು ಅವರು ನಕ್ಕು ಗೇಲಿ ಮಾಡುತ್ತಿದ್ದುದರಿಂದ ನಮಗೆ ಕಾಳೀಪದನ ಮೇಲೆ ಕೋಪ ಉಂಟಾಗಲಿಲ್ಲ.

4. ಶ್ರೀರಾಮಕೃಷ್ಣರ ಸಂಗದಿಂದ ಮತ್ತು ಅವರ ಸೇವೆಯ ಫಲದಿಂದ ಭಕ್ತರ ಹೃದಯದಲ್ಲಿ ಭಕ್ತಿವಿಶ್ವಾಸಗಳು ದಿನದಿನವೂ ವೃದ್ಧಿಯಾಗುತ್ತಾ ಹೋದವು. ಆದರೆ ಒಂದು ವಿಷಯದಲ್ಲಿ ಅವರ ಮನಸ್ಸು ಅಪಾಯಕರ ಅಡ್ಡಹಾದಿಯನ್ನು ಹಿಡಿಯಲು ತೊಡಗಿತ್ತು. ಅವರಿಗೆ ಕಠೋರ ತ್ಯಾಗ ಮತ್ತು ಆತ್ಮ ನಿಗ್ರಹಕ್ಕಿಂತ ಭಾವಾತಿರೇಕವೇ ಹೆಚ್ಚು ಪ್ರಿಯವೆನಿಸತೊಡಗಿತು. ತ್ಯಾಗ ಮತ್ತು ಸಂಯಮವಿಲ್ಲದಿದ್ದರೆ ಭಾವಾತಿರೇಕವು ಎಷ್ಟೇ ಸೊಗಸಾಗಿದ್ದರೂ ಅದು ಕಾಮ ಕ್ರೋಧಾದಿಗಳನ್ನು ಗೆಲ್ಲಲು ಸಮರ್ಥವಾಗುವುದಿಲ್ಲ. ಈ ವಿಷಯವನ್ನು ಭಕ್ತರು ಅರ್ಥಮಾಡಿಕೊಳ್ಳಲಿಲ್ಲ. ಇದಕ್ಕೆ ಅನೇಕ ಕಾರಣಗಳಿದ್ದುವು. ಮೊದಲನೆಯದಾಗಿ ಸರಳವಾದ ಮತ್ತು ಸುಲಭವಾದ ಮಾರ್ಗವನ್ನು ಹಿಡಿಯುವುದೇ ಮಾನವನ ಸ್ವಭಾವ. ಅವನು ಧರ್ಮಾನುಷ್ಠಾನ ಮಾಡುವಾಗಲೂ ಸಂಸಾರ ಮತ್ತು ಭಗವಂತ, ಭೋಗ ಮತ್ತು ತ್ಯಾಗ ಎರಡನ್ನೂ ಇಟ್ಟುಕೊಂಡು ಮುಂದುವರಿಯಲು ಬಯಸುತ್ತಾನೆ. ಎಲ್ಲೋ ಕೆಲವರು ಮಾತ್ರ ಬೆಳಕು ಮತ್ತು ಕತ್ತಲೆಯಂತೆ ಅವುಗಳು ವಿರುದ್ಧವಾದವುಗಳು ಎಂದು ಗ್ರಹಿಸಲು ಸಮರ್ಥರಾಗುತ್ತಾರೆ. ಭಗವಂತನಿ

ಗಾಗಿ ಸರ್ವಸ್ವವನ್ನೂ ತ್ಯಾಗ ಮಾಡುವ ಆದರ್ಶವನ್ನು ಮುಂದಗೊಳಿಸದೆ ಅವರೆಡರಲ್ಲೂ ಸಾಮಂಜಸ್ಯವನ್ನು ಉಂಟುಮಾಡುವುದು ಅಸಾಧ್ಯ ಎಂಬುದನ್ನು ಅವರು ಅರ್ಥಮಾಡಿ ಕೊಳ್ಳುತ್ತಾರೆ. ಹೀಗೆ ಇವೆರಡನ್ನೂ ಉಳಿಸಿಕೊಂಡು ಹೋಗಲು ಬಯಸುವವರು ತ್ಯಾಗಕ್ಕೆ ಒಂದು ಮಿತಿಯನ್ನು ಕಲ್ಪಿಸಿ ಸಂಸಾರದಲ್ಲಿಯೆ ಬದ್ಧರಾಗಿ ಉಳಿಯುತ್ತಾರೆ. ಶ್ರೀರಾಮಕೃಷ್ಣರು ತಮ್ಮೆಡೆಗೆ ಬರುತ್ತಿದ್ದವರನ್ನು ಅನೇಕ ರೀತಿಯಲ್ಲಿ ಪರೀಕ್ಷಿಸಿ ಅವನು ಸಂಸಾರದಲ್ಲಿಯೆ ತೃಪ್ತನಾಗಿರುವನೆ ಇಲ್ಲವೆ ಎಂಬುದನ್ನು ನೋಡುತ್ತಿದ್ದರು. ಅವನು ಆ ರೀತಿ ಇದ್ದಾನೆ ಎಂದು ಅವರಿಗೆ ಅನಿಸಿದರೆ ತ್ಯಾಗದ ಆದರ್ಶವನ್ನು ಅವನು ಎಷ್ಟು ಸ್ವೀಕರಿಸಲು ಸಾಧ್ಯವೊ ಅಷ್ಟನ್ನು ಮಾತ್ರ ಅವನ ಮುಂದೆ ಪ್ರಕಾಶಪಡಿಸುತ್ತಿದ್ದರು. ಆದ್ದರಿಂದ ಅಧಿಕಾರಿ ಭೇದಕ್ಕೆ ಅನುಗುಣವಾಗಿ ಅವರ ಉಪದೇಶವು ಬೇರೆಬೇರೆಯಾಗಿ ರುತ್ತಿತ್ತು. ತಮ್ಮ ಗೃಹಸ್ಥ ಮತ್ತು ಯುವಕ ಭಕ್ತರಿಗೆ ಅವರು ಸಾಧನೆಯ ವಿಷಯ ದಲ್ಲಿ ನೀಡುತ್ತಿದ್ದ ಉಪದೇಶಗಳು ಬೇರೆಬೇರೆಯಾಗಿರುತ್ತಿದ್ದವು. ಆದ್ದರಿಂದಲೆ ಎಲ್ಲರಿಗೂ ಉಪದೇಶ ನೀಡುವ ಸಮಯದಲ್ಲಿ 'ಕಲಿಯುಗದಲ್ಲಿ ಶ್ರೀಹರಿಯ ನಾಮಕೀರ್ತನೆ ಮತ್ತು ನಾರದೀಯ ಭಕ್ತಿ ಇವು ಮಾತ್ರ ಸಾಕು' ಎನ್ನುತ್ತಿದ್ದರು.

ಸಾಮಾನ್ಯ ಜನರಲ್ಲಿ ಧರ್ಮ ಮತ್ತು ಶಾಸ್ತ್ರ ಚರ್ಚೆ ಎಷ್ಟರ ಮಟ್ಟಿಗೆ ಲುಪ್ತವಾಗಿ ಹೋಗಿತ್ತೆಂದರೆ ನಾರದೀಯ ಭಕ್ತಿ ಎಂದರೆ ಏನೆಂಬುದನ್ನು ನೂರರಲ್ಲಿ ಒಬ್ಬರಿಗಾದರೂ ಅರ್ಥವಾಗುವುದು ಸಂದೇಹ. ಅದರಲ್ಲಿಯೂ ಕೂಡ ಭಗವತ್ ಪ್ರೇಮಕ್ಕಾಗಿ ಸರ್ವಸ್ವ ವನ್ನೂ ತ್ಯಾಗ ಮಾಡಬೇಕೆಂದು ಹೇಳಿದೆ. ಇದು ಜನಸಾಮಾನ್ಯರಿಗೆ ಅರ್ಥವಾಗುತ್ತಿರಲಿಲ್ಲ. ಶ್ರೀರಾಮಕೃಷ್ಣರನ್ನೂ ಅರಿಯದ ದುರ್ಬಲ ಸ್ವಭಾವದ ಭಕ್ತರು ಸಂಸಾರ ಮತ್ತು ಆಧ್ಯಾತ್ಮಿಕತೆ ಎರಡನ್ನೂ ಉಳಿಸಿಕೊಂಡು ಸುಲಭಸಾಧ್ಯವಾದ ಭಾವುಕತೆಯನ್ನು ವೃದ್ಧಿ ಸುವುದೇ ಧಾರ್ಮಿಕತೆಯ ಉನ್ನತಗುರಿ ಎಂದು ಭ್ರಮಿಸಿದುದರಲ್ಲಿ ಆಶ್ಚರ್ಯವೇನಿಲ್ಲ.

5. ಶ್ರೀರಾಮಕೃಷ್ಣರ ಸಂಯಮ ಮತ್ತು ಕಠೋರ ತಪಸ್ಸು ಇವುಗಳೆಲ್ಲ ಮುಗಿದ ಮೇಲೆಯೆ ನಾವು ಅವರೆಡೆಗೆ ಹೋಗಿದ್ದು. ಅವರ ಅಲೌಕಿಕ ಭಾವುಕತೆಯು ಎಂಥ ಸುದೃಢವಾದ ತಳಹದಿಯ ಮೇಲೆ ನಿಂತಿದೆ ಎಂಬುದನ್ನು ನಾವು ನೋಡಿಲ್ಲ. ಭಕ್ತರು ಮೇಲಿನ ಭ್ರಮೆಗೆ ಒಳಗಾದುದಕ್ಕೆ ಇದೂ ಒಂದು ಕಾರಣ. ಆದರೆ ಇದಕ್ಕೆ ಬಹುಮುಖ್ಯ ಕಾರಣವೇನೆಂದರೆ ಗಿರೀಶ್‌ಚಂದ್ರನು ಶ್ರೀರಾಮಕೃಷ್ಣರನ್ನು ಯುಗಾವತಾರ ಎಂದು ಅತ್ಯುತ್ಸಾಹದಿಂದ ಎಲ್ಲರ ಮುಂದೆ ಸಾರುತ್ತಾ ಹೋದುದು. ಶ್ರೀರಾಮಕೃಷ್ಣರು ಅವ ತಾರ ಪುರುಷರೆಂಬುದು ಹಿಂದೆಯೂ ಅನೇಕರ ಮನಸ್ಸಿನಲ್ಲಿತ್ತು. ಆದರೆ ಶ್ರೀರಾಮ ಕೃಷ್ಣರೇ ಇದನ್ನು ನಿಷೇಧಿಸಿದುದರಿಂದ ಈ ವಿಷಯವನ್ನು ತಮ್ಮ ಹೃದಯದೊಳಗೇ ಬಚ್ಚಿಟ್ಟುಕೊಂಡಿದ್ದರು. ತಮ್ಮ ದೇಹಾವಸಾನಕ್ಕೆ ಮುಂಚೆ ಅನೇಕ ಜನರು ತಮ್ಮನ್ನು ಭಗವದವತಾರವೆಂದು ಪರಿಗಣಿಸುತ್ತಾರೆ ಎಂದು ಶ್ರೀರಾಮಕೃಷ್ಣರು ಯಾವಾಗಲೂ ಹೇಳುತ್ತಿದ್ದರು. ಗಿರೀಶ್‌ಚಂದ್ರನ ಮನಸ್ಸೇ ಬೇರೆ ರೀತಿಯದು. ಅವನು ದುಷ್ಕರ್ಮ ಅಥವಾ ಸತ್ಕರ್ಮ ಏನನ್ನೇ ಮಾಡಿದರೂ ಅದನ್ನು ಬಚ್ಚಿಟ್ಟುಕೊಳ್ಳುವ ಸ್ವಭಾವದವನೇ

ಅಲ್ಲ. ಆದ್ದರಿಂದ ಶ್ರೀರಾಮಕೃಷ್ಣರ ನಿಷೇಧವನ್ನು ಗೌರವಿಸಲಾಗಲಿಲ್ಲ. ಅವನಿಗೆ ಪ್ರಖರವಾದ ಬುದ್ಧಿಶಕ್ತಿ ಇತ್ತು. ಅವನ ಜೀವನ ಎಷ್ಟೋ ಉತ್ತಮ ಮತ್ತು ಅಧಮ ಘಟನಾವಳಿಗಳಿಂದ ಕೂಡಿತ್ತು. ಅವನು ಅತ್ಯಂತ ಭಾವುಕನೂ ದೃಢ ವಿಶ್ವಾಸಿಯೂ ಆಗಿದ್ದನು. ಇವೆಲ್ಲವೂ ಶ್ರೀರಾಮಕೃಷ್ಣರ ದಿವ್ಯಶಕ್ತಿಯನ್ನು ಮನಗಂಡು ಅವರಲ್ಲಿ ತನ್ನನ್ನು ಸಂಪೂರ್ಣ ಸಮರ್ಪಿಸಿಕೊಳ್ಳಲು ಸಹಾಯಕವಾದವು. ಈ ವಿಷಯವನ್ನು ಅವನು ಮರೆತು ತಾನು ಹೇಗೆ ಮಾಡಿದನೊ ಇತರರೆಲ್ಲರೂ ಹಾಗೆಯೆ ಮಾಡಬೇಕೆಂದು ಮುಕ್ತಕಂಠದಿಂದ ಆಹ್ವಾನಿಸತೊಡಗಿದನು. ಇದರ ಪರಿಣಾಮವಾಗಿ ಜನರು ಬಾಯಲ್ಲಿ ವಕಾಲತ್ತನ್ನು ವಹಿಸಿಬಿಟ್ಟಿದ್ದೇವೆ, ಆತ್ಮಸಮರ್ಪಣೆ ಮಾಡಿಬಿಟ್ಟಿದ್ದೇವೆ ಎಂದು ಹೇಳುತ್ತಾ ಸಾಧನೆ, ಭಜನೆ, ತ್ಯಾಗ ತಪಸ್ಸಾದಿಗಳನ್ನು ಕಡೆಗಣಿಸಿದರು. ಆಧ್ಯಾತ್ಮಿಕತೆಯನ್ನು ಪಡೆಯುವುದು ಸುಲಭ ಸಾಧ್ಯವೆಂದು ಭಾವಿಸಿದರು. ಗಿರೀಶ್‌ಚಂದ್ರನಿಗೆ ಶ್ರೀರಾಮಕೃಷ್ಣರ ಮೇಲಿದ್ದ ಅಪಾರ ಪ್ರೀತಿಯು ಅವನು ಈ ರೀತಿ ಪ್ರಚಾರ ಮಾಡದಂತೆ ತಡೆಯಬಹುದಿತ್ತು. ಆದರೆ ಅವನ ಬುದ್ಧಿಶಕ್ತಿಯು ಯುಗ ಯುಗಾಂತರದ ಗ್ಲಾನಿಯನ್ನು ದೂರ ಮಾಡಲು ಹೊಸ ಧರ್ಮಚಕ್ರವನ್ನು ಪ್ರವರ್ತಿಸುವುದಕ್ಕಾಗಿಯೆ ಶ್ರೀರಾಮಕೃಷ್ಣರು ಅವತರಿಸಿರುವರೆಂದು ಅವನಿಗೆ ತಿಳಿಸಿತ್ತು. ತ್ರಿತಾಪಗಳಿಂದ ತಪಿಸುತ್ತಿರುವ ಜೀವಿಗಳಿಗೆ ಆಶ್ರಯ ನೀಡಿ ಅವರ ದುಃಖ ಕಷ್ಟಗಳನ್ನು ತಾವೇ ಸ್ವತಃ ವಹಿಸಿಕೊಳ್ಳುತ್ತಾರೆ ಮತ್ತು ಅವರ ಅಭೀಷ್ಟಕಾರ್ಯ ಸಂಪೂರ್ಣವಾಗುವುದಕ್ಕೆ ಮುಂಚೆ ತಮ್ಮ ದೇಹವನ್ನು ಬಿಡುವುದಿಲ್ಲ ಎಂದು ಅವನು ನಂಬಿದ್ದನು. ಶ್ರೀರಾಮಕೃಷ್ಣರನ್ನು ಆಶ್ರಯಿಸಿದರೆ ಜನರು ತನ್ನಂತೆಯೆ ಶಾಂತಿಯನ್ನೂ ದಿವ್ಯ ಉತ್ಸಾಹವನ್ನೂ ಪಡೆಯುತ್ತಾರೆ ಎಂಬ ನಂಬಿಕೆಯಿಂದ ಅವನು ಎಲ್ಲರನ್ನೂ ಆಹ್ವಾನಿಸತೊಡಗಿದುದರಲ್ಲಿ ತಪ್ಪೇನೂ ಇಲ್ಲ.

6. ಗಿರೀಶ್‌ಚಂದ್ರನ ತೀಕ್ಷ್ಣ ಬುದ್ಧಿ ಮತ್ತು ತರ್ಕದ ಮುಂದೆ ರಾಮಚಂದ್ರನೇ ಮುಂತಾದ ಹಿರಿಯ ಗೃಹಸ್ಥ ಭಕ್ತರು ತಲೆ ಬಾಗಬೇಕಾಯಿತು. ನಾವು ಮೊದಲೇ ತಿಳಿಸಿರುವಂತೆ ರಾಮಚಂದ್ರನು ವೈಷ್ಣವ ವಂಶದಲ್ಲಿ ಜನಿಸಿದವನು. ಆದ್ದರಿಂದ ಶ್ರೀರಾಮಕೃಷ್ಣರಲ್ಲಿ ದಿವ್ಯಶಕ್ತಿಯ ಪ್ರಕಾಶವನ್ನು ಕಂಡು ಅವರನ್ನು ಶ್ರೀಕೃಷ್ಣ ಮತ್ತು ಗೌರಾಂಗ ಎಂದು ಪರಿಗಣಿಸಿದುದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಗಿರೀಶ್‌ಚಂದ್ರನು ಪ್ರಚಾರ ಮಾಡುವುದಕ್ಕೆ ಮುಂಚೆ ಅವನು ಇದನ್ನು ಜನರ ಮುಂದೆ ಪ್ರಕಾಶಪಡಿಸಲು ಹಿಂದೆ ಮುಂದೆ ನೋಡುತ್ತಿದ್ದ. ಗಿರೀಶ್‌ಚಂದ್ರನ ಸಹಾಯ ದೊರೆತ ಮೇಲೆ ಈ ವಿಷಯದಲ್ಲಿ ಅವನ ಉತ್ಸಾಹ ವೃದ್ಧಿಯಾಯಿತು. ಅವನು ಶ್ರೀರಾಮಕೃಷ್ಣರು ಅವತಾರವೆಂದು ಹೇಳುವುದರಷ್ಟರಲ್ಲಿಯೆ ತೃಪ್ತನಾಗಲಿಲ್ಲ. ಅವನು ಇನ್ನೂ ಮುಂದುವರಿದು ಅವರ ಭಕ್ತರಲ್ಲಿ ಯಾರು ಯಾರು ಶ್ರೀಗೌರಾಂಗ ಮತ್ತು ಶ್ರೀಕೃಷ್ಣನ ಸಾಂಗೋಪಾಂಗಿಗಳಾಗಿದ್ದರು ಎಂಬುದರ ಬಗ್ಗೆಯೂ ಮಾತನಾಡತೊಡಗಿದನು. ಭಾವುಕತೆಯ ಆಧಿಕ್ಯದಿಂದ ಯಾರಲ್ಲಾದರೂ ಶಾರೀರಿಕ ವಿಕಾರ ಕಂಡುಬಂದರೆ ಮತ್ತು ಆಗಾಗ ಬಾಹ್ಯಜ್ಞಾನ ಲೋಪವಾದರೆ ಅವರು ಅವನ ಸಿದ್ಧಾಂತದ ಪ್ರಕಾರ ಉಚ್ಚಸ್ಥಾನವನ್ನು ಪಡೆಯುತ್ತಿದ್ದರು.

7. ಭಕ್ತರನೇಕರು ಈ ರೀತಿಯ ಭಾವುಕತೆಯ ಪ್ರವಾಹದಲ್ಲಿ ತೇಲಿ ಹೋಗುತ್ತಿರುವಾಗ ಢಾಕಾದಿಂದ ವಿಜಯಕೃಷ್ಣ ಗೋಸ್ವಾಮಿಯು ಬಂದನು. ಶ್ರೀರಾಮಕೃಷ್ಣರನ್ನು ತಾನು ಅಲ್ಲಿ ಧ್ಯಾನ ಸಮಯದಲ್ಲಿ ಕಂಡ ವಿಷಯವನ್ನು ಎಲ್ಲರ ಮುಂದೆಯೂ ಸಾರಿಬಿಟ್ಟನು. ಶ್ರೀರಾಮಕೃಷ್ಣರನ್ನು ಅವನು ಅಲ್ಲಿ ಭೌತಿಕವಾಗಿ ಕಂಡಿದ್ದನು. ಅವರ ಅಂಗಾಂಗಗಳನ್ನು ಸ್ಪರ್ಶಿಸಿ ನೋಡಿದ್ದನು. ಈ ಸುದ್ದಿಯು ಕಾಡ್ಗಿಚ್ಚಿಗೆ ಗಾಳಿ ಹಾಕಿದಂತಾಯಿತು. ಐದಾರು ಜನ ಭಕ್ತರು ಆಗ ಸಂಕೀರ್ತನೆ ಮತ್ತಿತರ ಸಮಯಗಳಲ್ಲಿ ಬಾಹ್ಯಜ್ಞಾನವನ್ನು ಕಳೆದುಕೊಳ್ಳುತ್ತಿದ್ದರು ಮತ್ತು ಅವರ ದೇಹದಲ್ಲಿಯೂ ವಿಕಾರ ಕಂಡು ಬರುತ್ತಿತ್ತು. ಅವರು ವಿಚಾರ ಮಾರ್ಗವನ್ನು ಕೈ ಬಿಟ್ಟು ಶ್ರೀರಾಮಕೃಷ್ಣರ ದೈವಶಕ್ತಿಯಿಂದ ಅಸಂಭವವೂ ಸಂಭವಿಸಿ ಬಿಡುತ್ತದೆ ಎಂದು ಕತ್ತು ಚಾಚಿಕೊಂಡು ಕುಳಿತಿದ್ದರು.

8. ಹೀಗೆ ಭಾವುಕತೆಯ ವೃದ್ಧಿಯೇ ಧರ್ಮದ ಅತ್ಯುಚ್ಚಾವಸ್ಥೆಯೆಂದು ಭಕ್ತರನೇಕರು ಭಾವಿಸಿಕೊಂಡಿರುವಾಗ ತೀಕ್ಷ್ಣ ಬುದ್ಧಿಯ ನರೇಂದ್ರನಾಥನಿಗೆ ಇದು ಸರಿ ಎನಿಸಲಿಲ್ಲ. ಶ್ರೀರಾಮಕೃಷ್ಣರು ಅವನಿಗೆ ಭಕ್ತರ ನಡುವೆ ಅತ್ಯುಚ್ಚ ಸ್ಥಾನವನ್ನು ನೀಡಿದ್ದರು. ತ್ಯಾಗ, ಸಂಯಮ ಏಕನಿಷ್ಠೆಯ ಭಕ್ತಿ ಇವುಗಳಿಗೆ ಹೋಲಿಸಿದರೆ ಈ ಭಾವುಕತೆಯು ಅತ್ಯಲ್ಪವೆಂದು ಅವನು ಪರಿಗಣಿಸಿದ್ದನು. ಅಷ್ಟೇ ಅಲ್ಲದೆ ಅದನ್ನು ಮುಕ್ತವಾಗಿ ಹರಿಯಬಿಟ್ಟರೆ ಮುಂದೆ ದೊಡ್ಡ ಅಪಾಯವನ್ನು ತಂದೊಡ್ಡಬಹುದು ಎಂಬುದು ಅವನ ಅಭಿಪ್ರಾಯವಾಗಿತ್ತು. ಈ ವಿಷಯವನ್ನು ಅವರೆಲ್ಲರಿಗೂ ವಿವರಿಸಿ ಈ ಪರಿಸ್ಥಿತಿಯಿಂದ ಅವರನ್ನು ರಕ್ಷಿಸಲು ಪ್ರಯತ್ನಿಸಿದನು. ಭಕ್ತರು ಈ ರೀತಿ ತಪ್ಪು ದಾರಿಯನ್ನು ಹಿಡಿಯುತ್ತಿದ್ದುದನ್ನು ತಿಳಿದೂ ಶ್ರೀರಾಮಕೃಷ್ಣರು ಏಕೆ ಇದನ್ನು ಉಪೇಕ್ಷಿಸಿದರು ಎಂಬ ಪ್ರಶ್ನೆ ಏಳುತ್ತದೆ. ಅವರು ನಿಜವಾಗಿಯೂ ಉಪೇಕ್ಷಿಸಲಿಲ್ಲ. ಎಲ್ಲಾ ಕೃತಕತೆಯಿಂದ ದೂರವಾದ ನೈಜ ಭಾವುಕತೆಯು ಭಗವಂತನೆಡೆಗೆ ಒಯ್ಯುತ್ತದೆ ಎಂಬುದನ್ನು ತಿಳಿದಿದ್ದ ಅವರು ಭಕ್ತರನ್ನು ಆ ಹಾದಿಯಲ್ಲಿ ಮಾರ್ಗದರ್ಶನ ನೀಡುವುದಕ್ಕೆ ಅವಕಾಶವನ್ನು ಹುಡುಕುತ್ತಿದ್ದರು. ಇದಕ್ಕೆ ಅಧಿಕಾರಿಯಾದ ಭಕ್ತನು ಯಾವನಿರುವನು ಎಂಬುದನ್ನು ಅರಸುತ್ತಿದ್ದರು. ಏಕೆಂದರೆ ಅವರು ಆಗಾಗ ಹೀಗೆ ಹೇಳುತ್ತಿದ್ದುದನ್ನು ನಾವು ಕೇಳಿರುವೆವು : ನಾವು ಎಷ್ಟೇ ಅಪೇಕ್ಷಿಸಿದರೂ ಕಾಲ ಒದಗಿ ಬರದಿದ್ದರೆ ಏನೂ ಆಗುವುದಿಲ್ಲ. ಯಶಸ್ಸು ಕಾಲವನ್ನು ಅನುಸರಿಸುತ್ತದೆ. ಪ್ರತಿಯೊಂದೂ ಕೂಡ ಯೋಗ್ಯ ಸಮಯವನ್ನು ನಿರೀಕ್ಷಿಸುತ್ತಿರುತ್ತದೆ. ಭಕ್ತರ ಈ ತಪ್ಪು ಗ್ರಹಿಕೆಯ ವಿರುದ್ಧವಾಗಿ ನರೇಂದ್ರನು ಹೋರಾಡುತ್ತಿರುವುದನ್ನು ಅವರು ಅರಿತಿಲ್ಲ ಎಂದು ಹೇಳಲಾಗುವುದಿಲ್ಲ. ಅವನ ಪ್ರಯತ್ನದ ಪ್ರತಿಫಲವನ್ನು ಅವರು ನಿರೀಕ್ಷಿಸುತ್ತಿರಬಹುದು. ಈ ವಿಷಯದಲ್ಲಿ ನರೇಂದ್ರನನ್ನೇ ಉಪಕರಣವನ್ನಾಗಿ ಮಾಡಿಕೊಂಡು ಅವನ ಮೂಲಕ ಈ ತಪ್ಪನ್ನು ಸರಿಪಡಿಸುವುದು ಅವರ ಉದ್ದೇಶವಾಗಿದ್ದಿರಬಹುದು.

9. ದೃಢಕಾಯರೂ ಸ್ಥಿರ ಮನಸ್ಸುಳ್ಳವರೂ ಆದ ಯುವಕ ಭಕ್ತರು ತನ್ನ ಮಾತುಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳುತ್ತಾರೆ ಎಂದು ಭಾವಿಸಿ ತನ್ನ ವಿಚಾರ

ಮತ್ತು ಪಾದಗಳ ಮೂಲಕ ಭಾವುಕತೆಯ ವಿರುದ್ಧ ನರೇಂದ್ರನು ಹೋರಾಡತೊಡಗಿದನು. ಅವನು ಹೇಳಿದನು : "ಕೇವಲ ಭಾವಾತಿರೇಕವು ಮನಸ್ಸಿನಲ್ಲಿ ಶಾಶ್ವತ ಬದಲಾವಣೆಯನ್ನು ಉಂಟುಮಾಡುವುದಿಲ್ಲ. ಅದರ ಪ್ರಭಾವದಿಂದ ಮನುಷ್ಯನು ಒಂದು ಸಮಯದಲ್ಲಿ ಭಗವಂತನಿಗಾಗಿ ಅತ್ಯಂತ ವ್ಯಾಕುಲನಾಗುತ್ತಾನೆ. ಆದರೆ ಮುಂದಿನ ಕ್ಷಣವೇ ಕಾಮಕಾಂಚನಗಳಲ್ಲಿ ಆಸಕ್ತನಾಗುತ್ತಾನೆ. ಇಂಥ ಭಾವುಕತೆಯ ಮೌಲ್ಯ ಅತ್ಯಲ್ಪವಾದುದು. ಅದು ಕೇವಲ ಹೊರನೋಟಕ್ಕೆ ಮಾತ್ರ, ಅದು ಆಳವಾದುದಲ್ಲ. ಅದರ ಪ್ರಭಾವದಿಂದ ಒಬ್ಬನು ಕಣ್ಣೀರು ಸುರಿಸಬಹುದು, ರೋಮಾಂಚನವಾಗಬಹುದು, ಅಥವಾ ಸ್ವಲ್ಪ ಹೊತ್ತಿನ ಮಟ್ಟಿಗೆ ಬಾಹ್ಯ ಜ್ಞಾನವನ್ನು ಆಂಶಿಕವಾಗಿ ಕಳೆದುಕೊಳ್ಳಬಹುದು. ಆದರೂ ಕೂಡ ಇವೆಲ್ಲಕ್ಕೂ ನರದೌರ್ಬಲ್ಯವೇ ಕಾರಣ. ಮಾನಸಿಕ ಶಕ್ತಿಯಿಂದ ಇದನ್ನು ನಿಗ್ರಹಿಸಲು ಸಾಧ್ಯವಾಗದಿದ್ದರೆ ವ್ಯಕ್ತಿಯು ಪೌಷ್ಟಿಕ ಆಹಾರವನ್ನು ಸ್ವೀಕರಿಸಬೇಕು ಮತ್ತು ವೈದ್ಯನ ಸಹಾಯವನ್ನು ಪಡೆಯಬೇಕು."

10. ನರೇಂದ್ರನು ಇನ್ನೂ ಹೇಳುತ್ತಾನೆ : "ಈ ರೀತಿಯ ಶಾರೀರಿಕ ವಿಕಾರ ಮತ್ತು ಬಾಹ್ಯ ಪ್ರಜ್ಞೆಯನ್ನು ಕಳೆದುಕೊಳ್ಳುವುದರ ಹಿಂದೆ ಎಷ್ಟೋ ಕೃತ್ರಿಮತೆ ಇದೆ. ನಮ್ಮ ಸಂಯಮವು ದೃಢವಾದಂತೆಲ್ಲ ಮಾನಸಿಕ ಭಾವವು ಆಳವಾಗುತ್ತಾ ಹೋಗುತ್ತದೆ. ಎಲ್ಲೋ ಕೆಲವೇ ವ್ಯಕ್ತಿಗಳ ಜೀವನದಲ್ಲಿ ಆಧ್ಯಾತ್ಮಿಕ ಭಾವರಾಶಿಯು ಪ್ರಬಲ ತರಂಗವಾಗಿ ಈ ರೀತಿಯ ಸಂಯಮದ ಕಟ್ಟೆಯನ್ನು ಒಡೆದುಬಿಡುತ್ತದೆ. ಆಗ ದೈಹಿಕ ವಿಕಾರಗಳು ಬಾಹ್ಯಜ್ಞಾನ ಶೂನ್ಯತೆ ಇವೆಲ್ಲ ಕಾಣಿಸಿಕೊಳ್ಳುತ್ತವೆ. ತಿಳಿವಳಿಕೆ ಇಲ್ಲದ ಜನರು ಇದನ್ನು ಅರ್ಥಮಾಡಿಕೊಳ್ಳದೆ ಇದಕ್ಕೆ ವಿರುದ್ಧಾರ್ಥವನ್ನು ಕಲ್ಪಿಸುತ್ತಾರೆ. ಶಾರೀರಿಕ ವಿಕೃತಿ ಮತ್ತು ಸಂಯಮ ಶೂನ್ಯತೆಯ ಫಲವಾಗಿಯೇ ಭಾವವು ಗಂಭೀರವಾಗುತ್ತದೆ ಎಂದು ಅವರು ಭಾವಿಸುತ್ತಾರೆ. ಅದಕ್ಕಾಗಿಯೆ ಇವುಗಳಿಗಾಗಿ ಅವರು ಇಚ್ಛಾ ಪೂರ್ವಕವಾಗಿ ಪ್ರಯತ್ನಪಡುತ್ತಾರೆ. ಹೀಗೆ ಇಚ್ಛಾಪೂರ್ವಕವಾಗಿ ಮಾಡಿದ ಪ್ರಯತ್ನ ಕ್ರಮೇಣ ಅಭ್ಯಾಸವಾಗಿಬಿಡುತ್ತದೆ. ಅವರ ನರವು ದಿನದಿನವೂ ದುರ್ಬಲವಾಗುತ್ತಾ ಹೋಗಿ ಸ್ವಲ್ಪ ಭಾವಾವೇಶ ಉಂಟಾದರೂ ಅವರಲ್ಲಿ ಆ ಎಲ್ಲ ವಿಕಾರಗಳೂ ಕಾಣಿಸಿಕೊಳ್ಳುತ್ತವೆ. ಇದರ ಪರಿಣಾಮವಾಗಿ ಅವರು ಹುಚ್ಚರಾಗುತ್ತಾರೆ. ಇಲ್ಲವೇ ಯಾವುದಾದರೂ ಚಿರವ್ಯಾಧಿಗೆ ತುತ್ತಾಗುತ್ತಾರೆ. ಆಧ್ಯಾತ್ಮಿಕ ಮಾರ್ಗವನ್ನು ಹಿಡಿದವರಲ್ಲಿ ಶೇಕಡಾ ಎಂಭತ್ತು ಜನರು ಕಪಟಿಗಳಾಗುತ್ತಾರೆ, ಹದಿನೈದು ಜನರು ಹುಚ್ಚರಾಗುತ್ತಾರೆ. ಉಳಿದ ಐವರು ಮಾತ್ರ ಅನಂತ ಸತ್ಯದ ಪ್ರತ್ಯಕ್ಷ ಜ್ಞಾನವನ್ನು ಪಡೆದು ಧನ್ಯರಾಗುತ್ತಾರೆ. ಆದ್ದರಿಂದ ಎಚ್ಚರಿಕೆಯಿಂದಿರಿ."

11. ನರೇಂದ್ರನ ಈ ಮಾತುಗಳು ನಮಗೆ ಮೊದಲು ಸತ್ಯವೆನಿಸಲಿಲ್ಲ. ಆದರೆ ಮುಂದೆ ಸ್ವಲ್ಪ ಸಮಯದಲ್ಲಿಯೆ ಅವನ್ನು ಸತ್ಯವೆಂದು ಸ್ವೀಕರಿಸುವ ಸಂದರ್ಭ ಒದಗಿಬಂತು. ಒಬ್ಬ ಭಕ್ತನು ಭಾವೋದ್ದೀಪಕ ಹಾಡುಗಳನ್ನು ಹಾಡುತ್ತ ಒಬ್ಬನೇ ಕುಳಿತಿದ್ದನು. ಪ್ರಯತ್ನ ಪೂರ್ವಕವಾಗಿ ದೈಹಿಕ ವಿಕಾರಗಳನ್ನು ಉಂಟು ಮಾಡಲು ಅವನು

ಪ್ರಯತ್ನಿಸಿದನು. ಭಾವಾವೇಶದಲ್ಲಿ ಬಾಹ್ಯಜ್ಞಾನವನ್ನು ಆಂಶಿಕವಾಗಿ ಕಳೆದುಕೊಂಡು ಒಬ್ಬ ಭಕ್ತನು ಸುಂದರವಾಗಿ ನೃತ್ಯ ಮಾಡುತ್ತಿದ್ದನು. ಅವನು ಅದನ್ನು ಮೊದಲೇ ಅಭ್ಯಾಸ ಮಾಡಿದ್ದನಂತೆ. ಇನ್ನೊಬ್ಬ ಭಕ್ತನು ಇದನ್ನು ನೋಡಿಕೊಂಡು ಭಾವಾವಿಷ್ಟ ನಾಗಿ ಅದೇ ರೀತಿ ನೃತ್ಯ ಮಾಡಲು ತೊಡಗಿದ. ಇವೆಲ್ಲವನ್ನೂ ನೋಡಿದ ಮೇಲೆ ನರೇಂದ್ರನ ಮಾತಿನಲ್ಲಿ ನಮಗೆ ನಂಬಿಕೆ ಉಂಟಾಗತೊಡಗಿತು. ಒಬ್ಬ ಭಕ್ತನು ತೀವ್ರ ಭಾವಾವೇಶಕ್ಕೆ ಒಳಗಾಗುತ್ತಿದ್ದುದನ್ನು ನೋಡಿ ನರೇಂದ್ರನು ಅವನನ್ನು ಕರೆದು ಭಾವ ವನ್ನು ನಿಗ್ರಹಿಸುವುದನ್ನು ಅಭ್ಯಾಸ ಮಾಡಬೇಕೆಂದೂ, ಪೌಷ್ಟಿಕ ಆಹಾರವನ್ನು ಸ್ವೀಕರಿಸ ಬೇಕೆಂದೂ ಸಲಹೆ ಇತ್ತನು. ಅವನು ಹದಿನೈದು ದಿವಸ ಹಾಗೆ ಮಾಡಿದ ಮೇಲೆ ಎಷ್ಟೋ ಆರೋಗ್ಯವಂತನೂ ಸಂಯಮಶೀಲನೂ ಆದನು. ಹೀಗೆ ಅನೇಕರು ನರೇಂದ್ರನ ಮಾತಿ ನಲ್ಲಿ ವಿಶ್ವಾಸವಿರಿಸತೊಡಗಿದರು. ಭಾವಾವೇಶದಲ್ಲಿ ಶಾರೀರಿಕ ವಿಕೃತಿ, ಬಾಹ್ಯಜ್ಞಾನ ಲೋಪಗಳು ಆಗದಿದ್ದರೆ ತಮ್ಮನ್ನು ತಾವು ದೌರ್ಭಾಗ್ಯರೆಂದು ಪರಿಗಣಿಸುತ್ತಿರಲಿಲ್ಲ.

12, ಯುಕ್ತಿ ತರ್ಕಗಳ ಸಹಾಯದಿಂದ ಈ ವಿಷಯವನ್ನು ಪ್ರಚಾರ ಮಾಡುವು ದರಷ್ಟರಲ್ಲಿಯೆ ನರೇಂದ್ರನು ಸುಮ್ಮನಾಗಲಿಲ್ಲ. ಯಾರಾದರೂ ಕೃತ್ರಿಮ ಭಾವುಕತೆಯನ್ನು ತೋರಿಸಿದರೆ ಅವರನ್ನು ಎಲ್ಲರ ಮುಂದೆ ಗೇಲಿ ಮಾಡಿ ಅವರ ಮುಖಭಂಗ ಮಾಡುತ್ತಿ ದ್ದನು. ವೈಷ್ಣವ ಸಂಪ್ರದಾಯದಲ್ಲಿ ಪುರುಷರು ಸ್ತ್ರೀಯರಿಗೆ ಉಚಿತವಾದ ಭಾವಗಳನ್ನು ಅನುಕರಿಸುವ ಸಾಧನೆ ಇದೆ. ಅದು ಕೆಲವೊಮ್ಮೆ ಹಾಸ್ಯಾಸ್ಪದ ರೂಪವನ್ನು ತಾಳುತ್ತಿತ್ತು. ನರೇಂದ್ರನು ಈ ವಿಷಯವನ್ನು ತೆಗೆದುಕೊಂಡು ಭಕ್ತರ ಮುಂದೆ ಅದನ್ನೆಲ್ಲ ಗೇಲಿ ಮಾಡುತ್ತಿದ್ದನು. ಭಕ್ತರಲ್ಲಿ ಆ ರೀತಿಯ ಭಾವಗಳನ್ನು ಅಭ್ಯಾಸಮಾಡುವರನ್ನು ಇವನು ಸಖೀಭಾವದವರು ಎಂದು ಹೇಳಿ ಪರಿಹಾಸ್ಯ ಮಾಡುತ್ತಿದ್ದನು. ಆಧ್ಯಾತ್ಮಿಕ ಸಾಧನೆ ಯನ್ನು ಕೈಕೊಂಡ ವ್ಯಕ್ತಿಯು ತನ್ನ ಪುರುಷಕಾರವನ್ನು ತತ್ವಾನುಸಂಧಾನವನ್ನು ಓಜಸ್ವಿತೆ ಯನ್ನು ಬದಿಗಿರಿಸಿ ಒಂದು ಸಂಕುಚಿತ ಮನೋಭಾವವನ್ನು ತಾಳಿ ಸ್ತ್ರೀಯರಿಗೆ ಉಚಿತ ವಾದ ಭಾವಾನುಕರಣೆ ಮಾಡುವುದು, ವೈಷ್ಣವ ಗೀತೆಗಳನ್ನು ಹಾಡುವುದು, ರೋದಿಸು ವುದು, ಇತ್ಯಾದಿಗಳು ಪುರುಷಸಿಂಹನಾದ ನರೇಂದ್ರನಿಗೆ ಸರಿಹೋಗುತ್ತಿರಲಿಲ್ಲ. ಅದಕ್ಕಾ ಗಿಯೆ ಪುರುಷಭಾವವನ್ನು ಆಶ್ರಯಿಸಿ ಜ್ಞಾನಮಿಶ್ರ ಭಕ್ತಿಯನ್ನು ಅಳವಡಿಸಿಕೊಂಡಿರುವ ಭಕ್ತರನ್ನು ಅವನು ಶಿವನ ಭೂತಗಣಗಳೆಂದು, ಇದಕ್ಕೆ ವಿರುದ್ಧ ಸ್ವಭಾವದವರನ್ನು ಸಖೀ ಭಕ್ತರೆಂದು ಅವನು ಹಾಸ್ಯಕ್ಕಾಗಿ ಕರೆಯುತ್ತಿದ್ದನು.

13. ಹೀಗೆ ನರೇಂದ್ರನಾಥನು ಯುಕ್ತಿಯ ಮೂಲಕ ಮತ್ತು ವ್ಯಂಗ್ಯ ಪರಿಹಾಸ್ಯ ಗಳ ಮೂಲಕ ಭಾವುಕತೆಯನ್ನು ಖಂಡಿಸುತ್ತಿದ್ದನು. ಅವನು ಇಷ್ಟರಿಂದಲೇ ಸುಮ್ಮನಾಗ ಲಿಲ್ಲ. ಯಾರಾದರೂ ಭಕ್ತರ ಭಾವವನ್ನು ಭಂಗಮಾಡಿದ ಮೇಲೆ ಆ ಸ್ಥಳದಲ್ಲಿ ಅವರಿಗೆ ಆಶ್ರಯ ಸ್ವರೂಪವಾದ ಇನ್ನೊಂದು ಭಾವವನ್ನು ಪ್ರತಿಷ್ಠಿತಗೊಳಿಸದಿದ್ದರೆ ತನ್ನ ಕಾರ್ಯವು ಸಫಲವಾಗುವುದಿಲ್ಲ ಎಂಬುದು ಅವನಿಗೆ ತಿಳಿದಿತ್ತು. ಆದ್ದರಿಂದ ಅವನು ಈ ವಿಷಯದಲ್ಲಿ ಈಗ ಹೆಚ್ಚು ಕಾರ್ಯೋನ್ಮುಖನಾದನು. ಸಮಯಾವಕಾಶ ದೊರೆತಾಗ

ಲ್ಲೆಲ್ಲ ಯುವಕ ಭಕ್ತರನ್ನೆಲ್ಲ ಒಂದುಗೂಡಿಸಿ ತ್ಯಾಗ ವೈರಾಗ್ಯ ಭಗವದ್ಭಕ್ತಿಗಳ ಬಗ್ಗೆ ಸ್ಫೂರ್ತಿಯುಕ್ತವಾಗಿ ಮಾತನಾಡುತ್ತಿದ್ದನು ಮತ್ತು ಅವರೊಡನೆ ಇದಕ್ಕೆ ಸಂಬಂಧ ಪಟ್ಟ ಹಾಡುಗಳನ್ನು ಹಾಡುತ್ತಿದ್ದನು. ಹೀಗೆ ತ್ಯಾಗ, ವೈರಾಗ್ಯ ಮತ್ತು ಭಕ್ತಿ ಅವರಲ್ಲಿ ಯಾವಾಗಲೂ ಪ್ರಜ್ವಲಿಸುವಂತೆ ಮಾಡುತ್ತಿದ್ದನು. ಶ್ರೀರಾಮಕೃಷ್ಣರನ್ನು ನೋಡಲು ಬಂದವರನೇಕರು ನರೇಂದ್ರನ ಹಾಡುಗಳನ್ನು ಕೇಳಿ ವೈರಾಗ್ಯ ಭಕ್ತಿಯಿಂದ ತುಂಬಿದವ ರಾಗಿ ಕಣ್ಣೀರು ಸುರಿಸುತ್ತಾ ಹಿಂದಿರುಗುತ್ತಿದ್ದರು. ಇವು ಅವನು ಹಾಡುತ್ತಿದ್ದ ಕೆಲವು ಹಾಡುಗಳು :

"ಓ ಹೃದಯವೆ, ಜಗದ ಸೊಬಗು ಪ್ರಿಯವೆ, ಹೇಳು,
ಕೊನೆಗೆ ಎಲ್ಲ ಮಣ್ಣುಪಾಲು !"

"ನಿನ್ನ ನಾಮಗಾನದಿಂದ ನನ್ನ ಬಾಳು ಮಧುಮಯ,
ಅಮೃತಸಿಂಧು ನಿನ್ನ ನಾಮ ಪರಮಾನಂದ ಚಿನ್ಮಯ."

"ಮನೋಬುಧ್ಯಹಂಕಾರಚಿತ್ತಾನಿ ನಾಹಂ
ನ ಚ ಶ್ರೋತ್ರಜಿಹ್ವೇ ನ ಚ ಘ್ರಾಣನೇತ್ರೇ ।
ನ ಚ ವ್ಯೋಮಭೂಮಿರ್ನ ತೇಜೋ ನ ವಾಯು-
ಶ್ಚಿದಾನಂದರೂಪಃ ಶಿವೋऽಹಂ ಶಿವೋऽಹಮ್ ॥

14. ಮತ್ತೆ ಅವನು ಶ್ರೀರಾಮಕೃಷ್ಣರ ಜೀವನಕ್ಕೆ ಸಂಬಂಧಪಟ್ಟ ಕಥೆಗಳನ್ನು ಹೇಳುತ್ತಿದ್ದನು. ಗಭೀರ ಭಗವದ್ಭಕ್ತಿಯಿಂದ ಅವರು ಮಾಡಿದ ಸಾಧನೆಗಳನ್ನು ಕುರಿತು ಹೇಳುತ್ತಿದ್ದನು. ಶಿಷ್ಯರೆಲ್ಲ ಆಶ್ಚರ್ಯ ಚಕಿತರಾಗುವ ರೀತಿಯಲ್ಲಿ ಶ್ರೀರಾಮಕೃಷ್ಣರ ಶ್ರೇಷ್ಠತೆಯನ್ನು ವಿವರಿಸುತ್ತಿದ್ದನು . . . ಮತ್ತೆ ಕೆಲವೊಮ್ಮೆ 'ಈಶಾನುಸರಣ' ಪುಸ್ತಕ ದಿಂದ ಹೇಳಿಕೆಗಳನ್ನು ಉದ್ಧರಿಸುತ್ತ ಹೀಗೆ ಹೇಳುತ್ತಿದ್ದನು : "ಯಾರು ಪ್ರಭುವನ್ನು ಯಥಾರ್ಥ ರೀತಿಯಲ್ಲಿ ಪ್ರೀತಿಸುವರೊ ಅವರ ಜೀವನವು ಎಲ್ಲ ರೀತಿಯಲ್ಲಿಯೂ ಪ್ರಭು ವಿನ ಜೀವನದಂತೆಯೆ ಮಾರ್ಪಡುವುದು. ಆದ್ದರಿಂದ ನಾವು ಶ್ರೀರಾಮಕೃಷ್ಣರನ್ನು ನಿಜ ವಾಗಿ ಪ್ರೀತಿಸುತ್ತೇವೆಯೆ ಎಂಬುದಕ್ಕೆ ಇದೇ ಪ್ರಮಾಣ." 'ಅದ್ವೈತ ಜ್ಞಾನವನ್ನು ಬಟ್ಟೆಯ ಅಂಚಿನಲ್ಲಿ ಕಟ್ಟಿ ನಿನಗಿಷ್ಟ ಬಂದಂತೆ ಮಾಡು' ಎಂಬ ಶ್ರೀರಾಮಕೃಷ್ಣರ ಮಾತನ್ನು ಭಕ್ತರಿಗೆ ನೆನಪಿಸಿಕೊಟ್ಟು ಹೀಗೆ ಹೇಳುತ್ತಿದ್ದನು : "ಶ್ರೀರಾಮಕೃಷ್ಣರ ಎಲ್ಲ ರೀತಿಯ ಭಾವುಕತೆಗೂ ಈ ಜ್ಞಾನವೇ ತಳಹದಿಯಾಗಿದೆ. ಆದ್ದರಿಂದ ಈ ಜ್ಞಾನವನ್ನು ಮೊದಲು ಪಡೆಯುವುದಕ್ಕೆ ಪ್ರಯತ್ನ ಮಾಡಬೇಕು."

15. ಹೊಸ ತತ್ತ್ವಗಳನ್ನು ಪರೀಕ್ಷೆ ಮಾಡಿ ಸ್ವೀಕರಿಸಬೇಕೆಂದು ಭಕ್ತರಿಗೆ ಅವನು ಪ್ರೋತ್ಸಾಹಿಸುತ್ತಿದ್ದನು. ಧ್ಯಾನ ಮತ್ತು ಏಕಾಗ್ರತೆಯ ಸಹಾಯದಿಂದ ತನ್ನ ಮತ್ತು ಇತರರ ಶಾರೀರಿಕ ರೋಗವನ್ನು ದೂರ ಮಾಡಲು ಸಾಧ್ಯ ಎಂಬ ಮಾತನ್ನು ಅವನು ಕೇಳಿದ್ದನು. ಒಂದು ದಿನ ನಮ್ಮನ್ನೆಲ್ಲ ಒಂದು ಕೊಠಡಿಯಲ್ಲಿ ಒಂದುಗೂಡಿಸಿ ಶ್ರೀರಾಮ

ಕೃಷ್ಣರ ರೋಗವನ್ನು ಗುಣಪಡಿಸುವ ಸಲುವಾಗಿ ಮನಸ್ಸನ್ನು ಏಕಾಗ್ರಗೊಳಿಸಲು ಹೇಳಿದನು. ವಿಚಾರಹೀನ ಕ್ರಿಯೆಗಳನ್ನೆಲ್ಲ ಬಿಡಬೇಕೆಂದು ಅವನು ಹುರಿದುಂಬಿಸುತ್ತಿದ್ದನು. ಇದಕ್ಕೆ ದೃಷ್ಟಾಂತವಾಗಿ ಒಂದು ಘಟನೆಯನ್ನು ಇಲ್ಲಿ ಹೇಳಬಹುದು.

16. ಮಹಿಕೊಳದ ದಕ್ಷಿಣಭಾಗವು ಕಾಶೀಪುರ್ ರಸ್ತೆಗೆ ತಾಕಿಕೊಂಡಿದೆ. ಅದರ ವಿರುದ್ಧ ದಿಕ್ಕಿನಲ್ಲಿ ಮಹಿಮಾಚರಣ್ ಚಕ್ರವರ್ತಿಯ ಮನೆ ಇದೆ. ಅವನಲ್ಲಿ ತುಂಬಾ ಸದ್ಗುಣಗಳಿದ್ದುವು. ಆದರೆ ನೈಜಸ್ಥಿತಿಗಿಂತ ತಾನು ಹೆಚ್ಚು ಶ್ರೇಷ್ಠನೆಂದು ತೋರಿಸಿಕೊಳ್ಳಲು ಬಯಸುತ್ತಿದ್ದ. ತನಗೆ ಗೌರವ, ಮಾನ್ಯತೆ ಸಿಕ್ಕುವಂತಿದ್ದರೆ ಸುಳ್ಳು ಹೇಳುವುದಕ್ಕೂ ಹಿಂಜರಿಯುತ್ತಿರಲಿಲ್ಲ. ಜನರು ತನ್ನನ್ನು ಶ್ರೀಮಂತನೆಂದೂ, ವಿದ್ಯಾವಂತನೆಂದೂ ಬುದ್ಧಿವಂತನೆಂದೂ, ಧಾರ್ಮಿಕನೆಂದೂ, ಉದಾರಿಯೆಂದೂ ಮತ್ತು ಎಲ್ಲಾ ಸದ್ಗುಣಗಳಿಂದ ಕೂಡಿದವನೆಂದೂ ಪರಿಗಣಿಸಬೇಕು ಎಂಬ ಕಾತರತೆ ಅವನ ಜೀವನದ ಎಲ್ಲಾ ಕ್ರಿಯೆಗಳನ್ನೂ ನಿಯಂತ್ರಿಸುತ್ತಿತ್ತು ಮತ್ತು ಕೆಲವೊಮ್ಮೆ ನಗೆಪಾಟಲಾಗುತ್ತಿದ್ದ. ಮಹಿಮಾಚರಣನು ಒಮ್ಮೆ ಉಚಿತ ಶಾಲೆಯನ್ನು ಪ್ರಾರಂಭಿಸಿ 'ಪ್ರಾಚ್ಯ ಆರ್ಯ ಶಿಕ್ಷಾಕಾಂಡ ಪರಿಷತ್' ಎಂದು ಹೆಸರಿಟ್ಟಿದ್ದ. ಅವನ ಏಕಮಾತ್ರ ಪುತ್ರನ ಹೆಸರು 'ಮೃಗಾಂಕ ಮೌಲಿ ಪೂತತುಂಡಿ.' ಅವನು ಒಂದು ಜಿಂಕೆಯನ್ನು ಸಾಕಿದ್ದ. ಅದರ ಹೆಸರು 'ಕಪಿಂಜಲ' ಎಂದು. ಏಕೆಂದರೆ ಸರಳವಾದ ಹೆಸರುಗಳನ್ನು ಇಡುವುದು ತನ್ನಂತಹ ಪಂಡಿತನಿಗೆ ಶೋಭಿಸದು. ಅವನ ಹತ್ತಿರ ಇಂಗ್ಲಿಷ್, ಸಂಸ್ಕೃತ ಭಾಷೆಗಳ ಅನೇಕ ಗ್ರಂಥಗಳಿದ್ದುವು. ಮಾತಂಕತೆಯಾದ ನಂತರ ಒಂದುದಿನ ನಾವು ನರೇಂದ್ರನಾಥನೊಡನೆ ಅವನ ಮನೆಗೆ ಹೋಗಿದ್ದೆವು. ಆಗ ನಾವು ಅವನನ್ನು 'ಚಕ್ರವರ್ತಿ ಮಹಾಶಯರೆ, ತಾವು ಇಷ್ಟೆಲ್ಲ ಗ್ರಂಥಗಳನ್ನು ಓದಿರುವಿರಾ' ಎಂದು ವಿಚಾರಿಸಿದಾಗ ಅವನು ವಿನಯಪೂರ್ವಕವಾಗಿ ಹೌದೆಂದು ಉತ್ತರಿಸಿದ. ಆದರೆ ನರೇಂದ್ರನು ಕೆಲವು ಗ್ರಂಥಗಳನ್ನು ಹೊರತೆಗೆದು ನೋಡುತ್ತಾನೆ, ಅವುಗಳ ಪುಟಗಳೂ ಕತ್ತರಿಸಿರಲಿಲ್ಲ. ಇದರ ಬಗ್ಗೆ ನಾವು ಅವನನ್ನು ವಿಚಾರಿಸಿದಾಗ ಅವನು ಹೇಳಿದ : "ಏನು ಮಾಡುವುದಪ್ಪ, ಜನ ಪುಸ್ತಕವನ್ನು ಓದುವುದಕ್ಕೆ ತೆಗೆದುಕೊಂಡು ಹೋದವರು ವಾಪಸ್ ತಂದುಕೊಡುವುದೇ ಇಲ್ಲ. ಅದರ ಸ್ಥಳದಲ್ಲಿ ಈ ಹೊಸ ಪುಸ್ತಕಗಳನ್ನು ಕೊಂಡುಕೊಳ್ಳುತ್ತೇನೆ. ಈಗ ನಾನು ಯಾರಿಗೂ ಪುಸ್ತಕಗಳನ್ನು ಕೊಡುವುದಿಲ್ಲ." ಆದರೆ ಚಕ್ರವರ್ತಿಯ ಹತ್ತಿರ ಇದ್ದ ಎಲ್ಲಾ ಪುಸ್ತಕಗಳ ಹಾಳೆಯೂ ಕತ್ತರಿಸಿರಲಿಲ್ಲವೆಂಬುದನ್ನು ನರೇಂದ್ರನು ಸ್ವಲ್ಪ ದಿನಗಳಲ್ಲಿಯೆ ಕಂಡುಹಿಡಿದನು. ಈ ಎಲ್ಲ ಪುಸ್ತಕಗಳನ್ನು ಅವನು ಲೋಕಮಾನ್ಯತೆಗಾಗಿ ಮತ್ತು ಮನೆಯ ಶೋಭೆಗಾಗಿ ಇಟ್ಟುಕೊಂಡಿದ್ದನು ಎಂದು ನರೇಂದ್ರನಿಗೆ ದೃಢವಾಯಿತು.

17. ಮಹಿಮಾಚರಣನು ತನ್ನನ್ನು ಜ್ಞಾನಮಾರ್ಗದ ಸಾಧಕ ಎಂದು ನಮಗೆ ಪರಿಚಯ ನೀಡಿದ್ದನು. ಕಲ್ಕತ್ತೆಯ ಭಕ್ತರು ಶ್ರೀರಾಮಕೃಷ್ಣರ ಹತ್ತಿರ ಹೋಗುವುದಕ್ಕೆ ಬಹಳವರ್ಷ ಹಿಂದಿನಿಂದಲೇ ಮಹಿಮಾಚರಣನು ದಕ್ಷಿಣೇಶ್ವರಕ್ಕೆ ಹೋಗಿಬರುತ್ತಿದ್ದನು. ಕೆಲವೊಮ್ಮೆ ವಿಶೇಷ ದಿನಗಳಲ್ಲಿ ಪಂಚವಟಿಯಲ್ಲಿ ವ್ಯಾಘ್ರಾಜಿನವನ್ನು ಹಾಕಿ

ಕೊಂಡು ಕುಳಿತುಕೊಳ್ಳುತ್ತಿದ್ದನು. ಕಾವಿಬಟ್ಟೆ ಉಟ್ಟು, ರುದ್ರಾಕ್ಷಿಮಾಲೆ ತೊಟ್ಟು, ಏಕ ತಂತಿ ವಾದ್ಯವನ್ನು ಹಿಡಿದುಕೊಂಡು ಆಡಂಬರದಿಂದ ಸಾಧನೆಗೆ ಕುಳಿತುಕೊಳ್ಳುತ್ತಿದ್ದ. ಮನೆಗೆ ಹೋಗುವಾಗ ವ್ಯಾಘ್ರಾಸನವನ್ನು ಶ್ರೀರಾಮಕೃಷ್ಣರ ಕೊಠಡಿಯ ಒಂದು ಮೂಲೆ ಯಲ್ಲಿ ನೇತು ಹಾಕಿರುತ್ತಿದ್ದ. ಅವನ ಸ್ವಭಾವವನ್ನು ಅರಿಯಲು ಶ್ರೀರಾಮಕೃಷ್ಣರಿಗೆ ಇಷ್ಟೇ ಸಾಕಾಯಿತು. ಅದು ಯಾರ ಚರ್ಮ ಎಂದು ಕೇಳಿದಾಗ ಶ್ರೀರಾಮಕೃಷ್ಣರು ಹೇಳಿದರು: "ಇದನ್ನು ಮಹಿಮಚರಣನು ಇಟ್ಟಿದ್ದಾನೆ, ಯಾಕೆ ಗೊತ್ತೆ ? ಜನ ನೋಡಿ ದವರು ಅದು ಯಾರದು ಎಂದು ನನ್ನನ್ನು ಕೇಳುತ್ತಾರೆ ಮತ್ತು ನಾನು ಅವನ ಹೆಸರನ್ನು ಸೂಚಿಸಿದಾಗ ಅವನು ಒಬ್ಬ ದೊಡ್ಡ ಸಾಧಕ ಎಂದು ಪರಿಗಣಿಸುತ್ತಾರೆ."

18. ದೀಕ್ಷೆಯ ಸಂಬಂಧವಾಗಿ ಒಂದು ದಿನ ಮಹಿಮನು ಹೇಳಿದ : "ನನ್ನ ಗುರು ದೇವನ ಹೆಸರು 'ಆಗಮಾಚಾರ್ಯ ಡಮರು ವಲ್ಲಭ' ಎಂದು." ಮತ್ತೆ ಕೆಲವೊಮ್ಮೆ ಹೇಳುತ್ತಿದ್ದ : "ಶ್ರೀರಾಮಕೃಷ್ಣರಂತೆ ನಾನೂ ಕೂಡ ಪರಮಹಂಸ ಪರಿವ್ರಾಜಕ ಶ್ರೀಶ್ರೀ ತೋತಾಪುರಿಯಿಂದ ದೀಕ್ಷೆ ಸ್ವೀಕರಿಸಿರುವೆನು. ಪಶ್ಚಿಮ ದೇಶದಲ್ಲಿ ತೀರ್ಥ ಯಾತ್ರೆ ಮಾಡುತ್ತಿರುವಾಗ ಒಂದು ಕಡೆ ನನಗೆ ಅವನ ದರ್ಶನವಾಯಿತು ಮತ್ತು ಅವನಿಂದ ದೀಕ್ಷೆಯನ್ನು ಸ್ವೀಕರಿಸಿದೆ. ಶ್ರೀರಾಮಕೃಷ್ಣರಿಗೆ ಅವನು ಭಕ್ತಿಯನ್ನು ಅವ ಲಂಬಿಸಿಕೊಂಡಿರಲು ಹೇಳಿದ ಮತ್ತು ನನಗೆ ಜ್ಞಾನಮಾರ್ಗದ ಸಾಧಕನಾಗಿದ್ದು ಸಂಸಾರ ದಲ್ಲಿರಬೇಕೆಂದು ಉಪದೇಶಿಸಿದ." ಇದು ಎಷ್ಟು ಸತ್ಯ ಎಂಬುದು ಅವನಿಗೆ ಮತ್ತು ದೇವರಿಗೆ ಮಾತ್ರವೇ ಗೊತ್ತು.

19. ಯಾವಾಗಲೆಂದರೆ ಆವಾಗ ಮತ್ತು ಎಲ್ಲೆಂದರೆ ಅಲ್ಲಿ ಏಕತಂತಿ ವಾದ್ಯವನ್ನು ಬಾರಿಸುತ್ತಾ ಪ್ರಣವೋಚ್ಚಾರಣೆ ಮಾಡುವುದು ಮಹಿಮಚರಣನ ಒಂದು ಸಾಧನೆಯ ಅಂಗವಾಗಿತ್ತು. ಮಧ್ಯೆ ಮಧ್ಯೆ ಉತ್ತರ ಗೀತೆ ಮುಂತಾದ ಪುಸ್ತಕದ ಒಂದು ಅಥವಾ ಅರ್ಧ ಶ್ಲೋಕಗಳನ್ನು ಉಚ್ಚರಿಸುತ್ತಿದ್ದನು ಮತ್ತು 'ಹೂಂ'ಕಾರ ಧ್ವನಿ ಮಾಡುತ್ತಿ ದ್ದನು. ಇದೇ ಸನಾತನ ಜ್ಞಾನ ಮಾರ್ಗದ ಸಾಧನೆ, ಇದನ್ನು ಮಾಡಿದರೆ ಬೇರೇನೂ ಮಾಡಬೇಕಾದ ಆವಶ್ಯಕತೆ ಇಲ್ಲ, ಇದರಿಂದಲೆ ಕುಲಕುಂಡಲಿನಿಯು ಜಾಗ್ರತವಾಗಿ ಭಗವ ದ್ದರ್ಶನವಾಗುತ್ತದೆ ಎಂದು ಹೇಳುತ್ತಿದ್ದನು. ಮಹಿಮಚರಣನ ಮನೆಯಲ್ಲಿ ಶ್ರೀ ಅನ್ನಪೂರ್ಣೆಯ ಮೂರ್ತಿಯು ಪ್ರತಿಷ್ಠಾಪಿಸಲ್ಪಟ್ಟಿತ್ತು. ಪ್ರತಿವರ್ಷವೂ ಅವನ ಮನೆಯಲ್ಲಿ ಶ್ರೀ ಜಗದ್ಧಾತ್ರೀ ಪೂಜೆಯು ನಡೆಯುತ್ತಿತ್ತು. ಇದರಿಂದ ಅವನು ಶಾಕ್ತ ವಂಶದಲ್ಲಿ ಜನಿಸಿದವನೆಂದು ತಿಳಿಯುತ್ತದೆ. ಜೀವನದ ಅಂತ್ಯಕಾಲದಲ್ಲಿ ಅವನು ಶಕ್ತಿ ಸಾಧನೆಗಳನ್ನೇ ಮಾಡುತ್ತಿದ್ದನೆಂದು ಅನಿಸುತ್ತದೆ. ಏಕೆಂದರೆ ಅವನು ಚಿಕ್ಕ 'ಬಗಿ' ಗಾಡಿಯಲ್ಲಿ ಹೋಗುತ್ತಿದ್ದಾಗ ಮಧ್ಯೆ ಮಧ್ಯೆ "ತಾರಾ, ನೀನು ಅದೇ, ನೀನು ಅದೆ" ಎಂದು ಗಟ್ಟಿಯಾಗಿ ಕೂಗುತ್ತಿದ್ದನಂತೆ. ಮಹಿಮ ಚಕ್ರವರ್ತಿಗೆ ಸ್ವಲ್ಪ ಜಮೀನು ಇತ್ತು. ಅದರ ಉತ್ಪತ್ತಿಯಿಂದಲೆ ಸಂಸಾರ ನಿರ್ವಹಣೆ ನಡೆಯುತ್ತಿತ್ತು.

20. ಶ್ರೀರಾಮಕೃಷ್ಣರು ಶ್ಯಾಮ್‌ಪುಕುರದಲ್ಲಿರುವಾಗ ಮಹಿಮನು ಎರಡು

ಮೂರು ಬಾರಿ ಅವರನ್ನು ನೋಡಲು ಬಂದಿದ್ದನು. ಆಗ ಶ್ರೀರಾಮಕೃಷ್ಣರೊಡನೆ ಕುಶಲ ಪ್ರಶ್ನೆಗಳೆಲ್ಲ ಆದ ಮೇಲೆ ಎಲ್ಲರಿಗಾಗಿ ಕಾದಿರಿಸಿದ್ದ ಕೊಠಡಿಯಲ್ಲಿ ಬಂದು ಕುಳಿತು ಕೊಳ್ಳುತ್ತಿದ್ದನು. ಏಕತಂತಿ ವಾದ್ಯವನ್ನು ಬಾರಿಸುತ್ತಾ ಮಂತ್ರ ಜಪ ಮಾಡುತ್ತಿದ್ದನು ಮತ್ತು ಆಗಾಗ ಇತರರೊಡನೆ ಧಾರ್ಮಿಕ ವಿಷಯವಾಗಿ ಮಾತನಾಡುತ್ತಿದ್ದನು. ಅವನ ಗೈರಿಕ ವಸನ ತೊಟ್ಟ ದೃಢಕಾಯ ಮತ್ತು ಅವನ ವಾಗ್ವೈಖರಿ ಇವುಗಳಿಂದ ಮುಗ್ಧ ರಾಗಿ ಅನೇಕರು ಅವನಿಗೆ ಆಧ್ಯಾತ್ಮಿಕ ಪ್ರಶ್ನೆಗಳನ್ನು ಹಾಕುತ್ತಿದ್ದರು. ಶ್ರೀರಾಮಕೃಷ್ಣರು ಆಗಾಗ "ನೀನು ಪಂಡಿತ. ಇವರಿಗೆಲ್ಲ ಸ್ವಲ್ಪ ಉಪದೇಶ ಕೊಡು", ಎಂದು ಅವನಿಗೆ ಹೇಳುತ್ತಿದ್ದರು. ಕೆಲವರು ಶಿಷ್ಯರನ್ನು ಮಾಡಿಕೊಂಡು ತಾನು ದೊಡ್ಡ ಧರ್ಮೋಪದೇಶಕ ನೆಂದು ತೋರಿಸಿಕೊಳ್ಳುವುದು ಅವನ ಆಂತರಿಕ ಇಚ್ಛೆಯಾಗಿತ್ತು ಎಂಬುದು ಶ್ರೀರಾಮ ಕೃಷ್ಣರಿಗೆ ಚೆನ್ನಾಗಿ ತಿಳಿದಿತ್ತು.

21. ಒಂದು ದಿನ ಶ್ಯಾಮ್‌ಪುಕುರ್‌ಗೆ ಬಂದವನು ಹೀಗೆ ನಾನಾ ವಿಷಯವಾಗಿ ಮಾತನಾಡುತ್ತಿದ್ದನು. ತಾನು ಅನುಸರಿಸುತ್ತಿರುವ ಸಾಧನೆಯೆ ಶ್ರೇಷ್ಠವಾದುದು ಮತ್ತು ಸಹಜವಾದುದು ಉಳಿದುವೆಲ್ಲ ಹೀನವಾದುವುಗಳು ಎಂದು ಪ್ರತಿಪಾದಿಸತೊಡಗಿ ದನು. ಶ್ರೀರಾಮಕೃಷ್ಣರ ಯುವಕ ಭಕ್ತರೆಲ್ಲರೂ ವಿರೋಧಿಸದೆಯೆ ಅವನ ಮಾತು ಗಳನ್ನು ಕೇಳುತ್ತಿರುವುದು ನರೇಂದ್ರನಾಥನಿಗೆ ಸಹಿಸಲಾಗಲಿಲ್ಲ. ಅವನು ಯುಕ್ತಿಯ ಸಹಾಯದಿಂದ ಮಹಿಮನ ಮಾತುಗಳನ್ನೆಲ್ಲ ಖಂಡಿಸತೊಡಗಿದನು. ಅವನು ಕೇಳಿದನು, "ನಿಮ್ಮಂತೆ ಏಕತಂತಿ ವಾದ್ಯ ಬಾರಿಸುತ್ತ ಮಂತ್ರೋಚ್ಚಾರಣೆ ಮಾಡಿದರೆ ಭಗವದ್ದರ್ಶನ ವಾಗುತ್ತದೆ ಎಂಬುದಕ್ಕೆ ಏನು ಪ್ರಮಾಣ ?" ಮಹಿಮನು ಹೇಳಿದ : "ನಾದವೇ ಬ್ರಹ್ಮ. ಈ ಸ್ವರದಿಂದ ಕೂಡಿದ ಮಂತ್ರೋಚ್ಚಾರಣೆಯ ಪ್ರಭಾವದಿಂದ ಭಗವಂತನು ದರ್ಶನ ನೀಯಲೇಬೇಕು. ಬೇರೇನೂ ಮಾಡಬೇಕಾದ ಆವಶ್ಯಕತೆ ಇಲ್ಲ." ನರೇಂದ್ರನು ಹೇಳಿದ : "ಭಗವಂತನು ಹಾಗೆ ಬರೆದುಕೊಟ್ಟಿರುವನೇನು ? ಅಥವಾ ಮಂತ್ರ, ಔಷಧಿಗಳಿಗೆ ವಶ ವಾಗುವ ಸರ್ಪದಂತೇನು ಭಗವಂತ ? 'ಹೂಂ, ಹಾಂ' ಎಂದು ಶಬ್ದ ಮಾಡಿದ ಮಾತ್ರಕ್ಕೆ ಅದಕ್ಕೆ ವಶನಾಗಿ ಅವನು ಓಡಿ ಬಂದುಬಿಡುತ್ತಾನೆ ಅಲ್ಲವೆ !" ನರೇಂದ್ರನ ತರ್ಕದ ಮುಂದೆ ಅಂದು ಮಹಿಮನ ಪ್ರಚಾರಕಾರ್ಯ ಯಶಸ್ವಿಯಾಗಲಿಲ್ಲ. ಅಂದವನು ಬೇಗನೆ ಎದ್ದು ಹೊರಟು ಹೋದ.

22. ಭಿನ್ನ ಭಿನ್ನ ಸಂಪ್ರದಾಯದ ನೈಜ ಸಾಧಕರುಗಳು ಶ್ರೀರಾಮಕೃಷ್ಣ ಭಕ್ತರ ಸನ್ಮಾನಕ್ಕೆ ಒಳಗಾಗಬೇಕೆಂಬುದರ ಕಡೆ ನರೇಂದ್ರನಾಥನ ವಿಶೇಷ ದೃಷ್ಟಿ ಇತ್ತು. ಇತರ ರನ್ನು ನಿಂದಿಸಿ ತಮ್ಮ ಸಂಪ್ರದಾಯವನ್ನೇ ಶ್ರೇಷ್ಠವೆಂದು ಪರಿಗಣಿಸಿದರೆ ಶ್ರೀರಾಮ ಕೃಷ್ಣರ 'ಎಷ್ಟು ಮತವೊ ಅಷ್ಟು ಪಥ' ಎಂಬ ಉದಾತ್ತ ತತ್ತ್ವಕ್ಕೆ ವಿರುದ್ಧವಾಗಿ ಹೋದಂತಾಗುತ್ತದೆ–ಅವರಿಗೆ ಅಶ್ರದ್ಧೆಯನ್ನು ತೋರಿಸಿದಂತಾಗುತ್ತದೆ ಎಂದು ನರೇಂದ್ರನು ಹೇಳುತ್ತಿದ್ದನು. ಶ್ಯಾಮ್‌ಪುಕುರದಲ್ಲಿದ್ದಾಗ ಇದಕ್ಕೆ ಸಂಬಂಧಪಟ್ಟ ಒಂದು ಘಟನೆ ಸಂಭವಿಸಿತು.

23. ಪ್ರಭುದಯಾಳ್ ಮಿಶ್ರ ಎಂಬ ಕ್ರೈಸ್ತಧರ್ಮಿಯು ಒಂದು ದಿನ ಶ್ರೀರಾಮಕೃಷ್ಣರನ್ನು ನೋಡಲು ಬಂದನು. ಅವನು ಕಾವಿಬಟ್ಟೆ ತೊಟ್ಟಿದ್ದರಿಂದ ಕ್ರೈಸ್ತ ನೆಂದು ನಮಗೆ ಮೊದಲು ತಿಳಿಯಲಿಲ್ಲ. ಅನಂತರ ಮಾತಿನ ಸಂದರ್ಭದಲ್ಲಿ ತನ್ನ ನೈಜ ಸ್ವರೂಪವನ್ನು ತಿಳಿಸಿದನು. ಆಗ ಕ್ರೈಸ್ತನಾಗಿಯೂ ಕಾವಿ ಬಟ್ಟೆಯನ್ನು ಉಟ್ಟಿರುವುದು ಏಕೆಂದು ನಾವು ಪ್ರಶ್ನಿಸಿದೆವು. ಆಗ ಅವನು ಹೇಳಿದ : "ನಾನು ಬ್ರಾಹ್ಮಣ ವಂಶದಲ್ಲಿ ಜನಿಸಿದವನು. ಭಾಗ್ಯವಶದಿಂದ ಕ್ರಿಸ್ತನ ಮೇಲೆ ವಿಶ್ವಾಸ ಉಂಟಾಗಿ ಅವನನ್ನೆ ಇಷ್ಟ ದೇವತೆಯಾಗಿ ಸ್ವೀಕರಿಸಿರುವೆನು. ಇಷ್ಟಕ್ಕಾಗಿ ನಾನು ವಂಶಪಾರಂಪರ್ಯದಿಂದ ಬಂದ ಸಂಪ್ರದಾಯವನ್ನು ಬಿಡಬೇಕೇನು ? ನನಗೆ ಯೋಗಶಾಸ್ತ್ರದಲ್ಲಿ ವಿಶ್ವಾಸವಿದೆ. ನಾನು ಕ್ರಿಸ್ತನನ್ನು ಇಷ್ಟದೇವತೆಯಾಗಿ ಅವಲಂಬಿಸಿ ನಿತ್ಯ ಯೋಗಾಭ್ಯಾಸ ಮಾಡುತ್ತೇನೆ. ಜಾತಿ ಭೇದದಲ್ಲಿ ನನಗೆ ವಿಶ್ವಾಸವಿಲ್ಲ. ಆದರೂ ಯಾರ ಯಾರ ಕೈಯಿಂದಲೊ ಆಹಾರ ಸ್ವೀಕರಿಸಿದರೆ ಯೋಗಾಭ್ಯಾಸಕ್ಕೆ ಹಾನಿ ಉಂಟಾಗುತ್ತದೆ ಎಂದು ನಾನೇ ಅಡುಗೆ ಮಾಡಿ ಹವಿಷ್ಯಾನ್ನ ಉಣ್ಣುತ್ತೇನೆ. ಇದರ ಪರಿಣಾಮವಾಗಿ ನಾನು ಕ್ರೈಸ್ತನಾದರೂ ಜ್ಯೋತಿ ದರ್ಶನವೇ ಮುಂತಾದ ಯೋಗಸಿದ್ಧಿಗಳು ನನಗುಂಟಾಗಿವೆ. ಭಾರತದ ಭಗವದ್ಭಕ್ತರಾದ ಯೋಗಿಗಳು ಸನಾತನ ಕಾಲದಿಂದಲೂ ಕಾವಿವಸ್ತ್ರವನ್ನು ಧರಿಸುತ್ತಿದ್ದರು. ಇದಲ್ಲದೆ ಬೇರೆ ಪ್ರಕಾರದ ಉಡಿಗೆ ನನಗೆ ಪ್ರಿಯವಾಗಲು ಸಾಧ್ಯವೆ ?" ನರೇಂದ್ರನು ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಹಾಕಿ ಅವನ ಆಂತರಿಕ ಭಾವಗಳೆಲ್ಲ ಹೊರಬರುವಂತೆ ಮಾಡಿದ. ಅವನು ನಿಜವಾದ ಸಾಧು ಮತ್ತು ಯೋಗಿ ಎಂಬುದನ್ನು ತಿಳಿದು ನರೇಂದ್ರನು ಅವನನ್ನು ತುಂಬಾ ಸನ್ಮಾನಿಸಿ ನಮಗೂ ಹಾಗೆ ಮಾಡಲು ಹೇಳಿದ. ನಾವೆಲ್ಲರೂ ಅವನ ಪಾದವನ್ನು ಸ್ಪರ್ಶಿಸಿ ಪ್ರಣಾಮವನ್ನು ಮಾಡಿದೆವು ಮತ್ತು ಅವನೊಡನೆ ಕುಳಿತು ಶ್ರೀರಾಮಕೃಷ್ಣರ ಪ್ರಸಾದವಾದ ಆಹಾರ ಸ್ವೀಕರಿಸಿದೆವು. ಶ್ರೀರಾಮಕೃಷ್ಣರು ಸಾಕ್ಷಾತ್ ಕ್ರಿಸ್ತನೆಂದೆ ಅವನ ದೃಢನಂಬಿಕೆಯಾಗಿತ್ತು.

24. ಹೀಗೆ ನರೇಂದ್ರನಾಥನು ಶ್ರೀರಾಮಕೃಷ್ಣರ ಭಕ್ತರನ್ನು ಸರಿಯಾದ ಮಾರ್ಗ ದಲ್ಲಿ ನಡೆಸಿಕೊಂಡು ಹೋಗುತ್ತಿರಲು ಶ್ರೀರಾಮಕೃಷ್ಣರ ಕಾಯಿಲೆಯು ದಿನದಿನಕ್ಕೆ ವೃದ್ಧಿಯಾಗತೊಡಗಿತು. ಹಿಂದೆ ಡಾಕ್ಟರ್ ನೀಡುತ್ತಿದ್ದ ಔಷಧಗಳಿಂದ ಅಲ್ಪ ಸ್ವಲ್ಪ ಪ್ರಯೋಜನವಾಗುತ್ತಿದ್ದರೂ ಈಗ ಆ ಔಷಧಗಳಾವುವೂ ಕೆಲಸ ಮಾಡುತ್ತಿರಲಿಲ್ಲ. ಡಾಕ್ಟರ್ ಸರ್ಕಾರ್ ಚಿಂತಿತನಾದನು. ಕಲಕತ್ತೆಯ ಕಲುಷಿತ ಹವೆಯೆ ಇದಕ್ಕೆ ಕಾರಣವಿರ ಬಹುದೆಂದು ಅವನು ಭಾವಿಸಿ ನಗರದ ಹೊರಗೆ ಯಾರದಾದರೂ ತೋಟದ ಮನೆಯಲ್ಲಿ ಅವರನ್ನು ಇರಿಸಬೇಕೆಂದು ಸಲಹೆ ಇತ್ತನು. ಆಗ್ರಹಾಯಣ ತಿಂಗಳ ಮೊದಲರ್ಧ ಭಾಗವು ಆಗ ಕಳೆದಿತ್ತು. ಮುಂದಿನ ಪೌಷ್ಯ ಮಾಸದಲ್ಲಿ ಮನೆ ಬದಲಾಯಿಸುವುದಕ್ಕೆ ಶ್ರೀರಾಮಕೃಷ್ಣರು ಒಪ್ಪುವುದಿಲ್ಲ ಎಂದು ತಿಳಿದು ಭಕ್ತರು ಕೈಲಾದ ಪ್ರಯತ್ನ ಪಟ್ಟು ಮನೆ ಹುಡುಕತೊಡಗಿದರು. ಸ್ವಲ್ಪ ಕಾಲದಲ್ಲಿಯೆ ತಿಂಗಳಿಗೆ ಎಂಭತ್ತು ರೂಪಾಯಿ ಬಾಡಿಗೆಗೆ ಒಂದು ಮನೆ ಸಿಕ್ಕಿತು. ಅದು ರಾಣಿ ಕಾತ್ಯಾಯಿನಿಯ ಅಳಿಯ ಗೋಪಾಲ

ಚಂದ್ರ ಘೋಷನ ತೋಟದ ಮನೆ. ಬಾರಾನಗರ್ ಬಜಾರ್‌ಗೆ ಹೋಗುವ ಮುಖ್ಯ ರಸ್ತೆಯ ಪೂರ್ವ ದಿಕ್ಕಿಗೆ ಆ ಮನೆ ಇತ್ತು. ಅಲ್ಲಿಯೆ ಕಾಶೀಪುರದ 'ಮತಿ' ಕೊಳದ ಉತ್ತರ ಭಾಗವು ರಸ್ತೆಗೆ ತಾಕಿಕೊಂಡಿತ್ತು. ಸುರೇಂದನಾಥ್ ಮಿತ್ರನು ಇಡೀ ಮನೆಯ ಬಾಡಿಗೆಯನ್ನು ತಾನು ಕೊಡುವುದಾಗಿ ಮಾತು ಕೊಟ್ಟನು.

ಮಾತು ಕತೆಯೆಲ್ಲ ಮುಗಿದ ಮೇಲೆ ಪಂಚಾಂಗದಲ್ಲಿ ಒಂದು ಶುಭದಿನವನ್ನು ನಿರ್ಧರಿಸಿದರು. ಪೀಠೋಪಕರಣಗಳು, ಪಾತ್ರೆಗಳು ಇತ್ಯಾದಿಗಳನ್ನು ಶ್ಯಾಮ್‌ಪುಕುರ ದಿಂದ ಅಲ್ಲಿಗೆ ಸಾಗಿಸಿ ಬೇರೆ ಎಲ್ಲ ವ್ಯವಸ್ಥೆಗಳನ್ನು ಮಾಡಿದರು. ಕೊನೆಗೆ ಭಕ್ತರು ಆಗ್ರಹಾಯಣ ಮಾಸ ಕಳೆಯುವುದಕ್ಕೆ ಒಂದು ದಿನಕ್ಕೆ ಮುಂಚೆ ಮಧ್ಯಾಹ್ನ, ಶ್ರೀರಾಮ ಕೃಷ್ಣರನ್ನು ಕಾಶೀಪುರದ ತೋಟದ ಮನೆಗೆ ಕರೆದುಕೊಂಡು ಹೋದರು. ಅದೊಂದು ಯುಕ್ತವಾದ ಏಕಾಂತ ಪ್ರದೇಶ, ಹಣ್ಣು ಹೂವುಗಳಿಂದ ಕೂಡಿದ ಗಿಡ ಮರಗಳು ಸುತ್ತಲೂ ಬೆಳೆದಿದ್ದುವು. ಶ್ರೀರಾಮಕೃಷ್ಣರಿಗೆ ಮಹದಾನಂದವಾಯಿತು. ಅವರ ಆನಂದ ವನ್ನು ನೋಡಿ ಭಕ್ತರಿಗೂ ಸಂತೋಷವಾಯಿತು.

## ಹದಿಮೂರನೆಯ ಅಧ್ಯಾಯ

## ಪ್ರಥಮ ಪಾದ

# ಶ್ರೀರಾಮಕೃಷ್ಣರು ಕಾಶೀಪುರದ ತೋಟದ ಮನೆಯಲ್ಲಿ

**1. ಕಾಶೀಪುರ 2. ಕಾಶೀಪುರದ ತೋಟದ ಮನೆ 3. ಶ್ರೀರಾಮಕೃಷ್ಣರ ಆಗ ಮನ ಮತ್ತು ಬಾಲಕ ಭಕ್ತರ ತರಬೇತಿ**

1. ಕಲ್ಕತ್ತೆಯ ಉತ್ತರ ಭಾಗದಲ್ಲಿರುವ ಮತ್ತು ಬಾಗ್‌ಬಜಾರ್‌ನ ಒಂದು ಭಾಗ ವನ್ನು ಬಾರಾನಗರದೊಡನೆ ಸಂಪರ್ಕಿಸುವ ವಿಶಾಲವಾದ ರಸ್ತೆಯ ಪಕ್ಕದಲ್ಲಿ ಕಾಶೀ ಪುರದ ತೋಟದ ಮನೆಯು ಇದೆ, ಅದು ಕಲ್ಕತ್ತೆಯಿಂದ ಮೂರು ಮೈಲಿ ದೂರದಲ್ಲಿದೆ. ಬಾಗ್‌ಬಜಾರ್ ಸೇತುವೆಯ ಉತ್ತರಕ್ಕೆ ಮತ್ತು ತೋಟದ ಸ್ವಲ್ಪ ದಕ್ಷಿಣಕ್ಕೆ ರಸ್ತೆಯ ಎರಡೂ ಕಡೆಗಳಲ್ಲಿ ಬಡ ಕೂಲಿಯಾಳುಗಳ ಗುಡಿಸಲುಗಳಿದ್ದವು ಮತ್ತು ಅವರ ದೈನಂದಿನ ಜೀವನಕ್ಕೆ ಉಪಯುಕ್ತವಾಗುವ ವಸ್ತುಗಳುಳ್ಳ ಸಣ್ಣ ಅಂಗಡಿಗಳಿದ್ದುವು. ಮಧ್ಯೆ ಮಧ್ಯೆ ಕೆಲವು ಇಟ್ಟಿಗೆ ಮನೆಗಳೂ ಇದ್ದುವು. ಕೆಲವು ಸೆಣಬಿನ ಗಿರಣಿಗಳು, ಡೋಸ್ಟ್ ಕಂಪನಿಯ ಕಬ್ಬಿಣದ ಕಾರ್ಖಾನೆ, ಒಂದೆರಡು ಉದ್ಯಾನಗಳು, ಮನೆಗಳು, ಒಂದು ಪೋಲಿಸ್ ಠಾಣೆ ಮತ್ತು ಫೈರ್ ಬ್ರಿಗೇಡ್ ಸ್ಟೇಶನ್ ಇವು ಕಾಶೀಪುರ್ ಕ್ರಾಸ್ ರಸ್ತೆಯ ದಕ್ಷಿಣ ಪಶ್ಚಿಮ ಭಾಗದಲ್ಲಿದ್ದುವು. ಇದಕ್ಕೆ ಪಶ್ಚಿಮ ಭಾಗದಲ್ಲಿ ಹತ್ತಿರವೇ ಪ್ರಸಿದ್ಧವಾದ ಸರ್ವಮಂಗಳಾದೇವಿಯ ದೇವಸ್ಥಾನವಿದೆ. ಅದು ಬಡವ ಮತ್ತು ಶ್ರೀಮಂತರ ಜೀವನದ ನಡುವೆ ಇದ್ದ ವ್ಯತ್ಯಾಸಕ್ಕೆ ಸಾಕ್ಷಿಯೊ ಎಂಬಂತಿದೆ. ಶಿಯಾಲ್ದಾ ರೈಲ್ವೆ ನಿಲ್ದಾಣವು ಉತ್ತಮಗೊಂಡು ವಿಸ್ತಾರವಾದ ನಂತರ ತಗಡಿನ ಛಾವಣಿಯ 'ಗೋಡೌನ್' ಮುಂತಾದವುಗಳು ಈಗ ಕಟ್ಟಲ್ಪಟ್ಟಿವೆ ಮತ್ತು ಅವು ಕೆಲವು ವರ್ಷಗಳ ಹಿಂದೆ ಇದ್ದ ಸ್ವಲ್ಪ ಸೌಂದರ್ಯವನ್ನೂ ಹಾಳು ಮಾಡಿರುವುವು. ಈ ಪುರಾತನ ರಸ್ತೆಯು ಕವಿಗಳ ಮತ್ತು ಕಲೆಗಾರರ ಕಣ್ಣಿಗೆ ಪ್ರಿಯವಾಗಿ ಕಾಣದಿದ್ದರೂ ಇತಿಹಾಸಕಾರರಿಗೆ ಸ್ವಲ್ಪ ಮೌಲ್ಯ ಉಳ್ಳದ್ದಾಗಿದೆ. ಏಕೆಂದರೆ ನವಾಬ್ ಸಿರಾಜನು ಈ ರಸ್ತೆಯ ಮೂಲಕವೇ ಬಂದು ಬ್ರಿಟಿಷರ ಗೋವಿಂದಪುರ್ ಕೋಟೆಯನ್ನು ಮುತ್ತಿದ್ದನು. ಬಾಗ್‌ಬಜಾರದ ಅರ್ಧ ಮೈಲಿ ದೂರದಲ್ಲಿ ಇದೇ ರಸ್ತೆಯ ಹತ್ತಿರ ನವಾಬ್ ಮಿರ್ಜಾಫರ್‌ನ ಅರಮನೆ ಇತ್ತು, ಬಾಗ್‌ಬಜಾರ್‌ನಿಂದ ಕಾಶೀಪುರ್ ಕ್ರಾಸ್ ರಸ್ತೆಯವರೆಗೆ ಈ ರಸ್ತೆಯ ಭಾಗ ಸುಂದರ ವಾಗಿಲ್ಲ. ಆದರೆ ಅಲ್ಲಿಂದ ಮುಂದೆ ಬಾರಾನಗರ್ ಬಜಾರ್‌ವರೆಗೆ ಆಕರ್ಷಣೀಯವಾಗಿಯೆ ಇದೆ. ಕ್ರಾಸ್ ರೋಡ್‌ನಿಂದ ಉತ್ತರದ ಕಡೆಗೆ ಸ್ವಲ್ಪ ಮುಂದುವರಿದರೆ ಮತಿಕೊಳದ ದಕ್ಷಿಣ ಭಾಗವು ಸಿಕ್ಕುತ್ತದೆ. ಅದಕ್ಕೆ ವಿರುದ್ಧ ದಿಕ್ಕಿನಲ್ಲಿ ರಸ್ತೆಯ ಪೂರ್ವ ದಿಕ್ಕಿಗೆ ನಮ್ಮ

ಪ್ರಸಿದ್ಧ ಸ್ನೇಹಿತ ಮಹಿಮಾಚರಣ್ ಚಕ್ರವರ್ತಿಯ ಸೊಗಸಾದ ವಾಸ ಭವನವಿದೆ. ಈ ಮನೆಯ ಸುತ್ತಲಿರುವ ತೋಟದ ಹೆಚ್ಚು ಭಾಗವನ್ನು ಈಗ ರೈಲ್ವೆ ಕಂಪೆನಿಯು ಕೊಂಡು ಕೊಂಡಿರುವುದು ಮತ್ತು ಅದರ ಮೂಲಕ ಗಂಗಾದಡಕ್ಕೆ ಒಂದು ರೈಲು ಹಾದಿಯನ್ನು ಮಾಡಿರುವರು. ಇದರಿಂದಾಗಿ ಮನೆಯ ಹಿಂದಿನ ಸೌಂದರ್ಯವೆಲ್ಲ ನಶಿಸಿಹೋಯಿತು. ಅಲ್ಲಿಂದ ಮುಂದೆ ಸ್ವಲ್ಪ ಉತ್ತರಕ್ಕೆ ಹೋದರೆ ಎಡಭಾಗಕ್ಕೆ ಮತಿಕೊಳದ ಉತ್ತರ ಭಾಗವು ಸಿಕ್ಕುವುದು. ಅದಕ್ಕೆ ವಿರುದ್ಧವಾಗಿ ರಸ್ತೆಯ ಪೂರ್ವ ದಿಕ್ಕಿನಲ್ಲಿ ಕಾಶೀಪುರ್ ತೋಟದ ಎತ್ತರದ ಗೋಡೆ ಕಬ್ಬಿಣದ ಗೇಟು ಸಿಕ್ಕುವುದು. ಮತಿಕೊಳದ ಪಶ್ಚಿಮ ಭಾಗದಲ್ಲಿರುವ ರಸ್ತೆಯಲ್ಲಿ ಕೆಲವು ಸುಂದರವಾದ ತೋಟದ ಮನೆಗಳಿವೆ, ಇವುಗಳಲ್ಲಿ ಅತ್ಯುತ್ತಮವಾದುದು ಮತಿಲಾಲ್ ಸಿಲ್‌ನ ತೋಟ. ಈಗ ಅದು ಕಲ್ಕತ್ತಾ ವಿದ್ಯುತ್ ನಿಗಮದ ವಶದಲ್ಲಿದೆ ಮತ್ತು ಹಿಂದಿನ ಎಲ್ಲ ಪ್ರಶಾಂತತೆಯನ್ನೂ ಸೌಂದರ್ಯ ವನ್ನೂ ಕಳೆದುಕೊಂಡು ತುಂಬ ಗಲಭೆಯ ಪ್ರದೇಶವಾಗಿದೆ. ಈ ತೋಟದ ಉತ್ತರ ಭಾಗಕ್ಕೆ ಗಂಗಾ ತೀರದಲ್ಲಿ ಬಸಕ್‌ನ ಭಗ್ನವಾದ ಮನೆ ಇತ್ತು. ಈ ಮನೆಗೆ ಹೋಗುವ ದಾರಿಯ ಎರಡೂ ಕಡೆ ಹುಣಿಸೇಮರದ ಸಾಲುಗಳಿದ್ದುವು. ಆ ಸೌಂದರ್ಯ ಮತ್ತು ಶಬ್ದಗಳು ಜನರ ಕಣ್ಣು ಕಿವಿಗಳನ್ನು ತಣಿಸುತ್ತಿದ್ದವು. ನಾವು ಕಾಶೀಪುರ್ ತೋಟದ ಮನೆಯಲ್ಲಿ ಶ್ರೀರಾಮಕೃಷ್ಣರೊಡನೆ ಇದ್ದಾಗ ಗಂಗಾಸ್ನಾನಕ್ಕಾಗಿ ಸಿಲ್‌ನ ತೋಟಕ್ಕೆ ಹೋಗುತ್ತಿದ್ದೆವು. ಶ್ರೀರಾಮಕೃಷ್ಣರಿಗೆ ಗುಲ್ಚಿ ಹೂವು ತುಂಬ ಇಷ್ಟವಾದುದರಿಂದ ಅಲ್ಲಿದ್ದ ಒಂದು ಮರದಿಂದ ಕಿತ್ತುಕೊಂಡು ಬಂದು ಕೊಡುತ್ತಿದ್ದೆವು. ಆಗಾಗ ಹುಣಿಸೆ ಮರದ ಸಾಲುಗಳಿಂದ ಅಲಂಕೃತವಾಗಿದ್ದ ರಸ್ತೆಯಲ್ಲಿ ನಡೆದುಕೊಂಡುಹೋಗಿ ಬಸಕ್‌ನ ನಿರ್ವಾಸ ಮುರುಕಲು ಮನೆಯಲ್ಲಿ ಕುಳಿತುಕೊಳ್ಳುತ್ತಿದ್ದೆವು. ಈ ತೋಟದ ಸ್ವಲ್ಪ ಉತ್ತರ ಭಾಗದಲ್ಲಿ ಪ್ರಾಣನಾಥ ಚೌಧುರಿಗೆ ಸೇರಿದ ವಿಶಾಲವಾದ ಸ್ನಾನದ ಘಟ್ಟವಿದೆ. ಇದರ ಉತ್ತರಕ್ಕೆ ಪ್ರಸಿದ್ಧ ಲಾಲಾಬಾಬುವಿನ ಪತ್ನಿ ರಾಣಿ ಕಾತ್ಯಾಯಿನಿಗೆ ಸೇರಿದ ಸುಂದ ರವಾದ ಶ್ರೀಗೋಪಾಲನ ದೇವಸ್ಥಾನವಿದೆ. ನಾವು ಕೆಲವೊಮ್ಮೆ ಗಂಗಾಸ್ನಾನಕ್ಕೆ ಅಲ್ಲಿಗೆ ಹೋಗಿ ಶ್ರೀಗೋಪಾಲನಿಗೆ ಪ್ರಣಾಮ ಮಾಡಿ ಬರುತ್ತಿದ್ದೆವು, ರಾಣಿ ಕ್ಯಾತ್ಯಾ ಯಿನಿಯ ಅಳಿಯ ಗೋಪಾಲ್‌ಚಂದ್ರಘೋಷನು ಕಾಶೀಪುರ್ ತೋಟದ ಮನೆಯ ಒಡೆ ಯನಾಗಿದ್ದನು. ಭಕ್ತರು ಅವನಿಂದ ತಿಂಗಳಿಗೆ ಎಂಭತ್ತು ರೂಪಾಯಿ ಬಾಡಿಗೆಗೆ ಆ ಮನೆಯನ್ನು ತೆಗೆದುಕೊಂಡರು. ಮೊದಲು ಆರು ತಿಂಗಳಿಗೆ ಅದನ್ನು ಕೊಂಡುಕೊಳ್ಳ ಲಾಯಿತು. ಅನಂತರ ಮತ್ತೆ ಮೂರು ತಿಂಗಳು ಅವಧಿಯನ್ನು ವಿಸ್ತರಿಸಲಾಯಿತು. ಶ್ರೀರಾಮಕೃಷ್ಣರ ಶ್ರೇಷ್ಠ ಭಕ್ತನಾದ ಸುರೇಂದ್ರನಾಥ್ ಮಿತ್ರನು ಕರಾರು ಪತ್ರಕ್ಕೆ ಸಹಿ ಹಾಕಿ ಬಾಡಿಗೆ ಹಣವನ್ನು ಅವನೇ ಸಂಪೂರ್ಣ ಕೊಟ್ಟನು.

2. ಕಾಶೀಪುರ್ ತೋಟವು ದೊಡ್ಡದಲ್ಲದಿದ್ದರೂ ತುಂಬ ಸುಂದರವಾಗಿತ್ತು. ನಾಲ್ಕೂವರೆ ಎಕರೆಗಿಂತ ಹೆಚ್ಚು ವಿಸ್ತೀರ್ಣವಾಗಿತ್ತು. ಚತುಷ್ಕೋಣಾಕಾರದ ಆ ಭೂ ಭಾಗದ ಉತ್ತರ ದಕ್ಷಿಣ ಭಾಗಕ್ಕಿಂತ ಪೂರ್ವ ಪಶ್ಚಿಮ ಭಾಗವು ಹೆಚ್ಚು ಉದ್ದವಾಗಿತ್ತು.

ಸುತ್ತ ಎತ್ತರವಾದ ಗೋಡೆ ಇತ್ತು. ಉತ್ತರಭಾಗದ ಕಾಂಪೌಂಡು ಗೋಡೆಗೆ ಆತು ಕೊಂಡು ಮೂರು ನಾಲ್ಕು ಕೊಠಡಿಗಳ ಒಂದು ಸಾಲು ಇತ್ತು. ಅವು ಅಡಿಗೆ ಮನೆ ಮತ್ತು ಉಗ್ರಾಣಕ್ಕಾಗಿ ಮೀಸಲಾಗಿದ್ದವು. ಅವುಗಳಿಗೆ ಅಭಿಮುಖವಾಗಿ ತೋಟದ ಇನ್ನೊಂದು ಭಾಗದಲ್ಲಿ ಎರಡಂತಸ್ತಿನ ಒಂದು ವಾಸದ ಮನೆ ಇದೆ. ಮಹಡಿ ಮೇಲೆ ಎರಡು ಕೋಣೆಗಳು, ಕೆಳಗಡೆ ನಾಲ್ಕು ಕೋಣೆಗಳಿವೆ. ಕೆಳಗಡೆ ಇದ್ದ ಕೋಣೆಗಳಲ್ಲಿ ಒಂದು ತುಂಬ ವಿಶಾಲವಾಗಿದೆ. ಅದರ ಉತ್ತರಭಾಗಕ್ಕೆ ಎರಡು ಚಿಕ್ಕ ಕೊಠಡಿಗಳು ಒಂದರ ಪಕ್ಕದಲ್ಲಿ ಒಂದು ಇವೆ. ಇವುಗಳ ಪಶ್ಚಿಮ ಭಾಗದಲ್ಲಿ ಮಹಡಿಗೆ ಹೋಗುವು ದಕ್ಕೆ ಮರದ ಸೋಪಾನ ಪಂಕ್ತಿ ಇದೆ. ಇವುಗಳ ಪೂರ್ವಭಾಗದ ಕೊಠಡಿಯನ್ನು ಶ್ರೀಮಾತೆಯವರಿಗಾಗಿ ಕಾದಿರಿಸಲಾಗಿತ್ತು. ಮೇಲೆ ಸೂಚಿಸಿದ ವಿಶಾಲವಾದ ಕೊಠಡಿಯು ಪೂರ್ವ ಪಶ್ಚಿಮವಾಗಿ ವಿಸ್ತರಿಸಿದೆ. ಅದಕ್ಕೆ ದಕ್ಷಿಣದಲ್ಲಿ ಒಂದು ಕೊಠಡಿ ಇದೆ. ಅದರ ಪೂರ್ವಕ್ಕೆ ಒಂದು ವರಾಂಡವಿದೆ, ಇವೆಲ್ಲವನ್ನೂ ಭಕ್ತರು ಕುಳಿತುಕೊಳ್ಳುವುದಕ್ಕೆ ಮಲ ಗುವುದಕ್ಕೆ ಉಪಯೋಗಿಸಿಕೊಳ್ಳುತ್ತಿದ್ದರು. ದೊಡ್ಡ ಕೋಣೆಯ ಮೇಲ್ಭಾಗದಲ್ಲಿ ಮಹ ಡಿಯ ಮೇಲೆ ಚೌಕಾಕಾರದ ಒಂದು ದೊಡ್ಡ ಕೋಣೆ ಇದೆ. ಅದರ ದಕ್ಷಿಣ ಭಾಗದಲ್ಲಿ ಕೆಳಗೆ ಹೋಗುವ ಸೋಪಾನ ಪಂಕ್ತಿ ಇದೆ. ಈ ಭಾಗವು ಗೋಡೆಯಿಂದ ಆವೃತವಾಗಿದೆ. ಆದರೆ ಮೇಲ್ಭಾಗ ತೆರದಿದೆ, ಇಲ್ಲಿ ಶ್ರೀರಾಮಕೃಷ್ಣರು ಕೆಲವೊಮ್ಮೆ ಓಡಾಡುತ್ತಿದ್ದರು, ಇದರ ಉತ್ತರ ಭಾಗಕ್ಕೆ ಮೇಲ್ಛಾವಣಿಗೆ ಹೋಗುವುದಕ್ಕೆ ಮೆಟ್ಟಲುಗಳಿವೆ. ಶ್ರೀಮಾತೆ ಯವರಿಗೆ ನಿರ್ದಿಷ್ಟವಾದ ಕೊಠಡಿಯ ಮೇಲ್ಭಾಗದಲ್ಲಿ ಒಂದು ಸಣ್ಣ ಚೌಕಾಕಾರದ ಕೊಠಡಿ ಇದೆ. ಇಲ್ಲಿ ಶ್ರೀರಾಮಕೃಷ್ಣರು ಸ್ನಾನಾದಿಗಳನ್ನು ಮಾಡುತ್ತಿದ್ದರು. ಅದನ್ನು ಒಂದಿಬ್ಬರು ಸೇವಕರೂ ಕೂಡ ರಾತ್ರಿ ಉಪಯೋಗಿಸುತ್ತಿದ್ದರು.

ಮನೆಯ ತಂಗುವ ಸ್ಥಳದ ಪೂರ್ವ ಮತ್ತು ಪಶ್ಚಿಮ ಭಾಗಗಳಲ್ಲಿ ಕೆಳಮಹಡಿಗೆ ಬರುವ ಎರಡು ಸೋಪಾನ ಪಂಕ್ತಿಗಳಿವೆ. ಸುತ್ತಲೂ ವೃತ್ತಾಕಾರದ ಇಟ್ಟಿಗೆಯಿಂದ ನಿರ್ಮಿತವಾದ ತೋಟದ ಹಾದಿ ಇದೆ. ತೋಟದ ದಕ್ಷಿಣ-ಪಶ್ಚಿಮ ದಿಕ್ಕಿನಲ್ಲಿ ಪಶ್ಚಿಮದ ಗೋಡೆಗೆ ಆತುಕೊಂಡು ಕಾವಲುಗಾರನಿಗಾಗಿ ಒಂದು ಸಣ್ಣ ಕೋಣೆ ಇದೆ. ಅದರ ಉತ್ತರ ಭಾಗಕ್ಕೆ ಕಬ್ಬಿಣದ ಗೇಟು ಇತ್ತು. ಅರ್ಧ ವೃತ್ತಾಕಾರದ ತೋಟದ ಹಾದಿ ಯೊಂದು ಉತ್ತರ-ಪೂರ್ವದ ಕಡೆಗೆ ಹೋಗಿ ಮನೆಯ ಸುತ್ತಲಿದ್ದ ವೃತ್ತಾಕಾರದ ರಸ್ತೆ ಯನ್ನು ಸಂಧಿಸುತ್ತದೆ ಮತ್ತು ಅದು ಗಾಡಿ ಓಡಾಡುವಷ್ಟು ಅಗಲವಾಗಿದೆ. ಮನೆಯ ಪಶ್ಚಿಮ ದಿಕ್ಕಿಗೆ ಒಂದು ಸಣ್ಣ ಕೊಳವಿದೆ. ಆ ಮನೆಯಿಂದ ಕೊಳಕ್ಕೆ ಹೋಗಲು ಮೆಟ್ಟಿಲುಗಳಿವೆ. ಈ ಕೊಳಕ್ಕಿಂತ ನಾಲ್ಕೈದು ಪಟ್ಟು ದೊಡ್ಡದಾದ ಇನ್ನೊಂದು ಕೊಳವು ತೋಟದ ಉತ್ತರ-ಪೂರ್ವ ಮೂಲೆಯಲ್ಲಿದೆ. ಅದರ ಉತ್ತರ-ಪಶ್ಚಿಮ ಭಾಗದಲ್ಲಿ ಒಂದಂತಸ್ತಿನ ಎರಡು ಅಥವಾ ಮೂರು ಕೋಣೆಗಳಿದ್ದವು. ಇದಲ್ಲದೆ ತೋಟದ ಉತ್ತರ-ಪಶ್ಚಿಮ ಮೂಲೆಯಲ್ಲಿ ಒಂದು ಕುದುರೆ ಲಾಯವಿತ್ತು. ಮೇಲೆ ಹೇಳಿದ ಕೊಳದ ಪಶ್ಚಿಮ ಭಾಗದಲ್ಲಿ ಎರಡು ಮುರಿದು ಹೋದ, ಇಟ್ಟಿಗೆ ನಿರ್ಮಿತ ಕೊಠಡಿಗಳಿದ್ದುವು,

ಅವು ಮಾಲಿಗಳಿಗಾಗಿ. ತೋಟದ ಎಲ್ಲೆಲ್ಲಿಯೂ ಮಾವು, ಹಲಸು, ಲೀಚಿ ಮತ್ತು ಇತರ ಹಣ್ಣು ಬಿಡುವ ಮರಗಳಿದ್ದುವು. ತೋಟದ ಹಾದಿಗಳು ಎರಡೂ ಕಡೆಗಳಲ್ಲಿ ಹೂವಿನ ಗಿಡಗಳಿಂದ ಅಲಂಕೃತವಾಗಿದ್ದುವು. ಕೊಳಗಳ ಅಕ್ಕಪಕ್ಕದ ಹೆಚ್ಚಿನ ಭೂಭಾಗವನ್ನು ಸೊಪ್ಪು ತರಕಾರಿ ಬೆಳಸಲು ಉಪಯೋಗಿಸುತ್ತಿದ್ದರು. ಅಲ್ಲಲ್ಲಿ ಹಸಿರು ಹುಲ್ಲಿನ ಮೈದಾನ ಗಳು ತೋಟದ ಸೌಂದರ್ಯವನ್ನು ಇನ್ನೂ ವರ್ಧಿಸುತ್ತಿದ್ದವು.

3. ಕ್ರಿ. ಶ. ೧೮೮೫ ಡಿಸೆಂಬರ್ ೧೧ ನೇ ದಿನಾಂಕ ಶ್ರೀರಾಮಕೃಷ್ಣರು ಈ ತೋಟದ ಮನೆಗೆ ಬಂದರು. ಈ ಎಂಟು ತಿಂಗಳುಗಳಲ್ಲಿ ಅವರ ವ್ಯಾಧಿಯು ಉಲ್ಬಣ ವಾಗುತ್ತಾ ಹೋಯಿತು. ಅವರ ದೃಢಕಾಯವು ಕೇವಲ ಅಸ್ಥಿಪಂಜರದಂತಾಯಿತು. ಆದರೆ ಸಂಯತ ಮನಸ್ಸು ಮಾತ್ರ ಈ ದೈಹಿಕ ವ್ಯಾಧಿಯನ್ನು ನೋವನ್ನು ಕಡೆಗಣಿಸಿ ಶಾಂತರೂಪದಲ್ಲಿತ್ತು. ತಾವು ಕೈಗೊಂಡ ಕಾರ್ಯವನ್ನು ಪೂರ್ಣಗೊಳಿಸುವ ದೃಢ ನಿರ್ಧಾರದಲ್ಲಿ ಅವರಿರುವಂತೆ ಕಂಡು ಬರುತ್ತಿತ್ತು. ಅವರು ನಿರಂತರವಾಗಿ ತಮ್ಮ ಶಿಷ್ಯ ರಿಗೆ ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಬೋಧಿಸುವುದನ್ನೂ ತರಬೇತಿ ನೀಡು ವುದನ್ನೂ ಮುಂದುವರಿಸಿದರು. ಅವರು ದಕ್ಷಿಣೇಶ್ವರದಲ್ಲಿದ್ದಾಗ ಸೂಚಿಸುತ್ತಿದ್ದ ತಮ್ಮ ಬಗೆಗಿನ ಭವಿಷ್ಯದ್ವಾಣಿಯು ವಾಸ್ತವವಾಗುತ್ತಿರುವುದನ್ನು ನಾವು ನೋಡುತ್ತಿದ್ದೆವು. ಅವರು ಅನೇಕ ಬಾರಿ ಹೇಳಿದ್ದರು : "ನಾನು ಹೋಗುವುದಕ್ಕೆ ಮುಂಚೆ ಇಡೀ ರಹಸ್ಯ ವನ್ನು ಬಹಿರಂಗ ಪಡಿಸಿಬಿಡುತ್ತೇನೆ. (ಅಂದರೆ ನನ್ನ ದಿವ್ಯ ಸ್ವರೂಪವನ್ನು ವ್ಯಕ್ತಪಡಿಸು ತ್ತೇನೆ.)" ; "ಅನೇಕರು ನನ್ನ ದಿವ್ಯ ವೈಭವವನ್ನು ತಿಳಿದುಕೊಂಡು ಅದರ ಬಗ್ಗೆ ಮಾತ ನಾಡುತ್ತಾರೊ ಆಗ ಈ ದೇಹವು ಉಳಿಯುವುದಿಲ್ಲ, ತಾಯಿಯ ಇಚ್ಛೆಗನುಸಾರವಾಗಿ ಭಗ್ನವಾಗಿ ಹೋಗುವುದು." ; "ಆ ಸಂದರ್ಭದಲ್ಲಿ (ಕಾಹಿಲೆಯ ಸಂದರ್ಭದಲ್ಲಿ) ಅಂತ ರಂಗ ಭಕ್ತರಾರು ಬಹಿರಂಗದವರಾರು ಎಂಬುದು ನಿರ್ಧರಿಸಲ್ಪಡುತ್ತದೆ" ಇತ್ಯಾದಿ. ಇಲ್ಲಿಯೇ ನಮಗೆ ನರೇಂದ್ರನಾಥ ಮತ್ತು ಇತರ ಭಕ್ತರ ಬಗೆಗಿನ ಅವರ ಭವಿಷ್ಯದ್ವಾಣಿಯ ಸತ್ಯತೆಯ ಅರಿವಾದದ್ದು : "ತಾಯಿಯೇ ನಿನ್ನನ್ನು (ನರೇಂದ್ರನಾಥ್) ಒತ್ತಾಯ ಪೂರ್ವಕವಾಗಿ ತನ್ನ ಕೆಲಸಕ್ಕೋಸ್ಕರ ಈ ಪ್ರಪಂಚಕ್ಕೆ ಕರೆದುಕೊಂಡು ಬಂದಿರುವಳು. ನೀನು ನನ್ನನ್ನು ಅನುಸರಿಸದೆ ಬೇರೆ ವಿಧಿಯೇ ಇಲ್ಲ" ; "ಅವರೆಲ್ಲ (ಬಾಲಕ ಭಕ್ತರು) ಹೋಮಾ ಪಕ್ಷಿಯ ಮರಿಗಳಿದ್ದಂತೆ. ಹೋಮಾಪಕ್ಷಿಗಳು ಅತ್ಯಂತ ಎತ್ತರದಲ್ಲಿ ಹಾರಾಡು ವುವು ಮತ್ತು ಅಲ್ಲಿಯೆ ಮೊಟ್ಟೆ ಇಡುವುವು. ಆ ಮೊಟ್ಟೆಯು ವೇಗವಾಗಿ ಭೂಮಿಯ ಕಡೆ ಬರುತ್ತದೆ. ಅದು ಭೂಮಿಯ ಮೇಲೆ ಬಿದ್ದು ಒಡೆದು ತುಂಡು ತುಂಡಾಗುತ್ತದೆ ಎಂದು ಭಯವಾಗುತ್ತದೆ. ಆದರೆ ಹಾಗಾಗುವುದಿಲ್ಲ. ಮೊಟ್ಟೆಯಿಂದ ಮರಿಯು ಹೊರಗೆ ಬಂದು ಭೂಮಿಗೆ ತಾಕುವುದಕ್ಕೆ ಮುಂಚೆಯೆ ರೆಕ್ಕೆಯನ್ನು ಬಿಚ್ಚಿಕೊಂಡು ತನ್ನ ತಾಯಿಯ ಕಡೆ ಮೇಲೆ ಹಾರಿ ಹೋಗುವುದು. ತಾಯಿ ಹಕ್ಕಿಯು ಅದಕ್ಕಾಗಿ ಕಾಯುತ್ತಿರುತ್ತದೆ. ಇದರಂತೆಯೆ ಈ ಬಾಲಕ ಭಕ್ತರು ಪ್ರಪಂಚಕ್ಕೆ ಬದ್ಧರಾಗುವುದಕ್ಕೆ ಮುಂಚೆಯೆ ಅದನ್ನು ತ್ಯಜಿಸಿ ಭಗವಂತನೆಡೆಗೆ ಧಾವಿಸುವರು." ಇಲ್ಲಿಯೆ ಅವರು ನರೇಂದ್ರನಾಥನಿಗೆ ತರಬೇತಿ

ಯನ್ನು ನೀಡಿ ವಿಶೇಷವಾಗಿ ಬಾಲಕ ಭಕ್ತರನ್ನು ನೋಡಿಕೊಳ್ಳುವ ಭಾರವನ್ನು ಅವನಿಗೆ ವಹಿಸಿದರು. ಅವರಿಗೆಲ್ಲ ಹೇಗೆ ತರಬೇತಿ ನೀಡಬೇಕು ಎಂಬುದರ ಬಗ್ಗೆ ಅವನಿಗೆ ವಿವರ ವಾದ ಸಲಹೆಗಳನ್ನು ಇತ್ತರು. ಆದ್ದರಿಂದ ಕಾಶೀಪುರದಲ್ಲಿ ಶ್ರೀರಾಮಕೃಷ್ಣರು ಸಾಧಿಸಿದ ಕಾರ್ಯ ಅತ್ಯಂತ ವೈಶಿಷ್ಟ್ಯಪೂರ್ಣವಾದುದು.

## ಹದಿಮೂರನೆಯ ಅಧ್ಯಾಯ

## ದ್ವಿತೀಯ ಪಾದ

## ಕಾಶೀಪುರದಲ್ಲಿ ಸೇವಾವ್ರತ

1. ತೋಟದ ಮನೆಯ ಸೌಂದರ್ಯ ಮತ್ತು ವಿಶಾಲತೆಯನ್ನು ನೋಡಿ ಶ್ರೀರಾಮಕೃಷ್ಣರ ಸಂತೋಷ 2. ಅವರ ಸೇವೆಗೆ ಜನ ಧನ ಎರಡೂ ಬೇಕಿತ್ತು 3. ಶ್ರೀರಾಮಕೃಷ್ಣರ ಸೇವೆಗಾಗಿ ಕಾಶೀಪುರದಲ್ಲೇ ಇರುವ ನರೇಂದ್ರನ ನಿರ್ಧಾರ 4. ಶ್ರೀರಾಮಕೃಷ್ಣರು ಯಾವಾಗಲೂ ಜಗನ್ಮಾತೆಯನ್ನೇ ಆಶ್ರಯಿಸಿದ್ದರು 5. ಅವರು ತಮ್ಮ ಸೇವೆಯ ವ್ಯವಸ್ಥೆಯಲ್ಲಿ ಆವಶ್ಯಕ ಬದಲಾವಣೆ ಮಾಡುತ್ತಿದ್ದರು 6. ಭಾವಿ ಸಂನ್ಯಾಸಿ ಭಕ್ತವೃಂದ ರೂಪಿತವಾದುದು 7. ಶ್ರೀರಾಮಕೃಷ್ಣರ ಆರೋಗ್ಯದಲ್ಲಿ ಸ್ವಲ್ಪ ಸುಧಾರಣೆ 8. ಯುವಕ ಭಕ್ತರು ತಮ್ಮ ತಮ್ಮಲ್ಲಿ ಕೆಲಸವನ್ನು ಹಂಚಿಕೊಂಡಿದ್ದರು 9. ಅಡಿಗೆ ಮಾಡುವುದೆಲ್ಲ ಶ್ರೀಮಾತೆಯವರ ಜವಾಬ್ದಾರಿಯಾಗಿತ್ತು 10. ಗೃಹೀ ಭಕ್ತರು ತಿಂಗಳಿಗೆರಡು ಬಾರಿ ಸಂಧಿಸಿ ಆರ್ಥಿಕ ವ್ಯವಸ್ಥೆಯ ಬಗ್ಗೆ ಚರ್ಚಿಸುತ್ತಿದ್ದರು 11. ಬಾಲಕ ಭಕ್ತರು ಮನೆಗೆ ಹೋಗದೆ ಗುರು ಸೇವೆಯಲ್ಲಿ ಸಂಪೂರ್ಣ ಮಗ್ನರಾಗುತ್ತಾರೆ 12. ಆಸೆಯನ್ನು ಬಿಟ್ಟು ಭಗವತ್ಸಾಕ್ಷಾತ್ಕಾರದಲ್ಲಿ ಸಂಪೂರ್ಣ ಮಗ್ನರಾಗಲು ಬಾಲಕ ಭಕ್ತರನ್ನು ನರೇಂದ್ರ ಹುರಿದುಂಬಿಸುತ್ತಾನೆ 13. ಬಾಲಕ ಭಕ್ತರು ಧುನಿ ಅಗ್ನಿಯಲ್ಲಿ ಆಸೆಗಳನ್ನು ಸುಡುತ್ತಾರೆ

1. ನಾವು ಮೊದಲೇ ತಿಳಿಸಿರುವಂತೆ ಶ್ರೀರಾಮಕೃಷ್ಣರು ಶ್ಯಾಮ್‌ಪುಕುರ್‌ದಿಂದ ಕಾಶೀಪುರಕ್ಕೆ ಆಗ್ರಹಾಯಣದ ಕೊನೆಯ ಹಿಂದಿನ ದಿನ ಬಂದರು. ಏಕೆಂದರೆ ಪೌಷ್ಯ ಮಾಸದಲ್ಲಿ ಪ್ರಯಾಣ ಮಾಡುವುದು ಅಮಂಗಳಕರ. ಕಾಶೀಪುರದ ಮನೆಯು ಹೆಚ್ಚು ವಿಶಾಲವೂ ಏಕಾಂತವೂ ಆಗಿತ್ತು. ಶ್ಯಾಮ್‌ಪುಕುರದ ಮನೆ ಜನಭರಿತವಾದ ರಸ್ತೆಯಲ್ಲಿತ್ತು. ಕಾಶೀಪುರದಲ್ಲಿ ಯಾವುದೇ ದಿಕ್ಕಿಗೆ ತಿರುಗಿದರೂ ಮರದ ಹಸುರು ಎಲೆಗಳು ಕಣ್ಣಿಗೆ ಆನಂದವನ್ನು ನೀಡುತ್ತಿದ್ದುವು. ಹೂವುಗಳ ಕಾಂತಿಮಯ ಬಣ್ಣ, ಹುಲ್ಲು ಮೈದಾನದ ಶ್ಯಾಮಲವರ್ಣ ಇವೆಲ್ಲ ಕಣ್ಣಿಗೆ ರಸದೌತಣವಾಗಿದ್ದುವು. ದಕ್ಷಿಣೇಶ್ವರ ಕಾಳೀದೇವಾಲಯದ ಸ್ವಾಭಾವಿಕ ಸೌಂದರ್ಯಕ್ಕೆ ಹೋಲಿಸಿದರೆ ಇಲ್ಲಿಯ ತೋಟದ ಸೌಂದರ್ಯ ಉಲ್ಲೇಖಾರ್ಹವಲ್ಲ. ಆದರೂ ಕೂಡ ನಾಲ್ಕು ತಿಂಗಳ ಕಲ್ಕತ್ತೆಯ ವಾಸದ ನಂತರ ಇಲ್ಲಿಗೆ ಬಂದ ಮೇಲೆ ಶ್ರೀರಾಮಕೃಷ್ಣರಿಗೆ ಎಷ್ಟೋ ಸಂತೃಪ್ತಿ ಉಂಟಾಯಿತು. ಅವರು ತೋಟವನ್ನು ಪ್ರವೇಶಿಸಿದ ಕೂಡಲೆ ಅಲ್ಲಿಯ ಮುಕ್ತ ವಾತಾವರಣ ಅವರಿಗೆ ಅತ್ಯುತ್ಸಾಹವನ್ನಿತ್ತಿತು. ಆನಂದದಿಂದ ಎಲ್ಲವನ್ನೂ ಸುತ್ತಲೂ ನೋಡುತ್ತ ನಿಧಾನವಾಗಿ ಅವರು ಮುಖ್ಯ ಕಟ್ಟಡದ ಕಡೆಗೆ ಹೊರಟರು. ಅವರನ್ನು ಅವರಿಗಾಗಿ ನಿರ್ದಿಷ್ಟವಾದ

ಮೊದಲ ಮಹಡಿಯ ವಿಶಾಲವಾದ ಕೋಣೆಗೆ ಕರೆದುಕೊಂಡು ಹೋಗಲಾಯಿತು. ಸುತ್ತಲಿನ ಸೌಂದರ್ಯದಿಂದ ಆಕರ್ಷಿತರಾಗಿ ಅವರು ಕೊಠಡಿಯಿಂದ ಹೊರಗೆ ಬಂದು ದಕ್ಷಿಣಭಾಗದ ಛಾವಣಿಯ ಮೇಲೆ ನಿಂತು ತೋಟದ ಸೌಂದರ್ಯವನ್ನು ಸ್ವಲ್ಪಹೊತ್ತು ಆನಂದಿಸಿದರು. ಶ್ರೀಮಾತೆಯವರಿಗೂ ಕೂಡ ತುಂಬ ಸಂತೋಷವಾಯಿತು. ಶ್ಯಾಮ್ ಪುಕುರ್‌ದಲ್ಲಿಯಂತೆ ಅವರು ಗೂಡಿನಲ್ಲಿ ಮುದುಡಿಕೊಂಡಿರುವಂತೆ ಇರಬೇಕಾಗಿರಲಿಲ್ಲ. ಅವರಿಬ್ಬರೂ ಅಷ್ಟೊಂದು ಸಂತೋಷಪಟ್ಟಿದ್ದರಿಂದ ಭಕ್ತರ ಆನಂದಕ್ಕೆ ಕೊನೆಯೆ ಇರಲಿಲ್ಲ.

2. ಸಣ್ಣಪುಟ್ಟ ಅನನುಕೂಲತೆಗಳನ್ನು ಹೋಗಲಾಡಿಸಲು ಕೆಲವು ದಿನಗಳು ಹಿಡಿದುವು. ಆ ಮನೆಯು ಡಾಕ್ಟರ್‌ಗಳ ಮನೆಯಿಂದ ಮತ್ತು ಔಷಧಾಲಯಗಳಿಂದ ತುಂಬ ದೂರ ಇದ್ದುದರಿಂದ ಶ್ರೀರಾಮಕೃಷ್ಣರ ಸೇವೆಗೆ ನಿಯುಕ್ತರಾದವರು ಅವರ ಜೊತೆ ಇರಬೇಕಾದರೆ ಹೆಚ್ಚು ಹಣದ ಅವಶ್ಯಕತೆ ಇತ್ತು. ನರೇಂದ್ರನು ಇದರ ಬಗ್ಗೆ ಯೋಚಿಸಿದನು. ಇಷ್ಟೆ ಅಲ್ಲದೆ ಹೆಚ್ಚು ಜನರ ಆವಶ್ಯಕತೆಯೂ ಇತ್ತು. ಇದಕ್ಕೆಲ್ಲ ಸರಿಯಾದ ವ್ಯವಸ್ಥೆ ಮಾಡದಿದ್ದರೆ ಮುಂದೆ ತೊಂದರೆ ಉಂಟಾಗುತ್ತದೆ ಎಂದು ಅವನು ಆಲೋಚಿಸಿದ. ಬಲರಾಮ್, ಸುರೇಂದ್ರ, ರಾಮು, ಗಿರೀಶ, ಮಹೇಂದ್ರ ಮುಂತಾದವರು ಈ ಖರ್ಚನ್ನು ನಿಭಾಯಿಸುವುದು ಹೇಗೆಂಬುದರ ಬಗ್ಗೆ ಚರ್ಚಿಸಿದರು. ಆದರೆ ಜನರ ವಿಚಾರವಾಗಿ ನರೇಂದ್ರನೆ ಆಲೋಚಿಸಬೇಕಿತ್ತು. ಆದ್ದರಿಂದ ಅವನು ಮೊದಲಿಗಿಂತ ಹೆಚ್ಚು ಕಾಲವನ್ನು ಕಾಶೀಪುರದಲ್ಲಿ ಕಳೆಯಬೇಕಾಯಿತು. ಹೀಗೆ ಅವನೆ ದಾರಿ ತೋರಿಸದಿದ್ದರೆ ಉಳಿದ ಯುವಕ ಭಕ್ತರು ಮನೆಯವರ ಮನಸ್ತಾಪಕ್ಕೆ ಒಳಗಾಗಲು ಇಷ್ಟಪಡದೆ ಮತ್ತು ಅಧ್ಯಯನಕ್ಕೆ ತೊಂದರೆ ಆಗುವುದೆಂದು ಅವರು ಅಲ್ಲಿ ಬಂದಿರಲು ಹಿಂಜರಿಯುತ್ತಿದ್ದರು. ಏಕೆಂದರೆ ಶ್ಯಾಮ್‌ಪುಕುರ್‌ದಲ್ಲಿರುವಾಗ ಅವರು ಮನೆಗೆ ಹೋಗಿ ಊಟ ಮಾಡಿಕೊಂಡು ಬಂದು ಶ್ರೀರಾಮಕೃಷ್ಣರ ಸೇವೆಯಲ್ಲಿ ನಿರತರಾಗುತ್ತಿದ್ದರು. ಆದರೆ ಈಗ ಕಲ್ಕತ್ತೆಗೂ ಕಾಶೀಪುರಕ್ಕೂ ತುಂಬ ದೂರವಿರುವುದರಿಂದ ಹಾಗೆ ಮಾಡಲು ಸಾಧ್ಯವಿರಲಿಲ್ಲ.

3. ನರೇಂದ್ರನು ಆ ವರ್ಷ ಕಾನೂನು ಪರೀಕ್ಷೆಗೆ (ಬಿ.ಎಲ್.) ಸಿದ್ಧನಾಗುತ್ತಿದ್ದನು. ಅಧ್ಯಯನಕ್ಕಾಗಿ ಅವನು ಕಲ್ಕತ್ತೆಯಲ್ಲಿರುವುದು ಅತ್ಯಾವಶ್ಯಕವಾಗಿತ್ತು. ಅವನ ಪಿತ್ರಾರ್ಜಿತ ಆಸ್ತಿಯ ವಿಭಾಗಕ್ಕೆ ಸಂಬಂಧಪಟ್ಟಂತೆ ಅವನ ಸಂಬಂಧಿಕರು ಉಚ್ಚ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದ್ದರು. ಇದಕ್ಕಾಗಿಯೂ ಅವನು ಕಲ್ಕತ್ತೆಯಲ್ಲಿ ಇರುವುದು ಆವಶ್ಯಕವಾಗಿತ್ತು. ಆದರೆ ಇದನ್ನೆಲ್ಲ ಕಡೆಗಣಿಸಿ ಕಾನೂನು ಪುಸ್ತಕಗಳನ್ನು ತೆಗೆದುಕೊಂಡು, ಕಾಶೀಪುರಕ್ಕೆ ಬಂದನು–ಅಲ್ಲಿಯೇ ಎಷ್ಟು ಸಾಧ್ಯವೊ ಅಷ್ಟು ಓದುವುದೆಂದು. ಕಾನೂನು ಪರೀಕ್ಷೆಗೆ ಓದುವುದು ಮತ್ತು ಶ್ರೀರಾಮಕೃಷ್ಣರ ಸೇವೆ ಮಾಡುವುದು ಈ ಎರಡೂ ಆಸೆಗಳು ನರೇಂದ್ರನ ಮನಸ್ಸಿನಲ್ಲಿದ್ದುವು. ಬೇರೆ ಯಾವ ದಾರಿಯೂ ಇಲ್ಲದೆ ಕಾನೂನು ಪರೀಕ್ಷೆ ಪಾಸುಮಾಡಿ ತಾಯಿ ಮತ್ತು

ಸಹೋದರರಿಗಾಗಿ ಸ್ವಲ್ಪ ಹಣವನ್ನು ಕೊಡಿಟ್ಟು ಅನಂತರ ಪ್ರಪಂಚವನ್ನು ತ್ಯಜಿಸಿ ಸಾಧನೆಯ ಕಡೆ ಸಂಪೂರ್ಣ ಮನಸ್ಸನ್ನು ಹರಿಸುವುದೆಂದು ಅವನು ನಿರ್ಧರಿಸಿದನು. ಆದರೆ ನಮ್ಮಲ್ಲನೇಕರು ಈ ರೀತಿಯ ಸತ್ಸಂಕಲ್ಪಗಳನ್ನು ಮಾಡುತ್ತಾರೆ, ಆದರೆ ಎಷ್ಟು ಜನ ಇದರಲ್ಲಿ ಯಶಸ್ವಿ ಆಗುತ್ತಾರೆ ? ಅನೇಕರು ಪ್ರಪಂಚದ ಪ್ರವಾಹದಲ್ಲಿ ಸ್ವಲ್ಪದೂರ ಮುಂದುವರಿದು ಅನಂತರ ತಮ್ಮ ಅಂತಶ್ಶಕ್ತಿಯ ಬಲದಿಂದ ಅದರ ವಿರುದ್ಧವಾಗಿ ಈಜಿ ಕೊಂಡು ಸನ್ಮಾರ್ಗದ ಸುರಕ್ಷಸ್ಥಾನಕ್ಕೆ ಬಂದು ಬಿಡುತ್ತೇವೆ ಎಂದು ಯೋಜನೆ ಹಾಕು ತ್ತಾರೆ. ಆದರೆ ಎಷ್ಟು ಜನ ಆ ಸುಳಿಯಲ್ಲಿ ಸಿಕ್ಕಿದ ಮೇಲೆ ಯಶಸ್ವಿಯಾಗಿ ಅದರಿಂದ ಪಾರಾಗಬಲ್ಲರು ? ನರೇಂದ್ರನಾಥನು ಆಧ್ಯಾತ್ಮಿಕ ಸಾಧಕ ವರ್ಗದಲ್ಲಿ ಅತ್ಯುತ್ಕೃಷ್ಟ ವ್ಯಕ್ತಿ ಮತ್ತು ಶ್ರೀರಾಮಕೃಷ್ಣರ ಅಪಾರ ಕೃಪೆಗೆ ಪಾತ್ರನಾದವನು. ಅವನ ಈ ಸಂಕಲ್ಪದ ಗತಿಯೇನಾಗುವುದು ? ಅದೂ ಕೂಡ ಪ್ರಪಂಚದೊಡನೆ ಸಂಘರ್ಷಿಸಿ ಅದೇ ರೀತಿ ಚೂರ್ಣವಾಗಿ ಹೋಗುವುದೆ ? ಭವಿಷ್ಯತ್ತಿನಲ್ಲಿ ಬೇರೆ ರೂಪವನ್ನು ಪಡೆಯುವುದೆ ? ಶ್ರೀರಾಮಕೃಷ್ಣರ ಅದಮ್ಯ ಇಚ್ಛಾಶಕ್ತಿಯು ಹೇಗೆ ನರೇಂದ್ರನಾಥನು ಗುರಿಯನ್ನು ಮುಟ್ಟುವಂತೆ ಮಾಡಿತು ಎಂಬುದನ್ನು ನಾವು ಮುಂದೆ ನೋಡುತ್ತೇವೆ.

4. ನಾವು ಇದುವರೆವಿಗೂ ಭಕ್ತರು ಶ್ರೀರಾಮಕೃಷ್ಣರಿಗಾಗಿ ಏನು ಮಾಡುತ್ತಿರು ವರು ಎಂಬುದನ್ನು ಹೇಳಿದೆವು. ಈಗ ಒಂದು ಪ್ರಶ್ನೆ ಏಳಬಹುದು ; ಶ್ರೀರಾಮಕೃಷ್ಣರು ತಮ್ಮ ಬಗ್ಗೆ ಏನೂ ಯೋಚಿಸದೆ ಸಂಪೂರ್ಣ ಭಕ್ತರನ್ನು ಅವಲಂಬಿಸಿಕೊಂಡಿದ್ದರೆ ? ನಾವು ದಕ್ಷಿಣೇಶ್ವರದಲ್ಲಿ ಅವರ ಮನಸ್ಸು ಉನ್ನತ ಆಧ್ಯಾತ್ಮಿಕ ಸ್ಥಿತಿಯಲ್ಲಿದ್ದರೂ ದೈನಂದಿನ ಪ್ರತಿಯೊಂದು ಸಣ್ಣಪುಟ್ಟ ವಿಷಯದ ಕಡೆಗೂ ಗಮನ ಕೊಡುತ್ತಿದ್ದರು ಮತ್ತು ಪ್ರತಿಯೊಬ್ಬ ಭಕ್ತರ ಸಾಂಸಾರಿಕ ಮತ್ತು ಆಧ್ಯಾತ್ಮಿಕ ಯೋಗಕ್ಷೇಮಗಳ ಕಡೆಗೂ ತೀಕ್ಷ್ಣದೃಷ್ಟಿ ಇರಿಸಿದ್ದರು. ಅಂತಹವರು ಈಗ ಒಮ್ಮೆಯೆ ಸಂಪೂರ್ಣ ಉದಾಸೀನರಾಗಿ ಬಿಡುತ್ತಾರೆಯೆ ? ಇದಕ್ಕೆ ಉತ್ತರವಾಗಿ ಹೇಳಬಹುದು ಅವರು ಯಾವಾಗಲೂ ಎಲ್ಲ ದಕ್ಕೂ ಭಗವತಿಯನ್ನೇ ಆಶ್ರಯಿಸಿಕೊಂಡಿದ್ದವರು, ಹಾಗೂ ಅವರು ಈಗಲೂ ಹಾಗೆಯೆ ಇದ್ದರು. ಅವರು ಸ್ವೀಕರಿಸುತ್ತಿದ್ದ ಪ್ರತಿಯೊಬ್ಬ ಭಕ್ತರ ಸೇವೆಯೂ ಜಗನ್ಮಾತೆಯ ಇಚ್ಛೆಯಿಂದಲೆ ಮತ್ತು ಭಕ್ತರ ಹಿತಕ್ಕಾಗಿಯೆ—ಇದನ್ನು ಅವರು ಮನಗಂಡಿದ್ದರು. ಅವರ ಜೀವನ ಕಥೆಯನ್ನು ಹೇಳುತ್ತಾ ಹೋದಂತೆಲ್ಲ ಈ ವಿಷಯ ನಮಗೆ ಹೆಚ್ಚು ಮನ ದಟ್ಟಾಗುವುದು.

5. ಮತ್ತೆ ಭಕ್ತರುಗಳು ಮಾಡಿದ ಯಾವುದಾದರೂ ವ್ಯವಸ್ಥೆಯು ತಮ್ಮ ಮನ ಸ್ಸಿಗೆ ಒಪ್ಪಿಗೆಯಾಗದಿದ್ದರೆ ಅದನ್ನು ನೇರವಾಗಿ ಇಲ್ಲವೆ, ಅವರ ಮನಸ್ಸಿಗೆ ಕಷ್ಟವಾಗು ವಂತಿದ್ದರೆ ಪರೋಕ್ಷವಾಗಿ ಬದಲಾಯಿಸುತ್ತಿದ್ದರು. ಉದಾಹರಣೆಗಾಗಿ ಚಿಕಿತ್ಸೆಗಾಗಿ ಕಲ್ಕತ್ತೆಗೆ ಬರುವಾಗ ಬಲರಾಮನನ್ನು ಅವರು ಕರೆದು ಹೇಳಿದ್ದರು : "ನೋಡು, ಹತ್ತು ಜನರಿಂದ ಚಂದಾ ಎತ್ತಿ ನನ್ನ ದೈನಂದಿನ ಊಟದ ವ್ಯವಸ್ಥೆ ಮಾಡುವುದು ನನಗೆ ಸರಿಹೋಗುವುದಿಲ್ಲ. ಏಕೆಂದರೆ ಎಂದೂ ಹಾಗೆ ಮಾಡಿಲ್ಲ. ಹಾಗಾದರೆ ನೀನು ಕೇಳ

ಬಹುದು ದಕ್ಷಿಣೇಶ್ವರದ ಕಾಳೀ ಮಂದಿರದಲ್ಲಿ ಹಾಗೆ ನಡೆಯುತ್ತಿದೆಯಲ್ಲ ಎಂದು. ಈಗ ದೇವಸ್ಥಾನದ ಒಡೆತನ ಅನೇಕರಲ್ಲಿ ಹಂಚಿ ಹೋಗಿದೆ, ಅವರೆಲ್ಲರೂ ಸೇರಿ ದೇವಸ್ಥಾನದ ಸೇವೆಯನ್ನು ಮಾಡುತ್ತಿರುವರು. ಆದ್ದರಿಂದ ಒಂದು ದೃಷ್ಟಿಯಿಂದ ಅವರೆಲ್ಲರ ಚಂದಾ ಹಣದಿಂದ ನನ್ನ ಜೀವನೋಪಾಯ ನಡೆಯುತ್ತಿದೆಯೆನ್ನಬಹುದು. ಆದರೆ ನಿಜವಾಗಿಯೂ ಹಾಗೆ ಆಗುತ್ತಿಲ್ಲ. ಏಕೆಂದರೆ ನಾನು ಪೂಜೆ ಮಾಡುತ್ತಿದ್ದಾಗ ನನಗೆ ಸಿಕ್ಕುತ್ತಿದ್ದ ಏಳು ರೂಪಾಯಿ ತಿಂಗಳ ಸಂಬಳ ಮತ್ತು ದೇವಸ್ಥಾನದ ಪ್ರಸಾದ ನಾನು ಬದುಕಿರುವವರೆಗೂ ಮುಂದುವರಿಸಿಕೊಂಡು ಹೋಗಬೇಕೆಂದು ರಾಸಮಣಿ ಇರುವಾಗಲೇ ವ್ಯವಸ್ಥೆ ಆಗಿತ್ತು. ಆದ್ದರಿಂದ ನಿವೃತ್ತಿವೇತನದಿಂದ ನಾನು ಜೀವಿಸಿರುವೆನು ಎಂದು ಹೇಳಬಹುದು. ಆದ್ದ ರಿಂದ ನಾನು ಚಿಕಿತ್ಸೆಗಾಗಿ ದಕ್ಷಿಣೇಶ್ವರದ ಹೊರಗೆ ಇರುವಾಗ ನನ್ನ ಆಹಾರದ ಖರ್ಚನ್ನು ನೀನೆ ವಹಿಸಿಕೊ." ಮತ್ತೆ ಕಾಶೀಪುರ್ ತೋಟದ ಮನೆಯನ್ನು ಬಾಡಿಗೆಗೆ ತೆಗೆದುಕೊಂಡ ಮೇಲೆ ಅದರ ಬಾಡಿಗೆ ತಿಂಗಳಿಗೆ ಎಂಭತ್ತು ರೂಪಾಯಿ ಎಂದು ತಿಳಿದು ಅವರಿಗೆ ಆಶ್ಚರ್ಯವಾಯಿತು. ಇಷ್ಟೊಂದು ಹಣವನ್ನು ಭಕ್ತರು ಹೇಗೆ ಕೊಡಬಲ್ಲರು ? ಅವರು ತಮ್ಮ ದೊಡ್ಡ ಸಂಸಾರವನ್ನು ನೋಡಿಕೊಳ್ಳಬೇಕು ಮತ್ತು ಅನೇಕರಿಗೆ ತಮ್ಮ ಸಂಸಾರ ನಿರ್ವಹಣೆಯೆ ದೊಡ್ಡ ಕಷ್ಟವಾಗಿದೆ. ಇದನ್ನೆಲ್ಲ ಯೋಚಿಸಿ ಶ್ರೀರಾಮಕೃಷ್ಣರು ತಮ್ಮ ಪರಮ ಭಕ್ತನಾದ ಸುರೇಂದ್ರನಾಥನನ್ನು ಕರೆದು ಹೇಳಿದರು : "ನೋಡು ಸುರೇಂದ್ರ, ಅವರೆಲ್ಲ ಸಣ್ಣ ಗುಮಾಸ್ತೆಯ ಕೆಲಸ ಮುಂತಾದುವುಗಳನ್ನು ಮಾಡುತ್ತಿರುವವರು. ತುಂಬ ಕಷ್ಟದಿಂದ ತಮ್ಮ ಸಂಸಾರವನ್ನು ನೋಡಿಕೊಳ್ಳಬೇಕಾಗಿದೆ. ಅಷ್ಟೊಂದು ಹಣವನ್ನು ಅವರು ಎಲ್ಲಿಂದ ತರುವುದು ? ಆದ್ದರಿಂದ ಪೂರಾ ಬಾಡಿಗೆಯನ್ನು ನೀನೆ ಕೊಟ್ಟು ಬಿಡು." ಸುರೇಂದ್ರನು ಕೈ ಜೋಡಿಸಿ "ನಿಮ್ಮ ಅಪ್ಪಣೆಯಂತಾಗಲಿ" ಎಂದು ಸಂತೋಷ ದಿಂದ ಒಪ್ಪಿಕೊಂಡನು. ಒಂದು ದಿನ ಶ್ರೀರಾಮಕೃಷ್ಣರು ನಿಶ್ಶಕ್ತಿಯಿಂದಾಗಿ ಶೌಚಾದಿ ಗಳಿಗೆ ಹೋಗುವುದು ಕಷ್ಟವಾಗುತ್ತದೆ ಎಂದು ನಮಗೆ ಹೇಳಿದರು. ಲಾಟುವಿಗೆ ಇದನ್ನು ಕೇಳಿ ತುಂಬಾ ನೋವಾಯಿತು. ಅವನು ಕೂಡಲೆ ಕೈ ಮುಗಿದು ತನ್ನ ಹರಕುಮುರುಕು ಬಂಗಾಳಿಯಲ್ಲಿ "ಮಹಾಶಯರೆ, ನಾನಿಲ್ಲಿದ್ದೇನೆ, ನಿಮ್ಮ ಜಾಡಮಾಲಿ" ಎಂದು ಹೇಳಿ ಆ ಗಂಭೀರ ಪರಿಸ್ಥಿತಿಯಲ್ಲಿಯೂ ನಾವೆಲ್ಲರೂ ಮುಗುಳ್ನಗುವಂತೆ ಮಾಡಿದನು. ಹೀಗೆ ಶ್ರೀರಾಮಕೃಷ್ಣರು ಭಕ್ತರಿಗೆ ಅನುಕೂಲವಾಗುವ ರೀತಿಯಲ್ಲಿ ವ್ಯವಸ್ಥೆಯನ್ನು ಬದಲಾ ಯಿಸುತ್ತಿದ್ದರು.

6. ಕ್ರಮೇಣ ಎಲ್ಲ ವಿಷಯದಲ್ಲೂ ಸರಿಯಾದ ವ್ಯವಸ್ಥೆ ಆಯಿತು. ಸೇವೆಯ ಆವಶ್ಯಕತೆಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಯುವಕ ಭಕ್ತರು ಬರತೊಡಗಿದರು. ನರೇಂದ್ರನು ಅವರನ್ನೆಲ್ಲ ಧ್ಯಾನ, ಅಧ್ಯಯನ, ವೇದಾಂತ ಚರ್ಚೆ ಇತ್ಯಾದಿಗಳಲ್ಲಿ ತೊಡಗಿ ಸಿದನು. ಅವರೆಲ್ಲ ಇದರಲ್ಲಿ ಎಂಥ ಆನಂದವನ್ನು ಪಡೆಯುತ್ತಿದ್ದರೆಂದರೆ ದಿನಗಳು ಉರುಳಿದ್ದೇ ಗೊತ್ತಾಗುತ್ತಿರಲಿಲ್ಲ. ಶ್ರೀರಾಮಕೃಷ್ಣರ ಶುದ್ಧ ಮತ್ತು ನಿಃಸ್ವಾರ್ಥ ಪ್ರೀತಿ ಒಂದು ಕಡೆ, ನರೇಂದ್ರನ ಅದ್ಭುತ ಸ್ನೇಹ ಮತ್ತು ಉದಾತ್ತ ಸಂಗ ಇನ್ನೊಂದು ಕಡೆ–

ಇವು ಅವರೆಲ್ಲರನ್ನೂ ಮಧುರವೂ ಕೋಮಲವೂ ಆದರೆ ಅಷ್ಟೇ ಕಠಿಣವೂ ಆದ ಬಂಧನ ದಿಂದ ಬಂಧಿಸಿದುವು. ತಮ್ಮ ಕೌಟುಂಬಿಕ ವ್ಯಕ್ತಿಗಳಿಗಿಂತಲೂ ಅಧಿಕವಾಗಿ ತಾವು ಪರಸ್ಪರ ಸಂಬಂಧಿಗಳೆಂದು ಅವರೆಲ್ಲರೂ ಭಾವಿಸುವಂತಾಯಿತು. ಈ ಸಂಬಂಧ ಎಷ್ಟು ಗಾಢವಾಗಿ ತ್ತೆಂದರೆ ಅವರಲ್ಲಿ ಯಾರಾದರೂ ಒಬ್ಬನು ಯಾವುದೊ ತುರ್ತು ಕೆಲಸಕ್ಕಾಗಿ ಮನೆಗೆ ಹೋಗಬೇಕಾದರೆ ಅವನಿಗೆ ಅಲ್ಲಿ ಬಹಳಕಾಲ ಇರಲಾಗದೆ ಹಿಂದಿರುಗಿ ಬಂದುಬಿಡು ತ್ತಿದ್ದ. ಸಂಖ್ಯೆ ಹನ್ನೆರಡಕ್ಕಿಂತ ಜಾಸ್ತಿ ಇರಲಿಲ್ಲ.* ಅವರೆಲ್ಲರೂ ಶ್ರೀರಾಮಕೃಷ್ಣರ ಪಾರ್ಥಿವ ಜೀವನದ ಕೊನೆಯವರೆವಿಗೂ ಅವರೊಡನಿದ್ದು ಪ್ರಪಂಚವನ್ನು ತ್ಯಜಿಸಿ ತಮ್ಮ ಸೇವಾವ್ರತವನ್ನು ಪೂರ್ತಿಗೊಳಿಸಿದರು. ತಮ್ಮ ಜೀವನದಷ್ಟೇ ಗುರುವನ್ನು ಪ್ರೀತಿಸಿದರು ಮತ್ತು ಎಲ್ಲ ರೀತಿಯ ಕೆಲಸವನ್ನೂ ಅದ್ಭುತ ದಕ್ಷತೆಯಿಂದ ನೆರವೇರಿಸಿ ದರು.

7. ಕಾಶೀಪುರಕ್ಕೆ ಬಂದು ಕೆಲವು ದಿನಗಳ ನಂತರ ಶ್ರೀರಾಮಕೃಷ್ಣರು ಒಂದು ದಿನ ಮನೆಯಿಂದ ಕೆಳಗಿಳಿದು ಬಂದು ತೋಟದಲ್ಲಿ ಸ್ವಲ್ಪ ಹೊತ್ತು ಓಡಾಡಿದರು. ಪ್ರತಿ ನಿತ್ಯ ಹೀಗೆ ಮಾಡಲು ಸಾಧ್ಯವಾದರೆ ಬೇಗನೆ ಆರೋಗ್ಯವಂತರೂ ಶಕ್ತಿವಂತರೂ ಆಗ ಬಹುದೆಂದು ಭಕ್ತರು ಭಾವಿಸಿ ಆನಂದವನ್ನು ವ್ಯಕ್ತಪಡಿಸಿದರು. ಆದರೆ ಹೊರಗಿನ ಶೀತ ಗಾಳಿಯ ಪರಿಣಾಮವಾಗಿಯೊ ಅಥವಾ ಬೇರಾವ ಕಾರಣದಿಂದಲೊ ಮರುದಿನ ರೋಗವು ಉಲ್ಬಣವಾಗಿ ಮತ್ತೆ ಕೆಲವು ದಿನ ಆ ರೀತಿ ಮಾಡಲಾಗಲಿಲ್ಲ. ಎರಡು ಮೂರು ದಿನದಲ್ಲಿ ಅವರು ಮತ್ತೆ ಸ್ವಲ್ಪ ಆರೋಗ್ಯವಂತರಾದರೂ ನಿಶ್ಶಕ್ತಿ ಮುಂದುವರಿಯಿತು. ಆಡಿನ ಮರಿಯ ಮಾಂಸದ ನೀರನ್ನು ಅವರಿಗೆ ಕೊಡಬೇಕೆಂದು ಡಾಕ್ಟರ್ ಸೂಚಿಸಿದರು. ಅದನ್ನು ತೆಗೆದುಕೊಂಡ ಮೇಲೆ ಅವರ ನಿಶ್ಶಕ್ತಿ ಎಷ್ಟೊ ಕಡಮೆಯಾಯಿತು. ಮೊದಲಿಗಿಂತ ಹೆಚ್ಚು ಆರೋಗ್ಯವಂತರಾದರು. ಇಲ್ಲಿಗೆ ಬಂದು ಹದಿನೈದು ದಿನಗಳಲ್ಲಿ ಅವರ ಆರೋಗ್ಯ ಎಷ್ಟೋ ಉತ್ತಮವಾದಂತೆ ಕಂಡುಬಂತು. ಒಂದು ದಿನ ಡಾಕ್ಟರ್ ಮಹೇಂದ್ರಲಾಲ್ ಬಂದು ಬದಲಾವಣೆಯನ್ನು ಕಂಡು ಸಂತೋಷ ಪಟ್ಟನು.

8. ಯುವಕ ಸೇವಕರು ಡಾಕ್ಟರಿಗೆ ವರದಿ ಒಪ್ಪಿಸಲು ಮತ್ತು ಮಾಂಸ ತರಲು ಪ್ರತಿ ದಿನ ಕಲ್ಕತ್ತೆಗೆ ಹೋಗಬೇಕಾಗಿತ್ತು. ಈ ಎರಡೂ ಕರ್ತವ್ಯಗಳನ್ನು ಮಾಡುವ ಭಾರ ಮೊದಲು ಒಬ್ಬ ವ್ಯಕ್ತಿಯ ಮೇಲಿತ್ತು. ಇದರಿಂದ ತುಂಬ ಅನನುಕೂಲತೆ ಗಳುಂಟಾದುವು. ಆದ್ದರಿಂದ ಈ ಎರಡು ಅತಿಮುಖ್ಯ ಕಾರ್ಯಗಳನ್ನು ಮಾಡಲು

---

* ನರೇಂದ್ರ, ರಾಖಾಲ್, ನಿರಂಜನ, ಯೋಗೀಂದ್ರ, ಲಾಟು, ತಾರಕ್, ಗೋಪಾಲದಾದ, ಕಾಲೀ, ಶಶೀ, ಶರತ್ ಮತ್ತು ಚಿಕ್ಕಗೋಪಾಲ. ಶಾರದನು ತನ್ನ ತಂದೆಯ ಕಾಯಿಲೆಯಿಂದಾಗಿ ಮಧ್ಯೆ ಮಧ್ಯೆ ಮನೆಗೆ ಹೋಗಿ ಬರುತ್ತಿದ್ದನು. ಹರೀಶನು ಕೆಲವು ಕಾಲವಿದ್ದು ಮನೆಗೆ ಹಿಂತಿರುಗಿದ ಮೇಲೆ ಬುದ್ಧಿ ಭ್ರಮಣೆಗೆ ಒಳಗಾದನು. ಹರಿ, ತುಲಸೀ ಮತ್ತು ಗಂಗಾಧರ ಮನೆಯಲ್ಲಿದ್ದು ತಪಸ್ಸು ಮಾಡುತ್ತ ಆಗಾಗ ಬಂದುಹೋಗುತ್ತಿದ್ದರು. ಇನ್ನಿಬ್ಬರು ಕೆಲವು ದಿನಗಳನಂತರ ಮಹಿಮಚರಣನ ಜತೆ ಸೇರಿ ಅವನ ಮನೆಯಲ್ಲೇ ಇರಲು ಹೋದರು.

## ಶ್ರೀರಾಮಕೃಷ್ಣರ ಸಂನ್ಯಾಸೀ ಶಿಷ್ಯರು


ಸ್ವಾಮಿ ಬ್ರಹ್ಮಾನಂದ


ಸ್ವಾಮಿ ಶಾರದಾನಂದ


ಸ್ವಾಮಿ ತುರೀಯಾನಂದ


ಸ್ವಾಮಿ ಪ್ರೇಮಾನಂದ


ಸ್ವಾಮಿ ಶಿವಾನಂದ


ಸ್ವಾಮಿ ರಾಮಕೃಷ್ಣಾನಂದ


ಸ್ವಾಮಿ ಅಖಂಡಾನಂದ


ಸ್ವಾಮಿ ಅದ್ಭುತಾನಂದ


ಸ್ವಾಮಿ ತ್ರಿಗುಣಾತೀತಾನಂದ


ಸ್ವಾಮಿ ಅದ್ವೈತಾನಂದ


ಸ್ವಾಮಿ ಯೋಗಾನಂದ


ಸ್ವಾಮಿ ವಿಜ್ಞಾನಾನಂದ


ಸ್ವಾಮಿ ಸುಬೋಧಾನಂದ


ಸ್ವಾಮಿ ನಿರಂಜನಾನಂದ


ಸ್ವಾಮಿ ಅಭೇದಾನಂದ

ಇಬ್ಬರನ್ನು ಕಳಿಸಬೇಕೆಂದು ನಿರ್ಧರಿಸಲಾಯಿತು. ಬೇರೆ ಏನಾದರೂ ಕಾರಣಕ್ಕಾಗಿ ಕಲ್ಕತ್ತೆಗೆ ಹೋಗಬೇಕಿದ್ದರೆ ಮೂರನೆಯವನೊಬ್ಬನನ್ನು ಕಳಿಸುತ್ತಿದ್ದರು. ಮನೆಯನ್ನು ಶುದ್ಧಗೊಳಿಸುವುದು ಪೇಟೆಗೆ ಹೋಗುವುದು ಹಗಲು ರಾತ್ರಿ ಶ್ರೀರಾಮಕೃಷ್ಣರ ವೈಯಕ್ತಿಕ ಸೇವೆ ಮಾಡುವುದು ಇವೇ ಮುಂತಾದುವುಗಳನ್ನು ಯುವಕಭಕ್ತರು ಪರ್ಯಾಯ ಕ್ರಮದಲ್ಲಿ ಮಾಡುತ್ತಿದ್ದರು. ನರೇಂದ್ರನು ಈ ಎಲ್ಲ ಕೆಲಸಗಳ ಮೇಲ್ವಿಚಾರಣೆ ನೋಡಿ ಕೊಳ್ಳುತ್ತಿದ್ದನು ಮತ್ತು ಏನಾದರೂ ತುರ್ತು ಕೆಲಸ ಬಂದರೆ ಅದನ್ನು ಮಾಡುತ್ತಿದ್ದನು.

9. ಶ್ರೀಮಾತೆಯವರು ಮೊದಲಿನಂತೆಯೆ ಶ್ರೀರಾಮಕೃಷ್ಣರ ಪಥ್ಯಾಹಾರವನ್ನು ಸಿದ್ಧಪಡಿಸುತ್ತಿದ್ದರು. ಶ್ರೀರಾಮಕೃಷ್ಣರಿಗಾಗಿ ಏನಾದರು ವಿಶೇಷ ಆಹಾರ ತಯಾರಿಸ ಬೇಕಾಗಿದ್ದರೆ ತಯಾರಿಸುವ ವಿಧಾನವನ್ನು ಡಾಕ್ಟರ್ ಸೂಚಿಸುತ್ತಿದ್ದನು. ಹಿರಿಯ ಗೋಪಾಲನಂತಹ ಒಂದಿಬ್ಬರು ಭಕ್ತರೊಡನೆ ಶ್ರೀಮಾತೆಯವರು ಅವಗುಂಠನವಿಲ್ಲದೆ ಮುಕ್ತವಾಗಿ ಮಾತನಾಡುತ್ತಿದ್ದರು. ಅವರಲ್ಲಿ ಯಾರಾದರೂ ಒಬ್ಬರು ಹೋಗಿ ಅವನ್ನು ಮಾಡುವ ವಿಧಾನವನ್ನು ವಿವರಿಸುತ್ತಿದ್ದರು. ಆಹಾರ ಸಿದ್ಧವಾದ ಮೇಲೆ ಶ್ರೀಮಾತೆ ಯವರೆ ದಿನಕ್ಕೆ ಎರಡು ಬಾರಿ ಶ್ರೀರಾಮಕೃಷ್ಣರಿಗೆ ಊಟ ತಂದುಕೊಡುತ್ತಿದ್ದರು. ಶ್ರೀರಾಮಕೃಷ್ಣರು ಊಟ ಮುಗಿಸುವವರೆವಿಗೂ ಅಲ್ಲೇ ಕಾದುಕೊಂಡಿದ್ದು ತಟ್ಟೆ ಬಟ್ಟಲುಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಶ್ರೀರಾಮಕೃಷ್ಣರ ಸೋದರಸೊಸೆ ಯಾದ ಲಕ್ಷ್ಮೀದೇವಿಯನ್ನು ಶ್ರೀಮಾತೆಯವರಿಗೆ ಸಹಾಯಮಾಡಲು ಕಾಶೀಪುರಕ್ಕೆ ಕರೆದುಕೊಂಡು ಬರಲಾಯಿತು. ಇಷ್ಟೇ ಅಲ್ಲದೆ ಶ್ರೀರಾಮಕೃಷ್ಣರನ್ನು ನೋಡಲು ಬರು ತ್ತಿದ್ದ ಭಕ್ತ ಮಹಿಳೆಯರು ಕೆಲವೊಮ್ಮೆ ಶ್ರೀಮಾತೆಯವರೊಡನೆ ಕೆಲವು ಗಂಟೆಗಳ ಕಾಲ ಅಥವಾ ಒಂದೆರಡು ದಿನಗಳ ಕಾಲ ಕಳೆಯುತ್ತಿದ್ದರು. ಹೀಗೆ ಎಲ್ಲವೂ ಸುಸೂತ್ರವಾಗಿ ನಡೆದುಕೊಂಡು ಹೋಗುತ್ತಿತ್ತು.

10. ಗೃಹಸ್ಥ ಭಕ್ತರಲ್ಲೂ ಕೂಡ ಕಾತರತೆ ಇತ್ತು. ಅವರು ರಾಮನ ಮನೆ ಯಲ್ಲೋ ಅಥವಾ ಗಿರೀಶನ ಮನೆಯಲ್ಲೋ ಒಟ್ಟುಸೇರಿ ತಮ್ಮ ಪ್ರಿಯ ಗುರುವಿಗೆ ವೈಯಕ್ತಿಕ ಅಥವಾ ಆರ್ಥಿಕವಾಗಿ ಸೇವೆಯನ್ನು ಉತ್ತಮ ರೀತಿಯಲ್ಲಿ ಮಾಡುವುದು ಹೇಗೆಂಬುದರ ಬಗ್ಗೆ ಚರ್ಚಿಸುತ್ತಿದ್ದರು. ಪ್ರತಿ ತಿಂಗಳೂ ಒಂದೇ ರೀತಿ ಸಮಯವನ್ನೂ ಹಣವನ್ನೂ ವ್ಯಯಿಸಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ತಿಂಗಳಿಗೆ ಒಂದೆ ರಡು ಬಾರಿ ಅವರೆಲ್ಲ ಕಲೆತು ಒಂದು ಸೂಕ್ತ ನಿರ್ಧಾರಕ್ಕೆ ಬರಬೇಕಾಗಿತ್ತು.

11. ಎಲ್ಲವೂ ಒಂದು ಸುವ್ಯವಸ್ಥಿತ ರೀತಿಯಲ್ಲಿ ನಡೆದುಕೊಂಡು ಹೋಗುವ ವರೆಗೂ ಯುವಕ ಭಕ್ತರನೇಕರು ಸ್ವಲ್ಪಹೊತ್ತಿನ ಮಟ್ಟಿಗೂ ಮನೆಗೆ ಹೋಗಲಿಲ್ಲ. ಅನಿ ವಾರ್ಯವಾಗಿ ಹೋಗಲೇಬೇಕಾದವರು ಕೆಲವೇ ಗಂಟೆಗಳಲ್ಲಿ ಹಿಂದಿರುಗುತ್ತಿದ್ದರು ಮತ್ತು ಶ್ರೀರಾಮಕೃಷ್ಣರು ಮತ್ತೆ ಆರೋಗ್ಯವಂತರಾಗುವವರೆಗೆ ಆಗಾಗ ಮನೆಗೆ ಬರ ಲಾಗುವುದಿಲ್ಲವೆಂದು ಹೇಳಿಕಳಿಸುತ್ತಿದ್ದರು. ಮನೆಯವರಾರೂ ಇದಕ್ಕೆ ಒಪ್ಪಿಗೆ ಇತ್ತಿರ ಲಿಲ್ಲವೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ. ಆದರೆ ಅವರಾದರೂ ಮಾಡುವುದೇನು ?

ಅವರು ಹೇಳುವಂತೆ ಆ ಹುಡುಗರ ತಲೆ ಕೆಟ್ಟು ಹೋಗಿದೆ ! ಮಧ್ಯೆ ಪ್ರವೇಶಿಸಿದರೆ ಪರಿಸ್ಥಿತಿ ಇನ್ನೂ ಹದಗೆಡುವುದೆಂದು ಅವರು ಭಾವಿಸಿದರು. ಆದ್ದರಿಂದ ಅವರು ಇಷ್ಟ ಬಂದಂತೆ ಮಾಡಲೆಂದು ಸುಮ್ಮನಿದ್ದರು. ಆದರೆ ಪರೋಕ್ಷವಾಗಿ ಬೇರೆ ಬೇರೆ ವಿಧಾನಗಳ ಮೂಲಕ ಅವರ ಮನಸ್ಸನ್ನು ತಿರುಗಿಸಲು ಪ್ರಯತ್ನಿಸುತ್ತಿದ್ದರು. ಗೃಹಸ್ಥ ಮತ್ತು ಬ್ರಹ್ಮಚಾರಿ ಭಕ್ತರೆಲ್ಲರೂ ಒಮ್ಮನಸ್ಸಿನಿಂದ ಸರಿಯಾದ ರೀತಿಯಲ್ಲಿ ಶ್ರೀರಾಮಕೃಷ್ಣರ ಸೇವೆಯನ್ನು ಮಾಡಿಕೊಂಡು ಹೋಗುತ್ತಿರಲು ಎಲ್ಲವೂ ಸುಗಮವಾಗಿ ನಡೆದುಕೊಂಡು ಹೋಗುತ್ತಿತ್ತು.

12. ಈಗ ನರೇಂದ್ರನು ಎಷ್ಟೊ ನಿಶ್ಚಿಂತನಾದನು ಮತ್ತು ತನ್ನ ಬಗ್ಗೆ ಆಲೋಚಿಸತೊಡಗಿದನು. ಒಂದೆರಡು ದಿನ ಮನೆಗೆ ಹೋಗಬೇಕೆಂದು ಅವನು ನಿರ್ಧರಿಸಿದನು. ರಾತ್ರಿ ನಮಗೆ ಈ ವಿಷಯವನ್ನು ತಿಳಿಸಿ ಮಲಗಲು ಹೋದನು. ಆದರೆ ನಿದ್ರೆ ಬರಲಿಲ್ಲ. ಸ್ವಲ್ಪ ಹೊತ್ತಿನಲ್ಲಿಯೆ ಮೇಲೆದ್ದನು. ಗೋಪಾಲ ಮತ್ತು ಒಂದಿಬ್ಬರು ಎಚ್ಚರಿರುವುದನ್ನು ಕಂಡು ಅವನು ಹೇಳಿದನು : "ಬನ್ನಿ, ತೋಟದಲ್ಲಿ ಸ್ವಲ್ಪ ಧೂಮಪಾನ ಮಾಡುತ್ತ ಓಡಾಡೋಣ." ಅವನು ಓಡಾಡುವ ಸಂದರ್ಭದಲ್ಲಿ ಹೇಳಿದ : "ಶ್ರೀರಾಮಕೃಷ್ಣರು ಮಾರಣಾಂತಿಕ ಖಾಯಿಲೆಯಿಂದ ನರಳುತ್ತಿದ್ದಾರೆ. ಅವರು ದೇಹವನ್ನು ತ್ಯಜಿಸಬೇಕೆಂದು ನಿರ್ಧರಿಸಿರುವರೋ ಏನೊ ? ಸಮಯ ಇರುವಾಗಲೆ ಸೇವೆ, ಧ್ಯಾನ, ಭಕ್ತಿ ಸಾಧನೆಗಳ ಮೂಲಕ ಎಷ್ಟು ಆಧ್ಯಾತ್ಮಿಕ ಪ್ರಗತಿ ಸಾಧಿಸಲು ಸಾಧ್ಯವೊ ಅಷ್ಟು ಮಾಡೋಣ. ಇಲ್ಲದಿದ್ದರೆ ಅವರು ತೀರಿಹೋದ ಮೇಲೆ ನಾವು ಮರುಗಬೇಕಾಗುತ್ತದೆ. ಭಗವಂತನನ್ನು ಕರೆಯಲು ಆಸೆಗಳೆಲ್ಲ ಪೂರ್ತಿಯಾಗುವವರೆಗೂ ಕಾಯಬೇಕೇನು ? ನಾವು ಈಗ ಹಾಗೆಯೆ ಮಾಡುತ್ತಿರುವೆವು. ಆಸೆಗಳ ಬಲೆಗೆ ಹೆಚ್ಚು ಹೆಚ್ಚು ಸಿಕ್ಕಿಕೊಳ್ಳುತ್ತಿದ್ದೇವೆ. ಈ ಆಸೆಗಳೆ ವಿನಾಶಕ್ಕೆ ಮತ್ತೆ ಸಾವಿಗೆ ಒಯ್ಯುವುವು. ಆಸೆಗಳನ್ನು ಬಿಟ್ಟುಬಿಡೋಣ ; ಹೌದು ಅವನ್ನೆಲ್ಲ ತೊರೆದುಬಿಡೋಣ."

13. ಪೌಷ ಮಾಸದ ಶೀತರಾತ್ರಿಯು ಮೌನವಾಗಿ ಕೊನೆಗೊಳ್ಳುತ್ತಿದೆ. ಅನಂತ ನೀಲಾಕಾಶವು ನೂರಾರು ಸಾವಿರಾರು ತಾರಾ ನೇತ್ರಗಳಿಂದ ಭೂಮಿಯನ್ನು ದಿಟ್ಟಿಸಿ ನೋಡುತ್ತಿದೆ. ಮರದ ಕೆಳಗೆ ನೆಲವು ಬಿಸಿಲಿನಿಂದ ಒಣಗಿದ್ದು ಕುಳಿತುಕೊಳ್ಳುವುದಕ್ಕೆ ಯೋಗ್ಯವಾಗುವಂತೆ ಶುದ್ಧವಾಗಿತ್ತು. ವೈರಾಗ್ಯದ ಕಡೆಗೆ ವಾಲಿದ್ದ ಧ್ಯಾನ ಪ್ರವಣವಾದ ನರೇಂದ್ರನ ಮನಸ್ಸು ಹೊರಗಿನ ನೀರವತೆಯ ಪ್ರಭಾವದಿಂದ ತನ್ನಲ್ಲಿಯೆ ಲೀನವಾಗುತ್ತಿತ್ತು. ಮುಂದೆ ಹೋಗುವುದರ ಬದಲು ಒಂದು ಮರದ ಕೆಳಗೆ ಕುಳಿತುಬಿಟ್ಟನು. ಸ್ವಲ್ಪ ಹೊತ್ತಿನಲ್ಲಿಯೆ ಒಣಹುಲ್ಲಿನ ಒಂದು ರಾಶಿಯು ಮತ್ತು ಒಣಮರದ ಕೊಂಬೆಗಳು ಕಾಣಿಸಿದುವು. ಆಗ ಅವನು ಹೇಳಿದ : "ಅದಕ್ಕೆ ಬೆಂಕಿ ಹಚ್ಚಿ. ಸಾಧುಗಳು ಮರದ ಕೆಳಗೆ ಧುನಿ ಹಚ್ಚುತ್ತಾರೆ. ನಾವೂ ಕೂಡ ಧುನಿಯನ್ನು ಹಚ್ಚಿ ನಮ್ಮ ಒಳಗಿನ ಆಸೆಗಳನ್ನು ಸುಟ್ಟುಬಿಡೋಣ." ಬೆಂಕಿ ಹಚ್ಚಲಾಯಿತು, ಧುನಿ ಸಿದ್ಧವಾಯಿತು. ಸುತ್ತಮುತ್ತಲಿನಿಂದಲೂ ಒಣ ಸೌದೆಯನ್ನು ತಂದು ನಾವು ಆ ಬೆಂಕಿಗೆ ಆಹುತಿ ಇತ್ತೆವು. ಹಾಗೆ ಮಾಡು

ವಾಗ ನಮ್ಮ ಮನಸ್ಸಿನ ಆಸೆಗಳನ್ನೆ ಆಹುತಿಯಾಗಿ ನೀಡುತ್ತಿರುವೆವೆಂದು ಭಾವಿಸಿದೆವು. ಅದು ನಮಗೆ ಅದ್ಭುತವಾದ ಆನಂದವನ್ನಿತ್ತಿತ್ತು. ನಮ್ಮ ಪ್ರಾಪಂಚಿಕ ಆಸೆಗಳೆಲ್ಲ ಸುಟ್ಟು ಹೋಗಿ ನಮ್ಮ ಮನಸ್ಸು ಶುದ್ಧವೂ ಶಾಂತವೂ ಆಗಿ ನಾವು ದೇವರನ್ನು ಸಮೀಪಿಸುತ್ತಿರುವೆವು ಎಂದೆನಿಸಿತು. "ಹಾ ! ನಾವೇಕೆ ಹಿಂದೆಯೆ ಇದನ್ನು ಮಾಡಲಿಲ್ಲ ? ಇದು ಎಂಥ ಆನಂದವನ್ನು ಕೊಡುತ್ತಿದೆ" ಎಂದು ಆಲೋಚಿಸಿದೆವು. ಅವಕಾಶ ದೊರೆತಾಗಲೆಲ್ಲ ಈ ರೀತಿ ಧುನಿ ಹೊತ್ತಿಸಬೇಕೆಂದು ನಿರ್ಧರಿಸಿದೆವು. ಹೀಗೆ ಎರಡು ಮೂರು ಗಂಟೆಗಳು ಕಳೆದವು. ಇನ್ನೇನೂ ಒಣಕಟ್ಟಿಗೆ ಸಿಕ್ಕದಿರಲು ಬೆಂಕಿಯನ್ನು ಆರಿಸಿ ನಮ್ಮ ನಮ್ಮ ಸ್ಥಳಗಳಿಗೆ ಹೋಗಿ ಮಲಗಿಕೊಂಡೆವು. ಆಗ ಬೆಳಗ್ಗೆ ನಾಲ್ಕು ಗಂಟೆ. ಧುನಿ ಹಚ್ಚುವ ಕಾರ್ಯಕ್ರಮದಲ್ಲಿ ಭಾಗವಹಿಸದಿದ್ದವರು ಬೆಳಗ್ಗೆ ಈ ವಿಷಯವನ್ನು ತಿಳಿದು ವ್ಯಥೆಪಟ್ಟರು, ಅವರನ್ನು ಕರೆಯದುದಕ್ಕಾಗಿ ಶೋಕಿಸಿದರು. ಅವರಿಗೆ ಸಮಾಧಾನ ಮಾಡಲು ನರೇಂದ್ರ ಹೇಳಿದ : "ನಾವು ಅದನ್ನು ಯೋಜನೆ ಹಾಕಿ ಮಾಡಿದ್ದಲ್ಲ ಮತ್ತು ಅಷ್ಟೊಂದು ಆನಂದ ಸಿಕ್ಕುತ್ತದೆಂದು ನಮಗೆ ಗೊತ್ತಿರಲಿಲ್ಲ. ನಮಗೆ ಸಮಯ ಸಿಕ್ಕಿದಾಗಲೆಲ್ಲ ಮುಂದೆ ನಾವೆಲ್ಲರೂ ಸೇರಿ ಧುನಿ ಹಚ್ಚಿಸೋಣ. ನೀವು ಇದಕ್ಕಾಗಿ ಚಿಂತಿಸಬೇಕಾಗಿಲ್ಲ."

ನರೇಂದ್ರನು ಮೊದಲೇ ನಿರ್ಧರಿಸಿದಂತೆ ಬೆಳಗ್ಗೆ ಕಲ್ಕತ್ತೆಗೆ ಹೋದನು. ಒಂದು ದಿನದ ನಂತರ ಕೆಲವು ಕಾನೂನು ಪುಸ್ತಕಗಳೊಂದಿಗೆ ಹಿಂದಿರುಗಿದನು.

# ಹದಿಮೂರನೆಯ ಅಧ್ಯಾಯ

## ತೃತೀಯ ಪಾದ

## ಆತ್ಮಪ್ರಕಾಶ ಮತ್ತು ಅಭಯದಾನ

**1. ಡಾ. ರಾಜೇಂದ್ರನ ಚಿಕಿತ್ಸೆಯಿಂದ ಸ್ವಲ್ಪ ಸುಧಾರಣೆ 2. ಜನವರಿ ಒಂದರಂದು ಶ್ರೀರಾಮಕೃಷ್ಣರು ಭಕ್ತರ ಮೇಲೆ ವಿಶೇಷ ಅನುಗ್ರಹ ತೋರಿದರು 3. ಅಂದು ಶ್ರೀರಾಮಕೃಷ್ಣರ ಆತ್ಮಪ್ರಕಾಶ 4. ಈ ಆತ್ಮ-ಪ್ರಕಾಶದ ಸಂದರ್ಭದಲ್ಲಿ ಯಾರು ಯಾರು ಇದ್ದರು ? 5. ವೈಕುಂಠನಾಥನು ಆಧ್ಯಾತ್ಮಿಕ ಅನುಭವಕ್ಕಾಗಿ ಬೇಡು ತ್ತಾನೆ 6. ಶ್ರೀರಾಮಕೃಷ್ಣರ ಸ್ಪರ್ಶದಿಂದ ಅವನಿಗಾದ ಅನುಭವ 7. ಯುಕ್ತಸಿದ್ಧತೆ ಯಿಲ್ಲದೆ ಆಧ್ಯಾತ್ಮಿಕ ಅನುಭವವನ್ನು ಉಳಿಸಿಕೊಳ್ಳಲಾಗುವುದಿಲ್ಲ**

1. ಕಾಶೀಪುರಕ್ಕೆ ಬಂದು ಕೆಲವು ದಿನಗಳ ನಂತರ ಶ್ರೀರಾಮಕೃಷ್ಣರು ಒಂದು ದಿನ ತೋಟದಲ್ಲಿ ಸ್ವಲ್ಪಹೊತ್ತು ಓಡಾಡಿದ ವಿಷಯವನ್ನು ತಿಳಿಸಿರುವೆವು. ಇದರಿಂದ ಸ್ವಲ್ಪ ದಣಿವಾದುದರಿಂದ ಸುಮಾರು ಹದಿನೈದು ದಿವಸ ಹೊರಗೆ ಬರಲಿಲ್ಲ. ಈ ಸಂದರ್ಭದಲ್ಲಿ ಚಿಕಿತ್ಸೆಯಲ್ಲಿ ಯಾವ ಬದಲಾವಣೆ ಇಲ್ಲದಿದ್ದರೂ ಡಾಕ್ಟರನ್ನು ಬದ ಲಾಯಿಸಲಾಯಿತು. ರಾಜೇಂದ್ರದತ್ತನು ಶ್ರೀಮಂತ ಮತ್ತು ಪ್ರಸಿದ್ಧ ಅಕ್ರೂರದತ್ತನ ಕುಟುಂಬದಲ್ಲಿ ಜನಿಸಿದವನು. ಅವನು ಹೋಮಿಯೋಪತಿಯ ಅಧ್ಯಯನ ಮತ್ತು ಪ್ರಚಾ ರಕ್ಕಾಗಿ ತುಂಬ ಹಣ ಖರ್ಚು ಮಾಡಿದ್ದನು ಮತ್ತು ಬಹಳ ಶ್ರಮ ಪಟ್ಟಿದ್ದನೂ ಕೂಡ. ಮಹೇಂದ್ರಲಾಲ್ ಸರ್ಕಾರನು ಅವನನ್ನು ಸಂಧಿಸಿ ಹೋಮಿಯೋಪತಿಯ ಸಾಫಲ್ಯದ ಬಗ್ಗೆ ದೃಢವಿಶ್ವಾಸವುಳ್ಳವನಾಗಿ ಆ ಚಿಕಿತ್ಸಾ ವಿಧಾನವನ್ನು ಸ್ವೀಕರಿಸಿದನು. ರಾಜೇಂದ್ರ ದತ್ತನು ಜನರ ಮೂಲಕ ಶ್ರೀರಾಮಕೃಷ್ಣರ ಕಾಯಿಲೆಯ ಬಗ್ಗೆ ಕೇಳಿದ್ದನು. ಅವರನ್ನು ಗುಣಪಡಿಸಿದರೆ ಹೋಮಿಯೋಪತಿಯ ಕೀರ್ತಿ ಹೆಚ್ಚು ಹರಡುವುದು ಎಂದು ಅವನು ಭಾವಿಸಿದನು. ಬಹಳ ಅಧ್ಯಯನ ಮಾಡಿ ಒಂದು ಔಷಧಿಯನ್ನು ಆರಿಸಿದನು. ಅವನಿಗೆ ಗಿರೀಶನ ತಮ್ಮನಾದ ಅತುಲನ ಪರಿಚಯವಿತ್ತು. ಈ ಸಂದರ್ಭದಲ್ಲಿಯೇ ಅವನು ಅತುಲ ನನ್ನು ಸಂಧಿಸಿ ಶ್ರೀರಾಮಕೃಷ್ಣರ ಖಾಯಿಲೆಯ ಸಂಬಂಧವಾಗಿ ವಿಚಾರಿಸಿದ. ತನ್ನ ಉದ್ದೇಶವನ್ನು ಅವನಿಗೆ ತಿಳಿಸಿ ಹೇಳಿದ : "ಬಹಳ ಯೋಚನೆ ಮಾಡಿ ನಾನು ಒಂದು ಔಷಧಿಯನ್ನು ಗೊತ್ತುಪಡಿಸಿದ್ದೇನೆ ಎಂದು ಮಹೇಂದ್ರನಿಗೆ ತಿಳಿಸು. ಅದರಿಂದ ಒಳ್ಳೆಯ ಪ್ರತಿಫಲ ಸಿಕ್ಕುತ್ತದೆಂಬುದು ನನ್ನ ಭರವಸೆ. ಅವನು ಒಪ್ಪುವುದಾದರೆ ಅದನ್ನು ಪ್ರಯೋಗಿಸಬೇಕೆಂದಿದ್ದೇನೆ." ಅತುಲನು ಈ ವಿಷಯವನ್ನು ಭಕ್ತರಿಗೂ ಮಹೇಂದ್ರ ಲಾಲ್ ಸರ್ಕಾರನಿಗೂ ತಿಳಿಸಿದನು. ಯಾರೂ ಇದಕ್ಕೆ ಆಕ್ಷೇಪಣೆ ಮಾಡದೆ ಇದ್ದುದರಿಂದ ರಾಜೇಂದ್ರನಾಥನು ಕೆಲವೇ ದಿನಗಳಲ್ಲಿ ಶ್ರೀರಾಮಕೃಷ್ಣರನ್ನು ನೋಡಲು ಬಂದನು.

ಕಾಯಿಲೆಯ ಸಂಬಂಧವಾಗಿ ವಿಚಾರಿಸಿ ತಿಳಿದುಕೊಂಡು ಲೈಕೋಪೋಡಿಯಂ(200) ಔಷಧಿಯನ್ನು ಸೂಚಿಸಿದನು. ಇದರಿಂದ ಶ್ರೀರಾಮಕೃಷ್ಣರಿಗೆ ಬಹಳ ಅನುಕೂಲ ವಾಯಿತು. ಅವರು ಮೊದಲಿನಂತೆಯೆ ಆರೋಗ್ಯವಂತರಾಗುತ್ತಾರೆ ಎಂದು ಭಕ್ತರು ಭಾವಿಸಿದರು.

2. ಪೌಷ ಮಾಸವು ಅರ್ಧಕ್ಕಿಂತ ಹೆಚ್ಚು ಕಳೆಯಿತು. ಅಂದು ೧೮೮೬ ಜನವರಿ ೧ ನೇ ದಿನಾಂಕ. ಅವರು ಅಂದು ಹೆಚ್ಚು ಸ್ವಸ್ಥರಾಗಿದ್ದುದರಿಂದ ತೋಟದಲ್ಲಿ ಸ್ವಲ್ಪ ಹೊತ್ತು ಓಡಾಡಿ ಬರಬೇಕೆಂದು ಆಶಿಸಿದರು. ಅಂದು ರಜಾ ದಿನವಾಗಿದ್ದುದರಿಂದ ಅನೇಕ ಗೃಹಸ್ಥ ಭಕ್ತರು ಮಧ್ಯಾಹ್ನದ ನಂತರ ಒಬ್ಬೊಬ್ಬರಾಗಿ ಬರತೊಡಗಿದರು. ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಶ್ರೀರಾಮಕೃಷ್ಣರು ಕೆಳಗಿಳಿದು ಬಂದಾಗ ಮೂವತ್ತು ಜನರಿಗಿಂತಲೂ ಜಾಸ್ತಿ ಭಕ್ತರಿದ್ದರು. ಕೆಲವರು ಮನೆಯೊಳಗಿದ್ದರು, ಕೆಲ ವರು ತೋಟದಲ್ಲಿ ಮರದ ಕೆಳಗೆ ಕುಳಿತು ಮಾತನಾಡುತ್ತಿದ್ದರು. ಶ್ರೀರಾಮಕೃಷ್ಣರನ್ನು ನೋಡಿದ ಕೂಡಲೆ ಅವರೆಲ್ಲರೂ ಸಂಭ್ರಮದಿಂದ ಮೇಲೆದ್ದು ಅವರಿಗೆ ಪ್ರಣಾಮ ಮಾಡಿ ದರು. ಶ್ರೀರಾಮಕೃಷ್ಣರು ಕೆಳಗಿನ ವಿಶಾಲ ಕೋಣೆಯ ಮೂಲಕ ಹೊರ ಬಂದು ತೋಟದ ಮಾರ್ಗದಲ್ಲಿ ಮುಂದುವರಿದರು. ಭಕ್ತರು ಅವರ ಹಿಂದೆಯೆ ಹೊರಟರು. ಅವರು ಗೇಟಿನ ಕಡೆಗೆ ಹೋಗುವ ರಸ್ತೆಯ ಮಧ್ಯಭಾಗಕ್ಕೆ ಬಂದಾಗ ಅಲ್ಲಿ ಗಿರೀಶ, ರಾಮ, ಅತುಲ ಮತ್ತು ಇನ್ನು ಕೆಲವರು ಮರದ ಕೆಳಗೆ ಕುಳಿತು ಮಾತನಾಡುತ್ತಿರುವು ದನ್ನು ಕಂಡರು. ಅವರೆಲ್ಲರೂ ಶ್ರೀರಾಮಕೃಷ್ಣರಿಗೆ ನಮಸ್ಕರಿಸಿ ಆನಂದದಿಂದ ಅವರ ಹತ್ತಿರ ಬಂದರು. ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆಯೆ ಗಿರೀಶನನ್ನು ಕೇಳಿದರು : "ಗಿರೀಶ್, ನೀನು ನನ್ನ ಬಗ್ಗೆ ಎಲ್ಲರ ಹತ್ತಿರವೂ ಏನೇನೊ ಹೇಳಿಕೊಂಡು ತಿರುಗಾಡುತ್ತಿ ದ್ದೀಯೆ. ನನ್ನಲ್ಲಿ ಅಂಥದ್ದನ್ನು ಏನು ಕಂಡೆ ನೀನು ?" ಗಿರೀಶನು ಇದರಿಂದ ಸ್ವಲ್ಪವೂ ವಿಚಲಿತನಾಗದೆ ಅವರ ಪದತಲದಲ್ಲಿ ಮಂಡಿಯೂರಿ ಕುಳಿತು ತಲೆಯೆತ್ತಿ ಕೈ ಜೋಡಿಸಿ ಗದ್ಗದ ಸ್ವರದಲ್ಲಿ ಹೇಳತೊಡಗಿದನು: "ವ್ಯಾಸ ವಾಲ್ಮೀಕಿಯರೂ ಕೂಡ ಯಾರ ವೈಭವ ವನ್ನು ಅಳೆಯಲಾಗದೆ ಹೋದರೊ ಅಂತಹವರ ಬಗ್ಗೆ ನಾನೇನು ಹೇಳಲು ಸಾಧ್ಯ ?" ಗಿರೀಶನ ಆಂತರಿಕ ಸರಳ ವಿಶ್ವಾಸವು ಅವನು ಉಚ್ಚರಿಸಿದ ಪ್ರತಿಯೊಂದು ಅಕ್ಷರ ದಲ್ಲಿಯೂ ಹೊರ ಹೊಮ್ಮುತ್ತಿತ್ತು. ಶ್ರೀರಾಮಕೃಷ್ಣರು ಇದನ್ನು ಕೇಳಿ ಮುಗ್ಧರಾಗಿ ಗಿರೀಶನನ್ನು ನಿಮಿತ್ತವಾಗಿಟ್ಟುಕೊಂಡು ಭಕ್ತರೆಲ್ಲರಿಗೂ ಹೇಳಿದರು : "ನಿಮಗೆಲ್ಲ ನಾನಿ ನ್ನೇನನ್ನು ಹೇಳಲಿ ? ನಿಮ್ಮಲ್ಲಿ ಆಧ್ಯಾತ್ಮಿಕ ಪ್ರಜ್ಞೆ ಜಾಗ್ರತವಾಗಲೆಂದು ಆಶೀರ್ವದಿಸು ತ್ತೇನೆ." ಭಕ್ತರ ಮೇಲಿನ ಪ್ರೀತಿ ಮತ್ತು ಕರುಣೆಯ ಭಾವಾವೇಶದಿಂದ ಈ ಮಾತು ಗಳನ್ನು ಉಚ್ಚರಿಸುತ್ತಿದ್ದಂತೆಯೆ ಅವರಿಗೆ ಭಾವ ಸಮಾಧಿ ಉಂಟಾಯಿತು. ಲೇಶ ಮಾತ್ರವೂ ಸ್ವಾರ್ಥವಿಲ್ಲದ ಆ ಗಂಭೀರ ಆಶೀರ್ವಾಣಿಯು ಎಲ್ಲರ ಅಂತರವನ್ನು ತಾಕಿ ಅವರಲ್ಲಿ ದೊಡ್ಡ ಆನಂದದ ಅಲೆಗಳನ್ನು ಎಬ್ಬಿಸಿತು. ಅವರು ದೇಶ ಕಾಲಗಳನ್ನು ಮರೆ ತರು, ಶ್ರೀರಾಮಕೃಷ್ಣರ ಕಾಯಿಲೆಯನ್ನೂ ಮರೆತರು ಮತ್ತು ಅವರಿಗೆ ವಾಸಿಯಾಗುವ

ವರೆಗೂ ಅವರನ್ನು ಸ್ಪರ್ಶಿಸಕೂಡದೆಂಬ ತಮ್ಮ ಹಿಂದಿನ ನಿರ್ಧಾರವನ್ನೂ ಮರೆತರು. ಒಬ್ಬ ಅಪೂರ್ವ ದಿವ್ಯ ವ್ಯಕ್ತಿಯು ಪ್ರೀತಿ ಸಹಾನುಭೂತಿಯಿಂದ ಕೂಡಿದವನಾಗಿ ತಮ್ಮ ಮುಂದೆ ನಿಂತಿರುವುದೊಂದೇ ಅವರ ಗಮನಕ್ಕೆ ಬಂತು. ತಮ್ಮ ಕಷ್ಟವನ್ನು ನೀಗಿಸುವುದಕ್ಕಾಗಿ ಅಪಾರ ಕರುಣೆಯಿಂದ ತಾಯಿಯು ತನ್ನ ಮಕ್ಕಳನ್ನು ಮಡಿಲಿನಲ್ಲಿ ಎತ್ತಿಕೊಳ್ಳುವಂತೆ ತಮ್ಮನ್ನು ರಕ್ಷಿಸಲು ಬಂದಿರುವರು, ಎಂಬುದೊಂದೇ ವಿಚಾರ ಅವರ ಮನಸ್ಸಿನಲ್ಲಿತ್ತು. ಅವರೆಲ್ಲರೂ ಅವರ ಪಾದಕ್ಕೆ ಎರಗಿ ಅವರ ಪಾದಧೂಳಿಯನ್ನು ಸ್ವೀಕರಿಸುತ್ತ "ಜೈರಾಮಕೃಷ್ಣ" ಎಂದು ಘೋಷಿಸತೊಡಗಿದರು. ಹೀಗೆ ಅವರು ನಮಸ್ಕರಿಸುತ್ತಿದ್ದಂತೆ ಶ್ರೀರಾಮಕೃಷ್ಣರ ಕರುಣಾ ಸಾಗರವು ತನ್ನ ತೀರವನ್ನು ಮೀರಿ ಉಕ್ಕಿ ಹರಿಯ ತೊಡಗಿತು ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿರುವಾಗ ಕರುಣಾವಶರಾಗಿ ವೈಯಕ್ತಿಕವಾಗಿ ಕೆಲವು ಭಕ್ತರನ್ನು ತಮ್ಮ ಶಕ್ತಿಯುತ ಸ್ಪರ್ಶದ ಮೂಲಕ ಆಶೀರ್ವದಿಸುತ್ತಿದ್ದುದನ್ನು ನಾವು ನೋಡಿರುವೆವು. ಇದು ಹೆಚ್ಚು ಕಡಮೆ ದೈನಂದಿನ ಘಟನೆಯಾಗಿ ಹೋಗಿತ್ತು. ಆದರೆ ಇಂದು ಅಲ್ಲಿ ನೆರೆದ ಪ್ರತಿಯೊಬ್ಬ ಭಕ್ತರನ್ನೂ ದಿವ್ಯಭಾವದಲ್ಲಿ ಸ್ಪರ್ಶಿಸತೊಡಗಿದರು. ಭಕ್ತರ ಆನಂದಕ್ಕೆ ಪಾರವೇ ಇರಲಿಲ್ಲ. ತಮ್ಮ ದೇವತ್ವವನ್ನು ಇನ್ನು ಯಾರಿಂದಲೂ ಮರೆಮಾಚುವುದಿಲ್ಲ ಎಂದು ಭಕ್ತರು ಭಾವಿಸಿದರು. ಅವರಿಗೆ ತಮ್ಮ ದೋಷಗಳ ಮತ್ತು ದೌರ್ಬಲ್ಯಗಳ ಅರಿವಿತ್ತು. ಪಾಪಿಗಳೂ, ತಾಪಿಗಳೂ ಎಲ್ಲರೂ ಅವರ ಚರಣಾಶ್ರಯವನ್ನು ಪಡೆದು ಅಭಯದಾನವನ್ನು ಹೊಂದುತ್ತಾರೆ ಎಂಬುದರಲ್ಲಿ ಭಕ್ತರಿಗೆ ಸ್ವಲ್ಪವೂ ಸಂದೇಹವಿರಲಿಲ್ಲ. ಕೆಲವರು ಈ ಘಟನೆಯಿಂದ ದಿಗ್ಭ್ರಮೆಗೊಂಡು ಮಂತ್ರಮುಗ್ಧರಾಗಿ ಶ್ರೀರಾಮಕೃಷ್ಣರನ್ನೆ ದಿಟ್ಟಿಸಿ ನೋಡುತ್ತ ನಿಂತು ಬಿಟ್ಟರು. ಮತ್ತೆ ಕೆಲವರು ಮನೆಯಲ್ಲಿದ್ದವರನ್ನೆಲ್ಲ ಗಟ್ಟಿಯಾಗಿ ಕೂಗಿ ಕರೆದು ಶ್ರೀರಾಮಕೃಷ್ಣರ ಆಶೀರ್ವಾದ ಪಡೆಯಿರೆಂದು ಹೇಳಿದರು. ಇನ್ನು ಕೆಲವರು ಹೂವುಗಳನ್ನು ತಂದು ಮಂತ್ರಪೂರ್ವಕವಾಗಿ ಶ್ರೀರಾಮಕೃಷ್ಣರನ್ನು ಪೂಜಿಸತೊಡಗಿದರು. ಸ್ವಲ್ಪಹೊತ್ತಿನಲ್ಲಿಯೇ ಶ್ರೀರಾಮಕೃಷ್ಣರ ಸಮಾಧಿಯು ಸಮಾಪ್ತಿಗೊಂಡಿತು ಮತ್ತು ಭಕ್ತರೂ ಕೂಡ ಸಾಮಾನ್ಯ ಸ್ಥಿತಿಗೆ ಬಂದರು. ಅಲ್ಲಿಗೆ ತಮ್ಮ ಓಡಾಟವನ್ನು ನಿಲ್ಲಿಸಿ ಶ್ರೀರಾಮಕೃಷ್ಣರು ತಮ್ಮ ಕೊಠಡಿಗೆ ಹೋಗಿ ಕುಳಿತುಕೊಂಡರು.

3. ರಾಮಚಂದ್ರನೆ ಮುಂತಾದ ಕೆಲವು ಭಕ್ತರು ಅಂದಿನ ಆ ಘಟನೆಗೆ ಸಂಬಂಧವಾಗಿ ಶ್ರೀರಾಮಕೃಷ್ಣರು ಅಂದು ಕಲ್ಪತರುವಾದರೆಂದು ಹೇಳಿದರು. ಆದರೆ ಇದನ್ನು ಶ್ರೀರಾಮಕೃಷ್ಣರ "ಆತ್ಮಪ್ರಕಾಶ" ಅಥವಾ ತಮ್ಮ ಸ್ವರೂಪವನ್ನು ತಿಳಿಸುವುದರ ಮೂಲಕ ಭಕ್ತರಿಗೆ ಅಭಯದಾನ ಮಾಡಿದರು ಎಂದು ಹೇಳುವುದು ನಮಗೆ ಉಚಿತವೆಂದು ತೋರುತ್ತದೆ. ಕಲ್ಪತರುವು ಕೇಳಿದ್ದನ್ನೆಲ್ಲ ಒಳ್ಳೆಯದಾಗಲಿ ಕೆಟ್ಟದ್ದಾಗಲಿ ಕೊಟ್ಟುಬಿಡುತ್ತದೆ. ಆದರೆ ಶ್ರೀರಾಮಕೃಷ್ಣರು ಹಾಗೆ ಮಾಡಲಿಲ್ಲ. ಆ ಘಟನೆಯ ಮೂಲಕ ಅವರು ತಮ್ಮ ದೇವತ್ವವನ್ನು ತೋರ್ಪಡಿಸಿದರು ಮತ್ತು ತಮ್ಮ ಅಭಯದಾನ ಸಾಮರ್ಥ್ಯವನ್ನೂ ವ್ಯಕ್ತಪಡಿಸಿದರು. ಅದು ಏನೇ ಇರಲಿ ಅಂದು ಶ್ರೀರಾಮಕೃಷ್ಣರ ಕೃಪೆಗೆ

ಪಾತ್ರರಾದವರ ಪೈಕಿ ಹಾರಾಣ ಚಂದ್ರದಾಸನ ಬಗ್ಗೆ ಇಲ್ಲಿ ಪ್ರಸ್ತಾಪಿಸುವುದು ಉಚಿತ, ಏಕೆಂದರೆ ಅವನು ಶ್ರೀರಾಮಕೃಷ್ಣರಿಗೆ ನಮಸ್ಕರಿಸಿದ ಕೂಡಲೆ ಅವರು ತಮ್ಮ ಪಾದ ಪದ್ಮವನ್ನು ಅವನ ತಲೆಯ ಮೇಲಿಟ್ಟರು. ಬಹಳ ಅಪರೂಪಕ್ಕೆ ತಮ್ಮ ಅನುಗ್ರಹ ವನ್ನು ಈ ರೀತಿ ತೋರಿಸುತ್ತಿದ್ದರು. ರಾಮಲಾಲ್ ಚಟ್ಟೋಪಾಧ್ಯಾಯನು ಅಂದು ಆ ಸಂದರ್ಭದಲ್ಲಿ ಇದ್ದು ಶ್ರೀರಾಮಕೃಷ್ಣರ ಅನುಗ್ರಹಕ್ಕೆ ಪಾತ್ರನಾಗಿದ್ದನು. ಇದರ ಬಗ್ಗೆ ಅವನನ್ನು ವಿಚಾರಿಸಿದಾಗ ಅವನು ಹೇಳಿದ: "ನಾನು ಮೊದಲು ಧ್ಯಾನದ ಸಮಯ ದಲ್ಲಿ ನನ್ನ ಇಷ್ಟದೇವತೆಯ ಪುಣ್ಯರೂಪವನ್ನು ಆಂಶಿಕವಾಗಿ ಮಾತ್ರ ನೋಡುತ್ತಿದ್ದೆ. ಪಾದಪದ್ಮವನ್ನು ನೋಡಿದರೆ ಮುಖ ಕಾಣಿಸುತ್ತಿರಲಿಲ್ಲ. ಮತ್ತೆ ತಲೆಯಿಂದ ಸೊಂಟದ ವರೆಗೆ ಕಂಡರೆ ಪುಣ್ಯಪಾದ ಕಾಣಿಸುತ್ತಿರಲಿಲ್ಲ. ಮತ್ತೆ ಏನು ನೋಡುತ್ತಿದ್ದೆನೊ ಅದು ಜೀವಂತವಾಗಿ ಕಾಣಿಸುತ್ತಿರಲಿಲ್ಲ. ಆದರೆ ಅಂದು ಶ್ರೀರಾಮಕೃಷ್ಣರು ನನ್ನನ್ನು ಸ್ಪರ್ಶಿ ಸಿದ ಕೂಡಲೆ ಇಷ್ಟ ದೇವತೆಯ ಪೂರ್ಣ ರೂಪವು ಜೀವಂತವಾಗಿ ಕಾಂತಿಮಯವಾಗಿ ಮತ್ತು ಅನುಗ್ರಹಪೂರ್ಣವಾಗಿ ನನ್ನ ಹೃದಯ ಕಮಲದಲ್ಲಿ ಕಾಣಿಸಿಕೊಂಡಿತು."

4. ಆ ದಿನದ ಈ ಘಟನೆಯ ಸಂದರ್ಭದಲ್ಲಿ ಇದ್ದವರ ಪೈಕಿ ನಮಗೆ ಒಂಬತ್ತು ಅಥವಾ ಹತ್ತು ಜನರ ಹೆಸರು ನೆನಪಿದೆ. ಅವರಾರೆಂದರೆ ಗಿರೀಶ್, ರಾಮ್, ನವ ಗೋಪಾಲ್, ಹರಮೋಹನ್, ವೈಕುಂಠ, ಕಿಶೋರಿ, ಹಾರಾಣ, ರಾಮಲಾಲ್ ಮತ್ತು ಅಕ್ಷಯ. ಮಹೇಂದ್ರನಾಥ್ (ಮ) ಕೂಡ ಬಹುಶಃ ಇದ್ದಿರಬಹುದು. ಆದರೆ ಸಂನ್ಯಾಸಿ ಭಕ್ತರಾರೂ ಅಲ್ಲಿ ಇರದಿದ್ದುದು ಆಶ್ಚರ್ಯದ ಸಂಗತಿ. ನರೇಂದ್ರ ಮತ್ತು ಇನ್ನೂ ಅನೇ ಕರು ಹಿಂದಿನ ದಿನ ರಾತ್ರೆ ಹಲವು ಗಂಟೆಗಳವರೆಗೆ ಸಾಧನೆಯಲ್ಲಿ ನಿರತರಾಗಿದ್ದರು. ಆದ್ದ ರಿಂದ ಅವರು ಬಳಲಿ ಮನೆಯಲ್ಲಿ ನಿದ್ರಿಸುತ್ತಿದ್ದರು. ಲಾಟು ಮತ್ತು ಶರತ್ ಎಚ್ಚರಿ ದ್ದರೂ ಮತ್ತು ಛಾವಣಿಯ ಮೇಲಿನಿಂದ ಏನು ನಡೆಯುತ್ತಿದೆ ಎಂಬುದನ್ನು ನೋಡಿ ದರು. ಆದರೆ ಇಲ್ಲಿಗೆ ಬೇಕೆಂತಲೆ ಬರಲಿಲ್ಲ. ಏಕೆಂದರೆ ಶ್ರೀರಾಮಕೃಷ್ಣರು ಕೆಳಕ್ಕೆ ತೋಟಕ್ಕೆ ಬಂದಕೂಡಲೆ ಅವರ ಹಾಸಿಗೆ ಮುಂತಾದುವುಗಳನ್ನು ಬಿಸಿಲಿಗೆ ಹಾಕಿ ಕೊಠಡಿ ಯನ್ನು ಸ್ವಚ್ಛಗೊಳಿಸುತ್ತಿದ್ದರು. ತಮ್ಮ ಕೆಲಸವನ್ನು ಅರ್ಧಕ್ಕೆ ನಿಲ್ಲಿಸಿ ಬಂದರೆ ಅನಂತರ ಶ್ರೀರಾಮಕೃಷ್ಣರಿಗೆ ಅನನುಕೂಲವಾಗಬಹುದೆಂದು ಅವರು ಇಲ್ಲಿಗೆ ಬರುವ ಮನಸ್ಸು ಮಾಡಲಿಲ್ಲ.

5. ವೈಕುಂಠನೆ ಮುಂತಾದ ಕೆಲವರನ್ನು ಅಂದು ಅವರಿಗಾದ ಅನುಭವದ ಬಗ್ಗೆ ನಾವು ವಿಚಾರಿಸಿದೆವು. ವೈಕುಂಠನು ನಮಗೆ ಹೇಳಿದುದನ್ನು ವಿವರಿಸಿ ಈ ವಿಷಯವನ್ನು ಸಮಾಪ್ತಿಗೊಳಿಸುತ್ತೇವೆ. ಶ್ರೀರಾಮಕೃಷ್ಣರು ಅವನಿಗೆ ಉಪದೇಶವಿತ್ತು ಅವನ ಜೀವನ ವನ್ನು ರೂಪಿಸಿದುದರ ಸಂಬಂಧವಾಗಿ ನಾವು ಮೊದಲೆ ಸ್ವಲ್ಪ ಮಟ್ಟಿಗೆ ವಿವರಿಸಿರುವೆವು. ಶ್ರೀರಾಮಕೃಷ್ಣರು ಅವನಿಗೆ ಮಂತ್ರದೀಕ್ಷೆ ಇತ್ತು ಅವನ ಜೀವನವನ್ನು ಆನಂದಮಯ ಗೊಳಿಸಿದ್ದರು. ಅಂದಿನಿಂದಲೂ ಅವನು ಸಾಧನೆಯಲ್ಲಿ ನಿರತನಾಗಿ ತನ್ನ ಇಷ್ಟ ದರ್ಶನ ಕ್ಕಾಗಿ ಶಕ್ತಿ ಮೀರಿ ಪ್ರಯತ್ನಿಸುತ್ತಿದ್ದನು. ಶ್ರೀರಾಮಕೃಷ್ಣರ ಅನುಗ್ರಹವಿಲ್ಲದೆ ತನ್ನ

ಪ್ರಯತ್ನ ಯಶಸ್ವಿಯಾಗುವುದಿಲ್ಲವೆಂದು ತಿಳಿದು ಆಗಾಗ ಅವನು ಅವರನ್ನು ಅದಕ್ಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತಿದ್ದ. ವಿಶೇಷವಾಗಿ ಶ್ರೀರಾಮಕೃಷ್ಣರಿಗೆ ಕಾಯಿಲೆ ಶುರುವಾಗಿ ಕಲಕತ್ತೆಗೆ ಮತ್ತು ಅನಂತರ ಕಾಶೀಪುರಕ್ಕೆ ಬಂದ ಮೇಲೆ ಎರಡು ಮೂರು ಬಾರಿ ವೈಕುಂಠನು ತನ್ನ ಆಸೆಯನ್ನು ಪೂರ್ತಿಗೊಳಿಸಬೇಕೆಂದು ಶ್ರೀರಾಮಕೃಷ್ಣರನ್ನು ಅಂಗ ಲಾಚಿ ಬೇಡಿಕೊಂಡಿದ್ದನು. ಶ್ರೀರಾಮಕೃಷ್ಣರು ಅನುಗ್ರಹದ ನಗೆ ಬೀರಿ ಅವನನ್ನು ಸಾಂತ್ವನಗೊಳಿಸಿದರು : "ಸ್ವಲ್ಪ ಕಾಯಬಾರದೇಕೆ ? ಈ ದೇಹ ಸ್ವಲ್ಪ ಗುಣವಾಗಲಿ, ಅನಂತರ ನಾನು ನಿನಗೆ ಎಲ್ಲವನ್ನೂ ಮಾಡುತ್ತೇನೆ."

6. ಅಂದಿನ ಆ ಸಂದರ್ಭದಲ್ಲಿ ವೈಕುಂಠನು ಇದ್ದನು. ಶ್ರೀರಾಮಕೃಷ್ಣರು ಅಂದು ಇಬ್ಬರು ಮೂವರು ಜನರನ್ನು ತಮ್ಮ ಅದ್ಭುತ ಸ್ಪರ್ಶದ ಮೂಲಕ ಆಶೀರ್ವದಿಸಿದ ಮೇಲೆ ವೈಕುಂಠನು ಅವರ ಮುಂದೆ ಬಂದು ಭಕ್ತಿಪೂರ್ವಕವಾಗಿ ವಂದಿಸಿ "ಮಹಾಶಯರೆ ನನ್ನನ್ನು ಅನುಗ್ರಹಿಸಿ" ಎಂದು ಕೇಳಿಕೊಂಡ, "ಆದರೆ ನಿನಗೆಲ್ಲ ಕೊಟ್ಟಾಗಿದೆ" ಎಂದರು ಶ್ರೀರಾಮಕೃಷ್ಣರು. ವೈಕುಂಠನು ಹೇಳಿದ "ನೀವು ಹಾಗೆ ಹೇಳಿದ ಮೇಲೆ ಖಂಡಿತ ವಾಗಿ ಎಲ್ಲವನ್ನೂ ಕೊಟ್ಟಿರಲೇ ಬೇಕು. ಅದು ನನಗೆ ಅರ್ಥವಾಗುವಂತೆ ಮಾಡಿ." "ಹಾಗೆಯೆ ಆಗಲಿ" ಎಂದು ಹೇಳಿ ಶ್ರೀರಾಮಕೃಷ್ಣರು ಸಾಮಾನ್ಯ ರೀತಿಯಲ್ಲಿ ಅವನ ಎದೆಯನ್ನು ಸ್ಪರ್ಶಿಸಿದರು. ವೈಕುಂಠನು ಹೇಳುತ್ತಾನೆ : "ಆದರೆ ಅದರ ಪರಿಣಾಮ ವಾಗಿ ನನ್ನ ಮನಸ್ಸಿನಲ್ಲಿ ದೊಡ್ಡ ಕ್ರಾಂತಿ ಎದ್ದಿತು. ನಾನು ಶ್ರೀರಾಮಕೃಷ್ಣರ ಕಾಂತಿ ಯುಕ್ತ ದಯಾಮಯ ಮೂರ್ತಿಯನ್ನು ಆಕಾಶದಲ್ಲಿ, ಮನೆಗಳಲ್ಲಿ, ಮರಗಿಡಗಳಲ್ಲಿ, ಮನುಷ್ಯರಲ್ಲಿ ಮತ್ತು ದೃಷ್ಟಿಹಾಯಿಸಿದ ಕಡೆಗಳಲ್ಲೆಲ್ಲ ನೋಡಿದೆನು. ಆ ಪರಮಾನಂದ ವನ್ನು ಭರಿಸುವುದು ಹೇಗೆಂಬುದೇ ನನಗೆ ಗೊತ್ತಾಗಲಿಲ್ಲ. ನೀವು ಛಾವಣಿಯ ಮೇಲೆ ಇರುವುದನ್ನು ಕಂಡು ಕೂಗಿ ಕರೆದೆ, 'ಅಲ್ಲಿರುವವರೆಲ್ಲ ಬನ್ನಿ ತಡಮಾಡಬೇಡಿ.' ಆ ಮಾನ ಸಿಕ ಭಾವ ಮತ್ತು ದರ್ಶನ ಕೆಲವು ದಿನಗಳವರೆಗೆ ಜಾಗ್ರತಾವಸ್ಥೆಯಲ್ಲಿಯೂ ಮುಂದು ವರಿಯಿತು. ಎಲ್ಲ ವಸ್ತುಗಳಲ್ಲಿಯೂ ಶ್ರೀರಾಮಕೃಷ್ಣರ ಆ ಪುಣ್ಯಮೂರ್ತಿಯನ್ನು ಕಂಡು ನನಗೆ ಆಶ್ಚರ್ಯವಾಯಿತು ಮತ್ತು ಮುಗ್ಧನಾಗಿಹೋದೆ. ನಾನು ಎಲ್ಲಿ ಹೋದರೂ, ಆಫೀಸಿಗೆ ಅಥವಾ ಬೇರೆ ಏನಾದರೂ ಕೆಲಸಕ್ಕೆ ಹೋದರೂ, ಅದು ಮುಂದುವರಿಯಿತು.

7. ಇದರಿಂದಾಗಿ ನನ್ನ ಕೆಲಸದಲ್ಲಿ ಸರಿಯಾಗಿ ತೊಡಗಿಸಿಕೊಳ್ಳಲಾಗಲಿಲ್ಲ. ಕೆಲ ಸಕ್ಕೆ ತೊಂದರೆ ಆಗುತ್ತದಲ್ಲ ಎಂದು ಆದರ್ಶವನ್ನು ಮರೆಯಲು ಪ್ರಯತ್ನಿಸಿದೆ. ಆದರೆ ಸಾಧ್ಯವಾಗಲಿಲ್ಲ. ಅರ್ಜುನನು ಭಗವಂತನ ವಿಶ್ವರೂಪವನ್ನು ನೋಡಿ ಭಯಪಟ್ಟು ಅದನ್ನು ಹಿಂತೆಗೆದುಕೊಳ್ಳಬೇಕೆಂದು ಪ್ರಾರ್ಥಿಸಿದುದು ಏಕೆಂದು ಆಗ ನನಗೆ ಸ್ವಲ್ಪ ಮಟ್ಟಿಗೆ ಅರ್ಥವಾಯಿತು. ಜೀವನ್ಮುಕ್ತರು ಯಾವಾಗಲೂ ಒಂದೇ ಉನ್ನತಸ್ಥಿತಿಯಲ್ಲಿ ಇರುತ್ತಾರೆ, ಎಂದು ನಾನು ಶಾಸ್ತ್ರದಲ್ಲಿ ಓದಿರುವುದು ನೆನಪಿಗೆ ಬಂತು. ಅಂಥ ಉನ್ನತ ಸ್ಥಿತಿಯಲ್ಲಿರಬೇಕಾದರೆ ಮನಸ್ಸು ಆಸೆಗಳಿಂದ ಎಷ್ಟೊಂದು ಮುಕ್ತವಾಗಿರಬೇಕು ಎಂಬು ದನ್ನು ನಾನಾಗ ಅರ್ಥಮಾಡಿಕೊಂಡೆ. ಏಕೆಂದರೆ ಕೆಲವೇ ದಿನಗಳಲ್ಲಿ ಆ ಒಂದು ಮಾನ

ಸಿಕ ಸ್ಥಿತಿಯಲ್ಲಿರುವುದು ನನಗೆ ಕಷ್ಟವಾಯಿತು. ನಾನು ಹುಚ್ಚನಾಗಿರುವೆನೆ ಎಂದು ಕೆಲವೊಮ್ಮೆ ಅನ್ನಿಸತೊಡಗಿತು. ಆಗ ನಾನು ಶ್ರೀರಾಮಕೃಷ್ಣರನ್ನು ಪ್ರಾರ್ಥಿಸಿದೆ 'ಈ ಮಾನಸಿಕ ಸ್ಥಿತಿಯಲ್ಲಿ ನಾನಿರಲಾರೆ. ಇದು ಕೊನೆಗೊಳ್ಳುವಂತೆ ಮಾಡಿ.' ಈಗ ನಾನು ಭಾವಿಸುತ್ತೇನೆ. ಮನುಷ್ಯನ ದೌರ್ಬಲತೆಗೆ ಮತ್ತು ಮೂರ್ಖತೆಗೆ ಧಿಕ್ಕಾರ. ನಾನೇಕೆ ಹಾಗೆ ಪ್ರಾರ್ಥಿಸಿದೆ ? ಅವರಲ್ಲಿದ್ದ ಶ್ರದ್ಧೆಯನ್ನು ನಾನೇಕೆ ದೃಢವಾಗಿ ಇಟ್ಟುಕೊಳ್ಳಲಿಲ್ಲ ? ಅದರ ಆತ್ಯಂತಿಕ ಪರಿಣಾಮ ಏನಾಗುವುದೆಂದು ನಾನು ತಾಳ್ಮೆಯಿಂದ ಕಾಯಲಿಲ್ಲ. ನಾನು ಹುಚ್ಚನಾಗುತ್ತಿದ್ದಿರಬಹುದು ಅಥವಾ ದೇಹ ಬಿದ್ದುಹೋಗಿರಬಹುದು ! ಆದರೆ ನಾನು ಹಾಗೆ ಪ್ರಾರ್ಥಿಸಿದ್ದೇ ತಡ ಆ ಮಾನಸಿಕ ಸ್ಥಿತಿ ಮತ್ತು ದರ್ಶನ ಅಲ್ಲಿಗೇ ಕೊನೆಗೊಂಡಿತು. ಯಾವ ಅಸಾಧಾರಣ ವ್ಯಕ್ತಿಯಿಂದ ನಾನದನ್ನು ಪಡೆದಿದ್ದೆನೊ ಅವರೆ ಅದನ್ನು ಹಿಂತೆಗೆದುಕೊಂಡರೆಂದು ನನ್ನ ದೃಢ ನಂಬಿಕೆ. ಆದರೆ ನನ್ನ ಮೇಲೆ ದಯೆ ತೋರಿ ಅದರ ಸ್ವಲ್ಪಾಂಶವನ್ನು ನನ್ನಲ್ಲಿ ಉಳಿಸಿದರು– ಅದರ ಸಂಪೂರ್ಣ ನಿವಾರಣೆಗಾಗಿ ನಾನು ಪ್ರಾರ್ಥಿಸದೆ ಇದ್ದುದರಿಂದಲೇ ಇರಬೇಕು. ಪ್ರತಿದಿನ ಕೆಲವು ಬಾರಿ ಆ ದರ್ಶನವನ್ನು ಕಂಡು ನಾನು ಧನ್ಯನಾದೆ. ಶ್ರೀರಾಮಕೃಷ್ಣರ ಅನುಗ್ರಹ ಮೂರ್ತಿ ದಿವ್ಯಭಾವದಿಂದ ಬೆಳಗುತ್ತಿತ್ತು."

---

# ನಾಮಸೂಚಿ

"ಸ್ವಾಮಿ ಶಾರದಾನಂದರು ಪ್ರಮಾಣ ಭೂತರಾದ ತತ್ತ್ವಜ್ಞಾನಿ ಮತ್ತು ಇತಿಹಾಸಕಾರರು. ಅವರ ಗ್ರಂಥವು ತಾತ್ತ್ವಿಕ ಭಾವನೆಗಳಿಂದ ಶ್ರೀಮಂತವಾಗಿದೆ. ಹಿಂದೂ ವೈಚಾರಿಕತೆಯ ಅದ್ಭುತ ಸರಣಿಯಲ್ಲಿ ಶ್ರೀರಾಮಕೃಷ್ಣರ ಸ್ಥಾನವೇನು ಎಂಬುದನ್ನು ಅವರ ಗ್ರಂಥವು ನಿರ್ದಿಷ್ಟವಾದ ರೀತಿಯಲ್ಲಿ ತಿಳಿಸುತ್ತದೆ. ಅವರ ಗ್ರಂಥವನ್ನು ಓದುವ ಸಾಮಾನ್ಯನಿಗೂ ಸ್ವಾಮೀಜಿಯವರ ವಿಶಾಲ ಅನುಭವ, ಅಪಾರ ಪಾಂಡಿತ್ಯ ವೈಚಾರಿಕ ದೃಷ್ಟಿಕೋನ, ಮತ್ತು ಗಹನ ವಾದ ಆಧ್ಯಾತ್ಮಿಕ ಅನುಭವದ ಪರಿಚಯ ದೊರಕು ತ್ತದೆ. ವಿಷಯ ನಿರೂಪಣೆಯಲ್ಲಿ ಲೇಖಕರು ಅದ್ಭುತ ವಾದ ಸಾಮರ್ಥ್ಯವನ್ನು ಪ್ರದರ್ಶಿಸಿದ್ದಾರೆ."

– ರೋಮೈ ರೋಲಾ
(ನೋಬೆಲ್ ಪಾರಿತೋಷಕ ವಿಜೇತ ಫ್ರೆಂಚ್ ಸಾಹಿತಿ)



"...ಸತ್ಯನಿಷ್ಠರೂ, ಪರರ ಕಷ್ಟವನ್ನು ಸಹಿಸಲಾರದೆ ಅವರ ಕಷ್ಟಗಳ ಪರಿಹಾರಕ್ಕೆ ಹಗಲಿರುಳೂ ಚಿಂತಿಸಿದವರೂ, ಈ ಜಗತ್ತಿನ ಸಹಸ್ರಾರು ವರ್ಷಗಳ ಇತಿಹಾಸದಲ್ಲಿ ಏಕೈಕರೂ ಎನ್ನುವಂತಹ ಮಹಾವ್ಯಕ್ತಿಯ ಜೀವನದ ನೂರಾರು ಸ್ವಾರಸ್ಯಮಯವೂ, ಆಶ್ಚರ್ಯಕರವೂ ಆದ ಸಂಗತಿಗಳನ್ನು ಸ್ವಯಂ ಸತ್ಯನಿಷ್ಠರೂ, ಮಹಾತಪಸ್ವಿಗಳೂ, ಅಸಾಧಾರಣ ಬುದ್ಧಿಶಾಲಿಗಳೂ ಆದ ಶ್ರೀಶಾರದಾನಂದರು ತಮ್ಮ ಈ ಗ್ರಂಥದಲ್ಲಿ ದಾಖಲುಗೊಳಿಸಿದ್ದಾರೆ. ಅನೇಕಾನೇಕ ಶಾಸ್ತ್ರಗಳ ಆಧಾರಗಳನ್ನು ನೀಡಿ ಪರಮಹಂಸರು ಹಾಗೆ ನುಡಿದದ್ದು ಏಕೆ, ನಡೆದದ್ದು ಏಕೆ ಎಂಬುದನ್ನು ನಮ್ಮ ಮತಿ ಒಪ್ಪಿಕೊಳ್ಳುವಂತೆ ಸಮರ್ಥಿಸಿದ್ದಾರೆ. ಸತ್ಯಯುತವೂ ಅರ್ಥಪೂರ್ಣವೂ ಆದ ಜೀವನವನ್ನು ನಡೆಸಬೇಕೆನ್ನುವ ಪ್ರತಿಯೊಬ್ಬ ವ್ಯಕ್ತಿಯೂ "ಶ್ರೀರಾಮಕೃಷ್ಣ ವಚನವೇದ"ವನ್ನು ನಿತ್ಯವೂ, ಸ್ವಲ್ಪವಾದರೂ ಓದಬೇಕು. ಹಾಗೆಯೆ ಅಂತಹ ವೇದವಾಣಿಯನ್ನು ಯಾರು ನುಡಿದರೊ ಅವರ ಬದುಕಿನ ಅರ್ಥ, ಆಶಯಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು "ಶ್ರೀರಾಮಕೃಷ್ಣ ಲೀಲಾಪ್ರಸಂಗ"ವನ್ನು ಅಧ್ಯಯನ ಮಾಡಬೇಕು."

ಪ್ರಭುಶಂಕರರ ಮುನ್ನುಡಿಯಿಂದ

SRI RAMAKRISHNA LILAPRASANGA **Rs. 75.00**

Sri Ramakrishna Ashrama Yadavagiri Mysore 570020